# ಅಂತರ್ಜಾಲ

ಶ್ರೀ ಚಿ. ಶ್ರೀನಿವಾಸರಾಜು ಅಭಿನಂದನ ಗ್ರಂಥ

ಪ್ರಧಾನ ಸಂಪಾದಕರು
ಜಿ.ಎಸ್. ಶಿವರುದ್ರಪ್ಪ

ಸಂಪಾದಕರು
ಎಸ್.ಜಿ. ಸಿದ್ದರಾಮಯ್ಯ
ಎಂ.ಜಿ. ಚಂದ್ರಶೇಖರಯ್ಯ

ಪ್ರಕಾಶಕರು
ಶ್ರೀನಿವಾಸರಾಜು ಅಭಿನಂದನ ಸಮಿತಿ
ಬೆಂಗಳೂರು

**ANTARJALA :** A Felicitation Volume to Prof. Chi. Srinivasaraju, Published by Chi. Srinivasaraju Abhinandana Samiti, 867, Chaitra, 18th Main, BSK 2nd Stage, Bangalore - 560 070.

First Impression : 2007

Pages : xii + 492 + 32

Price : Rs. 350/-





ಪ್ರಕಾಶಕರು
**ಶ್ರೀನಿವಾಸರಾಜು ಅಭಿನಂದನ ಸಮಿತಿ**
# ೮೬೭, 'ಚೈತ್ರ', ೧೮ನೇ ಮುಖ್ಯರಸ್ತೆ
ಬನಶಂಕರಿ ೨ನೇ ಹಂತ
ಬೆಂಗಳೂರು - ೫೬೦ ೦೭೦

ಪುಟಗಳು : xii + ೪೯೨ + ೩೨
ಬೆಲೆ : ರೂ. ೩೫೦/-

ವ್ಯಂಗ್ಯಚಿತ್ರ : ಪಿ. ಮಹಮ್ಮದ್
ರೇಖಾಚಿತ್ರ : ಎಸ್. ಖುತ

ಮುದ್ರಣ
**ಇಳಾ ಮುದ್ರಣ**
ನಂ. ೩೬, ೪೦ ಅಡಿ ರಸ್ತೆ
ರಾಘವ ನಗರ, ನ್ಯೂ ಟಿಂಬರ್‌ಯಾರ್ಡ್ ಲೇಔಟ್
ಬೆಂಗಳೂರು - ೫೬೦ ೦೨೬
✆ : ೨೬೭೫೭೦೪೯, ೩೨೭೧೫೭೭೩



‘ಸಂಕೋಚ ಸ್ವಭಾವದ, ಧ್ವನಿಯೆತ್ತಿ
ಮಾತನಾಡಲೂ ಹಿಂಜರಿಯುವ, ಮಾಡಿದ
ಕೆಲಸವನ್ನು ಅಚ್ಚುಕಟ್ಟಾಗಿ ಮಾಡುವ,
ಕನ್ನಡಾಭಿಮಾನದ ಸೊಕ್ಕು ಕಿಂಚಿತ್ತೂ
ಇಲ್ಲದ ಸಜ್ಜನ ಈ ಶ್ರೀನಿವಾಸರಾಜು
ಎಂದೂ ಕ್ರಾಂತಿಯ ಕಹಳೆ ಊದದ
ಶ್ರೀನಿವಾಸರಾಜು ಕ್ರೈಸ್ಟ್ ಕಾಲೇಜಿನಲ್ಲಿ
ನಡೆಸಿರುವುದು ನಿಜವಾದ ಕ್ರಾಂತಿ’.

– ಪಿ. ಲಂಕೇಶ್

# ಶ್ರೀನಿವಾಸರಾಜು ಅಭಿನಂದನ ಸಮಿತಿ

ಗೌರವಾಧ್ಯಕ್ಷರು
ಡಾ. ಜಿ.ಎಸ್. ಶಿವರುದ್ರಪ್ಪ

ಕಾರ್ಯಾಧ್ಯಕ್ಷರು
ಪ್ರೊ. ಎಸ್.ಜಿ. ಸಿದ್ದರಾಮಯ್ಯ

ಕಾರ್ಯದರ್ಶಿ
ಪ್ರೊ. ಎಂ.ಜಿ. ಚಂದ್ರಶೇಖರಯ್ಯ

ಕೋಶಾಧ್ಯಕ್ಷರು
ಡಿ.ಸಿ. ಗೀತಾ, ಸುಧಾಶರ್ಮ

ಸದಸ್ಯರು

ಎಂ.ಎಸ್. ಮೂರ್ತಿ
ಆರ್.ಜಿ. ಹಳ್ಳಿ ನಾಗರಾಜ್
ವಿಕ್ರಮ ವಿಸಾಜಿ
ಎಸ್.ಎಸ್. ಶ್ರೀಧರಮೂರ್ತಿ
ಡಿ.ವಿ. ಪ್ರಹ್ಲಾದ್
ಎಂ.ಆರ್. ಭಗವತಿ
ಛಾಯಾ ಭಗವತಿ
ಆರ್. ಚಲಪತಿ
ಕೆ.ವೈ. ನಾರಾಯಣಸ್ವಾಮಿ
ಎಲ್.ಎನ್. ಮುಕುಂದರಾಜ್

# ‘ಶಬ್ದದೊಳಗಣ ನಿಶ್ಶಬ್ದದಂತೆ’

ಪುಸ್ತಕ ಪ್ರೀತಿಯ ಕೇಂದ್ರದಲ್ಲಿ, ಅರಳುವ ಪ್ರತಿಭೆಗಳನ್ನು ಹುಡುಕುತ್ತ, ಮಾನವೀಯ ಸಂಬಂಧಗಳನ್ನು ಅಪೂರ್ವವಾದ ರೀತಿಯಲ್ಲಿ ವಿಸ್ತರಿಸಿದ ಶ್ರೀನಿವಾಸರಾಜು ಅವರ ಸದ್ದಿಲ್ಲದ ಸಾಧನೆ ‘ಶಬ್ದದೊಳಗಣ ನಿಶ್ಶಬ್ದದಂತೆ’ ಚೇತೋಹಾರಿಯಾಗಿದೆ. ನಮ್ಮ ಸುತ್ತಣ ಸಾಹಿತ್ಯ ಪ್ರಪಂಚ ವಿವಿಧ ಸಾಹಿತ್ಯ ಚಳುವಳಿಗಳಿಂದ, ಅವು ಹುಟ್ಟಿಸಿದ ಹಲವು ಬಗೆಯ ವಾಗ್ವಾದಗಳಿಂದ, ಪುಸ್ತಕೋದ್ಯಮದ ಹಾಗೂ ಪುಸ್ತಕ ಪ್ರಕಾಶನದ ಉತ್ಸಾಹಗಳಿಂದ, ಸಾಕಷ್ಟು ಚಲನಶೀಲವೂ ಶಬ್ದಮಯವೂ ಆಗಿದ್ದಂಥ ವಾತಾವರಣದಲ್ಲಿ, ಬರೆಯುವ ಬಗ್ಗೆ ಬಹುಮಟ್ಟಿಗೆ ಅನಾಸಕ್ತರಾಗಿ, ಆದರೆ ಬರವಣಿಗೆಯ ಬಗ್ಗೆ, ಬರವಣಿಗೆಗೆ ತೊಡಗಿಕೊಳ್ಳುವವರ ಬಗ್ಗೆ ಅತ್ಯಂತ ಆಸಕ್ತರಾಗಿ, ನಿರಂತರವಾಗಿ ಮೂರು ದಶಕಗಳ ಕಾಲ, ಬರೆಯುವ ಸಾಮರ್ಥ್ಯವಿದ್ದೂ ತಕ್ಕ ಅವಕಾಶಗಳಿಲ್ಲದ ಬಹುಸಂಖ್ಯೆಯ ಯುವಪ್ರತಿಭೆಗಳಿಗೆ ಒಂದು ವೇದಿಕೆಯನ್ನು ಕಲ್ಪಿಸಿ, ಸಮೃದ್ಧವಾದ ಬೆಳೆಗೆ ‘ಅಂತರ್ಜಲ’ದಂತೆ ವರ್ತಿಸಿದವರು ಜಿ. ಶ್ರೀನಿವಾಸರಾಜು ಅವರು. ಈ ‘ಸಾಹಿತ್ಯ ಪರಿಚಾರಿಕೆ’ಗೆ ಅವರು ನಿರ್ಮಿಸಿಕೊಂಡ ನೆಲೆಗಟ್ಟು ಬೆಂಗಳೂರಿನ ಕ್ರೈಸ್ಟ್ ಕಾಲೇಜು ಕನ್ನಡ ಸಂಘ. ಈ ಹೊತ್ತು ಕ್ರೈಸ್ಟ್ ಕಾಲೇಜು ಕನ್ನಡ ಸಂಘ ಮತ್ತು ಶ್ರೀನಿವಾಸರಾಜು ಅವರನ್ನು ಪ್ರತ್ಯೇಕವಾಗಿ ಕಲ್ಪಿಸಿಕೊಳ್ಳುವುದು ಸಾಧ್ಯವೇ ಇಲ್ಲ. ಹಾಗೆ ನೋಡಿದರೆ ಬಹುತೇಕ ಕನ್ನಡೇತರರೇ ತುಂಬಿಕೊಂಡ ಮತ್ತು ಇಂಗ್ಲಿಷ್ ಮಾಧ್ಯಮದ ವಾತಾವರಣವೇ ಪ್ರಧಾನವಾದ, ಕನ್ನಡದ ಬಗ್ಗ ಅಷ್ಟೇನೂ ಕಾಳಜಿಯಿಲ್ಲದ ಆಡಳಿತವರ್ಗವಿದ್ದ ಕ್ರೈಸ್ಟ್ ಕಾಲೇಜಿನಲ್ಲಿ, ಶ್ರೀನಿವಾಸರಾಜು ಅದಾವ ಮಾಯೆಯಿಂದಲೋ, ೧೯೭೩ರಲ್ಲಿ ಕನ್ನಡ ಸಂಘವೊಂದನ್ನು ಸ್ಥಾಪಿಸಿ ಕನ್ನಡದ ಪ್ರೀತಿಗೆ ಹಾಗೂ ಕನ್ನಡಪರ ಚಟುವಟಿಕೆಗಳಿಗೆ ಅದನ್ನೊಂದು ಕೇಂದ್ರವೆಂಬಂತೆ ರೂಪಿಸಿದ್ದು ಮತ್ತು ಕರ್ನಾಟಕಾದ್ಯಂತ ಚದುರಿದ್ದ ಯುವಪ್ರತಿಭೆಗಳ ಅನ್ವೇಷಣೆಗೆ ತೊಡಗಿ ಕನ್ನಡ ಪುಸ್ತಕ ಪ್ರಕಟನೋದ್ಯಮದಲ್ಲಿ ಈ ಸಂಘ ಒಂದು ವಿಶಿಷ್ಟವಾದ ಸ್ಥಾನವನ್ನು ಗಳಿಸಿಕೊಳ್ಳುವಂತೆ ಮಾಡಿದ್ದು ಹಾಗೂ ಕರ್ನಾಟಕದ ವಿವಿಧ ಕಾಲೇಜುಗಳ ಹಲವು ಕನ್ನಡ ಸಂಘಗಳಿಗೆ ಪ್ರೇರಣೆಯೂ ಮಾದರಿಯೂ ಆದದ್ದು ಶ್ರೀನಿವಾಸರಾಜು ಅವರ ಮಹತ್ವದ ಸಾಧನೆಯೇ. ಈ ಹೊತ್ತು ಕ್ರೈಸ್ಟ್ ಕಾಲೇಜ್ ಕನ್ನಡ ಸಂಘದಿಂದ ಬೆಳಕಿಗೆ ಬಂದ ಲೇಖಕರ ಒಂದು ಪರಂಪರೆಯೇ ಇದೆ ಮತ್ತು ಇಂದು ಬರೆಯುತ್ತಿರುವ ಮಧ್ಯ ವಯಸ್ಸನ್ನು ತಲುಪಿದ ಹಾಗೂ ತಾರುಣ್ಯದಲ್ಲಿರುವ ಅನೇಕ ಮುಖ್ಯ ಬರಹಗಾರರನ್ನು ಶ್ರೀನಿವಾಸರಾಜು ಇಲ್ಲದೆ ಕಲ್ಪಿಸಿಕೊಳ್ಳುವುದು ಸಾಧ್ಯವಿಲ್ಲದ ಮಾತಾಗಿದೆ.

ಕಳೆದ ಶತಮಾನದಲ್ಲಿ ಡಾ. ಎ.ಆರ್. ಕೃಷ್ಣಶಾಸ್ತ್ರಿ ಮತ್ತು ಶ್ರೀ ಜಿ.ಪಿ. ರಾಜರತ್ನಂ ಅವರು ಬೆಂಗಳೂರಿನ ಸೆಂಟ್ರಲ್ ಕಾಲೇಜ್ ಕರ್ನಾಟಕ ಸಂಘದ ಮೂಲಕ ಪ್ರಾರಂಭಿಸಿದ 'ಸಾಹಿತ್ಯ ಪರಿಚಾರಿಕೆ'ಯ ಪರಂಪರೆಯನ್ನು, ಅತ್ಯಂತ ಸಮರ್ಥವಾಗಿ ಮೂರು ದಶಕಗಳ ಕಾಲ ಹರಿಗಡಿಯದೆ ಮುಂದುವರಿಸಿಕೊಂಡು ಬಂದ ಶ್ರೀನಿವಾಸರಾಜು ಅವರ ವ್ಯಕ್ತಿತ್ವ ಹಾಗೂ ಸಾಧನೆಗಳನ್ನು ಕುರಿತು, ಅವರ ಓರಗೆಯವರು, ಹಿರಿಯರು, ಆಪ್ತರು, ಅಭಿಮಾನಿಗಳು ಮತ್ತು ಅವರ ಪ್ರೋತ್ಸಾಹ–ಪ್ರಕಾಶನದ ಮೂಲಕ ಬೆಳಕಿಗೆ ಬಂದ ಬಹುಸಂಖ್ಯಾತ ಬರಹಗಾರರು, ಈ ಸಂಪುಟದಲ್ಲಿ ಬರೆದಿರುವ ಲೇಖನಗಳಲ್ಲಿ ಎಂತಹ ಪ್ರೀತಿ–ವಿಶ್ವಾಸ–ಗೌರವಗಳು ಪುಟಿಯುತ್ತಿವೆ ಎಂಬುದನ್ನು ಪ್ರತ್ಯೇಕವಾಗಿ ಹೇಳುವ ಅಗತ್ಯವಿಲ್ಲ. ಶ್ರೀನಿವಾಸರಾಜು ಅವರ 'ತಾಯಿಗುಣ' 'ತಾಳ್ಮೆ' 'ಕಾಯುವಿಕೆ' 'ನಿರುದ್ವಿಗ್ನ ಗುಣ' 'ಸಂಕೋಚ ಸ್ವಭಾವ' 'ಮಾಡುವ ಕೆಲಸವನ್ನು ಅಚ್ಚುಕಟ್ಟಾಗಿ ಮಾಡುವ' ಕರ್ಮಕೌಶಲ, ತಾನು ಮಾಡುವ ಕೆಲಸವನ್ನು ಬೇರೆ 'ಯಾರೂ ಮಾಡಬಹುದು' ಎನ್ನುವ ವಿನಯ ಮತ್ತು ಸಜ್ಜನಿಕೆ, ಪ್ರಕಟಣ ವೇದಿಕೆಯಲ್ಲಿ ತರುಣ ಚೇತನಗಳನ್ನು ಬೆಳೆಯಿಸಲು ಅವರು ಕೈಕೊಂಡ ಹಲವು ಪ್ರಯೋಗಗಳು, ಪುಸ್ತಕೋದ್ಯಮಕ್ಕೆ ಅವರು ತಂದುಕೊಟ್ಟ ಸಾಂಸ್ಕೃತಿಕ ಆಯಾಮಗಳು, ಪತ್ರಿಕೆಯ ದಪ್ಪಕ್ಷರದ ಚಪ್ಪಾಳೆಯ ಹಂಗಿಲ್ಲದೆ, ಸಣ್ಣಕ್ಷರದ ಪಿಸುಮಾತಿನ ಗೆರೆಯಾಚೆಗೂ ನಿಲ್ಲುವ ಪ್ರವೃತ್ತಿ – ಇತ್ಯಾದಿ ಲಕ್ಷಣಗಳಿಂದ ಸಮನ್ವಿತವಾದ ಶ್ರೀನಿವಾಸರಾಜು ಅವರ ವ್ಯಕ್ತಿತ್ವ ಈ ಸಂಭಾವನಾ ಗ್ರಂಥದ ಪುಟಪುಟಗಳಲ್ಲಿ ಅನಾವರಣಗೊಂಡಿರುವ ಕ್ರಮ ಅತ್ಯಂತ ಹೃದ್ಯವೂ ಗೌರವಾಸ್ಪದವೂ ಆಗಿದೆ.

ಇಂಥ ಪ್ರೀತಿಯ ಶ್ರೀನಿವಾಸರಾಜು ಅವರಿಗೆ, ಒಂದು ಅಭಿನಂದನ ಗ್ರಂಥವನ್ನು ಸಿದ್ಧಪಡಿಸಿ ಅವರನ್ನು ಗೌರವಿಸುವುದು ನಮ್ಮೆಲ್ಲರ ಸಾಂಸ್ಕೃತಿಕ ಜವಾಬ್ದಾರಿ ಎಂದು ತಿಳಿದ ನನ್ನ ಹಲವು ಗೆಳೆಯರು, ಈ ಸಂಪುಟದ ಹಾಗೂ ಸಮಾರಂಭದ ಹಿಂದೆ ಇದ್ದಾರೆ. ಹೀಗಾಗಿ ಶ್ರೀನಿವಾಸರಾಜು ಅಭಿನಂದನ ಸಮಿತಿಯ ಕಾರ್ಯಾಧ್ಯಕ್ಷರಾದ ಪ್ರೊ. ಎಸ್.ಜಿ. ಸಿದ್ಧರಾಮಯ್ಯ, ಕಾರ್ಯದರ್ಶಿ ಎಂ.ಜಿ. ಚಂದ್ರಶೇಖರಯ್ಯ ಮತ್ತು ಇತರ ಸದಸ್ಯರ ಪರಿಶ್ರಮದಿಂದಾಗಿ 'ಅಂತರ್ಜಲ' ಎಂಬ ಹೆಸರಿನ ಈ ಸಂಪುಟವು ಅತ್ಯಂತ ಅರ್ಥಪೂರ್ಣವಾಗಿ ಸಿದ್ಧಗೊಂಡಿದೆ. ಈ ಅಭಿನಂದನ ಗ್ರಂಥಕ್ಕೆ ನಮ್ಮ ಕೋರಿಕೆಯನ್ನು ಮನ್ನಿಸಿ, ಅತ್ಯಲ್ಪ ಕಾಲದಲ್ಲಿಯೇ ಲೇಖನಗಳನ್ನು ಬರೆದುಕೊಟ್ಟ ಎಲ್ಲ ಲೇಖಕರಿಗೆ, ಈ ಒಂದು ಕೃತಿಗೌರವವನ್ನು ಸ್ವೀಕರಿಸಲು ಒಪ್ಪಿಕೊಂಡು ನಮ್ಮೆಲ್ಲರ ಸಂತೋಷಕ್ಕೆ ಕಾರಣರಾದ ಶ್ರೀ ಚಿ. ಶ್ರೀನಿವಾಸರಾಜು ಅವರಿಗೆ, ಮತ್ತು ಈ ಕೃತಿಯನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ ಇಳಾ ಮುದ್ರಣದ ಮಾಲೀಕರಾದ ಬಿ. ಗುರುಮೂರ್ತಿ ಮತ್ತು ಸಿಬ್ಬಂದಿವರ್ಗದವರಿಗೆ ಅಭಿನಂದನ ಸಮಿತಿಯ ಪರವಾಗಿ ಹೃತ್ಪೂರ್ವಕವಾದ ವಂದನೆಗಳನ್ನು ಸಲ್ಲಿಸುತ್ತೇನೆ.

**ಜಿ.ಎಸ್. ಶಿವರುದ್ರಪ್ಪ**
ಗೌರವಾಧ್ಯಕ್ಷರು

ಜೂನ್ ೨೦೦೭

# ಅಂತರ್ಜಾಲ

# ಅಂತರ್ಜಾಲ

## ಹಿರಿಯರ ಹರಕೆ



## ಒಲಿವೇ ನಮ್ಮ ಬದುಕು



## ಸಾಹಿತ್ಯದ ಅಂತರ್ಜಾಲ

## ಅವರು ಬೆಳೆಸಿದ ಗಿಡಗಳು

## ಕಾವ್ಯಗೌರವ



## ಕ್ರೈಸ್ಟ್ ಕಾಲೇಜು

## ಕೃತಿಗಳನ್ನು ಕುರಿತು



## ಸಂಕೀರ್ಣ



## ಸಂದರ್ಶನ

# ಗೆಲುವು ಕೋರುವೆ

● ಪು.ತಿ.ನ.

ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘವು ಚಿ. ಶ್ರೀನಿವಾಸರಾಜು ಅವರ ಮೂಲಕ ನಾಡಿನ ಪ್ರಾಯಶಃ ಎಲ್ಲ ಪ್ರಮುಖ ಸಾಹಿತಿಗಳ ಸಂಪರ್ಕ ಹೊಂದಿದೆ. ಚಿ. ಶ್ರೀನಿವಾಸರಾಜು ಅವರು ಸದಭಿರುಚಿಯುಳ್ಳ ಸಹೃದಯ ರಸಿಕರು. ಸೂಕ್ಷ್ಮ ಸಂವೇದನಾಶೀಲರು - ಗುಣಪಕ್ಷಪಾತಿ ಗಳು. ಅವರಿಗೆ ಈ ಕಾಲೇಜಿನ ಆಡಳಿತವರ್ಗ ಸಂಪೂರ್ಣ ಸಹಕಾರ ನೀಡಿ, ಈ ಕನ್ನಡ ಸಂಘವನ್ನು ಅದು ನಗರದ ಪ್ರಮುಖ ಸಾಂಸ್ಕೃತಿಕ ಸಂಸ್ಥೆಗಳ ಜತೆಗೆ ಸೇರಿಕೊಳ್ಳುವಷ್ಟು ಬಲಪಡಿಸಿದೆ. ಈ ಸಂಘ ನನ್ನನ್ನು ಒಂದು ಸಲ ಬರಮಾಡಿಕೊಂಡು ಸತ್ಕರಿಸಿತು. ಆಶ್ಚರ್ಯ ವೇನೆಂದರೆ ನನ್ನ ಅಭಿಮಾನಿ ಸ್ನೇಹಿತರೊಬ್ಬರು ಕೊಟ್ಟ ನನ್ನ ಪ್ರತಿಕೃತಿ, ಅಲ್ಲಿನ ವೇದಿಕೆಯ ಮೇಲೆ ಅನಾವೃತವಾಯಿತು. ಮುಖ್ಯಸ್ಥರು ನನ್ನನ್ನು ಬಹುವಾಗಿ ಆದರಿಸಿದರು. ಇದೆಂದು ಮರೆಯಲಾಗದ ವಿಶ್ವಾಸದ ನೆನಪು. ಇಲ್ಲಿ ಕನ್ನಡವನ್ನು ಪ್ರೋತ್ಸಾಹಿಸಲು ಅನೇಕ ಏರ್ಪಾಡುಗಳಾಗಿವೆ. ವಿದ್ಯಾರ್ಥಿಗಳಿಂದ ಲೇಖನಗಳನ್ನು ಬರೆಯಿಸಿ ಪುಸ್ತಕ ರೂಪದಲ್ಲಿ ಪ್ರಕಟಿಸುವುದು, ವಿವಿಧ ಸ್ಪರ್ಧೆಗಳನ್ನು ಏರ್ಪಡಿಸಿ ಬಹುಮಾನಗಳನ್ನು ಹಂಚುವುದು, ಪ್ರಸಿದ್ಧ ಸಾಹಿತಿಗಳನ್ನು ಕರೆಸಿ ಅವರಿಂದ ಸ್ಫೂರ್ತಿಯುತವಾದ ಭಾಷಣಗಳನ್ನು ಮಾಡಿಸುವುದು ಮುಂತಾದ ಕಾರ್ಯಗಳು ಶ್ರದ್ಧೆಯಿಂದ ಅವಿರತವಾಗಿ ಇಲ್ಲಿ ನಡೆಯುತ್ತಿವೆ. ಹಿಂದೆ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಪ್ರೊಫೆಸರ್ ಆಗಿದ್ದ ಶ್ರೀ W.G. Eagleton (ಈಗಲ್‌ಟನ್) ಅವರು ಆಚಾರ್ಯ ಬಿ.ಎಂ.ಶ್ರೀ. ಅವರನ್ನು ಕುರಿತ ತಮ್ಮ ಲೇಖನವೊಂದರಲ್ಲಿ ಹೇಳಿರುವ ಮಾತು ಸ್ಮರಣೆಗೆ ಬರುತ್ತದೆ. ಅವರೆನ್ನುತ್ತಾರೆ, "During my years in Mysore I came to believe—and is one of many lessons I learnt there—that no one can really assimilate a foreign culture unless his own Cultural roots are deep and strong". ಬಹಳ ಒಳ್ಳೆಯ ಮಾತು.

ನಮ್ಮ ವಿದ್ಯಾರ್ಥಿಗಳೂ, ಅಧ್ಯಾಪಕರೂ, ಈಗಿನ ವಿದ್ಯಾಭ್ಯಾಸದ ಸೂತ್ರಗಳನ್ನು ತಮ್ಮ ಕೈಯ್ಯಲ್ಲಿ ಹಿಡಿದಾಡಿಸುತ್ತಿರುವವರು ಅತ್ಯವಶ್ಯವಾಗಿ ಆಲೋಚಿಸತಕ್ಕ ವಿಷಯವಿದು. ಕ್ರೈಸ್ಟ್ ಕಾಲೇಜಿನಲ್ಲಿ ಪ್ರಾಯಶಃ ಹೊರನಾಡ ಸಂಸ್ಕೃತಿ ವಾತಾವರಣ ಗಾಢವಾಗಿರುವುದು ಸಹಜ. ಇಲ್ಲಿ ನಮ್ಮ ನಾಡಿನ ಸಂಸ್ಕೃತಿಯನ್ನು ಕನ್ನಡದ ಮೂಲಕ ಹರಡುವುದಕ್ಕಿಂತ ಒಳ್ಳೆಯ ಕೆಲಸ ಮತ್ತೇನಿದೆ? ಕನ್ನಡ ಸಂಘ ಅಭಿನಂದನೀಯ ಕೆಲಸ ಮಾಡುತ್ತಿದೆ. ಇದರ ಮೂಲ ಪ್ರೇರಕರಾದವರೆಲ್ಲರಿಗೂ ನನ್ನ ಹಾರ್ದಿಕ ಅಭಿನಂದನೆಗಳು. ಆಧುನಿಕ ಸಾಹಿತ್ಯವನ್ನೇ ಅಲ್ಲದೆ ನಮ್ಮ ಪ್ರಾಚೀನ ಸಾಹಿತ್ಯದ ಅರಿವನ್ನು ಈ ಕಾಲೇಜಿನ ವಿದ್ಯಾರ್ಥಿಗಳಿಗೆ ನಮ್ಮ ಅಧ್ಯಾಪಕರು ತಂದು, ನಮ್ಮ ಸಂಸ್ಕೃತಿಯಲ್ಲಿ ರೂಢ ಮೂಲರಾಗಿಸಿ ಮತ್ತೊಂದು ಸಂಸ್ಕೃತಿಯ ಸೌಂದರ್ಯವನ್ನು ಶ್ರೇಯಕಾರಕವಾದ ಗುಣವನ್ನೂ ಸ್ವೀಕರಿಸಿ ಉನ್ನತ ಮನಸ್ಕರಾಗುವಂತೆ ಮಾಡಲಿ ಎಂದು ಹಾರೈಸಿ, ಈ ಕನ್ನಡ ಸಂಘದ ಚಟುವಟಿಕೆಗಳಿಗೆ ಗೆಲವು ಕೋರುತ್ತೇನೆ.

*ಕ್ರೈಸ್ಟ್ ಕಾಲೇಜು 'ಆನಂದ' ಸದಾಶಯ ಸಂಚಿಕೆ*



# ಸನ್ಮಾರ್ಗದರ್ಶಿ

● ಜಿ. ವೆಂಕಟಸುಬ್ಬಯ್ಯ

ಬೆಂಗಳೂರು ವಿಶ್ವವಿದ್ಯಾಲಯವು ಪ್ರಾರಂಭವಾದಾಗ ಅಲ್ಲಿಯ ಕನ್ನಡ ಪಠ್ಯಸಮಿತಿಯ ಮತ್ತು ಪರೀಕ್ಷಾ ಸಮಿತಿಯ ಅಧ್ಯಕ್ಷನಾಗಿ ನಾನು ಕಾರ್ಯವನ್ನು ನಿರ್ವಹಿಸುತ್ತಿದ್ದೆ. ಪ್ರಥಮ ಕುಲಪತಿಗಳಾಗಿದ್ದ ಡಾ॥ ಲರೋಯ ಅವರು ನನ್ನನ್ನು ಆಹ್ವಾನಿಸಿ ಕನ್ನಡ ವಿಭಾಗದ ಬೋಧನ ಭಾಗವನ್ನು ನೋಡಿಕೊಳ್ಳಬೇಕೆಂದು ತಿಳಿಸಿದರು. ವಿಜಯ ಕಾಲೇಜಿನ ಆಡಳಿತದ ಕಾರ್ಯದರ್ಶಿಗಳಾಗಿದ್ದ ದಿ॥ ಎಲ್.ಎಸ್. ವೆಂಕಾಜಿರಾಯರು ರಾಮಕೃಷ್ಣ ಹೆಗ್ಗಡೆಯವರಿಗೆ ನನ್ನನ್ನು ಬಿಟ್ಟು ಕೊಡುವುದು ಅಸಾಧ್ಯವೆಂದು ತಿಳಿಸಿದ ಬಳಿಕ ಹೊಸ ಏರ್ಪಾಟು ಆಗುವ ತನಕ ನಾನು ಆ ಕೆಲಸವನ್ನು ನೋಡುತ್ತಿರಬೇಕೆಂದು ನಿರ್ಧಾರವಾಯಿತು. ಇಷ್ಟಾಗುವ ವೇಳೆಗೆ ಆ ಸ್ಥಾನದ ವ್ಯವಹಾರ ಬಹುಬೇಗ ಶಿಕ್ಷಣೇತರ ಬಣ್ಣವನ್ನು ಪಡೆದು ನಾನು ಅದರಿಂದ ದೂರವಾದೆ. ಆದರೂ ಮೊದಲ ವರ್ಷದ ಎಲ್ಲ ತರಗತಿಯ ಪಠ್ಯಗಳನ್ನು ಪರೀಕ್ಷೆಯ ಏರ್ಪಾಟುಗಳನ್ನು ನಾನೇ ಸಿದ್ಧಪಡಿಸಿಟ್ಟಿದ್ದೆ. ಹೀಗಾಗಿ ಬೆಂಗಳೂರಿನಲ್ಲಿ ಕನ್ನಡ ಎಂ.ಎ.ಗೆ ಸೇರುವ ವಿದ್ಯಾರ್ಥಿಗಳು ಎಂಥವರು ಎಲ್ಲಿಂದ ಬರುತ್ತಾರೆ ಎಂಬ ಬಗ್ಗೆ ಉತ್ಸಾಹದಿಂದ ವಿಚಾರಿಸಿಕೊಳ್ಳುತ್ತಿದ್ದೆ. ಪತ್ತೆದಾರಿಯಾಗಿ ಅಲ್ಲ – ಕನ್ನಡದ ಭವಿಷ್ಯದಲ್ಲಿದ್ದ ಬಹುವಾದ ಆಸಕ್ತಿಯಿಂದ. ಕ್ರಮವಾಗಿ ಅಲ್ಲಿ ಸೇರಿಕೊಂಡ ಕೆಲವು ವಿದ್ಯಾರ್ಥಿಗಳು ನನ್ನಲ್ಲಿಗೆ ಬಂದು ಮಾತನಾಡಿ ಕೊಂಡು ಹೋಗುವ ಪರಿಪಾಠವಿತ್ತು. ಹೀಗೆ ಸಮಾರು ಒಂದು ವರ್ಷಕಾಲ ನನಗೆ ಬೆಂಗಳೂರು ವಿಶ್ವವಿದ್ಯಾಲಯದ ಆರಂಭದ ಸಂಬಂಧವಿತ್ತು.

ಕನ್ನಡದ ಆನರ್ಸ್ ತರಗತಿಗಳು ಪ್ರಾರಂಭವಾದ ಮೇಲೆ ವಿಜಯ ಕಾಲೇಜಿನಲ್ಲಿಯೂ ನ್ಯಾಷನಲ್ ಕಾಲೇಜು ಮತ್ತು ಮಹಾರಾಣಿಯರ ಕಾಲೇಜುಗಳಲ್ಲಿಯೂ ಕನ್ನಡ ಆನರ್ಸ್ ತರಗತಿಗಳು ಪ್ರಾರಂಭವಾಗಿ ಈ ತರಗತಿಗಳ ವಿದ್ಯಾರ್ಥಿಗಳು ಪರಸ್ಪರ ವಿಚಾರವಿನಿಮಯ

ಮಾಡಿಕೊಳ್ಳುವ ಅಭ್ಯಾಸ ಬೆಳೆದುಬಂತು. ಇಂಥ ಸಮಯಗಳಲ್ಲಿ ವಿಶ್ವವಿದ್ಯಾಲಯದ ಎಂ.ಎ. ವಿದ್ಯಾರ್ಥಿಗಳಲ್ಲಿ ಕೆಲವರು ತುಂಬ ಪ್ರೌಢವಿದ್ಯಾರ್ಥಿಗಳಾಗಿದ್ದುದು ನನ್ನ ಗಮನಕ್ಕೆ ಬಂತು. ಅವರಲ್ಲಿ ನನ್ನ ಮನಸ್ಸನ್ನು ಆಕರ್ಷಿಸಿದ ವಿದ್ಯಾರ್ಥಿಗಳಲ್ಲಿ ಚಿ. ಶ್ರೀನಿವಾಸರಾಜು, ಎಚ್.ಎಸ್. ಶಿವಪ್ರಕಾಶ, ಪ್ರಸನ್ನ ಮುಂತಾದವರು ಮುಖ್ಯರು. ಕನ್ನಡವನ್ನು ಗಂಭೀರವಾಗಿ ಅಭ್ಯಾಸ ಮಾಡುವ ಇಂಥವರಿಂದ ಕನ್ನಡದ ಉತ್ಕರ್ಷನ ಸಾಧ್ಯವೆಂಬ ನಂಬಿಕೆ ನನಗೆ ಬಂತು. ಹೊಸ ಹೊಸ ಕಾಲೇಜುಗಳು ಪ್ರಾರಂಭವಾಗಿ ಕನ್ನಡ ಇಲಾಖೆಗೆ ಕನ್ನಡ ಉಪನ್ಯಾಸಕರನ್ನು ಆಯ್ಕೆಮಾಡಬೇಕಾದಾಗ ಸಾಮಾನ್ಯವಾಗಿ ವಿಶ್ವವಿದ್ಯಾಲಯದ ಪರವಾಗಿ ಒಬ್ಬರು ಮತ್ತವರ ಜೊತೆಗೆ ನಾನು ಇರುತ್ತಿದ್ದೆವು. ಇಂಥ ಏರ್ಪಾಟಿನಿಂದ ಹೊಸ ಕಾಲೇಜುಗಳಿಗೆ ನೇಮಿತವಾಗುವ ಅಧ್ಯಾಪಕರ ಪರಿಚಯವು ನನಗೆ ನೇರವಾಗಿಯೇ ಉಂಟಾಗುವ ಅವಕಾಶವೂ ಆವಿರ್ಭವಿಸಿತು. ಹೀಗೆ ಪರಿಚಿತರಾಗಿ ಇಲ್ಲಿಯವರೆಗೂ ನನಗೆ ಆತ್ಮೀಯರಾಗಿ ಇರುವ ಕೆಲವು ತರುಣರಲ್ಲಿ ಚಿ.ಶ್ರೀನಿವಾಸರಾಜು ಮುಖ್ಯರು.

ಕ್ರೈಸ್ಟ್ ಕಾಲೇಜಿನ ಕನ್ನಡ ಇಲಾಖೆಗೆ ಅಧ್ಯಾಪಕರನ್ನು ನೇಮಕಮಾಡಲು ನಡೆದ ಸಂದರ್ಶನದಲ್ಲಿ ಶಿವರುದ್ರಪ್ಪನವರು ನಾನೂ ಇದ್ದೆವು. ಅನೇಕರನ್ನು ಸಂದರ್ಶಿಸಿದ ಮೇಲೆ ಚಿ.ಶ್ರೀನಿವಾಸರಾಜು ಅವರು ಕನ್ನಡವನ್ನು ಗಂಭೀರವಾಗಿ ಅಭ್ಯಾಸಮಾಡಿದ್ದ ವಿಚಾರ ಸ್ಪಷ್ಟ ವಾಯಿತು. ತಾವು ಅಧ್ಯಾಪಕರಾಗಿ ಏನೇನು ಮಾಡುವ ಉದ್ದೇಶವನ್ನು ಹೊಂದಿದ್ದೀರಿ. ಎಂಬ ಪ್ರಶ್ನೆಗೆ ಚಿ. ಶ್ರೀನಿವಾಸರಾಜು ಅವರು ಶ್ರೀ ರಾಜರತ್ನಂ ಅವರು ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದಲ್ಲಿ ಮಾಡಿದಂಥ ಕಾರ್ಯವನ್ನು ಮಾಡಬೇಕೆಂಬ ಆಸೆ ಎಂದು ಉತ್ತರಿಸಿದರು. ಈ ಉತ್ತರ ಒಂದೇ ಸಾಕಾಗಿತ್ತು ಅಧ್ಯಾಪಕರಾಗುವ ಅರ್ಹತೆಗೆ.

ಕ್ರೈಸ್ಟ್ ಕಾಲೇಜಿನಲ್ಲಿ ಶ್ರೀನಿವಾಸರಾಜು ಬಹುಬೇಗ ಉತ್ತಮ ಅಧ್ಯಾಪಕರೆಂದು ವಿದ್ಯಾರ್ಥಿ ಪ್ರಿಯರೆಂದು ಒಳ್ಳೆಯ ಹೆಸರನ್ನು ಸಂಪಾದಿಸಿದರು. ಹೀಗೆಯೇ ಇವರ ಇತರ ಕೆಲವರು ಸ್ನೇಹಿತರೂ ಇತರ ಕಾಲೇಜುಗಳಲ್ಲಿ ಉತ್ತಮ ಕಾರ್ಯವನ್ನೇ ಮಾಡುತ್ತಿದ್ದರು. ಶ್ರೀನಿವಾಸರಾಜು ಅವರು ವಿಶಿಷ್ಟ ವಿದ್ವಾಂಸರು ಅವರ ಆಯ್ಕೆಯ ಕ್ಷೇತ್ರ ನಾಟಕ. ಆದರೆ ಮಿಕ್ಕ ಪ್ರಕಾರಗಳನ್ನು ಅಲಕ್ಷಿಸಿದವರಲ್ಲ. ನಾಟಕಕ್ಕೆ ಕಾವ್ಯ ಅಗತ್ಯವೆಂಬುದನ್ನು ಅವರು ಸ್ಪಷ್ಟವಾಗಿ ತಿಳಿದಿದ್ದರು. ಅವರ ಕಾಲೇಜಿಗೆ ಒಂದೆರಡು ಕಾರ್ಯಕ್ರಮಗಳಿಗೆ ನನ್ನನ್ನು ಆಹ್ವಾನಿಸಿ ನನಗೆ ಸಂತೋಷವನ್ನು ಉಂಟುಮಾಡಿದರು.

ವಿದ್ಯಾರ್ಥಿಗಳಿಗೆ ಕನ್ನಡದ ವ್ಯಾಸಂಗದಲ್ಲಿ ಉತ್ಸಾಹವನ್ನು ಉಂಟುಮಾಡುವುದರ ಜೊತೆಗೆ ಅವರಲ್ಲಿ ಸೃಷ್ಟಿಶೀಲ ಆಸಕ್ತಿಯನ್ನು ಬೆಳೆಸಿದುದು ಅವರ ಬಹು ಮುಖ್ಯವಾದ ಕಾರ್ಯ. ಸ್ಪರ್ಧೆಗಳನ್ನು ನಡೆಸಿ ಗೆದ್ದವರಿಗೆ ಬಹುಮಾನವನ್ನು ನೀಡಿ ಅವರು ಬರೆದ ಲೇಖನಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸಿ ಅತೀವ ಆಸಕ್ತಿಯನ್ನುಂಟುಮಾಡಿದರು. ಶ್ರೀನಿವಾಸರಾಜು ಅವರು ವಿದ್ಯಾರ್ಥಿಗಳ ರಚನೆಯನ್ನು ಮಾತ್ರವಲ್ಲದೆ ಹೊಸದಾಗಿ ಗ್ರಂಥಗಳನ್ನು ಬರೆದ ಸ್ನೇಹಿತರ ಪ್ರಥಮ ಗ್ರಂಥಗಳನ್ನು ಕಾಲೇಜಿನ ಕನ್ನಡ ಸಂಘದ ಮೂಲಕ ಪ್ರಕಟಿಸಿದರು. ಕಾಲೇಜಿನ ಆಡಳಿತದವರು ಶ್ರೀನಿವಾಸ ರಾಜು ಅವರ ಉತ್ಸಾಹದ ಕಾರ್ಯಕ್ಕೆ ಬೆಂಬಲವಾಗಿ ನಿಂತಿದ್ದು ಒಂದು ಚರಿತ್ರಾರ್ಹವಾದ ದಾಖಲೆ. ಶ್ರೀನಿವಾಸರಾಜು ಈಗ ನಿವೃತ್ತರಾಗಿದ್ದಾರೆ. ಆದರೆ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದ

ಕಾಲದಲ್ಲಿ ನೂರು ಪುಸ್ತಕಗಳಿಗೂ ಮೀರಿ ಪ್ರಕಟಣೆಗಳನ್ನು ಹೊರತಂದಿದ್ದಾರೆ. ಇದೊಂದು ದಾಖಲೆ ಕಾಲೇಜುಗಳ ಚರಿತ್ರೆಯಲ್ಲಿ. ಪ್ರಸಿದ್ಧ ಲೇಖಕರ ಗ್ರಂಥಗಳನ್ನು ಪ್ರಕಟಿಸಿ ಅವುಗಳನ್ನು ಪಠ್ಯಪುಸ್ತಕಗಳನ್ನು ಮಾಡಿಸಿ ಲೇಖಕರಿಗೆ ರಾಯಧನವನ್ನು ನೀಡಿದ್ದಾರೆ ವೃತ್ತಿ ಪ್ರಕಟನಕಾರರಂತೆ. ದಿ॥ ಎ.ಎನ್. ಮೂರ್ತಿರಾಯರಿಗೆ ಸುಮಾರು ಲಕ್ಷ ರೂಪಾಯಿಗಳ ರಾಯಧನ ಬಂದಾಗ ಅವರು ಹೇಳಿದರು – ನನ್ನ ಜೀವನದಲ್ಲಿ ಇಷ್ಟೊಂದು ಹಣವನ್ನು ಒಂದೇ ಸಲ ನಾನೆಂದು ಕಂಡಿರಲಿಲ್ಲ..... ಎಂದು. ಇಂಥ ಗೌರವಾರ್ಹ ಕಾರ್ಯವನ್ನು ಮಾಡಿದ ಮತ್ತೊಂದು ದೃಷ್ಟಾಂತ ಯಾವ ಕಾಲೇಜಿನ ಸಂಘದಿಂದಲೂ ಆಗಿಲ್ಲ. ಶ್ರೀನಿವಾಸರಾಜು ಅವರ ಜೇಬಿನಲ್ಲಿ ಇದೊಂದು ಭಾರಿ ಶಿಫಾರಸ್ಸು.

ಈ ಎಲ್ಲ ಕೆಲಸಗಳ ನಡುವೆ ಅವರು ಪ್ರಕಟಿಸಿದ ಎಲ್ಲ ಗ್ರಂಥಗಳನ್ನು ನನಗೆ ಗೌರವಪ್ರತಿಯೆಂದು ನೀಡಿ ಅವುಗಳನ್ನು ಓದುವ ಅವಕಾಶವನ್ನು ಮಾಡಿಕೊಟ್ಟಿದ್ದಾರೆ. ಇಂಥ ಸಮಯಗಳಲ್ಲಿ ನನ್ನೊಡನೆ ಅವರು ಆರಾಮವಾಗಿ ಕುಳಿತು ಕನ್ನಡದ ಅನೇಕ ವಿಷಯಗಳನ್ನು ಚರ್ಚಿಸಿದ್ದಾರೆ. ಯುವ ಲೇಖಕರಲ್ಲಿ ನನ್ನ ಕಣ್ಣಿಗೆ ಬೀಳದಿದ್ದ ಅನೇಕರ ಬಗ್ಗೆ ಪರಿಚಯ ಮಾಡಿಕೊಟ್ಟಿದ್ದಾರೆ. ಹೀಗೆ ಕಿರಿಯರ ರಚನೆಗಳ ಬಗ್ಗೆ ನನಗೆ ಆಸಕ್ತಿ ಬೆಳೆಯುವಂತೆ ಮಾಡಿದ ಶ್ರೀನಿವಾಸರಾಜು ಅವರಿಗೆ ನಿಜವಾಗಿ ನಾನು ಕೃತಜ್ಞನಾಗಿರಬೇಕು.

ಕಾಲೇಜಿನ ಕೆಲಸ ಹಾಗಿರಲಿ, ಉತ್ತಮ ಕಾರ್ಯಗಳನ್ನು ಮಾಡುವ ಯುವಕರ ಸಂಸ್ಥೆಗಳೊಡನೆ ಅವರು ಹೊಂದಿರುವ ಆತ್ಮೀಯ ಸಂಬಂಧವೂ ಆಶ್ಚರ್ಯಕರವಾದುದು. ಸಂಚಯ ಮತ್ತು ಅಭಿನವ ಎಂಬ ಎರಡು ಪ್ರೌಢ ಸಂಸ್ಥೆಗಳು ಎಷ್ಟು ಉತ್ತಮ ಕಾರ್ಯ ಮಾಡಿದ್ದಾರೆಂಬುದು ನನ್ನ ಗಮನಕ್ಕೆ ಬಂದಿರಲಿಲ್ಲ. ಅವರ ಮೂಲಕ ಅದು ತಿಳಿದುಬಂದು ಅಲ್ಲಿಯ ಕೆಲವು ಆಸಕ್ತ ಕಾರ್ಯಕರ್ತರ ಕರೆಸಿಕೊಂಡು ಅವರ ಪುಸ್ತಕಗಳನ್ನು ತರಿಸಿಕೊಂಡು ನಾನೂ ಓದಿ ಆನಂದ ಪಟ್ಟಿದ್ದೇನೆ. ಶ್ರೀನಿವಾಸರಾಜು ಅವರ ಸಂಬಂಧ ಇಲ್ಲದಿದ್ದರೆ ಈ ಯುವಕರ ಕಾರ್ಯಗಳು ಗಮನಕ್ಕೆ ಬರುತ್ತಿರಲಿಲ್ಲ. ಈ ಎಲ್ಲ ನನ್ನ ಸಂತಸಗಳಿಗೆ ಶ್ರೀನಿವಾಸರಾಜು ಅವರ ಆತ್ಮೀಯ ವಿನಯಪೂರ್ವಕ ವ್ಯವಹಾರವೇ ಕಾರಣ.

ಈಗ ವಿಶ್ರಾಂತರಾಗಿರುವ ಶ್ರೀನಿವಾಸರಾಜು ಅವರು ಕೆಲವು ಸ್ನಾತಕೋತ್ತರ ತರಗತಿಗಳಿಗೆ ಪ್ರೌಢಶಿಕ್ಷಣ ನೀಡುವ ವ್ಯವಹಾರದಲ್ಲಿ ನಿಂತಿರುವುದರ ಜೊತೆಗೆ ತಮ್ಮ ವಿಶಿಷ್ಟ ಕ್ಷೇತ್ರವಾದ ನಾಟಕ ಪ್ರಕಾರದಲ್ಲಿ ಕೆಲವು ರಚನೆಗಳನ್ನು ಕೈಗೊಂಡಿದ್ದಾರೆ. ಈ ಎಲ್ಲ ಕಾರ್ಯಗಳು ಸುಗಮವಾಗಿ ನೆರವೇರಲಿ.

ಶ್ರೀನಿವಾಸರಾಜು ಅವರೊಡನೆ ಆತ್ಮೀಯರಾಗಿರುವ ಕೆಲವರು ಅವರ ಮಿತ್ರರಿದ್ದಾರೆ. ಅವರನ್ನು ನಾನು ಚೆನ್ನಾಗಿ ಬಲ್ಲೆ. ಒಂದು ಮಟ್ಟದಲ್ಲಿ ಗಂಭೀರವಾದ ಕೆಲಸವನ್ನು ಕೈಗೊಂಡವರು ಒಂಟಿಗಳಾಗಿಬಿಡಬೇಕಾಗುತ್ತದೆ. ಆದರೆ ಈ ಮಿತ್ರಮಂಡಲ ಸ್ನೇಹವನ್ನೂ ಗಂಭೀರಕಾರ್ಯವನ್ನೂ ಉಚಿತ ಪ್ರಮಾಣದಲ್ಲಿ ಜೋಡಿಸಿ ಕಾರ್ಯಮುಖರಾಗಿದ್ದಾರೆ. ಇವರೆಲ್ಲ ನಾಡಿನ ಪುಣ್ಯದ ಪ್ರತಿನಿಧಿಗಳು.

ಶ್ರೀನಿವಾಸರಾಜು ಅವರಿಗೂ ಈ ಮಿತ್ರಮಂಡಳಿಗೂ ನಾನು ಸಕಲ ಶುಭವನ್ನು ಹಾರೈಸುತ್ತೇನೆ. ❑

# ಪುಸ್ತಕ ಸಂಸ್ಕೃತಿಯನ್ನೇ ಉಸಿರಾಡುವ ಸಾಧಕ

● *ಎಲ್.ಎಸ್. ಶೇಷಗಿರಿರಾವ್*

**ಸು**ಮಾರು ಹತ್ತು ವರ್ಷಗಳ ಹಿಂದೆ ಪ್ರೊ. ಶ್ರೀನಿವಾಸರಾಜು ಒಂದು ಬೆಳಗ್ಗೆ ನನ್ನ ಮನೆಗೆ ಬಂದರು. ತಮ್ಮ ಚೀಲದಿಂದ ಒಂದು ಪುಸ್ತಕವನ್ನು ಹೊರಕ್ಕೆ ತೆಗೆದರು, 'ನಮ್ಮ ಸಂಘದ ಇತ್ತೀಚೆಗಿನ ಪ್ರಕಟಣೆ' ಎಂದರು. ಅದು 'ನನ್ನ ನೆನಪಿನ ಬೀರು' ನನ್ನ ಗುರುಗಳಾದ ಡಾ.ಜಿ.ಪಿ. ರಾಜರತ್ನಂ ಅವರು ಬರೆದದ್ದು. ನಾನು ೮-೧೦ ವರ್ಷದ ಹುಡುಗನಾಗಿದ್ದಾಗ ರಾಜರತ್ನಂ ನನ್ನ ತಂದೆಯವರನ್ನು ಕಾಣಲು ಬರುತ್ತಿದ್ದರು. ಆ ದಿನಗಳಲ್ಲಿ ಅವರನ್ನು ಕಂಡು ಕುತೂಹಲ, ಅನಂತರ ನಾನು ನಾಲ್ಕು ವರ್ಷಗಳ ಕಾಲ ಕಾಲೇಜುಗಳಲ್ಲಿ ಅವರ ವಿದ್ಯಾರ್ಥಿ. ಹಲವು ರೀತಿಗಳಲ್ಲಿ ನಾನು ಅವರಿಗೆ ಋಣಿ. ಪ್ರೊ. ಶ್ರೀನಿವಾಸರಾಜು ಕೊಟ್ಟ ಪುಸ್ತಕವನ್ನು ಆಸಕ್ತಿಯಿಂದ ಓದಿದೆ. ಎಷ್ಟೋ ಹೊಸ ವಿಷಯಗಳನ್ನು ತಿಳಿದುಕೊಂಡೆ.

ಪ್ರೊ. ಶ್ರೀನಿವಾಸರಾಜು ಯಾವಾಗಲೂ ಹೀಗೆಯೇ. ನನ್ನ, ಅವರ ಗುರುಗಳಾದ ರಾಜರತ್ನಂ ಅವರು ಕೈಗೊಂಡ 'ಪರಿಚಾರಿಕೆ ಕಾಯಕ'ವನ್ನು ಶ್ರದ್ಧೆಯಿಂದ ಮುಂದುವರೆಸುತ್ತಿದ್ದಾರೆ. 'ನನ್ನ ನೆನಪಿನ ಬೀರು'ವಿನಲ್ಲಿ ಕ್ರೈಸ್ಟ್ ಕಾಲೇಜಿನ ಪ್ರಾಂಶುಪಾಲರ ನುಡಿ ಇದೆ, ರಾಜರತ್ನಂ ಅವರ ಸೊಸೆ ಶ್ರೀಮತಿ ಶೈಲ ಶ್ರೀಧರ್ ಅವರ ನುಡಿ ಇದೆ. ಆದರೆ ಪ್ರೊ. ಶ್ರೀನಿವಾಸರಾಜು ಅವರ ನುಡಿ ಇಲ್ಲ. ಅವರು ಯಾವಾಗಲೂ ಹೀಗೆಯೇ ಕೆಲಸಕ್ಕೆ ಮುಂದು, ಮಾತಿಗೆ, ಪ್ರದರ್ಶನಕ್ಕೆ ಹಿಂದು.



ಇಂಗ್ಲಿಷಿನಲ್ಲಿ 'ಪ್ರೆಸೆನ್ಸ್' ಎನ್ನುವ ಮಾತಿಗೆ ಒಂದು ವಿಶಿಷ್ಟ ಅರ್ಥವಿದೆ. ಮಾತನಾಡದೆ, ಏನೂ ಮಾಡದೆ ಇದ್ದರೂ ಇತರರ ಮೇಲೆ ಗಾಢ ಪ್ರಭಾವ ಬೀರುವ ವ್ಯಕ್ತಿ ಎಂದು. ಪ್ರೊ. ರಾಜು ಇಂಥ 'ಪ್ರೆಸೆನ್ಸ್'. ಅವರು ಒಂದು ಗುಂಪಿನಲ್ಲಿದ್ದರೂ ಎಲ್ಲರೂ ಮಾತನಾಡುತ್ತಿದ್ದರೂ ಮಾತನಾಡದೆ ಸುಮ್ಮನಿರುವುದನ್ನು ಕಂಡಿದ್ದೇನೆ. ಅವರು ಅಲ್ಲಿ 'ಇರು'ತ್ತಾರೆ ಅಷ್ಟೆ. ಆದರೆ ಎಲ್ಲರಿಗೂ

ಅವರು ಇದ್ದಾರೆ ಎಂದು ಗೌರವಪೂರ್ವಕವಾದ ಅರಿವಿರುತ್ತದೆ. ಯಾವಾಗಲಾದರೊಮ್ಮೆ ಒಂದೆರಡು ವಾಕ್ಯಗಳನ್ನಾಡುತ್ತಾರೆ. ಆ ಒಂದೆರಡು ವಾಕ್ಯಗಳು ಇತರರ ಚಿಂತನೆಗೆ ದಾರಿಯಾಗುತ್ತವೆ. ಯಾವುದಾದರೂ ಸಮಾಲೋಚನಾ ಸಭೆಗೆ ಬಂದರೂ ಹಾಗೆಯೇ ಮಾತನಾಡಬೇಕೆಂಬ ಒತ್ತಡವಿಲ್ಲ, ಮಾತಿನಲ್ಲಿ ಉದ್ವೇಗವಿಲ್ಲ. ಯೋಚಿಸಿ ರೂಪಿಸಿಕೊಂಡ ಅಭಿಪ್ರಾಯ, ಆರಿಸಿ ಬಳಸಿದ ಮಾತುಗಳು. ಕೆಲಸವೆಲ್ಲ ಯೋಜನಾಬದ್ಧ; ಶಿಸ್ತಿನಿಂದ ನಡೆಯುತ್ತದೆ. ಶ್ರೀನಿವಾಸರಾಜು ಅವರ ಚಿಂತನೆ ಸ್ಪಷ್ಟ, ಗೊಂದಲವಿಲ್ಲ. ಆದುದರಿಂದ ಮಾತು ಸ್ಪಷ್ಟ, ಆಡಂಬರವಿಲ್ಲ. ಕೆಲವು ವರ್ಷಗಳ ಕೆಳಗೆ ನಾನು ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷನಾಗಿದ್ದಾಗ ಒಂದು ಪುಸ್ತಕ ಮೇಳವನ್ನು ವ್ಯವಸ್ಥೆ ಮಾಡಿದೆವು. ಹಲವು ಕಾರಣಗಳಿಂದ ಅದು ಯಶಸ್ವಿಯಾಗುವುದಿಲ್ಲ ಎಂದು ಹೆದರಿಸಿದವರು ಕೆಲವರು, ಹಾರೈಸಿದವರು ಕೆಲವರು. ಅದನ್ನು ನಿರ್ವಹಿಸಲು ನಾನು ವಿಶೇಷವಾಗಿ ಕೆಲವರು ಸ್ನೇಹಿತರನ್ನು ನೆಚ್ಚಿದ್ದೆ. ಅವರಲ್ಲಿ ಪ್ರೊ. ಶ್ರೀನಿವಾಸ ರಾಜು ಒಬ್ಬರು. ಮುಗುಳ್ನಗೆ ನಗುತ್ತ ಅನವಶ್ಯಕವಾದ ಒಂದೂ ಮಾತಿಲ್ಲದೆ ಅವರಿಗೆ ವಹಿಸಿದ್ದಕ್ಕಿಂತ ಹೆಚ್ಚು ಕೆಲಸವನ್ನು ವಹಿಸಿಕೊಂಡು ಸಮರ್ಥವಾಗಿ ನಿರ್ವಹಿಸಿದರು ಪ್ರೊ. ಶ್ರೀನಿವಾಸರಾಜು.

ಸದಾ ಗಂಭೀರ ಎಂದು ಕಾಣುವ ಪ್ರೊ. ರಾಜು ಅವರಲ್ಲಿ ಆರೋಗ್ಯಕರವಾದ ಹಾಸ್ಯಪ್ರಜ್ಞೆ ಇದೆ. ಯಾವಾಗಲೋ ಒಮ್ಮೆ ಎಲ್ಲರ ತುಟಿಗೆ ನಗೆ ತರುವ ಮಾತನ್ನಾಡುತ್ತಾರೆ. ಪ್ರೊ. ಜಿ. ವೆಂಕಟಸುಬ್ಬಯ್ಯನವರಿಗೆ ಮಾಸ್ತಿ ಪ್ರಶಸ್ತಿ ಪ್ರದಾನ ಮಾಡಿದಾಗ ಅಭಿನಂದನ ಭಾಷಣ ಮಾಡಿದವರು ಪ್ರೊ. ಶ್ರೀನಿವಾಸರಾಜು, ಸೂಚಿಸಿದ್ದ ಕಾರ್ಯಮಿತಿಯಲ್ಲಿ ಸೊಗಸಾದ ಭಾಷಣ ಮಾಡಿದರು. ಸ್ವಾರಸ್ಯವನ್ನುಂಟು ಮಾಡುವಂತೆ ಮಾಹಿತಿಯನ್ನು ಮುಂದಿಟ್ಟರು. ಇಡೀ ಭಾಷಣ ಲವಲವಿಕೆಯಿಂದ ಕೂಡಿತ್ತು. ಕಡೆಯಲ್ಲಿ ಹಿತವಾದ, ಸ್ನೇಹಪೂರ್ವಕ ಗೌರವಪೂರ್ವಕ ಹಾಸ್ಯ.

ಪ್ರೊ. ಶ್ರೀನಿವಾಸರಾಜು ಅವರ ವ್ಯಕ್ತಿತ್ವವೇ ಅವರಲ್ಲಿ ಸ್ನೇಹವನ್ನೂ ಗೌರವವನ್ನೂ ಮೂಡಿಸುವಂಥದು. ಅವರಿಗೆ ಅದು ಕಷ್ಟವಾಗಿಲ್ಲದಿದ್ದ ದಿನಗಳು. ಅವರು ಆಗಾಗ ನಮ್ಮ ಮನೆಗೆ ಬರುತ್ತಿದ್ದರು. ಸಾಮಾನ್ಯವಾಗಿ ಡಾ. ಎಚ್.ಎಸ್. ರಾಘವೇಂದ್ರರಾಯರನ್ನು ಕರೆತರುತ್ತಿದ್ದರು. ವಯಸ್ಸಿನಲ್ಲಿ ನನಗಿಂತ ಚಿಕ್ಕವರಾದ ಸ್ನೇಹಿತರು ಬಂದರೆಂದರೆ ನನಗೆ ಸಂತೋಷವಾಗುತ್ತಿತ್ತು. ಇಬ್ಬರದೂ ಗಂಭೀರ ಅಧ್ಯಯನದ, ಗಂಭೀರ ಚಿಂತನೆಯ ಸ್ವಭಾವ. ಆತ್ಮಗೌರವವಿರುವ ಆದರೆ ಅಹಂ ಇಲ್ಲದ ಸ್ವಭಾವ ವ್ಯಕ್ತಿಯಾಗಿ ಪ್ರೊ. ಶ್ರೀನಿವಾಸರಾಜು ನಮ್ಮೆಲ್ಲರ ಪ್ರೀತಿಗೌರವಗಳನ್ನು ಗಳಿಸಿದ್ದಾರೆ. ಜೊತೆಗೆ ಅವರು ಶಿಕ್ಷಕರ ಸಾಂಸ್ಕೃತಿಕ ಹೊಣೆಯ ಸಂಕೇತ. He is both a warning and an example. ನಿಮ್ಮ ಕರ್ತವ್ಯದಲ್ಲಿ ತಪ್ಪೀರಿ ಎಂದು ತಮ್ಮ ಮನೋಧರ್ಮದಿಂದ ಅವರು a warning, ತಮ್ಮ ಸಾಧನೆಯಿಂದ an example. ಸದ್ದಿಲ್ಲದೆ ಅವರು ಕ್ರೈಸ್ಟ್ ಕಾಲೇಜಿನಲ್ಲಿ ಎಷ್ಟು ಬಗೆಯಾದ, ಎಷ್ಟು ಮೌಲಿಕವಾದ ಕೆಲಸ ಮಾಡಿದರು! ಬೆಂಗಳೂರಿನ ಒಂದು ಪ್ರಮುಖ ಕಾಲೇಜಿನಲ್ಲಿ ಕನ್ನಡದ ವಾತಾವರಣವನ್ನು ಸೃಷ್ಟಿಸಿದರು. ಪ್ರಕಟಣೆಗಳನ್ನು ಕೈಗೊಂಡರು. ಹಿರಿಯ ಸಾಹಿತಿಗಳ ಕೃತಿಗಳನ್ನು ಪ್ರಕಟಿಸಿದರು. ಕಿರಿಯ ಬರಹಗಾರರ ಕೃತಿಗಳನ್ನು ಹೊರತಂದರು. ಎಚ್.ಎಸ್. ಶಿವಪ್ರಕಾಶರ 'ಮಿಲರೇಪ', ಬಿ.ಆರ್. ಲಕ್ಷ್ಮಣರಾಯರ 'ಟುವಟಾರ', ರಾಮಚಂದ್ರ ಶರ್ಮರ 'ದೆಹಲಿಗೆ ಬಂದ ಹೊಸ ವರ್ಷ' ಪ್ರತಿಭಾ ನಂದಕುಮಾರರ 'ನಾವು ಹುಡುಗಿಯರೇ ಹೀಗೆ;' ಎಸ್.ಆರ್. ಎಕ್ಕುಂಡಿಯವರ

'ಬಕುಲದ ಹೂಗಳು', ಗೋಪಾಲಕೃಷ್ಣ ಅಡಿಗರ 'ಬಾ ಇತ್ತ ಇತ್ತ', ಟಿ.ಎಸ್. ಸೀತಾರಾಮ್ ಅವರ 'ನಮ್ಮೊಳಗೊಬ್ಬ ನಾಜೂಕಯ್ಯ', ಎ.ಎನ್. ಮೂರ್ತಿರಾಯರ 'ಸಮಗ್ರ ಲಲಿತ ಪ್ರಬಂಧಗಳು, ಎಚ್. ನರಸಿಂಹಯ್ಯನವರ 'ತೆರೆದ ಮನ', ಎಚ್.ಎಸ್. ಬಿಳಿಗಿರಿಯವರ 'ವರಸೆಗಳು', ಎಚ್.ಎಸ್. ರಾಘವೇಂದ್ರರಾಯರ 'ಹಾಡೆ ಹಾದಿಯ ತೋರಿತು' ಮುಂತಾದ ಕೃತಿಗಳೆಲ್ಲ ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಪ್ರಕಟಣೆಗಳು. ಈ ಸಂಘವು ಸಾಹಿತ್ಯದ ಕೃತಿಗಳನ್ನಲ್ಲದೆ ಮಹತ್ವದ ಅನುವಾದದ ಕೃತಿಗಳನ್ನು ಪ್ರಕಟಿಸಿತು ಎಂಬುದನ್ನು ಸ್ಮರಿಸಿದಾಗ ಪ್ರೊ. ಶ್ರೀನಿವಾಸರಾಜು ಅವರ ಅದ್ಭುತ ಸಾಧನೆಯ ಸ್ವರೂಪ ಸ್ಪಷ್ಟವಾಗುತ್ತದೆ. 'ವಿದ್ಯಾರ್ಥಿ ವಿಕಾಸ ಮಾಲೆಗಳ'ನ್ನು ಪ್ರಾರಂಭಿಸಿ ಅ.ನ.ಕೃ. ಸ್ಮಾರಕ ಅಂತರ ಕಾಲೇಜು ಸ್ಪರ್ಧೆ, ದ.ರಾ.ಬೇಂದ್ರೆ ಅಂತರ ಕಾಲೇಜು ಕವನ ಸ್ಪರ್ಧೆಗಳನ್ನು ಏರ್ಪಡಿಸಿ ಅರಳುವ ಪ್ರತಿಭೆಯ ಗೆಳೆಯರಾದರು. ಪ್ರೊ. ಶ್ರೀನಿವಾಸರಾಜು ಕ್ರೈಸ್ಟ್ ಕಾಲೇಜಿನ ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದಾಗ ಅಲ್ಲಿನ ಹಲವು ಕಾರ್ಯಕ್ರಮಗಳಿಗೆ ನನ್ನನ್ನು ಆಹ್ವಾನಿಸಿದರು. ವಿದ್ಯಾರ್ಥಿಗಳಲ್ಲಿ ಕನ್ನಡದ ಕಾರ್ಯಕ್ರಮಗಳು ಎಷ್ಟು ಆಸಕ್ತಿ ಮತ್ತು ಉತ್ಸಾಹ ಇರುತ್ತಿದ್ದುವೆಂಬುದನ್ನು ನಾನು ಕಣ್ಣಾರೆ ಕಂಡೆ. ಅವರ ಕಾಲೇಜಿನ ಆಡಳಿತ ಮಂಡಲಿಗೆ ಪ್ರೊ. ಶ್ರೀನಿವಾಸರಾಜು ಅವರಲ್ಲಿ ಸಂಪೂರ್ಣ ವಿಶ್ವಾಸವಿತ್ತು. ಪ್ರೊ. ರಾಜು ಅವರ ಆಡಳಿತ ಮಂಡಲಿಯ ವಿಶ್ವಾಸವನ್ನು ಸಹೋದ್ಯೋಗಿಗಳ ಪ್ರೀತಿಯನ್ನು ವಿದ್ಯಾರ್ಥಿಗಳ ಮೆಚ್ಚುಗೆಯನ್ನು ಗೆಲ್ಲುವಂತೆ ನಡೆದುಕೊಂಡರು.

ಇಂಗ್ಲಿಷಿನ ಆಕರ್ಷಣೆಯು ಕನ್ನಡಕ್ಕೆ ಕುತ್ತಾಗುತ್ತಿರುವ ಈ ದಿನಗಳಲ್ಲಿ ಪ್ರೊ. ಶ್ರೀನಿವಾಸರಾಜು ತಮ್ಮ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಹೊಣೆಗಳನ್ನು ಅಪರೂಪವಾದ ರೀತಿಗಳಲ್ಲಿ ನಿರ್ವಹಿಸಿದ್ದಾರೆ. ತಮ್ಮ ಕಾಲೇಜಿನಲ್ಲಿಯೇ ಅವರು ಸ್ಫೂರ್ತಿ ನೀಡುವ ಪ್ರಾಧ್ಯಾಪಕರಾಗಿದ್ದರು. ಶೇಷಾದ್ರಿಪುರದ ಕಾಲೇಜ್, ಚಿತ್ರಕಲಾ ಪರಿಷತ್ತು ಮುಂತಾದ ಸಂಸ್ಥೆಗಳಲ್ಲಿ ಎಂ.ಎ. ವಿದ್ಯಾರ್ಥಿಗಳಿಗೆ ಕಲೆಯ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡಿದರು. ಸ್ವತಃ ಸಾಹಿತ್ಯ ಕೃತಿಗಳನ್ನು ಬರೆದರು. ಮೂಕನಾಟಕದ ಮಾಧ್ಯಮವನ್ನು ತಮ್ಮ ಸಾಮಾಜಿಕ ಪ್ರತಿಕ್ರಿಯೆಯ ಅಭಿವ್ಯಕ್ತಿಗೆ ಬಹು ಸಮರ್ಥವಾಗಿ ಬಳಸಿಕೊಂಡರು. (ಅವರು ಮಾತಿನ ಗೊಡವೆ ಇಲ್ಲದ ಮಾಧ್ಯಮವನ್ನು ಆರಿಸಿದ್ದು ಅರ್ಥವತ್ತಾದ ಸಂಗತಿ.) ಇವಲ್ಲದೆ, ಹಿರಿಯರ ನೆನಪನ್ನು ಉಳಿಸುವ, ಅವರ ಸಾಧನೆಯನ್ನು ಮನದಟ್ಟು ಮಾಡಿಸುವ ಕಾರ್ಯವನ್ನು ನಡೆಸಿಕೊಂಡು ಬಂದರು. ಇದನ್ನು ಕಿರಿಯ ಪೀಳಿಗೆಗಳಿಗಾಗಿ ಮಾಡಿದರೆಂಬುದು ಮಹತ್ವದ ಸಂಗತಿ. ಕಿರಿಯ ಬರಹಗಾರರನ್ನು ಗುರುತಿಸಿದರು, ಪ್ರೋತ್ಸಾಹಿಸಿದರು. ಅವರ ಕೃತಿಗಳನ್ನು ಪ್ರಕಟಿಸಿದರು. ಹಿಂದಿನ ನೆನಪಿನ ಸ್ಫೂರ್ತಿ, ಭವಿಷ್ಯದ ಭರವಸೆ ಎರಡನ್ನು ಒಂದುಗೂಡಿಸಿದರು.

ಜೊತೆಗೆ ಪ್ರೊ. ರಾಜು. ಹಂಪೆಯ ಕನ್ನಡ ವಿಶ್ವವಿದ್ಯಾಲಯ, ಕನ್ನಡ ಪುಸ್ತಕ ಪ್ರಾಧಿಕಾರ ಮುಂತಾದ ಹಲವು ಸಂಸ್ಥೆಗಳಿಗೆ ತಮ್ಮ ಅನುಭವದ ಲಾಭವನ್ನು ಮಾಡಿಕೊಟ್ಟಿದ್ದಾರೆ.

ಸ್ವಂತ ಕೃಷಿಯಿಂದ ಇತರರೊಡನೆ ಸಹಕಾರದಿಂದ ಸಾಹಿತ್ಯದ ಬೆಳೆಯ ಶ್ರೀಮಂತಿಕೆಯನ್ನು ಹೆಚ್ಚಿಸಿ ಹಂಚುವ, ನಾಡಿನ ಈ ಅಪೂರ್ವ ಕ್ರಿಯಾಶೀಲ ಚಿಂತಕರು ನೂರು ಕಾಲ ಆರೋಗ್ಯವಾಗಿ ಬಾಳಲಿ, ಅವರಿಗೆ ಎಲ್ಲ ಶುಭವಾಗಲಿ, ನಾಡಿಗೆ ಹತ್ತು ಹಲವು ರೀತಿಗಳಲ್ಲಿ ಅವರ ಸೇವೆ ಸಲ್ಲಲಿ!



# ಅಭಿನಂದನೆ

● *ಎಂ. ಗೋಪಾಲಕೃಷ್ಣ ಅಡಿಗ*

ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘ, ವಿದ್ಯಾರ್ಥಿಗಳಲ್ಲಿ ಕನ್ನಡದ ಬಗ್ಗೆ ಆಸಕ್ತಿಯನ್ನು ಹುಟ್ಟಿಸುವ ಕೆಲಸಗಳನ್ನು ನಿರಂತರವಾಗಿ ನಡೆಸುತ್ತಾ ಬಂದು ಈಗ ತನ್ನ ಐವತ್ತನೆಯ ಪುಸ್ತಕವನ್ನು ಪ್ರಕಟಿಸುತ್ತಿರುವುದು ಅತ್ಯಂತ ಸಂತೋಷದ, ಸುತ್ಯಾರ್ಹ ಸಂಗತಿ. ಕನ್ನಡದ ಬಗ್ಗೆ ಕಾಳಜಿ, ಕನ್ನಡ ಸಾಹಿತ್ಯದಲ್ಲಿ ಆಸಕ್ತಿ, ಸಾಹಿತ್ಯ ರಚನೆಯ ಶಕ್ತಿಯುಳ್ಳ ವಿದ್ಯಾರ್ಥಿಗಳಿಂದ ಕವನ-ಲೇಖನಗಳನ್ನು ಬರೆಯಿಸುವ ಈ ಕೆಲಸ ಇನ್ನು ಇನ್ನೂ ಚೆನ್ನಾಗಿ ನಡೆಯಲಿ ಎಂದು ಹಾರೈಸುತ್ತೇನೆ. ಈ ಎಲ್ಲ ಕೆಲಸಗಳಿಗೂ ಮೂಲ ಸ್ಫೂರ್ತಿಯೂ ಅವ್ಯಾಹತ ಕಾರ್ಯ ನಿರತರೂ ಆದ ಶ್ರೀ ಚಿ. ಶ್ರೀನಿವಾಸರಾಜು ಅವರ ಈ ಸಾಧನೆ-ಸಿದ್ಧಿಗಳಿಗೆ ಅಭಿನಂದನೆಯನ್ನು ಸಲ್ಲಿಸುತ್ತೇನೆ.

*ಕ್ರೈಸ್ಟ್ ಕಾಲೇಜು 'ಆನಂದ' ಸದಾಶಯ ಸಂಚಿಕೆ*





# ಕನ್ನಡ ಸೇವೆ ಮತ್ತು ಕನ್ನಡ ಸಂಘ

● *ಎಂ.ವಿ. ಸೀತಾರಾಮಯ್ಯ*

**ಸಾ**ರ್ವಜನಿಕರು ನಡೆಸುವ ಕನ್ನಡ ಸಂಘಕ್ಕೂ ಒಂದು ಕಾಲೇಜು ನಡೆಸುವ ಕನ್ನಡ ಸಂಘಕ್ಕೂ ಅವು ಇಟ್ಟುಕೊಂಡಿರುವ ಧ್ಯೇಯೋದ್ದೇಶಗಳಲ್ಲಿಯೂ ಕಾರ್ಯವಿಧಾನಗಳಲ್ಲಿಯೂ ಹೊಂದಿರುವ ಸಾಧನ ಸಂಪತ್ತಿನಲ್ಲಿಯೂ ವ್ಯತ್ಯಾಸಗಳಿವೆ. ಸಾರ್ವಜನಿಕ ಸಂಘಗಳು ಹುಟ್ಟಿದ ಮೇಲೆ ಕೆಲವು ವರ್ಷ ಕೆಲಸ ಮಾಡಿ, ತಟಸ್ಥವಾಗಿ ಉಳಿಯುತ್ತವೆ ಇಲ್ಲವೆ ತಮ್ಮ ಅಸ್ತಿತ್ವವನ್ನು ಮರೆಯದಿರುವುದಕ್ಕಾಗಿಯೋ ಎಂಬಂತೆ ಆಗೊಮ್ಮೆ ಈಗೊಮ್ಮೆ ಕೆಲಸ ಮಾಡಿಕೊಂಡು ಬರುತ್ತವೆ; ಒಳ್ಳೆಯ ಕೆಲಸವನ್ನು ಮಾಡಿದರೂ ಕಾರ್ಯಕರ್ತರ ಅಭಾವದಿಂದ ನಿಂತು ಹೋಗುತ್ತವೆ. ನಾನು ಬಲ್ಲಮಟ್ಟಿಗೆ, ಈಗ ಅಸ್ತಮಾನವಾಗಿದ್ದರೂ ಇತರ ಅನೇಕ ಸಂಘಗಳ ಜನ್ಮಕ್ಕೂ ಕಾರ್ಯಕ್ಷಮತೆಗೂ ಸ್ಫೂರ್ತಿ-ಕೇಂದ್ರವಾಗಿ, ಮಾರ್ಗದರ್ಶಕವಾಗಿ ಕೆಲಸ ಮಾಡಿದ ಸಂಘ ಎಂದರೆ ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘ. ಈ ಸಂಘದಿಂದ ಸ್ಫೂರ್ತಿ ಪಡೆದು ಕೆಲವು ಕಾಲ ಒಳ್ಳೆಯ ಕೆಲಸ ಮಾಡಿದ ಸಂಘಗಳೆಂದರೆ ಶಿವಮೊಗ್ಗ ಕರ್ಣಾಟಕ ಸಂಘ, ಚಿಕ್ಕಮಗಳೂರು ಕರ್ಣಾಟಕ ಸಂಘ ಮತ್ತು ಮೈಸೂರು ಮಹಾರಾಜರವರ ಕಾಲೇಜಿನ ಕರ್ಣಾಟಕ ಸಂಘ. ಉತ್ತರ ಕರ್ನಾಟಕದಲ್ಲಿ ಬಹುಶಃ ನವೋದಯ ಯುಗದ ಸಾರ್ವತ್ರಿಕ ಪ್ರಭಾವದಿಂದ ಹುಟ್ಟಿದ ಹೈದರಾಬಾದು ಸಾಹಿತ್ಯ ಸಂಘ, ರಾಯಚೂರು ಕರ್ನಾಟಕ ಸಂಘ, ಧಾರವಾಡದ ಗೆಳೆಯರ ಗುಂಪು— ಇವು ಒಳ್ಳೆಯ ಕೆಲಸ ಮಾಡಿವೆ. ರಾಯಚೂರು ಸಂಘ ಬೆಳ್ಳಿಯ ಹಬ್ಬವನ್ನು ಕೂಡ ಆಚರಿಸಿದೆ. ಸೆಂಟ್ರಲ್ ಮತ್ತು ಮಹಾರಾಜ ಕಾಲೇಜುಗಳ ಕರ್ನಾಟಕ ಸಂಘಗಳಂತೆಯೇ ಗೆಳೆಯರ ಗುಂಪು ಕೂಡ ಬರಹಗಾರರನ್ನೂ ವಿಮರ್ಶಕರನ್ನೂ ಸಂಶೋಧಕರನ್ನೂ ಮುಂದಕ್ಕೆ ತಂದಿದೆ; ಅಂಥವರಲ್ಲಿ ಹಲವರು ಖ್ಯಾತನಾಮರಾದದ್ದು ಪ್ರಸಿದ್ಧವಾದ ಸಂಗತಿ.



ಈಚಿನ ದಿನಗಳಲ್ಲಿ ಕಾಲೇಜು ಸಂಘಗಳೇನೋ ಹೆಚ್ಚಿನ ಸಂಖ್ಯೆಯಲ್ಲಿ ಹುಟ್ಟಿಕೊಂಡಿವೆ. ಸಾಮಾನ್ಯವಾಗಿ, ಉದ್ಘಾಟನಾ ಸಮಾರಂಭ, ಸಮಾರೋಪ ಸಮಾರಂಭ, ಇಷ್ಟರಿಂದ ಅವು ಕೃತಾರ್ಥಗಳಾಗಿವೆ. ವಿಶೇಷವೆಂದರೆ, ರಾಜ್ಯೋತ್ಸವದ ಆಚರಣೆ!

ಈ ಹಿನ್ನೆಲೆಯಲ್ಲಿ ಪರಿಶೀಲಿಸಬೇಕು, ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಅಮೋಘ ಸಾಧನೆಯನ್ನು.

ಒಂದು ಕಾಲೇಜಿನ ಕರ್ನಾಟಕ ಸಂಘ ನಿರಂತರವಾಗಿ, ಗಣ್ಯವಾದ ರೀತಿಯಲ್ಲಿ ಕೆಲಸ ಮಾಡಬೇಕಾದರೆ--- ಮೂರು ಅಂಶಗಳು ಮುಖ್ಯ. ಅಗತ್ಯ : ಒಂದನೆಯದಾಗಿ, ಕಾಲೇಜಿನ ಪ್ರಿನ್ಸಿಪಾಲರು ಕನ್ನಡ ಸಂಘಕ್ಕೆ ಕಾರ್ಯಸ್ವಾತಂತ್ರ್ಯವನ್ನೂ ಪ್ರೋತ್ಸಾಹವನ್ನೂ ನೀಡುತ್ತಿರಬೇಕು; ಎರಡನೆಯದಾಗಿ, ಸಂಘದ ಅಧ್ಯಕ್ಷರು (ಅಧ್ಯಕ್ಷ ಎಂದು ಕರೆದುಕೊಳ್ಳದಿದ್ದರೂ ಅದರ ಕ್ರಿಯಾಶಕ್ತಿಯಾಗಿ ಕೆಲಸ ಮಾಡುವವರು) ತಾವೂ ದುಡಿದು, ವಿದ್ಯಾರ್ಥಿಗಳಲ್ಲಿ ಕನ್ನಡದ ಅಭಿಮಾನವನ್ನು ಬಿತ್ತಿ ಸಂಘದ ಕೆಲಸದಲ್ಲಿ ಆಸಕ್ತಿ ಹುಟ್ಟಿಸಿ ಅವರನ್ನು ಸಂಘದ ಕಾರ್ಯದಲ್ಲಿ ತೊಡಗಿಸಬಲ್ಲಂಥ ವ್ಯಕ್ತಿತ್ವವನ್ನು ಬೆಳೆಸಿಕೊಂಡಿರಬೇಕು; ಮೂರನೆಯದಾಗಿ, ವಿದ್ಯಾರ್ಥಿಗಳು ಸಂಘದ ಕಾರ್ಯಕಲಾಪಗಳಲ್ಲಿ ವಿಭಾಗದ ಹಾಗೂ ಸಂಘದ ಮುಖ್ಯಸ್ಥರ ಮಾರ್ಗದರ್ಶನದಲ್ಲಿ ಸಂತೋಷದಿಂದ ಭಾಗವಹಿಸಬೇಕು. ಈ ಶಕ್ತಿತ್ರಯಗಳು ಸಂಗಮಿಸಿದಾಗ ಉತ್ತಮ ಕೆಲಸ ಸಾಧ್ಯ. ಕ್ರೈಸ್ಟ್ ಕಾಲೇಜು ಕನ್ನಡ ಸಂಘ ಈ ಮೂರೂ ಶಕ್ತಿಗಳ ವರದಾನವನ್ನು ಪಡೆದುಕೊಂಡು ಕೃತಕೃತ್ಯವಾಗಿದೆ. ನಾನು ಬಲ್ಲಂತೆ, ಕಾಲೇಜಿನ ಪ್ರಿನ್ಸಿಪಾಲರು ಸಂಘದ ಚೈತನ್ಯ ಶಕ್ತಿಯಾದ ಚಿ. ಶ್ರೀನಿವಾಸರಾಜು ಅವರಿಗೆ ಎಲ್ಲ ಬಗೆಯ ಸಹಕಾರವನ್ನೂ ಬೆಂಬಲವನ್ನೂ ಸಂಘ ಸ್ಥಾಪಿತವಾದಂದಿನಿಂದ ನೀಡುತ್ತ ಬಂದಿದ್ದಾರೆ. ಶ್ರೀನಿವಾಸರಾಜು ಅವರು ಸರಕಾರಿ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗಲೇ ಅಲ್ಲಿನ ಕರ್ನಾಟಕ ಸಂಘದಲ್ಲಿ (ಈ ಸಂಘವೂ ಜಿ.ಪಿ. ರಾಜರತ್ನಂ ಅವರೇ ಸ್ಥಾಪನೆ ಮಾಡಿದ್ದು) ಕಾರ್ಯಸ್ಫೂರ್ತಿಯನ್ನು ಪಡೆದುಕೊಂಡು, ಸೆಂಟ್ರಲ್ ಕಾಲೇಜಿನಲ್ಲಿ ಎಂ.ಎ. ವಿದ್ಯಾರ್ಥಿಯಾಗಿದ್ದಾಗ ರಾಜರತ್ನಂ ಅವರ 'ಸಾಹಿತ್ಯ ಪರಿಚಾರಿಕೆ'ಯ ಪ್ರತ್ಯಕ್ಷಾನುಭವವನ್ನು ಪಡೆದುಕೊಂಡು, ಕ್ರೈಸ್ಟ್ ಕಾಲೇಜಿನಲ್ಲಿ ಕನ್ನಡ ಸಂಘವನ್ನು ಹುಟ್ಟುಹಾಕಿ, ಕನ್ನಡದ ಕೆಲಸಕ್ಕೆ ವಿದ್ಯಾರ್ಥಿಗಳನ್ನು ಆಕರ್ಷಿಸಿ, ಯೋಜನಾಬದ್ಧವಾಗಿ ಒಂದೇ ಸಮನೆ ಎಡೆಬಿಡದೆ ಉಪನ್ಯಾಸ ಮತ್ತು ಪ್ರಕಟನ ಕಾರ್ಯಗಳನ್ನು ನಡೆಸಿಕೊಂಡು ಬಂದಿದ್ದಾರೆ. ಗ್ರಂಥ ಪ್ರಕಟನ ಕಾರ್ಯದಲ್ಲಿ ಸಂಘವು ನಿರಂತರವಾಗಿ ವಿದ್ಯಾರ್ಥಿಗಳ ಬರವಣಿಗೆಗೂ ಯುವ ಬರಹಗಾರರಿಗೂ ಆದ್ಯ ಗಮನ ಕೊಡುತ್ತಿರುವುದು ತುಂಬ ಪ್ರಶಸಂನೀಯ; ಇದರಿಂದ ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘ (ಅದು ಈಗ ಇಲ್ಲವಲ್ಲಾ!) ಪ್ರಾರಂಭಿಸಿದ ವಿದ್ಯಾರ್ಥಿ ಪ್ರತಿಭಾ ವಿಕಾಸ ಕಾರ್ಯಕ್ರಮದ ಪರಂಪರೆಯನ್ನು ಯಶಸ್ವಿಯಾಗಿ ಮುಂದುವರಿಸಿಕೊಂಡು ಬಂದಂತಾಗಿದೆ. 'ವಿದ್ಯಾರ್ಥಿ ವಿಕಾಸ ಮಾಲೆ'ಯ ಪ್ರಕಟನೆಗಳು ಈ ಯೋಜನೆಯ ಸತ್ಫಲ.

ಈ ಮಾಲೆಯ ಜೊತೆಜೊತೆಯಲ್ಲಿ ಪ್ರಕಟವಾಗುತ್ತಿರುವ ದ್ವಿತೀಯ ಬರಹಗಾರರ ಕೃತಿಗಳು ಇಂದಿನ ಮುಂದಿನ ಎಲ್ಲ ವಿದ್ಯಾರ್ಥಿಗಳಿಗೆ ಸಾಹಿತ್ಯ ಪ್ರಕಾರಗಳ ಮಾದರಿಗಳಾಗಿ ನಿಲ್ಲುತ್ತವೆ. ಬೇಂದ್ರೆ ಸ್ಮೃತಿ ಉಪನ್ಯಾಸ ಮಾಲೆಯ ಫಲವಾಗಿ ಮೂಡಿಬಂದ ಬೇಂದ್ರೆ ಕುರಿತ ಕೃತಿಗಳು

ಪಿಶಿಷ್ಟವಾದವು. ಸದ್ಯದಲ್ಲಿಯೇ ಹೊರಬರಲಿರುವ, ಪ್ರೊ. ಎ.ಎನ್. ಮೂರ್ತಿರಾಯರ ಎಲ್ಲ ಪ್ರಂಬಂಧಗಳ ಸಮಗ್ರ ಸಂಪುಟ ಸಂಘದ ಈವರೆಗಿನ ಸಾಹಿತ್ಯ ಸೇವಾವಲ್ಲರಿಯ ಸುವರ್ಣಪುಷ್ಪವಾಗಿ ಅರಳಲಿ. ಈ ಎಲ್ಲ ಕಾರ್ಯಗಳ ಹಿಂದೆ ಶ್ರೀನಿವಾಸರಾಜು ಅವರ ಉತ್ತಮ ಸಾಹಿತ್ಯಾಭಿರುಚಿ ಪ್ರವೃತ್ತವಾಗಿದೆ.

ಕನ್ನಡ ಸಂಘಗಳ ಇತಿಹಾಸದಲ್ಲಿ ಕ್ರೈಸ್ಟ್ ಕಾಲೇಜಿನ ಕನ್ನಡ ಸೇವೆ ಒಂದು ಉಜ್ವ ದಾಖಲೆಯಾಗಿ ನಿಲ್ಲುವುದರಲ್ಲಿ ಸಂದೇಹವಿಲ್ಲ.

ಸಂಘ ಚಿರಾಯುವಾಗಲಿ.

*ಕ್ರೈಸ್ಟ್ ಕಾಲೇಜು 'ಆನಂದ' ಸದಾಶಯ ಸಂಚಿಕೆ*



# ಅನನ್ಯ, ಅನುಕರಣೀಯ

● *ಚೆನ್ನವೀರ ಕಣವಿ*

ಇಂದು ಎಷ್ಟೋ ಹೊಸ ಬರಹಗಾರರು ತಮ್ಮ ಅಭಿವ್ಯಕ್ತಿ ಮಾಧ್ಯಮವನ್ನು ಸರಿಯಾಗಿ ಕಂಡುಕೊಳ್ಳದೆ, ತಕ್ಕ ಮಾರ್ಗದರ್ಶನವೂ ಇಲ್ಲದೆ ತೊಳಲಾಡುತ್ತಿರುವುದನ್ನು ನಾನು ಅನೇಕ ಸಲ ಕಂಡಿದ್ದೇನೆ. ಅಂಥ ಸಂದರ್ಭದಲ್ಲೆಲ್ಲ ಬೆಂಗಳೂರಿನ ಕ್ರೈಸ್ಟ್ ಕಾಲೇಜ್ ಕನ್ನಡ ಸಂಘ ನನ್ನ ಕಣ್ಣೆದುರು ನಿಲ್ಲುತ್ತದೆ. ಕಳೆದ ಕೆಲವರ್ಷಗಳಿಂದ ಅದು ನಡೆಸುತ್ತಿರುವ ಕನ್ನಡ ಕೆಲಸ ಅನನ್ಯವಾದದ್ದು, ಅನುಕರಣೀಯವಾದದ್ದು.

ವಿದ್ಯಾರ್ಥಿಗಳಲ್ಲಿ ಅಂತರ ಕಾಲೇಜು ಲೇಖನ-ಕವನ ಸ್ಪರ್ಧೆಗಳನ್ನೇರ್ಪಡಿಸಿ ಸಾಹಿತ್ಯಾಭಿರುಚಿಯನ್ನು ಬೆಳೆಸುತ್ತ, ಅವುಗಳನ್ನಾಯ್ದು ಪ್ರಕಟಿಸಿ ಬರವಣಿಗೆಗೆ ಪ್ರೋತ್ಸಾಹ ನೀಡುತ್ತಿರುವುದು ಈ ದಿಸೆಯಲ್ಲಿ ಒಂದು ಮಹತ್ವದ ಹೆಜ್ಜೆಯಾಗಿದೆ. ಹಿಂದೆ ಜಿ.ಪಿ. ರಾಜರತ್ನಂ ಅವರಂಥ ಸಾಹಿತಿ ಪರಿವ್ರಾಜಕರು ಹಾಕಿಕೊಟ್ಟ ಆದರ್ಶವನ್ನನುಸರಿಸಿ ಅದನ್ನು ಇನ್ನೂ ವ್ಯಾಪಕವಾಗಿ ವಿಸ್ತಾರವಾಗಿ, ವೈವಿಧ್ಯಪೂರ್ಣವಾಗಿ ಮುನ್ನಡೆಸುತ್ತಿರುವ ಭಾಗ್ಯ ಈ ಕಾಲೇಜಿನ ಕನ್ನಡ ಸಂಘದ್ದಾಗಿದೆ.

ಸಂಘದ ಪ್ರಕಟನೆಗಳಲ್ಲಿ ಯುವಕರನ್ನು ಒಳಗೊಂಡ ಇನ್ನಿತರ ಗಣ್ಯ ಲೇಖಕರ ಸೃಜನಾತ್ಮಕ ಕೃತಿಗಳಿವೆ. ಕವಿವರ್ಯ ಬೇಂದ್ರೆಯವರ ಜನ್ಮದಿನದ ಸಮಾರಂಭದೊಂದಿಗೆ ವಿಶೇಷೋಪನ್ಯಾಸದ ಮೂಲಕ ಅವರ ಕಾವ್ಯದ ವಿಮರ್ಶೆ ಹಾಗೂ ಪ್ರಕಟನೆ ಹೊಸಬಗೆಯಲ್ಲಿ ಸಾಗಿರುವುದು ಗಮನಾರ್ಹವಾದದ್ದು. ಅನ್ಯಭಾಷಾ ಕೃತಿಗಳ ಪ್ರಕಟನೆಯೊಂದಿಗೆ ಸಂಘದ ಕಾರ್ಯವ್ಯಾಪ್ತಿ ವಿಸ್ತಾರಗೊಂಡಿದೆ. ಇದೀಗ ತನ್ನ ೫೦ನೆಯ ಪುಸ್ತಕವಾಗಿ ಪ್ರೊ. ಎ.ಎನ್. ಮೂರ್ತಿರಾಯರ 'ಸಮಗ್ರ ಲಲಿತ ಪ್ರಬಂಧಗಳು' ಪ್ರಕಟವಾಗಲಿರುವುದು ಯಾರೂ ಕಂಡರಿಯದ ಸಾಹಸವೆಂದೇ ಹೇಳಬಹುದು. ಈ ಎಲ್ಲ ಕೆಲಸಗಳ ಯೋಜನೆ, ನಿರ್ವಹಣೆಯ ಹಿಂದೆ ಎಡೆಬಿಡದೆ, ಸದ್ದಿಲ್ಲದೆ



ದುಡಿಯುತ್ತಿರುವ, ಸ್ವತಃ ಪ್ರಯೋಗಶೀಲ ಕವಿ ಹಾಗೂ ನಾಟಕಕಾರರಾದ ಶ್ರೀ ಜಿ. ಶ್ರೀನಿವಾಸ ರಾಜು ಅವರನ್ನು ಎಷ್ಟು ಅಭಿನಂದಿಸಿದರೂ ಸಾಲದು. ಅಂಥವರ ಸಂಖ್ಯೆ ಹೆಚ್ಚಿದಷ್ಟೂ ನಮ್ಮ ವಿದ್ಯಾಸಂಸ್ಥೆಗಳ ಶೈಕ್ಷಣಿಕ ಕಾರ್ಯಕ್ಕೆ ಸಾಹಿತ್ಯಿಕ ಸಂಸ್ಕಾರ ಒದಗಿ ಬಂದು ಹೊಸ ಜನಾಂಗ ನಿರ್ಮಾಣವಾಗುವ ಕನಸನ್ನು ಕಂಡರೆ ತಪ್ಪೇನು?

ಶ್ರೀ ಜಿ. ಶ್ರೀನಿವಾಸರಾಜು ಅವರಿಗೆ ಬೆಂಬಲವಾಗಿರುವ ಕ್ರೈಸ್ಟ್ ಕಾಲೇಜಿನ ಪ್ರಿನ್ಸಿಪಾಲರಿಗೂ, ಈ ಕಾರ್ಯದಲ್ಲಿ ಅವರಿಗೆ ನೆರವಾಗುತ್ತಿರುವ ಇನ್ನುಳಿದ ಎಲ್ಲ ಮಿತ್ರರಿಗೂ ನನ್ನ ಹೃತ್ಪೂರ್ವಕ ಅಭಿನಂದನೆಗಳು.

*ಕ್ರೈಸ್ಟ್ ಕಾಲೇಜು 'ಆನಂದ' ಸದಾಶಯ ಸಂಚಿಕೆ*



## ಅರ್ಧ ಶತಕ, ಶತಕ...

● ನಿರಂಜನ

**ಬೆಂ**ಗಳೂರಿನ ಕ್ರೈಸ್ಟ್ ಕಾಲೇಜ್ ಸುಪ್ರಸಿದ್ಧ ವಿದ್ಯಾಸಂಸ್ಥೆ. ಅದರ ಪ್ರಸಿದ್ಧಿಗೆ ಅಲ್ಲಿನ ಪಠ್ಯೇತರ ಚಟುವಟಕೆಗಳೂ ಕಾರಣ ಎನ್ನಬಹುದು. ಅಂತರ ಪಠ್ಯೇತರ ವಲಯಕ್ಕೆ ಸೇರಿದ್ದು ಕಾಲೇಜಿನ ಕನ್ನಡ ಸಂಘ.

ಸಂಘದ ಪ್ರಕಟಣೆಗಳು ನಾಡಿನ ಸಾಹಿತ್ಯಾಸಕ್ತರ ಗಮನ ಸೆಳೆದಿವೆ. ಅವರ ಆದರಕ್ಕೆ ಪಾತ್ರರಾಗಿದ್ದಾರೆ. ಸಂಘದ ಚಾಲಕಶಕ್ತಿಯಾದ ಪ್ರೊ. ಚಿ. ಶ್ರೀನಿವಾಸರಾಜು ಈ ವರ್ಷ ಕ್ರೈಸ್ಟ್ ಕಾಲೇಜು ಕನ್ನಡ ಸಂಘ ಅರ್ಧ ಶತಕ ಬಾರಿಸಲು ತಾಲೀಮು ನಡೆಸಿದೆ. ಅದು ದಾಖಲೆಯಾಗುತ್ತದೆ.

ಮುಂದೆ ಶತಕ! ಆ ವಿಕ್ರಮವೂ ಸಾಧ್ಯವಾಗಲೆಂದು ಹಾರೈಸುವೆ.

*(ಕ್ರೈಸ್ಟ್ ಕಾಲೇಜು 'ಆನಂದ' ಸದಾಶಯ ಸಂಚಿಕೆ)*





# ‘Amen! ಆಮೆನ್’

● *ಸುಬ್ಬಣ್ಣ ರಂಗನಾಥ ಎಕ್ಕುಂಡಿ*

**ಒಂ**ದೆರಡು ವರ್ಷಗಳ ಹಿಂದೆ ನನಗೊಂದು ಸಂತೋಷದ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುವ ಅವಕಾಶವೊದಗಿತು. ಆ ಭಾಗ್ಯವನ್ನು ನನಗೆ ನೀಡಿದವರು, ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದವರು; ಆ ಸಂಘದ ಚೈತನ್ಯಮೂರ್ತಿ ಶ್ರೀ ಚಿ. ಶ್ರೀನಿವಾಸರಾಜು ಅವರು; ತಮ್ಮ ಕನ್ನಡ ಸಂಘದಿಂದ ಒಂದು ಕವಿತಾ ಸಂಗ್ರಹವನ್ನು ಪ್ರಕಟಿಸುತ್ತೇವೆಂದೂ, ಅದರ ಪ್ರಕಾಶನ ಸಮಾರಂಭಕ್ಕೆ ಬರಬೇಕೆಂದೂ ನನ್ನನ್ನು ಆಮಂತ್ರಿಸಿದ್ದರು. ಸಂಗ್ರಹದ ಹೆಸರು, ‘ಶಬ್ದದೊಳಗಣ ನಿಶ್ಶಬ್ಧ!’ ಅದನ್ನು ಬರೆದ ಕವಿ ಶ್ರೀ ಡಿ.ವಿ. ರಾಜಶೇಖರ್, ಅವರು ‘ಪ್ರಜಾವಾಣಿ’ಯ ಪರಿವಾರದಲ್ಲಿ ಸೇರಿದ ಪ್ರಖ್ಯಾತ ಪತ್ರಕರ್ತರು. ಶಬ್ದ, ನಿಶ್ಶಬ್ದ, ಎರಡನ್ನು ಚೆನ್ನಾಗಿ ಬಲ್ಲ ಅವರ ಕವಿ ಚೇತನಕ್ಕೆ, ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘವು, ಕಿವಿಯನ್ನೊಡ್ಡಿತು, ಕೊರಳನ್ನು ನೀಡಿತ್ತು. ತನ್ನ ಆತ್ಮೀಯ ಅಂತರಂಗದಲ್ಲಿ ಚಿಂತನೆಯ ಗುಹೆಯನ್ನು ಒದಗಿಸಿತ್ತು. ಈ ಮೊದಲು, ಈ ಕಾಲೇಜಿನ ಕನ್ನಡ ಸಂಘದ ಸಂಪರ್ಕದ ಸೌಭಾಗ್ಯವು, ನನಗೆ ಹಲವು ವರ್ಷಗಳ ಹಿಂದೆಯೇ ಒದಗಿತ್ತು. ಆಗ ನಾನಿನ್ನೂ ಬಂಕಿಕೊಡ್ಲದಲ್ಲೇ ಇದ್ದೆನು. ಕಾಲೇಜಿನ ಕನ್ನಡ ಸಂಘವು ‘ಕ್ರಿಸ್ತಾಂಜಲಿ’ ಎಂಬ ಕವನ ಸಂಗ್ರಹ ಪ್ರಕಟಿಸಿ ಯೇಸುಕ್ರಿಸ್ತನಿಗೆ ತನ್ನ ‘ಕಾವ್ಯಾಂಜಲಿ’ ಸಮರ್ಪಿಸುವ ಭವ್ಯ ಯೋಜನೆ ಹಮ್ಮಿಕೊಂಡಿತ್ತು. ಪ್ರೊ. ಚಿ. ಶ್ರೀನಿವಾಸರಾಜು ಆಗಿನ್ನು ನನಗೆ ಅವರು ಮುಖತಃ ಪರಿಚಯವಿಲ್ಲದಿದ್ದರೂ—ಸಾಹಿತ್ಯ ಕ್ಷೇತ್ರದಲ್ಲಿಯ ಅವರ ಕೃಷಿಯಿಂದಾಗಿ, ಪರಿಚಿತರೇ ಆಗಿದ್ದರು. ನನಗೊಂದು ವಿಶ್ವಾಸಪೂರ್ಣ ಕಾಗದ ಬರೆದು, ಯೇಸುವನ್ನು ಕುರಿತ, ಒಂದು ಪದ್ಯ ಕಳಿಸಲು ಕೇಳಿದ್ದರು. ಯೇಸುವಿನ ಜೀವನವೇ ಒಂದು ಸುಂದರವಾದ ಪದ್ಯ. ಶಾಂತಿ, ಪ್ರೀತಿ ಹಾಗೂ ಕರುಣೆಗಳ ಪದ್ಯ. ಅಂಥ ಮಹಾತ್ಮರನ್ನು ಸ್ಮರಿಸಿ, ಸ್ತುತಿಸಿ ಬರೆಯುವ ಭಾಗ್ಯ ಒದಗಿದಾಗ, ನನಗೆ ತೋಚಿದ್ದು ಹೀಗೆ; ಇದರಿಂದ ‘ಕರ್ನಾಟಕ ಸಂಸ್ಕೃತಿ’ಯ



ಭವ್ಯ ಪರಂಪರೆಗೆ, ಮತ್ತೊಂದು ಸ್ಮೃತಿ ಶಿಲೆ ನೆಟ್ಟಂತಾಯಿತು. ಏಕೆಂದರೆ, ನಮ್ಮ ನಾಡಿನ ಹೃದಯ ದೇಗುಲದಲ್ಲಿ, ಎಲ್ಲ ಮತ ಧರ್ಮಗಳ ದೇವತೆಗಳೂ ಸಂತರೂ ನೆಲೆಸಿದ್ದಾರೆ. ನಮ್ಮ ಕನ್ನಡ ನುಡಿಗೆ ಒಬ್ಬ ಕರುಣಾಮಯ, ಪ್ರಶಾಂತ ಹಾಗೂ ವಿಶ್ವಪ್ರೇಮಿ, ಮಹಾತ್ಮನನ್ನು ಸ್ತುತಿಸಿ ಸಾರ್ಥಕವಾಗುವ ಸಂದರ್ಭ ಒದಗಿತ್ತು. ಕ್ರಿಸ್ತಾಂಜಲಿಯಲ್ಲಿಯ ನನ್ನ ಕವಿತೆ ಯೇಸುವಿಗೆ, ನಾನು ಹಚ್ಚಿಟ್ಟ ಮೋಂಬತ್ತಿಯಾಗಿದ್ದರೂ, ಇಂದಿಗೂ, ಆ ಮಹಾತ್ಮನ ಕರುಣೆ, ಪ್ರೀತಿ; ಶಾಂತಿಗಳ ಹಂಬಲಗಳನ್ನು ನನ್ನ ಕವಿತೆಗಳಲ್ಲಿ ಬೆಳಗಿಸುವ ಹವ್ಯಾಸವನ್ನೂ ನಾನು ಬಿಟ್ಟಿಲ್ಲ. ನನಗೆ ತಿಳಿದಂತೆ, ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘವು; 'ಕ್ರಿಸ್ತಾಂಜಲಿ' ಹಾಗೂ 'ಕ್ರಿಸ್ತನ ಅನುಕರಣೆ' ಪ್ರಕಟಿಸಿ, ಕನ್ನಡ ನುಡಿಗೂ ಸಂಸ್ಕೃತಿಗೂ ಒಂದು ದೊಡ್ಡ ಸೇವೆ ಸಲ್ಲಿಸಿದ್ದಾರೆ. ಅವನ್ನು ಪ್ರಕಟಿಸಿ, ಕಾಲೇಜಿನವರೂ ಸಂಘದವರೂ ಧನ್ಯರಾದರು. ಅವನ್ನು ಕೊಂಡು ಓದಿದವರೂ ಧನ್ಯರಾದರು.

ವಿದ್ಯಾರ್ಥಿಗಳಲ್ಲಿ ಸಾಹಿತ್ಯ ಪ್ರೀತಿಯನ್ನೂ ಬೆಳಸಿ, ಅವರಲ್ಲಿ ಸಂಸ್ಕೃತಿ, ಮಾನವೀಯತೆ; ಹಾಗೂ ಒಳ್ಳೆಯ ಅಭಿರುಚಿಗಳನ್ನು ಪ್ರೋತ್ಸಾಹಿಸುತ್ತಿರುವ ಅಪರೂಪದ ಸಂಸ್ಥೆಗಳಲ್ಲಿ ಕ್ರೈಸ್ಟ್ ಕಾಲೇಜು ತುಂಬಾ ಪ್ರಸಿದ್ಧವಾಗಿದೆ. ಈವರೆಗೆ ೪೯ ಪುಸ್ತಕಗಳನ್ನು ಪ್ರಕಟಿಸಿ, ಕಾವ್ಯ, ಕಥೆ, ನಾಟಕ, ವಿಮರ್ಶೆ ಹಾಗೂ ವಿಜ್ಞಾನ ಕ್ಷೇತ್ರಗಳಲ್ಲಿ ಅಮೋಘ ಸೇವೆ ಸಲ್ಲಿಸಿದೆ. ೫೦ನೆಯ ಕೃತಿಯಾಗಿ, ಪ್ರೊ. ಎ.ಎನ್. ಮೂರ್ತಿರಾಯರ 'ಲಲಿತ ಪ್ರಬಂಧ' ಪ್ರಕಟಿಸಿ, ಇನ್ನೂ ಮಧುರವಾದ ಸೇವೆ ಸಲ್ಲಿಸುತ್ತಿದೆ. ಅಂಬಿಕಾತನಯದತ್ತರ 'ಸಾಹಿತ್ಯ'ವನ್ನೂ ಹಾಗೂ ತನ್ಮೂಲಕ ಕಾವ್ಯಶಾಸ್ತ್ರವನ್ನೂ ಕುರಿತ ಸ್ಮಾರಕೋಪನ್ಯಾಸ ಏರ್ಪಡಿಸಿ, ಕ್ರೈಸ್ಟ್ ಕಾಲೇಜು ಹಾಗೂ ಕನ್ನಡ ಸಂಘವು, ಹಿಂದೆ ರೆ. ಕಿಟೆಲ್, ಜೀಗ್ಲರ, ರಾಯಿಸ್ ಹಾಗೂ ಉತ್ತಂಗಿ ಚೆನ್ನಪ್ಪ ಅಂಥವರು ಕೈಕೊಂಡ ಕೈಂಕರ್ಯವನ್ನು ಮುಂದುವರೆಸುತ್ತಿದೆ. ವಿದ್ಯಾರ್ಥಿಗಳಿಗಂತೂ ಇಂಥ ಕಾಲೇಜಿನಲ್ಲಿ ಅಧ್ಯಯನ ಮಾಡುತ್ತಿರುವುದೇ ಒಂದು ಮಹಾದ್ಭಾಗ್ಯ. ಪ್ರೊ. ಚಿ. ಶ್ರೀನಿವಾಸರಾಜು ಅಂಥ ಕವಿ, ವಿಮರ್ಶಕ, ನಾಟಕಕಾರ, ಅವರಿಗೆ ಮಾರ್ಗದರ್ಶಕರಾಗಿದ್ದಾರೆ. ಇಂಥ ಅಧ್ಯಾಪಕರು ಹಾಗೂ ಕ್ರಿಯಾಶೀಲ ವಿದ್ಯಾರ್ಥಿಗಳಿಗೆ ಪ್ರೋತ್ಸಾಹವಿತ್ತು ಬೆಂಬಲಿಸುವ ಪ್ರಿನ್ಸಿಪಾಲರಿದ್ದಾರೆ. ಸಹಜವಾಗಿಯೇ ಇಂಥ ಸಂಸ್ಥೆಗಳು ಚರಿತ್ರೆಯನ್ನು ನಿರ್ಮಿಸಬಲ್ಲವು. ಹಾಗೂ ಪರ್ವಕಾಲಗಳನ್ನು ತರಬಲ್ಲವು ಎಂದರೆ ಅತಿಶಯೋಕ್ತಿಯಾಗದು.

ತುಂಬ ಸಂತೋಷದ ಸಂಗತಿಯೆಂದರೆ, ಇಂದಿನ ಕನ್ನಡ ಕಾವ್ಯ, ಸಾಹಿತ್ಯ ಹಾಗೂ ವಿಮರ್ಶೆಯ ಪ್ರಪಂಚದಲ್ಲಿ ಒಳ್ಳೆಯ ಹೆಸರು ಗಳಿಸಿದ ಬರಹಗಾರರೆಲ್ಲ, ಈ ಸಂಘದ ದೀಪೋತ್ಸವದಲ್ಲಿ ತಮ್ಮ ಒಂದೊಂದು ದೀಪವನ್ನು ಬೆಳಗಿಸಿದ್ದಾರೆ. ಅನೇಕ ಮಹಿಳೆಯರೂ ಇದರಲ್ಲಿ ಸೇರಿರುವುದು ಒಂದು ವಿಶೇಷವಾಗಿದೆ. ಈ ಕಾಲೇಜಿನ, ಕನ್ನಡ ಸಂಘದ ಅತಿಶ್ರೇಷ್ಠವಾದ ಕೊಡುಗೆಯೆಂದರೆ, 'ವಿದ್ಯಾರ್ಥಿ ವಿಕಾಸಮಾಲೆ'ಯ ಕೃತಿಗಳು, ಇಂಥ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸಿ, ಅವರ ಕೃತಿಗಳನ್ನು ಪ್ರಕಟಿಸಿ, ಈ ಕಾಲೇಜು, ಕರ್ನಾಟಕದಲ್ಲೇ ಒಂದು ಮಾದರಿಯನ್ನು ಹಾಕಿಕೊಟ್ಟಿದೆ. ಇಂಥ ಕಾಲೇಜು ಹಾಗೂ ಸಂಘಗಳ ಮೇಲ್ಪಂಕ್ತಿಯನ್ನು ಎಲ್ಲರೂ ಅನುಸರಿಸುತ್ತಿದ್ದರೆ, ಇಂದಿನ ವಿದ್ಯಾರ್ಥಿ ಸಮಸ್ಯೆಯೆಂಬುದೇ ಇರುವುದು ಸಾಧ್ಯವಿದ್ದಿಲ್ಲ ವೇನೊ! ಏಕೆಂದರೆ ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘವು ಒಳ್ಳೆಯದನ್ನೇ ಬಿತ್ತಿದೆ. ಒಳ್ಳೆಯದನ್ನೇ

ಬೆಳೆದಿದೆ. ಅವರು ಪ್ರಕಟಿಸಿದ ಕೃತಿಗಳು ಯೇಸುಸ್ವಾಮಿ ಹೇಳಿದ 'Lilies of the field'ನಂತಿವೆ. ವಿದ್ಯಾರ್ಥಿಗಳ ಒಂದೊಂದು ಬರಹವೂ, ಅಷ್ಟೇ ಬೆಡಗಿನವಾಗಿವೆ. ಬೆರಗಿನವಾಗಿವೆ!

ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘ ಪ್ರಕಟಿಸಿದ, ಗ್ರಂಥಗಳ ಪಟ್ಟಿ ನೋಡುತ್ತಿದ್ದ ಹಾಗೆಯೇ ನನಗೆ, ಚರ್ಚನಲ್ಲಿ ನುಡಿಸುತ್ತಿದ್ದ ಭವ್ಯ ಆರ್ಗನ್ನುಗಳ ನೆನಪಾಯಿತು. Choirಗಳ ಮಧುರ ಗಂಭೀರ ಹಾಡು ನೆನಪಾದವು. ಕ್ರಿಸ್‌ಮಸ್‌ನಲ್ಲಿ ಕೆರಾಬಿಗಳ ಹಾಡುತ್ತಾ ಸಾಗುವ ಗುಂಪುಗಳ ನೆನಪಾಯಿತು. ಇದನ್ನೆಲ್ಲ ನೆನೆದುಕೊಳ್ಳುವ ಈ ಉತ್ಸವದಲ್ಲಿ, ಕಾಲೇಜಿಗೂ ಕನ್ನಡಸಂಘಕ್ಕೂ ಶುಭ ಕೋರುತ್ತ ನಾನು ಹೇಳಬಹುದಾದದ್ದಿಷ್ಟೆ !

'Amen ! ಆಮೆನ್'

*ಕ್ರೈಸ್ಟ್ ಕಾಲೇಜು 'ಆನಂದ' ಸದಾಶಯ ಸಂಚಿಕೆ*



# ಸಂಘಟನಾ ಚತುರ

● *ಶಾಂತರಸ*

ನೀವು ಪ್ರೀತಿಯಿಟ್ಟು ಕಳಿಸಿದ ನೂರನೆಯ ಪುಸ್ತಕದ ಬಿಡುಗಡೆ ಸಮಾರಂಭದ ಆಮಂತ್ರಣ ಪತ್ರಿಕೆ ಬಂದಿದೆ.

ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘ ಒಂದು ನೂರು ಉತ್ತಮ ಗ್ರಂಥಗಳನ್ನು ಪ್ರಕಟಿಸಿದ್ದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ದೊಡ್ಡ ಮತ್ತು ಆದರ್ಶಮಯವಾದ ದಾಖಲೆಯಾಗಿದೆ. ದೊಡ್ಡ ದೊಡ್ಡ ಪ್ರಕಾಶಕರು, ಪ್ರಕಟನಾಲಯಗಳು ಗ್ರಂಥ ಪ್ರಕಟನೆ ಮತ್ತು ಅವುಗಳ ಮಾರಾಟದಲ್ಲಿ ಯಶಸ್ಸು ಕಾಣದೆ ಒದ್ದಾಡುತ್ತಿರುವಾಗ ಒಂದು ಕಾಲೇಜಿನ ಸಂಘ ಯಾವ ಅಡೆತಡೆಗಳಿಲ್ಲದೆ ನಿರಾಯಾಸ ವಾಗಿ ಒಂದು ನೂರು ಪುಸ್ತಕಗಳನ್ನು ಪ್ರಕಟಿಸಿ ಮುಂದುವರೆಯು ತ್ತಿರುವುದು ರಾಜ್ಯಮಟ್ಟದಲ್ಲಿ ಅಷ್ಟೇ ಅಲ್ಲ ರಾಷ್ಟ್ರಮಟ್ಟದಲ್ಲಿ ಇದೊಂದು ಮಹಾಕಾರ್ಯ. ಅನ್ಯಪ್ರಕಾಶಕರಂತೆ ನಿಮ್ಮ ಪ್ರಕಾಶನ ಅಲ್ಲ; ಅದು ಗ್ರಂಥಗಳ ಆಯ್ಕೆಯಲ್ಲಿ ಗುಣಮಟ್ಟವನ್ನು ಕಾಯ್ದುಕೊಂಡು ಬಂದಿದೆ. ಬಹುಶಃ ಭಾರತದ ಯಾವ ಕಾಲೇಜೂ ಇಂಥ ಕಾರ್ಯವನ್ನು ಮಾಡಿಲ್ಲ.

ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದಿಂದ ಪುಸ್ತಕ ಪ್ರಕಟವಾಗುವುದು ತಮಗೆ ಗೌರವದ ಸಂಗತಿಯೆಂದು ಕರ್ನಾಟಕದ ಸಾಹಿತಿಗಳು, ಕವಿಗಳು ಭಾವಿಸಿದ್ದಾರೆ. ಪ್ರಸಿದ್ಧರಿಗಷ್ಟೇ ಅಲ್ಲ ಉದಯೋನ್ಮುಖ ಸಾಹಿತಿಗಳಿಗೆ ನೀವು ನೀಡುತ್ತಿರುವ ಪ್ರೋತ್ಸಾಹ ಆರೋಗ್ಯಪೂರ್ಣ ವಾದುದು, ಅವರು ಬೆಳೆಯುವ ಮಾರ್ಗ ಸೂಚಿಯಾದುದು. ಉದಯೋನ್ಮುಖರಿಗೆ ನಿಮ್ಮಿಂದ ದೊರಕಿದಷ್ಟು ಪ್ರೋತ್ಸಾಹ ಬೇರೆಡೆ ಎಲ್ಲಿಯೂ ಕಂಡುಬರುವುದಿಲ್ಲ.



ಕನ್ನಡ ಸಂಘಕ್ಕೆ ನೀವು ಮೂಲಶಕ್ತಿ, ಜೀವ ಧನ; ನಿಮ್ಮ ಸೇವೆ, ಕಾರ್ಯವಿಧಾನ, ಸಂಘಟನಾ ಚಾತುರ್ಯ ಯಾರೂ ಅನುಕರಣೆ ಮಾಡುವಂತಹುದು. ವ್ಯರ್ಥ ಟಾಮ್ ಟಾಮ್, ಅಬ್ಬರದ

ಪ್ರಚಾರ ಯಾವುದೂ ಇಲ್ಲದೆ ಮೌನವಾಗಿ ಹೂವರಳಿದಂಥ ಕಾರ್ಯ ನಿಮ್ಮದು ಮತ್ತು ನಿಮ್ಮ ಸಂಘದ್ದು; ನಿಮ್ಮ ಜೊತೆಗೆ ನಿಂತು ಸಹಕರಿಸುತ್ತಿರುವ ಪ್ರಾಧ್ಯಾಪಕ ವೃಂದವನ್ನು ಮರೆಯುವಂತಿಲ್ಲ, ಇದರಂತೆ ಪ್ರಾಂಶುಪಾಲರಾದ ರೆ ॥ ಫಾ ॥ ಡಾ ॥ ಅಂತೋಣಿ ಕರಿಯಲ್ ಅವರನ್ನು ಮರೆಯುವಂತಿಲ್ಲ.

ಸಾಹಿತ್ಯ ಸಂಸ್ಕೃತಿಯ ಅಭಿವೃದ್ಧಿಯೇ ನನ್ನ ದೃಷ್ಟಿಯಲ್ಲಿ ನಾಡಿನ ರಾಷ್ಟ್ರದ ಸರ್ವಾಂಗೀಣ ಅಭಿವೃದ್ಧಿಗೆ ಮೂಲಧನವಾದುದು. ಈ ಸಂವರ್ಧನೆಗೆ ಬೇಕಾದುದು ಶ್ರದ್ಧೆ, ನಿರಂತರ ಸೇವೆ, ನಿರ್ಮಲ ಹೃದಯ, ಜನ ಬದುಕಬೇಕು, ಚೆನ್ನಾಗಿ ಬದುಕಬೇಕು ಎಂಬ ಹಂಬಲ, ಉದಾಸೀನ ರಹಿತ ಮನಸ್ಸಿನ ಒಲವು, ಧ್ಯೇಯ ಧೋರಣೆಗೆ ಆಪತ್ತು ಸಂಭವಿಸಿದಾಗ ರಾಜಿಮಾಡಿಕೊಳ್ಳದ ಎದೆಗಾರಿಕೆ. ಈ ಎಲ್ಲ ಗುಣ ವಿಶೇಷಗಳು ನಿಮ್ಮಲ್ಲಿವೆ. ಅಂತೆಯೇ ನೀವು ಕನ್ನಡ ಸಂಘ ಕಟ್ಟಿದಿರಿ, ಸ್ನೇಹಿತರನ್ನು ಬೆಳೆಸಿದಿರಿ ; ಕಾಲೇಜಿಗೆ ಕೀರ್ತಿ ತಂದಿರಿ. ಕನ್ನಡ ನಾಡು ನುಡಿಯ ಸೇವೆ ಮಾಡುತ್ತೇವೆ ಎಂದು ಒದರಾಡುವ, ಚೀರಾಡುವ, ಗುದ್ದಾಡುವ, ಇವುಗಳಲ್ಲೇ ಬಿದ್ದು ಒದ್ದಾಡುವ ಮುಂದಾಳುಗಳು, ರಾಜಕಾರಣಿಗಳು, ನಿಮ್ಮತ್ತ, ನಿಮ್ಮ ಕಾಲೇಜಿನತ್ತ ದೃಷ್ಟಿಹಾಯಿಸಬೇಕು; ಪಾಠ ಕಲಿಯಬೇಕು.

ನಾನು ನಿಮ್ಮನ್ನು ಹೊಗಳುತ್ತಿಲ್ಲ. ಸತ್ಯವನ್ನು ಸತ್ಯವೆಂದು ನಾವು ಹೇಳಲು ಹಿಂದೆ ಮುಂದೆ ನೋಡಬಾರದು. ಒಳಿತನ್ನು ಸತ್ಯವನ್ನು ಅರಿಯಲಾರದೆ ಗುರುತಿಸಲಾರದೆ ನಾವು ಕೆಟ್ಟಿದ್ದೇವೆ; ನಾಡನ್ನು ಕೆಡಿಸಿದ್ದೇವೆ. ಕೀರ್ತಿಶನಿಯಿಂದ ನೀವು ದೂರ, ಬಹಳ ದೂರ. ಹೀಗೆಂದು ನಿಮ್ಮ ವ್ಯಕ್ತಿತ್ವವನ್ನು ಮೆಚ್ಚಿ ನೆನೆಯದೆ ಇರಲಿಕ್ಕಾದೀತೆ?

ನೂರನೆಯ ಪುಸ್ತಕ ಬಿಡುಗಡೆಯಾಗುವ ಈ ಸಂದರ್ಭದಲ್ಲಿ ನನ್ನ ಹಾರ್ದಿಕ ಅಭಿನಂದನೆಗಳನ್ನು ದಯವಿಟ್ಟು ಸ್ವೀಕರಿಸಿ; ನಿಮ್ಮ ಸಹೋದ್ಯೋಗಿಗಳಿಗೆ ನನ್ನ ಅಭಿನಂದನೆಗಳನ್ನು ತಿಳಿಸಿರಿ.

ಒಂದು ವಿನಮ್ರ ಸಲಹೆ : ಈಗ ಬೇಂದ್ರೆ ಶತಮಾನೋತ್ಸವದ ಸಂಭ್ರಮ. ಹಿಂದೆ ನೀವು ಅವರ ಬಣ್ಣದ ಭಾವಚಿತ್ರ ಪ್ರಕಟಿಸಿದ್ದಿರಿ. ಮತ್ತೊಮ್ಮೆ ಪ್ರಕಟಿಸಿ. ಲಕ್ಷ ಸಂಖ್ಯೆಯಲ್ಲಿ ಅವು ಜನರನ್ನು ಮುಟ್ಟಬೇಕು.

❑

# ಪ್ರೊ. ಚಿ. ಶ್ರೀನಿವಾಸರಾಜು

● ಎಚ್ಚೆಸ್ಕೆ

**ಕೋ**ಲಾರ ಎಂದೊಡನೆ ಮಾಸ್ತಿಯವರ ನೆನಪಾಗುತ್ತದೆ. ಈ ಜಿಲ್ಲೆ ಕರ್ನಾಟಕಕ್ಕೆ ಕೊಟ್ಟ ದೊಡ್ಡ ಆಸ್ತಿ ಮಾಸ್ತಿ.

ರಾಜರತ್ನಂ ಅವರ ಪುಸ್ತಕ-ಪರಿಚಾರಿಕೆಯ ಮಹತ್ವದ ಕಾರ್ಯವನ್ನು ಮುನ್ನಡೆಸಿದವರು ಚಿ.ಶ್ರೀನಿವಾಸರಾಜು (೧೯೪೨). ಅವರು ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರದವರು.

ಶ್ರೀನಿವಾಸರಾಜು ಸಾಹಿತ್ಯವನ್ನು ಅಳೆದು ಸುರಿದ ಬಳ್ಳ ಚಿಕ್ಕದಲ್ಲ: ದೊಡ್ಡಕೊಳಗ. ಅದರ ತುಂಬ ಮುತ್ತು, ರತ್ನ, ವಜ್ರ, ವೈಡೂರ್ಯ-ಅನರ್ಘ್ಯ ಸಾಹಿತ್ಯ ಕೃತಿ ರಾಶಿ.

ಶ್ರೀನಿವಾಸರಾಜು ಅವರ ತಂದೆ ಚಿಕ್ಕರಾಜು ಸರ್ಕಾರಿ ನೌಕರರು. ಊರೂರು ತಿರುಗುತ್ತಿದ್ದರು. ತಾಯಿ ಸಾವಿತ್ರಮ್ಮ. ದೊಡ್ಡಮ್ಮನವರ ಆಶ್ರಯದಲ್ಲಿ ಬೆಳೆದ ಅವರ ಮೊದಲ ಓದು ಚಿಕ್ಕಬಳ್ಳಾಪುರದಲ್ಲೇ.

ಶಾಲಾಮಟ್ಟದಲ್ಲೇ ಬದುಕಿನಲ್ಲಿ ಅಮಿತೋತ್ಸಾಹ. ಕಾಲ್ಚೆಂಡಾಟ ತುಂಬಾ ಪ್ರಿಯ. ಜ್ಞಾನ ಗಂಗಾ ಸಂಘದ ಮೂಲಕ ಚಟುವಟಿಕೆ. ಪುಸ್ತಕಗಳೆಂದರೆ ಅಸಾಧಾರಣ ಪ್ರೀತಿ. ಅವನ್ನು ಕೊಂಡು ತಂದು ಸಾಹಿತ್ಯಾಭಿರುಚಿ ಉಳ್ಳವರಿಗೆ ಮಾರುವ ಮಟ್ಟಿಗೆ ಅವರ ಗೀಳು.



ಕಾಲೇಜಿನಲ್ಲಿ ಓದು ಮುಂದುವರಿಸಿದಾಗ ಬಲವಾಗಿ ಅಂಟಿಕೊಂಡಿದ್ದು ಎನ್.ಸಿ.ಸಿ. ಕಾಲ್ಚೆಂಡಾಟದಲ್ಲಿ ಗೋಲಿನ ರಕ್ಷಣೆಯಲ್ಲಿ ಕೌಶಲ.

ಬಿ.ಎಸ್‌ಸಿ. ಮುಗಿಸಿ, ಲೋಹ ಅಭಿವೃದ್ಧಿ ಮಂಡಲಿಯಲ್ಲಿ ಸಾರಿಗೆ ಅಧಿಕಾರಿಯಾಗಿ ಎರಡು ಮೂರು ವರ್ಷ ದುಡಿದ ಶ್ರೀನಿವಾಸರಾಜು ಪೋಲೀಸ್ ಇಲಾಖೆಗೆ ಸೇರಬೇಕೆಂದು ಅವರ ತಂದೆಯ ಒತ್ತಾಯ. ಆದರೆ ಶ್ರೀನಿವಾಸರಾಜು ಮಣಿಯಲಿಲ್ಲ.

ಸಾಹಿತ್ಯದ ಹಂಬಲ. ಬಿ.ಎ. ಓದಲು ತೀರ್ಮಾನ. 'ವಿಮೋಚನೆ' ಮಾಸ ಪತ್ರಿಕೆಯ ಪ್ರಕಾಶನ. ಸಾಹಿತ್ಯಲೋಕದ ನಂಟು.

ಮುಂದಿನ ಹೆಜ್ಜೆ ಕನ್ನಡ ಎಂ.ಎ. ರಾಜರತ್ನಂ, ಮುಗಳಿ, ಶಿವರುದ್ರಪ್ಪ, ಚಿದಾನಂದಮೂರ್ತಿ ಮುಂತಾದವರ ಗರಡಿಯಲ್ಲಿ ಸಾಮು. ಸಾಹಿತ್ಯ ಪರಿಚಾರಿಕೆಯ 'ಅಮಲು'. ಪತ್ನಿ ಸರಸ್ವತಿ ಅವರೊಂದಿಗೆ ಅನುರೂಪ ದಾಂಪತ್ಯ.

ಪತ್ನಿಯಲ್ಲಿ ಓದುವ ಹಂಬಲ ಮೂಡಿಸಿ ಸ್ನಾತಕ ಪದವಿಗೆ ಏರಿಸಿದ ಶ್ರೀನಿವಾಸರಾಜು ಕ್ರೈಸ್ಟ್ ಕಾಲೇಜಿನಲ್ಲಿ ಅಧ್ಯಾಪಕರಾದಾಗ ತಮ್ಮ ಕನಸಿನ ಯೋಜನೆಗಳ ಯಶಸ್ವೀ ಅನುಷ್ಠಾನ. ಸಾಹಿತ್ಯ ಕೃತಿಗಳ ಪ್ರಕಟಣೆ-ಮಾರಾಟಗಳ ನಿರಂತರ ಕಾರ್ಯನಿರ್ವಹಣೆ. ಕಾಲೇಜಿನ ಕನ್ನಡ ಸಂಘದ ವೇದಿಕೆಯಿಂದಲೇ ಎಲ್ಲ ಕಾರ್ಯಭಾರ. ನಷ್ಟ-ಲಾಭ ಸಮಸಮ. ಅನೇಕ ಸಾಹಿತಿಗಳಿಗೆ ಉದಿತೋದಿತ ಬರಹಗಾರರಿಗೆ ತಮ್ಮ ಕೃತಿಗಳು ಬೆಳಕು ಕಾಣುವುದನ್ನು ನೋಡುವ ಯೋಗ. ವೃತ್ತಿಯಿಂದ ನಿವೃತ್ತಿ ಹೊಂದಿದಾಗ ಕಾಲೇಜಿನಲ್ಲಿ ಬಿಟ್ಟು ಬಂದ ಆಸ್ತಿಯೆಂದರೆ ಐವತ್ತು ಸಾವಿರ ನಗದು. ಸುಮಾರು ಎರಡು ಲಕ್ಷ ಬೆಲೆಯ ಪುಸ್ತಕ.

ಮಕ್ಕಳಿಬ್ಬರು: ಸುಗತ ಇಂಗ್ಲಿಷ್ ಎಂ.ಎ. 'ಹಿಂದೂಸ್ತಾನ್ ಟೈಮ್ಸ್'ನ ಸುದ್ದಿ ಸಂಪಾದಕ. ಋತ ದ್ವಿತೀಯ. ಗ್ರಾಫಿಕ್ ಡಿಸೈನ್ ಪರಿಣತ. ಸೊಸೆಯಂದಿರು. ಮೊಮ್ಮಕ್ಕಳು ವರ್ಧಿಷ್ಣು ವಂಶವಾಹಿನಿ.

ಬರೆದದ್ದೂ ಕಡಿಮೆಯಿಲ್ಲ. ನಾಟಕ, ಕಥೆ, ಕವನ, ವಿಮರ್ಶೆ, ಉತ್ತಮ ಪ್ರಕಾಶನಕ್ಕಾಗಿ ಪುಸ್ತಕ ಪ್ರಾಧಿಕಾರ, ಆರ್ಯಭಟ, ವಿಶ್ವೇಶ್ವರಯ್ಯ, ಸಂಸ, ಮನು, ಎಸ್.ವಿ.ಪಿ. ಹೀಗೆ ನಾನಾ ಪ್ರಶಸ್ತಿ. ಕೋಲಾರ ಜಿಲ್ಲಾ ಸಾಹಿತ್ಯ ಸಮ್ಮೇಳನಾಧ್ಯಕ್ಷತೆ. "ಎನಗಿಂತ ಕಿರಿಯರಿಲ್ಲ" ಎಂಬ ಭಾವದ ಶ್ರೀನಿವಾಸರಾಜು ಅವರ ಮನೆಯ ಹೆಸರು 'ಚಿರಂಜೀವಿ' ಧನ್ಯ ಜೀವಿ.

*ಸುಧಾ ೭, ಮಾರ್ಚ್ ೨೦೦೨*



# ಪರಿಚಾರಿಕೆ

● ಶ್ರೀನಿವಾಸ ಹಾವನೂರ

ಪದವಿ ಮಟ್ಟದ ಅಭ್ಯಾಸ ನಡೆಸುವ ಕಾಲೇಜೊಂದು ಕನ್ನಡ ಸಂಘವನ್ನು ಕಟ್ಟುವುದು, ಅದರ ಆಶ್ರಯದಲ್ಲಿ ಕಾರ್ಯಕ್ರಮಗಳನ್ನು ನಡೆಸುವುದು ದೊಡ್ಡ ಮಾತಲ್ಲ. ಆದರೆ ಕೃತಿಗಳ ಪ್ರಕಟಣೆ ಹಾಗೂ ಆ ಮೂಲಕ ಅನೇಕ ಹೊಸಬರ ಬರವಣಿಗೆಗಳಿಗೆ ಅವಕಾಶ ಕಲ್ಪಿಸಿಕೊಡುತ್ತ ತಡೆಯಿಲ್ಲದ ಬೆಳವಣಿಗೆ ಸಾಧಿಸುವುದು ನಿಜಕ್ಕೂ ಕಷ್ಟದ ದಾರಿ, ಕ್ರೈಸ್ಟ್ ಕಾಲೇಜು ಕನ್ನಡ ಸಂಘವು ಅಂಥ ದಾರಿ ಯುದ್ದಕ್ಕೆ ನಡೆದಿದೆ. ಮುಖ್ಯವಾಗಿ ಅದರ ಪ್ರಾಂಶುಪಾಲರು ಅದಕ್ಕೆ ಅನೂಹ್ಯವಾದ ಪ್ರೋತ್ಸಾಹವನ್ನೀಯುತ್ತಿದ್ದಾರೆ.

ಈ ಕನ್ನಡ ಸಂಘದ ಕಾರ್ಯವೈಖರಿಯನ್ನು ಗಮನಿಸಿದಾಗ, ಹಿಂದಿನ ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘ, ಇಂದಿನ ಪುತ್ತೂರಿನ ಫಿಲೋಮಿನಾ ಕಾಲೇಜು ಮತ್ತು ವಿವೇಕಾನಂದ ಕಾಲೇಜುಗಳ ಕನ್ನಡ ಸಂಘಗಳ ನೆನಪು ಸ್ವಾಭಾವಿಕವಾಗಿಯೇ ಆಗುತ್ತದೆ.

ಕ್ರೈಸ್ಟ್ ಕಾಲೇಜು ಕನ್ನಡ ಸಂಘವು ಸಾಹಿತ್ಯ ಪರಿಚಾರಿಕೆಯ ಕೆಲಸವನ್ನೂ ಯಶಸ್ವಿಯಾಗಿ ಮಾಡಿದ ಹಿರಿಯ ಸಾಹಿತಿಗಳಾದ ಬೇಂದ್ರೆ, ಶ್ರೀರಂಗ ಇಂಥವರ ಕೃತಿ ಸಮೀಕ್ಷೆಗಳನ್ನು ಕಾಲಕಾಲಕ್ಕೆ ನಡೆಸಿದೆ.

ನನಗೆ ತುಂಬಾ ಪ್ರಿಯವಾದ ಇನ್ನೊಂದು ವಿಚಾರವೆಂದರೆ, ಈ ಸಂಘವು ನಡೆಸುತ್ತ ಬಂದಿರುವ ಸಾಹಿತ್ಯ ಸ್ಪರ್ಧೆಗಳು; ಯುವ ಪ್ರತಿಭೆಯ ವಿಕಾಸಕ್ಕೆ ಈ ಬಗೆಯ ಸ್ಪರ್ಧೆಗಳು ಎಷ್ಟು ಅವಶ್ಯ ವೆಂಬುದನ್ನು ಮತ್ತೆ ಹೇಳಬೇಕಾಗಿಲ್ಲ. ಇದರ ಸಂಚಾಲಕರಾದ ಶ್ರೀ ಚಿ. ಶ್ರೀನಿವಾಸರಾಜು ಅವರ ಬಗ್ಗೆ ನನ್ನದೊಂದು ತಕರಾರಿದೆ. ಅದೆಂದರೆ ಯಾವುದಾದರೊಂದು ಒಳ್ಳೆಯ ಕಾರ್ಯದ

ಯೋಜನೆಯನ್ನು ಅವರು ಹಾಕಿಕೊಂಡರೆಂದರೆ, ಅದು ಮುಗಿಯುವವರೆಗೆ ಬಿಡುವುದೇ ಇಲ್ಲ. ಅದರಿಂದ ನನ್ನಂತಹವರಿಗೆ ತೊಂದರೆ. ಕಂಪ್ಯೂಟರ್ ಮೂಲಕ ಕಂಪ್ಯೂಟರ್ ಅಧ್ಯಯನವನ್ನು ಕುರಿತು ನಾನು ಕೆಲಸ ಮಾಡಬೇಕೆಂದೂ ಆಮೇಲೆ ಭಾಷಣ ಮಾಡಬೇಕೆಂದೂ ಕಳೆದ ಒಂದು ವರ್ಷದಿಂದ ನನಗೆ ಗಂಟುಬಿದ್ದಿದ್ದಾರೆ.

ಈ ಕೆಲಸ ಮುಗಿಯುವವರೆಗೂ ಅವರು ನನ್ನನ್ನು ಕಾಡುವರೆಂಬುದೇ ನನ್ನ ತಕರಾರು.

*ಕ್ರೈಸ್ಟ್ ಕಾಲೇಜು 'ಆನಂದ' ಸದಾಶಯ ಪತ್ರಿಕೆ*



# ಹಾಯಿ ದೋಣಿಯ ಮೇಲೆ......

● ಎನ್.ಸರಸ್ವತಿ ರಾಜು

ನಾನು ಅವಿಭಕ್ತ ಕುಟುಂಬದಿಂದ ಬಂದವಳು. ನನಗೆ ಕಷ್ಟಪಟ್ಟು ಕೆಲಸ ಮಾಡುವುದನ್ನು, ದೊಡ್ಡವರನ್ನು ಮರ್ಯಾದೆಯಿಂದ ನೋಡುವುದನ್ನು ನನ್ನ ತಂದೆ–ತಾಯಿಗಳು ಮೊದಲಿನಿಂದಲೂ ಹೇಳಿಕೊಟ್ಟಿದ್ದರು. ನಯ, ವಿನಯದಿಂದ ನಡೆದುಕೊಳ್ಳುವುದನ್ನು ಹೇಳಿಕೊಟ್ಟಿದ್ದರು. ಮದುವೆ ಮುಂತಾದ ಸಮಾರಂಭಗಳಲ್ಲಿ, ನನ್ನನ್ನು ನಮ್ಮ ಅತ್ತೆ ಸಾವಿತ್ರಮ್ಮನವರು ಗಮನಿಸಿದ್ದರಂತೆ. ಈ ಹೆಣ್ಣುಮಗಳು, ನಮ್ಮ ಮನೆಗೆ ಸೊಸೆಯಾಗಿ ಬಂದರೆ ಒಳ್ಳೆಯದು ಎಂದು ತಿಳಿದಿದ್ದ ರಂತೆ, ಅದಕ್ಕೆ ಅವರ ಅಣ್ಣ ಸೀತಾರಾಮರಾಜು ಅವರು ಬೆಂಬಲ ನೀಡಿದರಂತೆ. ನಮ್ಮ ತಂದೆಗೂ ಓದಿದವರ ಮನೆಗೆ ಮಗಳನ್ನು ಕೊಡಬೇಕೆಂಬ ಆಸೆ. ಆದರೆ ಇವರಿಗೆ ನಾಲ್ಕು ಜನ ತಂಗಿಯರು. ಆದ್ದರಿಂದ ಮಗನ ಮದುವೆ ಮೊದಲು ಮಾಡಲು ಇಷ್ಟಪಡಲಿಲ್ಲ. ನಮ್ಮ ಮನೆಯ ಕಡೆಯವರಿಗೆ, ಈ ಮದುವೆ ಆಗುವುದೋ ಇಲ್ಲವೋ ಎಂಬ ಅನುಮಾನ. ಆದರೆ ನಮ್ಮ ತಂದೆ ಬೆನ್ನುಬಿಡದ ಬೇತಾಳನಂತೆ ಐದಾರು ವರ್ಷಗಳು ತಿರುಗಾಡಿ, ಕೊನೆಗೂ ಒಪ್ಪಿಸಿಬಿಟ್ಟರು.

ಇನ್ನೂ ನಮ್ಮ ಮದುವೆಯಾಗಿರಲಿಲ್ಲ. ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘದ ಸುವರ್ಣ ಮಹೋತ್ಸವದ ಸಂದರ್ಭ, ಇವರ ಓಡಾಟ ಹೇಳತೀರದು. ಗೆಳೆಯ ರಾಘವೇಂದ್ರರಾವ್ ಸಂಘದ ಕಾರ್ಯದರ್ಶಿಯಾದ ಮೆಲೆ ಇನ್ನು ಕೇಳಬೇಕೆ. ಆಗ ಕ.ವೆಂ. ರಾಜಗೋಪಾಲ ಅವರು ಮೂರುದಿನಕ್ಕೆ ಮೂರು ನಾಟಕಗಳನ್ನು ಆಡಿಸಿದ್ದರು. "ಅಶ್ವತ್ಥಾಮನ್" ನಾಟಕದಲ್ಲಿ ಇವರದು ಭೀಮನ ಪಾತ್ರ; ಸಿ. ವೀರಣ್ಣನವರು ಅಶ್ವತ್ಥಾಮನ್ ಪಾತ್ರ; ರಾಘವೇಂದ್ರರಾವ್ ಅವರದು ಕೃಷ್ಣನ ಪಾತ್ರ; ಕೆ.ಆರ್. ಗಣೇಶ್ ಅವರದು ಭಾರ್ಗವಿ ಪಾತ್ರ, ನನ್ನ ತಂಗಿಯರೊಡಗೂಡಿ ಈ ನಾಟಕಕ್ಕೆ ಹೋಗಿದ್ದೆ. ನಾಟಕದುದ್ದಕ್ಕೂ ಅವರು ರೇಗಿಸಿದ್ದೇ ರೇಗಿಸಿದ್ದು. ಇನ್ನೊಂದು



ವಿಶೇಷವೆಂದರೆ, ಇವರ ಕುಟುಂಬದವರು ನನ್ನನ್ನು ಒಪ್ಪಿಕೊಂಡ ಮೇಲೆ ಇವರ ಗೆಳೆಯರ ಒಂದು ದಂಡೇ ನಮ್ಮ ಮನೆಗೆ ಬಂತು. ಅವರು ನನ್ನನ್ನು ನೋಡಿದ್ದೇನು? ಮಾತನಾಡಿದ್ದೇನು? ನನಗೆ ಒಳಗೊಳಗೆ ಇವರಿಗೆ ಇಷ್ಟೊಂದು ಹೆಣ್ಣುಮಕ್ಕಳ ಗೆಳೆತನ ಇದೆಯಲ್ಲಾ ಎಂಬ ಅನುಮಾನ ಮತ್ತು ಭಯ. ಆದರೆ ಅವರೆಲ್ಲ ಹೋಗುವಾಗ "ಅತ್ತಿಗೆಮ್ಮ" ಎಂದು ಕರೆದರು. ಇಂದಿಗೂ ಅದೇ ವಿಶ್ವಾಸದಿಂದ "ಅತ್ತಿಗೆಮ್ಮ" ಎಂದೇ ಕರೆಯುತ್ತಾರೆ. ಇಷ್ಟೇ ಸಾಲದು ಎಂದು ನನ್ನನ್ನು ಸೆಂಟ್ರಲ್ ಕಾಲೇಜಿನ ಹತ್ತಿರ ಬರಹೇಳಿದರು, ಇದೆಲ್ಲಾ ನನಗೆ ಹೊಸದು. ನಮ್ಮ ಮನೆಯವರಿಗೆ ಹೇಳಿ, ಇವರ ತಂಗಿ ಗಿರಿಜಾ ಜೊತೆಯಲ್ಲಿ ಹೋದೆ. ಸೆಂಟ್ರಲ್ ಕಾಲೇಜು ಮುಂಭಾಗದ ಹುಲ್ಲುಹಾಸಿನ ಮೇಲೆ, ಇವರ ಸಹಪಾಠಿಗಳ, ಸ್ನೇಹಿತರ ದೊಡ್ಡ ಗುಂಪೇ ಸೇರಿತ್ತು. ನನಗೋ ನಾಚಿಕೆ, ಮುಜುಗರ, ಅವರು ಕೇಳಿದ ಪ್ರಶ್ನೆಗಳಿಗೆ ನನಗೆ ತೋಚಿದಂತೆ ಉತ್ತರ ಕೊಟ್ಟೆ. ನನ್ನ ಈ ವಧುಪರೀಕ್ಷೆಯಲ್ಲಿ ಪಾಸಾದೆ. ನಮ್ಮ ಮದುವೆ ಆರತಕ್ಷತೆಯಲ್ಲಿ ಒಂದು ಮೋಜಿನ ಪ್ರಸಂಗ ನಡೆಯಿತು. ನಾನು ಸ್ವಲ್ಪ ಕುಳ್ಳು. ವಧೂವರರ ಈಡುಜೋಡು ಸರಿಬರಲಿ ಎಂದು ನನ್ನ ಉಗ್ರಿ ಚಿಕ್ಕಪ್ಪ ಒಂದು ದಪ್ಪದಾದ ಮರದ ಚಿಕ್ಕ ಮಣೆಯನ್ನು ನಾನು ನಿಲ್ಲುವ ಕಾರ್ಪೆಟ್ ಕೆಳಗೆ ಹಾಕಿದರು. ನಾವು ಕೂತು ಏಳುವ ಸಂಭ್ರಮದಲ್ಲಿ ಕಾರ್ಪೆಟ್ ಪಕ್ಕಕ್ಕೆ ಸರಿದಿತ್ತು. ಎಲ್ಲಾ ಫೋಟೋದಲ್ಲಿ ಅದು ದಾಖಲಾಗಿಬಿಟ್ಟಿತು. ಇಂದಿಗೂ ಇವರು ಆ ಮಣೆಯನ್ನು ತೋರಿಸಿ ರೇಗಿಸುತ್ತಾರೆ. "ಸುರಸುಂದರಿಯನ್ನೇ ಮಾಡಿಕೊಳ್ಳಬೇಕಿತ್ತು. ನಿಮ್ಮ ಮಕ್ಕಳಿಗೆ ಹೇಳಿ, ಹುಡುಕಿ ತರುತ್ತಾರೆ" ಎಂದು ನಾನು ತಮಾಷೆ ಮಾಡುತ್ತೇನೆ.

ನಮ್ಮತ್ತೆಗೆ ನನ್ನನ್ನು ಕಂಡರೆ ಪ್ರೀತಿ, ಏಕೆಂದರೆ ನಾನು ಅವರಿಗೆ ಬೇಕಾಗುವ ಕಥೆ ಪುಸ್ತಕಗಳನ್ನು ಒದಗಿಸುತ್ತಿದ್ದೆ. ಅಡಿಗೆ ಕೆಲಸದಲ್ಲಿ ಸೇರಿಕೊಳ್ಳುತ್ತಿದ್ದೆ. ದೊಡ್ಡಮನೆಯವಳು ಹೊಂದಿಕೊಂಡಳಲ್ಲ ಎಂಬ ಸಮಾಧಾನ, ಸಂತೋಷ ಅವರಿಗೆ. ನಮ್ಮ ಮಾವನವರು ತುಂಬಾ ಗಂಭೀರ ಸ್ವಭಾವದವರು. ಕಟ್ಟುನಿಟ್ಟಾದ ವ್ಯಕ್ತಿ. ಬೀದಿ ದೀಪದ ಕೆಳಗೆ ಕೂತು ಓದಿಕೊಂಡು, ಮೇಲೆ ಬಂದವರಾದರೂ ಹೃದಯವಂತಿಕೆಯನ್ನು ಉಳಿಸಿಕೊಂಡಿದ್ದರು. ಆದರೂ ನನ್ನ ಹತ್ತಿರ ಮಾತನಾಡುತ್ತಿರಲಿಲ್ಲ. ಅಪ್ಪಿತಪ್ಪಿ ಮಾತನಾಡಿದರೆ, ಏನು ಉತ್ತರ ಕೊಡಬೇಕೆಂದು ನನಗೆ ಗೊತ್ತಾಗುತ್ತಿರಲಿಲ್ಲ. ನನಗೆ ಮದುವೆಯಾದಾಗ ಎಸ್.ಎಸ್.ಎಲ್.ಸಿ. ಮುಗಿದಿತ್ತು. ಇದವರ ಒತ್ತಾಯದಿಂದ ಮಹಾರಾಣಿಕಾಲೇಜು ಸೇರಿದೆ. ಪಿ.ಯು.ಸಿ. ಮಾಡಿದೆ, ಅಲ್ಲಿಗೆ ಬಿಡದೆ ಮತ್ತೆ ಬಿ.ಎ.ಗೆ ಸೇರಿಸಿದರು. ಕನ್ನಡವನ್ನು ಐಚ್ಛಿಕವಾಗಿ ತೆಗೆದುಕೊಂಡಿದ್ದೆ. ಅಲ್ಲಿನ ಅನೇಕ ಚಟುವಟಿಕೆಗಳಲ್ಲಿ ಭಾಗವಹಿಸಿದೆ. ಸ್ವಲ್ಪ ಚುರುಕಾದೆ. ಇವರನ್ನು ಮದುವೆಯಾದ ಮುಂದಿನ ತಿಂಗಳೇ ಇವರು ಎನ್.ಸಿ.ಸಿ. ಆಫೀಸರ್ ತರಬೇತಿಗೆ ನಾಗಪುರದ ಹತ್ತಿರ ಇರುವ ಕಾಮ್ಪಿಗೆ ಹೊರಟು ನಿಂತರು. ಎಲ್ಲರಿಗೂ ಸಂತೋಷ, ನನಗೆ ಪ್ರಾಣಸಂಕಟ, ಬೇಜಾರು. ಅಲ್ಲಿಗೆ ಹೋದಮೇಲೆ ವಾರಕ್ಕೆ ಒಂದೆರಡು ಪತ್ರಗಳನ್ನು ಬರೆಯುತ್ತಿದ್ದರು. ನಾನು ಪತ್ರಗಳನ್ನು ಬರೆಯಲು ಪ್ರಾರಂಭಿಸಿದೆ. ಇವರು ಪತ್ರದ ಜೊತೆಗೆ ಅದರಲ್ಲಿ ಚಿತ್ರಗಳನ್ನು ಬಿಡಿಸುತ್ತಿದ್ದರು. ನಾನು ಚಳಿಬಿಟ್ಟು ಪತ್ರಗಳನ್ನು ಬರೆಯಲು ಪ್ರಾರಂಭಿಸಿದೆ. ಇವರಿಗೆ ಅರುವತ್ತು ವರ್ಷ ತುಂಬಿದ ಮೇಲೆ ಆ ಪತ್ರಗಳನ್ನೆಲ್ಲ ಮತ್ತೊಮ್ಮೆ ಓದಿ, ನೆನಪುಗಳನ್ನು ಮೆಲಕು ಹಾಕಿದೆವು. ಇನ್ನು ಮಕ್ಕಳ ಕೈಗೆ ಸಿಕ್ಕಿದರೆ ಮರ್ಯಾದೆ ಹೋಗುತ್ತೆ ಎಂದು ಇಲ್ಲವಾಗಿಸಿದೆವು. ನಮಗೆ

ಕಾಲೇಜಿನಲ್ಲಿ ಸಮಸ್ಯೆ ಬಂದರೆ, ಯಾವುದಾದರೂ ಶಬ್ದಕ್ಕೆ ಅರ್ಥವನ್ನು ಕೇಳಿದರೆ ಇವರು ಹೇಳಿಕೊಡುತ್ತಿರಲಿಲ್ಲ. ಇವರ ತಂಗಿಯರಿಗೂ ಹೇಳಿಕೊಡುತ್ತಿರಲಿಲ್ಲ. ಶಬ್ದದ ಅರ್ಥ ಕೇಳಿದರೆ ನಿಘಂಟುವನ್ನೇ ತಂದು ಮುಂದಿಡುತ್ತಿದ್ದರು. ನಿಘಂಟು ನೋಡುವುದನ್ನು ಕಲಿಯಲಿ ಎಂಬುದು ಅವರ ಆಸೆ. ನನಗೆ ಮನೆಗೆಲಸದ ಒತ್ತಡದಲ್ಲಿ ಸಿಟ್ಟು, ನಾವು ಇವರನ್ನು ಕೇಳುವುದನ್ನೇ ಬಿಟ್ಟೆವು. ನಮ್ಮ ನಮ್ಮ ದಾರಿ ಕಂಡುಕೊಂಡೆವು.

ಇವರ ಜೊತೆಯಲ್ಲಿ ನಾನು ಕಾಲೇಜಿಗೆ ಹೋಗುತ್ತಿರಲಿಲ್ಲ. ಏಕೆಂದರೆ ಊರಿಗೆ ಮುಂಚೆ ಊಟಮಾಡಿಕೊಂಡು ಹೊರಡುತ್ತಿದ್ದರು. ಅಷ್ಟು ಬೇಗ ಹೋಗಿ ನಾನೇನು ಮಾಡಲಿ? ಮೊದಮೊದಲು ಇವರು ಏಕೆ ಇಷ್ಟು ಬೇಗ ಹೊರಡುತ್ತಾರೆ? ಯಾರನ್ನು ನೋಡಲು ಹೋಗುತ್ತಾರೆ? ಎಂಬ ಕುತೂಹಲವಿತ್ತು. ಅನಂತರ ಇವರ ಹಣೆಬರಹ ಗೊತ್ತಾಯಿತು. ಕನ್ನಡ ಸಂಘದ ಪುಸ್ತಕಗಳ ಕರಡನ್ನು ತಿದ್ದುವುದು, ಅದನ್ನು ಎತ್ತಿಕೊಂಡು ಹೋಗಿ ಪ್ರೆಸ್ಸಿಗೆ ಕೊಡುವುದು, ಅನಂತರ ಕಾಲೇಜಿಗೆ ಹೋಗುವುದು. ಅವರಿವರು ತಂದುಕೊಟ್ಟಿದ್ದನ್ನು ಓದುವುದು, ತಿದ್ದುವುದು, ಪ್ರಕಟಿಸಲು ಸಿದ್ಧಪಡಿಸುವುದು. ಇಲ್ಲವೆ ಸಾಹಿತಿಗಳ ಮನೆಗೆ ಹೋಗುವುದು. ನಕ್ಷತ್ರಿಕನಾಗಿ ಅವರ ಬೆನ್ನು ಬೀಳುವುದು ಬರೆಸುವುದು. ಅನಂತರ ಪ್ರಕಟಿಸುವುದು. ಇದಕ್ಕಾಗಿಯೇ ಬೇಗ ಮನೆ ಬಿಡುತ್ತಿದ್ದರು. ಎಷ್ಟೋ ಸಲ ನನ್ನ ಮಕ್ಕಳು ಮಲಗಿದ್ದಾಗ ಎದ್ದು ಹೋಗುತ್ತಿದ್ದರು. ಅವರು ಮಲಗಿದ ಮೇಲೆ ಮನೆ ಸೇರುತ್ತಿದ್ದರು. ಈ ಮಧ್ಯೆ ಗೆಳೆಯರೆಲ್ಲ ಸೇರಿ "ಅಂಕಣ" ಪತ್ರಿಕೆಯನ್ನು ಪ್ರಾರಂಭಿಸಿದರು. ನನಗೂ ಕೆಲಸ ಹಚ್ಚಿದರು. ಚಂದಾದಾರರಿಗೆ ಸ್ಟಾಂಪ್ ಹಚ್ಚುವುದು, ಅಂಚೆಗೆ ಹಾಕುವುದು, ನಿಧಾನವಾಗಿ ಇವರ ಸಾಹಿತ್ಯ ಪರಿಚಾರಿಕೆಯ ಕಾರ್ಯ ಅರ್ಥವಾಗುತ್ತಾ ಹೋಯಿತು. ಇವರ ಮೇಲೆ ನನಗೂ ನಂಬಿಕೆ ಬಂತು. ನಾವು ನಾಲ್ಕು ಜನ ಇದ್ದದ್ದು ಒಂದೇ ಕೊಠಡಿಯಲ್ಲಿ. ಮೊದಲೇ ಹಿಂದು ಮುಂದು ತಿರುಗುವುದು ಅಲ್ಲಿ ಕಷ್ಟವಾಗುತ್ತಿತ್ತು. ಇವರ ಪುಸ್ತಕಗಳು ಒಂದು ಕಡೆಯಾದರೆ, ಆಗಾಗ ಪುಸ್ತಕದ ಅಂಗಡಿಗೆ, ಕಾಲೇಜಿನ ಪುಸ್ತಕಗಳನ್ನು ಕೊಡಲು, ಕಟ್ಟುಕಟ್ಟು ಪುಸ್ತಕಗಳು ತಂದಿಡುತ್ತಿದ್ದರು. ಹೇಗೋ ನಿಭಾಯಿಸಿದೆವು.

ಇವರಿಗೆ ಮೊದಲಿನಿಂದಲು ನಿದ್ದೆ ಕಡಿಮೆ. ನನಗೆ ನಿದ್ದೆ ಸ್ವಲ್ಪ ಹೆಚ್ಚು. ಕಾಲೇಜು ಓಡಾಟದ ಜೊತೆಗೆ ಮನೆಗೆಲಸ ಬೇರೆ ಸೇರಿಕೊಳ್ಳುತ್ತಿತ್ತು. ಆಯಾಸವಾಗುತ್ತಿತ್ತು. ಬೆಳಗಿನ ಜಾವವೇ ಇವರು ಎದ್ದು ಮಾಡುವ ಸದ್ದಿನಿಂದ ನಿದ್ದೆ ಎಲ್ಲಿ ಬರಬೇಕು? ಇವರು ಸ್ನಾತಕೋತ್ತರ ಕನ್ನಡ ಎಂ.ಎ. ತರಗತಿಗೆ ಪಾಠ ಹೇಳಲು ಪ್ರಾರಂಭಿಸಿದ ಮೇಲಂತೂ ನನ್ನ ನಿದ್ದೆ ಕಥೆ ಮುಗಿಯಿತು. ಮುಂಜಾನೆ ಮೂರು ನಾಲ್ಕು ಗಂಟೆಗೆ ಎದ್ದು ಅಧ್ಯಯನ ಪ್ರಾರಂಭಿಸುತ್ತಾರೆ. ದೀಪ ಹಾಕುತ್ತಾರೆ. ಜೊತೆಗೆ ಪ್ಲಾಸ್ಟಿಕ್ ಕವರುಗಳಲ್ಲಿಟ್ಟಿದ ಪೇಪರುಗಳನ್ನು ತೆಗೆಯುವ ಮುರಮುರ ಸದ್ದು ಬೇರೆ. ಆ ಶಬ್ದಕ್ಕೆ ಎಚ್ಚರವಾದ ಮೇಲೆ ನಿದ್ದೆ ಬರುತ್ತಿರಲಿಲ್ಲ. ಇದಕ್ಕಾಗಿ ಎಷ್ಟೋ ಬಾರಿ ಜಗಳವಾಡಿದ್ದೇನೆ, ಕೂಗಾಡಿದ್ದೇನೆ, ಏನೂ ಪ್ರಯೋಜನವಾಗಲಿಲ್ಲ. ಇಂದಿಗೂ ಈ ಶಬ್ದ ನಿಂತಿಲ್ಲ. ಈಗೀಗ ಅದೇ ನನಗೆ ಜೋಗುಳವಾಗಿಬಿಟ್ಟಿದೆ. ನನ್ನ ನಿದ್ದೆ ನನಗೆ, ಅವರ ಕೆಲಸ ಅವರಿಗೆ.

"ಕನ್ನಡ ಸಂಘ"ದ ಎರಡನೆಯ ಪುಸ್ತಕ "ಕ್ರಿಸ್ತಾಂಜಲಿ"ಯನ್ನು ಪ್ರಕಟಿಸಿದಾಗ ಒಂದು ಘಟನೆ ನಡೆಯಿತು. ಅದಕ್ಕೆ ಒಂದು ವಲಯದಿಂದ ಪ್ರತಿಭಟನೆ ಬಂತು. ಇವರ ಕೆಲಸ ಹೋಗುವ ಪರಿಸ್ಥಿತಿ ಉಂಟಾಯಿತು. ಜೊತೆಗೆ ಪುಸ್ತಕದ ಪ್ರೆಸ್‌ಬಿಲ್ ಕೊಡಬೇಕಿತ್ತು. ಆಗ ಇದರಲ್ಲಿ ನನ್ನನ್ನು ಸಿಕ್ಕಿಸಿದರು. ಅಷ್ಟು ಹಣ ಇವರ ಬಳಿ ಇರಲಿಲ್ಲ. ನನ್ನನ್ನು ಪುಸಲಾಯಿಸಿದರು. ಕೊನೆಗೆ ಒಪ್ಪಿಸಿದರು. ನನ್ನ ಚಿನ್ನದ ಬಳೆಗಳನ್ನು ಮನೆಯಲ್ಲಿ ಗೊತ್ತಿಲ್ಲದೆ ಗಿರವಿ ಇಡಲು ಪ್ರಯತ್ನಿಸಿದರು. ಸಾಧ್ಯವಾಗಲಿಲ್ಲ. ಕೊನೆಗೆ ಆಗ ಇವರ ಸಹೋದ್ಯೋಗಿಯಾಗಿದ್ದ ಸನತ್ಕುಮಾರ ಶಾಸ್ತ್ರಿಗಳನ್ನು ಹಿಡಿದು, ವಿಲ್ಸನ್ ಗಾರ್ಡನ್‌ನ ಕರ್ನಾಟಕ ಬ್ಯಾಂಕಿನಲ್ಲಿ ಅವನ್ನು ಅಡಪಿಟ್ಟು ಹಣ ಪಡೆದರು. ಪ್ರೆಸ್‌ಬಿಲ್ ಕೊಟ್ಟರು. ಇದನ್ನು ಯಾರಿಗೂ ಹೇಳಕೂಡದೆಂದು ಬೇರೆ ಹೇಳಿದರು. ಟಿ.ಎನ್. ಸೀತಾರಾಮ್ ಅವರ "ಆಸ್ಫೋಟ" ಪುಸ್ತಕವನ್ನು ಪ್ರಕಟಿಸುವಾಗ, ಮತ್ತೆ ಹಣದ ಕೊರತೆ ಎದುರಾಯಿತು. ಹಿಂದೆ ಬಿಡಿಸಿಕೊಂಡು ಬಂದ ಬಳೆಗಳು ಮತ್ತೆ ಬ್ಯಾಂಕಿಗೆ ಹೋದವು. ಈ ಬಾರಿ ಈ ಕೆಲಸವನ್ನು ಮಾಡಿಕೊಟ್ಟವರು ಸಹೋದ್ಯೋಗಿಯಾಗಿದ್ದ ಭಾಸ್ಕರಶರ್ಮರು. ನಮ್ಮ ಅತ್ತೆಮಾವಂದಿರಿಂದ ಈ ವಿಷಯವನ್ನು ಮುಚ್ಚಿಟ್ಟರು. ಅವರಿಗೆ ಗೊತ್ತೇ ಆಗಲಿಲ್ಲ.

ನನಗೆ ಇವರು ಡಾಕ್ಟರ್ ಅನ್ನಿಸಿಕೊಳ್ಳಬೇಕು. ಸೂಟು–ಬೂಟು ಹಾಕಿಕೊಂಡು ಕಾಲೇಜಿಗೆ ಹೋಗಬೇಕು ಎಂದು ಆಸೆ. ಆದರೆ ಇವರು ಅದಕ್ಕೆಲ್ಲಾ ಜಗ್ಗಲಿಲ್ಲ. ನನ್ನ ಆಸೆಗಳು ಸೋತು ಹೋದವು. ಮೊದಮೊದಲು ಪ್ರಗತಿಶೀಲ ಸಾಹಿತ್ಯವನ್ನು ಕುರಿತು ಡಾಕ್ಟರೇಟ್ ಮಾಡಬೇಕೆಂದು ಉತ್ಸಾಹದಿಂದ ಮಾಹಿತಿಯನ್ನು, ಪುಸ್ತಕಗಳನ್ನು ಕೂಡಿಸಿದರು. ಕಾಲೇಜಿನ ಕೆಲಸ, ಕನ್ನಡ ಸಂಘದ ಕೆಲಸ ಹೆಚ್ಚಿದಂತೆಲ್ಲಾ ಇದನ್ನು ಪಕ್ಕಕ್ಕೆ ಸರಿಸಿದರು. ಕೊನೆಗೂ ಡಾಕ್ಟರ್ ಆಗಲಿಲ್ಲ. ಇವರಿಗೆ ಮಾರ್ಗದರ್ಶಕರಾಗಿದ್ದ, ಪೂಜ್ಯರಾದ ಡಾ॥ ಜಿ.ಎಸ್. ಶಿವರುದ್ರಪ್ಪ ಪದೇ ಪದೇ ಫೋನ್ ಮಾಡಿ ವಿಚಾರಿಸುತ್ತಿದ್ದರು. ನನಗೂ ಒಮ್ಮೆ ಹೇಳಿದರು. ಪ್ರಯೋಜನವಾಗಲಿಲ್ಲ. ಈ ವಿಷಯದಲ್ಲಿ, ಈ ಆಸಾಮಿ ಮಾತ್ರ ಕಲ್ಲುಬಂಡೆಯಾಗಿದ್ದರು. ಯಾವುದಾದರೂ ಕೆಲಸ ಹಚ್ಚಿಕೊಂಡರೆ ಮುಗಿಯಿತು, ತಮ್ಮ ಸ್ವಂತ ಕೆಲಸವನ್ನು ಮಾಡಿಕೊಳ್ಳುವುದಿಲ್ಲ. ನನಗೀಗ ಒಂದು ಮಾತು ನೆನಪಿಗೆ ಬರುತ್ತದೆ. ನಮ್ಮ ಮದುವೆಗೆ ಬಂದಿದ್ದ ಜಿ.ಪಿ. ರಾಜರತ್ನಂ ಅವರು ಆಶೀರ್ವಾದ ಮಾಡುತ್ತಾ ಕೊನೆಯಲ್ಲಿ ನಮ್ಮವರಿಗೆ "ಈ ಸರಸ್ವತಿ ಬಂದರು ಅಂತ, ಆ ಸರಸ್ವತಿಯನ್ನು ಬಿಡಬೇಡ" ಎಂದು ತಮಾಷೆ ಮಾಡಿದ್ದರು. ಇವರು ಇಬ್ಬರನ್ನೂ ಕೈಬಿಡಲಿಲ್ಲ. ಆದರೆ ಡಾಕ್ಟರ್ ಆಗಲಿಲ್ಲ.

ನನ್ನ ದೊಡ್ಡಮಗ ಸುಗತನಿಗೆ ನಾನು ತುಂಬು ಗರ್ಭಿಣಿ. ನಾನು ಸೆಂಟ್ ಮಾರ್ಥಾಸ್ ಆಸ್ಪತ್ರೆ ಸೇರುವಾಗಲೂ ಇವರು ಜೊತೆಯಲ್ಲಿರಲಿಲ್ಲ. ಈ ಸಂದರ್ಭದಲ್ಲಿ ಇವರು ನನ್ನ ಜೊತೆಯಲ್ಲಿರಲಿ ಎಂಬ ಆಸೆ. ಆದರೆ ಕೈಗೇ ಸಿಕ್ಕುತ್ತಿರಲಿಲ್ಲ. ನಾನು ಆಸ್ಪತ್ರೆಯಲ್ಲಿದ್ದಾಗ ಒಂದು ದೊಡ್ಡ ಕವರ್‌ನಲ್ಲಿ ಹಣ್ಣುಗಳನ್ನು, ಹೂಗುಚ್ಛವನ್ನು ಹಿಡಿದುಕೊಂಡು ಬಂದರು. ಅದನ್ನು ಒಂದು ಪಕ್ಕದಲ್ಲಿ ಇರಿಸಿದರು. ಅದನ್ನು ನೋಡಿ ನನಗೆ ಎಲ್ಲಿಲ್ಲದ ಸಂತೋಷ. ನನ್ನ ಮಗುವಿನ ಆರೋಗ್ಯ ವಿಚಾರಿಸಿಕೊಂಡರು. ಇಂದು ಸೂರ್ಯ ಪಶ್ಚಿಮದಲ್ಲಿ ಹುಟ್ಟಿರಬೇಕು ಅಂದುಕೊಂಡೆ. "ಹೋಗುವಿರಂತೆ, ಕುಳಿತುಕೊಳ್ಳಿ" ಎಂದೆ. ಎದ್ದುನಿಂತು, ಪಕ್ಕದಲ್ಲಿ ಇರಿಸಿದ್ದ

ಹಣ್ಣುಗಳನ್ನು, ಹೂಗುಚ್ಛವನ್ನು ಕೈಗೆತ್ತಿಕೊಂಡರು. ನನಗೆ ಏನೆಂದು ಅರ್ಥವಾಗಲಿಲ್ಲ. "ನನ್ನ ಗೆಳೆಯನಿಗೆ ಅಪಘಾತವಾಗಿದೆ. ಅವನನ್ನು ವಿಚಾರಿಸಲು, ಅವನ ಕಡೆಯವರು ಯಾರೂ ಇಲ್ಲ, ನಿನಗಾದರೆ ಅನೇಕರು ಬರುತ್ತಾರೆ, ವಿಚಾರಿಸುತ್ತಾರೆ. ಬೇಕಾದ್ದನ್ನು ತಂದು ಕೊಡುತ್ತಾರೆ. ಈಗ ಅವನಿಗೆ ಧೈರ್ಯ ತುಂಬುವುದು ಮುಖ್ಯ. ಇದ್ದವರಿಗೆ ತಂದುಕೊಡುವುದು ಮುಖ್ಯವಲ್ಲ. ಯಾರೂ ಇಲ್ಲದವರಿಗೆ ತಂದುಕೊಡುವುದು ಮುಖ್ಯ" ಎಂದು ಹೇಳಿ ಹಣ್ಣನ್ನು, ಹೂವನ್ನು ಎತ್ತಿಕೊಂಡು ಹೋದರು. ನಾನು ಬೇಸರದಿಂದ ಸಪ್ಪಗಾದೆ. ಪಕ್ಕದಲ್ಲಿದ್ದ ನನ್ನ ತಂದೆ ಅವರ ಮಾತನ್ನೇ ಸಮರ್ಥಿಸಿದರು. ಅವರು ಎಂದೂ ಅಳಿಯನನ್ನು ಬಿಟ್ಟುಕೊಡುತ್ತಿರಲಿಲ್ಲ. ಇಂದಿಗೂ ನನ್ನ ತಮ್ಮಂದಿರಿಗೆ ಇವರನ್ನು ಕಂಡರೆ ಎಲ್ಲಿಲ್ಲದ ಗೌರವ. ಅವರಿಗೆ ಮದುವೆ-ಮಕ್ಕಳಾಗಿದ್ದರೂ ಇವರ ಮುಂದೆ ನಿಂತು ಗಟ್ಟಿಯಾಗಿ ಮಾತನಾಡುವುದಿಲ್ಲ. ನನ್ನ ತಂಗಿಯರಿಗಂತೂ ಅತ್ಯಂತ ಪ್ರೀತಿಪಾತ್ರರಾದ ಭಾವ.

ಶ್ರೀಮತಿ ಪ್ರತಿಭಾ ನಂದಕುಮಾರ್ ಅವರು ಫೋನ್ ಮಾಡಿದರೆ "ಹೇಗಿದ್ದಾರೆ ನಿಮ್ಮ ಶ್ರೀರಾಮಚಂದ್ರ ಮೇಡಂ? ಮನೆಯಲ್ಲಿದ್ದಾರಾ? ನೀವು ಹೇಗಿದ್ದೀರಾ?" ಎಂದು ಕೇಳುತ್ತಾರೆ. ಈ ಶ್ರೀರಾಮಚಂದ್ರನಿಗೂ ಕೋಪ ಬರುತ್ತೆ, ಮನೆಯ ಇರುಸು-ಮುರುಸುಗಳಿಗೆ, ಹಣದ ಮುಗ್ಗಟ್ಟಿದ್ದಾಗ ಒದ್ದಾಡುತ್ತಾರೆ ಎಂದು ಹೊರಗಿನವರಿಗೆ ಗೊತ್ತಾಗುವುದಿಲ್ಲ. ಇವರಿಗೆ ಅತಿಯಾದ ಕೋಪ ಬಂದಾಗ, ದುಃಖವಾದಾಗ ಊಟ-ತಿಂಡಿ ಬಿಟ್ಟು, ಮೌನವಾಗಿ ಬೋರಲು ಮಲಗಿಬಿಡುತ್ತಾರೆ. ಆಗ ಮಾತನಾಡಿಸಿದರೆ ಸಿಡಿಮಿಡಿಗೊಳ್ಳುತ್ತಾರೆ. 'ಅದೇನು ಹೇಳಿ' ಎಂದು ಎಷ್ಟು ಕೇಳಿದರೂ ಬಾಯಿ ಬಿಡುವುದಿಲ್ಲ. ಮಂಕಾಗಿ ಕುಳಿತುಬಿಡುತ್ತಾರೆ. ಏನು ನಡೆಯಿತು ಎಂದು ಒತ್ತಾಯಿಸಿದರೂ ಉತ್ತರವಿರಲ್ಲ.

ಮನೆಯ ಹಣಕಾಸಿನ ವಿಚಾರದ ಬಗ್ಗೆ, ಮಕ್ಕಳಿಗೆ ಹಣ ಕೊಡುವ ಬಗ್ಗೆ ಲೆಕ್ಕಾಚಾರ ಹೆಚ್ಚು. ಆದರೆ ಊಟ-ತಿಂಡಿ ವಿಚಾರದಲ್ಲಿ ಧಾರಾಳ. ತುಂಬಾ ಅಚ್ಚುಕಟ್ಟು. ಒಡವೆ ವಸ್ತ್ರದಲ್ಲಿ ಬಿಗಿಪಟ್ಟು. ಇಷ್ಟು ವರ್ಷಗಳಲ್ಲಿ ನನ್ನ ಜೊತೆಯಲ್ಲಿ ಯಾವುದೇ ಚಿನ್ನದಾಭರಣಗಳ ಅಂಗಡಿಗೆ ಬಂದಿಲ್ಲ. ನನಗೆ, ನನ್ನ ಮನೆ ಸದಾ ಅಚ್ಚುಕಟ್ಟಾಗಿರಬೇಕೆಂಬ ಹುಚ್ಚು. ಇವರಿಗೆ ಊಟ-ಉಪಚಾರದ ಬಗ್ಗೆ ಒಲವು. ಆಗಾಗ ಮೂರ್ತಿರಾಯರ 'ದಿವಾನಖಾನೆಯ ಅಂದಚೆಂದ' ಪ್ರಬಂಧವನ್ನು ಎತ್ತಿಕೊಂಡು ಛೇಡಿಸುತ್ತಾರೆ. "ನೀನು ಹಿಂದಿನ ಜನ್ಮದಲ್ಲಿ ಯಾವುದೋ ಅರಮನೆಯಲ್ಲಿ ಕೆಲಸದವಳಾಗಿದ್ದಿರಬೇಕು" ಎಂದು ತಮಾಷೆ ಮಾಡುತ್ತಾರೆ. ಮನೆಯನ್ನು, ಮಕ್ಕಳನ್ನು ಚೆನ್ನಾಗಿ ಇಟ್ಟುಕೊಳ್ಳಬೇಕು, ಇದನ್ನು ನೋಡಿದವರು ಮೆಚ್ಚಬೇಕು ಎಂಬುದು ನನ್ನ ಹಂಬಲ. ಇವರಿಗೆ ಮನೆಯ ಅಚ್ಚುಕಟ್ಟಿಗಿಂತ, ಊಟ-ತಿಂಡಿ ಅಚ್ಚುಕಟ್ಟು ಮುಖ್ಯ. ಎಲ್ಲರನ್ನೂ ಹೊಂದಿಕೊಂಡು ಹೋಗಬೇಕೆನ್ನುವ ಮನೋಭಾವ. ಮಕ್ಕಳ ಬಗ್ಗೆ ಉದಾರ ನೀತಿ. ನನಗೆ ನನ್ನ ಮಕ್ಕಳು ಡಾಕ್ಟರ್ ಆಗಬೇಕು, ಇಂಜಿನಿಯರ್ ಆಗಬೇಕೆಂದು ಆಸೆ. ನನ್ನ ನಾದಿನಿಯರ ಮಕ್ಕಳು ಆ ಕಡೆ ಹೆಜ್ಜೆ ಹಾಕಿದ್ದರು. ಆದರೆ ಇವರಿಗೆ, ಮಕ್ಕಳು ಅದೇ ಓದಬೇಕು, ಇದೇ ಓದಬೇಕೆಂಬುದಿಲ್ಲ. ಅವರ ಆಸಕ್ತಿ ಕ್ಷೇತ್ರಗಳನ್ನು ಅವರೇ ಆರಿಸಿಕೊಳ್ಳಲಿ ಎಂಬ ಧೋರಣೆ. ಸೊಸೆಯಂದಿರ ಆಯ್ಕೆಯಲ್ಲೂ ಅಡ್ಡಿಪಡಿಸಿದವರಲ್ಲ. ಮಕ್ಕಳ ಕೆಲಸ-ಸಂಬಳ ಬಗ್ಗೆಯೂ ವಿಚಾರಿಸಿದವರಲ್ಲ. ನಾನು, ಅದನ್ನು ಕೇಳಿ, ಇದನ್ನು ಕೇಳಿ ಎಂದಾಗಲೆಲ್ಲಾ

‘ಬುದ್ಧಿಯಿದ್ದರೆ ಬದುಕಿಕೊಳ್ಳುತ್ತಾರೆ, ಇಲ್ಲದಿದ್ದರೆ ಬೀದಿಗೆ ಬೀಳ್ತಾರೆ’ ಎಂದು ಹೇಳಿ ಸುಮ್ಮನಾಗುತ್ತಿದ್ದರು. ಮಕ್ಕಳಿಗೆ ಒಂದು ಹಂತದವರಿಗೆ ಮಾತ್ರ ಮಾರ್ಗದರ್ಶನ ಅಗತ್ಯ. ಅವರಾಗಿಯೇ ಕೇಳಿದಾಗ, ಹೀಗಲ್ಲ ಹಾಗೆ ಎಂದು ಹೇಳಬೇಕು, ನಮ್ಮ ನಂಬಿಕೆಗಳು, ಸಂಪ್ರದಾಯಗಳು, ನಡೆ-ನುಡಿಗಳು ಮಕ್ಕಳಿಗೆ ಭಾರವಾಗಬಾರದು. ತಲೆಮಾರಿನ ಅಂತರವನ್ನು ನಾವು ಅರಿತುಕೊಳ್ಳಬೇಕು. ಅವರ ಬದುಕನ್ನು ಅವರೇ ರೂಪಿಸಿಕೊಳ್ಳಬೇಕೆಂದು ದೊಡ್ಡ ಉಪದೇಶವನ್ನೇ ಕೊಟ್ಟುಬಿಡುತ್ತಾರೆ.

ಇನ್ನೊಂದು ಸಂಗತಿಯನ್ನು ಹೇಳದಿದ್ದರೆ ನನ್ನ ಮನಸ್ಸು ತಡೆಯುವುದಿಲ್ಲ. ಈಗಲೂ ಈ ವಿಷಯದ ಬಗ್ಗೆ ತಮಾಷೆ ಮಾಡುತ್ತೇನೆ. ಇದು ಹೊಟ್ಟೆಯುರಿಯ ಮಾತಲ್ಲ, ಪ್ರೀತಿಯ ಮಾತು. ನಾನು ಆಗಾಗ ಇವರನ್ನು ‘ನೀವು ರಾಜಾಧಿರಾಜರು, ನಾನು ನಿಮಗೆ ಮೂರನೆಯ ಹೆಂಡತಿ’ ಎಂದು ಛೇಡಿಸುತ್ತೇನೆ. ಮೊದಲನೆಯದು ಇವರಿಗೆ ಉಸಿರಾಟವಾಗಿದ್ದ ‘ಕನ್ನಡ ಸಂಘ’, ಎರಡನೆಯದು ಸದಾ ಸ್ಕೂಟರ್ ಹಿಂದೆ ಬೆನ್ನಿನ ಮೇಲೆ ಕೈಹಾಕಿಕೊಂಡು ಹೋಗುತ್ತಿದ್ದ ಪ್ರಾಣಸ್ನೇಹಿತ ರಾಘವೇಂದ್ರ ರಾವ್, ಮೂರನೆಯವಳು ನಾನು. ನಿವೃತ್ತರಾದ ಮೇಲೆ ‘ಕನ್ನಡ ಸಂಘ’ದ ಸಂಪರ್ಕ ಇಲ್ಲವಾಗಿದೆ. ಒಂದು ಅಪಘಾತದಲ್ಲಿ ಕಾಲಿಗೆ ದೊಡ್ಡ ಪೆಟ್ಟು ಬಿದ್ದಿದ್ದರಿಂದ, ಮಕ್ಕಳು ಸ್ಕೂಟರ್ ಮಾರಿಸಿದ್ದಾರೆ. ಈಗೀಗ ಮೊದಲಿಗಿಂತ ಸ್ವಲ್ಪ ಹೆಚ್ಚು ಕಾಲ ಮನೆಯಲ್ಲಿರುತ್ತಾರೆ. ರಾಘು ಮನೆತನದ ಬಗ್ಗೆ ನಮಗೆಲ್ಲಾ ಅಪಾರವಾದ ಪ್ರೀತಿ. ಇದು ಅಂದಿನಿಂದ ಇಂದಿನವರೆಗೂ ಉಳಿದುಕೊಂಡು ಬಂದಿದೆ. ರಾಘು ಅಕ್ಕಂದಿರು, ತಮ್ಮಂದಿರಾದ ಮಾಧವರಾವ್, ವೆಂಕಟೇಶಮೂರ್ತಿಗಳು, ನಮ್ಮ ಕುಟುಂಬದ ಸದಸ್ಯರೇ ಆಗಿಬಿಟ್ಟಿದ್ದಾರೆ. ನಿರುಪಮಾ, ಮನು ಮತ್ತು ಸೊಸೆ ರುಚಿಕಾ ಬಂದ ಮೇಲೂ ನಮ್ಮ ಮನೆತನಗಳ ಬೆಸುಗೆ ಗಟ್ಟಿಯಾಗಿದೆ. ಇವರ ಮತ್ತು ರಾಘು ಗೆಳೆತನ ಸಾಹಿತ್ಯವಲಯದಲ್ಲಿ ಒಂದು ಅಚ್ಚರಿ.

ಸಂಸಾರದಲ್ಲಿ ಹೆಚ್ಚು ಕಡಿಮೆಯಾಗುವುದು ಸಹಜ. ಬದುಕಿನಲ್ಲಿ ಹೊಂದಾಣಿಕೆಯನ್ನು ಮಾಡಿಕೊಳ್ಳುತ್ತಾ ಸಾಗುವುದು ಮುಖ್ಯ. ಸಂಸಾರದಲ್ಲಿ ಒಂದು ಕೊರತೆ ನಿವಾರಣೆಯಾದಂತೆ, ಇನ್ನೊಂದು ಕೊರತೆ ಎದುರಾಗುತ್ತಲೇ ಇರುತ್ತದೆ. ಇದು ಇದ್ದದ್ದೆ. ಮುಳುಗದೆ ಮುಂದೆ ಸಾಗುವುದೇ ಬದುಕು.

❑

# ಆತ್ಮೀಯ ಗೆಳೆಯ – ರಾಜು

● *ಎಚ್.ಆರ್. ರಾಮಕೃಷ್ಣರಾವ್*

೧೫ ಜುಲೈ ೧೯೬೯, ಬೆಂಗಳೂರು ನಗರದಲ್ಲಿ ಹೊಸದೊಂದು ಕಾಲೇಜು, ಹಾಲಿನ ಡೈರಿ ಸಮೀಪದ ಸುದ್ದಗುಂಟನ ಪಾಳ್ಯದ ಸೆರಗಿನಲ್ಲಿ, ಪ್ರಾರಂಭವಾದ ದಿನ. ದೊಡ್ಡ ಸಮಾರಂಭವೇನಲ್ಲ. ಶುಭ್ರವಾದ ಬಿಳಿಯ 'ಕೊಸ್ಯಾಕ್'ಗಳನ್ನು ಧರಿಸಿ ಹಂಸಗಳಂತೆ ಅತ್ತಿಂದಿತ್ತ ಸಡಗರದಿಂದ ಓಡಾಡುತ್ತಿದ್ದ ಹಿರಿಯ, ಕಿರಿಯ, ಪಾದ್ರಿಗಳು! ಒಂಬತ್ತು ಜನ ಸೂಟ್‌ಧಾರಿಗಳು, ಸಾಧಾರಣ ಉಡುಗೆಯಲ್ಲಿದ್ದ ಸುಮಾರು ಹತ್ತುಜನ ಬೋಧಕೇತರ ಸಿಬ್ಬಂದಿ ಇದ್ದ, ಪುಟ್ಟ ಸಮಾರಂಭ.

ನನ್ನ ಪಕ್ಕದಲ್ಲಿ ನಿಂತಿದ್ದ, ಸುಮಾರು ೩೩ರ ಪ್ರಾಯದ ಗೌರವ ವರ್ಣದ ಸೂಟುಧಾರಿ, "ನನ್ನ ಹೆಸರು ಸನ್ನಿ ತಾರಪ್ಪನ್. ಈಗ ಬರುತ್ತಿರುವವರು ಡಾ॥ ರೆ.ಫಾ. ಥಿಯೋಫೇನ್. ಅವರು ಕ್ರೈಸ್ಟ್ ಕಾಲೇಜು ಆಡಳಿತ ವರ್ಗದ ಡೈರೆಕ್ಟರ್ (ಅಧ್ಯಕ್ಷರು). ಈ ಫಾದರ್ಸ್ ಎಲ್ಲಾ ನನಗೆ ಗೊತ್ತು" ಎಂದು ನಗುತ್ತಾ ಪರಿಚಯ ಮಾಡಿಕೊಂಡರು. ಮಾತುಕತೆ ಎಲ್ಲ ಇಂಗ್ಲಿಷ್‌ನಲ್ಲಿ. ಆಗೊಮ್ಮೆ ಈಗೊಮ್ಮೆ ಮಲೆಯಾಳಂ ಶಬ್ದಗಳು ಮಾತಿನ ಮಧ್ಯೆ ನುಸುಳುತ್ತಿದ್ದರೂ ಕನ್ನಡದ ಸೊಲ್ಲು ಎಲ್ಲಿಯೂ ಇರಲಿಲ್ಲ.

ಲೋಬಾನದ ಹೊಗೆ ಹಾಕಿ, ಪವಿತ್ರ ನೀರನ್ನು ಎಲ್ಲೆಡೆ ಚಿಮುಕಿಸಿದ ನಂತರ ಉದ್ಘಾಟನೆ ಕಾರ್ಯಕ್ರಮ ಸಮಾಪ್ತವಾಯಿತು. ಇನ್ನೂ ತರಗತಿಯ ಕೋಣೆಗಳಲ್ಲಿ ಕಟ್ಟಿದ್ದ ನೀರು ಆರಿರಲಿಲ್ಲ. ಅಧ್ಯಾಪಕರ ಕೋಣೆಗಳು ಸಿದ್ಧವಾಗಿರಲಿಲ್ಲ. ಬೋಧನಾ ಸಿಬ್ಬಂದಿಯವರು ಕುಳಿತುಕೊಳ್ಳಲು ಒಂದನೆ ಮಹಡಿಯ ನೈಋತ್ಯ ದಿಕ್ಕಿನ ಕೊನೆಯಲ್ಲಿದ್ದ ಒಂದು ಕೋಣೆ ಮಾತ್ರ ಸಜ್ಜಾಗಿತ್ತು. ನಾವು ಒಂಬತ್ತು ಜನ ಅಲ್ಲಿ ಕುಳಿತಿರುವಂತೆ ಆಫೀಸ್ ಮುಖ್ಯಸ್ಥ ಮಿ॥ ರಾಬರ್ಟ್ಸ್ ತಿಳಿಸಿದರು. ಎಲ್ಲರೂ ಹೊಸಬರೆ. ಒಬ್ಬರ ಪರಿಚಯ ಇನ್ನೊಬ್ಬರಿಗಿಲ್ಲ.

ಮೇಲೆ ಬಿದ್ದು ಮಾತಾಡಲು ಏನೋ ಮುಜುಗರ ಅರಳು ಹುರಿದಂತೆ ಮಾತನಾಡುತ್ತಿದ್ದ ಒಬ್ಬರೆಂದರೆ, ಸನ್ನಿ ತಾರಪ್ಪನ್!

ಪ್ರಾಂಶುಪಾಲರಾದ ರೆ॥ ಫಾ॥ ಮಾಣಿ ಗೈಲ್ಸ್ ಅವರನ್ನು ನಾನು ಜೂನ್ ತಿಂಗಳಿನಲ್ಲಿ ಸಂದರ್ಶನದ ಸಮಯದಲ್ಲಿ ನೋಡಿದ್ದೆ. ನಂತರ, ವಿಜ್ಞಾನ ವಿಭಾಗಗಳ ಪ್ರಯೋಗಾಲಯಗಳನ್ನು ಸಜ್ಜುಗೊಳಿಸಲು ನೆರವಾಗುವಂತೆ ನನ್ನನ್ನು ಕೇಳಿದ್ದರಿಂದ. ನಾನು ಅವರೊಡನೆ ಅನೇಕ ಬಾರಿ ವಿಜ್ಞಾನಕ್ಕೆ ಸಂಬಂಧಿಸಿದ ವಸ್ತುಗಳನ್ನು ಖರೀದಿಸಲು ಜೊತೆಗೆ ಹೋಗಿದ್ದೆ. ಆಜಾನುಬಾಹು ಹಾಗೂ ಹಿಂದಿ ಚಿತ್ರದ ನಾಯಕ ನಟ ಧರ್ಮೇಂದ್ರನನ್ನು ಹೋಲುತ್ತಿದ್ದ ಅವರನ್ನು ಕಂಡಾಗ ಖುಷಿಯಾಗುತ್ತಿತ್ತು. ನಾವು ಕುಳಿತಿದ್ದ ಕೊಠಡಿಗೆ ಬಂದ ಗೈಲ್ಸ್ ತಮ್ಮ ಪರಿಚಯ ತಿಳಿಸುವಂತೆ ಸೂಚಿಸಿದರು. ಸಂಸ್ಕೃತ ಬೋಧನೆಗೆಂದು ಬಂದಿದ್ದವರು ಶ್ರೀ ಕೆ.ಎಸ್. ನಾಗರಾಜನ್; ಸರ್ಕಾರಿ ಹುದ್ದೆಯಲ್ಲಿದ್ದು ನಿವೃತ್ತರಾಗಿದ್ದವರು. ಫ್ರೆಂಚ್ ಕಲಿಸಲು ಶ್ರೀ ಡಿ. ಬಾಲಸುಬ್ರಮಣ್ಯಂ, ಇಂಗ್ಲಿಷ್ ಕಲಿಸಲು ಶ್ರೀ ಧನಸಿಂಗ್ ಫ್ರಾನ್ಸಿಸ್ ಮತ್ತು ಟಿ.ಎಂ. ಸನ್ನಿ, ತರ್ಕಶಾಸ್ತ್ರಕ್ಕೆ ಶ್ರೀ ಕೆ.ಜೆ. ಈಶ್ವರಯ್ಯ, ಭೌತವಿಜ್ಞಾನಕ್ಕೆ ನಾನು; ಎಚ್.ಆರ್. ರಾಮಕೃಷ್ಣರಾವ್, ಮತ್ತು ಗಣಿತಕ್ಕೆ ಶ್ರೀ ಸನತ್ಕುಮಾರ ಶಾಸ್ತ್ರಿ. ಕೊನೆಯಲ್ಲಿ ಎದ್ದು ನಿಂತವರು ಶ್ರೀ ಸಿ. ಶ್ರೀನಿವಾಸರಾಜು.

ಈ ಪರಿಚಯ ಕಾರ್ಯ ನಡೆಯುತ್ತಿರುವಾಗ ನಾನು ಮನಸ್ಸಿನಲ್ಲಿ ಲೆಕ್ಕ ಹಾಕುತ್ತಿದ್ದದ್ದು ಕನ್ನಡ ಮಾತಾಡಬಲ್ಲವರ ಸಂಖ್ಯೆಯನ್ನು. ರಾಜು ಐದನೆಯವರು ಕನ್ನಡದ ಮೇಷ್ಟ್ರು. ಆಕರ್ಷಕ ವ್ಯಕ್ತಿತ್ವ, ನಗುಮುಖ. ಧರಿಸಿದ್ದ ಕೋಟು ಸ್ವಲ್ಪ ಗಿಡ್ಡದಾಗಿದ್ದು ಅವರ ಸಹಜ ಎತ್ತರವನ್ನು ಸ್ವಲ್ಪ ಕಿರಿದಾಗಿಸಿತ್ತು. ಹೊಸದಾಗಿ ಸೇರಿದ್ದವರಲ್ಲಿ ರಾಜು ಮತ್ತು ಶಾಸ್ತ್ರಿ ಸುಮಾರಾಗಿ ಸಮವಯಸ್ಕರು, ಇನ್ನೂ ಮದುವೆ ಆಗಿರದಿದ್ದವರು. ಅವರಿಗಿಂತ ಸ್ವಲ್ಪ ಹೆಚ್ಚು ವಯಸ್ಸಿನವನು ನಾನು. ಮದುವೆಯಾಗಿದ್ದು ಒಂದು ಮಗುವಿನ ತಂದೆ. ನಾಗರಾಜನ್ ಮತ್ತು ಈಶ್ವರಯ್ಯ ವಯಸ್ಸಿನಲ್ಲಿ ತುಂಬಾ ಹಿರಿಯರು. ನಮ್ಮನ್ನು ಹತ್ತಿರ ತಂದದ್ದು ಕನ್ನಡ!

ಅಧ್ಯಾಪಕರ ಕೊಠಡಿಯಲ್ಲಿರುವಾಗ ಎಲ್ಲರೂ ಇಂಗ್ಲಿಷ್‌ನಲ್ಲಿ ಮಾತ್ರ ಸಂಭಾಷಿಸುವುದು ಸಭ್ಯತೆ ಎಂದು ಹಿರಿಯ ಇಂಗ್ಲಿಷ್ ಅಧ್ಯಾಪಕರಾದ ಧನಸಿಂಗ್ ಫ್ರಾನ್ಸಿಸ್ ಸಲಹೆ ನೀಡಿದರು. ಅನೇಕ ಪ್ರಾದೇಶಿಕ ಭಾಷೆಗಳನ್ನಾಡುವ ಅಧ್ಯಾಪಕರು ಒಂದೆಡೆ ಸೇರಿದಾಗ, ಇಂತಹ ಶಿಸ್ತು ಪಾಲಿಸದಿದ್ದರೆ, ನಾವೆಲ್ಲ ಸಣ್ಣ ಸಣ್ಣ ದ್ವೀಪಗಳಾಗಿಬಿಡುತ್ತೇವೆ ಎಂಬುದು ಅವರ ವಾದ. ನಾವೆಲ್ಲ ಸಂತೋಷದಿಂದ ಇದನ್ನು ಒಪ್ಪಿಕೊಂಡೆವು. ಇದರಿಂದಾಗಿ ಕನ್ನಡ ಬಲ್ಲ ನಾವು ಐದು ಜನ ಹೆಚ್ಚು ಮಾತಾಡುತ್ತಿರಲಿಲ್ಲ. ಇಂಗ್ಲಿಷ್ ಅಧ್ಯಾಪಕರಿರುವ ಕೊಠಡಿಯಲ್ಲಿ, ಅವರೊಡನೆ ಇಂಗ್ಲಿಷ್‌ನಲ್ಲಿ ಸಂಭಾಷಿಸಲು ಒಂದು ರೀತಿಯ ಹಿಂಜರಿತ. ಸುಮಾರಾಗಿ ಹೆಚ್ಚು ಸಂವಾದದಲ್ಲಿ ಪಾಲ್ಗೊಳ್ಳುತ್ತಿದ್ದದ್ದು ನಾನು ಮತ್ತು ನಾಗರಾಜನ್.

ಕಾಲೇಜು ಪ್ರಾರಂಭವಾದ ನಂತರವೂ ನಮ್ಮಲ್ಲಿ ಒಂದು ರೀತಿಯ ಪರಕೀಯತೆ ಕಾಡತೊಡಗಿತ್ತು. ಎಲ್ಲಕ್ಕೂ ಇಂಗ್ಲಿಷ್ ಬಳಕೆ ಅನಿವಾರ್ಯವಾಗಿತ್ತು. ಅದು ಬಿಟ್ಟರೆ ಮಲೆಯಾಳಂ ಹಾಗೆಯೇ ಕೇಳಿಸುತ್ತಿತ್ತು. ನಮ್ಮ ಪ್ರಿನ್ಸಿಪಾಲ್ ಮಾತಾಡಿದಾಗಲೂ ಅಷ್ಟೇ. ನಮಗೆ ಅವರ ಉಚ್ಚಾರಣೆ ಅರ್ಥವೇ ಆಗುತ್ತಿರಲಿಲ್ಲ. ಸಧ್ಯ, ಯಾರಾದರೂ ಕನ್ನಡದಲ್ಲಿ ಮಾತಾಡಿದರೆ

ಸಾಕಪ್ಪ ಅನ್ನೋ ಸ್ಥಿತಿ. ಸಹಜವಾಗಿಯೇ ಶಾಸ್ತ್ರಿ, ರಾಜು ಮತ್ತು ನಾನು ತುಂಬಾ ಹತ್ತಿರವಾದೆವು. ಮೂವರೇ ಇದ್ದಾಗ ಕನ್ನಡದಲ್ಲಿ ಮಾತಾಡಿಕೊಂಡು ಖುಷಿ ಪಡುತ್ತಿದ್ದೆವು.

ಗೆಳೆಯ ರಾಜು ಅವರೊಂದಿಗಿನ ಆತ್ಮೀಯ ಕ್ಷಣಗಳನ್ನು ನೆನಪಿಸಿಕೊಳ್ಳುವ ಈ ಸಂದರ್ಭದಲ್ಲಿ ಇಷ್ಟೊಂದು ಪೀಠಿಕೆಯ ಅಗತ್ಯ ಇದೆಯೇ ಎಂದು ಓದುಗರಿಗೆ ಅನ್ನಿಸಿದರೆ ಆಶ್ಚರ್ಯವಿಲ್ಲ. ಕ್ರೈಸ್ಟ್ ಕಾಲೇಜು ಕನ್ನಡ ಸಂಘದ ಸಾಧನೆಯ ಉಜ್ವಲ ಬೆಳಕಿನಲ್ಲಿ ರಾಜು ಅವರನ್ನು ಕಂಡು ಮೆಚ್ಚಿದವರಿಗೆ, ಆ ಸಾಧನೆಯ ಹಿಂದಿನ ಮೊದಲ ನಾಲ್ಕು ವರ್ಷಗಳ ಪರಿಚಯ ಇರುವುದಿಲ್ಲ. ಬೆಂಗಳೂರಿನ ಸಂತ ಜೋಸೆಫ್ ಕಾಲೇಜಿನಲ್ಲಿ ಕನ್ನಡದ ಕೆಲಸ ಮಾಡುವುದು ಸುಲಭ. ಅಲ್ಲಿನವರು ಮಂಗಳೂರಿನ ಪಾದ್ರಿಗಳು. ಸೊಗಸಾಗಿ ಕನ್ನಡದಲ್ಲಿ ವ್ಯವಹರಿಸಬಲ್ಲ ಸಮರ್ಥರು. ಕನ್ನಡದ ಏಳಿಗೆಗಾಗಿ ದುಡಿದವರು. ಆದರೆ ಕ್ರೈಸ್ಟ್ ಕಾಲೇಜಿನ ವಾತಾವರಣವೇ ಭಿನ್ನ. ಇಲ್ಲಿನ ಆಡಳಿತ ವರ್ಗ ಕೇರಳದ 'ಕಾರ್ಮೆಲೈಟ್' ಪಾದ್ರಿಗಳು. ಮಲೆಯಾಳಂ ಮಾಧ್ಯಮದಲ್ಲಿ ಓದಿದವರು.. ಇಂತಹ ವಾತಾವರಣದಲ್ಲಿ ನಾವುಗಳು ತುಂಬಾ ಎಚ್ಚರಿಕೆಯಿಂದ ಹೆಜ್ಜೆ ಇಡಬೇಕಾಗಿತ್ತು. ಕನ್ನಡಕ್ಕೆ ನ್ಯಾಯವಾಗಿ ಸಿಗಬೇಕಾದ ಮಾನ್ಯತೆಗಾಗಿ ಜಾಣತನದಿಂದ ಕೆಲಸ ಮಾಡಬೇಕಾಗಿತ್ತು. ಆಗ ಪರಸ್ಪರ ಬೆಂಬಲಿಸಿದವರು ನಾವು ಮೂರು ಜನ.

ನಮ್ಮ, ಅಂದರೆ ಕನ್ನಡದವರ, ಇರುವಿಕೆಯನ್ನು ಗಟ್ಟಿಮಾಡಿಕೊಳ್ಳಲು ಸಂದರ್ಭ, ಬಹುಬೇಗನೆ ತಾನಾಗಿಯೇ ಒದಗಿಬಂತು. ಒಂದು ದಿನ ಬೆಳಗ್ಗೆ, ಪ್ರಾಂಶುಪಾಲರು ಕಾಮನ್ ಸ್ಟಾಫ್‌ರೂಂಗೆ ಬಂದವರು ಆಡಳಿತ ಮಂಡಳಿ ಸಿದ್ಧಪಡಿಸಿದ್ದ ಕಾಲೇಜಿನ ಲಾಂಛನವನ್ನು ತೋರಿಸಿ ಎಲ್ಲರ ಅಭಿಪ್ರಾಯ ಕೇಳಿದರು. ವೃತ್ತದ ನಡುವೆ ಐದು ಶೃಂಗದ ನಕ್ಷತ್ರ, ಅದಕ್ಕೆ ಅಸ್ತಿಭಾರವಾಗಿ ತೆರೆದ ಪುಸ್ತಕ, ಪುಸ್ತಕದಿಂದ ಲಂಬವಾಗಿ ಮಿನುಗುತ್ತಿರುವ ಮೊಂಬತ್ತಿ, ಅದರ ಉಜ್ವಲ ಕಿರಣಗಳು ವೃತ್ತದ ಒಳ ಪರಿಧಿಯನ್ನು ಬೆಳಗಿಸಿದಾಗ ಕಾಣುವುದು ಕಾಲೇಜಿನ ನಾಮಧೇಯ; ಎಡಬದಿಯಲ್ಲಿ ಇಂಗ್ಲಿಷ್ ಅಕ್ಷರಗಳಲ್ಲಿ ಮತ್ತು ಬಲ ಬದಿಯಲ್ಲಿ ಹಿಂದಿ ಅಕ್ಷರಗಳಲ್ಲಿ, ಕೆಳಗೆ ಕಾಲೇಜಿನ ಧ್ಯೇಯಮಂತ್ರ : 'Excellence and Service'.

ಮೊದಲು ಮಾತನಾಡಿದವರು ಫ್ರಾನ್ಸಿಸ್. ಮುಕ್ತ ಕಂಠದಲ್ಲಿ ಅದನ್ನು ಹೊಗಳುತ್ತಾ 'The emblem rightly portrays the true catholic spirit' ಎಂದು ಹೇಳಿದಾಗ ಎಲ್ಲರೂ ಸಮ್ಮತಿಯ ನಗೆ ಸೂಚಿಸಿದರು. ಶಾಸ್ತ್ರಿ ಕೂಡ ಧ್ಯೇಯಮಂತ್ರಕ್ಕೆ ಅನುಗುಣವಾಗಿ ನಾವು ವರ್ತಿಸಿದರೆ 'ಕ್ರೈಸ್ಟ್ ಕಾಲೇಜು ನಗರದಲ್ಲೇ ಏಕೆ, ಇಡೀ ರಾಜ್ಯಕ್ಕೇ ಮಾದರಿ ಕಾಲೇಜಾಗುತ್ತದೆಂದು' ಶ್ಲಾಘಿಸಿದರು. ಆ ವೇಳೆಗಾಗಲೇ ನನಗೂ ಮತ್ತು ಫಾ॥ ಗೈಲ್ಸ್ ಅವರಿಗೂ ಸಾಕಷ್ಟು ಸಲಿಗೆ ಬೆಳೆದಿತ್ತು. ನಾವಿಬ್ಬರೂ ಎರಡು ಬಾರಿ ಮದ್ರಾಸಿಗೆ ಹೋಗಿ ಲೈಬ್ರರಿಗೆ ಪುಸ್ತಕಗಳನ್ನು 'ಚೈನಾ ಬಜಾರಿನಲ್ಲಿ' ಖರೀದಿಸಿದ್ದೆವು. ನಾನು ಏನೂ ಹೇಳದೆ ಸುಮ್ಮನೆ ಮುಗುಳ್ನಕ್ಕದ್ದನ್ನು ಅವರ ಚಾಣಾಕ್ಷ ಕಣ್ಣುಗಳು ಗುರುತಿಸಿದ್ದವು. "How is it Mr. Rao is silent today" ಎಂದು ನನ್ನ ಕಡೆ ತಿರುಗಿ ನಕ್ಕರು. ನಾನು ರಾಜು ಅವರ ಮುಖ ನೋಡಿದೆ. ಅವರ ಮುಖದಲ್ಲೇ ನನಗೆ ಏನು ಹೇಳಬೇಕೆಂಬುದನ್ನು ಅವರು ಸೂಚಿಸಿದ್ದರು. ನಾನು ತುಂಬಾ ವಿನಯದಿಂದ, ಮಿ॥ ಫ್ರಾನ್ಸಿಸ್ ಹೇಳಿದ್ದನ್ನೇ ಸಮರ್ಥಿಸಿ, ಕೊನೆಗೆ "Father, don't you think it is appropriate to

include the name of the college in kannada also? Afterall the college is the state capital" ಎಂದು ಸೂಚಿಸಿದೆ. ಒಂದು ನಿಮಿಷ ಎಲ್ಲೆಡೆ ಮೌನ ಆವರಿಸಿತು. ಅಲ್ಲಿಯೇ ಇದ್ದ ಪಾದ್ರಿ ಒಬ್ಬರು "Oh, that makes the logo cumbersome" ಎಂದು ಗೊಣಗಿದರು. "Linguistic chauinism" ಎಂದು ಯಾರೋ ಗೊಣಗಿದರು. ಫಾ॥ ಜೈಲ್ಸ್ ಮಾತ್ರ ಮೌನ ವಾಗಿದ್ದರು. ತಾವು ತಂದಿದ್ದ ಕರಡನ್ನು ಎತ್ತಿಕೊಂಡು ಕೋಣೆಯಿಂದ ಹೊರನಡೆದರು. ಒಬ್ಬೊಬ್ಬರಾಗಿ ಉಳಿದವರು ಅವರನ್ನು ಹಿಂಬಾಲಿಸಿದರು. ಕೊನೆಗೆ ಉಳಿದವರು ನಾವು ಮೂರು ಜನ ಮಾತ್ರ. "ನಿಮಗ್ಯಾಕೆ ಬೇಕಾಗಿತ್ತು ಈ ಉಸಾಬರಿ? ಇದು ಹೇಳಿ ಕೇಳಿ ಅಲ್ಪಸಂಖ್ಯಾತರು ನಡೆಸೋ ಕಾಲೇಜು. ನಮ್ಮ ಬುಡನೆ ಇನ್ನೂ ಭದ್ರ ಇಲ್ಲ" ಎಂದು ಶಾಸ್ತ್ರಿ ಸ್ವಲ್ಪ ಕೋಪದಿಂದಲೇ ಹೇಳಿದರು. ರಾಜು ಅವರು ಮಾತ್ರ "ನೀವು ಹೇಳಿದ್ದು ಸರಿ. ಕನ್ನಡದಲ್ಲಿ ಹೆಸರು ಬರೆಯುವುದು ಅಥವಾ ಬಿಡುವುದು ಅವರಿಗೆ ಸೇರಿದ್ದು. ನಮ್ಮ ಅಭಿಪ್ರಾಯ ತಿಳಿಸಾಗಿದೆ, ನೋಡೋಣ" ಎಂದು ಸಮಾಧಾನ ಮಾಡಿದರು.

ಘಟನೆ ನಡೆದ ಒಂದು ವಾರದ ನಂತರ ಆಫೀಸ್ ಅಟೆಂಡರ್ ಮಾರ್ಷಲ್ ಡಿಕೂನ ನನ್ನನ್ನು ಮತ್ತು ರಾಜು ಅವರನ್ನು ಪ್ರಿನ್ಸಿಪಾಲ್ ಕರೆಯುತ್ತಾರೆಂದು ತಿಳಿಸಿದ. ಕಣ್ಸನ್ನೆಯಲ್ಲೇ ನಮ್ಮನ್ನು ಕೂಡಲು ತಿಳಿಸಿದ ಫಾ॥ ಜೈಲ್ಸ್ ತಮ್ಮ ಟೇಬಲ್ ಡ್ರಾ ತೆಗೆದು ಕಾಲೇಜಿನ ಲಾಂಛನವನ್ನು ಹೊರತೆಗೆದು "how is this Mr. Rao?" ಎಂದು ಕೇಳಿದರು. ಇಬ್ಬರೂ ಅದನ್ನು ಅಂಗೈಯಲ್ಲಿಟ್ಟುಕೊಂಡು ಕುತೂಹಲದಿಂದ ನೋಡಿದೆವು. ಮುದ್ದಾದ ಅಕ್ಷರಗಳಲ್ಲಿ ಹಿಂದಿಯಲ್ಲಿದ್ದ ಹೆಸರಿನ ಸ್ಥಾನದಲ್ಲಿ "ಕ್ರೈಸ್ಟ್ ಕಾಲೇಜ್" ಎಂದಿತ್ತು. ಸಂತೋಷ ಮತ್ತು ಕೃತಜ್ಞತೆಯಿಂದ "Thank you father" ಎಂದು ಹೇಳಿ ಹೊರಬಂದಾಗ ಯಾವುದೋ ರಾಜ್ಯವನ್ನು ಮತ್ತೆ ಪಡೆದಷ್ಟು ಖುಷಿಯಾಗಿತ್ತು.

ಅದೇ ದಿನ ಮಧ್ಯಾಹ್ನ ೪ ಗಂಟೆಗೆ ಮಾವಳ್ಳಿ ಟಿಫಿನ್ ರೂಂನಲ್ಲಿ ತಿಂಡಿ ತಿನ್ನುತ್ತಾ ನಾವು ಕೆಲಸ ಮಾಡುವ ಕಡೆ ಕನ್ನಡದ ವಾತಾವರಣ ಸೃಷ್ಟಿಸುವ ಬಗೆಯನ್ನು ಚರ್ಚಿಸಿದೆವು. ಮೊದಲನೆಯದು, ಕಾಲೇಜಿನ ಎಲ್ಲಾ ಪಠ್ಯೇತರ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವುದು. ಎರಡನೆಯದು, ರಾಜು ಅವರು ಕನ್ನಡದ ವಿದ್ಯಾರ್ಥಿಗಳಿಗೆ ಅಗತ್ಯ ತರಬೇತಿ ನೀಡಿ ವಿದ್ಯಾರ್ಥಿ ಸಂಘದವರು ನಡೆಸುವ ಕಾರ್ಯಕ್ರಮಗಳಲ್ಲಿ ಕನ್ನಡಕ್ಕೂ ಪ್ರಾತಿನಿಧ್ಯ ಗಿಟ್ಟಿಸುವುದು. ಈ ಮಾತಿನ ನಡುವೆ ನಾನು ಹಠಾತ್ತನೆ "ರಾಜು ಅವರೆ, ನಾನು ೧೯೫೩ರಿಂದ ೧೯೫೭ರ ವರೆಗೆ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ವಿ.ಸೀ ಮತ್ತು ಜಿ.ಪಿ. ರಾಜರತ್ನಂ ಅವರ ಶಿಷ್ಯನಾಗಿದ್ದೆ. ಒಂದು ವರ್ಷ, ರಾಜರತ್ನಂ ನೇತೃತ್ವದ ಕರ್ನಾಟಕ ಸಂಘದ ಕಾರ್ಯದರ್ಶಿಯೂ ಆಗಿದ್ದೆ. ನಾವ್ಯಾಕೆ ಅಂಥದೊಂದು ಸಂಘ ಕಟ್ಟಬಾರದು, ಯೋಚಿಸಿ ನೋಡಿ" ಎಂದು ಸಲಹೆ ಮಾಡಿದೆ. ರಾಜು ಅವರೂ ಅದೇ ಗರಡಿಯಲ್ಲಿ ತಾಲೀಮು ಮಾಡಿದ್ದರೆಂಬುದು ಆಗ ತಿಳಿಯಿತು. ಇಬ್ಬರು ಸಮಾನ ಮನಸ್ಕರು ಒಂದೆಡೆ ಸೇರಿದ ಸಂತೋಷದಲ್ಲಿ ಕಾಫಿ ಕುಡಿದು ಮನೆಗೆ ಹೋದೆವು. ಆಗ ಅಂಕುರಿಸಿದ ಆಸೆ ಕಾರ್ಯರೂಪಕ್ಕೆ ಬರಲು ಸುಮಾರು ಮೂರು ವರ್ಷಗಳೇ ಹಿಡಿದವು.

ಅದೇ ವರ್ಷದ ಅಕ್ಟೋಬರ್‌ನಲ್ಲಿ ಸಂಭವಿಸಿದ ಘಟನೆಯಿಂದಾಗಿ ಕನ್ನಡ ಸಂಘ ಸ್ಥಾಪಿಸಲೇಬೇಕೆಂಬ ನಮ್ಮ ಆಸೆ ಹೆಚ್ಚು ತೀವ್ರವಾಯಿತು. ಕಾಲೇಜು ಪ್ರಾರಂಭವಾದ ನಂತರ ನಡೆದ ಮೊದಲ ಸಾಂಸ್ಕೃತಿಕ ಕಾರ್ಯಕ್ರಮ "ರಾಷ್ಟ್ರೀಯ ಸಂಸ್ಕೃತ ದಿನಾಚರಣೆ". ಮುಖ್ಯ ಅತಿಥಿಗಳನ್ನು ಸ್ವಾಗತಿಸುವ ಕೆಲಸವನ್ನು ಫಾ॥ ಜೈಲ್ಸ್ ನನಗೆ ವಹಿಸಿದ್ದರು. ನೆಲ ಅಂತಸ್ತಿನ ಒಂದು ಕೋಣೆಯಲ್ಲಿ ಸಭೆ ನಡೆಯಿತು. ಕಾರ್ಯಕ್ರಮವೆಲ್ಲ ಇಂಗ್ಲಿಷಿನಲ್ಲಿ. ನಾನು ನನ್ನ ಭಾಷಣದ ಮಧ್ಯೆ ಮುಖ್ಯ ಅತಿಥಿಗಳನ್ನು ಪರಿಚಯಿಸುತ್ತಾ ಕನ್ನಡದ "ಮಾತು ಬೆಳ್ಳಿ ಮತ್ತು ಮೌನ ಬಂಗಾರ" ಎಂದು ಗಾದೆಯನ್ನು ಉದ್ಧರಿಸಿದೆ. ಸಭೆಯಲ್ಲಿದ್ದ ವಿದ್ಯಾರ್ಥಿ ವೃಂದ 'ಹೋsss' ಎಂದು ಕೂಗಿ ಒಂದು ಬಗೆಯ ಅವಹೇಳನ ರೀತಿಯಲ್ಲಿ ಪ್ರತಿಕ್ರಿಯಿಸಿದರು. ನನಗೆ ತುಂಬಾ ಅವಮಾನವಾದಂತಾಯಿತು. ಸಂದರ್ಭದ ಗಾಂಭೀರ್ಯವನ್ನು ಸ್ವಲ್ಪಕಾಲ ಮರೆತು ವಿದ್ಯಾರ್ಥಿಗಳಿಗೆ ಬುದ್ಧಿ ಹೇಳಿದೆ. ಸ್ಥಳೀಯ ಭಾಷೆ, ಸಂಸ್ಕೃತಿ, ಊಟೋಪಚಾರ ಮುಂತಾದವುಗಳನ್ನು ಅರ್ಥಮಾಡಿಕೊಳ್ಳದಿದ್ದರೆ ವಿದ್ಯೆ ಅಪೂರ್ಣ ಎಂದು ಅವರಿಗೆ ತಿಳಿಸುತ್ತಾ "heard melodies are sweet, but unheard are sweeter still" ಎಂದು ಹೇಳಿ, ಕನ್ನಡದಲ್ಲಿ ನಾನು ಹೇಳಿದ ಗಾದೆ ಈ ಅದ್ಭುತ ಇಂಗ್ಲಿಷ್ ಕವಿತೆಯ ಸಾಲುಗಳ ಭಾವಾನುವಾದ ಎಂದು ತಿಳಿಯಹೇಳಿದೆ. ಕಾರ್ಯಕ್ರಮ ಮುಗಿದ ನಂತರ ಕನ್ನಡ ಸಂಘವೊಂದನ್ನು ಸ್ಥಾಪಿಸಿ ಇಲ್ಲಿನ ಸಂಸ್ಕೃತಿಯ ಪರಿಚಯ ಮಾಡಿಸಲೇಬೇಕೆಂಬ ಪಣ ತೊಟ್ಟೆವು.

ವರ್ಷದ ಕೊನೆಯಲ್ಲಿ, ರಾಜು ಅವರು ಸಿದ್ಧವಿದ್ದಲ್ಲಿ, ಅವರನ್ನು ಪೂನಾ ಸಮೀಪದ ಎನ್.ಸಿ.ಸಿ. ಆಫೀಸರ್ ತರಬೇತಿಗೆ ಕಳಿಸುವುದಾಗಿ ಪ್ರಿನ್ಸಿಪಾಲ್ ತಿಳಿಸಿದರು. ರಾಜು ಅವರನ್ನು ಒಪ್ಪಿಕೊಳ್ಳುವಂತೆ ನಾನು ಹುರಿದುಂಬಿಸಿದೆ. ಇದರಿಂದಾಗಿ ವಿದ್ಯಾರ್ಥಿ ಸಮುದಾಯದಲ್ಲಿ ಅವರ ವರ್ಚಸ್ಸು ಹೆಚ್ಚಾಗಿ ಕನ್ನಡದ ವಾತಾವರಣ ಸೃಷ್ಟಿಸುವ ನಮ್ಮ ಆಸೆ ಸುಲಭವಾಗಿ ಕೈಗೂಡಬಹುದೆಂದು ಅವರು ಒಪ್ಪಿಕೊಂಡರು. ಅವರ ಕ್ರೈಸ್ಟ್ ಕಾಲೇಜ್ ಅಧ್ಯಾಪಕ ಜೀವನದಲ್ಲಿ ಇದೊಂದು ಪ್ರಮುಖ ತಿರುವು. ಈ ನಿರ್ಧಾರದಿಂದಾಗಿ ಅವರ ವರ್ಚಸ್ಸು ವೃದ್ಧಿಯಾಯಿತು. ಮುಂದೊಂದು ದಿನ ಅವರ 'ಸೀನಿಯಾರಿಟಿ' ನಿರ್ಧರಿಸುವಾಗ ಈ ನಿರ್ಧಾರವೇ ತೊಡಕಾಗಿ ಅಧ್ಯಾಪಕರಲ್ಲಿ ಕೆಲವರು ಅವರಿಗೆ ವಿರೋಧಿಗಳಾಗಿ ಮನನೋಯಿಸಿದ್ದು ವಿಪರ್ಯಾಸವೇ ಸರಿ!

ಕಾಲೇಜಿನ ಎಲ್ಲ ಚಟುವಟಿಕೆಗಳಲ್ಲಿ ಭಾಗಿಯಾಗುತ್ತಿದ್ದುದರಿಂದಾಗಿ ಕನ್ನಡ ಬಾರದ ಅಧ್ಯಾಪಕರು ಹಾಗೂ ವಿದ್ಯಾರ್ಥಿಗಳು ನಮಗೆ ಹತ್ತಿರವಾದರು. ಅಂತರ ಕಾಲೇಜು ಅಧ್ಯಾಪಕರ ಕ್ರೀಡಾ ಪಂದ್ಯಗಳಲ್ಲಿ ರಾಜು ಬ್ಯಾಡ್‌ಮಿಂಟನ್ ಆಡುತ್ತಿದ್ದರು. ಎನ್.ಸಿ.ಸಿ.ಯಲ್ಲಂತೂ ಕಾಲೇಜಿನ ಕೀರ್ತಿ ಬಹುಬೇಗ ಎಲ್ಲೆಡೆ ಹರಡಿತು. ಕಾಲೇಜಿನ ವಾರ್ಷಿಕೋತ್ಸವದಲ್ಲಿ ಕನ್ನಡ ಗೀತೆಗಳು, ಕಿರುನಾಟಕಗಳು ಪ್ರದರ್ಶಿತವಾದವು. ಇದೇ ಸಂದರ್ಭದಲ್ಲಿ ರಾಜು ಅವರಿಗೆ ಕೆ.ವಿ. ನಾರಾಯಣ ಮತ್ತು ಎಚ್.ಎಸ್. ರಾಘವೇಂದ್ರರಾವ್ ಅವರ ನಿಕಟ ಒಡನಾಟ ಹಾಗೂ ಬೆಂಬಲ ದೊರೆಯಿತು. ಇವರ ಚಟುವಟಿಕೆಗಳಿಗೆ ಬೆಂಬಲ ನೀಡುವ ಸಹೃದಯಿ ಶ್ರೀಮತಿ ಸರಸ್ವತಿಯವರು ಸಹಧರ್ಮಿಣಿಯಾದರು.

೧೯೭೩, ನಾಲ್ಕು ವರ್ಷಗಳಿಂದ ಹದಗೊಳಿಸಿದ್ದ ಕ್ಷೇತ್ರದಲ್ಲಿ ಮೊದಲ ಬೆಳೆಗೆ ಬೀಜಾಂಕುರ ವಾಯಿತು. ಬೆಂಗಳೂರು ವಿಶ್ವವಿದ್ಯಾಲಯ ವ್ಯಾಪ್ತಿಗೊಳಪಟ್ಟ ಕಾಲೇಜುಗಳ ವಿದ್ಯಾರ್ಥಿಗಳಿಗಾಗಿ ಡಾ॥ ಅ.ನ.ಕೃ. ಸ್ಮಾರಕ ಲೇಖನ ಸ್ಪರ್ಧೆಯನ್ನು ಪ್ರಾರಂಭಿಸಿ, ಬಹುಮಾನಿತ ಲೇಖನಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುವ ನಿರ್ಧಾರವನ್ನು ತೆಗೆದುಕೊಳ್ಳಲಾಯಿತು. ಅಧಿಕೃತವಾಗಿ ಉದ್ಘಾಟನೆಯಾಗುವುದಕ್ಕೆ ಮೊದಲೆ ಕನ್ನಡ ಸಂಘ ಕಾರ್ಯನಿರತವಾಯಿತು. ಕಾಲೇಜಿನ ವಿದ್ಯಾರ್ಥಿ ಸಂಘದಿಂದ ೫೦೦ ರೂಪಾಯಿಗಳ ನೆರವು ದೊರೆಯಿತು. ವಿದ್ಯಾರ್ಥಿ ಸಂಘದ ಅಧ್ಯಕ್ಷ ಸ್ಥಾನಕ್ಕೆ ಸ್ಪರ್ಧಿಯಾಗಿದ್ದ ಭಾಸ್ಕರರೆಡ್ಡಿ ಕನ್ನಡಕ್ಕೆ ಹೆಚ್ಚಿನ ಸಹಕಾರ ಕೊಡುವುದಾಗಿ ತನ್ನ ಪ್ರಣಾಳಿಕೆಯಲ್ಲಿ ತಿಳಿಸಿದ್ದ.

ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದ ಮಾದರಿಯಲ್ಲಿ ಪುಸ್ತಕ ಪ್ರಕಟಣೆ ಕಾರ್ಯಕ್ರಮ ವನ್ನು ಆರಂಭಿಸಲು ತೀರ್ಮಾನಿಸಿದೆವು. ಮೊದಲನೆ ಪ್ರಕಟಣೆಗಾಗಿ ನಗರದ ಎಂ.ಇ.ಎಸ್. ಕಾಲೇಜಿನ ಕನ್ನಡ ಪ್ರಾಧ್ಯಾಪಕರಾಗಿದ್ದ ಕ.ವೆಂ. ರಾಜಗೋಪಾಲ ವಿರಚಿತ 'ನದಿಯ ಮೇಲಿನ ಗಾಳಿ'ಯನ್ನು ಆಯ್ದುಕೊಳ್ಳಲಾಯಿತು. ಆಗಿನ್ನೂ ಕನ್ನಡದ ವಿದ್ಯಾರ್ಥಿಗಳಾಗಿದ್ದ ನರಹಳ್ಳಿ ಬಾಲಸುಬ್ರಹ್ಮಣ್ಯ ಮತ್ತು ಲಕ್ಷ್ಮಣ ಕೊಡಸೆ ಅವರುಗಳನ್ನು ಸಂಪಾದಕರನ್ನಾಗಿಸಿಕೊಂಡು ಕ್ರಿಸ್ತ ಸಂಬಂಧೀ ಕವಿತೆಗಳನ್ನು ಸಂಕಲಿಸಿ 'ಕ್ರಿಸ್ತಾಂಜಲಿ' ಕವನ ಸಂಕಲನ ಪ್ರಕಟಿಸಲು ತೀರ್ಮಾನಿಸ ಲಾಯಿತು.

ಬಸವನಗುಡಿಯಲ್ಲಿದ್ದ ನನ್ನ ವಾಸದ ಮನೆಗೆ ಸಮೀಪದಲ್ಲಿದ್ದ ಶ್ರೀ ಶೇಷನಾರಾಯಣ ಅವರ ಮುದ್ರಣಾಲಯದಲ್ಲಿ ಇವೆರಡನ್ನೂ ಮುದ್ರಿಸಲು ತೀರ್ಮಾನಿಸಲಾಯಿತು. ಇದಕ್ಕೆಲ್ಲಾ ಹಣಬೇಕೇಬೇಕಲ್ಲ. ಕಾಲೇಜಿನಿಂದ ನಮ್ಮ ಉತ್ಸಾಹಕ್ಕೆ ಆಡಳಿತಾತ್ಮಕ ಅಡ್ಡಿ ಇರದಿದ್ದರೂ ಆರ್ಥಿಕ ನೆರವೇನೂ ಇರಲಿಲ್ಲ. ಶ್ರೀಮಂತ ಕಾಲೇಜಿನ ಕನ್ನಡ ಸಂಘವಾದ್ದರಿಂದ ಹಣಕ್ಕೇನೂ ಕೊರತೆ ಇರಲಾರದೆಂದೇ ಬಹಳಷ್ಟು ಜನ ನಂಬಿದ್ದರು. ಆದರೆ ಒಳಗುಟ್ಟೇ ಬೇರೆ. ಹೆಂಡತಿಯ ಚಿನ್ನದ ಸರ ಬ್ಯಾಂಕಿನಲ್ಲಿ ಅಡವಿಟ್ಟು ರಾಜು ಹಣ ತಂದರು.

ಡಿಸೆಂಬರ್ ೧೨, ೧೯೭೩. ನಾಲ್ಕು ವರ್ಷಗಳ ಸತತ ಪ್ರಯತ್ನ ಫಲ ಕಂಡ ದಿನ. ಕನ್ನಡ ರಾಜ್ಯೋತ್ಸವವನ್ನು ಆಚರಿಸುವುದರೊಂದಿಗೆ ಕ್ರೈಸ್ಟ್ ಕಾಲೇಜ್ ಕನ್ನಡ ಸಂಘ ಅಧಿಕೃತವಾಗಿ ಪ್ರಾರಂಭವಾದ ದಿನ. ಡಾ॥ ಎಚ್. ನರಸಿಂಹಯ್ಯನವರು ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿದ್ದವರು. ರಾಜು ಅವರ ಪ್ರೀತಿಯ ವಿದ್ಯಾರ್ಥಿ ಶ್ರೀನಿವಾಸಮೂರ್ತಿ ಬಿಡಿಸಿದ್ದ ಚಿತ್ರಕಲಾ ಪ್ರದರ್ಶನವನ್ನು ಅವರು ಉದ್ಘಾಟಿಸಿದರು. ಅದಕ್ಕೂ ಮುಂಚೆ ಪ್ರಿನ್ಸಿಪಾಲ್ ಫಾ॥ ಗೈಲ್ಸ್ ಸಂತೋಷದಿಂದ ತಮ್ಮಲ್ಲಿದ್ದ ಪಾರ್ಕರ್‌ಪೆನ್ ಮೂರ್ತಿಗೆ ಕೊಟ್ಟು ಬೆನ್ನು ತಟ್ಟಿದ್ದರು. ಡಾ॥ ಜಿ.ಎಸ್. ಶಿವರುದ್ರಪ್ಪನವರು ರಾಜು ಅವರ ವಿದ್ಯಾ ಗುರುಗಳಾಗಿದ್ದವರು. ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದ ಪರವಾಗಿ ಅವರು 'ನದಿಯ ಮೇಲಿನ ಗಾಳಿ' ಕವನ ಸಂಕಲನವನ್ನು ಸ್ವೀಕರಿಸಿದರು. 'ಬೆಂಗಾಡಿನದಲ್ಲ, ಮರಳುಗಾಡಿನದಲ್ಲ, ನದಿಯಮೇಲಿನ ಗಾಳಿಯನ್ನು ಸ್ವೀಕರಿಸುತ್ತೇನೆ' ಎಂದು ಅವರು ಮನತುಂಬಿ ಮಾತನಾಡಿದರು. ಮತ್ತೊಬ್ಬ ಹಿರಿಯರು ಪ್ರೊ॥ ಎಂ.ಪಿ.ಎಲ್. ಶಾಸ್ತ್ರಿಗಳು. ತಮ್ಮ ಕಾಲೇಜಿನ ಅಧ್ಯಾಪಕ ಕ.ವೆಂ. ಅವರ

ಕೃತಿಯನ್ನು ಕ್ರೈಸ್ಟ್ ಕಾಲೇಜಿನಲ್ಲಿ ಪ್ರಕಟಿಸಿದ್ದು ಅವರಿಗೆ ಹೆಮ್ಮೆ ಎನಿಸಿತ್ತು. "ಈ ಕನ್ನಡ ಸಂಘ ಬೆಂಗಳೂರಿನ ಉತ್ತರ ದಕ್ಷಿಣಗಳನ್ನು ಸೇರಿಸುವ ಸೇತುವೆ ಆಗಿದೆ" ಎಂದು ಅವರು ಸಂತಸ ವ್ಯಕ್ತಪಡಿಸಿದರು.

ಹೀಗೆ ಪ್ರಾರಂಭವಾದ ಕನ್ನಡ ಸಂಘ ಅನೇಕ ಮಜಲುಗಳನ್ನು ದಾಟಿ, ರಾಜು ಅವರ ಸಂಚಾಲಕತ್ವದಲ್ಲಿ ೧೭೫ಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದ್ದು ಇಂದು ಇತಿಹಾಸ. ಬಹುತೇಕ ಸಂದರ್ಭಗಳಲ್ಲಿ, ಅದರಲ್ಲೂ ಪ್ರಾರಂಭದ ಕಷ್ಟದ ದಿನಗಳಲ್ಲಿ ಅವರೊಂದಿಗಿದ್ದದ್ದು ನನ್ನ ಭಾಗ್ಯ. ಕೀರ್ತಿಯನ್ನಷ್ಟೇ ಕಂಡಿರುವ, ಕೇಳಿರುವ, ರಾಜು ಅವರ ಅಭಿಮಾನಿಗಳಿಗೆ ಅವರ ಸಾಧನೆಯ ಹಾದಿಯಲ್ಲಿದ್ದ ಅನೇಕ ಕಲ್ಲು ಮುಳ್ಳುಗಳ ಅರಿವಿಲ್ಲ. ಕನ್ನಡ ಸಂಘ ಬೆಳೆಯುವುದು ಅನೇಕರಿಗೆ ಇಷ್ಟವಾಗಿರಲಿಲ್ಲ. ಎನ್.ಸಿ.ಸಿ. ದಿನಾಚರಣೆಗೆ ಮುಖ್ಯ ಅತಿಥಿಯಾಗಿ ಬಂದಿದ್ದ ಮಿ॥ ಅಲೆಕ್ಸಾಂಡರ್ ಅವರ ಎದುರಿನಲ್ಲಿ ಒಬ್ಬ ಇಂಗ್ಲಿಷ್ ಅಧ್ಯಾಪಕ ಪಾದ್ರಿ ಹೇಳಿದ್ದ ಮಾತುಗಳು ನನಗೆ ಈಗಲೂ ನೆನಪಿನಲ್ಲಿದೆ. "Christ college is of Malayalis, by Malayalis and for Malayalis" ಎಂದು ಆತ ಮುಖ್ಯ ಅತಿಥಿಗಳ ಮುಂದೆ ಬಡಬಡಿಸಿದ್ದ. ಮುತ್ಸದ್ದಿ ಅಲೆಗ್ಸಾಂಡರ್ ಅವರ ಬಾಯಿ ಮುಚ್ಚಿಸಿದ್ದರು.

'ಕ್ರಿಸ್ತಾಂಜಲಿ' ಕವನ ಸಂಕಲನದಲ್ಲಿದ್ದ ನಾ. ಡಿಸೋಜ ಅವರ ಒಂದು ಪದ್ಯ, ಮೈಸೂರಿನಲ್ಲಿದ್ದ ಒಬ್ಬ ಪಾದ್ರಿಗೆ ಅಶ್ಲೀಲವಾಗಿ ಕಂಡಿತ್ತು. ಪುಸ್ತಕವನ್ನು ಮಾರಾಟ ಮಾಡಕೂಡದೆಂದು ಪ್ರಾಂಶುಪಾಲರಿಗೆ ಪತ್ರಗಳ ಸುರಿಮಳೆಯಾಯಿತು. ಪ್ರಾಂಶುಪಾಲರಿಗೂ ಸಂದಿಗ್ಧ. ಏನಾದರೂ ಮಾಡಿ ಅಂತ ನನ್ನನ್ನು ಕರೆಸಿ ಹೇಳಿದರು. ರಾಜು ಡಿಸೋಜ ಅವರಿಗೆ ಪತ್ರ ಬರೆದರು. "ಬರೆದಿರುವ ಪ್ರತಿ ಶಬ್ದಕ್ಕೂ ನಾನು ಬದ್ಧನಾಗಿದ್ದೇನೆ" ಎಂದು ಅವರು ಜವಾಬು ನೀಡಿದರು. "ಆ ಕವನ ಇರುವ ಹಾಳೆಯನ್ನೇ ಕಿತ್ತು ಹಾಕಿ ಮತ್ತು ಬೈಂಡ್ ಮಾಡಿದರೆ ಹೇಗೆ" ಅಂತ ಪ್ರಾಂಶುಪಾಲರು ಸಲಹೆ ನೀಡಿದರು. ರಾಜು ಒಪ್ಪಲಿಲ್ಲ. ಪ್ರಿನ್ಸಿಪಾಲ್ ಜೊತೆ ಸಾಕಷ್ಟು ಚರ್ಚೆ ಮಾಡಿದ ಮೇಲೆ ಅವರು ಕವನದ ಅರ್ಥ ತಿಳಿಯದವರ ಆಕ್ಷೇಪಣೆಯನ್ನು ತಳ್ಳಿಹಾಕಲು ಒಪ್ಪಿದರು. ಒದಗಿಬಂದಿದ್ದ ಮುಜುಗರ ಮಾಯವಾಗಿ ಪುಸ್ತಕಗಳು ಮಾರಾಟವಾದವು. ಒಂದು ವೇಳೆ ಅದು ಮತೀಯ ಭಾವನೆಗಳ ದಳ್ಳುರಿಗೆ ಪಕ್ಕಾಗಿದ್ದಿದ್ದರೆ ಕನ್ನಡ ಸಂಘಕ್ಕೆ ಬಾಲಗ್ರಹ ಆವರಿಸುತ್ತಿತ್ತು. ನಮ್ಮ ಭಾಗ್ಯ. ಕದಡಿದ್ದ ರಾಡಿ ಪ್ರಾಂಶುಪಾಲರ ಸಹೃದಯತೆಯಿಂದಾಗಿ ತಿಳಿಯಾಯಿತು.

ಕನ್ನಡ ಸಂಘದ ಪ್ರಕಟಣೆಗಳ ಬಗ್ಗೆ ಪ್ರಕಟಣೆಗಳನ್ನು ನಾಡೋಜರಾದ ಕುವೆಂಪು, ಮಾಸ್ತಿ, ಬೇಂದ್ರೆ ನಮನ ಕಾರ್ಯಕ್ರಮ ಏರ್ಪಡಿಸಿದ್ದು, ಆ ಸಂದರ್ಭದಲ್ಲಿ ಶ್ರೀ ವಾಮನ ಬೇಂದ್ರೆಯವರ ಒಪ್ಪಿಗೆಗಾಗಿ ಹಾ.ಮ. ನಾಯಕರು, ಗೋಕಾಕರು ಮುಂತಾದವರ ನೆರವು ಪಡೆದು ರಾಜು ಪರದಾಡಿದ್ದು, ಕಾಲೇಜು ಆಡಳಿತ ವರ್ಗದಲ್ಲಾದ ಬದಲಾವಣೆಯ ಹಂತದಲ್ಲಿ ಒಮ್ಮೆ ಸಂಭವಿಸಿದ ಮುಜುಗರದಲ್ಲಿ ಸಂಘದ ಸಂಚಾಲಕತ್ವವನ್ನೇ ತೊರೆಯಲು ಮುಂದಾದದ್ದು ಮುಂತಾದ ಅನೇಕ ನೆನಪುಗಳು ನನ್ನ ಸ್ಮೃತಿ ಪಟಲದ ಮುಂದೆ ಹಾದು ಹೋಗುತ್ತಿವೆ. ಅವನ್ನೆಲ್ಲಾ ಬರೆಯಲು ಈ ಲೇಖನದಲ್ಲಿ ಸಾಧ್ಯವಿಲ್ಲ.

ರಾಜು ಒಬ್ಬ ಅತ್ಯಂತ ಪ್ರಾಮಾಣಿಕ, ಸಹೃದಯಿ, ಗೆಳೆಯ. ನಮ್ಮಿಬ್ಬರ ನಡುವೆ ಇದ್ದ ಪ್ರೀತಿ, ನಂಬಿಕೆ, ವಿಶ್ವಾಸದಂತೆ ನಮ್ಮಿಬ್ಬರ ಎರಡೂ ಸಂಸಾರಗಳ ನಡುವೆಯೂ ಅಂತಹದೇ ವಾತ್ಸಲ್ಯ ಮುಂದುವರೆದಿದೆ. ನನ್ನ ಮಗಳನ್ನು ಅವರ ಮನೆಯಲ್ಲಿಟ್ಟುಕೊಂಡು ಅವಳು ಪರೀಕ್ಷೆ ಬರೆಯಲು ನೆರವು ನೀಡಿದ ಅವರ ಮನೆಯವರ ಹೃದಯವಂತಿಕೆ ನನ್ನ ಮನಸ್ಸಿನಲ್ಲಿ ಅಚ್ಚಳಿಯದೇ ಸ್ಥಿರವಾಗಿದೆ. ಒಮ್ಮೆ ಮಕ್ಕಳನ್ನು ಬಿಟ್ಟು ನಾವು ದಂಪತಿಗಳು ಬೊಂಬಾಯಿಗೆ ಹೋಗಬೇಕಾಯಿತು. ನಾನು ಕೊಟ್ಟಿದ್ದ ಹಣವನ್ನು ಎರಡೇ ದಿನದಲ್ಲಿ ಅವರು ಖರ್ಚು ಮಾಡಿದ್ದರು. ಮೂರನೆ ದಿನ ನನ್ನ ಹಿರಿಯ ಮಗಳಿಗೆ ಜ್ವರ. ಔಷಧಿ ಕೊಡಿಸಲೂ ಹಣವಿಲ್ಲ ದಿದ್ದಾಗ ಸುತ್ತಮುತ್ತಲಿನ ಬಂಧು ಬಳಗದವರಾರೂ ನೆರವಿಗೆ ಬಂದಿರಲಿಲ್ಲ. ಆಗ ನೆರವಾಗಿದ್ದವರು ಗೆಳೆಯ ರಾಜು. ಡಾಕ್ಟರಿಗೆ ತೋರಿಸಿ, ಔಷಧಿ ಕೊಡಿಸಿ, ಖರ್ಚಿಗೆ ಹಣ ನೀಡಿ ಮಕ್ಕಳಿಗೆ ನಾವು ಬರುವವರೆಗೆ ಧೈರ್ಯ ತುಂಬಿದ್ದರು.

ರಾಜು ಅವರ ಔದಾರ್ಯದ ರುಚಿ ಕಂಡವನು ನಾನೊಬ್ಬನೇ ಅಲ್ಲ. ಅನೇಕರಿಗೆ ಅವರು ನೆರವಿನ ಹಸ್ತ ಚಾಚಿದ್ದಾರೆ. ಕೆಲವರು ಅದನ್ನು ದುರುಪಯೋಗ ಕೂಡ ಮಾಡಿ ಕೊಂಡಿದ್ದಾರೆ. ಯಾರೋ ಪಡೆದ ಸಾಲಕ್ಕೆ ಇವರು ಜಾಮೀನು ನೀಡಿ ಕೈ ಸುಟ್ಟುಕೊಂಡಿದ್ದೂ ಉಂಟು. ಕ್ರೈಸ್ಟ್ ಕಾಲೇಜಿನಲ್ಲಿ ನಾನು ಕಳೆದ ಸುಂದರ ಕ್ಷಣಗಳನ್ನು ನೆನೆದಾಗ ಮುದ ನೀಡುವ ಮುಖಗಳೆಂದರೆ ರಾಜು ಮತ್ತು ಶಾಸ್ತ್ರಿ ಅವರದ್ದು. ಶಾಸ್ತ್ರಿ ಈಗ ನಮ್ಮೊಂದಿಗಿಲ್ಲ. ಎತ್ತರಕ್ಕೆ ಬೆಳೆದು ನಿಂತ ವ್ಯಕ್ತಿಯ ತಂಪು ನೆರಳಿನಲ್ಲಿ ನಾನು ವಿಶ್ರಮಿಸಿಕೊಂಡಿದ್ದೆ ಎಂಬ ನೆನಪು ನನಗೆ ಸದಾ ಖುಷಿ ಕೊಡುತ್ತಿರುತ್ತದೆ. ನಮ್ಮಿಬ್ಬರಿಗೂ ಬೆನ್ನು ತಟ್ಟಿ ಪ್ರೋತ್ಸಾಹಿಸಿದ ಮತ್ತೊಬ್ಬ ಹಿರಿಯ ಚೇತನ ಫಾ॥ ಗೈಲ್ಸ್. ಅವರು ಮರಣ ಶೈಯೆಯಲ್ಲಿ ಕೇರಳದ ಮಾನಂದವಾಡಿಯಲ್ಲಿದ್ದಾಗ ನಮ್ಮನ್ನು ಜ್ಞಾಪಿಸಿಕೊಂಡು ನೋಡಲು ಇಚ್ಛಿಸಿದ್ದರು.

ಸಕಾಲದಲ್ಲಿ ನಾವು ಅಲ್ಲಿಗೆ ಹೋದದ್ದರಿಂದ ಅವರನ್ನು ನೋಡಲು ಮಾತಾಡಲು ಸಾಧ್ಯವಾಯಿತು. ಕನ್ನಡ ಸಂಘದ ಚಟುವಟಿಕೆಗಳ ಬಗ್ಗೆ ವಿಚಾರಿಸಿದರು. ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದಿಂದ ಪ್ರೇರಿತರಾಗಿ ಕಟ್ಟಿ ಬೆಳೆಸಿದ ಕ್ರೈಸ್ಟ್ ಕಾಲೇಜ್ ಸಂಘವೂ ಹಿರಿಯಕ್ಕನ ಜಾಡಿನಲ್ಲೇ ಸಾಗುತ್ತಿದೆಯೆಂದು ಅವರಿಗೆ ಹೇಳುವ ಮನಸ್ಸಾಗಲಿಲ್ಲ.

❑

# ಗರಡೀಮನೆ ನಾಯಕ

● *ಹೆಚ್. ಶಿವಸ್ವಾಮಿ*

ನಾನು ಮತ್ತು ರಾಜು ಹುಟ್ಟಿನಿಂದಲೂ ಗೆಳೆಯರು. ಇಬ್ಬರೂ ಹುಟ್ಟಿದ್ದು ೧೯೪೨ರಲ್ಲಿ. ಬೆಳೆದದ್ದು ನಾಲ್ಕೈದು ಮನೆಗಳ ಅಂತರದ ಚಿಕ್ಕಬಳ್ಳಾಪುರದ ರಾಚೇವಾರ್ ರಸ್ತೆಯಲ್ಲಿ. ನಮ್ಮ ಬೀದಿಯ ಎಡಬದಿಯ ಮೂರನೆಯ ಮನೆ ನಮ್ಮದು. ಬಲಬದಿಯ ಮೊದಲನೆಯ ಮನೆ ರಾಜು ಅವರ ದೊಡ್ಡಮ್ಮನವರದು. ರಾಜು ಅವರ ತಂದೆ ಪೊಲೀಸ್ ಇಲಾಖೆಯಲ್ಲಿ ಮಲೆನಾಡಿನ ಕಳಸವೋ ಕೊಪ್ಪದಲ್ಲಿಯೋ ಇದ್ದರು. ಮಲೆನಾಡಿನ ಹವಾಮಾನ ಮತ್ತು ಮಳೆ ಮಕ್ಕಳಿಗೆ ಒಗ್ಗುತ್ತಿರಲಿಲ್ಲವೋ ಏನೋ ರಾಜು ಮತ್ತು ಅವನ ತಂಗಿಯರೆಲ್ಲರೂ ನಮ್ಮೂರಿನಲ್ಲಿಯ ಅವರ ದೊಡ್ಡಮ್ಮನ ಮನೆಯಲ್ಲಿಯೇ ಬೆಳೆದರು.

ನನ್ನ ಮೂವರು ಅಕ್ಕಂದಿರು ಮತ್ತು ಇಬ್ಬರು ಅಣ್ಣಂದಿರ ನಂತರ ನಾನೇ ಕೊನೆಯ ಮಗ. ರಾಜು ಮೊದಲನೆಯ ಮಗ ಅವನ ಹಿಂದೆ ನಾಲ್ವರು ತಂಗಿಯರು. ನಾವೆಲ್ಲ ಅವರ ದೊಡ್ಡಮ್ಮನನ್ನೇ ಅವರ ತಾಯಿ ಎಂದು ತಿಳಿದುಕೊಂಡಿದ್ದೆವು.



ರಾಜು ಅವರ ಅಜ್ಜಿ ಅಂಗಡಿ ಜಯಮ್ಮ. ಅವರು ಖಾರದ ಕಡಲೆಬೀಜದ ಅಂಗಡಿಯನ್ನು ಇಟ್ಟಿದ್ದರಿಂದ ಅವರನ್ನು ಊರಿನವರೆಲ್ಲ ಹಾಗೆ ಕರೆಯುತ್ತಿದ್ದರು. ಖಾರದ ಕಡಲೆಬೀಜ ಅಂದರೆ ಬೆಂಗಳೂರು ಬೇಕರಿಗಳಲ್ಲಿ ಮಾರುವ ಕಾಂಗ್ರೆಸ್ ಅಲ್ಲ. ಹಸಿರು ಮೆಣಸಿನಕಾಯಿ ಹುಣಸೇಹಣ್ಣು, ಉಪ್ಪು ಮತ್ತು ಕೊತ್ತಂಬರಿಸೊಪ್ಪನ್ನು ನುಣ್ಣಗೆ ರುಬ್ಬಿ ಮೊರದಲ್ಲಿ ಖಾರವನ್ನು ಕಡಲೇಬೀಜಕ್ಕೆ ಹದವಾಗಿ ಬೆರೆಸುವ ಕಲೆಯಲ್ಲಿ ಅವರ ಅಜ್ಜಿಯವರದು ಎತ್ತಿದ ಕೈ. ಖಾರದ ಕಡಲೆಬೀಜ ಎಂದರೆ ಇಂದಿಗೂ ಅವರ ಅಜ್ಜಿಯ ನೆನಪಾಗುತ್ತದೆ. ಇಂದಿಗೂ ಅಷ್ಟುರುಚಿಯಾದ ಖಾರದ ಕಡಲೇಬೀಜವನ್ನು ನಾನು ತಿಂದೇ ಇಲ್ಲ.

ರಾಜು ಅವರ ದೊಡ್ಡಮ್ಮನವರಿಗೆ ಮಕ್ಕಳಿರಲಿಲ್ಲ. ಅವರ ತಾಯಿ ಮತ್ತು ದೊಡ್ಡಮ್ಮನವರ ಎರಡೂ ಮನೆಗಳ ವಂಶೋದ್ಧಾರಕ ಎಂತಲೋ ಏನೋ ಅವರ ದೊಡ್ಡಮ್ಮ ರಾಜುವನ್ನು ಅತ್ಯಂತ ಮುದ್ದಿನಿಂದ ಗುಂಡ ಗುಂಡಕ್ಕೆ ಸಾಕಿದ್ದರು. ಬೋರ್ನ್‌ವಿಟಾ ಎಂಬ ಹೆಸರನ್ನು ನಾನು ಮೊಟ್ಟಮೊದಲ ಬಾರಿ ಕೇಳಿದ್ದು ಅವರ ಮನೆಯಲ್ಲಿಯೇ. ಆಗೊಮ್ಮೆ ಈಗೊಮ್ಮೆ ಅವರ ಮನೆಗೆ ನಾನು ಹೋದಾಗ ರಾಜು ಜೊತೆಗೆ ನನಗೂ ಸಹ ಬೋರ್ನ್‌ವಿಟಾವನ್ನು ಕೊಡುತ್ತಿದ್ದುದುಂಟು. ಅದನ್ನು ಕುಡಿದು ರೂಢಿ ಇಲ್ಲದ್ದಕ್ಕೋ ಅಥವಾ ಕೋಕೋ ರುಚಿ ಗೊತ್ತಿಲ್ಲದೆಯೋ ಔಷಧಿಯಂತೆ ಕುಡಿದು ಮುಗಿಸುತ್ತಿದ್ದೆ.

ಖಾಕಿ ಹಾಫ್‌ಪ್ಯಾಂಟ್‌ನೊಳಗೆ ಗರಿಗರಿಯಾದ ಗಂಜಿಹಾಕಿದ ಬಿಳಿಯ ಷರ್ಟ್, ಕಾಲಿಗೆ ಕ್ಯಾನ್‌ವಾಸ್‌ಷೂ ಮತ್ತು ಸಾಕ್ಸ್ ಹಾಕಿ ತಲೆಗೆ ಹರಳೆಣ್ಣೆ ಹಚ್ಚಿ, ನೇರವಾಗಿ ಬೈತಲೆ ತೆಗೆದು ನೀಟಾಗಿ ಬಾಚಿ, ಮುಖಕ್ಕೆ ಪೌಡರ್ ಹಾಕಿ, ಹಣೆಯ ಮಧ್ಯೆ ದೃಷ್ಟಿಯಾದೀತೆಂದು ಒಂದು ಕಪ್ಪು ಚುಕ್ಕೆ ಇಟ್ಟು, ರಾಜುವನ್ನು ಅವರ ದೊಡ್ಡಮ್ಮ ಶಾಲೆಗೆ ಕಳುಹಿಸುತ್ತಿದ್ದರು. ನಮ್ಮ ಪ್ರೈಮರಿ ಶಾಲೆಯಲ್ಲೆಲ್ಲಾ ಷೂ ಹಾಕಿಕೊಂಡು ಬರುತ್ತಿದ್ದ ಏಕೈಕ ಹುಡುಗ ರಾಜು.

ರಾಜು ಕ್ಯಾನ್‌ವಾಸ್ ಷೂ ಹಾಕಿಕೊಂಡು ಬರುತ್ತಾನೆ ನನಗೂ ಷೂ ಕೊಡಿಸಿ ಎಂದು ನಮ್ಮ ತಂದೆಗೆ ಹದಿನೈದು ದಿನ ದುಂಬಾಲು ಬಿದ್ದ ನಂತರ ಟೈರ್‌ನಿಂದ ಮಾಡಿದ ಚಪ್ಪಲಿ ಕೊಡಿಸಿ ಇದು ಕ್ಯಾನ್‌ವಾಸ್‌ಗಿಂತ ಹೆಚ್ಚು ಬಾಳಿಕೆ ಬರುತ್ತದೆ ಜೋಪಾನವಾಗಿ ಉಪಯೋಗಿಸು ಎಂದು ಎಚ್ಚರಿಕೆ ಕೊಟ್ಟರು.

ಪ್ರೈಮರಿ ಸ್ಕೂಲಿನ ಒಂದನೇ ಕ್ಲಾಸಿನಲ್ಲಿ ನಾನು ಮತ್ತು ರಾಜು ನೆಲದ ಮೇಲೆ ಹಾಕಿರುತ್ತಿದ್ದ ಮಣೆಯ ಮೇಲೆ ಒಂದೇ ಕೊಠಡಿಯಲ್ಲಿ ಕುಳಿತು ನಮ್ಮ ರಂಗಾಚಾರ್ಲು ಮೇಷ್ಟ್ರ ಹೇಳಿಕೊಟ್ಟ ಅ. ಆ. ಇ. ಈ ಕಲಿತೆವು.

ಆದರೆ ಎರಡನೆ ತರಗತಿಯಿಂದ ರಾಜು ಅವರ ದೊಡ್ಡಪ್ಪನಿಗೆ ಬೇಕಾದ ಶೀನಪ್ಪ ಮೇಷ್ಟ್ರಿಗೆ ನಮ್ಮೂರಿನ ಬ್ರಾಹ್ಮಣರ ಬೀದಿಯಲ್ಲಿದ್ದ ಶಾಲೆಗೆ ವರ್ಗವಾದ್ದರಿಂದ ಅವನನ್ನು ಅದೇ ಶಾಲೆಗೆ ವರ್ಗಾಯಿಸಿದರು.

ಮಿಡ್ಲ್ ಸ್ಕೂಲಿನಲ್ಲಿ ನಾನು ಮತ್ತು ರಾಜು ಒಂದೇ ಸ್ಕೂಲಿನಲ್ಲಿದ್ದೂ್ರ ನನ್ನದು ಹಿಂದಿ ಆಪ್ಷನಲ್ ರಾಜುದು ಆರೋಗ್ಯ. ಆದ್ದರಿಂದ ಇಬ್ಬರ ತರಗತಿಗಳೂ ಬೇರೆಯಾದುವು. ಆದರೂ ಸಂಜೆ ಮತ್ತು ರಜೆಯ ದಿನಗಳಂದು ಮಿಡ್ಲ್ ಸ್ಕೂಲ್ ಫೀಲ್ಡ್‌ನಲ್ಲಿ ಒಟ್ಟಿಗೆ ಫುಟ್ಬಾಲ್ ಮತ್ತು ಕ್ರಿಕೆಟ್ ಆಡುತ್ತಿದ್ದೆವು.

ಹೈಸ್ಕೂಲಿನಲ್ಲಿ ನಾವಿಬ್ಬರೂ ಇಂಗ್ಲಿಷ್ ಮೀಡಿಯಂಗೆ ಸೇರಿದ್ದರಿಂದ ಮತ್ತೆ ಒಂದೇ ತರಗತಿಯ ಒಂದೇ ಬೆಂಚಿಗೆ ಬಂದು ಸೇರಿದೆವು. ನಮ್ಮ ಬೆಂಚನ್ನು ಹಂಚಿಕೊಂಡ ಇತರೆ ಸ್ನೇಹಿತರು ಜನಾರ್ಧನ, ಶೇಖರ್ ಮತ್ತು ವಿಶ್ವನಾಥ (ವಿಚ್ಚಿ)

ಹೈಸ್ಕೂಲಿನಲ್ಲಿ ಮೊದಲನೆಯ ವರ್ಷದಲ್ಲಿದ್ದಾಗ ಶಾಲೆಯ ವಾರ್ಷಿಕೋತ್ಸವಕ್ಕೆ 'ಉಂಡಾಡಿ ಗುಂಡ' ನಾಟಕವನ್ನು ಆಡಬೇಕೆಂದು ತೀರ್ಮಾನವಾಗಿತ್ತು. ಗುಂಡನ ಪಾತ್ರಕ್ಕೆ ಎರಡನೆಯ

ವರ್ಷದಲ್ಲಿದ್ದ ಗುಂಗುರು ಕೂದಲಿನ ಎತ್ತರಕ್ಕೆ ದಪ್ಪಗಿದ್ದ ಶೆಟ್ಟರ ಹುಡುಗ ರಮಾನಂದನನ್ನ ಆಯ್ಕೆ ಮಾಡಿದ್ದರು. ಗುಂಡನ ಇಬ್ಬರು ಸ್ನೇಹಿತರ ಪಾತ್ರಕ್ಕಾಗಿ ಗುಂಡನಿಗಿಂತ ಕುಳ್ಳಗಿರುವ ಹುಡುಗರ ಹುಡುಕಾಟದಲ್ಲಿ ಯಾವಾಗಲೂ ಒಬ್ಬರ ಭುಜದ ಮೇಲೆ ಮತ್ತೊಬ್ಬರು ಕೈಹಾಕಿಕೊಂಡು ಜೊತೆ ಜೊತೆಯಾಗಿಯೇ ಓಡಾಡುತ್ತಿದ್ದ ನಾನು ಮತ್ತು ರಾಜು ಅಧ್ಯಾಪಕರ ಕಣ್ಣಿಗೆ ಬಿದ್ದೆವು. ನಮ್ಮೂರಿನ ಹೈಸ್ಕೂಲಿನ ವಾರ್ಷಿಕೋತ್ಸವ ಎಂದರೆ ಅದೊಂದು ಊರಿನವರಿಗೆಲ್ಲಾ ಒಂದು ಮೋಜಿನ ಸಂಜೆ. ಅಂದು ಊರಿನವರ ಮುಂದೆಲ್ಲಾ ನಾಟಕ ಆಡುವುದೆಂದರೆ ಅದೊಂದು ಜೀವನದ ಅಮೋಘ ಘಳಿಗೆ 'ಉಂಡಾಡಿ ಗುಂಡ' ನಾಟಕ ಅಂದು ಯಶಸ್ವಿಯಾಗಿ ಪ್ರದರ್ಶಿತವಾಯಿತು. ಗುಂಡನ ಪಾತ್ರವಹಿಸಿದ್ದ ರಮಾನಂದನಿಗೆ ಮೊದಲ ಬಹುಮಾನ ಬೆಳ್ಳಿಯ ಕಪ್ ಕೊಟ್ಟರು. ನನ್ನ ಮತ್ತು ರಾಜುವಿನ ಪೋಷಕ ಪಾತ್ರಗಳ ಆಕರ್ಷಕ ನಿರ್ವಹಣೆಗಾಗಿ ನಮ್ಮಿಬ್ಬರಿಗೂ ಜೆಸ್ಸೂರ್ ಬಾಚಣಿಗೆಯನ್ನು ಕಾನ್ಸೋಲೇಶನ್ ಪ್ರೈಜ್ ಆಗಿ ಕೊಟ್ಟರು. ಅಂದಿನಿಂದಲೇ ನಾನು ತಲೆಯನ್ನು ಬಾಚಲು ಶುರು ಮಾಡಿದ್ದು.

ಉಂಡಾಡಿ ಗುಂಡ ಮತ್ತು ಅವನ ಸ್ನೇಹಿತರ "ಕವಿಕುಲ ತಿಲಕಂ ಗುಂಡಂ" ಡೈಲಾಗ್ ಊರಿನವರ ಬಾಯಲ್ಲಿ ಅನೇಕ ವಾರಗಳವರೆಗೆ ಪುನರುಚ್ಚಾರವಾಯಿತು.

ನಾನು, ರಾಜು ಮತ್ತು ಜನಾರ್ಧನ್ ಎಸ್.ಎಸ್.ಎಲ್.ಸಿಯಲ್ಲಿ ತೇರ್ಗಡೆಯಾದ ನಂತರ ನಮ್ಮೂರಿನಲ್ಲಿ ಕಾಲೇಜ್ ಇರದೆ ಇದ್ದುದರಿಂದ ಬೆಂಗಳೂರಿನ ಬಸಪ್ಪ ಇಂಟರ್‌ಮೀಡಿಯೇಟ್ ಕಾಲೇಜಿಗೆ ಸೇರಿದೆವು. ಅದೇ ವರ್ಷ ಇಂಟರ್‌ಮೀಡಿಯೇಟ್ ಕೋರ್ಸನ್ನು ಬದಲಾಯಿಸಿ ಒಂದು ವರ್ಷದ ಪ್ರಿಯುನಿವರ್ಸಿಟಿ ಕೋರ್ಸ್ ಪ್ರಾರಂಭವಾಗಿತ್ತು.

ನಾನು ಮತ್ತು ರಾಜು ಪ್ರಿಯುನಿವರ್ಸಿಟಿ ಪಾಸಾದ ನಂತರ ಸೆಂಟ್ರಲ್ ಕಾಲೇಜಿಗೆ ಬಿ.ಎಸ್‌ಸಿ.ಗೆ ಸೇರಿದೆವು. ಆಗಲೇ ಜಿ.ಪಿ. ರಾಜರತ್ನಂ. ವಿ.ಸೀ., ಯು.ಆರ್. ಕೃಷ್ಣರಾವ್ ಅವರು ಪಾಠ ಮಾಡುತ್ತಿದ್ದ ತರಗತಿಗಳಲ್ಲಿ ಕೂಡುವ ಭಾಗ್ಯ ನಮಗೆ ದೊರೆತದ್ದು.

ನಂತರ ನಾನು ಇಂಜಿನಿಯರಿಂಗ್ ಮಾಡಲು ದಾವಣಗೆರೆಗೆ ಹೋದೆ. ಮತ್ತೆ ನಾನು ಮತ್ತು ರಾಜು ಒಟ್ಟಿಗೆ ಕಲೆತದ್ದು ರಾಜು ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡ ಎಂ.ಎ. ಮತ್ತು ನಾನು ಇಂಜಿನಿಯರಿಂಗ್ ಕಾಲೇಜಿನಲ್ಲಿ ಎಂ.ಇ. ಮಾಡುತ್ತಿದ್ದಾಗ.

ರಾಜು ಎಂ.ಎ ಮುಗಿಸಿದ ನಂತರ ಕ್ರೈಸ್ಟ್ ಕಾಲೇಜಿನಲ್ಲಿ ಅಧ್ಯಾಪಕವೃತ್ತಿ ಪ್ರಾರಂಭವಾಯಿತು. ನಾನು ಇಂಜಿನಿಯರಿಂಗ್ ಮುಗಿಸಿದ ನಂತರ ಕೈಗಾರಿಕೆ ಇಲಾಖೆಯಲ್ಲಿ ನನ್ನ ವೃತ್ತಿಜೀವನ ಪ್ರಾರಂಭವಾಯಿತು. ರಾಜು ಮತ್ತು ನನ್ನ ಜೀವನದ ಗತಿ ವಿವಿಧ ರೀತಿಗಳಲ್ಲಿ ಇದ್ದರೂ ನಮ್ಮಿಬ್ಬರ ಸ್ನೇಹ ಹುಟ್ಟಿದಂದಿನಿಂದ ಇಂದಿನವರೆಗೂ ಹಾಗೆಯೇ ಇದೆ.

ರಾಜು ಅತ್ಯಂತ ಸರಳ ಸಜ್ಜನಿಕೆಯ ವ್ಯಕ್ತಿ. ಒಂದು ರೀತಿಯಲ್ಲಿ ಹಸು ತರಹ. ಮುಂದೆ ಬಂದರೆ ಹಾಯಬೇಡಿ ಹಿಂದೆ ಬಂದರೆ ಒದೆಯಬೇಡಿ ಎನ್ನುವ ಸ್ವಭಾವ. ವಿದ್ಯಾರ್ಥಿಗಳಿಗೆ ಒಬ್ಬ ರೋಲ್‌ಮಾಡೆಲ್ ಎಂದರೆ ತಪ್ಪಾಗದು. ಎಂದೂ ಯಾವುದೇ ಲೆಕ್ಚರರ್‌ರ ಕ್ಲಾಸಿಗೆ ಚಕ್ಕರ್ ಹೊಡೆದವನಲ್ಲ. ನಾನು ಮತ್ತು ಜನಾರ್ಧನ್ ಒಮ್ಮೊಮ್ಮೆ ಕ್ಲಾಸಿಗೆ ಚಕ್ಕರ್ ಹೊಡೆದು ಮ್ಯಾಟನಿಷೋಗೆ ಹೋದರೆ ರಾಜು ಮಾತ್ರ ತಪ್ಪದೆ ಕ್ಲಾಸಿನಲ್ಲಿ ಕೂತಿರುತ್ತಿದ್ದ.

ಸಿನಿಮಾ ನೋಡಿ ಬಂದ ನಂತರ ರಾಜುಗೆ ನಾವು ಕಥೆ ಹೇಳುತ್ತಿದ್ದರೆ ರಾಜು ಕ್ಲಾಸಿನಲ್ಲಿ ಪಾಠ ಕೇಳುವಷ್ಟೇ ತದೇಕಚಿತ್ತ ಮತ್ತು ಕುತೂಹಲದಿಂದ ಕೇಳುತ್ತಿದ್ದ.

ರಾಜು ತಾನು ಬರೆದದ್ದಕ್ಕಿಂತಲೂ ಪ್ರತಿಭಾವಂತ ಯುವ ಬರಹಗಾರರನ್ನು ಹುರಿದುಂಬಿಸಿ, ಪ್ರೋತ್ಸಾಹಿಸಿ, ಬರೆಸಿ, ಅವರು ಬರೆದದ್ದನ್ನು ಕ್ರೈಸ್ಟ್ ಕಾಲೇಜ್ ಕನ್ನಡ ಸಂಘದಿಂದ ಹೊರ ತಂದಿದ್ದು ಕನ್ನಡ ಸಾಹಿತ್ಯಕ್ಕೆ ಕೊಟ್ಟ ಅಮೋಘ ಕೊಡುಗೆ.

ಕ್ರೈಸ್ಟ್ ಕಾಲೇಜು ಕನ್ನಡ ಸಂಘದಿಂದ ಹೊರತಂದ ಅನೇಕ ಪುಸ್ತಕಗಳನ್ನು ನಾನು ಓದಿದ್ದೇನೆ. ಹಲವು ಪುಸ್ತಕಗಳು ನಿಜಕ್ಕೂ ಚೆನ್ನಾಗಿವೆ.

ಗರಡೀ ಮನೆಯಲ್ಲಿ ತಾಲೀಮು ಮಾಡಿಸಿ ಯುವ ಕುಸ್ತಿ ಪಟುಗಳನ್ನು ತಯಾರಿಸುವ ನಾಯಕ ರಾಜು, ಕನ್ನಡ ಸಾಹಿತ್ಯದ ಅಖಾಡಕ್ಕೆ ಯುವ ಪೈಲ್ವಾನರುಗಳನ್ನು ಕೊಟ್ಟಿದ್ದಾರೆ.

ಈಗಲೂ ನಾನು ರಾಜುಗೆ ಪದೇ ಪದೇ ಹೇಳುತ್ತಿರುತ್ತೇನೆ– ನಿನ್ನಿಂದ ಒಂದು ಬೃಹತ್ ಗ್ರಂಥ ಬರಬೇಕೆಂದು. ಅದರ ಸಿದ್ಧತೆ ನಡೆಸುತ್ತಾ ಇದ್ದೇನೆಂದು ನನಗೆ ಆಶ್ವಾಸನೆ ನೀಡುತ್ತಲೇ ಬಂದಿದ್ದಾನೆ. ರಾಜುಪಿನಿಂದ ಒಂದು ಒಳ್ಳೆಯ ಬೃಹತ್‌ಗ್ರಂಥವನ್ನು ನಾನು ಎದುರು ನೋಡುತ್ತಿದ್ದೇನೆ.



# ಸದಾ ಸಂತೋಷದಿಂದಿರಲಿ

● ಸಿ. ಬೃಂದಾ ರಾಜು

ನಾನು ಅಣ್ಣಯ್ಯನ ಚಿಕ್ಕತಂಗಿ. ನನಗೆ ಅವರಲ್ಲಿ ಹೆಚ್ಚಿನ ಸಲಿಗೆ ಇರಲಿಲ್ಲ. ಅವರು ಹುಟ್ಟಿ ಬೆಳೆದದ್ದೆಲ್ಲಾ ಚಿಕ್ಕಬಳ್ಳಾಪುರದ ಅಜ್ಜಿ ಮನೆಯಲ್ಲಿ. ಅವರು ಬೆಂಗಳೂರಿಗೆ, ಕಾಲೇಜಿನಲ್ಲಿ ಕಲಿಯಲು ಬಂದಾಗಲೇ ನನಗೆ ತಿಳಿದದ್ದು, ನನಗೂ ಒಬ್ಬ ಅಣ್ಣಯ್ಯನಿದ್ದಾನೆಂದು, ಅವರು ಓದುವಾಗ, ಅನಂತರ ಕೆಲಸಕ್ಕೆ ಸೇರಿದ ಮೇಲೆ, ಮನೆಯಲ್ಲಿ ಹೆಚ್ಚಾಗಿ ಇರುತ್ತಿರಲಿಲ್ಲ. ಸದಾ ಪುಸ್ತಕಗಳ ಗುಂಗಿನಲ್ಲೇ ಇರುತ್ತಿದ್ದರು. ಮೊದಲಿನಿಂದಲೂ ಮಿತಭಾಷಿ, ಸರಳಜೀವಿ. ಅವರ ಒಡನಾಟ ಪ್ರಾರಂಭವಾಗುವಷ್ಟರಲ್ಲಿ ಅವರು ಸಾಹಿತ್ಯವಲಯದಲ್ಲಿ ದೊಡ್ಡದಾಗಿ ಬೆಳೆದುಬಿಟ್ಟಿದ್ದರು. ಅಣ್ಣಯ್ಯ ಹಾಡುಗಾರರಲ್ಲ, ಆದರೆ ಸಂಗೀತದಲ್ಲಿ ಒಳ್ಳೆಯ ಅಭಿರುಚಿ ಉಳ್ಳವರು. ಶ್ರೀರಾಮನವಮಿ ಸಂದರ್ಭದಲ್ಲಿ ಅನೇಕ ಸಂಗೀತ ಕಛೇರಿಗಳಿಗೆ ಹೋಗುತ್ತಿದ್ದರು. ಅವರ ಕನ್ನಡ ಅಭಿಮಾನ ಆಗ ಎಷ್ಟಿತ್ತು ಎಂದರೆ ಒಮ್ಮೆ ಶೇಷಾದ್ರಿಪುರಂ ರಾಮ ನವಮಿ ಸಂಗೀತ ಕಾರ್ಯಕ್ರಮದಲ್ಲಿ ಎಂ. ಬಾಲಮುರಳಿಕೃಷ್ಣ ಅವರು ಕಛೇರಿಯಲ್ಲಿ ಕನ್ನಡ ಹಾಡುಗಳನ್ನು ಹಾಡಬೇಕೆಂದು ಒತ್ತಾಯಿಸಿದ್ದರು. ಅ.ನ. ಕೃಷ್ಣರಾಯರ ಮುಂದಾಳತ್ವದಲ್ಲಿ ಒಮ್ಮೆ ಎಂ.ಎಸ್. ಸುಬ್ಬುಲಕ್ಷ್ಮಿ ಸಂಗೀತ ಕಛೇರಿಯನ್ನು ಪ್ರತಿಭಟಿಸಿದ್ದರು.

ಅಣ್ಣಯ್ಯ ಕ್ರೈಸ್ಟ್ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾಗಲೇ ಎಂ.ಇ.ಎಸ್. ಕಾಲೇಜಿನಲ್ಲಿ ಇಂಡಾಲಜಿ ಡಿಪ್ಲೋಮಾವನ್ನು ಮಾಡಿಕೊಂಡರು. ಅನಂತರ ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ, ಸುಮಾರು ಒಂದು ವರ್ಷ ಕಾಲ ತೊಗಲುಬೊಂಬೆಯನ್ನು ಮಾಡುವು ದರಿಂದ ಹಿಡಿದು ಅದನ್ನು ಆಡಿಸುವವರೆಗೂ ತರಬೇತಿಯನ್ನು ಪಡೆದರು. ಆ ಕಾಲದಲ್ಲಿ “ಗೊಂಬೆರಾಮು”ರ ಗೆಳೆತನವನ್ನು ಸಂಪಾದಿಸಿದ್ದರು. ಅವರು ಬಂದಾಗ ಮನೆಯಲ್ಲಿ ಕಾಫಿಯಾದ ಮೇಲೆ, ಹೊರಗೆ ಕರೆದುಕೊಂಡು ಹೋಗಿ ಹಣ ಕೊಟ್ಟು ಕಳುಹಿಸುತ್ತಿದ್ದರು. ಈ ಸಂದರ್ಭದಲ್ಲಿ ಸುಮಾರು ಐವತ್ತು ಅರುವತ್ತು

ಅಪರೂಪದ ತೊಗಲುಬೊಂಬೆಯನ್ನು ಕೂಡಿಹಾಕಿದ್ದರು. ಅವರಿದ್ದ ಕೊಠಡಿ ಅಣ್ಣಯ್ಯನ ಸಂಸಾರಕ್ಕೆ ಸಾಕಾಗುತ್ತಿರಲಿಲ್ಲ. ಜೊತೆಗೆ ಎಲ್ಲೆಂದರಲ್ಲಿ ಪುಸ್ತಕಗಳು, ಜೊತೆಗೆ ಈ ತೊಗಲುಬೊಂಬೆಗಳು, ಅತ್ತಿಗೆಯ ಬೀರು ಮೇಲೆ ಜಾಗ ಗಿಟ್ಟಿಸಿಕೊಂಡವು. ನನ್ನ ಮತ್ತು ಅತ್ತಿಗೆಯ ಕಷ್ಟ ಪ್ರಾರಂಭವಾಯಿತು. ಆ ಬೊಂಬೆಗಳ ಮಧ್ಯೆ ಜಿರಲೆಗಳು ಸೇರಿಕೊಂಡುಬಿಡುತ್ತಿದ್ದವು. ಜೊತೆಗೆ ಧೂಳು. ಒಂದೆರಡು ವಾರಗಳು ಹಾಗೇ ಬಿಟ್ಟರೆ ಒಂದು ರೀತಿಯ ವಾಸನೆ. ತೊಗಲುಬೊಂಬೆಗಳನ್ನು ಮನೆಯೊಳಗೆ ತಂದು ಇಟ್ಟುಕೊಂಡಿರುವುದು, ನಮಗೊಂದು ಪ್ರಶ್ನೆಯಾಗಿತ್ತು. ಇದನ್ನು ಆಗಾಗ ತೆಗೆದು ಜಿರಲೆಗಳನ್ನು ಹೊಡೆದು ಕ್ಲೀನ್ ಮಾಡುವುದೇ ದೊಡ್ಡ ಕೆಲಸವಾಗುತ್ತಿತ್ತು. ಇದರ ಬಗ್ಗೆ ನಮ್ಮ ಗೊಣಗಾಟ ಇದ್ದೇ ಇತ್ತು. ಅಣ್ಣಯ್ಯ ನಮ್ಮ ಕಷ್ಟವನ್ನು ನೋಡಲಾರದೇ, ತೊಗಲುಗೊಂಬೆಯ ತರಬೇತಿಯ ಸಹಪಾಠಿ ಎಸ್.ಎ. ಕೃಷ್ಣಯ್ಯನವರನ್ನು ಕರೆದು, ಎಲ್ಲಾ ಬೊಂಬೆಗಳನ್ನು ಕೊಟ್ಟುಬಿಟ್ಟರು. ಅವರು ಅದನ್ನು ಉಡುಪಿಯ ಆರ್.ಆರ್.ಸಿ.ಗೆ ಕೊಟ್ಟರೆಂದು ತಿಳಿದುಬಂತು. ಕಷ್ಟಪಟ್ಟು ಕೂಡಿಹಾಕಿದ ತೊಗಲು ಗೊಂಬೆಗಳನ್ನು ಸುಮ್ಮನೆ ಕೊಟ್ಟುಬಿಟ್ಟರು. ಅದಕ್ಕೆ ಎಷ್ಟು ಹಣ ಸುರಿದಿದ್ದರೋ ಗೊತ್ತಿಲ್ಲ. ಇನ್ನೊಬ್ಬರ ಮನಸ್ಸಿಗೆ ನೋವಾಗುವಂತೆ ನಡೆದುಕೊಳ್ಳುವುದು ಅವರ ಸ್ವಭಾವವಲ್ಲ.

ಅಣ್ಣಯ್ಯ ಆಸ್ತಿಕರಲ್ಲ. ಸುತ್ತಮುತ್ತಲವರಿಗೆ ನೋವಾಗಬಾರದೆಂದು, ಮೇಲುನೋಟಕ್ಕೆ ಸಂಪ್ರದಾಯಗಳನ್ನು ಪಾಲಿಸುವಂತೆ ನಡೆದುಕೊಳ್ಳುತ್ತಾರೆ. ನನಗೆ ತಿಳಿದಂತೆ ಅವರು ತಾವಾಗಿಯೇ ದೇವಸ್ಥಾನಕ್ಕೆ ಹೋದವರಲ್ಲ. ಆದರೂ ಬನ್ನಿ ಎಂದರೆ ಬಂದೇ ಬರುತ್ತಾರೆ. ತಮ್ಮ ಅಭಿಪ್ರಾಯಗಳನ್ನು ಯಾರ ಮೇಲೂ ಹೇರುತ್ತಿರಲಿಲ್ಲ. ಸಂಸಾರದಲ್ಲಿದ್ದರೂ ಅನೇಕ ವಿಷಯಗಳಲ್ಲಿ ನಿರ್ಲಿಪ್ತರಾಗಿ ಇದ್ದುಬಿಡುತ್ತಿದ್ದರು. ಅವರು ಸಾಹಿತ್ಯ ವಲಯದಲ್ಲಿ ಒಳ್ಳೆಯ ಹೆಸರನ್ನು ಸಂಪಾದಿಸುತ್ತಿರುವ ಬಗ್ಗೆ ತಂದೆಗೆ ಒಳಗೊಳಗೇ ಸಂತೋಷ. ಅದನ್ನು ಬಹಿರಂಗವಾಗಿ ಪ್ರಕಟಿಸುತ್ತಿರಲಿಲ್ಲ. ತಾಯಿಗಂತೂ ಎಲ್ಲಿಲ್ಲದ ಸಂತೋಷ. ಬಂದವರಿಗೆಲ್ಲಾ ಹೇಳುತ್ತಿದ್ದರು. ಇವರು ನಮ್ಮ ಬಳಗದಲ್ಲಿ "ಅಣ್ಣಯ್ಯ"ನಾಗಿ, "ಸೀನು"ವಾಗಿ "ಅಣ್ಣಯ್ಯ ಮಾಮ"ನಾಗಿ, "ಶ್ರೀನಿವಾಸ್" ಆಗಿ ಎಲ್ಲರಿಗೂ ಬೇಕಾದವರಾಗಿದ್ದಾರೆ.

ಅಣ್ಣಯ್ಯ ಬಿ.ಎಸ್‌ಸಿ. ಓದುವಾಗ ಇಬ್ಬರು ಆಪ್ತಗೆಳೆಯರಿದ್ದರು. ಒಬ್ಬರು ಎ. ರಾಜಾರಾವ್, ಮತ್ತೊಬ್ಬರು ಮೈಕೇಲ್ ಲೋಬೋ. ನಾವೆಲ್ಲ ಅವರನ್ನು "ಲೋಬಣ್ಣಯ್ಯ" ಎಂದೇ ಕರೆಯುತ್ತಿದ್ದೆವು. ಅವರು ಚಿಕ್ಕಮಗಳೂರು ಕಡೆಯವರು. ಮನೆಯಲ್ಲಿ ಕೊಂಕಣಿ ಮಾತನಾಡುತ್ತಿದ್ದರು. ಆದ್ದರಿಂದ ಅವರು ಮಾತನಾಡುವ ಕನ್ನಡ ನಮಗೆ ವಿಚಿತ್ರವಾಗಿ ಕೇಳಿಸುತ್ತಿತ್ತು. ನಮ್ಮ ತಂದೆಯವರ ಕೆಲಸದಿಂದಾಗಿ ನಾವೆಲ್ಲಾ ಆನಂದರಾವ್ ಸರ್ಕಲ್ ಬಳಿಯಿರುವ ಪೊಲೀಸ್ ಕ್ವಾಟರ್ಸ್‌ನಲ್ಲಿ ಇದ್ದೆವು. ಹೆಂಚಿನ ಚಿಕ್ಕಮನೆ. "ಲೋಬಣ್ಣಯ್ಯ"ನಿಗೆ ಬೆಂಗಳೂರಿನಲ್ಲಿ ವಸತಿಯ ತೊಂದರೆಯಾದಾಗ, ಸುಮಾರು ಮೂರು ತಿಂಗಳು ನಮ್ಮ ಮನೆಯಲ್ಲಿ ಸಸ್ಯಾಹಾರಿಯಾಗಿ ಇದ್ದರು. ಅವರಿಗೆ ಗಣೇಶಬೀಡಿ ಸೇದುವುದೆಂದರೆ ಚಟ. ಆದರೆ ಎಂದೂ ಮನೆಯಲ್ಲಿ ಸೇದಿದವರಲ್ಲ. ಹೊರಗಡೆ ಸೇದುವಾಗಲೂ ನಮ್ಮ ತಂದೆಯವರ ಕಣ್ಣುತಪ್ಪಿಸಿ, ತಮ್ಮ ಚಟವನ್ನು ತೀರಿಸಿಕೊಳ್ಳುತ್ತಿದ್ದರು. ಮನೆಯವರಿಗೆಲ್ಲಾ ತುಂಬಾ ಬೇಕಾದವರಾಗಿದ್ದರು. ಅಣ್ಣಯ್ಯ ಕೂಡ

ಚಿಕ್ಕಮಗಳೂರಿಗೆ ಒಂದೆರಡು ಸಲ ಹೋಗಿ ಬಂದಿದ್ದರು. ಈಗ ಕುಟುಂಬ ಸಮೇತ ಅವರು ಅಮೆರಿಕಾದಲ್ಲಿದ್ದಾರೆ. ಈಗ ಪತ್ರಕರ್ತರಾಗಿರುವ ಡಿ.ವಿ. ರಾಜಶೇಖರ್ ಮಲ್ಲೇಶ್ವರದ ಮನೆಗೆ ಆಗಾಗ ಬರುತ್ತಿದ್ದರು. ಅವರು ಬಂದು ಹೋದರೆ ಅಣ್ಣಯ್ಯನವರ ರೂಮೆಲ್ಲಾ ಸಿಗರೇಟು ವಾಸನೆ ತುಂಬಿಕೊಳ್ಳುತ್ತಿತ್ತು. ಇದರಿಂದ ನಮ್ಮ ತಂದೆ ಸಿಡಿಮಿಡಿಗೊಳ್ಳುತ್ತಿದ್ದರು. ನಮ್ಮ ತಾಯಿಗೆ ರಾಜಶೇಖರ್ ಎಂದರೆ ಪ್ರೀತಿ. ಎಷ್ಟೋ ಸಂದರ್ಭಗಳಲ್ಲಿ ಅಡಿಗೆ ಮಾಡಿಸಿ, ಊಟಕ್ಕೆ ಹಾಕಿ ಕಳುಹಿಸಿದ್ದಾರೆ, ಕ.ವೆಂ. ರಾಜಗೋಪಾಲರೊಬ್ಬರು ಮಾತ್ರ ನಮ್ಮ ಮನೆಯಲ್ಲಿ ನಿರ್ಭಿಡೆಯಿಂದ ಸಿಗರೇಟು ಸೇದುತ್ತಿದ್ದರು. ನಮ್ಮ ತಂದೆಗೆ ಅವರನ್ನು ಕಂಡರೆ ವಿಶೇಷ ಪ್ರೀತಿ, ಅವರ ಜೊತೆಯಲ್ಲೂ ಧಾರಾಳವಾಗಿ ಮಾತನಾಡುತ್ತಿದ್ದರು. ನಮ್ಮ ತಂದೆಯ ಜೊತೆಯಲಿ ಯಾವ ಸಂಕೋಚವೂ ಇಲ್ಲದೆ ಮಾತನಾಡುತ್ತಿದ್ದ ಇನ್ನೊಬ್ಬರೆಂದರೆ ಪುವ್ಯಾಶ್ರೀ (ಪುಸ್ತಕ ವ್ಯಾಪಾರಿ ಶ್ರೀನಿವಾಸ್). ಅಣ್ಣಯ್ಯನಿಗೆ ಪುಸ್ತಕಗಳನ್ನು ಒದಗಿಸುತ್ತಿದ್ದರು. ಅದನ್ನು ತಮ್ಮ ಚಿಕ್ಕರೂಮಿನಲ್ಲಿ ಬೀರುಮೇಲೆ, ಮಂಚದ ಕೆಳಗೆ ಜೋಡಿಸುತ್ತಿದ್ದರು. ಅಣ್ಣಯ್ಯ ಎಂ.ಎ. ಓದುವಾಗ ಸಹಪಾಠಿ ಸಿ. ವೀರಣ್ಣನವರು ಕೆಲದಿನ ನಮ್ಮ ಮನೆಯಲ್ಲಿ ಇದ್ದ ನೆನಪು.

ನಮ್ಮ ಅತ್ತಿಗೆ ಅಣ್ಣಯ್ಯನ ಹುಚ್ಚಾಟಗಳನ್ನು ಅರ್ಥಮಾಡಿಕೊಂಡು ಸಹಕರಿಸುತ್ತಿದ್ದರು. ಸಂಸಾರ ರಥವನ್ನು ಎಳೆಯುವುದರಲ್ಲಿ ಸಫಲರಾದರು. ಇಬ್ಬರು ಮಕ್ಕಳು, ತಮ್ಮ ತಮ್ಮ ಹಾದಿಯಲ್ಲೇ ನಡೆದು ದೊಡ್ಡ ಹೆಸರು ಮಾಡಿದ್ದಾರೆ. ತಂದೆ ತಾಯಿಗಳಿಗೆ ಪ್ರೀತಿಪಾತ್ರರಾಗಿದ್ದಾರೆ. ನನ್ನ ತವರು ಸದಾ ಸಂತೋಷದಿಂದಿರಲಿ.

❑

# ನನ್ನ ಅಣ್ಣ

● *ಸಿ. ಗಿರಿಜಾ ಕೃಷ್ಣರಾಜು*

ನಮ್ಮದು ಮಧ್ಯಮವರ್ಗದ ಕುಟುಂಬ. ನಮ್ಮ ತಂದೆಗೆ ಪೊಲೀಸ್ ಇಲಾಖೆಯಲ್ಲಿ ಕೆಲಸವಾದ್ದರಿಂದ ಊರಿಂದೂರಿಗೆ ವರ್ಗವಾಗುತ್ತಿತ್ತು. ನಾನು ಮತ್ತು ನನ್ನ ಕೊನೆಯ ತಂಗಿ ಬೃಂದಾ ತಂದೆ ತಾಯಿಗಳ ಜೊತೆಯಲ್ಲಿದ್ದೆವು. ಅಣ್ಣ, ಅಕ್ಕ ಮತ್ತು ಇನ್ನೊಬ್ಬ ತಂಗಿ ಸರಳ ಚಿಕ್ಕಬಳ್ಳಾಪುರದ ಅಜ್ಜಿ ಮತ್ತು ದೊಡ್ಡಮ್ಮನ ಜೊತೆಯಲ್ಲಿ ಬೆಳೆದರು. ನಾನು ಆಗಾಗ ಚಿಕ್ಕಬಳ್ಳಾಪುರಕ್ಕೆ ಹೋಗುತ್ತಿದ್ದೆ. ಆಗಲೇ ಅಣ್ಣಯ್ಯ ಚಿಕ್ಕಗೂಡಿನಲ್ಲಿ ಕಥೆ ಪುಸ್ತಕಗಳನ್ನು ಅಚ್ಚುಕಟ್ಟಾಗಿ ಜೋಡಿಸಿದ್ದರು. ಅವರಿಗೆ ಸಾಹಿತ್ಯದಲ್ಲಿ ಅಭಿರುಚಿ ಆಗಲೇ ಇತ್ತು ಎನ್ನುವುದಕ್ಕೆ ಸಾಕ್ಷಿ. ಅಣ್ಣಯ್ಯ ಆಗಾಗ ನಮಗೆ ಪತ್ರಗಳನ್ನು ಬರೆಯುತ್ತಿದ್ದರು. ಅದರಲ್ಲಿ ಹೊಸ ಹೊಸ ಶಬ್ದಗಳನ್ನು ಪ್ರಯೋಗ ಮಾಡುತ್ತಿದ್ದರು. ಮತ್ತೆ ಮತ್ತೆ ಓದಬೇಕು ಎನ್ನಿಸುತ್ತಿತ್ತು.

ಅಣ್ಣಯ್ಯ ಆಗಿನ ಬಸಪ್ಪ ಇಂಟರ್‌ಮಿಡಿಯೇಟ್ ಕಾಲೇಜಿನಲ್ಲಿ (ರೇಣುಕಾಚಾರ್ಯ ಕಾಲೇಜು) ಪಿ.ಯು.ಸಿ. ಮುಗಿಸಿ, ಬಿ.ಎಸ್‌ಸಿ.ಗೆ ಸೆಂಟ್ ಜೋಸೆಫ್ ಕಾಲೇಜಿಗೆ ಸೇರಿದರು. ಆ ಕಾಲೇಜಿನಲ್ಲಿ ಓದುವಾಗ ಅವರು ವಿಚಿತ್ರವಾದ ವೇಷಭೂಷಣಗಳನ್ನು ಹಾಕುತ್ತಿದ್ದರು. ಆದರೆ ಕೊನೆಯ ವರ್ಷಕ್ಕೆ ಬರುತ್ತಿದ್ದಂತೆ ಸರಳತೆ ಕಂಡಿತು. ಆ ಹೊತ್ತಿಗಾಗಲೆ ಸಾಹಿತ್ಯದ ಬಗ್ಗೆ ವಿಶೇಷ ಒಲವು ಮೂಡಿತ್ತು. ಆಗ ಅವರು ಬರೆದ ಒಂದು ಲೇಖನಕ್ಕೆ ಬಹುಮಾನ ಬಂತು. ಪತ್ರಿಕೆಯಲ್ಲಿ ಅಚ್ಚಾಯಿತು. ಸಣ್ಣ ಸಣ್ಣ ಕವಿತೆಗಳನ್ನು ಆಗಾಗ ಬರೆಯುತ್ತಿದ್ದರು.

ಅಣ್ಣನಿಗೆ ಕನ್ನಡ ಸಾಹಿತ್ಯವನ್ನು ಓದಬೇಕೆಂದು ಆಸೆ. ಅದನ್ನು ತಾಯಿಗೆ ಹೇಳುತ್ತಿದ್ದರು. ಅಷ್ಟರಲ್ಲಿ ಬಿ.ಎಂ.ಡಿ.ಯಲ್ಲಿ ಕೆಲಸ ಸಿಕ್ಕಿತು. ಅಲ್ಲಿ ಸುಮಾರು ಒಂದು ವರ್ಷಕಾಲ ಕೆಲಸಮಾಡಿದರು. ಅಲ್ಲಿಯ ಜನಗಳ ಜೊತೆ ಸೇರಿಕೊಂಡು, ಹೊಂದಿಕೊಂಡು ಒಳ್ಳೆಯ ಕೆಲಸ

ಮಾಡಿ ಒಳ್ಳೆಯ ಹೆಸರು ಗಳಿಸಿದರು. ಆದರೆ ನನ್ನ ತಂದೆಗೆ ಮಗನ ಕೆಲಸ ಸಮಾಧಾನ ತರಲಿಲ್ಲ. ಮಗನ ಇಚ್ಛೆಯಂತೆ ಕನ್ನಡ ಸಾಹಿತ್ಯವನ್ನು ಓದಲು ಅನುಮತಿ ನೀಡಿದರು. ಅಲ್ಲಿಂದ ಮುಂದೆ ಹಿಂದುರುಗಿ ನೋಡಲಿಲ್ಲ. ಎಲ್ಲರ ಪ್ರೀತಿ–ವಾತ್ಸಲ್ಯದ ಕೂಸಾಗಿ ಬೆಳೆದರು. ಮೊದಲಿನಿಂದಲೂ ನಮ್ಮ ಮನೆಯಲ್ಲಿ ಅವರಿಗೆ ವಿಶಿಷ್ಟವಾದ ಸ್ಥಾನವಿತ್ತು. ಅದನ್ನು ಅವರು ಇಂದಿಗೂ ಉಳಿಸಿಕೊಂಡಿದ್ದಾರೆ.

ಕನ್ನಡ ಎಂ.ಎ. ಮುಗಿಸಿದ ನಂತರ ಕ್ರೈಸ್ಟ್ ಕಾಲೇಜಿನಲ್ಲಿ ಅಧ್ಯಾಪಕರಾಗಿ ನೇಮಕಗೊಂಡರು. ಹಿರಿಯರ ಇಚ್ಛೆಯಂತೆ ಅತ್ತಿಗೆ ಸರಸ್ವತಿಯೊಡನೆ ವಿವಾಹವಾದರು. ಆಕೆ ಅನುಕೂಲೆಯಾದ ಸತಿಯಾದ್ದರಿಂದ ಅಣ್ಣಯ್ಯ ಸಾಹಿತ್ಯದಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳಲು ಸಾಧ್ಯವಾಯಿತು. ಅವರ ವ್ಯಕ್ತಿತ್ವವನ್ನು ಸೂಚಿಸಲು ಒಂದು ಪುಟ್ಟ ಘಟನೆಯನ್ನು ತಿಳಿಸಲು ಇಚ್ಛಿಸುತ್ತೇನೆ. ನನ್ನ ಮಗ ಹಿತಚರಣ ಕೆಂಗೇರಿಯ ಬಳಿಯಿರುವ ಜ್ಞಾನಬೋಧಿನಿ ಶಾಲೆಯಲ್ಲಿ ಓದುತ್ತಿದ್ದ. ಆಗ ಅವನ ಉಪಾಧ್ಯಾಯಿನಿಯಾಗಿದ್ದ ಪ್ರಮೀಳಾ ಮೇಡಂ ಒಮ್ಮೆ ಟಿ.ಎಸ್. ವೆಂಕಣ್ಣಯ್ಯನವರ ಬಗ್ಗೆ ಪಾಠಮಾಡುತ್ತಾ "ಇದೇ ರೀತಿಯ ಕೆಲಸಮಾಡುತ್ತಿರುವ ವ್ಯಕ್ತಿ ಕ್ರೈಸ್ಟ್ ಕಾಲೇಜಿನಲ್ಲಿದ್ದಾರೆ. ಅವರು ಹೆಸರು ಶ್ರೀನಿವಾಸರಾಜು" ಎಂದರಂತೆ. ಆಗ ನನ್ನ ಮಗ ತಟ್ಟನೆದ್ದು ಉತ್ಸಾಹದಿಂದ 'ಮಿಸ್ ಅವರು ನನ್ನ ಮಾವಯ್ಯ' ಎಂದು ಹೇಳಿದನಂತೆ. ಮನೆಗೆ ಈ ವಿಷಯವನ್ನು ತಿಳಿಸಿದಾಗ ಅಣ್ಣನ ಬಗ್ಗೆ ನಮಗೆಲ್ಲ ಹೆಮ್ಮೆ ಎನಿಸಿತು. ಅಣ್ಣ ತಾನು ಬರೆದದ್ದಕ್ಕಿಂತ ಬರೆಸಿದ್ದು ಜಾಸ್ತಿ. ಅವರು ಬರೆದ ಮೂಕನಾಟಕಗಳು ಅವರಿಗೆ ಹೆಚ್ಚಿನ ಹೆಸರನ್ನು ತಂದುಕೊಟ್ಟವು. ಅವರ ಮೂರು ಏಕಾಂಕಗಳಿಗೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂತು. ಕಾಲೇಜಿನಲ್ಲಿ ನೂರಕ್ಕೂ ಹೆಚ್ಚು ಪುಸ್ತಕಗಳನ್ನು ಪ್ರಕಟಿಸಿದ ಕೀರ್ತಿ ಅವರದು. ತೆರೆಮರೆಯಲ್ಲಿದ್ದುಕೊಂಡೇ ಅನೇಕ ಉತ್ತಮ ಸಾಹಿತ್ಯ ಕಾರ್ಯಗಳನ್ನು ಮಾಡಿದರು.

ಅಣ್ಣಯ್ಯ ನಿತ್ಯಜೀವನದಲ್ಲೂ ಹೆಚ್ಚಾಗಿ, ಅನಾವಶ್ಯಕವಾಗಿ ಮಾತನಾಡುವುದಿಲ್ಲ. ಸರಳಜೀವಿ, ನಿಗರ್ವಿ, ಶಾಂತಸ್ವಭಾವದ ವ್ಯಕ್ತಿ. ಮೊದಲಿನಿಂದಲೂ ಹಣ ಮತ್ತು ಕೀರ್ತಿಯಿಂದ ದೂರ ವಿದ್ದವರು. ಅಣ್ಣನಲ್ಲಿ ನನ್ನ ತಂದೆಯವರ ಕರ್ತವ್ಯದ ತನ್ಮಯತೆ, ಪ್ರಾಮಾಣಿಕತೆ, ತೃಪ್ತಿ ಹಾಗೂ ನನ್ನ ತಾಯಿಯ ಸಹನೆ, ಅತಿಥಿ ಸತ್ಕಾರ ಗುಣಗಳು ಮೈಗೂಡಿವೆ. ಅಣ್ಣನ ಗೆಳೆಯರ ಬಳಗ ದೊಡ್ಡದು. ಈಗ ಅಣ್ಣನದು ದೊಡ್ಡ ಸಂಸಾರ. ಇಬ್ಬರು ಮಕ್ಕಳು ಇಬ್ಬರು ಸೊಸೆಯರು, ಇಬ್ಬರು ಮೊಮ್ಮಕ್ಕಳು. ಅವರು ನಮ್ಮ ಮಧ್ಯೆ ನೂರುಕಾಲ ಇರಲಿ.

❑

# ನಾ ಕಂಡ ನನ್ನ ಅಣ್ಣ

● ಸಿ. ವಾಸಂತಿ ಕುಮಾರರಾಜ್ ಅರಸ್

ನನ್ನಣ್ಣ, ದೊಡ್ಡಕ್ಕ ಮತ್ತು ನಾನು ಮೂವರೂ ಅಜ್ಜಿ ದೊಡ್ಡಮ್ಮನ ಮನೆಯಲ್ಲಿ ಚಿಕ್ಕಬಳ್ಳಾಪುರದಲ್ಲಿ ಬೆಳೆದೆವು. ನನಗೆ ಬುದ್ಧಿ ಬರುವಷ್ಟರಲ್ಲಿ, ನನ್ನಣ್ಣ S.S.L.C. ಮುಗಿಸಿ ಮುಂದಿನ ವಿದ್ಯಾಭ್ಯಾಸಕ್ಕೆ ತಂದೆ ತಾಯಿಯರ ಹತ್ತಿರಕ್ಕೆ ಹೋಗಾಗಿತ್ತು. ಹಾಗಾಗಿ ನನಗೆ ಅಣ್ಣನ ಹತ್ತಿರ ತುಂಬ ಸಲಿಗೆಯೂ ಇಲ್ಲ. ಜಗಳ ಆಡಲು ಅವಕಾಶವೂ ಇರಲಿಲ್ಲ. ನಮ್ಮ ನಡುವಿನ ಅಂತರವೂ ಹೆಚ್ಚು. ಆಗೊಮ್ಮೆ ಈಗೊಮ್ಮೆ ಅಜ್ಜಿ ಅಮ್ಮನನ್ನು ನೋಡಲು ಬರುತ್ತಿದ್ದರು. ಆಗ ಅಣ್ಣನ ಹತ್ತಿರ ಏನು ಮಾತಾಡಬೇಕು, ಹೇಗೆ ಮಾತಾಡ ಬೇಕೆಂಬುದು ಗೊತ್ತಾಗುತ್ತಿರಲಿಲ್ಲ. ಆದರೂ ಅಣ್ಣ ಬಂದನೆಂಬ ಸಂತೋಷ, ಸಂಕೋಚ ಇರುತ್ತಿತ್ತು. ನನ್ನ ನೆನಪಲ್ಲಿ ಉಳಿದ ಒಂದೇ ಒಂದು ಸನ್ನಿವೇಶವೆಂದರೆ ಅಣ್ಣ ಹೈಸ್ಕೂಲಿನಲ್ಲಿ ನಾಟಕವಾಡಿದ್ದು, ಅದೂ ಹುಡುಗಿಯ ಪಾತ್ರದಲ್ಲಿ ಚೆನ್ನಾಗಿ ಅಭಿನಯಿಸಿದ್ದು, ಅದನ್ನು ಅವರ ಎಂ. ರೋಶನ್‌ಬೇಗ್ ಮಾಸ್ಟರ್ ಮನೆಗೆ ಬಂದು ಅಜ್ಜಿಯ ಹತ್ತಿರ ಹೇಳಿ ಹೊಗಳಿದ್ದು.

ನಾನು ಓದುವ ಹೊತ್ತಿಗೆ ಅಲ್ಲಿಗೇ ಕಾಲೇಜು ಬಂದದ್ದರಿಂದ ನನ್ನ ಪೂರ್ಣ ವಿದ್ಯಾಭ್ಯಾಸವನ್ನು ಅಲ್ಲಿಯೇ ಮುಗಿಸಿದೆ.



ಅಣ್ಣ P.U.C. ಮತ್ತು B.Sc. ಓದುವಾಗ ಬಹಳ ಜೋರಾಗಿದ್ದ ಮತ್ತು ರಂಗು ರಂಗಿನ ಬಟ್ಟೆ ಹಾಕುತ್ತಿದ್ದ ಎಂದು ಕೇಳಿದ್ದೇನೆ. ಆಮೇಲೆ ಏನಾಯಿತೋ ತಿಳಿಯದು. ಅವನು ವಿಜ್ಞಾನದ ಜಾಡನ್ನು ಬದಲಾಯಿಸಿ ಸಾಹಿತ್ಯದ ಕಡೆಗೆ ಒಲವು ತೋರಿಸಿದ್ದು, ಮತ್ತೆ B.A., M.A. ಮಾಡಿ ಉಪನ್ಯಾಸಕರಾಗಿದ್ದು ಒಂದು ದೊಡ್ಡ ತಿರುವು.

ಅಜ್ಜಿ, ಅಮ್ಮ, ತಾಯಿ-ತಂದೆಯರಿಗೆ ಯಾವತ್ತೂ ಎದುರು ವಾದಿಸಿದವರಲ್ಲ, ಎದುರು ನಿಂತು ಮಾತಾಡಿದವರಲ್ಲ. ಏನಿದ್ದರೂ ಅವರ ಕಾರುಬಾರು ತಾಯಿಯ ಹತ್ತಿರವೇ.

ಅಕ್ಕ ಹೇಳುತ್ತಿದ್ದಳು, ಅಣ್ಣನಿಗೆ ಸ್ನೇಹಿತರು ತುಂಬ ಅಂತ. ನನಗೆ ಅವರ್‍ಯಾರ ಪರಿಚಯವಿಲ್ಲ. ಏಕೆಂದರೆ ನಾನು ಬರುತ್ತಿದ್ದುದೇ ರಜಾ ಸಮಯದಲ್ಲಿ. ಅವರಲ್ಲಿ ಕೆಲವರು ಮಾತ್ರ ನನಗೆ ಗೊತ್ತು. ಲೋಬಣ್ಣ, ರಾಗಣ್ಣ, ನಾರಾಯಣ್, ಶ್ರೀಮತಿ, ವಿಜಯಲಕ್ಷ್ಮಿ ಮತ್ತು ಪುಷ್ಪ ಕುಮಾರಿ.

ಅಕ್ಕಂದಿರ ಮದುವೆಯಲ್ಲಿ, ಅಣ್ಣನ ವಾತ್ಸಲ್ಯದ ಹೊಣೆಗಾರಿಕೆಯ ಒಡನಾಟ ಓಡಾಟವನ್ನು ಕಂಡಿದ್ದೇನೆ. ಇನ್ನು ಅಣ್ಣನ ಮದುವೆಯ ವಿಚಾರಕ್ಕೆ ಬಂದರೆ, ತಾಯಿಯ ಅಣ್ಣನ ಮಾತನ್ನು ಉಳಿಸಲು, ಸೋದರಮಾವನ ಸಂಬಂಧಿಯ ಮಗಳನ್ನು ಮದುವೆಯಾದರು. ಅದು ಅವರಿಗೆ ಇಷ್ಟ ಇತ್ತೋ ಇಲ್ಲವೋ ತಿಳಿಯದು.

ತಂಗಿಯರ ವಿಚಾರದಲ್ಲಿ ಯಾವತ್ತೂ ತುಂಬ ಒರಟಾಗಿ ನಡೆದುಕೊಂಡವನಲ್ಲ ಮತ್ತು ಬೈದವನೂ ಅಲ್ಲ. 'ಹೋಗೆ' 'ಬಾರೆ' ಎಂದು ಕರೆದವನೂ ಅಲ್ಲ.

ನನ್ನ ಮದುವೆಯ ವಿಚಾರದಲ್ಲಿ ಅಣ್ಣನ ಪಾತ್ರ ದೊಡ್ಡದು. ಅವರ ಗುರುಗಳಾದ ಎಂ.ಎಚ್. ಕೃಷ್ಣಯ್ಯನವರು ತಿಳಿಸಿದಂತೆ, "ರಾಜು ನಿಮ್ಮವರ ಹುಡುಗ ಈಗತಾನೆ ಕೆಲಸಕ್ಕೆ ಸೇರಿದ್ದಾನೆ ಇಲ್ಲಿ (ಮಂಗಳೂರಿನಲ್ಲಿ). ನಿನಗೆ ತಂಗಿಯರಿದ್ದಾರೆಂದು ಹೇಳಿದ್ದೆ. ಏಕೆ ನೋಡಬಾರದು."

ಆಗ ಅಣ್ಣ ಮತ್ತು ಭಾವ ಹೋಗಿ ನೋಡಿ ಮಾತಾಡಿ ಅವರು ಬರುವ ದಿನವನ್ನೂ ನಿಗದಿಮಾಡಿ ಬಂದರು. ಹುಡುಗ ಸಿಕ್ಕಲಿಲ್ಲವೆಂದು ತಾಯಿಗೆ ಸತಾಯಿಸಿ ತಮಾಷೆ ಮಾಡಿದ್ದರು. ಕಾರಣ ಆ ದಿನ ಮೂರ್ಖರ (ಏಪ್ರಿಲ್ ೧) ದಿನವಾಗಿದ್ದಿತು.

ಮದುವೆ ಮುಗಿದು ಹೆಣ್ಣು ಒಪ್ಪಿಸಿ ಅವರ ಜೊತೆ ಸಿಹಿತಿಂಡಿ ಕಳಿಸುವುದು ವಾಡಿಕೆ. ಆ ದುಃಖದ ಸನ್ನಿವೇಶದಲ್ಲಿ ಎಲ್ಲವನ್ನೂ ಕಾರಲ್ಲಿ ಇಡುವಾಗ, ಸಿಹಿತಿಂಡಿಯ ಡಬ್ಬವನ್ನೇ ಮರೆತರು. ನಮ್ಮೆಲ್ಲರಿಗೂ ಶುಭ ಹಾರೈಸಿ, ವಿದಾಯ ಹೇಳಿ ಒಳಗೆ ಹೋದಾಗ ಗೊತ್ತಾಯಿತು. ಬೀಗರ ಮನೆಗೆ ಕಳಿಸುವ ತಿಂಡಿಯನ್ನು ಮರೆತೆವೆಂದು. ಅದು ಅಣ್ಣನಿಗೆ ಗೊತ್ತಾಗಿ, ಅವರು ಏನೆಂದು ಕೊಳ್ಳುತ್ತಾರೆ ಎಂದು ಕೂಗಾಡಿ, ತಾನೇ ಬಸ್ಸಿನಲ್ಲಿ ಹೊತ್ತುಕೊಂಡು ಮಾರನೆಯ ಬೆಳಿಗ್ಗೆಯೇ ಬಂದರು.

ಅಣ್ಣ ಒಬ್ಬನೇ ಅಂತ ಪ್ರೀತಿಯಿಂದ ಮೂವರ ತಾಯಿಯರ ನಡುವೆ ಮುದ್ದಿನಿಂದ ಬೆಳೆದವನು. ಅಂಥವನು ಒಂದೂವರೆ ಮೈಲಿ ಭುಜದ ಮೇಲೆ ತಿಂಡಿ ಡಬ್ಬ ಹೊತ್ತು ತುಂತುರು ಮಳೆಯಲ್ಲಿ ಕೆರೆ ಏರಿ ಮೇಲೆ ನಡೆದು ಬಂದನೆಂದರೆ ಎಲ್ಲರಿಗೂ ಆಶ್ಚರ್ಯ. ಅದೂ ಆಗ ನಮ್ಮ ಮಲೆನಾಡಿಗೆ ಬಸ್ಸುಗಳೇ ಕಡಿಮೆ. ಅದೂ ರೋಡಿನಿಂದ ಅರೇನಳ್ಳಿ ಕ್ರಾಸ್‌ನಿಂದ $1^1/_2$ ಮೈಲಿ. ತೋಟದಲ್ಲಿ, ಕೆರೆಯ ಏರಿಯ ಮೇಲೆ ನಡೆದು ಹೊಸಮನೆಗೆ (ಸಕಲೇಶಪುರದ ಹತ್ತಿರ) ಬರಬೇಕು. ಹಾಗಾಗಿ, ಡಬ್ಬವನ್ನು ಭುಜದ ಮೇಲೆ ಹೊತ್ತುಕೊಂಡು ಬಂದ ಆ ಅಣ್ಣನ ದೃಶ್ಯ ನಾನು ಎಂದೆಂದಿಗೂ ಮರೆಯುವುದಿಲ್ಲ. ತನ್ನ ತಂಗಿಯನ್ನು ಗಂಡಿನವರು ಎಲ್ಲಿ ಹಾಸ್ಯ ಮಾಡುತ್ತಾರೋ ಛೇಡಿಸುತ್ತಾರೊ ಎಂದು ರಾತ್ರಿಯೆಲ್ಲಾ ಬಸ್ಸಿನಲ್ಲಿ ಬಂದಿದ್ದಾರೆ. ಇದು ತಂಗಿಯರ ಮೇಲಿನ ಪ್ರೀತಿ, ಹೇಗೆ ಗುಪ್ತಗಾಮಿನಿಯಾಗಿ ಇತ್ತು ಎಂದು ಗೋಚರವಾಗುತ್ತದೆ ಹಾಗೂ ಪ್ರಕಟವಾಗುತ್ತದೆ.

ನನ್ನವರು ಮಂಗಳೂರಿನಿಂದ ಬಂದಾಗ ಹೋಗುವಾಗ ಅವರನ್ನು ರೈಲು ಅಥವಾ ಬಸ್ಸಿನಿಂದ ಕರೆತರುವುದು, ಬಿಡುವುದು ಇದೆಲ್ಲವನ್ನು ಬಹಳ ಪ್ರೀತಿ ಹೊಣೆಗಾರಿಕೆಯಿಂದ ಮಾಡುತ್ತಿದ್ದರು.

ನನ್ನವರಿಗೆ ಮಂಗಳೂರಿನಲ್ಲಿ ತುಂಬಾ ಹುಷಾರು ಇಲ್ಲದಾಗ, ನನಗೆ ತಿಳಿಸದೆಯೇ ಏತಕ್ಕೊ ಹೇಳಿಕಳಿಸಿದ್ದಾರೆಂದು ಹೇಳಿ ನನ್ನನ್ನು ಮಗುವನ್ನು ಅಮ್ಮನನ್ನೂ ಕರೆದುಕೊಂಡು ಹೋದರು. ಹೋದಮೇಲೆ ಗೊತ್ತಾಯಿತು. ನನ್ನವರಿಗೆ ಹುಷಾರಿಲ್ಲವೆಂದು. ಆಗ ನಮ್ಮ ಜೊತೆಯಲ್ಲಿ ೪ ದಿನವಿದ್ದು ಧೈರ್ಯ ಹೇಳಿ ನೋಡಿಕೊಂಡದ್ದನ್ನು ನಾವು ಮರೆಯಲು ಸಾಧ್ಯವೇ ಇಲ್ಲ.

ಅವರದು ಯಾರಿಗೂ ಬಲವಂತವಾಗಿ ಏನನ್ನೂ ಒತ್ತಾಯಿಸಿ ಹೇರುವ ಸ್ವಭಾವವಲ್ಲ. ಅವರಿಗೆ ಸರಿ ಎನ್ನಿಸಿದ್ದನ್ನು ತಿಳಿ ಹೇಳುತ್ತಾರೆ. ಕೇಳದಿದ್ದರೆ ಅವರ ಇಷ್ಟವೆಂದು ಸುಮ್ಮನಾಗುತ್ತಾರೆ.

ನನ್ನ ಅಣ್ಣನ ಪ್ರೀತಿ ಆಡಂಬರ, ಹೊಗಳಿಕೆ, ತೋರಿಕೆ, ನಟನೆಯ ಪ್ರೀತಿಯಲ್ಲ. ಅವರ ಪ್ರೀತಿ ಯಾರಿಗೂ ಕಾಣದ ಗೋಪ್ಯವಾಗಿ ಹೃದಯದಲ್ಲಿ ಅಡಗಿರುವ ಗುಪ್ತಗಾಮಿನಿ ಪ್ರೀತಿ.

ನನ್ನ ಅಣ್ಣನ ಬಗ್ಗೆ ಬರೆಯುವಷ್ಟು ಸಾಹಿತಿ, ಕವಯಿತ್ರಿ ನಾನಲ್ಲ. ನಾನು ಕಂಡ ನನ್ನಣ್ಣನ ಬಗ್ಗೆ ನನಗೆ ತೋಚಿದ್ದನ್ನು ಬರೆದಿದ್ದೇನೆ.

ಅಧಿಕ ಪ್ರಸಂಗವಾಗಿದ್ದರೆ ಹಂಸಕ್ಷೀರ ನ್ಯಾಯದಂತೆ ನನ್ನನ್ನು ಕ್ಷಮಿಸಿ.



# ನಾನು ಕಂಡಂತೆ ನನ್ನ ಅಣ್ಣಯ್ಯ

● ಸಿ. ಸುಶೀಲಾ ರಾಮರಾಜು

ನಾನು ಅಣ್ಣಯ್ಯನ ದೊಡ್ಡ ತಂಗಿ. ಸಾಮಾನ್ಯವಾಗಿ ಹೆಣ್ಣುಮಕ್ಕಳು ಮದುವೆಯಾಗಿ ಅತ್ತೆಮನೆ ಸೇರುವುದು ಸಂಪ್ರದಾಯ. ಆದರೆ ನನ್ನ ಪಾಲಿಗೆ ಹಾಗಾಗಲಿಲ್ಲ. ತವರು ಮನೆಯ ಪಕ್ಕದಲ್ಲೇ ಅನೇಕ ವರ್ಷಗಳು ಉಳಿಯುವ ಅದೃಷ್ಟ ನನ್ನದಾಯಿತು. ಹಾಗಾಗಿ ತವರುಮನೆಯ ಸಾಮೀಪ್ಯ ನನ್ನ ಎಲ್ಲ ತಂಗಿಯರಿಗಿಂತ ನನಗೆ ಹೆಚ್ಚಾಗಿ ದೊರೆಯಿತು. ಅಣ್ಣಯ್ಯ, ನಾನು ಮತ್ತು ನನ್ನ ತಂಗಿ ಸರಳಾ ಬೆಳೆದದ್ದು ಚಿಕ್ಕಬಳ್ಳಾಪುರದ ಅಜ್ಜಿ ಮನೆಯಲ್ಲಿ. ದೊಡ್ಡಮ್ಮನ ತ್ಯಾಗಜೀವನ, ಶಾಂತಸ್ವಭಾವ, ಎಲ್ಲರನ್ನೂ ಒಂದೇ ರೀತಿ ನೋಡುವ ರೀತಿ ಅಣ್ಣಯ್ಯನ ಮೇಲೆ ಪ್ರಭಾವ ಬೀರಿರಬಹುದು.

ಬಾಲ್ಯದಲ್ಲೆಲ್ಲಾ ಅಜ್ಜಿಮನೆಯಲ್ಲಿ ಜೊತೆಯಾಗಿ ಇದ್ದೆ. ಕಾಲೇಜು ಸೇರಬೇಕಾಗಿ ಬಂದಾಗ ತಂದೆ-ತಾಯಿಗಳ ಜೊತೆಯಲ್ಲಿದ್ದೆ. ಮದುವೆಯಾದ ಮೇಲೆ ಪಕ್ಕದ ಮನೆಯಲ್ಲಿದ್ದೆ. ಆದ್ದರಿಂದ ನನಗೆ ಒಂದಲ್ಲ ಒಂದು ರೀತಿಯಿಂದ ಅಣ್ಣಯ್ಯನ ಪ್ರಭಾವ ನನ್ನ ಮೇಲೆ ಆಗಿದೆ. ಈಗಲೂ ವೈಯಾಲಿಕಾವಲ್ ಬಡಾವಣೆಯಲ್ಲಿರುವ ನಮಗೆ ಅವರ ಸಂಪರ್ಕ ಇದ್ದೇ ಇದೆ. ವಾರದಲ್ಲಿ ಒಂದೆರಡು ಬಾರಿ ಯಾದರೂ ನಾವು ಭೇಟಿಯಾಗುತ್ತೇವೆ. ಮನಸ್ಸಿನಲ್ಲಿ ಎಲ್ಲೋ ಅಡಗಿದ ಭಾವನೆಗಳಿಗೆ, ಬರಹದ ರೂಪ ಕೊಡುವ ಅವಕಾಶ ಇದೀಗ ಒದಗಿ ಬಂದಿದೆ.



ಇಂದಿಗೂ ನೆನಪಾಗುವುದು ನಲವತ್ತು ವರ್ಷಗಳ ಹಿಂದಿನ ಮಾತು. ಅಂದಿನ ದಿನಗಳಲ್ಲಿ ಹಬ್ಬ ಹರಿದಿನಗಳ ಸಂಭ್ರಮವೇ ಸಂಭ್ರಮ. ಮನೆಯ ಆಳುಕಾಳುಗಳಿಗೆ, ತೋಟಿ ತಳವಾರರಿಗೆ ಹಬ್ಬದ ಊಟದ ಜೊತೆಗ ಭಕ್ಷೀಸು ಕೊಡುವುದು ವಾಡಿಕೆ. ಒಂದು ಯುಗಾದಿ ಹಬ್ಬ. ಹಬ್ಬದ ಮರುದಿನ ತೋಟಿ ಹಬ್ಬದ ಹೋಳಿಗೆಗಾಗಿ,

ಭಕ್ಷೀಸ್‌ಗಾಗಿ ಎಂದಿನಂತೆ ಬಂದವನೇ ಒಂದೇ ಸಮನೆ 'ಅಮ್ಮಾ.....' ಎಂದು ಕರೆದನು. ಅಮ್ಮನ ಸೂಚನೆಯಂತೆ ಹೋಳಿಗೆ, ಅನ್ನ ಸಾರು ಕೊಟ್ಟಾಯಿತು. ಇನ್ನು ಭಕ್ಷೀಸು. ಅದನ್ನು ಕೊಡಲು ಅಮ್ಮ ನನ್ನನ್ನು ಒಳಗೆ ಕರೆದರು. ನಾನು ತೋಟಿಗೆ ತೆಲುಗಿನಲ್ಲಿ 'ಉಂಡ್ರಾ' (ಇರೋ) ಎಂದು ಹೇಳಿ, ಒಳಗೆ ಹೋಗಿ ಅಮ್ಮ ಕೊಟ್ಟ ಭಕ್ಷೀಸನ್ನು ತಂದು ಕೊಟ್ಟೆ. ಅವನು ಹೋದ ಮೇಲೆ ಅಣ್ಣಯ್ಯ ನನ್ನನ್ನು ಕರೆದರು. 'ನೀನು ಅವನಿಗೆ ಏಕವಚನದಲ್ಲಿ ಹೇಳುವುದು ಸರಿಯೇ? ತೋಟಿಯಾದ ಮಾತ್ರಕ್ಕೆ ಅವನನ್ನು ಹಾಗೆ ಕರೆಯುವುದು ಸರಿಯೇ? ಅವನಿಗೆ ನಿನ್ನ ತಂದೆಯಷ್ಟು ವಯಸ್ಸಾಗಿದೆ. ಆ ವಯಸ್ಸಿಗಾದರೂ ಗೌರವ ಕೊಡುವುದು ಬೇಡವೇ?' ಎಂದು ತರಾಟೆಗೆ ತೆಗೆದುಕೊಂಡರು. ಇಂದು ನಾನು ಯಾರನ್ನು ಮಾತನಾಡಿಸಿದರೂ ನನ್ನ ಸ್ಮರಣೆ ಅಂದಿಗೆ ಜಾರುತ್ತದೆ. ಇದು ನಾನು ಅವರಿಂದ ಕಲಿತ ಪಾಠ. ಅವರು ಈವರೆಗೆ ಯಾರನ್ನೇ ಆಗಲಿ, ಯಾವ ಸಂದರ್ಭದಲ್ಲಿಯೇ ಆಗಲಿ, ತಾಳ್ಮೆ ಕಳೆದುಕೊಂಡೂ ನೋವಾಗುವಂತೆ ಮಾತನಾಡಿದ್ದಾಗಲಿ, ನಡೆದುಕೊಂಡದ್ದಾಗಲಿ ನಾನು ನೋಡಿಲ್ಲ.

ಅಣ್ಣಯ್ಯನ ಇನ್ನೊಂದು ವಿಶೇಷತೆ ಎಂದರೆ, ಅವರಿಗೆ ಇಷ್ಟವಿಲ್ಲದಿದ್ದರೂ ತಮ್ಮ ಸುತ್ತಮುತ್ತಲವರಿಗೆ ಇಷ್ಟವಾಗುತ್ತದೆ, ಸಂತೋಷವಾಗುತ್ತದೆ ಎಂದಾಗ ಅದನ್ನು ತೋರಗೊಡದೆ ಭಾಗವಹಿಸುತ್ತಿದ್ದರು. ಅವರಿಗೆ ದೇವರಲ್ಲಿ ನಂಬಿಕೆ ಇದೆ ಎಂದು ನನಗನಿಸುವುದಿಲ್ಲ. ಏಕೆಂದರೆ ಅವರು ಎಂದೂ ತಾವಾಗಿಯೇ ದೇವಸ್ಥಾನಕ್ಕೆ ಹೋದವರಲ್ಲ. ಹಾಗೆಂದು ಹಿರಿಯರಿಗೆ ನೋವಾಗುವಂತೆ ನಡೆದುಕೊಳ್ಳುತ್ತಿರಲಿಲ್ಲ. ಅಂತಹ ಸಂದರ್ಭಗಳನ್ನು ಅದೊಂದು ಸಾಮಾಜಿಕ ಚಟುವಟಿಕೆ, ಪರಸ್ಪರ ಭೇಟಿಯಾಗುವ ಅವಕಾಶವಾಗಿ ಮಾರ್ಪಡಿಸಿಕೊಳ್ಳುತ್ತಿದ್ದರು. ನಮ್ಮ ತಂದೆ-ತಾಯಿ ಮದುವೆಯಾದ ಐವತ್ತನೆಯ ವರ್ಷದಲ್ಲಿ ಸತ್ಯನಾರಾಯಣ ಪೂಜೆಯನ್ನು ಗುಟ್ಟಹಳ್ಳಿ ಆಂಜನೇಯ ಸ್ವಾಮಿ ದೇವಸ್ಥಾನದಲ್ಲಿ ಆಚರಿಸಿದೆವು. ಹಾಗೇ ಚಿಕ್ಕಬಳ್ಳಾಪುರದಲ್ಲಿ ಪ್ರತಿವರ್ಷ ನಡೆಯುವ ರಥಸಪ್ತಮಿಯಲ್ಲಿ ಕುಟುಂಬದವರೆಲ್ಲರೂ ಭಾಗವಹಿಸುತ್ತೇವೆ. ಈ ಎಲ್ಲ ಸಂದರ್ಭಗಳಲ್ಲೂ ಅವರು ಉತ್ಸಾಹದಿಂದ ಭಾಗವಹಿಸುತ್ತಾರೆ. ಎಲೆಯ ಮೇಲಿನ ನೀರಿನ ಹನಿಯಂತೆ ಇದ್ದುಬಿಡುತ್ತಾರೆ. ಅವರು ಇನ್ನೊಬ್ಬರ ಭಾವನೆಗಳಿಗೆ ನಂಬಿಕೆಗಳಿಗೆ ಬೆಲೆ ಕೊಡುತ್ತಾರೆ. ಆದರೆ ತಮ್ಮ ನಿಲುವನ್ನು ಬದಲಿಸುವುದಿಲ್ಲ.

ನಮ್ಮ ತಂದೆ ತಾಯಿಗಳಲ್ಲಿ, ಅಣ್ಣಯ್ಯನಿಗೆ ತಾಯೊಂದಿಗೆ ಹೆಚ್ಚಿನ ಸಲಿಗೆ. ತಂದೆ ಬಗ್ಗೆ ಏನೋ ಒಂದು ರೀತಿಯ ಭಯಮಿಶ್ರಿತ ಗೌರವ. ಅವರಿಗೆ ತಂದೆಯಿಂದ ಏನೇ ಕೆಲಸವಾಗ ಬೇಕಾದರೂ ತಾಯಿಯ ಮೂಲಕವೇ ಆಗಬೇಕು. ಅವರು ತಂದೆಯೊಂದಿಗೆ ನೇರವಾಗಿ ಮಾತನಾಡಿದ್ದು ಬಹಳ ಕಡಿಮೆ. ತಾಯಿ ವಿಧಿವಶರಾದ ದಿನ ಅಣ್ಣಯ್ಯನ ದುಃಖದ ಕಟ್ಟೆ ಒಡೆಯಿತು. ತಾಯಿ ಕಳೇಬರವನ್ನು ತಬ್ಬಿಕೊಂಡು ಅಷ್ಟು ಜೋರಾಗಿ ಗಳ ಗಳ ಅತ್ತಿದ್ದನ್ನು ನಾನು ನೋಡಿರಲಿಲ್ಲ. ಅದನ್ನು ಇಂದು ಜ್ಞಾಪಿಸಿಕೊಂಡರೂ ಕಣ್ಣುಗಳು ಒದ್ದೆಯಾಗುತ್ತವೆ.

ಅವರು ನಮ್ಮನ್ನು ಕೀಟಲೆ ಮಾಡಲು ವಿಶೇಷವಾಗಿ ನಡೆದುಕೊಳ್ಳುತ್ತಿದ್ದರು. ಅಂದಿನ ದಿನಗಳ ವ್ಯಾಸಂಗದಲ್ಲಿ ಇಂದಿನ ಹಾಗೆ ಸೆಮಿಸ್ಟರ್ ಪದ್ಧತಿ ಇರಲಿಲ್ಲ. ವಾರ್ಷಿಕ ಪರೀಕ್ಷೆಗಳು ನಡೆಯುತ್ತಿದ್ದವು. ಪರೀಕ್ಷೆ ಮುಗಿಯುತ್ತಿದ್ದಂತೆ ನಮಗೆಲ್ಲ ಎಲ್ಲಿಲ್ಲದ ಖುಷಿ. ಫಲಿತಾಂಶ

ಪ್ರಕಟವಾಗುವ ದಿನ ಹತ್ತಿರವಾದಂತೆ ಏನೋ ಭಯ, ಆತಂಕ. ಆದರೆ ಅಣ್ಣಯ್ಯ ಹೇಗೋ ಬದಲಾಗಿ ಯಾವುದೋ ಸಂಗೀತದ ದನಿಯನ್ನು ಗುನುಗುನಿಸುತ್ತಾ ನಸುನಗುತ್ತಾ ಮನೆಯೆಲ್ಲಾ ಅಡ್ಡಾಡುತ್ತಿದ್ದರು. ನಮಗೋ ಭಯ ಒಂದು ಕಡೆ ; ಅಣ್ಣಯ್ಯ ಹೇಳದೆ ಇರುವುದಕ್ಕೆ ಕೋಪ ಇನ್ನೊಂದು ಕಡೆ. ಮರುದಿನ ಫಲಿತಾಂಶ ಪ್ರಕಟವಾದ ಮೇಲೆ ಆ ಫಲಿತಾಂಶ ನನಗೆ ಮೊದಲೇ ಗೊತ್ತಿತ್ತು ಎಂದು ಬೀಗುತ್ತಿದ್ದರು.

ನನ್ನ ದೊಡ್ಡಮಗ ವೈದ್ಯ, ವಿನಯಸಾಗರ್, ಕಿರಿಯ ಮಗ ಭರತಭೂಷಣ್ ಇಂಜಿನಿಯರ್ ಹಾಗೂ ಮಗಳು ಮಹತಿ ಕೂಡ ಇಂಜಿನಿಯರ್. ಹಿರಿಯ ಮಗನಿಗೆ ಹೆಣ್ಣು ಹುಡುಕುವ ಜವಾಬ್ದಾರಿ ನಮ್ಮ ಮೇಲಿತ್ತು. ವೈದ್ಯ ವೃತ್ತಿ ಆರಿಸಿಕೊಂಡಿದ್ದರಿಂದ ಮದುವೆ ನಿಧಾನವಾಯಿತು. ಮಕ್ಕಳು ನಮಗೆ ಜವಾಬ್ದಾರಿ ವಹಿಸಿದಾಗ ನಮ್ಮ ಹೊಣೆ ದ್ವಿಗುಣಗೊಳ್ಳುತ್ತದೆ. ಸಾಕಷ್ಟು ಹುಡುಕಾಟ ನಡೆಸಿ, ಕೊನೆಗೆ ಮೈಸೂರು ಹುಡುಗಿ ಸೌಮ್ಯ ಸೊಸೆಯಾದಳು. ಮೈಸೂರು ಹುಡುಗಿ ವಿಷಯ ಅವರಿಗೆ ಮೊದಲು ತಿಳಿಸಿದಾಗ ಅವರು ಸಂತೋಷಪಟ್ಟರು. "ಅಂತೂ ನಿನ್ನ ಹುಡುಕಾಟಕ್ಕೆ ಒಂದು ತೆರೆ ಬಿತ್ತು" ಎಂದರು. ಇನ್ನೊಬ್ಬರ ಸಂತೋಷವನ್ನು ತಮ್ಮ ಸಂತೋಷವೆಂದೇ ಭಾವಿಸುತ್ತಾರೆ. ಈ ವಿಷಯದಲ್ಲಿ ಸ್ನೇಹಿತರಿರಲಿ, ಬಂಧುಗಳಿರಲಿ ಅವರಿಗೆ ಎಲ್ಲರೂ ಒಂದೇ.

ಅಣ್ಣಯ್ಯ ನೆನಪಾದಾಗಲೆಲ್ಲಾ ಜಾನಪದ ಗೀತೆಯ ಈ ತುಣುಕು ನೆನಪಾಗುತ್ತದೆ.

ಹೆಣ್ಣಿನ ಜನುಮಕೆ ಅಣ್ಣತಮ್ಮರು ಬೇಕು
ಬೆನ್ನು ಕಟ್ಟುವರು ಸಭೆಯೊಳಗೆ
ಹೊನ್ನು ಕಟ್ಟುವರು ಉಡಿಯೊಳಗೆ

ನಮ್ಮ ಅಣ್ಣಯ್ಯ ನಮ್ಮನ್ನು ಕೈಬಿಟ್ಟವರಲ್ಲ. ತವರುಮನೆಯ ಸಂಬಂಧ ಕಡಿದು ಹೋಗಿಲ್ಲ. ಅಣ್ಣಯ್ಯನ ಇನ್ನೊಂದು ಗುಣವೆಂದರೆ ಗುಟ್ಟು, ಹೇಳಬಾರದ್ದನ್ನು ಯಾವುದೇ ಕಾರಣಕ್ಕೂ ಹೇಳುತ್ತಿರಲಿಲ್ಲ. ಒಮ್ಮೆ ನಮ್ಮ ಯಜಮಾನರ ಸ್ಕೂಟರನ್ನು ಕಬ್ಬನ್‌ಪಾರ್ಕ್ ಪಬ್ಲಿಕ್ ಲೈಬ್ರರಿ ಹತ್ತಿರ ದೊಂಬಿಯ ಸಂರ್ಭದಲ್ಲಿ ದುಷ್ಕರ್ಮಿಗಳು ಸುಟ್ಟುಹಾಕಿದರು. ಭಾವ ಭಾವಮೈದ ಈ ವಿಷಯವನ್ನು ತಮ್ಮತಮ್ಮಲ್ಲೇ ಮಾತನಾಡಿಕೊಂಡು, ಅದನ್ನು ಗ್ಯಾರೇಜಿನಲ್ಲಿ ಹೊಸದು ಮಾಡಿಸಿ ಓಡಾಡುತ್ತಿದ್ದರು. ನನಗೆ ಈ ವಿಷಯ ತಿಳಿದದ್ದು ಹತ್ತು ವರ್ಷಗಳಾದ ಮೇಲೆ. ಮೊದಲಿನಿಂದಲೂ ಅನೇಕ ವಿದ್ಯಾರ್ಥಿಗಳಿಗೆ ಸಹಾಯಮಾಡುತ್ತಿದ್ದರು, ಮಾಡುತ್ತಿದ್ದಾರೆ ಎಂಬುದು ನಮ್ಮ ಗುಮಾನಿ. ಆದರೆ ಅದನ್ನು ಹೇಳದೆ, ಗೊತ್ತಿಲ್ಲದವರಂತೆ ಇದ್ದುಬಿಡುತ್ತಾರೆ.

ಅಣ್ಣಯ್ಯ ಸರಳ ಸಜ್ಜನಿಕೆಯ ವ್ಯಕ್ತಿ. ನಾನೇ ದೊಡ್ಡವನು ಎಂಬ ಬಿಗುಮಾನ ಇಲ್ಲ. ಮೊದಲಿನಿಂದಲೂ ತಮ್ಮನ್ನು ಮುಂದು ಮಾಡಿಕೊಳ್ಳುತ್ತಿರಲಿಲ್ಲ. ಏನೇ ಒಳ್ಳೆಯ ಕೆಲಸ ಮಾಡಿದರೂ ಅದನ್ನು ಮರೆತುಬಿಡುತ್ತಾರೆ. ನಮ್ಮ ತಂದೆ ಅವರಿಗೆ ತಿಂಗಳಿಗೆ ಐದಾರು ರೂಪಾಯಿಗಳು ಖರ್ಚಿಗೆ ಕೊಡುತ್ತಿದ್ದರು. ಅದನ್ನು ಹಳೆಯ ಪುಸ್ತಕಗಳಿಗೆ ಹಾಕುತ್ತಿದ್ದರು.

ಕೇವಲ ಶಾಲಾ ಶಿಕ್ಷಕಿಯಾಗಿ ಅಭ್ಯಾಸದ ಟಿಪ್ಪಣಿಗಳನ್ನು ಬರೆಯುತ್ತಿದ್ದ ನನಗೆ, ನನ್ನ ಅಂತರಂಗದ ಭಾವನೆಗಳನ್ನು ಬಿಚ್ಚಿಡಲು ಅನುವು ಮಾಡಿಕೊಟ್ಟವರಿಗೆಲ್ಲಾ ನನ್ನ ನಮನಗಳು.



# ನನ್ನ ಗೆಳೆಯ ರಾಜು

● *ಬಿ.ಕೆ. ಜನಾರ್ದನ*

**ನಾ**ನು ಮತ್ತು ರಾಜು ಬಾಲ್ಯದ ಗೆಳೆಯರು. ನಾವಿಬ್ಬರು ಚಿಕ್ಕಬಳ್ಳಾಪುರದ ಸರ್ಕಾರಿ ಪ್ರಾಥಮಿಕ ಶಾಲೆಯಲ್ಲಿ, ಮೊದಲನೆಯ ಬಾರಿಗೆ ಭೇಟಿಯಾದೆವು. ಅಂದಿನಿಂದ ನಾವಿಬ್ಬರು ಜೊತೆಜೊತೆಯಾಗಿಯೇ ಬೆಳೆದಿದ್ದೇವೆ. ಅಲ್ಲಿ ನಮ್ಮಿಬ್ಬರ ಮನೆಗಳೂ ಹತ್ತಿರದಲ್ಲೇ ಇದ್ದವು. ಹೀಗಾಗಿ ನಾವು ಶಾಲೆಯಲ್ಲಿ ಅಲ್ಲದೆ, ಇತರೆ ಸಮಯದಲ್ಲಿ ಒಟ್ಟಿಗೆ ಓದುತ್ತಿದ್ದೆವು, ಆಟವಾಡುತ್ತಿದ್ದೆವು.

ಪ್ರಾಥಮಿಕ ಶಾಲೆಯ ವಿದ್ಯಾಭ್ಯಾಸವನ್ನು ಮುಗಿಸಿದ ಅನಂತರ, ಮಾಧ್ಯಮಿಕ ಶಾಲೆಯನ್ನು ಸೇರಿದಾಗಲೂ ಒಂದೇ ತರಗತಿಯಲ್ಲಿ ಸಹಪಾಠಿಗಳಾದೆವು. ಆ ದಿನಗಳಲ್ಲಿ ಇಬ್ಬರೂ ಸ್ಕೌಟ್‌ಗೆ ಸೇರಿದ್ದೆವು. ನಾವು ಸಮವಸ್ತ್ರಗಳನ್ನು ಇಟ್ಟುಕೊಳ್ಳುವುದರ ಬಗ್ಗೆ, ನಾವು ನಡೆಸುವ ಪಥಸಂಚಲನದ ಬಗ್ಗೆ, ನಮ್ಮ ಪ್ರೀತಿಯ ಸ್ಕೌಟ್ ಟೀಚರ್ ಶೇಷಗಿರಿರಾಯರಿಗೆ ಎಲ್ಲಿಲ್ಲದ ಆಸಕ್ತಿ, ಮೆಚ್ಚುಗೆ. ನಮ್ಮ ಶಾಲೆಯಿಂದ ಎಲ್ಲೇ ಹೋಗಲಿ, ಎರಡು ಸಾಲುಗಳಲ್ಲಿ ಹೋಗುವುದು ವಾಡಿಕೆ. ಯಾವಾಗಲೂ ನಾವಿಬ್ಬರೇ, ಆ ಎರಡು ಸಾಲುಗಳ ಮುಖಂಡರಾಗಿ ಮುಂದೆ ಇರುತ್ತಿದ್ದೆವು. ಸ್ಕೌಟ್‌ನಲ್ಲಿ ಏರ್ಪಡಿಸುತ್ತಿದ್ದ ಸ್ಪರ್ಧೆಗಳಲ್ಲಿ ಬಹುಮಾನಗಳನ್ನು ಪಡೆಯುತ್ತಿದ್ದೆವು. ರಾಜು ಹೆಚ್ಚಾಗಿ ನಮ್ಮ ಮನೆಯಲ್ಲೇ ಇರುತ್ತಿದ್ದ. ನಮ್ಮ ಮನೆಯ ಬಳಗಕ್ಕೆಲ್ಲಾ ಬೇಕಾದವನಾಗಿದ್ದನು. ನಮ್ಮ ತಂದೆ ತಂಪುಪಾನೀಯಗಳ ಗೃಹ ಕೈಗಾರಿಕೆಯನ್ನು ಪುಟ್ಟ ಪ್ರಮಾಣದಲ್ಲಿ ಮನೆಯಲ್ಲಿಯೇ ನಡೆಸುತ್ತಿದ್ದರು. ಖಾಲಿ ಬಾಟಲುಗಳನ್ನು ತೊಳೆಯುವ ಕೆಲಸದಲ್ಲಿ, ನಾವೆಲ್ಲ ಒಟ್ಟಾಗಿ ಸೇರುತ್ತಿದ್ದೆವು. ಜೊತೆಗೆ ಹರಟೆ ಹೊಡೆಯುತ್ತಿದ್ದೆವು. ರಾಜು ಅಜ್ಜಿಯೋ ದೊಡ್ಡಪ್ಪನವರೋ ಬಂದು ಜೋರಾಗಿ ಕೂಗಿದಾಗ, ಮನೆಯ ಕಡೆ ಪೌಡಾಯಿಸುತ್ತಿದ್ದನು. ತಡವಾಗಿದ್ದಕ್ಕೆ ಎಷ್ಟೋ ಬಾರಿ ಪೆಟ್ಟು ತಿಂದಿದ್ದಾನೆ. ನಮ್ಮಿಬ್ಬರ ಗೆಳೆತನದ ಬಗ್ಗೆ, ಇಡೀ ಶಾಲೆಯೇ



ಮಾತನಾಡಿಕೊಳ್ಳುತ್ತಿತ್ತು. ನಮ್ಮಿಬ್ಬರ ಜೊತೆಗೆ ಶಿವಸ್ವಾಮಿ, ಶೇಖರ್, ವೆಂಕಟೇಶ್ ಸೇರಿ ಕೊಳ್ಳುತ್ತಿದ್ದರು.

ಆ ದಿನಗಳಲ್ಲಿ ಚಿಕ್ಕಬಳ್ಳಾಪುರ ಎಂದರೆ ಫುಟ್‌ಬಾಲ್, ಫುಟ್‌ಬಾಲ್ ಎಂದರೆ ಚಿಕ್ಕಬಳ್ಳಾಪುರ. ಊರಿಗೆ ಊರೇ ಫುಟ್‌ಬಾಲ್ ಆಟದ ಉತ್ಸಾಹದಲ್ಲಿ ಪಾಲುಗೊಳ್ಳುತ್ತಿತ್ತು. ಒಂದು ದಿನ ಘಟಾನುಘಟಿಗಳ ಫುಟ್‌ಬಾಲ್ ಪಂದ್ಯದಲ್ಲಿ ಒಬ್ಬ ಆಟಗಾರ, ತನ್ನಲ್ಲಿದ್ದ ಕೆಲವು ವಸ್ತುಗಳನ್ನು ಚಿಲ್ಲರೆ ಹಣವನ್ನು ತೆಗೆದು, ನಮ್ಮ ಗೆಳೆಯನೊಬ್ಬನ ಕೈಗೆ ಕೊಟ್ಟರು. ಪಂದ್ಯ ಮುಗಿದ ಮೇಲೆ, ವಾಪಸ್ಸು ಕೊಡಲು ಹೇಳಿದರು. ಈ ಮಧ್ಯೆ ಒಂದು ನಾಕಾಣೆ ನಾಣ್ಯವೊಂದನ್ನು ಗೆಳೆಯ ಬಚ್ಚಿಟ್ಟುಕೊಂಡು, ಅದನ್ನು ರಾಜುವೇ ಕದ್ದಿರಬೇಕೆಂದು ಹೇಳಿದನು. ಅದನ್ನು ಕೊಡುವಂತೆ ಜಗಳವಾಡಲು ಪ್ರಾರಂಭಿಸಿದನು. ಇದನ್ನು ಕೇಳಿ ರಾಜು ಗಾಬರಿಯಾದನು. ಏಕೆಂದರೆ ರಾಜು ಮನೆಯಲ್ಲಿ ಹಣಕಾಸಿನ ಬಗ್ಗೆ ಕಟ್ಟುನಿಟ್ಟು. ಆ ಕಾಲದಲ್ಲಿ ರಾಜುವಿನ ಹತ್ತಿರ ಬಿಡಿಗಾಸೂ ಇರುತ್ತಿರಲಿಲ್ಲ. ಹೀಗಿರುವಾಗ ರಾಜು ನಾಕಾಣೆಯನ್ನು ಎಲ್ಲಿಂದ ತಂದುಕೊಟ್ಟಾನು? ತಾನು ತೆಗೆದುಕೊಂಡಿಲ್ಲವೆಂದು ಅಂಗಲಾಚಿ ಬೇಡಿಕೊಂಡನು. ಆದರೆ ಆ ಗೆಳೆಯ ಕೇಳಲಿಲ್ಲ. ರಾಜುವಿನ ಕಣ್ಣಲ್ಲಿ ನೀರು ತುಂಬಿ ಬಂತು. ಆಗ ಆ ಗೆಳೆಯ ತಮಾಷೆಗೆ ಬಚ್ಚಿಟ್ಟಿದ್ದೆನೆಂದು, ನಾಕಾಣೆಯನ್ನು ತೆಗೆದುಕೊಟ್ಟನು. ಏಕಕಾಲಕ್ಕೆ ರಾಜುವಿಗೆ ದುಃಖ, ಕೋಪ ಒತ್ತರಿಸಿಕೊಂಡು ಬಂತು. ಏನೂ ಮಾಡಲಿಕ್ಕೆ ಆಗದೆ ಸುಮ್ಮನಾದನು. ರಾಜುದು ತುಂಬಾ ಮೃದುವಾದ ಮನಸ್ಸು. ಇವನಿಗೆ ಜಗಳವಾಡುವುದೇ ಬರುತ್ತಿರಲಿಲ್ಲ. ಈಗಲೂ ಬರುವುದಿಲ್ಲ.

ಭಾರತರತ್ನ, ಸರ್.ಎಂ. ವಿಶ್ವೇಶ್ವರಯ್ಯನವರು ಓದಿದ ಊರಿನಲ್ಲಿ ನಾವು ಓದುತ್ತಿದ್ದೇವೆಂಬ ಎಂಬ ಹೆಮ್ಮೆ ನಮಗೆ. ನಮ್ಮ ಮಾಧ್ಯಮಿಕ ಶಾಲೆ ಓದು ಮುಗಿಯಿತು. ಸರ್ಕಾರಿ ಪ್ರೌಢಶಾಲೆಗೆ ಸೇರಿದೆವು. ಒಂದೇ ತರಗತಿಗೆ ಸೇರಿದ್ದಲ್ಲದೆ, ಮತ್ತೆ ಸ್ಕೌಟ್‌ಗೆ ಸೇರಿದೆವು. ಒಂದು ಬಾರಿ ನಮ್ಮ ಊರಿನಿಂದ ಸ್ಕೌಟ್‌ಗಳನ್ನೆಲ್ಲಾ, ಸುಮಾರು ಇಪತ್ತು ಮೈಲಿ ದೂರದಲ್ಲಿದ್ದ ಬೆಂಡಿಗಾನಹಳ್ಳಿಗೆ ಕರೆದುಕೊಂಡು ಹೋದರು. ಅಲ್ಲಿ ಸುಮಾರು ಎರಡು ಮೈಲಿ ಉದ್ದದ ಸಂಪರ್ಕ ರಸ್ತೆ ಸಿದ್ಧಗೊಳ್ಳಬೇಕಿತ್ತು. ಆ ರಸ್ತೆಯನ್ನು ನಿರ್ಮಿಸಲು ನಾವೆಲ್ಲರೂ ಇಡೀ ದಿನ ದುಡಿದು ಸಂಜೆಯಾದ ಮೇಲೆ ಅನೇಕ ಬಗೆಯ ಆಟಗಳನ್ನು ಆಡುತ್ತಿದ್ದೆವು. ರಾಜು ಒಂದು ಚಿಕ್ಕ ಬಾಟಲಿನಲ್ಲಿ ತಲೆಗೆ ಹಚ್ಚಿಕೊಳ್ಳಲು ಕೊಬ್ಬರಿ ಎಣ್ಣೆಯನ್ನು ತಂದಿದ್ದನು. ಅದನ್ನು ಕಾಪಾಡುವುದೇ ಅವನಿಗೆ ದೊಡ್ಡ ಕಷ್ಟವಾಯಿತು. ರಾಜು ಅಜ್ಜಿ, ತಲೆಗೆ ಎಣ್ಣೆಯನ್ನು ಆಗಾಗ ಹಚ್ಚಿಕೊಳ್ಳುವಂತೆ ಹೇಳಿ ಕಳುಹಿಸಿದ್ದರು. ಬಟ್ಟೆಬರೆಗಳಿಗೆ ತಾಕದಂತೆ ಕೊಬ್ಬರಿ ಎಣ್ಣೆಯನ್ನು ಕಾಪಾಡುವುದು ಕಷ್ಟವಾಯಿತು. ಇವನ ಕಷ್ಟವನ್ನು ನೋಡಲಾರದೆ, ನಾವೆಲ್ಲಾ ಒಂದು ದಿನ ಇದ್ದಬದ್ದ ಎಣ್ಣೆಯನ್ನು ತಲೆಗೆ ಹಚ್ಚಿಕೊಂಡು ಖಾಲಿ ಮಾಡಿದೆವು. ಆಗ ರಾಜು ನೆಮ್ಮದಿಯ ಉಸಿರು ಬಿಟ್ಟನು.

ನಾವು ಪ್ರೌಢಶಾಲೆಯ ಎರಡನೆಯ ವರ್ಷದಲ್ಲಿದ್ದಾಗ, ಶಾಲೆಯಲ್ಲಿ ಎನ್.ಸಿ.ಸಿ. ಪ್ರಾರಂಭ ವಾಯಿತು. ಇದಕ್ಕೂ ನಾವಿಬ್ಬರು ಸೇರಿಕೊಂಡೆವು. ಇಲ್ಲಿ ಸ್ಕೌಟ್‌ಗಿಂತ ಹೆಚ್ಚಿನ ಶಿಸ್ತಿನಿಂದ ಕವಾಯಿತು, ಪಥಸಂಚಲನ ಮಾಡಬೇಕಿತ್ತು. ನಾವಿಬ್ಬರು ಇಲ್ಲೂ ಮಿಂಚಿದೆವು. ಮಿಲಿಟರಿ ಸಿಪಾಯಿಗಳು ನಮ್ಮ ಕವಾಯತನ್ನು ಮೆಚ್ಚಿಕೊಂಡು ಬೆನ್ನು ತಟ್ಟುತ್ತಿದ್ದರು. ನಮ್ಮ ಇಂಗ್ಲಿಷ್

ಟೀಚರ್ ಆದ ಎಂ. ರೋಶನ್‌ಜೇಗ್ ಇದಕ್ಕೆ ಮುಖ್ಯಸ್ಥರು. ತರಗತಿಯಲ್ಲೂ ಒಳ್ಳೆಯ ಇಂಗ್ಲಿಷ್ ಟೀಚರ್, ಮೈದಾನದಲ್ಲು ಒಳ್ಳೆಯ ಎನ್.ಸಿ.ಸಿ. ಆಫೀಸರ್. ಒಮ್ಮೆ ಮೈಸೂರಿನ ಕ್ಯಾಂಪ್‌ಗೆ ಹೋಗಿ ಬಹುಮಾನವನ್ನು ಪಡೆದು ಬಂದೆವು. ರಾಜು ಸೆಂಟ್ ಜೋಸೆಫ್ ಕಾಲೇಜಿನಲ್ಲಿದ್ದಾಗ ಎನ್.ಸಿ.ಸಿ. ಸಾರ್ಜೆಂಟ್ ಆಗಿದ್ದನು. ಕ್ರೈಸ್ಟ್ ಕಾಲೇಜು ಸೇರಿದ ಮೇಲೆ, ಪ್ರಥಮ ಎನ್.ಸಿ.ಸಿ. ಆಫಿಸರ್ ಆಗಿ ಹೆಸರು ಮಾಡಿದರು.

ಆಗ ಚಿಕ್ಕಬಳ್ಳಾಪುರದಲ್ಲಿ ಕಾಲೇಜು ಇರಲಿಲ್ಲ. ಮುಂದೆ ಓದಬೇಕಾದವರು ಬೆಂಗಳೂರಿಗೆ ಹೋಗುವುದು ಅನಿವಾರ್ಯವಾಗಿತ್ತು. ನಾವಿಬ್ಬರು ಬೇರೆ ಬೇರೆ ಕಾಲೇಜುಗಳು ಸೇರಬೇಕಾಯಿತು. ಶಿವಸ್ವಾಮಿ ಮತ್ತು ರಾಜು ಒಂದೇ ಕಾಲೇಜಿಗೆ ಸೇರಿದರು. ಆದರೂ ಆನಂದರಾವ್ ವೃತ್ತದ ಬಳಿಯಿರುವ, ಪೊಲೀಸ್ ಕ್ವಾಟರ್ಸ್‌ನಲ್ಲಿದ್ದ ರಾಜು ಮನೆಯಲ್ಲಿ, ನಮ್ಮ ಊರಿನವರೆಲ್ಲಾ ಆಗಾಗ ಸೇರುತ್ತಿದ್ದೆವು. ಆ ಸಮಯದಲ್ಲೇ ರಾಜು ಕನ್ನಡ ಪ್ರೇಮ ಕುಡಿಯೊಡೆಯತೊಡಗಿತು. ಆಗಲೇ ಚಿಕ್ಕಪುಟ್ಟ ಕಥೆಗಳನ್ನು, ಕವನಗಳನ್ನು ಬರೆಯುತ್ತಿದ್ದನು. ಕಾಲೇಜು ದಿನಗಳಲ್ಲಿ ರಾಜು ಕೆಲವು ಕವನಗಳನ್ನು ಬರೆದಿದ್ದನು. ಅವನು ಬರೆದ ಕವನಗಳಿಗೆ ನಾನು ರಾಗ ಸಂಯೋಜಿಸಿ ವಾದ್ಯಗೋಷ್ಠಿಗಳಲ್ಲಿ, ಸಾರ್ವಜನಿಕ ಸಮಾರಂಭಗಳಲ್ಲಿ ಹಾಡುತ್ತಿದ್ದೆ. ಅವುಗಳಲ್ಲಿ ಒಂದೆರಡು ನೆನಪಾಗುತ್ತಿವೆ. "ಬಾರೆ ನನ್ನ ರಾಣಿಯೇ.... ನನ್ನ ಜೀವದ ವಾಣಿಯೇ" ಎಂಬ ಕವನ ಮತ್ತು ಚೀನಿಯರು ನಮ್ಮ ದೇಶದ ಮೇಲೆ ಆಕ್ರಮಣ ಮಾಡಿದಾಗ "ಏಳಿರೈ, ಎದ್ದೇಳಿರೈ ಭಾರತ ಯೋಧರೇ.... ತಾಯ ಸೆರಗಿಡಿಯ ಬಂದಿಹರು ಚೀನಿಯರು, ಮಾನವನು ಕಾಪಿಡಲು ಮಕ್ಕಳನು ಕರೆದಿಹಳು' ಮುಂತಾದವು ಜನಪ್ರಿಯವಾಗಿದ್ದವು.

ರಾಜು ಕ್ರೈಸ್ಟ್ ಕಾಲೇಜಿನಲ್ಲಿ ಮಾಡಿದ ಕನ್ನಡದ ಕೆಲಸ ಒಂದು ಅಪೂರ್ವ ಸಾಧನೆ. ವಿಜ್ಞಾನದ ವಿದ್ಯಾರ್ಥಿಯಾಗಿದ್ದವನು ಸಾಹಿತ್ಯದ ವಿದ್ಯಾರ್ಥಿಯಾಗಿಬಿಟ್ಟನು. ಎಲೆಮರೆಯ ಕಾಯಾಗಿ, ಇಳಿವಯಸ್ಸಿನಲ್ಲೂ ಕನ್ನಡದ ಸೇವೆಯನ್ನು ಮಾಡುತ್ತಿದ್ದಾನೆ. ಅವನ ಕನ್ನಡದ ಕೆಲಸಕ್ಕೆ ನಿವೃತ್ತಿ ಎಲ್ಲಿ ಬಂತು? ರಾಜುವಿಗೆ ಒಳ್ಳೆಯದಾಗಲಿ ಎಂದರೆ ಕನ್ನಡಕ್ಕೆ ಒಳ್ಳೆಯದಾಗಲಿ ಎಂದೇ ಅರ್ಥ. ಅಲ್ಲವೇ?

❑

# ಸಾವಧಾನದಿಂದಿರು ಮನವೆ

● ಎ.ರಾಜಾರಾವ್

ನನಗೆ ಶ್ರೀ ಶ್ರೀನಿವಾಸರಾಜುರವರನ್ನು ನನ್ನ ಪ್ರೌಢಶಾಲೆಯ ಸಹಪಾಠಿಗಳಲ್ಲಿ ಒಬ್ಬರಾದ ಶ್ರೀ ಸೀತಾರಾಮರಾಜುರವರು ೧೯೫೮ರಲ್ಲಿ ನನಗೆ ಪರಿಚಯ ಮಾಡಿಸಿದರು. ಅಂದರೆ ನನ್ನ ಅವರ ಸಂಪರ್ಕ ಮತ್ತು ಸ್ನೇಹ ಸುಮಾರು ೫೦ ವರ್ಷಗಳದ್ದು. ನಾನು ಮತ್ತು ಅವರು ೧೯೫೯–೬೧ ಅವಧಿಯಲ್ಲಿ ಸೆಂಟ್ ಜೋಸೆಫ್ ಕಾಲೇಜಿನಲ್ಲಿ ಬಿ.ಎಸ್ಸಿ. ತರಗತಿಯಲ್ಲಿನ ಸಹಪಾಠಿಗಳು. ನನ್ನ ವಿದ್ಯಾರ್ಥಿ ದಿಶೆಯಲ್ಲಿ ಶ್ರೀನಿವಾಸರಾಜು ನನ್ನಲ್ಲಿ ಕನ್ನಡದ ಬಗ್ಗೆ ಪ್ರೀತಿಯನ್ನು ಹುಟ್ಟಿಸಿದರು ಮತ್ತು ಕನ್ನಡದ ಕೆಲಸವನ್ನು ಮಾಡಲು ಜಾಗೃತ ಬುದ್ಧಿಯನ್ನುಂಟುಮಾಡಿದರು, ಕಾಲೇಜು ಕನ್ನಡ ಸಂಘಕ್ಕೆ ಹೊಸ ಚಾಲನೆಯನ್ನು ನೀಡಿದರು. ಶ್ರೀ ರಾಜುರವರ ೫೦ ವರ್ಷಗಳ ಸ್ನೇಹ ನನಗೆ ಬದುಕಿನಲ್ಲಿ ಸಂತೋಷವನ್ನು, ಆನಂದವನ್ನು ಕೊಟ್ಟಿದೆ. ಸ್ನೇಹದ ಸವಿಯನ್ನು ಸವಿಯಬೇಕಾದಲ್ಲಿ ಶ್ರೀನಿವಾಸರಾಜುರವರ ಸ್ನೇಹ ಮಾಡಬೇಕು.

ನನ್ನ ನೆಚ್ಚಿನ ಗಾಯಕರಲ್ಲಿ ಒಬ್ಬರಾದ ಶ್ರೀ ಪುತ್ತೂರು ನರಸಿಂಹ ನಾಯಕ್‌ರವರು ಹಾಡುವ ಹಾಡುಗಳಲ್ಲಿ ನಾನು ಮೆಚ್ಚಿರುವ ಹಾಡು **"ಸಾವಧಾನದಿಂದಿರು ಮನವೆ"**. ಈ ಹಾಡನ್ನು ನಾನು ಪ್ರಸ್ತಾಪಿಸು ತ್ತಿರುವ ಕಾರಣವೇನೆಂದರೆ **ಶ್ರೀನಿವಾಸರಾಜುರವರು ಸಾವಧಾನವೆಂಬ ಈ ಹಾಡನ್ನು ಜೀವನದುದ್ದಕ್ಕೂ ಹಾಡುತ್ತಲೇ ಬಂದಿದ್ದಾರೆ"**. ಈ ಸಾವಧಾನದ ಗುಣವೇ ಅವರನ್ನು ಒಬ್ಬ ಒಳ್ಳೆಯ ಮನುಷ್ಯ ಮತ್ತು ಕನ್ನಡದ ನಿಸ್ಪೃಹ, ನಿಷ್ಠ, ನಿಷ್ಠುರ ಪ್ರಾಮಾಣಿಕ ಕನ್ನಡದ ಪ್ರಚಾರಕ ರನ್ನಾಗಿ ಮಾಡಿದೆ.

ಒಂದು ಅತ್ಯಂತ ಆಶ್ಚರ್ಯಕರವಾದ ಹಾಗೂ ಸತ್ಯವಾದ ವಿಚಾರವೇನೆಂದರೆ ಶ್ರೀನಿವಾಸರಾಜುರವರು ಎಡಪಂಥ, ಬಲಪಂಥ, ಸಮಾಜವಾದಿ ಗುಂಪು, ಸೆಕ್ಯೂಲರ್‌ವಾದಿ ಗುಂಪು, ಆಸ್ತಿಕರ ಗುಂಪು,

ನಾಸ್ತಿಕರ ಗುಂಪು ಈ ಯಾವ ಗುಂಪಿನಲ್ಲೂ ಸಂಪೂರ್ಣವಾಗಿ ಗುರ್ತಿಸಿಕೊಳ್ಳದೆ ಕನ್ನಡದ ಕೆಲಸವನ್ನು ಅದ್ಭುತವಾಗಿ ನಡೆಸಿಕೊಂಡು ಬಂದಿದ್ದಾರೆ. ಹಾಗಾದರೆ ಶ್ರೀನಿವಾಸರಾಜುರವರಿಗೆ ಯಾವ ತತ್ವವೂ ಇಲ್ಲವೇ? ಎಂಬ ಪ್ರಶ್ನೆ ಉದ್ಭವವಾಗುತ್ತದೆ. ನನಗೆ ತಿಳಿದಂತೆ ಇವರ ತತ್ವ **"ನಾನು ನಾಯಕನಲ್ಲ ಆದ್ದರಿಂದ ಯಾರೂ ನನ್ನನ್ನು ಹಿಂಬಾಲಿಸಬೇಕಿಲ್ಲ, ನಾನು ಯಾರನ್ನೂ ಹಿಂಬಾಲಿಸುವುದಿಲ್ಲ, ಏಕೆಂದರೆ ನನಗೆ ಯಾರೂ ನಾಯಕರಿಲ್ಲ. ನನ್ನ ಪಕ್ಕ, ಜೊತೆ ಜೊತೆಗೆ ಎಲ್ಲರೂ ನಡೆದಿದ್ದಾರೆ ಪ್ರೀತಿಯಿಂದ ಒಲುಮೆಯ ಸ್ನೇಹಿತರಾಗಿ"** ಈ ತತ್ವವೇ ಶ್ರೀ ಶ್ರೀನಿವಾಸರಾಜುರವರ ಬದುಕು, ಉಸಿರಾಗಿದೆ.

ಶ್ರೀನಿವಾಸರಾಜುರವರ ತತ್ವ, ದೊಡ್ಡತನ ಅವರ ಕನ್ನಡದ ಕೆಲಸ ಮತ್ತು ಅರ್ಹತೆಗೆ ತಕ್ಕನಾಗಿ ನಮ್ಮ ಕರ್ನಾಟಕ ಸರ್ಕಾರ ಯಾವ ಒಂದು ಪದವಿಯನ್ನೂ ಅವರಿಗೆ ಕೊಡಲಿಲ್ಲ. ಕನ್ನಡದ ಜನ ತಲೆ ತಗ್ಗಿಸಬೇಕಾದ ವಿಷಯ ಇದಾಗಿದೆ. ಶ್ರೀನಿವಾಸರಾಜುರವರು ಒಬ್ಬ ಭ್ರಷ್ಟರಾಗಿದ್ದರೆ, ಒಬ್ಬ ರಾಜಕಾರಣಿಯ ಅಥವಾ ಒಂದು ರಾಜಕೀಯ ಪಕ್ಷದ ಬಾಲಂಗೋಚಿ ಯಾಗಿದ್ದರೆ, ಒಬ್ಬ ಮಠಾಧಿಪತಿಯ ಆಶೀರ್ವಾದ ಅವರಿಗಿದ್ದಿದ್ದರೆ, ಇದಕ್ಕಿಂತ ಹೆಚ್ಚಾಗಿ ಸಮಾಜವಾದಿ, ಸೆಕ್ಯೂಲರ್‌ವಾದಿ, ಬುದ್ಧಿಜೀವಿ ಎಂಬ ಲೇಬಲ್‌ಗಳನ್ನು ಅಂಟಿಸಿಕೊಂಡಿದ್ದಿದ್ದರೆ ಅವರು ಯಾವೊತ್ತೋ ಒಂದು ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿ ಪ್ರಾಧಿಕಾರದ ಅಧ್ಯಕ್ಷರಾಗಿ, ಅಕಾಡೆಮಿಯ ಅಧ್ಯಕ್ಷರಾಗಿ ನೇಮಕವಾಗುತ್ತಿದ್ದರು. ನಾವು ಶ್ರೀ ರಾಜುರವರಿಗೆ ಈ ಸ್ಥಾನಮಾನಗಳನ್ನು ಕೊಡದೇ ಇದ್ದುದರಿಂದ ಅವರಿಗೇನೂ ನಷ್ಟವಿಲ್ಲ, ಆಗಿರುವ ನಷ್ಟ ಕನ್ನಡಕ್ಕೆ, ಕನ್ನಡದ ಅಭಿವೃದ್ಧಿಗೆ.

ಶ್ರೀನಿವಾಸರಾಜುರವರು ಒಬ್ಬ ಒಳ್ಳೆಯ ಪ್ರಾಮಾಣಿಕ, ಪ್ರೀತಿಯ ಕನ್ನಡದ ಅಧ್ಯಾಪಕರೆಂದು ಸಾವಿರಾರು ಜನ ವಿದ್ಯಾರ್ಥಿಗಳ ಮನಸ್ಸಿನಲ್ಲಿ ಉಳಿದಿದ್ದಾರೆ ಅಷ್ಟೇ ಸಾಕು. ಅದೇ ಅವರಿಗೆ ಮತ್ತು ನಮ್ಮಂಥವರಿಗೆ ತೃಪ್ತಿಯನ್ನು, ಸಮಾಧಾನವನ್ನು ತಂದಿದೆ. **"ಕನ್ನಡದ ಕೆಲಸವೇ ಶ್ರೀನಿವಾಸರಾಜುರವರ ಕೆಲಸ ಆಗಿದೆ"** ಎಂಬ ವಿಚಾರ ಎಲ್ಲರಿಗೂ ಮನದಟ್ಟಾಗಿದೆ. ಅಷ್ಟೇ ಸಾಕು.

ಶ್ರೀನಿವಾಸರಾಜುರವರನ್ನು ನಾನು ಯಾರಿಗೂ ಹೋಲಿಸುವುದಿಲ್ಲ. ಶ್ರೀನಿವಾಸರಾಜು ರವರನ್ನು ಶ್ರೀನಿವಾಸರಾಜುರವರಿಗೇ ಹೋಲಿಸಬೇಕು. ಶ್ರೀನಿವಾಸರಾಜುರವರನ್ನು "ಶ್ರೀನಿವಾಸ ರಾಜು" ಆಗೇ ಬಾಳಲು, ಬದುಕಲು, ಕನ್ನಡದ ಕೆಲಸ ಮಾಡಲು ಅವಕಾಶ ಮಾಡಿಕೊಟ್ಟ ಅವರ ಮಾತಾ ಪಿತೃಗಳಾದ ಶ್ರೀಮತಿ ಸಾವಿತ್ರಮ್ಮ ಶ್ರೀ ಚಿಕ್ಕರಾಜು, ಅವರ ಪತ್ನಿ ಶ್ರೀಮತಿ ಸರಸ್ವತಿರಾಜು, ಪುತ್ರರಾದ ಸುಗತ, ಋತ ಅವರುಗಳನ್ನೂ ಅತ್ಯಂತ ಪ್ರೀತಿಯಿಂದ ನೆನಪು ಮಾಡಿಕೊಳ್ಳುತ್ತಿದ್ದೇನೆ.

❑

## ಪ್ರೊ. ಶ್ರೀನಿವಾಸರಾಜು
## ಸರಳ–ಸಜ್ಜನಿಕೆಯ ಜಿಜ್ಞಾಸು

● ಎಸ್.ಎ. ಕೃಷ್ಣಯ್ಯ

ಪ್ರೊ. ಶ್ರೀನಿವಾಸರಾಜು ವೃತ್ತಿಯಲ್ಲಿ ಕನ್ನಡ ಉಪನ್ಯಾಸಕರಾಗಿದ್ದರೂ ಕನ್ನಡ ಸಾಹಿತ್ಯ ನಾಟಕ, ವಿಮರ್ಶೆ ಮುಂತಾದ ವಿಷಯಗಳಲ್ಲಿ ಸದಾ ಕ್ರಿಯಾಶೀಲರಾದ ವ್ಯಕ್ತಿತ್ವ, ಮನೋಭಾವದ ಇವರು ತೊಗಲುಗೊಂಬೆಯಾಟ ವಿಚಾರಗಳನ್ನು ತಿಳಿದುಕೊಳ್ಳಲು ಬಂದದ್ದು ಒಂದು ಸೋಜಿಗದ ವಿಚಾರವೇ ಆಗಿತ್ತು. ಇವರು ಗೊಂಬೆಯಾಟ ಕಾರರೊಡನೆ ಬೆರೆತು ಓರ್ವ ನಮ್ರ ವಿದ್ಯಾರ್ಥಿಯ ಹಾಗೆ ನೆಲದ ಮೇಲೆ ಕುಳಿತು ತೊಗಲುಗೊಂಬೆಯಾಟ ಪ್ರದರ್ಶನ ಮತ್ತು ಪದ್ಯಗಳನ್ನು ಕಲಿಯುತಿದ್ದರು. ತೊಗಲುಗೊಂಬೆಯಾಟ ಇತಿಹಾಸದಲ್ಲಿ ಮೊದಲಬಾರಿಗೆ ಗೊಂಬೆಯಾಟ ನಡೆಸುವ ಜನವರ್ಗೇತರ ಸದಸ್ಯರಿಗೆ ಗೊಂಬೆ ಕುಣಿಸುವ ಮತ್ತು ತರಬೇತಿ ಹೊಂದುವ ಅವಕಾಶ ಸಿಕ್ಕಿದ್ದು ೧೯೮೦ರಲ್ಲಿ. ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತು – ಈ ಪ್ರಾಂಗಣದಲ್ಲಿ ಗೊಂಬೆಯಾಟ ತರಬೇತಿ–ಶಾಲೆಗಳು ಸಂಜೆಯವೇಳೆ ನಡೆಯುತಿದ್ದವು. ಈ ತರಬೇತಿ ಶಾಲೆ ನಡೆದದ್ದು ಕೇವಲ ಹತ್ತು ತಿಂಗಳು ಮಾತ್ರ, ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ಇಂದಿನ ಹಾಗೆ ಬೃಹತ್ ಕಟ್ಟಡಗಳ ಸಮುಚ್ಚಯವಿರಲಿಲ್ಲ. ೧೯೮೦ರಲ್ಲಿದ್ದದ್ದು ತೀರಾ ಸಾಮಾನ್ಯ ಕಟ್ಟಡ, ಕೆಲವೊಮ್ಮೆ ತಗಡಿನ ಹೊದಿಕೆಯಿರುವ ಜೋಪಡಿಗಳಲ್ಲಿ ತೊಗಲುಗೊಂಬೆಯಾಟ ತರಬೇತಿ ನಡೆಯುತಿತ್ತು. ಗೊಂಬೆಯಾಟ ಕುರಿತು ತರಬೇತಿ ಪಡೆದುಕೊಳ್ಳುವ ವಿಶೇಷ ಅವಕಾಶ ದೊರಕಿದ್ದು ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ ಇವರ ಮೂಲಕ. ಅಂದಿನ ಕಾರ್ಯದರ್ಶಿ ಗಳಾಗಿದ್ದ ಹೆಸರಾಂತ ಚಿತ್ರಕಾರ ಮತ್ತು ಆಡಳಿತ ನಿಷ್ಣಾತ ಶ್ರೀ ಎಂ.ಎಸ್. ನಂಜುಂಡರಾವ್ ಇವರುಗಳ ಮಾರ್ಗದರ್ಶನದಲ್ಲಿ ತೊಗಲುಬೊಂಬೆಯಾಟ ಉಳಿಸಲು ಮತ್ತು ಬೆಳೆಸಲು ಮುಖ್ಯವಾಗಿ

ನಶಿಸಿಹೋಗುತ್ತಿರುವ ಕಲೆಯಲ್ಲಿ ಸದಭಿರುಚಿ ಹುಟ್ಟಿಸಲು ಸಂಜೆ ಶಾಲೆ ಆರಂಭಗೊಂಡಿತ್ತು. ಪೂರಕವಾಗಿ ಕೇಂದ್ರ ಸಂಗೀತ ನಾಟಕ ಅಕಾಡೆಮಿಯು ಆಯ್ದ ಐದು ವಿದ್ಯಾರ್ಥಿಗಳಿಗೆ ಶಿಷ್ಯ ವೇತನ ನೀಡುತಿತ್ತು. ಇಂತಹ ಸಂದರ್ಭದಲ್ಲಿ ವಯಸ್ಸಿನ ಇತಿಮಿತಿಯನ್ನು ಬದಿಗೊತ್ತಿ ಕಲಿಯಬೇಕೆಂಬ ಮತ್ತು ಹೆಚ್ಚು ವಿಚಾರಗಳನ್ನು ತಿಳಿದುಕೊಳ್ಳಬೇಕೆಂದು ಓರ್ವ ಸಹೃದಯ ಜಿಜ್ಞಾಸುವಾಗಿ ಪ್ರೊ.ಚಿ.ಶ್ರೀನಿವಾಸರಾಜು ಇವರು ತೊಗಲುಗೊಂಬೆಯಾಟದ ಹಾಡುಗಳನ್ನು, ಕಂದಪದ್ಯಗಳನ್ನು ಮತ್ತು ಚಮತ್ಕಾರಕವಾಗಿ ಕುಣಿಸುವ ತಂತ್ರಗಾರಿಕೆಯನ್ನು ಆಸಕ್ತಿಯಿಂದ ಕಲಿಯತೊಡಗಿದರು. ಇವರ ಜೊತೆಯಲ್ಲಿ ಎಸ್.ಎ. ಕೃಷ್ಣಯ್ಯ, ಶ್ರೀ ಅಪ್ಪಾಜಯ್ಯ, ಶ್ರೀನಿವಾಸ ಆಚಾರ್ಯ, ಶ್ರೀಬಚ್ಚೇಗೌಡ, ಕೋಣನಕುಂಟೆ–ವೆಂಕಟರಾಮು ಮತ್ತು ಪ್ರೊ.ಚಿ.ಶ್ರೀನಿವಾಸರಾಜು ಇವರೆಲ್ಲಾ ಸಂಜೆ ವೇಳೆ ಗೊಂಬೆಯಾಟ ತರಬೇತಿ ಪಡೆಯುತ್ತಿದ್ದರು. ಆರಂಭದಲ್ಲಿ ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ ಶ್ರೀ ತ್ಯಾಪೇನಹಳ್ಳಿ ಹೊಂಬಯ್ಯ (ಅಮೇರಿಕ ಕಂಡ ಹೊಂಬಯ್ಯ) ರಾಮಾಯಣ, ಮಹಾಭಾರತ ಮತ್ತು ಪುರಾಣ–ಭಾಗವತ ಕಥೆಗಳನ್ನು ಗೊಂಬೆಗಳನ್ನು ಕುಣಿಸುವುದರ ಮೂಲಕ ಹೇಳಿಕೊಡುತಿದ್ದರು. ಆ ಬಳಿಕ ಬೆಂಗಳೂರು ಸಮೀಪದ ರಾಮನಗರದಿಂದ ಶ್ರೀಹಾಗಲಳಯ್ಯ ಸ್ವಾಮಿ ಮತ್ತು ಹನುಮಂತಯ್ಯ ಗೊಂಬೆರಾಮ ಇವರುಗಳು ನಿರಂತವಾಗಿ ಪಾಠ–ಪ್ರವಚನ ಮಾಡುತಿದ್ದರು. ಸದಾ ಗಂಭೀರವಾಗಿ ಮತ್ತು ಹೆಚ್ಚು ಮಾತಿಲ್ಲದೆ ಕ್ರಿಯಾತ್ಮಕವಾಗಿ ಕಾವ್ಯ, ನಾಟಕ, ಮೈಮ್–ಪ್ರದರ್ಶನಗಳಂತಹ ನಾಟಕಗಳನ್ನು ಸಿದ್ಧಪಡಿಸಿದಾಗ ಪ್ರೊ.ಚಿ.ಶ್ರೀನಿವಾಸರಾಜು ನಮ್ಮೊಂದಿಗೆ ವಿಚಾರವಿನಿಮಯ ಮಾಡುತಿದ್ದರು. ಹೆಚ್ಚಿನ ವ್ಯಾಸಂಗ ಮಾಡಲು ತೊಡಗುವ ಆಕಾಂಕ್ಷಿಗಳಿಗೆ ಆರ್ಥಿಕ ಸಹಾಯವನ್ನೂ ಮಾಡುತ್ತಿದ್ದರು. ಇಂತಹ ಆರ್ಥಿಕ ಸಹಾಯ ಮತ್ತು ಪ್ರೋತ್ಸಾಹ ಪಡೆದವರಲ್ಲಿ ನಾನು ಒಬ್ಬನಾಗಿದ್ದೆ. ಸಜ್ಜನಿಕೆ ಸರಳತೆಯನ್ನು ಮೈತುಂಬಿಕೊಂಡ ಪ್ರೊ.ಚಿ.ಶ್ರೀನಿವಾಸರಾಜು ಇವರ ಅಭಿನಂದನಾ ಗ್ರಂಥದಲ್ಲಿ ತೊಗಲುಗೊಂಬೆಯಾಟ ಚಿತ್ರಕಲೆ ಈ ಲೇಖನವನ್ನು ಗುರುವಂದನೆಯ ವಿದ್ಯಾರ್ಥಿಯಾಗಿ ಸಮರ್ಪಿಸಿದ್ದೇನೆ–ಓದುಗರು ಈ ಲೇಖನದ ಬಗ್ಗೆ ಇನ್ನಷ್ಟೂ ನಮ್ಮ ಜ್ಞಾನಸಂಪತ್ತನ್ನು ವಿಸ್ತರಿಸುವರೆಂದು ಆಶಿಸುವೆ.

❑

# ಎಲ್ಲರಿಗೂ ನಮ್ಮವರೆನಿಸುವ ರಾಜು

● ಎಚ್.ಎಸ್. ಶ್ರೀಮತಿ

**ಸಂ**ಬಂಧಗಳನ್ನು ಕಾಯ್ದುಕೊಳ್ಳುವುದು ಸುಲಭದ ಕೆಲಸವಲ್ಲ. ಇದೊಂದು ನಿರಂತರ ಪ್ರಕ್ರಿಯೆ. ಬಹುಮಟ್ಟಿಗೆ ಪ್ರಜ್ಞಾಪೂರ್ವಕ ವಾಗಿಯೇ ನಿರ್ವಹಿಸಬೇಕಾದ ಸಂಗತಿ. ಕಣ್ಣಿಗೆ ಮರೆಯಾಗಿದ್ದರೆ ನಿಧಾನವಾಗಿಯಾದರೂ ಮನಸ್ಸಿನಿಂದಲೂ ಮಾಸಿ ಹೋಗುವ ಸಂಭವವೇ ಹೆಚ್ಚು. ಬಹುತೇಕವಾಗಿ ಎಷ್ಟೋ ನಿಜ ಸಂಬಂಧಗಳು ಕೂಡ ಕಳೆದುಹೋಗುವುದು ಹೀಗೇನೇ. ರಾಜು ಮೇಷ್ಟ್ರು ಈ ವಿಚಾರದಲ್ಲಿ ತಪಸ್ಸಿಗೆ ತೊಡಗಿದವರಂತೆ ನಡೆದು ಬಂದಿದ್ದಾರೆ. ಮುಖ್ಯ ಅಮುಖ್ಯ ಎಂದು ವಿಂಗಡಿಸದೆ ಜನಸಂಪರ್ಕವನ್ನು ಕಾಯ್ದು ಕೊಳ್ಳುವ ಅವರ ವಿಧಾನ ನನಗಂತೂ ಒಂದು ದೊಡ್ಡ ವಿಸ್ಮಯವಾಗಿ ಕಂಡಿದೆ. ಇಂದು ಒಂದು ವ್ಯವಹಾರಿಕ ನಿರ್ವಹಣೆಯ ಬಗೆಯದಲ್ಲ. ಹಾಗಿದ್ದಿದ್ದರೆ, ಅದರ ಎಷ್ಟೊಂದು ವ್ಯವಹಾರಿಕ ಲಾಭಗಳನ್ನು ಅವರು ಈ ವೇಳೆಗೆ ಗಿಟ್ಟಿಸಿಕೊಳ್ಳಬೇಕಿತ್ತು. ಹಾಗೇನೂ ಆಗಿಲ್ಲದ ಬಗ್ಗೆ ಭ್ರಮನಿರಸನವೇನಿಲ್ಲ. ಏಕೆಂದರೆ ಅಂಥದ್ದು ಇರುವುದೇ ಹಾಗೆ. ರಾಜು ಮೇಷ್ಟ್ರು ಕಾಯ್ದುಕೊಳ್ಳುತ್ತಾ ಬಂದದ್ದು ಸಂಬಂಧಗಳನ್ನು. ಅದು ಗಟ್ಟಿಯಾಗಿ ಉಳಿದು ಬಂದಿದೆ ಎಂಬುದಕ್ಕೆ ಪುರಾವೆಗಳನ್ನು ಹುಡುಕಬೇಕಿಲ್ಲ. ಅವರ ಬಳಗ ಎಷ್ಟು ವಿಸ್ತಾರವೆಂಬುದನ್ನು ಕಲ್ಪಿಸಿ ಮುಗಿಸಲಾಗದು. ರಕ್ತ ಸಂಬಂಧಿಗಳು, ಹಾಗಲ್ಲದವರು ಎಂಬ ಗೆರೆಯೇ ಇಲ್ಲ. ಮನೆ ಮಂದಿಯ ಹತ್ತಿರದ, ದೂರದ, ಹಿರಿಯ-ಕಿರಿಯರೊಂದಿಗಿನ ಸಂಬಂಧವಂತೂ ಸರಿ. ಜೊತೆಗೆ, ಗುರುಗಳೂ, ಹಿರಿಯ ಸಾಹಿತಿಗಳೂ, ಘನ ವಿದ್ವಾಂಸರು ಇವರ ಹತ್ತಿರದ ಸಂಬಂಧಿಗಳು ಹಾಗೆಯೇ ಸಹಪಾಠಿಗಳು, ಸಹೋದ್ಯೋಗಿಗಳು, ಸಮ ವಯಸ್ಕರು ಇವರ ಆಪ್ತ ಸ್ನೇಹಿತರು, ವಿದ್ಯಾರ್ಥಿಗಳು ಎಲ್ಲೋ ದೂರದೂರಿನ ಕಿರಿಯ ವಯಸ್ಸಿನ ಕವಿಗಳು, ಸಾಹಿತ್ಯಾಸಕ್ತರು. ಇವರು ರಾಜು ಮೇಷ್ಟ್ರು ಆಸೆ ಭರವಸೆಯ ಕಂಗಳಿಂದ ನೋಡು ವಂಥವರು.

ರಾಜು ಮೇಷ್ಟ್ರ ಆಪ್ತ ಸ್ನೇಹಿತರಲ್ಲಿ ಕೆ.ವಿ. ನಾರಾಯಣ ಕೂಡ

ಇದ್ದಾರೆ. ನನಗೆ ರಾಜು ಮೇಷ್ಟ್ರು ಮೊದಲಿಗೆ ಹತ್ತಿರದಿಂದ ಪರಿಚಯವಾದದ್ದು ನಾರಾಯಣ ಮತ್ತು ನಾನು ಮದುವೆಯಾಗಬೇಕು ಅಂದುಕೊಂಡು ಮನೆಯವರ ವಿರೋಧ ಕಟ್ಟಿಕೊಂಡ ಸಂದರ್ಭದಲ್ಲಿ. ರಾಜು ಅವರು ಇಂಥ ಎಷ್ಟು ಜೋಡಿಗಳ ನೆರವಿಗೆ ನಿಂತಿದ್ದಾರೆ ಎಂಬುದೇ ಒಂದು ದೊಡ್ಡ ಪುರಾಣದಷ್ಟಿದೆ. ಹಾಗಾಗಿ, ಅವರಿಗೆ ಇದೂ ಅಂಥದೊಂದು ಸಂದರ್ಭವಿದ್ದಿರ ಬಹುದು. ಆದರೆ ಆ ನಂತರದಲ್ಲಿ ಅವರು ನಮ್ಮ ಬೆನ್ನಿಗೆ ನಿಂತದ್ದು, ನಮ್ಮೊಂದಿಗೆ ನಡೆದುಬಂದ ವಿಶಿಷ್ಟ ಸಂಬಂಧ ಇವನ್ನೆಲ್ಲ ನನ್ನೊಳಗೇ ಹುದುಗಿಸಿಕೊಂಡಿದ್ದರೂ ಎಂದೂ ಎಲ್ಲೂ ಹೇಳ ಬೇಕೆನಿಸಿದ್ದಿಲ್ಲ. ಏಕೆಂದರೆ, ನಾನೇನೇನೋ ಕಳೆದುಕೊಂಡು ಬರಬೇಕಾಯಿತು ಎಂಬ ಹಿನ್ನೆಲೆ ಯಲ್ಲಂತೂ ಈ ಸಂಬಂಧಕ್ಕೆ ತವರಿನ ಪ್ರೀತಿ, ಅಣ್ಣ–ಅತ್ತಿಗೆ, ತಂಗಿ–ನಾದಿನಿ ಎಂದು ಏನೇನೋ ಹೆಸರುಗಳನ್ನು ಕೊಡಬೇಕಾಗುತ್ತದೆ. ಆದರೆ ರಾಜು, ಸರಸ್ವತಿಯವರೊಂದಿಗಿನ ನನ್ನ ಸಂಬಂಧಕ್ಕೆ ಈ ಯಾವ ಹೆಸರುಗಳನ್ನೂ ನಾನು ಕೊಡಲಾರೆ. ಹಾಗೆ ನೋಡಿದರೆ ಯಾವುದೇ ಹೆಣ್ಣುಮಗಳು ರಕ್ತ ಸಂಬಂಧಗಳಿಂದ ಹೊರಗೆ ಯಾವುದೇ ಗಂಡಸಿನೊಂದಿಗೆ ಸಂಬಂಧಗಳನ್ನು ಹೊಂದಿದ್ದರೆ, ಅದಕ್ಕೆ ಅಪ್ಪ, ಅಣ್ಣ, ತಮ್ಮ ಎಂಬ ಸಂಬಂಧಗಳ ವ್ಯಾಖ್ಯಾನವನ್ನು ಹೊಂದಿಸುವುದು ಸಾಮಾಜಿಕ ಅನಿವಾರ್ಯದ ರೂಢಿ. ಮೂಲದಲ್ಲೇ ಅರ್ಥಪೂರ್ಣವೆನಿಸಿರಲಾರದ ಈ ಸಂಬಂಧಗಳನ್ನು ಹೋದೆಡೆಯಲ್ಲೆಲ್ಲಾ ಹೊಂದಿಸಿಕೊಂಡು ಹುಡುಕುವುದರಲ್ಲಿ ನನಗೆ ಆಸಕ್ತಿ ಇಲ್ಲ. ವ್ಯಾಖ್ಯಾನಗಳ ಹೊರೆಯಲ್ಲಿ ಸಂಬಂಧಗಳು ಬಿಳಿಚಿಕೊಳ್ಳುವುದೂ ಬೇಡ.

ನಾನು, ನಾರಾಯಣ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಎಂ.ಎ. ಮಾಡುವಾಗ ಸಹಪಾಠಿಗಳು. ರಾಜು, ರಾಘು ನಮ್ಮ ಸೀನಿಯರ್ಸ್. ಹಿಂಜರಿಕೆಯ ಸ್ವಭಾವದಲ್ಲೇ ಬೆಳೆದು ಬಂದ ನನಗೆ ಗಂಡು ಹುಡುಗರಿರಲಿ, ಹುಡುಗಿಯರು ಕೂಡಾ ಹತ್ತಿರದವರೆನಿಸಿ ಇದ್ದವರು ಒಬ್ಬಿಬ್ಬರಿಗಿಂತ ಹೆಚ್ಚಿರಲಿಲ್ಲ. ಅಂಥದ್ದರಲ್ಲಿ ನನ್ನದೇ ಆಯ್ಕೆಯ ಮದುವೆಯಾದೆ ಎಂಬುದು ಅಂದಿಗಲ್ಲ, ಇಂದಿಗೂ ದೊಡ್ಡ ಆಶ್ಚರ್ಯವೆಂಬಂತೆ ಉಳಿದಿದೆ. ಈಗ ನನ್ನನ್ನು ನೋಡಿದವರು ಕೂಡಾ ನನ್ನ ಈ ಕತೆಯನ್ನು ಕೇಳಿದರೆ ನಂಬಲು ಕಷ್ಟ ಅನ್ನುತ್ತಾರೆ. ಆದರೆ ಹಾಗೂ ಆಯಿತು. ಇದೇ ನೆಪದಲ್ಲಿ ಎಂಬಂತೆ ಆರಂಭವಾದ ರಾಜು, ರಾಘು ಅವರೊಂದಿಗಿನ ಸಂಬಂಧ ಮಾತ್ರ ನನ್ನ ಬದುಕಿನಲ್ಲಿ ಬೆಳೆಸಿದ, ಬೆಳೆಸುತ್ತಿರುವ ಅರ್ಥಗಳು ಅನೂಹ್ಯವಾಗಿದೆ. ನಮ್ಮ ಮೂರೂ ಕುಟುಂಬಗಳ ಎಲ್ಲರೂ ಕೂಡಿ ಒಡನಾಡಿದ ಒಂದೊಂದು ಸಂದರ್ಭವೂ ಹಲವು ಸುಖ, ದುಃಖ, ಸಿಟ್ಟು, ಸೆಡವು, ನಗು, ತಮಾಷೆಗಳನ್ನು ಹಂಚಿದೆ. ಇದೆಲ್ಲವೂ ನಮ್ಮ ಸಂಬಂಧಗಳನ್ನು ಪಕ್ವವಾಗಿಸುತ್ತಲೇ ಬಂದಿವೆ. ನಮ್ಮ ಕಿರಿಯ ತಲೆಮಾರಿಗೂ ದಾಟಿಕೊಂಡು ಸಾಗಿದೆ.

ಬದುಕಿ ಉಳಿದಿದ್ದರೆ ಅರುವತ್ತು, ಎಪ್ಪತ್ತು, ಎಂಬತ್ತುಗಳು ತುಂಬುತ್ತಾ ಹೋಗುತ್ತದೆ. ಇದರಲ್ಲಿ ವಿಶೇಷವೇನಿಲ್ಲ. ಆದರೆ, ಒಂದೊಂದು ಸಣ್ಣ ನೆಪದಲ್ಲೂ ಇವರು ನಮ್ಮವರು ಎಂದು ಗುರುತಿಸುವ ಜನ ಸುತ್ತಲೂ ಇದ್ದಾರೆ ಎಂಬುದು ತುಂಬಾ ದೊಡ್ಡ ಸಂಗತಿ. ರಾಜು ಅವರನ್ನು ಸುತ್ತುವರಿದ ಇಂಥ ಬಳಗದಲ್ಲಿ ಆ ಕಡೆ ಎತ್ತರದಲ್ಲಿ ಜಿ.ಎಸ್.ಎಸ್. ಅಂಥವರೂ ಇದ್ದಾರೆ. ಈ ಕಡೆ ತುದಿಯಲ್ಲಿ ಆಸೆಕಂಗಳ ಕಿರಿಯ ಸಾಹಿತಿಗಳಿದ್ದಾರೆ. ಸುತ್ತಮುತ್ತ ಅದಿನ್ನೆಷ್ಟೋ ಸ್ನೇಹದ ಕಂಗಳು. ಈ ಭಾಗ್ಯ ಎಲ್ಲರಿಗೂ ದೊರಕುವುದಿಲ್ಲ. ಮೇಷ್ಟ್ರು ದೊಡ್ಡ ತಪಸ್ಸಿನಿಂದ ಈ ಭಾಗ್ಯವನ್ನು ದಕ್ಕಿಸಿಕೊಂಡಿದ್ದಾರೆ. ಇದು ನಿರಂತರವಾಗಲಿ, ಚಿರಂತನವಾಗಲಿ. ಈ ದೊಡ್ಡ ಬಳಗದಲ್ಲಿ ನಮಗೂ ಒಂದು ಜಾಗವಿದೆ ಎಂಬುದೇ ನಮ್ಮ ಹೆಮ್ಮೆ. ❑

# ಶ್ರೀನಿವಾಸರಾಜು ಕಂಡಷ್ಟು

● ಓ.ಎಲ್. ನಾಗಭೂಷಣಸ್ವಾಮಿ

**೭೩**. ಶ್ರೀನಿವಾಸರಾಜು, ನಂ. ೮, ಚಿರಂಜೀವಿ, ಹಳೇ ಈಜುಕೊಳದ ರಸ್ತೆ, ಕೋದಂಡರಾಮಪುರಂ, ಬೆಂಗಳೂರು ಅದೆಷ್ಟೋ ಅನ್ನುವ ವಿಳಾಸ ಬಹಳ ಹಿಂದೆಯೇ ಬಾಯಿಪಾಠವಾಗಿತ್ತು. ಪರಿಚಯ ವಾಗಿದ್ದು ಸುಮಾರು ಇಪ್ಪತ್ತೈದು ವರ್ಷದ ಹಿಂದೆ, ಎಚ್.ಎಸ್. ರಾಘವೇಂದ್ರರಾಯರ ಮೂಲಕ. ರಾಘವೇಂದ್ರರಾಯರ ಪರಿಚಯ ವಾಗಿದ್ದು ಸುಮಾರು ೧೯೮೪ರ ಹೊತ್ತಿಗೆ ಬಿ.ಆರ್. ಪ್ರಾಜೆಕ್ಟಿನಲ್ಲಿ ನಡೆದ ಪಾಶ್ಚಾತ್ಯ ಮಹಾಕಾವ್ಯಗಳು ಸೆಮಿನಾರಿನಲ್ಲಿ. ಆಗಿನ್ನೂ ಕನ್ನಡ ಸಾಹಿತ್ಯದ ಲೋಕಕ್ಕೆ ಹೊಸಬ ನಾನು.

ಅಗೋ. ಶ್ರೀನಿವಾಸರಾಜು ಅವರ ಬಗ್ಗೆ ಬರೆಯುವುದು, ಅದು ನನ್ನ ಆತ್ಮಚರಿತ್ರೆಯ ಪುಟಗಳಾಗದೆ ಇರುವುದು ಅಸಾಧ್ಯ. ನಾನು ಬಲ್ಲಂತೆ, ಎಚ್.ಎಸ್.ಆರ್., ಕೆ.ವಿ. ನಾರಾಯಣ, ಬರಗೂರು ಇಂಥವರ ಪ್ರಸ್ತಾಪ ಮಾಡದೆ, ಕ್ರೈಸ್ತ ಕಾಲೇಜು, ಶೇಷಾದ್ರಿಪುರಂ ಸ್ನಾತಕೋತ್ತರ ಕೇಂದ್ರ, ಚಿತ್ರಕಲಾಪರಿಷತ್ತು ಇಂಥ ಸಂಸ್ಥೆಗಳನ್ನು ನೆನೆಯದೆ ಬರೆಯುವುದೂ ಆಗುವುದಿಲ್ಲ. ಆದ್ದರಿಂದಲೇ ಶ್ರೀನಿವಾಸ ರಾಜು ಬಗ್ಗೆ ಸರಿಯಾಗಿ ಬರೆದರೆ ಕನ್ನಡ ಸಾರಸ್ವತಲೋಕದ ಕಳೆದ ಐವತ್ತು ವರ್ಷಗಳ ಚರಿತ್ರೆಯ ದಾಖಲೆಯಾಗದಂತೆ ಬರೆಯುವುದೂ ಕಷ್ಟ. ಇಂಥವರ ಜೊತೆ ಬದುಕಿದ್ದು, ಒಡನಾಡಿದ್ದು ನನ್ನ ಬಾಳಿನ ಭಾಗ್ಯ ಅನಿಸುವ ಕೆಲವು ಅಪರೂಪದ ವ್ಯಕ್ತಿಗಳಲ್ಲಿ ಶ್ರೀನಿವಾರಾಜು ಒಬ್ಬರು. ಅವರ ಬಗ್ಗೆ ಬರೆಯಲೇ ಬೇಕು, ಆದರೆ ಬರೆಯಲಾಗದು ಅನ್ನುವ ಕಷ್ಟದಲ್ಲಿ ಹೀಗೆ ತುಣುಕು ತುಣುಕಾಗಿ ಬರೆದಿದ್ದೇನೆ. ನಮಗೆ ಇನ್ನೊಬ್ಬರು ಗೊತ್ತಾಗುವುದು ಕೂಡ ಹೀಗೆ ಆಗಷ್ಟು ಈಗಷ್ಟು ಅಲ್ಲವೇ?

ರಾಜು ಮೇಷ್ಟ್ರು ನಮ್ಮ ಮನೆಯ ಮಕ್ಕಳಿಗೆ. ರಾಜು ಸರ್ ಅಂತ ವಿದ್ಯಾರ್ಥಿಗಳಿಗೆ. ಹದಿನೈದು ವರ್ಷಗಳಿಂದ ಪ್ರತಿ ಗೌರಿ

ಹಬ್ಬಕ್ಕೆ ತಪ್ಪದೆ ನೂರು ರೂಪಾಯಿ ಅರಿಶಿಣ ಕುಂಕುಮಕ್ಕೆ ಕಳಿಸುವ ಹಿರಿಯಣ್ಣ ನನ್ನ ಹೆಂಡತಿಗೆ. ನಾನು ಅವರನ್ನು ಏನಂತ ಸಂಬೋಧಿಸಿ ಮಾತನಾಡಿದ್ದೇನೆ ಅಂತ ಜ್ಞಾಪಿಸಿಕೊಂಡರೆ ಸಾರ್ ಅಂತ ಮಾತಾಡಿಸಿದ್ದೇ ಹೆಚ್ಚು. ಅವರೂ ನನ್ನನ್ನು ಹಾಗೇ ಮಾತಾಡಿಸುವುದು. ಮೇಷ್ಟ್ರುಗಳಾದವರು ಪರಸ್ಪರ ಸಾರು ಮೇಡಮ್ ಅಂತಲೇ ಮಾತಾಡಿಸಿಕೊಳ್ಳುವುದು ಸಾಮಾನ್ಯವಲ್ಲವೇ? ನನ್ನನ್ನೂ ಎಚ್.ಎಸ್.ಆರ್. ಅವರನ್ನೂ ಅವರನ್ನು ನಾನೆಂದೂ ನನ್ನನ್ನು ಅವರೆಂದೂ ತಿಳಿದು ಮಾತಾಡಿಸುವವರು ಬಹಳ ಜನ ಇದ್ದಾರೆ. ಅವರೂ ನನ್ನನ್ನು ನಾನು ಅವರನ್ನು ಸಾರ್ ಅಂತಲೇ ಮಾತಾಡಿಸಿಕೊಳ್ಳುವುದು. ಕೆ ಪಿ ನಾರಾಯಣ ಅವರೂ ಅಷ್ಟೇ, ಬರಗೂರರೂ ಅಷ್ಟೆ. ಅವರು ನನಗೆ ನನಗೆ ಅವರು ಸಾರ್. ಹೀಗೆ ಹೀಗೆ ಸಂಬೋಧಿಸಿದರೆ ಮಾತ್ರ ಆತ್ಮೀಯತೆ ಅನ್ನುವುದು ತೀರ ನಿಜ ಇರಲಾರದು.

ಒಮ್ಮೆ ೮೦ರ ದಶಕದ ಮೊದಲಲ್ಲಿ ರಾಜು ಮೇಷ್ಟರ ಮನೆಗೆ ಹೋಗಿದ್ದೆ. ಅವರೇ ಕರೆದುಕೊಂಡು ಹೋಗಿದ್ದರು ಅಂತ ಜ್ಞಾಪಕ. ಪುಟ್ಟ ಮನೆ. ಮನೆ ಮುಂದೆ ನಾಲ್ಕು ಅಂಗೈ ಅಗಲ ಜಾಗ. ಬಹಳ ಉಪಚಾರ ಮಾಡಿ ತಿಂಡಿ ಕಾಫಿ ಆಗಿ ನಮ್ಮನ್ನು ಕಳಿಸಲು ಮನೆ ಮುಂದಿನ ಆ ಅಂಗಳಕ್ಕೆ ಬಂದ ಸರಸ್ವತಿ ನಾನು ಬಹಳ ಖ್ಯಾತ ಲೇಖಕನೋ ಎಂಬಂತೆ, ಅತೀವ ಗೌರವ ಆದರಗಳಿಂದ 'ಬರ್ತಾ ಇರಿ ಸಾರ್ ಆಗಾಗ' ಎಂದು ಆಹ್ವಾನ ಕೊಟ್ಟಿದ್ದರು. ಆಗ ಗೊತ್ತಿರಲಿಲ್ಲ ಹತ್ತು ವರ್ಷಗಳ ನಂತರ ವಿಲ್ಸನ್ ಗಾರ್ಡನ್ನಿನ ನಮ್ಮ ಮನೆಯಲ್ಲಿ ನಾನೇ ವಾಸಕ್ಕೆ ಬರುತ್ತೇನೆ, ಅಲ್ಲಿಂದ ಕುಂಟಿಕೊಂಡು ಹೋದರೂ ಎರಡು ನಿಮಿಷಗಳಲ್ಲಿ ತಲುಪಬಹುದಾದಷ್ಟು ದೂರದಲ್ಲಿ ರಾಜು, ಸರಸ್ವತಿ ಮತ್ತು ಸುಗತ, ಋತ ಇವರೆಲ್ಲ ನಮ್ಮ ನೆರೆಯವರೇ ಆಗುತ್ತಾರೆಂದು. ದಿನಕ್ಕೆ ಹತ್ತಿಪ್ಪತ್ತು ಬಾರಿ ಅವರ ಮನೆಗೆ ನಾವು, ನಮ್ಮ ಮನೆಗೆ ಅವರು ಬಂದು ಹೋಗುತ್ತಾ, ನಮ್ಮಿಬ್ಬರ ಮನೆಯ ಪಾತ್ರೆಗಳೂ ಅದರೊಳಗಿನ ಅಡುಗೆಗಳೂ ಆ ಮನೆಯಿಂದ ಈ ಮನೆಗೆ ಸಂಚರಿಸುತ್ತಾ, ಬೀದಿಯ ಮೂಲೆಯಲ್ಲಿದ್ದ ಚಾಕೋಸ್ ಅಂಗಡಿಯ ಕ್ರಿಶ್ಚಿಯನ್ ಮಾಲೀಕ ನೀವು ನಂಟರೋ ಎಂದು ಕೇಳುತ್ತಾನೆಂದು; ವಯಸ್ಸಾದ ನಮ್ಮಮ್ಮನಿಗೆ ಸರಸ್ವತಿ ಆತ್ಮೀಯ ಗೆಳತಿ ಆಗುತ್ತಾರೆಂದು; ನನ್ನ ಹೆಂಡತಿಯೂ ಅವರೂ ರಾಜು ಮತ್ತು ನನ್ನನ್ನು ಎದುರಿಗೇ ಕೂರಿಸಿಕೊಂಡು ನಮ್ಮನ್ನು ಗೇಲಿಮಾಡಿಕೊಂಡು ನಗುವಂಥ ದಿನಗಳೂ ಬರುತ್ತವೆ ಎಂದು. ಮುಂದೆ ಇನ್ನೂ ಐದಾರು ವರ್ಷ ಕಳೆದಮೇಲೆ ಅವರು ನಮ್ಮೊಡನೆ ಕೊಡಚಾದ್ರಿ ಬೆಟ್ಟ ಹತ್ತಿ, ಜೊತೆಯಲ್ಲಿದ್ದ ಮಕ್ಕಳ ಬಾಯಲ್ಲಿ ಪುಟಾಣಿ ಎಕ್ಸ್‌ಪ್ರೆಸ್ ಎಂಬ ಅಭಿಧಾನ ಪಡೆಯುತ್ತಾರೆಂದು ಇತ್ಯಾದಿಗಳೆಲ್ಲ ಆಗ ಗೊತ್ತಿರಲಿಲ್ಲ.

ನಮ್ಮ ಗಂಡಂದಿರು ಎಂಥ ಜೇಜಾವಾಬ್ದಾರಿಯವರು ಅನ್ನುವುದಕ್ಕೆ ನನ್ನ ಹೆಂಡತಿ ಮೊದಲಬಾರಿ ಮನೆಗೆ ಬಂದ ದಿನ ನಾನು ಶಿವಮೊಗ್ಗದಲ್ಲಿ ನಾಟಕ ನಿರ್ದೇಶನದಲ್ಲಿ ಮುಳುಗಿದ್ದು, ರಾತ್ರಿ ಹನ್ನೆರಡು ಕಳೆದರೂ ಬಾರದಿದ್ದುದರಿಂದ ಆಕೆಯೇ ನಾನಿದ್ದಲ್ಲಿ ಹುಡುಕಿಕೊಂಡು ಬಂದು ಮನೆಗೆ ಕರೆದುಕೊಂಡು ಹೋದ ಕಥೆ ಹೇಳಿದರೆ ಸರಸ್ವತಿ ಮದುವೆಯಾದ ಹೊಸತರಲ್ಲಿ ರಾಜು ಮೇಷ್ಟ್ರ ಹಿಂದೆ ಸ್ಕೂಟರಿನಲ್ಲಿ ಹೋಗುತ್ತ, ರೈಲ್ವೆ ಗೇಟು ತೆರೆಯಲೆಂದು ಸ್ಕೂಟರು ನಿಲ್ಲಿಸಿ ಮಾತಾಡಿಕೊಂಡಿದ್ದು, ಆಮೇಲೆ ಅವರು ರಸ್ತೆಯ ಮೇಲೆ ಉಳಿದು ರಾಜು ಒಬ್ಬರೇ

ಹೋಗಿ, ಎಷ್ಟೋ ಹೊತ್ತಿನ ಮೇಲೆ ಮತ್ತೆ ವಾಪಸ್ಸು ಬಂದು ಅಲ್ಲಿಯವರೆಗೆ ತಾವು ರಸ್ತೆಯಲ್ಲೇ ಕಾಯುತ್ತ ಕುಳಿತಿದ್ದ ಕತೆ ಹೇಳುತ್ತಿದ್ದರು. ಹೆಂಡತಿಯರ ಕಣ್ಣಿನಲ್ಲಿ ಹಾಸ್ಯಾಸ್ಪದರಾಗದ ಗಂಡಂದಿರು ಇದ್ದಾರೆಯೇ!

ಕನ್ನಡ ವಿಶ್ವವಿದ್ಯಾಲಯದಲ್ಲಿದ್ದಾಗ ಒಮ್ಮೆ ಹೀಗೆ ಮಾತಾಡುತ್ತಿದ್ದಾಗ ರಹಮತ್ ತರೀಕೆರೆ ಹೇಳಿದ್ದು ಏನೆಂದರೆ "ಸಾರ್, ಅವರು (ಶ್ರೀನಿವಾಸರಾಜು) ಬಿಡಿ ಸಾರ್, ಟೇಬಲ್ಲಿನ ಮೇಲೆ ಯಾವುದೋ ಹತ್ತು ಲಕ್ಷ ರೂಪಾಯಿ ಇಟ್ಟು ತಗೊಳ್ಳದಿದ್ದರೆ ತಲೆ ಒಡೀತೀನಿ ಅಂದರೂ ತಮ್ಮದಲ್ಲದ ದುಡ್ಡು ಮುಟ್ಟೋರಲ್ಲ" ಅಂತ ಹೇಳಿದ್ದರು. ಆ ವಿಶ್ವವಿದ್ಯಾಲಯದಲ್ಲಿ ನಾವೆಲ್ಲ ಇದ್ದಾಗ ಶ್ರೀನಿವಾಸರಾಜು ಪ್ರಸಾರಾಂಗದ ನಿರ್ದೇಶಕರಾಗಿದ್ದರು. ಯಾರೋ ಒಬ್ಬ, ಅವನ ಸ್ವಭಾವ ನೋಡಿ ಹುಲಿ ಎಂದು ಕರೆಯುತ್ತಿದ್ದೆವು, ಸಾಕಷ್ಟು ದೊಡ್ಡ ಮೊತ್ತದ ಹಣ ನುಂಗಿ ಆಪಾದನೆ ಶ್ರೀನಿವಾಸರಾಜು ಅವರ ಮೇಲೆ ಬರುವಂತೆ ಸನ್ನಿವೇಶ ಸೃಷ್ಟಿಸಿದ್ದ. ಕೆಲವು ದಿನಗಳ ಕಿರಿಕಿರಿಯ ನಂತರ ಹುಲಿಯ ಹುನ್ನಾರ ಗೊತ್ತಾಗಿ ಕನ್ನಡ ವಿಶ್ವವಿದ್ಯಾಲಯದಿಂದ ಉಚ್ಚಾಟನೆಗೊಂಡು ಮಹಾನಗರದಲ್ಲಿ ಕಳೆದುಹೋದ. ಮನೆಯ ಖರ್ಚಿಗೆ ತಿಂಗಳಿಗಿಷ್ಟು ಎಂದು ಕೊಟ್ಟ ತಮ್ಮ ಸ್ವಂತ ದುಡ್ಡನ್ನೂ ಕನ್ನಡ ಸಾಹಿತ್ಯದ ನದಿಯಲ್ಲಿ ಹುಣಿಸೆ ಹಣ್ಣಿನಂತೆ ರಾಜು ತೊಳೆಯುತ್ತಿದ್ದದ್ದು ಅವರನ್ನು ಬಲ್ಲವರಿಗೆಲ್ಲ ಗೊತ್ತು. ಕೆ.ವಿ. ನಾರಾಯಣ ಹೇಳಿದ್ದು ಜ್ಞಾಪಕ ಇದೆ, "ಅವರು ರಾಜರು, ಯಾವತ್ತೂ ದುಡ್ಡು ಇಲ್ಲ ಅಂದವರೇ ಅಲ್ಲ" ಅನ್ನುವ ಥರದ ಮಾತು ಅದು. ರಾಜು ಮೇಷ್ಟರ ಜೊತೆಗೆ ಯಾವಾಗ ಹೋಟೆಲಿಗೆ ಹೋದರೂ ದುಡ್ಡು ಕೊಡುವುದು ಅವರೇ ಅಲ್ಲವೇ! ರಾಜು ಶ್ರೀಮಂತರೇನೂ ಅಲ್ಲ. ಆದರೆ ಯಾವಾಗ ಅಗತ್ಯವಿದ್ದರೂ ದುಡ್ಡು ಇಲ್ಲ ಅಂದಿಲ್ಲ. ಬೇಕು ಅಂದವರಿಗೆ ಇಲ್ಲ ಅನ್ನದ ರಾಜರು ಅವರು! ತನ್ನದಲ್ಲದ್ದು ಎಂದಿಗೂ ಬೇಡ ಅನ್ನುವ ವ್ರತನಿಷ್ಠ, ಕೊಟ್ಟದ್ದನ್ನು ಮರಳಿ ಕೇಳುವುದಕ್ಕೆ ಸಂಕೋಚಪಡುವ ರಾಜರು!

ನ್ಯಾಶನಲ್ ಫುಡ್ ತಗೊಂಡಿದ್ದು ಆಯ್ತಾ ಸಾರ್ ಅಂತ ಸಂಜೆಯ ಹೊತ್ತು ಫೋನು ಮಾಡಿದಾಗ ರಾಜು ಕೇಳುತ್ತಾರೆ. ಕಾರದ ಕಳ್ಳೇಕಾಯಿ ಬೀಜ ಮತ್ತು ಮಾರಿ ಬಿಸ್ಕತ್ತು ನಮ್ಮ ನ್ಯಾಶನಲ್ ಫುಡ್ಡು. ಹೊಸಪೇಟೆಯ ಮನೆಯಲ್ಲಿ ರಾಘವೇಂದ್ರರಾವ್, ಶ್ರೀನಿವಾಸರಾಜು ಮತ್ತು ನಾನು ಇದ್ದಾಗ ಹುಟ್ಟಿಕೊಂಡ ಹೆಸರು ಅದು. ನಮ್ಮಿಬ್ಬರಿಗೂ ಡಯಾಬಿಟಿಸ್ಸು. ಇಬ್ಬರಿಗೂ ಕುರುಕು ತಿಂಡಿಗಳು ಇಷ್ಟ. ನಾವಿಬ್ಬರೂ ನಿಶ್ಚಿಂತೆಯಾಗಿ ತಿನ್ನಬಹುದಾದ, ನಮ್ಮ ಮನೆಯಲ್ಲಿ ಸದಾ ಸ್ಟಾಕು ಇರುತ್ತಿದ್ದ ಆ ತಿಂಡಿಗಳಿಗೆ ನಾವಿಟ್ಟ ಹೆಸರು ನ್ಯಾಶನಲ್ ಫುಡ್ಡು. ಹಾಗೆ ರಾಜು ಕುಟುಂಬ ಮತ್ತು ನಮ್ಮ ಕುಟುಂಬ ನಿರ್ಮಲಾ ಟ್ರಾವೆಲ್ಸಿನಲ್ಲಿ ದಕ್ಷಿಣ ಭಾರತ ಪ್ರವಾಸ ಹೋಗಿದ್ದೆವು. ಅದೂ ಸರಸ್ವತಿಯವರ ಪುಸಲಾವಣೆಯ ಮೇರೆಗೆ. ಪ್ರಯಾಣದ ಕಾಲದಲ್ಲಿ ಹತ್ತೂದಿನ ಸಮೃದ್ಧವಾಗಿ ಕುರುಕು ತಿಂಡಿಗಳ ಸರಬರಾಜನ್ನು ಪ್ರವಾಸಿ ಸಂಸ್ಥೆ ಮಾಡಿತ್ತು. ನಮ್ಮ ಮನಸ್ಸಿನೊಳಗೆ ಪ್ರಬಲವಾಗಿ ಗುಪ್ತವಾಗಿ ಇರುವ ತಿಂಡಿಯ ಆಸೆಗೆ 'ತಿಂದರೆ ಪರವಾಗಿಲ್ಲವಾ ಸಾರ್' ಅಂತ ನನ್ನನ್ನು ರಾಜು, ರಾಜುವನ್ನು ನಾನು ಕೇಳಿಕೊಂಡು, ಅವರೇ ತಿನ್ನುತ್ತಾರಂತೆ ಇನ್ನು ನನ್ನದೇನು ಪರವಾಗಿಲ್ಲ ಅಂತ ಇಬ್ಬರೂ ತಿಂದು ಬಿಡುತ್ತಿದ್ದೆವು.

ರಾಜು ಬಲು ದೊಡ್ಡ ಆಸರೆ. ಹಾಗೆ ಸಿಂಗಪುರ ಮಲೇಶಿಯಾಗಳಿಗೆ ಹೋದಾಗಲೂ ಖುತ, ನಾನು ಮೊದಲಾದವರು ಜೀರ್ ಹೀರಿದರೆ ರಾಜು ಮುಖದಲ್ಲಿ ಆಕ್ಷೇಪಣೆ ಇರುತ್ತಿರಲಿಲ್ಲ. ಖುತ ನನ್ನೊಡನೆ ಸಿಗರೇಟು ಸೇದಿದರೂ. ಮನುಷ್ಯರ ಮನಸ್ಸಿನ ದೌರ್ಬಲ್ಯಗಳು, ಚಾಪಲ್ಯಗಳು ನಿಂದನೆಗೆ, ಆಕ್ಷೇಪಣೆಗೆ ಯೋಗ್ಯ ಅನ್ನುವ ಮಡಿವಂತರಲ್ಲ ರಾಜು. ಅವು ಇವೆ, ಅವು ಇರುವವರೇ ಅವನ್ನು ಸಂಭಾಳಿಸಿಕೊಳ್ಳಬೇಕು ಅನ್ನುವ ನಿರ್ಲಿಪ್ತತೆ ದೊಡ್ಡದು. ಹಾಗೆ ಸುಮ್ಮನೆ ಮಾತಾಡುತ್ತ ಕೂತಾಗಲೂ, ಲೇಖಕರು ಸೇರಿದಾಗ ಇನ್ನೇನು ಇರುತ್ತದೆ, ನಮ್ಮೊಡನೆ ಆ ಕ್ಷಣದಲ್ಲಿ ಇಲ್ಲದಿರುವ ಲೇಖಕರ ಬಗ್ಗೆ ಮಾತಾಡಿಕೊಳ್ಳುವುದು ತಾನೇ. ಆ ಹೊತ್ತಿನಲ್ಲು ರಾಜು ಇಲ್ಲದಿರುವ ವ್ಯಕ್ತಿಗಳ ದೋಷ ದೌರ್ಬಲ್ಯಗಳನ್ನು ಎತ್ತಿ ಆಡಿದ್ದು ನನಗೆ ನೆನಪಿಲ್ಲ.

ನಾವು, ಅಂದರೆ ರಾಜು, ರಾಘವೇಂದ್ರರಾವ್, ಕೆ.ವಿ. ನಾರಾಯಣ ಮತ್ತು ಕಲ್ಗುಡಿ ಒಂದು ಸತ್ ಸಂಪ್ರದಾಯವನ್ನು ಹುಟ್ಟಿ ಹಾಕಬೇಕೆಂದು ಸಂಕಲ್ಪ ಮಾಡಿಕೊಂಡಿದ್ದೆವು. ಬೆಂಗಳೂರಿನಲ್ಲಿ ತಿಂಗಳಿಗೆ ಒಂದು ಸಾರಿ ಒಬ್ಬೊಬ್ಬರ ಮನೆಯಲ್ಲಿ ಶನಿವಾರ ಸಂಜೆ ಸೇರಿ ಭಾನುವಾರದ ರಾತ್ರಿಯವರೆಗೂ ಒಟ್ಟಾಗಿ ಸಹನೌ ಭುನಕ್ತು ಇತ್ಯಾದಿಯಾಗಿ ನಿರಾಳವಾಗಿ ಕಳೆಯಬೇಕೆಂದು. ಕನ್ನಡ ವಿಶ್ವವಿದ್ಯಾಲಯಕ್ಕೆ ಹೋಗುವ ಅವಕಾಶ ದೊರೆತಾಗ ಎಲ್ಲರೂ ಪರಸ್ಪರ ಕೂಗಳತೆಯ ದೂರದಲ್ಲಿ ಮನೆ ಮಾಡಿಕೊಂಡಿರಬೇಕೆಂದು ಕನಸು ಕಂಡಿದ್ದೆವು. ನಾರಾಯಣರ ಗೂಡು ಮನೆಯಲ್ಲಿ ನಮ್ಮ ಸಂಕಲ್ಪ ಒಮ್ಮೆ ಯಶಸ್ವಿಯಾಗಿ ನಡೆಯಿತು. ನಮ್ಮ ಮನೆಯಲ್ಲಿ ಅರೆ ಯಶಸ್ವಿಯಾಯಿತು. ಆನಂತರ ಸಂಪೂರ್ಣ ಯಶಸ್ವಿಯಾಗುವುದಕ್ಕೆ ಇಪ್ಪತ್ತು ವರ್ಷಗಳಿಂದ ಮತ್ತೊಂದು ದಿನ, ಮತ್ತೊಂದು ಮನೆಗೆ ಕಾಯುತ್ತಿದೆ. ಸಂಕಲ್ಪದ ಗತಿಯೇ ಕನಸಿಗೂ. ಎಲ್ಲ ಸಂಕಲ್ಪಗಳೂ ಕನಸುಗಳೂ ಕೈಗೂಡಿಬಿಟ್ಟರೆ, ಅಯ್ಯೋ ಭೂಮಿಯೇ ಸ್ವರ್ಗವಾಗಿಬಿಡುತ್ತದಲ್ಲಾ. ನಾವಾಗಿ ಕಟ್ಟಿಕೊಂಡಿರುವ ಏನೇನನ್ನೋ ಬಿಡದಿದ್ದರೆ ಕಟ್ಟಿಕೊಂಡ ಕನಸು ಅದು ಹೇಗೆ ನಿಜವಾಗುತ್ತದೆ? ಕನಸನ್ನೇ ಬೆಂಬತ್ತಿ ಹೋಗಿ ನಿಜಮಾಡಿಕೊಳ್ಳುವ ತಾಕತ್ತು ಸುಮ್ಮನೆ ಬರುವುದಿಲ್ಲ. ಉಳಿಯುವುದು ಹಂಬಲ ಮಾತ್ರ.

ರಾಜು ಮೇಷ್ಟ್ರರಿಗೆ ನಿದ್ರೆ ಕಡಿಮೆ. ಸದಾ ಎಚ್ಚರದ ಮನುಷ್ಯ. ಹೊಸಪೇಟೆಯಲ್ಲಿ ನಮ್ಮ ಹೆಂಡಂದಿರಿಲ್ಲದೆ ರಾಘವೇಂದ್ರರಾವ್, ರಾಜು ಮತ್ತು ನಾವೇ ಮೂರು ಜನ ಒಂದೇ ಮನೆಯಲ್ಲಿ ಮೂರು ತಿಂಗಳಿದ್ದೆವು. ಜೊತೆಗೆ ಒಂದು ತಿಂಗಳೋ ಏನೋ ಕೀ.ರಂ. ಕೂಡ ಇದ್ದರು. ಆಗ ಮಲಗಿದಕೂಡಲೆ ನಾನು ನಿದ್ರೆ ಹೋದರೆ ರಾಜು ಎಚ್ಚರವಾಗಿಯೇ ಇರುತ್ತಿದ್ದರು. ಒಂದು ಹೊತ್ತಿನಲ್ಲಿ ಅಕಸ್ಮಾತ್ ಎಚ್ಚರವಾದರೆ ಎದ್ದು ಶತಪಥ ತಿರುಗುತ್ತಿದ್ದರು. ಕೋಳಿಯೊಡನೆ ಏಳುವ ನಾನು ಕಣ್ಣು ಬಿಡುವ ಹೊತ್ತಿಗೆ ಆಗಲೇ ಎದ್ದು ಕೂತು ಬೆಳಗ್ಗೆ ವಿಶ್ವವಿದ್ಯಾಲಯದ ಪ್ರಸಾರಾಂಗದಲ್ಲಿ ಮಾಡಬೇಕಾದ ಕೆಲಸಗಳ ಪಟ್ಟಿ ಮಾಡುತ್ತಾ ಕೂತಿರುತ್ತಿದ್ದರು. 'ಅರಮನೆಗಳಲ್ಲಿ ಏನು ಬೇಕಾದರೂ ನಡೆಯಬಹುದು' ಅನ್ನುವುದು ರಾಜು ಅವರಿಗೆ ಇಷ್ಟವಾದ ಕೊಟೇಶನ್ನು. ಅನೇಕ ಸಂದರ್ಭಗಳಲ್ಲಿ ಅದನ್ನು ಅವರು ಬಾಯಿಂದ ಕೇಳಿದ್ದೇನೆ. ವಿಶ್ವವಿದ್ಯಾಲಯದ ಅರಮನೆಯಲ್ಲಿ ಏನೇನೋ ನಡೆಯುತ್ತಿತ್ತು. ರಾಜು ಮಾತ್ರ ಏನೇನೋ ನಡೆಯಬಹುದು ಅನ್ನುವುದು ಗೊತ್ತಿದ್ದರೂ ತಮ್ಮ ಪಾಲಿನ ಕೆಲಸವನ್ನು ಅಪರೂಪದ ಶ್ರದ್ಧೆ, ನಿಷ್ಠೆಗಳಿಂದ

ಮಾಡಿಕೊಂಡು ಹೋಗುತ್ತಿದ್ದರು. ಆಮೇಲೂ ಅಷ್ಟೆ. ರಾಜ್ಯದ ನಿಜವಾದ ಅರಮನೆಯಾದ ವಿಧಾನ ಸೌಧದಲ್ಲೂ ಏನೇನೋ ನಡೆದು ಅವರಿಗೆ ಅರ್ಹವಾಗಿ ಸಿಗಬೇಕಾದ ಏನೇನೋ ಎಷ್ಟೆಷ್ಟೋ ಸಿಗಲೇ ಇಲ್ಲ. ರಾಜುಗೆ ಬೇಸರವಾಯಿತೋ, ನೋವಾಯಿತೋ? ಆಗಿದ್ದೀತು. ನೋವು, ಬೇಸರ, ದುಃಖಗಳನ್ನು ತೋರದಿರುವ ಎಚ್ಚರವನ್ನು ರಾಜು ಎಂದೂ ಕಳೆದುಕೊಂಡಿಲ್ಲ. ಒಲ್ಲದಿದ್ದಾಗ ಮೌನವಾಗಿದ್ದುಕೊಂಡು, ಮನಸ್ಸಿನಲ್ಲಿ ಹುಟ್ಟಿದ ವಿರೋಧಕ್ಕೆ ತಪ್ಪು ಅರ್ಥ ಕೊಡುವಂಥ ಮಾತಿನ ಆಕಾರಕೊಡದೆ, ಆದರೆ ತಾವು ಸರಿ ಎಂದು ನಂಬಿರುವುದರಿಂದ ಒಂದಿಷ್ಟೂ ಅಲುಗದೆ ಇರುವ ಎಚ್ಚರ ಸುಮ್ಮನೆ ಬರುವುದಿಲ್ಲ. ರಾಜು ಎನ್.ಸಿ.ಸಿ. ಮೇಷ್ಟರು ಕೂಡ ಆಗಿದ್ದರಲ್ಲ, ಆ ಟ್ರೈನಿಂಗು ಅವರಿಗೆ ಇಂಥ ಉಗ್ರ ಸಾತ್ವಿಕ ಮೌನವನ್ನು ಕಲಿಸಿರಬಹುದು.

ರಾಜರತ್ನಂ ಅವರನ್ನು ನಾನು ಕಾಣೆ. ಅವರ ಬಗ್ಗೆ ಹೇಳಿರುವುದು, ಓದಿರುವುದು ಜ್ಞಾಪಿಸಿಕೊಂಡರೆ ರಾಜರತ್ನಂ ಈಗಿದ್ದಿದ್ದರೆ ರಾಜು ಥರ ಇರುತ್ತಿದ್ದರು ಅನ್ನಿಸುತ್ತದೆ. ಎಷ್ಟೊಂದು ಎಳೆಯ ಮನಸ್ಸುಗಳು ಸಾಹಿತ್ಯದ ರುಚಿ ಹತ್ತಿಸಿಕೊಳ್ಳುವಂತೆ ಮಾಡಿದ್ದಾರಲ್ಲ ಅದು ಕೂಡ ರಾಜರತ್ನಂ ಅವರ ಕಾಲದಲ್ಲಿ ಮಾಡಿದ ಕೆಲಸವೇ. ನಮ್ಮ ತಲೆಮಾರಿನ ಸಾಹಿತ್ಯ ನಿರ್ಮಾಪಕರಲ್ಲಿ ರಾಜು ಪ್ರಮುಖರು. ಅವರು ಕನ್ನಡದ ಪ್ರಮುಖ ಕವಿ, ನಾಟಕಕಾರ ಇತ್ಯಾದಿಯಾಗಿ ವಿಮರ್ಶೆ ಗುರುತಿಸದೆ ಇರಬಹುದು, ಆದರೆ ಕಳೆದ ಮೂವತ್ತು ವರ್ಷಗಳ ಕನ್ನಡ ಸಾಹಿತ್ಯದ ನಿರ್ಮಾಣದಲ್ಲಿ ರಾಜು ಪಾತ್ರ ಕಡಮೆಯದಲ್ಲ. ವೆಂಕಟೇಶ ಎಂಬ ಒಬ್ಬ ಹುಡುಗ ಇದ್ದ. ವೈದ್ಯಕೀಯ ಓದುತ್ತಿದ್ದವನು. ರಾಜು ಶಿಷ್ಯ. ಅವನು ತೀರಿಕೊಂಡಾಗ ಅವರು ಬರೆದ ಪದ್ಯ, ಛಸನಾಲ ಬಂಧು ಅನ್ನುವ ಇನ್ನೊಂದು ಪದ್ಯ ನನಗೆ ಯಾವಯಾವಾಗೋ ನೆನಪಿಗೆ ಬರುತ್ತಿರುತ್ತವೆ. ಮೂಕನಾಟಕಗಳು, ಹಳಿಯ ಮೇಲಿನ ಸದ್ದು ಅನ್ನುವ ನಾಟಕಗಳು ಖಂಡಿತ ಸಾಮಾನ್ಯ ರಚನೆಗಳಲ್ಲ. ಚಿತ್ರಕಲಾಪರಿಷತ್ತಿನ ಹುಡುಗರಾಗಲೀ ಕ್ರೈಸ್ತ ಕಾಲೇಜಿನ ಮಕ್ಕಳಾಗಲೀ ಶೇಷಾದ್ರಿ ಪುರಂ ಸ್ನಾತಕೋತ್ತರ ಕೇಂದ್ರ ವಿದ್ಯಾರ್ಥಿಗಳಾಗಲೀ ಅಧ್ಯಾಪಕರಾದವರು ಮಕ್ಕಳೊಡನೆ ಹೇಗೆ ಗಂಭೀರಸ್ನೇಹ ಬೆಳೆಸಿಕೊಳ್ಳಬಹುದು ಅನ್ನುವುದು ತಿಳಿದದ್ದು ರಾಜು ಅವರನ್ನು ಸಮೀಪದಿಂದ ನೋಡಿದಾಗಲೇ.

ರಾಜು, ಬರಗೂರು ರಾಮಚಂದ್ರಪ್ಪನವರ ಕುಟುಂಬ ಮತ್ತು ನಾವು ಮಹಾರಾಷ್ಟ್ರದ ಪ್ರವಾಸ ಮಾಡಿದ್ದು, ರಾಜು ಕುಟುಂಬ ಮತ್ತು ನಾವು ಸಿಂಗಪುರ ಪ್ರವಾಸ ಮಾಡಿದ್ದು, ರಾಘವೇಂದ್ರರಾವ್ ಮತ್ತು ಅವರ ತಮ್ಮ, ರಾಜು, ನಾವು ಎಲ್ಲ ಸಪರಿವಾರ ಸಮೇತ ಕೊಡಚಾದ್ರಿ ಬೆಟ್ಟ ಹತ್ತಿದ್ದು, ರಾಜು ಮತ್ತು ನಾನು ಒಟ್ಟಿಗೆ ಹಲವು ಬಾರಿ ಆಸ್ಪತ್ರೆಗಳಿಗೆ ಹೋಗಿದ್ದು, ಎಲ್ಲರ ಮನೆಗಳಲ್ಲಿರುವ ತೊಡಕುಗಳ ಸನ್ನಿವೇಶಗಳು, ಚಿತ್ರಕಲಾಪರಿಷತ್ತು, ಕನ್ನಡ ಸಾಹಿತ್ಯ ಪರಿಷತ್ತು, ಶೇಷಾದ್ರಿಪುರಂ ಸ್ನಾತಕೋತ್ತರ ಕೇಂದ್ರದ ಹಲವು ಘಟನೆಗಳು, ಇಂಥ ಎಷ್ಟೋ ಅಸಂಖ್ಯ ನೆನಪುಗಳಿವೆ. ಎಲ್ಲ ಸಂದರ್ಭಗಳಲ್ಲೂ ನಿರಾಳವಾಗಿರುತ್ತ ಆದರೆ ಗಾಂಭೀರ್ಯ ಕಳೆದುಕೊಳ್ಳದೆ, ಧೈರ್ಯ ತುಂಬುತ್ತ ತಾವೇ ಎಂದೂ ಎದೆಗುಂದದೆ, ತನ್ನ ನಿಲುವನ್ನು ಬಿಟ್ಟುಕೊಡದೆ ಆದರೆ ಸಾರ್ವಜನಿಕ ವಿವಾದಗಳನ್ನು ಸೃಷ್ಟಿಸದೆ ಎಂಥ ಪ್ರಸಂಗವನ್ನೂ ಅವಧಾನದಿಂದ ನಿರ್ವಹಿಸುವ ಅವರ ಗುಣ ಅಪೂರ್ವ.

ರಾಜು ಸ್ವತಃ ಒಂದು ಸಾರಿ ಹೇಳಿಕೊಂಡಿದ್ದರು. ಲಂಕೇಶರು ಅವರನ್ನು ಕುರಿತು "ಸಜ್ಜನ ರಾವ್ ಆದ ಮೇಲೆ ನೀವೇ ಕಣ್ರೀ ನಿಜವಾದ ಸಜ್ಜನ" ಅಂತ. ತಮ್ಮ ಕೈಯಲ್ಲಿ ಆಗುವುದನ್ನು ಆಗುವಷ್ಟು ಸಮರ್ಪಕವಾಗಿ ಮಾಡುವ, ಖಾಸಗೀ ಮತ್ತು ಸಾರ್ವಜನಿಕಗಳ ನಡುವೆ ಖಚಿತವಾದ ಎಂದೂ ಉಲ್ಲಂಘಿಸಬಾರದ ಗಡಿರೇಖೆಯನ್ನು ಹುಷಾರಾಗಿ ಕಾಪಾಡಿಕೊಂಡಿರುವ, ಇನ್ನೊಬ್ಬರ ಸ್ವಾತಂತ್ರ್ಯ ಮತ್ತು ದೌರ್ಬಲ್ಯಗಳನ್ನು ಮಾತಿನ ಚಪಲಕ್ಕೆ ಬಳಸಿಕೊಳ್ಳದ, ತಮ್ಮ ನಿಲುವನ್ನು ಎಂದೂ ಬಿಟ್ಟುಕೊಡದ, ಇವರೊಬ್ಬರು ಜೊತೆಯಲ್ಲಿದ್ದರೆ ಸಾಕು ಅನ್ನುವಂಥ ವಿಶ್ವಾಸವನ್ನು ಮೂಡಿಸುವ, ತಾನು ಅಸಾಮಾನ್ಯನೆಂಬ ಭ್ರಮೆ ಇರದ, ಆ ಕಾರಣದಿಂದಲೇ ಅಪರೂಪವಾದ, ಹೀಗಿರಬೇಕು ಅನ್ನಿಸುವ ಆದರೆ ಹಾಗಿರಲಾಗದ, ಬಗೆಬಗೆಯ ಸಂಬಂಧಗಳ ಸಮತೋಲನವನ್ನು ಎಂದೂ ಹದಗೆಡಿಸದ ಶ್ರೀನಿವಾಸರಾಜು ಅಂಥವರ ಜೊತೆ ಅವರ ಸಮಕಾಲೀನನಾಗಿ ಇದ್ದದ್ದು ನನ್ನ ಮಟ್ಟಿಗೆ ಒಂದು ಭಾಗ್ಯವೇ ಸರಿ.

❑

# ನನ್ನ ಗೆಳೆಯ ಚಿರಂಜೀವಿ

● ಮನು ಪಾಟೀಲ

**ಕ**ನ್ನಡ ಮಾತನಾಡುವ ಪ್ರದೇಶಗಳು ಒಂದೇ ಆಡಳಿತಕ್ಕೊಳಪಟ್ಟು ಐವತ್ತು ವರ್ಷಗಳಾದವು. ಐವತ್ತು ತುಂಬಿದ ಸವಿನೆನಪಿಗಾಗಿ ನಾಡಿಗೇ ನಾಡೇ ಈ ಐತಿಹಾಸಿಕ ಘಟನೆಯನ್ನು ವಿಜೃಂಭಣೆಯಿಂದ ಆಚರಿಸುತ್ತಿರುವ ಶುಭ ಸಂದರ್ಭದಲ್ಲಿ ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪನವರಿಂದ ಒಂದು ಪತ್ರ ಬಂತು. ಪ್ರೊ. ಚಿ. ಶ್ರೀನಿವಾಸರಾಜು ಅವರ ಸಂಭಾವನಾ ಗ್ರಂಥಕ್ಕೆ ಒಂದು ಲೇಖನ ಬೇಕೆಂದು. ಇನ್ನು ಆರು ತಿಂಗಳು ಕಳೆದರೆ, ನಮ್ಮಿಬ್ಬರ ಸ್ನೇಹದ ಚಿನ್ನದ ಹಬ್ಬದ ಆಚರಣೆ. ರಾಜು ಅವರ ಬಗೆಗೆ ಬರೆಯುವುದು ನನಗೆ ಅತೀವ ಹೆಮ್ಮೆಯ ಮತ್ತು ಅಭಿಮಾನದ ಸಂಗತಿ. ನಮ್ಮಿಬ್ಬರ ಸ್ನೇಹದ ಈ ಐವತ್ತು ವರುಷಗಳಲ್ಲಿ ಅವರು ದಾಟಿ ಬಂದ ಮೈಲುಗಲ್ಲುಗಳನ್ನು ಅವಲೋಕಿಸಿ, ನನ್ನ ಅಂತರಂಗದಿಂದ ಚಿಮ್ಮಿದ ಕೆಲವು ಮಧುರ ಸ್ಮೃತಿಗಳನ್ನು ನಿಮ್ಮ ಮುಂದೆ ಬಿಚ್ಚಿಡುವ ಪುಟ್ಟ ಪ್ರಯತ್ನ ಈ ಲೇಖನ.

ಸೌಮ್ಯ ಸ್ವಭಾವದ, ತಮ್ಮ ಮುಗ್ಧತೆಯಿಂದ ಎಂಥವರನ್ನೂ ಗೆಲ್ಲುವ, ಸದಾಕಾಲ ಕನ್ನಡ ಕಟ್ಟುವ ಹುಚ್ಚಿಗಾಗಿ, ತಮ್ಮ ಸರ್ವಸ್ವವನ್ನು ಧಾರೆಯೆರೆದ ರಾಜು ಮತ್ತು ನಾನು ಒಟ್ಟಿಗೆ ಓದಿದ್ದು ಶ್ರೀ ರೇಣುಕಾಚಾರ್ಯ ಕಾಲೇಜಿನಲ್ಲಿ. ಆಗ ಅದರ ಹೆಸರು ಬಸಪ್ಪ ಇಂಟರ್ ಮೀಡಿಯಟ್ ಕಾಲೇಜ್ ಎಂದು.

೧೯೫೬ರಲ್ಲಿ ರಾಜ್ಯ ನಿರ್ಮಾಣಗೊಂಡು ಬೆಂಗಳೂರು ರಾಜಧಾನಿಯಾದ ಮೇಲೆ, ನನ್ನ ಸೋದರ ಮುಂಬೈಯಿಂದ ಬೆಂಗಳೂರಿಗೆ ವರ್ಗವಾಗಿ ಬಂದರು. ನಾನು ಕಾಲೇಜು ಶಿಕ್ಷಣಕ್ಕಾಗಿ ೧೯೫೭ರ ಬೇಸಿಗೆಯಲ್ಲಿ ಇಲ್ಲಿಗೆ ಬಂದೆ. ನನ್ನ ಸೋದರ ಅ.ನ.ಕೃಷ್ಣರಾಯರ ಪರಮಭಕ್ತ. ಎಂ.ಎ. ಓದುತ್ತಿದ್ದಾಗ (ಧಾರವಾಡದಲ್ಲಿ) ಆತನ ಆರೋಗ್ಯ ಹದಗೆಟ್ಟಾಗ ಅನಕೃ ಇಲ್ಲಿಗೆ ಆತನನ್ನು ಕರೆದುಕೊಂಡು ಬಂದು ಯೋಗಕ್ಷೇಮ ನೋಡಿಕೊಂಡಿದ್ದರು.

ರಾಯರು ಮತ್ತು ಅವರ ಮನೆಮಂದಿಯೆಲ್ಲ ನಮ್ಮಿಬ್ಬರನ್ನು ತುಂಬ ಮಮತೆಯಿಂದ ಕಾಣುತ್ತಿದ್ದರು.

ಕಾಲೇಜ್ ಪ್ರಾರಂಭದ ದಿನ ವಿದ್ಯಾರ್ಥಿಗಳಲ್ಲಿ ಎಲ್ಲಿಲ್ಲದ ಉತ್ಸಾಹ. ಶುಭ ಕೋರಲು ಬಂದ ಪ್ರಾಂಶುಪಾಲರು "ಕಾಲೇಜ್ ಶಿಕ್ಷಣಕ್ಕಾಗಿ ತಾವು ಬಂದ ಸದುದ್ದೇಶ ಹೇಳಬಲ್ಲಿರಾ? ಎಂದು ಕೇಳಿದರು. ಒಬ್ಬೊಬ್ಬರು ಒಂದೊಂದು ಉತ್ತರವನ್ನು ಕೊಟ್ಟರು. ಬುದ್ಧಿವಂತನೆಂಬ ಭ್ರಮೆಯಿಂದಿದ್ದ ನಾನು ಒಂದು ಕಾರಣ ಕೊಟ್ಟಿದ್ದೆ. ಮುಂದಿನ ಬೆಂಚಿನಲ್ಲಿ ಕುಳಿತಿದ್ದ ವಿದ್ಯಾರ್ಥಿಯೊಬ್ಬ ಗಂಭೀರವಾಗಿ ಹೇಳಿದ್ದ. "ದೇಶದ ಸತ್ಪ್ರಜೆಯಾಗಬೇಕೆಂಬ ಸದುದ್ದೇಶದಿಂದ" ಎಂದು. ಆತನ ಉತ್ತರದಿಂದ ಸಂತುಷ್ಟರಾದ ಪ್ರಾಂಶುಪಾಲರು "ನಿನಗೆ ಉಜ್ವಲ ಭವಿಷ್ಯವಿದೆ" ಎಂದು ಶುಭ ನುಡಿದಿದ್ದರು. ನಂತರ ತಿಳಿಯಿತು, ಆ ವಿದ್ಯಾರ್ಥಿ ಮಲ್ಲೇಶ್ವರದಿಂದ ಬಂದ ಶ್ರೀನಿವಾಸರಾಜು ಎಂದು. ರಾಜು ಕಾಲೇಜ್ Hero ಆದರು; ಎಲ್ಲರ ಕಣ್ಮಣಿಯಾದರು.

ಮಲ್ಲೇಶ್ವರದಿಂದ ರಾಜು, ಶಿವಸ್ವಾಮಿ, ಶ್ರೀನಿವಾಸ, ಪ್ರೇಮ್‌ಕುಮಾರ್, ರಾಮು, ರಾಮಚಂದ್ರ, (ದೃಢಕಾಯ) ವೆಂಕಟರಂಗ ಮೊದಲಾದ ಪ್ರತಿಭಾವಂತರ ದಂಡೇ ಇತ್ತು. ಅವರೆಲ್ಲ ಮುಂದಿನ ಬೆಂಚ್ ಆಕ್ರಮಿಸಿಕೊಂಡು ಬೀಗುತ್ತಿದ್ದರು. ಸತ್ಯಾಜಿರಾವ್, ನಾಗರಾಜ್, ರಾಮಚಂದ್ರ (ಕೃಶಕಾಯ), ರಾಮಕೃಷ್ಣ, ಚೆನ್ನಬಸಪ್ಪ, ಬದ್ರಿನಾರಾಯಣ ಮತ್ತು ನಾನು ಕೊನೆಯ ಬೆಂಚಿನಲ್ಲಿ ಕುಳಿತು ಕೀಟಲೆ ಮಾಡುತ್ತಿದ್ದುದು ಎಲ್ಲರ ಗಮನ ಸೆಳೆದಿತ್ತು. ನಮಗೆ ಬೋಧಿಸುತ್ತಿದ್ದ ಅಧ್ಯಾಪಕರು ಒಬ್ಬರನ್ನೊಬ್ಬರು ಮೀರಿಸುತ್ತಿದ್ದರು. ಪ್ರೊ. ಎ. ರಾಮರಾಯರು Merchant of Venice ಪಾಠ ಮಾಡಿದ್ದು ಇಂದಿಗೂ ನೆನಪಿದೆ. ಆಗತಾನೆ M.Sc. ಮಾಡಿ Physics ಹೇಳುತ್ತಿದ್ದ ನಾರಾಯಣ ಮಹಿಷಿಯವರನ್ನು ಎಲ್ಲರೂ ಗೋಳು ಹೊಯ್ದುಕೊಳ್ಳುತ್ತಿದ್ದರು. ಪಂಡಿತ ಶೇಷಾಚಾರ್, ನಮಗೆ ಕನ್ನಡ ಪಂಡಿತರು. ಬಸವರಾಜ ಕಟ್ಟೀಮನಿ ಅವರ 'ಮಾಡಿ ಮಡಿದವರು' ಕಾದಂಬರಿ ನಮಗೆ ಪಠ್ಯವಾಗಿತ್ತು. ಪಂಡಿತರಿಗೆ ಉತ್ತರ ಕರ್ನಾಟಕದ ಭಾಷೆ ಕಬ್ಬಿಣದ ಕಡಲೆ. ವರ್ಷಪೂರ್ತಿ ನಾನೇ ಆ ಕಾದಂಬರಿ ಓದಿ ಹೇಳಬೇಕಾಗಿತ್ತು ಕ್ಲಾಸಿನಲ್ಲಿ. ಮರುವರುಷ ಕನ್ನಡ ಎಂ.ಎ. ಓದಿದವರಿಗೆ ಮಾತ್ರ ಪಾಠ ಮಾಡುವ ಅವಕಾಶವಿತ್ತು. ಹೀಗಾಗಿ ಪಂಡಿತ ಶೇಷಾಚಾರ್ ಅವರು ನೌಕರಿ ಕಳೆದುಕೊಂಡರು. ನಂತರದ ದಿನಗಳಲ್ಲಿ ರಾಜು ಯಾರಿಗೂ ಗೊತ್ತಾಗದ ಹಾಗೆ, ಅವರಿಗೆ ಆರ್ಥಿಕ ನೆರವು ನೀಡಿದುದನ್ನು ನಾನು ಮಾತ್ರ ಬಲ್ಲೆ.

ನಾವೆಲ್ಲ ಕ್ರೀಡೆ ಮತ್ತಿತರ ಪಠ್ಯೇತರ ಚಟುವಟಿಕೆಗಳಲ್ಲಿ ಹೆಚ್ಚು ಉತ್ಸಾಹದಿಂದ ಭಾಗವಹಿಸುತ್ತಿದ್ದೆವು. ಆದರೆ ರಾಜುಗೆ ನಾಟಕದ ಹುಚ್ಚು. ರಾಮಚಂದ್ರ, ಶಿವಸ್ವಾಮಿ ಮತ್ತು ರಾಜು, ಪ್ರೊ॥ ಎಂ.ಎಸ್. ನಾಗರಾಜ್ ಅವರ ನಿರ್ದೇಶನದಲ್ಲಿ ಪರ್ವತವಾಣಿ ಅವರ ವಾರ್ಷಿಕೋತ್ಸವ ನಾಟಕವನ್ನು ಸ್ನೇಹ ಸಮ್ಮೇಳನದ ದಿನ ಯಶಸ್ವಿಯಾಗಿ ಪ್ರದರ್ಶಿಸಿದ್ದರು. ಅಂತರ್ ಕಾಲೇಜು ನಾಟಕ ಸ್ಪರ್ಧೆಯಲ್ಲಿ ಈ ನಾಟಕವನ್ನು ಮೈಸೂರು ಮಹಾರಾಜ ಕಾಲೇಜಿನಲ್ಲೂ ಪ್ರಯೋಗಿಸಿ ಸೈ ಎನಿಸಿಕೊಂಡರು. ಆಗಲೇ ನನಗೆ ಗೊತ್ತಾಗಿದ್ದು– ರಾಜುಗೆ ನಾಟಕಗಳಲ್ಲಿ ಅತೀವ ಆಸಕ್ತಿ ಇದೆ ಎಂದು.

ಪಿ.ಯು.ಸಿ. ಮುಗಿಸಿದ ನಂತರ ನಾನು ವೈದ್ಯಕೀಯ ಶಿಕ್ಷಣವನ್ನು ಮುಂದುವರಿಸಿದೆ.

ರಾಜು ಬಿ.ಎಸ್ಸ್‌ಸಿ.ಗೆ ಸೇರಿದರು. ಯಾಕೋ ನಮ್ಮಿಬ್ಬರಿಗೂ ವಿಜ್ಞಾನದೇವಿ ಒಲಿದು ಬರಲಿಲ್ಲ. ನಮ್ಮಿಬ್ಬರಿಗೂ ಆಗ ಕನ್ನಡದ ಹುಚ್ಚು ಹಿಡಿದಿತ್ತು. ಅನಕೃ ನಮ್ಮಿಬ್ಬರಿಗೂ ಆರಾಧ್ಯದೇವತೆ. ತುಂಬ ಭರವಸೆ ಮತ್ತು ಕನಸುಗಳನ್ನು ಹೊತ್ತು ಬೆಂಗಳೂರಿಗೆ ಬಂದಿದ್ದ ನನಗೆ ಭ್ರಮನಿರಸನ ವಾಗಿತ್ತು. ತೆಲುಗು ಮತ್ತು ತಮಿಳು ಮಾತನಾಡುವ, ಆದರೆ "ಮೈಸೂರಿಯನ್ಸ್" ಎಂದು ಹೆಮ್ಮೆ ಪಟ್ಟುಕೊಳ್ಳುತ್ತಿದ್ದ ಕನ್ನಡಿಗರನ್ನು, ಅದರಲ್ಲೂ ಬೇರೆ ಪ್ರದೇಶಗಳಿಂದ ಬೆಂಗಳೂರಿಗೆ ಆಗಮಿಸಿದ್ದ ಕನ್ನಡಿಗರನ್ನು, ಕನ್ನಡ ಕಲಾವಿದರನ್ನು ತೀರ ತಾತ್ಸಾರದಿಂದ ಕಾಣುತ್ತಿದ್ದ ಪ್ರಭಾವಶಾಲಿ ವರ್ಗ ತುಂಬ ಅಟ್ಟಹಾಸದಿಂದ ಮೆರೆಯುತ್ತಿದ್ದ ಕಾಲ ಅದು.

"ಪ್ರಜಾವಾಣಿ" ಮತ್ತು "ತಾಯಿನಾಡು" ಎರಡೇ ಕನ್ನಡ ದಿನಪತ್ರಿಕೆಗಳು. ನಂತರ ಹುಬ್ಬಳ್ಳಿಯ "ಸಂಯುಕ್ತ ಕರ್ನಾಟಕ" ತನ್ನ ಬೆಂಗಳೂರು ಆವೃತ್ತಿಯನ್ನು ಪ್ರಾರಂಭಿಸಿತು. ರಂಗ ಚಟುವಟಿಕೆಗಳು ಅಷ್ಟಕಷ್ಟೇ. ಕನ್ನಡ ಚಲನಚಿತ್ರಗಳು ಅಲ್ಲೊಂದು ಇಲ್ಲೊಂದು ಅಪರೂಪಕ್ಕೆ. ಮದ್ರಾಸಿನವರ ಕೃಪಾಕಟಾಕ್ಷದಿಂದ ಅವು ಬೆಳಕು ಕಾಣುತ್ತಿದ್ದವು. ಭಾನುವಾರ ಸಂಜೆ ಕಬ್ಬನ್ ಪಾರ್ಕ್‌ನಲ್ಲಿ ಏರ್ಪಾಡಾಗುತ್ತಿದ್ದ ಚಿತ್ರಗೀತೆಗಳ ಕಾರ್ಯಕ್ರಮಗಳಲ್ಲಿ ಒಬ್ಬರೂ ಕನ್ನಡ ಹಾಡುಗಳನ್ನು ಹಾಡುತ್ತಿರಲಿಲ್ಲ. ರಾಮೋತ್ಸವದ ದಿನಗಳಲ್ಲಿ ತೆಲುಗು ಮತ್ತು ತಮಿಳು ಸಂಗೀತ ವಿದ್ವಾಂಸರೇ ವಿಜೃಂಭಿಸುತ್ತಿದ್ದರು. ಕನ್ನಡಿಗರಲ್ಲಿ ಅಭಿಮಾನಶೂನ್ಯತೆ ಎಷ್ಟಿತ್ತೆಂದರೆ "ಆ ಮಟ್ಟದ ಸಂಗೀತಗಾರರು ನಮ್ಮಲ್ಲಿ ಯಾರಿದ್ದಾರೆ ಹೇಳಿ?" ಎಂದು ಛೇಡಿಸುತ್ತಿದ್ದರು. ಎಚ್.ಎ.ಎಲ್. ಸಂಪೂರ್ಣ ತಮಿಳು ಕಾರ್ಮಿಕರಿಂದ ತುಂಬಿ ಹೋಗಿತ್ತು. ಐ.ಟಿ.ಐ.ನಲ್ಲಿ ಅಷ್ಟಿಷ್ಟು ಕನ್ನಡಿಗರಿದ್ದರಾದರೂ ಅವರಿಗೆ ಅಷ್ಟು ಮನ್ನಣೆ ಇರಲಿಲ್ಲ. ಕೆಲವೇ ವರ್ಷಗಳ ಹಿಂದೆ ಪ್ರಾರಂಭವಾಗಿದ್ದ ಬಿ.ಇ.ಎಲ್. ಸಂಪೂರ್ಣ ಮಲಯಾಳಿಮಯವಾಗಿತ್ತು.

ಅ.ನ.ಕೃಷ್ಣರಾಯರು ಕನ್ನಡ ಪಾಂಚಜನ್ಯವನ್ನು ಮೊಳಗಿಸಿದ್ದು ೧೯೬೦ರ ಮಣಿಪಾಲ ಸಾಹಿತ್ಯ ಸಮ್ಮೇಳನದಲ್ಲಿ. ಅಂದು ತಮ್ಮ ಮುದ್ರಿತ ಭಾಷಣವನ್ನು "ಮನೆಗೆ ಹೋಗಿ ಓದಿರಿ" ಎಂದು ಹೇಳಿ ಅವರು ಮಾಡಿದ ಉದ್ಬೋಧಕ ಭಾಷಣ ನಾನು ಕೇಳಿದ ಅತ್ಯುತ್ತಮ ಭಾಷಣಗಳಲ್ಲಿ ಒಂದು. ೧೯೫೬ರಲ್ಲಿ ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಚುನಾವಣೆಗೆ ಸ್ಪರ್ಧಿಸಿ ರಾಯರು ಕೇವಲ ನಾಲ್ಕು ಓಟಿನಿಂದ ಸೋತಿದ್ದರು. ಕನ್ನಡವನ್ನುದ್ಧರಿಸಿದ ಪುಣ್ಯಪುರುಷ ರೆಂದು ನಾವು ಯಾರನ್ನು ಪೂಜಿಸುತ್ತೇವೆಯೋ ಅವರೇ ರಾಯರ ಸೋಲಿಗೆ ಕಾರಣರಾಗಿದ್ದರು. ರಾಯರು ಮಾನಸಿಕವಾಗಿ ತುಂಬ ನೊಂದುಕೊಂಡಿದ್ದರು. ಕನ್ನಡ ಹಿತರಕ್ಷಣೆಗಾಗಿ, ಕನ್ನಡದ ಉಳಿವಿಗಾಗಿ ತಾವು ಹೋರಾಟದ ನೇತೃತ್ವವನ್ನು ವಹಿಸಿಕೊಳ್ಳಬೇಕೆಂದು, ನಾವು ವಿದ್ಯಾರ್ಥಿಗಳೆಲ್ಲ ಪರಿಪರಿಯಾಗಿ ಕೇಳಿಕೊಂಡಾಗ್ಯೂ ರಾಯರು ಮನಸ್ಸು ಮಾಡಲಿಲ್ಲ. ಕಾನೂನು ಶಿಕ್ಷಣಕ್ಕಾಗಿ ಮೈಸೂರಿನಿಂದ ಬಂದ ಕೋಣಂದೂರು ಲಿಂಗಪ್ಪನವರು ಮಾತ್ರ ರಾಯರನ್ನು ಒಪ್ಪಿಸುವಲ್ಲಿ ಯಶಸ್ವಿಯಾದರು. ಕನ್ನಡ ಯುವಜನ ಸಭಾ ಅಸ್ತಿತ್ವಕ್ಕೆ ಬಂತು. ಶೇಷಾದ್ರಿಪುರದಲ್ಲಿ ನಮ್ಮದು ಕನ್ನಡ ಹಿತರಕ್ಷಕ ಸಂಘವಾದರೆ, ರಾಜು ಅವರದು ಮಲ್ಲೇಶ್ವರದಲ್ಲಿ ಇನ್ನೊಂದು ಸಂಘ. ರಾಜಾಜಿನಗರದಲ್ಲಿ ಬಿ.ಕೆ. ಅನಂತಸ್ವಾಮಿಯವರ ನೇತೃತ್ವದಲ್ಲಿ ಕನ್ನಡ ಸಹೃದಯರ ಸಂಘ. ಕರ್ನಾಟಕ ಸರ್ಕಾರ ರಾಜ್ಯೋತ್ಸವ ಸಮಾರಂಭಗಳನ್ನು ಏರ್ಪಡಿಸದಿದ್ದ ದಿನಗಳಲ್ಲಿ, ನಾವು ವಿದ್ಯಾರ್ಥಿಗಳೆಲ್ಲ ತುಂಬ ಉತ್ಸಾಹದಿಂದ ಆಚರಿಸುತ್ತಿದ್ದೆವು. ಅಂದಿನ ದಿನಗಳಲ್ಲಿ ಕನ್ನಡ

ಪತ್ರಿಕೆಗಳು ನಮ್ಮನ್ನು ಸಾಕಷ್ಟು ಪ್ರೋತ್ಸಾಹಿಸುತ್ತಿದ್ದವು. ೧೯೬೧ರಲ್ಲಿ ನಾವು ಕರ್ನಾಟಕ ಕುಲಪುರೋಹಿತ ಆಲೂರು ವೆಂಕಟರಾಯರನ್ನು ಆಮಂತ್ರಿಸಿ ರಾಜ್ಯೋತ್ಸವವನ್ನು ವಿಜೃಂಭಣೆಯಿಂದ ಆಚರಿಸಿದಾಗ, ಉಭಯಗಾನ ವಿದುಷಿ ಶ್ಯಾಮಲಾದೇವಿ ಭಾವೆ ಕುವೆಂಪು ಅವರ "ಬಾರಿಸು ಕನ್ನಡ ಡಿಂಡಿಮವ" ಗೀತೆಗೆ ರಾಗ ಸಂಯೋಜಿಸಿ ಪ್ರಪ್ರಥಮವಾಗಿ ಭಾವಪೂರ್ಣವಾಗಿ ಹಾಡಿ ಶ್ರೋತೃಗಳ ಮನಸೂರೆಗೊಂಡಿದ್ದರು.

೧೯೬೧ರಲ್ಲಿ ಒಂದು ಸಂಜೆ ಸಿಂಡ್ರೆಲಾ ಖ್ಯಾತಿಯ ಡಿ॥ ಸಾ.ಕೃ. ಸತ್ಯನಾರಾಯಣ ಸಂಸ್ಕೃತ ಕಾಲೇಜಿನಲ್ಲಿ ಒಂದು ಸಭೆಯನ್ನು ಆಯೋಜಿಸಿದ್ದರು. ಉತ್ತರ ಧ್ರುವ ಮತ್ತು ದಕ್ಷಿಣ ಧ್ರುವದಂತಿದ್ದ ಅನಕೃ ಮತ್ತು ಎಂ. ರಾಮಮೂರ್ತಿಯವರನ್ನು ಒಂದೇ ವೇದಿಕೆಗೆ ತರುವ ಸಾಹಸವನ್ನು ಅವರು ಮಾಡಿದ್ದರು. ರಾಜು ಮತ್ತು ನಾನು ಆ ಸಭೆಗೆ ಹೋಗಿದ್ದೆವು. ಆ ಸಭೆಯೇ ಮುಂದಿನ ಎಲ್ಲಾ ಹೋರಾಟಗಳಿಗೆ ನಾಂದಿಯಾಯಿತು ಎಂದು ಭಾವಿಸುತ್ತೇನೆ.

೧೯೬೧ ಮಾರ್ಚ್ ತಿಂಗಳಲ್ಲಿ ಕೆಂಪೇಗೌಡ ರಸ್ತೆಯಲ್ಲಿರುವ "ಮೈಸೂರು ಛೇಂಬರ್ ಆಫ್ ಕಾಮರ್ಸ್"ನಲ್ಲಿ ಬೆಂಗಳೂರಿನ ಸಮಸ್ತ ಕನ್ನಡ ಸಂಘ-ಸಂಸ್ಥೆಗಳ ಒಂದು ಬೃಹತ್ ಸಮಾವೇಶವನ್ನು ಕೋಣಂದೂರು ಲಿಂಗಪ್ಪನವರ ಸಹಕಾರದೊಂದಿಗೆ ನಾವು ಆಯೋಜಿಸಿದ್ದೆವು. ವೆಸ್ಟ್ ಇಂಡೀಸ್ ಪ್ರವಾಸಕ್ಕೆ ಹೊರಟ ಭಾರತ ತಂಡದಲ್ಲಿ ಇ.ಎ.ಎಸ್. ಪ್ರಸನ್ನ ಮತ್ತು ಎಂ.ಎಲ್. ಜಯಸಿಂಹ ಸ್ಥಾನ ಪಡೆದಿದ್ದರು. ಕ್ರಿಕೆಟ್ ಪ್ರೇಮಿ ಶ್ರೀರಂಗರು ಅವರಿಬ್ಬರನ್ನು ಅಭಿನಂದಿಸಿ ಮಾತನಾಡಿದ್ದರು. ಕೆಂಗಲ್ ಹನುಂತಯ್ಯನವರು ಅಧ್ಯಕ್ಷತೆ ವಹಿಸಿದ್ದರು. ಅಂದು ಅನಕೃ ಮಾಡಿದ ಭಾಷಣವನ್ನು ಬೆಂಗಳೂರಿನ ಯಾರೂ ಮರೆಯಲು ಸಾಧ್ಯವಿಲ್ಲ. ರಾಜು ತುಂಬ ಪ್ರಭಾವಿತರಾಗಿದ್ದರು. ಅನಕೃ ಅವರಿಂದ ಅಂದೇ ಕನ್ನಡ ದೀಕ್ಷೆ ಪಡೆದು, ತಮ್ಮನ್ನು ಸಂಪೂರ್ಣವಾಗಿ ಕನ್ನಡ ಚಳುವಳಿಗೆ ಅರ್ಪಿಸಿಕೊಂಡರು. ಚಳುವಳಿಗಾಗಿಯೇ ಮೀಸಲಾದ ಕನ್ನಡ ಯುವಜನ ಪತ್ರಿಕೆ ಅಂದೇ ಜನ್ಮತಾಳಿತು. ಎಂ. ರಾಮಮೂರ್ತಿಯವರು ಅವರ ಸಂಪಾದಕತ್ವ ವಹಿಸಿದರು.

ಕನ್ನಡ ಕಲಾವಿದರನ್ನು ತಾತ್ಸಾರದಿಂದ ಕಾಣುತ್ತಿದ್ದ ಬೆಂಗಳೂರಿನ ಎಲ್ಲಾ ಸಾಂಸ್ಕೃತಿಕ ಸಂಸ್ಥೆಗಳಿಗೆ ಚುರುಕು ಮುಟ್ಟಿಸಲು, ೧೯೬೨ ಮೇ ತಿಂಗಳಲ್ಲಿ ಚಾಮರಾಜಪೇಟೆಯ ಕೋಟೆ ಪ್ರೌಢಶಾಲೆಯ ಆವರಣದಲ್ಲಿ ರಾಮಸೇವಾ ಮಂಡಲಿ ಏರ್ಪಡಿಸುತ್ತಿದ್ದ ರಾಮೋತ್ಸವ ಕಾರ್ಯಕ್ರಮದಂದು ಉಗ್ರ ಪ್ರತಿಭಟನೆ ನಡೆಸಲು ನಾವು ನಿರ್ಧರಿಸಿದೆವು. ಕೊನೆಯ ದಿನ ದೇಶದ ಶ್ರೇಷ್ಠ ಗಾಯಕಿ ಎಂ.ಎಸ್. ಸುಬ್ಬಲಕ್ಷ್ಮಿ ಅವರ ಸಂಗೀತ ಕಛೇರಿ. ಚಿಕ್ಕ ಲಾಲ್‌ಬಾಗಿನಲ್ಲಿ ಬೆಂಗಳೂರಿನ ಎಲ್ಲಾ ಕನ್ನಡ ಸಂಘ-ಸಂಸ್ಥೆಗಳು ಸಂಜೆ ಸೇರಿದೆವು. ರಾಜು ಮತ್ತು ಮೃತ್ಯುಂಜಯ ಭಿತ್ತಿ ಚಿತ್ರ ಹಿಡಿದು ಮುಂದೆ ನಿಂತಿದ್ದರು. ಅನಕೃ ಅವರ ಜುಬ್ಬಾಕ್ಕೆ ಕಪ್ಪು ರಿಬ್ಬನ್ ಅಂಟಿಸುವ ಸಾಹಸ ಮಾಡಿದ್ದೆ. ರಾಯರು ತುಂಬ ವಿಷಾದದಿಂದ ನನ್ನನ್ನು ನೋಡಿದ್ದರು. ನಮಗೆಲ್ಲ ತುಂಬ ಹೆದರಿಕೆಯಾಗಿತ್ತು. ಅ.ನ.ಕೃಷ್ಣರಾಯರ ನೇತೃತ್ವದಲ್ಲಿ ಹೊರಟ ಮೆರವಣಿಗೆಯಲ್ಲಿ ಸಾವಿರಾರು ಹೋರಾಟಗಾರರಿದ್ದರು. ರಸ್ತೆಯ ಎರಡೂ ಬದಿ ನಿಂತಿದ್ದ ಜನ ಜಯಕಾರ ಹಾಕುತ್ತಿದ್ದರು. ಮೆರವಣಿಗೆ ಕೋಟೆ ಶಾಲೆ ಬಳಿ ಬಂದಾಗ ಪೊಲೀಸರು ರಕ್ಷಣೆಗಾಗಿ ನಿಂತಿದ್ದರು.

ಅತ್ಯುತ್ಸಾಹದ ಭರದಲ್ಲಿ ಸ್ವಲ್ಪ ಗಲಾಟೆಯಾಯಿತು. ಪೊಲೀಸರು ಕೆಲವರನ್ನು ಬಂಧಿಸಿದರು. ಕನ್ನಡ ನಾಡಿನಲ್ಲೇ ಕನ್ನಡ ಕಲಾವಿದರನ್ನು ತಾತ್ಸಾರದಿಂದ ಕಾಣುತ್ತಿದ್ದ ಎಲ್ಲ ಸಂಘ ಸಂಸ್ಥೆಗಳಿಗೆ ಅಂದೇ ಸಂದೇಶ ಹೋಗಿತ್ತು. ಮುಂದಿನದೆಲ್ಲ ಈಗ ಇತಿಹಾಸ.

ಮರುದಿನ ಎಲ್ಲ ಪತ್ರಿಕೆಗಳಲ್ಲಿ ಇದು ದೊಡ್ಡ ಸುದ್ದಿಯಾಯಿತು. ರಾಯರು, ಶ್ರೀ ಸದಾಶಿವಂ ಮತ್ತು ಶ್ರೀಮತಿ ಸುಬ್ಬುಲಕ್ಷ್ಮಿಯವರಿಗೆ ಇಂಗ್ಲಿಷಿನಲ್ಲಿ ಪತ್ರ ಬರೆದು ತಮಗಾಗುತ್ತಿರುವ ಅನ್ಯಾಯದ ಬಗೆಗೆ ವಿವರಿಸಿದ್ದರು. ಅದು ಪತ್ರಿಕೆಯಲ್ಲೂ ಪ್ರಕಟವಾಯಿತು. ಮೈಸೂರಿಯನ್ಸ್ ಎಂದು ಕರೆದುಕೊಳ್ಳುತ್ತಿದ್ದ ಆಷಾಢಭೂತಿಗಳು ನಮ್ಮನ್ನು ಜರಿದರು.

ಮರುದಿನ ಶಂಕರಪುರದಲ್ಲಿದ್ದ ಎಂ. ರಾಮಮೂರ್ತಿಯವರ ಮನೆಯಲ್ಲಿ ಎಲ್ಲ ಚಳುವಳಿಗಾರರು ಸಂಜೆ ಸೇರಿದೆವು. "ಪ್ರಜಾವಾಣಿ"ಯ ಪತ್ರಕರ್ತ ಮ. ಶ್ರೀಧರಮೂರ್ತಿಯವರು ಒಂದು ನೀಲನಕ್ಷೆಯನ್ನು ಸಿದ್ಧಪಡಿಸಿದ್ದರು. ಹೋರಾಟಕ್ಕಾಗಿ ಒಂದು ಮಾತೃಸಂಸ್ಥೆಯ ಅವಶ್ಯಕತೆಯನ್ನು ಅವರು ತಿಳಿಸಿ ಹೇಳಿದರು. ಕರ್ನಾಟಕ ಸಂಯುಕ್ತರಂಗ ಜನ್ಮತಾಳಿದ್ದು ಹೀಗೆ.

ಕರ್ನಾಟಕ ಸಂಯುಕ್ತರಂಗದ ಮೊದಲ ಸಭೆಯನ್ನು ಏರ್ಪಡಿಸುವ ಜವಾಬ್ದಾರಿ ನಮ್ಮ ಮೇಲೆ ಬಿತ್ತು. ಶೇಷಾದ್ರಿಪುರ ಸರ್ಕಲ್ಲಿನಲ್ಲಿ ಬೃಹತ್ ಸಭೆ. ಅಂದಾಜು ಹತ್ತು ಸಾವಿರ ಜನ. ಅನಕೃ ಮತ್ತು ವೀರಕೇಸರಿ ಸೀತಾರಾಮ ಶಾಸ್ತ್ರಿಗಳು ಗುಡುಗಿದ್ದು, ಅದರ ಪ್ರತಿಧ್ವನಿ ನಾಡಿನಾದ್ಯಂತ ಪಸರಿಸಿತ್ತು. ಹೋರಾಟಕ್ಕೆ ಬಲ ಬಂದಿತ್ತು.

ನಂತರ ಬೆಂಗಳೂರಿನ ಎಲ್ಲಾ ಬಡಾವಣೆಗಳಲ್ಲಿ ಸಂಯುಕ್ತರಂಗದ ಸಭೆಗಳು. ಅನಕೃ, ನಾಡಿಗೇರ್, ರಾಮಮೂರ್ತಿ, ಭಾರತೀಂದ್ರ ಸ್ವಾಮಿಗಳು, ಎಂ.ಎಸ್. ನಟರಾಜನ್ ತಪ್ಪದೇ ಭಾಗವಹಿಸಿ ಭಾಷಣ ಮಾಡುತ್ತಿದ್ದರು. ಕೆಲವು ಸಭೆಗಳಲ್ಲಿ ಪಿ. ಕಾಳಿಂಗರಾಯರು ಹಾಡುತ್ತಿದ್ದರು.

೧೯೬೨ರಲ್ಲಿ ಬೆಳಗಾವಿ ಗಡಿ ಸಮಸ್ಯೆ ಉಲ್ಬಣಗೊಂಡಿತ್ತು. ಝೂಲಾಚ ಪಾಯಿಜೆಗಳು (ಆಗಲಿಕ್ಕೇ ಬೇಕು) ನವೆಂಬರ್ ಒಂದನೇ ತಾರೀಖನ್ನು ಕರಾಳ ದಿನವನ್ನಾಗಿ ಆಚರಿಸುತ್ತಿದ್ದರು. ಅವರ ಅಟ್ಟಹಾಸ ಬೆಳಗಾವಿಯಲ್ಲಿ ಮೇರೆ ಮೀರಿತ್ತು. ಬೆಳಗಾವಿ ಒಂದು ಸುಂದರ ನಗರ. ಶಿಕ್ಷಣ ಮತ್ತು ವ್ಯಾಪಾರಕ್ಕೆ ಹೆಸರಾಗಿತ್ತು. ಇಲ್ಲಿ ಮರಾಠಾ ಲೈಟ್ ಇನ್‌ಫೆಂಟ್ರಿ ಸ್ಥಾಪನೆಯಾದ ನಂತರ ಮಿಲಿಟರಿ ಸೇರಲು ಕೊಂಕಣ ಪ್ರದೇಶದಿಂದ ಸಾವಿರಾರು ಜನ ಬಂದರು. ಕಾಲಕಾಲಕ್ಕೆ ಹೊಟ್ಟೆ ಹೊರೆಯಲು ಬಂದ ಮರಾಠಿಗರು ತಮ್ಮ ಪ್ರಾಬಲ್ಯವನ್ನು ಸ್ಥಾಪಿಸುತ್ತ ನಗರಸಭೆಯನ್ನು ಆಕ್ರಮಿಸಿಕೊಂಡರು. ಚುನಾವಣೆ ಸಮಯಕ್ಕೆ ಕನ್ನಡಿಗರು ಮತ ಚಲಾಯಿಸಲು ಹೋಗುತ್ತಿರಲಿಲ್ಲ ವಾದ್ದರಿಂದ ಶಾಸನ ಸಭೆಗೂ ಆರಿಸಿ ಬಂದರು. ಅವರ ಗೂಂಡಾಗಿರಿ ದಿನೇ ದಿನೇ ಹೆಚ್ಚುತ್ತಲೇ ಹೋಯಿತು. ನಮ್ಮ ಹೇಡಿ ಸರ್ಕಾರದ ನೀತಿಯಿಂದಾಗಿ ಬೆಳಗಾವಿ ಮಹಾರಾಷ್ಟ್ರಕ್ಕೆ ಸೇರಬೇಕೆಂಬ ಅವರ ಕೂಗು ದೆಹಲಿ ಮುಟ್ಟಿತ್ತು. ಕೇಂದ್ರ ಸರ್ಕಾರದಲ್ಲಿ ಕನ್ನಡಿಗರ ಮಾತಿಗೆ ಮನ್ನಣೆ ಇರಲಿಲ್ಲ. ಯಶವಂತರಾವ್ ಚವ್ಹಾಣ್ ರಕ್ಷಣಾ ಮಂತ್ರಿಗಳು. ಹಿಂದಿಯ ಪ್ರಸಿದ್ಧ ಕವಿ ಮೈಥಿಲಿಶರಣ ಗುಪ್ತರು ತಮಗೆ ಏನೂ ಗೊತ್ತಿಲ್ಲದ ಬೆಳಗಾವಿ ಬಗ್ಗೆ, ರಾಜ್ಯಸಭೆಯಲ್ಲಿ

ಮಾತನಾಡಿ ಆ ನಗರ ಮಹಾರಾಷ್ಟ್ರಕ್ಕೆ ಸೇರ್ಪಡೆಯಾಗಬೇಕೆಂದು ವಾದಿಸಿದಾಗ ನಾವು ಹೌಹಾರಿ ಹೋದೆವು. ಆಗ ಬೆಳಗಾವಿ ಅಗ್ನಿಕುಂಡದಲ್ಲಿ ಬೇಯುತ್ತಿರುವಂತೆ ನಮಗೆ ತೋರಿತು.

ಗಡಿ ಸಮಸ್ಯೆಯ ಬಗೆಗೆ ಕ್ಷಕಿರಣ ಬೀರಲು ಕನ್ನಡಿಗರನ್ನು ಬಡಿದೆಬ್ಬಿಸಲು ಪುಸ್ತಕ ಒಂದನ್ನು ಪ್ರಕಟಿಸಲು ಸಿದ್ಧರಾದೆವು. ಅನಕೃ ಅವರ "ಬಳ್ಳಾರಿ ಸಮಸ್ಯೆ" ಪುಸ್ತಕವೇ ನಮಗೆ ಪ್ರೇರಣೆ. ಪತ್ರಕರ್ತ, ಕನ್ನಡದ ಪ್ರಸಿದ್ಧ ಕಥೆಗಾರ ಬೆಳಗಾವಿಯವರೇ ಆದ ವೆಂಕಟರಾಜ ಪಾನಸೆ ನಮಗಾಗಿ ಸಿದ್ಧಪಡಿಸಿಕೊಟ್ಟ ಪುಸ್ತಕ "ಬೆಳಗಾವಿ : ಕನ್ನಡಿಗರ ಸತ್ವ ಪರೀಕ್ಷೆ". ಗುಬ್ಬಿ ರಂಗಮಂದಿರದಲ್ಲಿ ಸೆಪ್ಟಂಬರ್ ತಿಂಗಳಲ್ಲಿ ೨೩ರಂದು ಪುಸ್ತಕ ಬಿಡುಗಡೆಯಾಯಿತು. ಅನಕೃ ಪುಸ್ತಕ ಬಿಡುಗಡೆ ಮಾಡುತ್ತಾ ಬೆಳಗಾವಿ ಗಡಿಸಮಸ್ಯೆಯ ಬಗೆಗೆ ಒಂದು ಗಂಟೆಕಾಲ ಅಸ್ಖಲಿತವಾಗಿ ಮಾತನಾಡಿದರು. ಎಲ್ಲರೂ ಪುಸ್ತಕವನ್ನು ಕೊಂಡು ಓದಬೇಕೆಂದು ಹೇಳಿದ್ದರಿಂದ ಅಂದು ೩೦೦ ಪುಸ್ತಕಗಳು ಮಾರಾಟವಾದವು. ಪುಸ್ತಕ ಪ್ರಕಟಣೆಗೆ ರಾಜು ನನಗೆ ಆರ್ಥಿಕ ನೆರವು ನೀಡಿದ್ದರು. ಆಗ ಅವರು ಇನ್ನೂ ವಿದ್ಯಾರ್ಥಿಯಾಗಿದ್ದರು. ಮೈಕೇಲ್ ಲೋಬೋ ಎನ್ನುವ ಸಂಭಾವಿತ ಸಹಪಾಠಿ ಮಿತ್ರರೊಬ್ಬರು ಅವರೊಂದಿಗೆ ವ್ಯಾಸಂಗ ಮಾಡುತ್ತಿದ್ದರು. ರಾಜು ಮಲ್ಲೇಶ್ವರದಿಂದ ಆನಂದರಾವ್ ಸರ್ಕಲ್ಲಿನಲ್ಲಿರುವ ಪೋಲೀಸ್ ಕ್ವಾರ್ಟರ್ಸ್‌ಗೆ ಮನೆ ಬದಲಾಯಿಸಿದರು. ಅವರ ತಂದೆ ಆಗ ಸಿ.ಬಿ.ಐ. ಪೋಲೀಸ್ ಇನ್ಸ್‌ಪೆಕ್ಟರ್ ಆಗಿದ್ದರು.

ನಾನು ಮನಃಶಾಸ್ತ್ರ ಓದಲು ಆಚಾರ್ಯ ಪಾಠಶಾಲೆಗೆ ಸೇರಿದೆ. ರಾಜು ಸೆಂಟ್ ಜೋಸೆಫ್ಸ್ ಕಾಲೇಜಿನಲ್ಲಿ ವ್ಯಾಸಂಗ ಮುಂದುವರಿಸಿದರು. ಚೀನಾ ಆಕ್ರಮಣದ ನಂತರ ಅನಕೃ ಚಳುವಳಿಯನ್ನು ಸ್ಥಗಿತಗೊಳಿಸಿದರು. ಕನ್ನಡ ಯುವಜನ ಪತ್ರಿಕೆ ಕುಂಟುತ್ತಾ ಸಾಗಿತ್ತು. ಯುವಕರನ್ನು ಬಡಿದೆಬ್ಬಿಸಲು ಒಂದು ಪತ್ರಿಕೆಯ ಅವಶ್ಯಕತೆಯನ್ನು ರಾಜು ಮನಗಂಡರು. ಆದರೆ ಪತ್ರಿಕೆ ಪ್ರಕಟಿಸಲು ಹಣಬೇಕು. ಬಿ.ಎಸ್‌ಸಿ. ವ್ಯಾಸಂಗದ ಅನಂತರ ರಾಜು ಕರ್ನಾಟಕ ಸರ್ಕಾರದ ಖನಿಜಾಭಿವೃದ್ಧಿ ಮಂಡಳಿಗೆ ಕೆಲಸಕ್ಕೆ ಸೇರಿದರು. ಅವರಲ್ಲಿದ್ದ ಬಂಡವಾಳ ಅಪಾರ ಕನ್ನಡ ಶ್ರದ್ಧೆ ಮಾತ್ರ. ಮು. ಷಣ್ಮುಗಂ ಸಹಕಾರದಿಂದ ರಾಜು ಸಂಪಾದಕತ್ವದಲ್ಲಿ "ವಿಮೋಚನೆ" ಬೆಳಕು ಕಂಡಿತು. ಪತ್ರಿಕೆ ಎಲ್ಲರ ಮೆಚ್ಚುಗೆಗೆ ಪಾತ್ರವಾಯಿತು. ಪತ್ರಿಕೆ ಮುದ್ರಣವಾಗುತ್ತಿದ್ದುದು ಬಳೇಪೇಟೆ ಉಡುಪಿ ಕೃಷ್ಣಭವನದ ಪಕ್ಕದಲ್ಲಿದ್ದ ಧರಣೇಂದ್ರಯ್ಯನವರ ಪ್ರೆಸ್ಸಿನಲ್ಲಿ. ಅಲ್ಲಿ ಕನ್ನಡದ ಘಟಾನುಘಟಿಗಳೆಲ್ಲ ಪ್ರತಿದಿನ ಸೇರುತ್ತಿದ್ದರು. ಪ್ರಥಮ ಸಂಚಿಕೆಯಲ್ಲೇ ರಾಜು ಅನಕೃ ಅವರನ್ನೇ ಸಂದರ್ಶಿಸಿದ್ದರು. ರಾಜುಗೆ ದೊಡ್ಡವರ ಸಂಪರ್ಕ ಬಂತು. ಆದರೆ ಆರ್ಥಿಕ ಬೆಂಬಲ ಅಷ್ಟಾಗಿ ಸಿಕ್ಕದೆ, ರಾಜು ಪತ್ರಿಕೆಯಿಂದ ವಿಮೋಚನೆ ಪಡೆದರು.

ರಾಜು ಬಿ.ಎಸ್‌ಸಿ. ವ್ಯಾಸಂಗದ ಅನಂತರ ಖನಿಜಾಭಿವೃದ್ಧಿ ಮಂಡಳಿಯಲ್ಲಿ ಕೆಲಸಕ್ಕೆ ಸೇರಿದ ಮೇಲೆ ಕುಂದಾಪುರಕ್ಕೆ ವರ್ಗ ಮಾಡಿದರು. ರಾಜುಗೆ ಆಗ ಜ್ಞಾನೋದಯವಾಗಿತ್ತು. ಅವರು ಕನ್ನಡಕ್ಕಾಗಿ ತಮ್ಮನ್ನು ಅರ್ಪಿಸಿಕೊಂಡಾಗಿತ್ತು. ವಿಜ್ಞಾನಕ್ಕೆ ವಿದಾಯ ಹೇಳಿ ಮತ್ತೆ ಆರ್ಟ್ಸ್ ಓದಲು ಸರ್ಕಾರಿ ಕಲೆ ಮತ್ತು ವಿಜ್ಞಾನ ಕಾಲೇಜಿಗೆ ಸೇರಿದರು. (೧೯೬೩) ಒಂದು ಸಂಜೆ ಸೌಥ್ ಪರೇಡ್‌ನಲ್ಲಿ ಸಿಕ್ಕಾಗ ಈ ವಿಷಯವನ್ನು ನನಗೆ ತಿಳಿಸಿದಾಗ, ನನಗೆ ಯಾವ ರೀತಿಯ ಪ್ರತಿಕ್ರಿಯೆ ವ್ಯಕ್ತಪಡಿಸಬೇಕೆಂಬುದೇ ತಿಳಿಯಲಿಲ್ಲ. ಅವರು ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳಲು ಅತ್ಯಂತ ಸರಿಯಾದ ನಿರ್ಧಾರವನ್ನೇ ತೆಗೆದುಕೊಂಡಿದ್ದರು.

ಕಾಲೇಜಿನಲ್ಲಿ ರಾಜುಗೆ ಪಾಠ ಮಾಡಿದವರು ಆಹಾರಕ್ಕಿಂತ ಔಷಧಿಯನ್ನೇ ಹೆಚ್ಚು ಸೇವಿಸುತ್ತಿದ್ದ ಪ್ರೊ. ಎಂ.ವಿ. ಸೀತಾರಾಮಯ್ಯನವರು ಮತ್ತು ಇತ್ತೀಚೆಗೆ ಎಪ್ಪತ್ತು ತುಂಬಿದ ಸಂದರ್ಭದಲ್ಲಿ "ಸಕಲ ಕಲಾ ವಲ್ಲಭನ್" ಎಂದು ರಾಜುನಿಂದ ಪುರಸ್ಕೃತರಾದ ಪ್ರೊ. ಎಂ.ಎಚ್. ಕೃಷ್ಣಯ್ಯನವರು. ಚಿತ್ರಕಲೆ, ಶಿಲ್ಪಕಲೆ, ಸಂಗೀತಕಲೆ, ಬಗೆಗೆ ವಿಶೇಷ ಅಧ್ಯಯನ ಮಾಡಿದ್ದ ಪ್ರೊ. ಕೃಷ್ಣಯ್ಯನವರ ಗಾಢ ಪ್ರಭಾವ ರಾಜು ಮೇಲಾಯಿತೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

೧೯೬೦ರಲ್ಲಿ ನಾನು ಶಿಕ್ಷಣ ಮುಗಿಸಿ ಗಾಂಧಿನಗರದಲ್ಲಿ "ಮನು ಪ್ರಿಂಟಿಂಗ್" ಮುದ್ರಣಾಲಯವನ್ನು ಸ್ಥಾಪಿಸಿ ಕನ್ನಡ ಪುಸ್ತಕಗಳನ್ನು ಮುದ್ರಿಸುತ್ತಿದ್ದೆ. ಚಳುವಳಿಯ ಕಾವು ಕಡಿಮೆಯಾಗಿತ್ತು. ನಾಯಕರಲ್ಲಿ ಸಾಕಷ್ಟು ಒಡಕು ಕಾಣಿಸಿತ್ತು. ಕನ್ನಡ ಚಳುವಳಿ ಒಂದು ಹಣ ವಸೂಲಿ ಮಾಡುವ ದಂಧೆಯಾಯಿತು. ಹಣ ಮಾಡಲಿಕ್ಕೆಂದೇ ಬಹಳಷ್ಟು ಜನ ಚಳುವಳಿಯಲ್ಲಿ ಭಾಗವಹಿಸುವ ನಾಟಕವಾಡಿದ್ದರು. ಕೆಲವರು ಕನ್ನಡದ ಹೆಸರಿನಲ್ಲಿ ಚುನಾವಣೆಗೂ ನಿಂತರು. ಅ.ನ.ಕೃ. ಅಸಹಾಯಕರಾಗಿದ್ದರು. ಕೆಲವರು ತಾವೇ ನಾಯಕರೆಂದು ಘೋಷಿಸಿಕೊಂಡರು. ಜಾತ್ಯಾಂಧ ಪತ್ರಕರ್ತರ ಬೆಂಬಲ ಅವರಿಗಿತ್ತು. ನಮ್ಮ ಬದುಕಿನ ದಾರಿಯನ್ನು ನಾವೇ ಕಂಡುಕೊಳ್ಳಬೇಕಾಗಿತ್ತು. ಒಂದು ದಿನ ಖನಿಜಾಭಿವೃದ್ಧಿ ಮಂಡಲಿಯಲ್ಲಿ ಕೆಲಸಕ್ಕಿದ್ದ ಮಿತ್ರ ಗಡ್ ಅವರೊಂದಿಗೆ ರಾಜು ನಮ್ಮ ಪ್ರೆಸ್ಸಿಗೆ ಬಂದರು. ಕೆಲವೇ ದಿನಗಳಲ್ಲಿ ಕೆಲಸದಿಂದ ವಿಶ್ರಾಂತಿ ಪಡೆಯಲಿದ್ದ ಪ್ರೊ. ಎಂ.ವಿ. ಸೀತಾರಾಮಯ್ಯನವರನ್ನು ವಿದ್ಯಾರ್ಥಿಗಳೆಲ್ಲ ಗೌರವಿಸುವ ಕಾರ್ಯಕ್ರಮವನ್ನು ಅವರು ಹಮ್ಮಿಕೊಂಡಿದ್ದರು. ಪ್ರತಿಯೊಬ್ಬ ವಿದ್ಯಾರ್ಥಿ ಪ್ರೊ. ಎಂ.ವಿ. ಸೀತಾರಾಮಯ್ಯನವರನ್ನು ಬದುಕಿನುದ್ದಕ್ಕೂ ನೆನಪಿನಲ್ಲಿಟ್ಟುಕೊಳ್ಳುವಂತಹ ಒಂದು ವಿಶಿಷ್ಟ ಆಮಂತ್ರಣ ಪತ್ರಿಕೆಯನ್ನು ಮುದ್ರಿಸುವ ಬಗ್ಗೆ ಚರ್ಚಿಸಿದ ನಂತರ, ರಾಜುಗೆ ಪ್ರೊ. ಎಂ.ವಿ. ಸೀತಾರಾಮಯ್ಯನವರ ಕೈಬರಹದಲ್ಲಿ ಇಂಡಿಯನ್ ಇಂಕಿನಲ್ಲಿ ಅವರ ಕವನವೊಂದನ್ನು ಬರೆದು ತರಲು ಹೇಳಿದೆ. ಅದನ್ನು ಬ್ಲಾಕ್ ಮಾಡಿಸಿ ದ್ವಿವರ್ಣದಲ್ಲಿ ಸುಂದರವಾದ ಆಮಂತ್ರಣ ಪತ್ರಿಕೆಯನ್ನು ಅಚ್ಚು ಹಾಕಿದೆವು. ಎಂ.ವಿ.ಸೀ. ಅವರ ಭಾವಚಿತ್ರವೂ ಇತ್ತು. ರಾಜು ಅವರನ್ನು ಎಲ್ಲರೂ ಕೊಂಡಾಡುವರೆ. ೧೯೬೦ರಲ್ಲಿ ರಾಜು ಬಿ.ಎ. ಪಾಸಾಗಿ ಎಂ.ಎ. ವ್ಯಾಸಂಗಕ್ಕಾಗಿ ಸೆಂಟ್ರಲ್ ಕಾಲೇಜ್ ಸೇರಿದರು. ಆಗ ಬೆಂಗಳೂರು ವಿಶ್ವವಿದ್ಯಾಲಯ ಅಸ್ತಿತ್ವಕ್ಕೆ ಬಂದಿತ್ತು. ಡಾ. ವಿ.ಕೃ. ಗೋಕಾಕ್‌ರು ಕುಲಪತಿಗಳಾಗಿ ಬಂದರು. ಪ್ರೊ. ರಂ.ಶ್ರೀ ಮುಗಳಿಯವರನ್ನು ಕರೆಸಿಕೊಂಡರು. ಡಾ. ಜಿ.ಎಸ್.ಶಿವರುದ್ರಪ್ಪನವರು ರಾಜುಗೆ ಗುರುಗಳಾಗಿ ದೊರಕಿದ್ದು ಎಷ್ಟು ಸಂತೋಷವನ್ನುಂಟು ಮಾಡಿತೋ ಅಷ್ಟೇ ಸಂತೋಷ ಆಗಿದ್ದು ಎಚ್.ಎಸ್. ರಾಘವೇಂದ್ರರಾಯರು ಅವರಿಗೆ ಗೆಳೆಯರಾಗಿ ಬಂದದ್ದು. ಬಿ.ಎ.ದಲ್ಲಿ ರಾಜುಗೆ ಆಪ್ತರಾಗಿದ್ದವರು ಸಿ. ವೀರಣ್ಣ, ನಗರಿಬಾಬಯ್ಯ ಮತ್ತು ಬಿ.ಆರ್. ಲಕ್ಷ್ಮಣರಾವ್. ಮೂಲತಃ ರಾಘಣ್ಣ ವಿಜ್ಞಾನದ ವಿದ್ಯಾರ್ಥಿ. ನ್ಯಾಷನಲ್ ಕಾಲೇಜಿನಲ್ಲಿ ಬಿ.ಎಸ್.ಸಿ. ಮುಗಿಸಿ ಕನ್ನಡ ಎಂ.ಎ. ಓದಲು ಸೆಂಟ್ರಲ್ ಕಾಲೇಜು ಸೇರಿದ್ದರು. ಅವರ ಸ್ನೇಹ ಸಹವಾಸ, ರಾಜು ತಮ್ಮ ಬದುಕಿನಲ್ಲಿ ದೊಡ್ಡ ತಿರುವು ಪಡೆಯಲು ಸಹಕಾರಿಯಾಯಿತೆಂದೇ ನಾನು ಭಾವಿಸುತ್ತೇನೆ.

ಒಂದು ವಿಷಯ ಪ್ರಸ್ತಾಪಿಸಲು ಮರೆತಿದ್ದೆ. ಅದು ರಾಜುನ ನಾಟಕದ ಹುಚ್ಚಿನ ಬಗ್ಗೆ.

ಕಾಲೇಜು ವಿದ್ಯಾರ್ಥಿಗಳಲ್ಲಿ ರಂಗಭೂಮಿಯ ಬಗೆಗೆ ಆಸಕ್ತಿ ಮೂಡಿಸಲು ನಾಟ್ಯಸಂಘ ನಿರ್ಧರಿಸಿತು. ಆಗ ಶ್ರೀರಂಗರು ನಾಟ್ಯ ಸಂಘದ ಸೂತ್ರಧಾರರು. ಕಾಲೇಜು ವಿದ್ಯಾರ್ಥಿಗಳಿಗಾಗಿಯೇ ನಾಟಕ ಸ್ಪರ್ಧೆಗಳನ್ನು ಏರ್ಪಡಿಸುವ ಸದುದ್ದೇಶದಿಂದ ಜುಬ್ಲಾಳ ಶೀಲ್ಡ್ ಸ್ಥಾಪಿಸಿದ್ದರು. ಒಂದಕ್ಕಿಂತ ಒಂದು ಅದ್ಭುತ ಪ್ರಯೋಗಗಳು. ಬೆಂಗಳೂರಿನಲ್ಲಿ Theatre Movement ಆಗಷ್ಟೇ ಚುರುಕುಗೊಂಡಿತ್ತು. ಅತ್ಯುತ್ತಮ ನಾಟಕ ವಿಮರ್ಶೆಗೆ "ಪ್ರಜಾವಾಣಿ" ಬಹುಮಾನ ನೀಡಲು ಮುಂದೆ ಬಂತು. ಆ ವರ್ಷ ಮೊದಲ ಬಹುಮಾನ ರಾಜುಗೇ ಬಂತು. ಅವರ ವಿಮರ್ಶೆ "ಪ್ರಜಾವಾಣಿ"ಯಲ್ಲಿ ಪ್ರಕಟವಾಯಿತು. ರಾಜು ರಂಗಾಸಕ್ತರ ಗಮನ ಸೆಳೆದರು. ಪ್ರೊ. ಕ.ವೆಂ. ರಾಜಗೋಪಾಲರು, ರಾಮಮೂರ್ತಿ, ನಾಗೇಶ್. ಆನಂದ್ ಮುಂತಾದವರು ರಾಜುಗೆ ನಿಕಟವಾದರು.

೧೯೬೮ರಲ್ಲಿ ಬಸವಣ್ಣನವರ ೮೦೦ನೇ ಜನ್ಮ ದಿನಾಚರಣೆಯ ಅಂಗವಾಗಿ ನಾಡಿನಾದ್ಯಂತ ಕಾರ್ಯಕ್ರಮಗಳು. ಪ್ರೊ. ದೇ. ಜವರೇಗೌಡರು ಅ.ನ.ಕೃ. ಅವರನ್ನು ಉಪನ್ಯಾಸ ನೀಡಲು ವಿಶ್ವವಿದ್ಯಾಲಯಕ್ಕೆ ಆಮಂತ್ರಿಸಿದರು. 'ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ', 'ಬಸವಣ್ಣನವರ ಅಮೃತವಾಣಿ' ಗ್ರಂಥಗಳನ್ನು ಅ.ನ.ಕೃ. ಪ್ರಕಟಿಸಿದ್ದರು. ಬಸವ ಜಯಂತಿಯ ಅಂಗವಾಗಿ ಉಪನ್ಯಾಸ ನೀಡಲು ಅವರು ಕರ್ನಾಟಕವನ್ನೆಲ್ಲಾ ಸುತ್ತುತ್ತಿದ್ದರು. ಅ.ನ.ಕೃ. ಅವರ ಭಾಷಣ ಬೆಂಗಳೂರಿನಲ್ಲಿ ಎಲ್ಲೇ ಇರಲಿ ನಾವಿಬ್ಬರೂ ಹಾಜರ್. ಗೆಳೆಯ ಮೃತ್ಯುಂಜಯ ಆಗ ಪ್ರತಿಷ್ಠಿತ ತಾತಾ ವಿಜ್ಞಾನ ಸಂಸ್ಥೆಯಲ್ಲಿ ಕೆಲಸಕ್ಕೆ ಸೇರಿದ್ದರು. ಅ.ನ.ಕೃ. ಅವರ ಉಪನ್ಯಾಸ ಕೇಳಲು ರಾಜು ಅವರನ್ನು ಮೈಸೂರಿಗೆ ಕರೆದುಕೊಂಡು ಹೋಗಲು ನಿರ್ಧರಿಸಿದೆವು. ಪರೀಕ್ಷೆ ಹತ್ತಿರವಿದ್ದುದರಿಂದ ಮೈಸೂರಿಗೆ ಬರಲು ಹೆದರಿದರು. ಆದರೆ ರಾಯರ ಭಾಷಣ ಕೇಳಲು ಮನಸ್ಸಿತ್ತು. ಆದರೆ ಮನೆಯವರನ್ನೆಲ್ಲ ಒಪ್ಪಿಸುವ ಬಗೆ ಹೇಗೆ? ಮೃತ್ಯುಂಜಯ ನನ್ನನ್ನು ಹುರಿದುಂಬಿಸಿದರು. ಮನೆಯವರೆಲ್ಲ ತಪ್ಪು ತಿಳಿದುಕೊಂಡರೆ ಏನು ಗತಿ? ಎಂದು ರಾಜು ಅಧೀರರಾದರು. ಸಾಂದರ್ಭಿಕ ಒತ್ತಡಗಳಿಂದ ಇಂಥ ಸೂಕ್ಷ್ಮ ಪ್ರಸಂಗಗಳಲ್ಲಿ ಸಲಹೆ ನೀಡಲು ನಾನು ಸ್ವಲ್ಪ ಚಾಣಾಕ್ಷನೆಂಬುದು ಗೆಳೆಯರಿಗೆಲ್ಲ ಗೊತ್ತಿದ್ದದ್ದೇ. ಆದರೆ ಈ ರೀತಿ ಸಲಹೆ ನೀಡುವ ನನ್ನನ್ನು ಆಗದವರು ಸುಳ್ಳು ಹೇಳುತ್ತಾನೆಂದು ಅಪಪ್ರಚಾರ ಮಾಡುತ್ತಾರೆ. (ಅವರಿಗೆ ಧಿಕ್ಕಾರವಿರಲಿ) ತುಂಬ ಧೈರ್ಯವಹಿಸಿ ರಾಜು ಅವರ ತಾಯಿಯವರ ಮುಂದೆ ಪ್ರಸ್ತಾಪಿಸಿದೆ. "ರಾಜುನ ಆಪ್ತ ಸ್ನೇಹಿತನ ಮದುವೆ ನಾಳೆ ಮೈಸೂರಿನಲ್ಲಿ. ರಾಜು ಮದುವೆಗೆ ಬರದಿದ್ದರೆ ಹೆಂಡತಿಗೆ ತಾಳಿ ಕಟ್ಟುವುದಿಲ್ಲವೆಂದು ಹಟ ಮಾಡುತ್ತಿದ್ದಾನೆ. ರಾಜುಗೆ ಪರೀಕ್ಷೆ ಎಂದು ಎಷ್ಟು ತಿಳಿಹೇಳಿದರೂ ಒಪ್ಪುತ್ತಿಲ್ಲ. ಕೇವಲ ಒಂದು ದಿನದ ಮಟ್ಟಿಗೆ ಕಳಿಸಿಕೊಡಿರಿ. ಇಂದು ಹೋಗಿ ನಾಳೆ ಬರುತ್ತೇವೆ" ಎಂದು ಅಂಗಲಾಚಿ ಕೇಳಿಕೊಂಡೆ. ನನ್ನ ಜೊತೆಗೆ ಮೃತ್ಯುಂಜಯ ಇದ್ದುದರಿಂದ ಅವರು ಒಪ್ಪಿರಬೇಕು. ನಾವು ಮೂವರು ಹೊರಟು ನಿಂತಾಗ, ಅವರ ತಾಯಿ ಕರೆದರು. ಜನ್ಮದಲ್ಲಿ ಸುಳ್ಳು ಹೇಳಿ ಗೊತ್ತಿಲ್ಲದ ರಾಜು ನಡುಗುತ್ತಿದ್ದರು. "ಮದುವೆಗೆ ಹೋಗುತ್ತಿದ್ದೀಯಾ. ಕನಿಷ್ಠ ಒಂದು ಪಂಚೆ ಮತ್ತು ಟವಲ್ ತೆಗೆದುಕೊಂಡು ಹೋಗು" ಎಂದು ಒಂದು ಸಣ್ಣ ಚೀಲ ಕೊಟ್ಟರು. ನನ್ನ ಪ್ರಚಂಡ ಬುದ್ಧಿಗೆ ರಾಜು ಮೆಚ್ಚಿದರಾದರೂ ಅವರಿಗೆ ಅಳುಕು ಇದ್ದೇ ಇತ್ತು.

ರಾತ್ರಿ ಟ್ರೇನಿನಲ್ಲಿ ಪ್ರಯಾಣ ಮಾಡಿ ಬೆಳಿಗ್ಗೆ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಲು ಮಾನಸ ಗಂಗೋತ್ರಿಗೆ ಹೋದೆವು. ತುಂಬ ಭರವಸೆ ಇಟ್ಟುಕೊಂಡು ಹೋಗಿದ್ದ ನಮಗೆ ನಿರಾಶೆಯಾಯಿತು. ರಾಯರು ಅಂದು ಮೂಡ್‌ನಲ್ಲಿರಲಿಲ್ಲ; ಮಂಕಾಗಿದ್ದರು. ಕೃಷ್ಣ ಆಲನಹಳ್ಳಿ ಮತ್ತಿತರ ವಿದ್ಯಾರ್ಥಿ ಮಿತ್ರರು ರಾಜು ಅವರನ್ನು ಗೌರವದಿಂದ ಮಾತನಾಡಿಸಿದರು. ರಾಜು ಜನಪ್ರೀತಿಯನ್ನು ಅಂದು ಗಮನಿಸಿದೆ. ಗಂಗೋತ್ರಿ, ಸರಸ್ವತಿಪುರ ಸುತ್ತಾಡಿ ಮತ್ತೆ ಟ್ರೇನಿನಲ್ಲಿ ಪ್ರಯಾಣ ಮಾಡಿ, ಮರುದಿನ ಬೆಂಗಳೂರು ಸೇರಿದೆವು. ಮದುವೆ ಹೇಗಿತ್ತು ಎಂದು ಮನೆಯವರು ಕೇಳಿದರೆ ಏನು ಹೇಳುವುದು ಎಂದು ರಾಜು ಚಿಂತಾಕ್ರಾಂತರಾಗಿದ್ದರು. ಸುಳ್ಳು ಹೇಳಿ ಹೋದ ಬಗೆಗೆ ಅವರಿಗೆ ಅಪರಾಧ ಪ್ರಜ್ಞೆ ಕಾಡುತ್ತಿತ್ತು.

ಎಂ.ಎ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಪ್ರೊ. ಜಿ.ಎಸ್. ಶಿವರುದ್ರಪ್ಪನವರ ಪ್ರೋತ್ಸಾಹ ಇದ್ದುದರಿಂದ ಆಗತಾನೇ ಪ್ರಾರಂಭವಾಗಿದ್ದ ಕ್ರೈಸ್ಟ್ ಕಾಲೇಜಿನಲ್ಲಿ ರಾಜು ಅಧ್ಯಾಪಕರಾಗಿ ಸೇರಿದರು, ಮೂರು ದಶಕಗಳ ಕಾಲ ಸೇವೆ ಸಲ್ಲಿಸಿ ಆ ಸಂಸ್ಥೆಗೆ ಕೀರ್ತಿ ತಂದರು. ಅವರ ನೆಚ್ಚಿನ ವಿದ್ಯಾರ್ಥಿ ಶ್ರೀ ಸಿ.ಕೆ. ಲಕ್ಷ್ಮಣಗೌಡ ಅಕಾಲ ಮೃತ್ಯುವಿಗೀಡಾದ. ರಾಜು ಅವರ ಮನೆಯವರನ್ನು ಒಡಂಬಡಿಸಿ ಅವನ ಸ್ಮಾರಕವಾಗಿ ಪ್ರಕಟಣೆ ಕಾರ್ಯವನ್ನು ಪ್ರಾರಂಭಿಸಿದರು. ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಗಳು, ಟಿ.ಎಸ್. ವೆಂಕಣ್ಣಯ್ಯ, ಪ್ರೊ. ಜಿ.ಪಿ. ರಾಜರತ್ನಂ ಅವರ ಕೈಂಕರ್ಯವನ್ನು ಮುಂದುವರಿಸಿಕೊಂಡು ಬಂದರು. ಅ.ನ.ಕೃ ಮತ್ತು ದ.ರಾ. ಬೇಂದ್ರೆಯವರ ಹೆಸರಿನಲ್ಲಿ ಸಾಹಿತ್ಯ ಸ್ಪರ್ಧೆಗಳನ್ನು ಕಾಲೇಜು ವಿದ್ಯಾರ್ಥಿಗಳಿಗಾಗಿ ಏರ್ಪಡಿಸಿ ಅಖಿಲ ಕರ್ನಾಟಕ ಮಟ್ಟದ ಕವಿಗಳನ್ನು ಬರಹಗಾರರನ್ನು, ವಿಮರ್ಶಕರನ್ನು ಬೆಳಕಿಗೆ ತಂದರು. ಆ ಬಗ್ಗೆ ಬಹಳಷ್ಟು ಜನ ಬರೆಯುವವರಿದ್ದಾರಾದ್ದರಿಂದ ನನ್ನ ಲೇಖನಕ್ಕೆ ಒಂದು ಮಿತಿ ಹಾಕಿಕೊಳ್ಳುತ್ತೇನೆ.

ನಮ್ಮಿಬ್ಬರಲ್ಲಿ ಕೆಲವು ವಿಷಯಗಳಲ್ಲಿ ಸಾಮ್ಯವಿದೆ. ನಾವಿಬ್ಬರೂ ವಿಜ್ಞಾನದ ವಿದ್ಯಾರ್ಥಿಗಳು. ನಂತರ ಆರ್ಟ್ಸ್ ಸೇರಿದವರು. ಇಬ್ಬರೂ ಅ.ನ.ಕೃ. ಗರಡಿಯಲ್ಲಿ ಬೆಳೆದವರು. ಕನ್ನಡಕ್ಕೆ ಸಂಪೂರ್ಣ ಅರ್ಪಿಸಿಕೊಂಡವರು. ನವಕರ್ನಾಟಕ ಪ್ರಕಟನಾ ಸಂಸ್ಥೆಯೊಂದಿಗೆ ಬಾಂಧವ್ಯ ಇಟ್ಟುಕೊಂಡವರು. ಅವರು ಶ್ರೀಮಂತರ ಚಿತ್ರಕಲಾ ಪರಿಷತ್ತಿನಲ್ಲಿ ಪಾಠ ಮಾಡಿದರೆ, ನಾನು ಬಡವರ ಕೆನ್ ಕಲಾಶಾಲೆಯಲ್ಲಿ ಪಾಠ ಮಾಡಿದವನು. ಮೌನವಾಗಿದ್ದುಕೊಂಡೇ ರಾಜು ಬದುಕಿನಲ್ಲಿ ಬಹಳಷ್ಟು ಸಾಧಿಸಿದರು; ತುಂಬ ಎತ್ತರಕ್ಕೆ ಬೆಳೆದರು. ಬಹಳ ಮಾತನಾಡಿ ಜಗಳಗಂಟನೆಂದು ನಾನು ಖ್ಯಾತನಾಗಿಬಿಟ್ಟೆ.

ಶ್ರೀ ಎಚ್. ಶಿವಸ್ವಾಮಿ ಪ್ರಾಥಮಿಕ ಶಾಲೆಯಿಂದ ಕಾಲೇಜ್‌ವರೆಗೆ ರಾಜುನೊಂದಿಗೆ ಓದಿ ಬೆಳೆದವರು. ಅವರು ರಾಜುನೊಂದಿಗೆ opening batsman. ಮುಂದೆ ಕಾಲೇಜು ಮತ್ತು ಕನ್ನಡ ಚಳುವಳಿಯಲ್ಲಿ ರಾಜುನೊಂದಿಗೆ ಇದ್ದ ನಾನು one down batsman. ಡಾ॥ ಎಚ್.ಎಸ್. ರಾಘವೇಂದ್ರರಾಯರು two down ಆಗಿ ಆಡಲು ಬಂದವರು. ರಾಘಣ್ಣನವರ ಬಗೆಗೆ ಬರೆಯದಿದ್ದರೆ ಈ ಲೇಖನಕ್ಕೆ ಬೆಲೆ ಬರದು. ೧೯೬೭ರಲ್ಲಿ ಸೆಂಟ್ರಲ್ ಕಾಲೇಜ್ ಸೇರಿದ ರಾಘಣ್ಣ ಮತ್ತು ರಾಜು ತುಂಬಾ ಆಪ್ತರಾದರು. ಅವರ ಅಂಟಿನ ನಂಟಿನ ಸ್ನೇಹದ ಬಗ್ಗೆ ನಾಡಿಗೆ ನಾಡೇ ಬಲ್ಲದು. "ರಾಜು ನನ್ನ ಅಂತರಂಗದ ಭಾಗವಾಗಿದ್ದಾರೆ" ಎಂದು

ರಾಘಣ್ಣ ಒಂದೆಡೆ ದಾಖಲಿಸಿದ್ದಾರೆ. ನಾಟಕ ಪ್ರೇಮಿಯಾದ ರಾಜು ಅವರನ್ನು ಕಾವ್ಯ ಪ್ರೇಮಿಯನ್ನಾಗಿಸಿದವರು ರಾಘಣ್ಣ. ರಾಜು ಕನ್ನಡದಲ್ಲಿ ಪುಸ್ತಕ ಸಂಸ್ಕೃತಿಯನ್ನು ಪೋಷಿಸುವ ನಿಟ್ಟಿನಲ್ಲಿ ಅಪೂರ್ವ ಮತ್ತು ವೈವಿಧ್ಯಮಯ ಗ್ರಂಥಗಳನ್ನು ಪ್ರಕಟಿಸಿ ಇಂದು ಇಷ್ಟೊಂದು ಎತ್ತರಕ್ಕೆ ಬೆಳೆಯುವಲ್ಲಿ ರಾಘಣ್ಣನ ಪಾತ್ರ ಮಹತ್ತರವಾದುದು. ಈ ಲಾರೆಲ್ ಅಂಡ್ ಹಾರ್ಡಿ combination ಕನ್ನಡ ವಿಶ್ವವಿದ್ಯಾಲಯಕ್ಕೂ ಹೋಗಿತ್ತು. ರಾಜು ಅಲ್ಲಿ ಪ್ರಸಾರಾಂಗದ ಪ್ರಥಮ ನಿರ್ದೇಶಕರಾಗಿ ಭದ್ರ ಬುನಾದಿ ಹಾಕಿ, ಎಲ್ಲರೂ ಮೆಚ್ಚುವಂತೆ ಕೆಲಸ ಮಾಡಿದ್ದಾರೆ. ರಾಘಣ್ಣ ಮತ್ತು ಕೆ.ವಿ. ನಾರಾಯಣ ರಾಜು ಅವರನ್ನು ಓರ್ವ ವಿಮರ್ಶಕನನ್ನಾಗಿ ರೂಪಿಸುವಲ್ಲಿಯೂ ಯಶಸ್ವಿಯಾಗಿದ್ದಾರೆ.

ರಾಜು ನನ್ನನ್ನು ಎರಡು ಸಲ ನಿರಾಸೆಗೊಳಿಸಿದುದನ್ನು ನಾನು ಇಲ್ಲಿ ದಾಖಲಿಸ ಬಯಸುತ್ತೇನೆ. ರಾಜು ಮತ್ತು ರಾಘಣ್ಣ ಇಬ್ಬರೂ ನನ್ನ ಮಾತನ್ನು ಒಪ್ಪುವುದಿಲ್ಲ. ಆ ಮಾತು ಬೇರೆ. ತತ್ವ ಸಿದ್ಧಾಂತವೆಂದು ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿ ಸ್ಥಾನಕ್ಕೆ ರಾಜು ರಾಜೀನಾಮೆ ಸಲ್ಲಿಸಿದರು. ಬೆಂಗಳೂರಿನಲ್ಲಿ ಜಾಗೃತ ಸಾಹಿತ್ಯ ಸಮ್ಮೇಳನ ಏರ್ಪಡಿಸಿದ್ದು ನನಗೆ ಸರಿಬರಲಿಲ್ಲ. ಅವರ ಆತ್ಮಸಾಕ್ಷಿಯಾಗಿ ಅವರು ನಡೆದುಕೊಂಡಿರಬಹುದು. ಆದರೆ ಅವರ ಬಗೆಗೆ ಅಭಿಮಾನ ಇರುವ, ಹೆಚ್ಚು ನಿರೀಕ್ಷಿಸುತ್ತಿದ್ದ ನಮ್ಮಂಥ ಗೆಳೆಯರಿಗೆ ನಿರಾಶೆಯಾಗಿದ್ದು ಮಾತ್ರ ನಿಜ. ಮುಂದೆ ಪರಿಷತ್ತಿನ ಅಧ್ಯಕ್ಷರಾಗಿ ಸೇವೆ ಸಲ್ಲಿಸುವ ಸದವಕಾಶದಿಂದ ರಾಜು ವಂಚಿತರಾದರು. ಮುಂದೆ ಅವರು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಬಹುದಿತ್ತು. ಪುಸ್ತಕ ಪ್ರಾಧಿಕಾರದ ಗಾದಿಗೆ ರಾಜು ಅವರಷ್ಟು ಸಮರ್ಥರಾದವರು ನಾಡಿನಲ್ಲಿ ಇನ್ನೊಬ್ಬರಿಲ್ಲ.

ಡಾ॥ ಸಿ. ವೀರಣ್ಣನವರು ವಿಶ್ವವಿದ್ಯಾಲಯದ ವತಿಯಿಂದ ಕೋಲಾರದಲ್ಲಿ ಆಯೋಜಿಸಿದ್ದ ಒಂದು ಸೆಮಿನಾರ್‌ದಲ್ಲಿ ಭಾಗವಹಿಸಲು ರಾಜು ಬಂದಿದ್ದರು. "ಕೋಲಾರ ಜಿಲ್ಲೆಯ ಅಶ್ವಿನಿ ದೇವತೆಗಳು" ಎಂಬ ವಿಶೇಷ ಕಾರ್ಯಕ್ರಮದಲ್ಲಿ ರಾಜು ಅನಕೃ ಬಗ್ಗೆ ಮಾತನಾಡಿದರು. ಅನಕೃ ಬಗ್ಗೆ – "ಅನಕೃ ತಮ್ಮ ಸಾಂಸ್ಕೃತಿಕ ಕ್ರಿಯಾಶೀಲತೆಯಿಂದ ಕನ್ನಡ ನಾಡು, ನುಡಿಯನ್ನು ಕಟ್ಟಿದವರು. ಹೊಸಗನ್ನಡ ಗದ್ಯಲಯಕ್ಕೆ ಹೊಸತನವನ್ನು, ಹೊಸ ಮೆರುಗನ್ನು ನೀಡಿದವರು" ಹೀಗೆಂದ ರಾಜು, ಅಂದು ವೇದಿಕೆಯ ಮೇಲೆ ಅರಚಾಡಿದ ಉಗ್ರಗಾಮಿ ವಿಮರ್ಶಕರ ಹಲ್ಲೆಗೆ ಹೆದರಿ, ಅನಕೃ ಅವರಿಂದ ಹೇಳಿಕೊಳ್ಳುವಂಥ ಕೃತಿಗಳು ಬರಲಿಲ್ಲವೆಂದು ಒಲ್ಲದ ಮನಸ್ಸಿನಿಂದ ಅಪ್ಪಣೆ ಕೊಡಿಸಿದರು. ರಾಜು ಅಂದು ಭೂಮಿಗೆ ಇಳಿದು ಹೋದದನ್ನು ಕಂಡೆ; ನನಗೆ ಕಸಿವಿಸಿಯೆನಿಸಿತು.

ಕನ್ನಡ ಚಳುವಳಿಯಲ್ಲಿ ಪ್ರಮುಖಪಾತ್ರ ವಹಿಸಿದ, ಅತ್ಯುತ್ತಮ ಪ್ರಾಧ್ಯಾಪಕನೆಂದು ಹೆಸರು ಮಾಡಿದ, ಕನ್ನಡ ಪ್ರಕಟನಾ ಪ್ರಪಂಚದಲ್ಲಿ ಅದ್ವಿತೀಯ ಸಾಧನೆ ಮಾಡಿದ ರಾಜುಗೆ ರಾಜ್ಯೋತ್ಸವ ಪ್ರಶಸ್ತಿ ಮನೆ ಬಾಗಿಲಿಗೆ ಬರಬೇಕಾಗಿತ್ತು. ಜಾತೀಯತೆ ಮತ್ತು ಲಾಬೀಯತೆಯಂಥ ಹೊಲಸಿನಿಂದ ರಾಜು ಯಾವಾಗಲೂ ದೂರವಿದ್ದು, ಕೊಟ್ಟ ಕೆಲಸವನ್ನು ಚೊಕ್ಕಟವಾಗಿ ಮಾಡಿ ಮುಗಿಸುವುದನ್ನು ಬಿಟ್ಟರೆ, ಅವರಿಗೆ ಮತ್ತೊಂದು ಗೊತ್ತಿಲ್ಲ.

"ಸುಖೀಸಂಸಾರಿ" ರಾಜು ನೂರು ಶರತ್ಕಾಲ ಬಾಳುವಂತೆ ತಾಯಿ ಭುವನೇಶ್ವರಿ ಹರಸಲಿ. ಅದನ್ನು ಕಾಣುವ ಭಾಗ್ಯ ನನಗೂ ಲಭಿಸಲೆಂದು ಆಶಿಸುವುದರಲ್ಲಿ ತಪ್ಪೇನಿಲ್ಲವಷ್ಟೇ.

ರಾಜು ಕ್ರೈಸ್ಟ್ ಕಾಲೇಜಿನಿಂದ ನಿವೃತ್ತರಾಗಿ ಹೊರಬರುವ ಮುಂಚೆ "ಬೇಂದ್ರೆ ಸಾಹಿತ್ಯ – ಒಂದು ಅಧ್ಯಯನ" ಎನ್ನುವ ಅನನ್ಯ ಕೃತಿಯನ್ನು ಸಂಪಾದಿಸಿ ಪ್ರಕಟಿಸಿದರು. ಅದು ಅಂಕೋಲದಲ್ಲಿ ಬಿಡುಗಡೆಗೊಂಡಿತು. ಆ ಗ್ರಂಥಕ್ಕೆ ಕಾಲೇಜಿನ ಪ್ರಾಂಶುಪಾಲರಾದ ಸೆಬಾಸ್ಟಿಯನ್ ತೆಕ್ಕೇಡತು, ಅವರು "ಶುಭನುಡಿ" ಬರೆದದ್ದು ಹೀಗೆ: "ಪ್ರೊ. ಚಿ. ಶ್ರೀನಿವಾಸರಾಜು ಅವರ ಪ್ರತಿಭೆ ಮತ್ತು ಪರಿಶ್ರಮಗಳಿಂದ ಕನ್ನಡ ಸಂಘ ಸ್ಥಾಪನೆಯಾಯಿತು. ಕರ್ನಾಟಕ ಸರ್ಕಾರದ ಕನ್ನಡ ಪುಸ್ತಕ ಪ್ರಾಧಿಕಾರದಿಂದ ಪ್ರಪ್ರಥಮ ಅತ್ಯುತ್ತಮ ಪ್ರಕಾಶನ ಪ್ರಶಸ್ತಿಯನ್ನು ಪಡೆಯಿತು. ಕನ್ನಡ ನಾಡಿನಲ್ಲಿ ಕನ್ನಡ ಸಂಘದಿಂದ, ಕ್ರೈಸ್ಟ್ ಕಾಲೇಜ್ ಹೆಸರನ್ನು, ಕೀರ್ತಿಯನ್ನು ಗಳಿಸಿತು. ಇದು ಪ್ರೊ. ರಾಜು ಅವರ ನೇತೃತ್ವದಲ್ಲಿ ಪ್ರಕಟವಾಗುತ್ತಿರುವ ಕೊನೆಯ ಪುಸ್ತಕ. ಅವರು ಈ ವರ್ಷದ ಆರಂಭದಲ್ಲಿ ವಿಶ್ರಾಂತರಾಗುತ್ತಾರೆ. ಕನ್ನಡ ಕೆಲಸ ಮಾಡುವವರಿಗೆ ವಿಶ್ರಾಂತಿ ಎಲ್ಲಿ ಬಂತು?"

❑



ಐವತ್ತು ವರ್ಷಗಳ ಹಿಂದಿನ ಚಿತ್ರ :
ಚಿಕ್ಕಮಗಳೂರು ಜಿಲ್ಲೆಯ ಕಳಸದಲ್ಲಿ ತಂದೆ-ತಾಯಿ ಮತ್ತು ತಂಗಿಯರೊಡನೆ



೧೯೭೦ರಲ್ಲಿ
ನವದಂಪತಿಗಳು



ಮದುವೆ ಸಂದರ್ಭದಲ್ಲಿ : ಬರಗೂರು ರಾಮಚಂದ್ರಪ್ಪ, ದೊಡ್ಡರಂಗೇಗೌಡ, ಶೇಷಶಾಸ್ತ್ರಿ, ಕ.ನಂ. ನಾಗರಾಜ, ಸಿ.ಯು. ಮಂಜುನಾಥ್, ಎನ್.ಜಿ. ಶ್ರೀನಿವಾಸ್, ಸದಾನಂದಯ್ಯ, ಎಚ್.ಎಸ್. ಮಾಧವರಾವ್, ಕೋದಂಡರಾಮ್ ಮುಂತಾದ ಗೆಳೆಯರೊಂದಿಗೆ



ಕೆಂಗಲ್ ಹನುಮಂತಯ್ಯನವರ ಆಶೀರ್ವಾದ



ಶ್ರೀಮತಿ ಕಮಲಾ ಹಂಪನಾ, ಶ್ರೀಮತಿ ರುದ್ರಾಣಿ ಶಿವರುದ್ರಪ್ಪ, ಡಾ. ರಂ.ಶ್ರೀ. ಮುಗಳಿ ಮತ್ತು ಡಾ. ಜಿ.ಎಸ್. ಶಿವರುದ್ರಪ್ಪ ಅವರುಗಳೊಂದಿಗೆ



ಸಾಹಿತಿಗಳ ಸಮಾವೇಶ :
ಗೆಳೆಯ ಬಿ.ಆರ್. ಲಕ್ಷ್ಮಣರಾವ್ ಚಿಂತಾಮಣಿಯಲ್ಲಿ ತೆಗೆಸಿದ ಒಂದು ಅಪೂರ್ವ ಚಿತ್ರ



ಗೆಳೆಯರ ಗುಂಪು : ಡಾ. ಕೆ.ವಿ. ನಾರಾಯಣ, ರಾಮಯ್ಯ,
ಡಿ.ಆರ್. ನಾಗರಾಜ್, ಶೂದ್ರ ಶ್ರೀನಿವಾಸ್, ಕಾ.ನ. ಶ್ರೀನಿವಾಸ್



ಚಿಂತಾಮಣಿಯಲ್ಲಿ : ಗೆಳೆಯರಾದ ಬಿ.ಆರ್. ಲಕ್ಷ್ಮಣರಾವ್ ಮತ್ತು ಕಿ.ರಂ. ನಾಗರಾಜ



ಸೆಂಟ್ರಲ್ ಕಾಲೇಜು 'ಕರ್ಣಾಟಕ ಸಂಘ'ದ ಚಿನ್ನದ ಹಬ್ಬ ಸಂದರ್ಭದಲ್ಲಿ (೧೯೬೯) : ಬಿ.ಎಂ.ಶ್ರೀ. ಅವರ 'ಅಶ್ವತ್ಥಾಮನ್' ನಾಟಕ ಪ್ರಯೋಗ. ಭೀಮನಾಗಿ ಶ್ರೀನಿವಾಸರಾಜು



ರಾಷ್ಟ್ರಕವಿ ಕುವೆಂಪು ಅವರೊಂದಿಗೆ ಮೈಸೂರಿನ 'ಉದಯರವಿ'ಯಲ್ಲಿ (೧೯೮೭)



ಪ್ರೊ. ಕೆ.ಎಸ್. ನಿಸಾರ್ ಅಹಮದ್ ಅವರಿಂದ 'ಮೂರು ಏಕಾಂಕಗಳು' ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ ಸ್ವೀಕಾರ (೧೯೮೪)



ಹಿರಿಯ ಲೇಖಕರಾದ ಚದುರಂಗರೊಡನೆ



ಕ್ರೈಸ್ಟ್ ಕಾಲೇಜು ಕನ್ನಡ ಸಂಘದ 'ಬೇಂದ್ರೆ ನಮನ' ಕಾರ್ಯಕ್ರಮದಲ್ಲಿ
ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ, ಡಾ. ರಂ.ಶ್ರೀ. ಮುಗಳಿ, ಡಾ. ವಾಮನ ಬೇಂದ್ರೆ ಮತ್ತು ಶ್ರೀ ಜಿ.ಬಿ. ಜೋಶಿ



ಕ್ರೈಸ್ಟ್ ಕಾಲೇಜು ಕನ್ನಡ ಸಂಘವ 'ಕುವೆಂಪು ನಮನ' ಕಾರ್ಯಕ್ರಮದ
ಉದ್ಘಾಟನಾ ಸಮಾರಂಭದಲ್ಲಿ : ಡಾ॥ ಕೆ.ವಿ. ನಾರಾಯಣ, ಡಾ॥ ಎಚ್. ನರಸಿಂಹಯ್ಯ,
ಪ್ರೊ॥ ಯು.ಆರ್. ಅನಂತಮೂರ್ತಿ, ಶ್ರೀ ರಾಮಕೃಷ್ಣ ಹೆಗಡೆ
ಮತ್ತು ಹಾ.ಮಾ. ನಾಯಕ ಅವರುಗಳೊಂದಿಗೆ (೧೯೯೪)



ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ಗೆಳೆಯ ಎಂ.ಪಿ. ಪ್ರಕಾಶ್ ಮತ್ತು
ಡಾ॥ ಚಂದ್ರಶೇಖರ ಕಂಬಾರ ಅವರುಗಳೊಂದಿಗೆ (೧೯೯೨)



ಡಾ॥ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರೊಂದಿಗೆ



ಗಾಯಕ ಮೈಸೂರು ಅನಂತಸ್ವಾಮಿ ಅವರೊಂದಿಗೆ



ಮೈಸೂರು ಸಂಪ್ರದಾಯದ ಹಿರಿಯ ಚಿತ್ರಕಲಾವಿದ
ಶ್ರೀ ವೈ. ಸುಬ್ರಮಣ್ಯರಾಜು ಅವರೊಂದಿಗೆ



ಪ್ರೊ॥ ಎ.ಎನ್. ಮೂರ್ತಿರಾಯರ ಮನೆಯಲ್ಲಿ
ಯು.ಎಸ್. ಶ್ರೀನಿವಾಸ್ (ಪುವ್ಯಾಶ್ರೀ) ಅವರೊಂದಿಗೆ



ಡಾ॥ ಹಾ.ಮಾ. ನಾಯಕರು ಮತ್ತು ಪ್ರೊ. ಎ.ಎನ್. ಮೂರ್ತಿರಾಯರೊಡನೆ ಮಾತುಕತೆ



ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರೊಂದಿಗೆ ಹಂಪಿಯಲ್ಲಿ



ಮಾಸ್ತಿಯವರೊಂದಿಗೆ ಮಾತುಕತೆ




BUCTA ಸಮಾರಂಭದಲ್ಲಿ ಡಾ॥ ಎಚ್. ನರಸಿಂಹಯ್ಯನವರಿಂದ ಗೌರವ ಸ್ವೀಕಾರ



ನಾಡೋಜ ಕವಿ ಶ್ರೀ ಚೆನ್ನವೀರ ಕಣವಿ ಮತ್ತು ಗೆಳೆಯ ಎಂ.ಪಿ. ಪ್ರಕಾಶ್ ಅವರೊಂದಿಗೆ



ಹಿರಿಯ ಕವಿ ಪು.ತಿ.ನ. ಅವರೊಂದಿಗೆ




ಸಂಸ ಪ್ರಶಸ್ತಿ ಬಂದಾಗ ಬಿ.ವಿ. ಕಾರಂತರ ಅಪ್ಪುಗೆಯಲ್ಲಿ (೧೯೯೯)



ರಾಜ್ಯಪಾಲರಾದ ಶ್ರೀಮತಿ ರಮಾದೇವಿಯವರಿಂದ ಸಂದೇಶ ಪ್ರಶಸ್ತಿ ಸ್ವೀಕಾರ (೨೦೦೦)



ಕನ್ನಡ ಪುಸ್ತಕ ಪ್ರಾಧಿಕಾರದಿಂದ ಪ್ರಪ್ರಥಮ ಅತ್ಯುತ್ತಮ ಪ್ರಕಾಶನ
ಪ್ರಶಸ್ತಿ ಪಡೆದ ಸಂದರ್ಭದಲ್ಲಿ (೨೦೦೦)



ಕೋಲಾರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಏಳನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ಹೊಸೂರಿನಲ್ಲಿ ವಹಿಸಿದ ಸಂದರ್ಭದಲ್ಲಿ ಡಾ॥ ಎಚ್. ನರಸಿಂಹಯ್ಯ, ಡಾ॥ ಜಿ.ಎಸ್. ಶಿವರುದ್ರಪ್ಪ, ಹರೀಕೃಷ್ಣ ಪುನರೂರು ಶಾಸಕ ಸುದರ್ಶನ್ ಮುಂತಾದವರೊಂದಿಗೆ (೨೦೦೧)



ಕ್ರೈಸ್ಟ್ ಕಾಲೇಜು ಕನ್ನಡ ಸಂಘದ ಬೆಳ್ಳಿಹಬ್ಬದ ಸಂದರ್ಭದಲ್ಲಿ ಡಾ॥ ಬಸವರಾಜ ಕಲ್ಗುಡಿ, ರಾಜು ತಂದೆ, ನಾಡೋಜ ಶ್ರೀ ಚೆನ್ನವೀರ ಕಣವಿ ಮತ್ತು ಡಾ॥ ನರಹಳ್ಳಿ ಬಾಲಸುಬ್ರಹ್ಮಣ್ಯ



ರಾಜು ಮನೆಯಲ್ಲಿ ಶ್ರೀ ಸುಂದರಲಾಲ್ ಬಹುಗುಣ ದಂಪತಿಗಳು



ಕವಿ ಡಾ॥ ಸಿದ್ಧಲಿಂಗಯ್ಯ ಅವರೊಂದಿಗೆ



ಹೆಗ್ಗೋಡಿನಲ್ಲಿ ಕೆ.ವಿ. ಸುಬ್ಬಣ್ಣ ದಂಪತಿಗಳೊಂದಿಗೆ ರಾಜು ದಂಪತಿಗಳು



ಲೇಖಕ ಪ್ರೊ॥ ಬರಗೂರು ರಾಮಚಂದ್ರಪ್ಪನವರೊಂದಿಗೆ




ಮೈಸೂರಿನಲ್ಲಿ ಪಿ. ರಾಮಮೂರ್ತಿ ಮತ್ತು ಶ್ರೀ ಪ್ರಸನ್ನ ಅವರೊಂದಿಗೆ



ಸಾಲಿಗ್ರಾಮದ ಶಿವರಾಮಕಾರಂತರ 'ಸುಹಾಸ' ಮನೆಯಲ್ಲಿ ಎಚ್.ಆರ್. ರಾಮಕೃಷ್ಣರಾವ್, ಬೊಳುವಾರು ಮಹಮದ್ ಕುಂಞಿ, ಕೆ.ಸಿ. ಶಿವಾರೆಡ್ಡಿ, ರಾಮಲಿಂಗಪ್ಪ ಟಿ. ಬೇಗೂರು, ಎಚ್.ಎಸ್. ರಾಘವೇಂದ್ರರಾವ್ ಮತ್ತು ನ. ರವಿಕುಮಾರ್ (೧೯೯೨)



ಅಡಿಗರ ಮನೆಯಲ್ಲಿ ಕ್ರೈಸ್ಟ್ ಕಾಲೇಜು ಕನ್ನಡ ಸಂಘ (೧೯೯೧)




ಅಂಕೋಲದಲ್ಲಿ ಸನ್ಮಾನ (೨೫-೧೨-೨೦೦೦) ವಿಷ್ಣುನಾಯ್ಕರು ಮತ್ತು ಜಯಂತ ಕಾಯ್ಕಿಣಿ, ಕ್ರೈಸ್ಟ್ ಕಾಲೇಜು ಕನ್ನಡ ಸಂಘದಿಂದ ಚಿ. ಶ್ರೀನಿವಾಸರಾಜು ನೇತೃತ್ವದಲ್ಲಿ ಬಿಡುಗಡೆಯಾದ (ಬೇಂದ್ರೆ ಸಾಹಿತ್ಯ - ಒಂದು ಅಧ್ಯಯನ) ಕೊನೆಯ ಪುಸ್ತಕ



ಕ್ರೈಸ್ಟ್ ಕಾಲೇಜಿನಿಂದ ವಿಶ್ರಾಂತರಾದಾಗ 'ಸಂಚಯ'ದ ಸಮಾರಂಭದಲ್ಲಿ
ಹಿರಿಯ ಕವಿಗಳಾದ ಡಾ॥ ಬಿ.ಸಿ. ರಾಮಚಂದ್ರಶರ್ಮರೊಡನೆ (೨೦೦೦)



'ಸಂಚಯ' ಏರ್ಪಡಿಸಿದ್ದ ಸಮಾರಂಭದಲ್ಲಿ ಮಗ ಎಸ್. ಋತ, ಪತ್ನಿ ಎನ್. ಸರಸ್ವತಿ
ಮತ್ತು ಹಿರಿಯರಾದ ಪ್ರೊ॥ ಕ.ವೆಂ. ರಾಜಗೋಪಾಲ ಅವರೊಂದಿಗೆ



ಶ್ರೀ ನೀಲತ್ತಳ್ಳಿ ಕಸ್ತೂರಿ, ಡಾ॥ ಎಚ್.ಎಸ್. ರಾವೇಂದ್ರರಾವ್ ಮತ್ತು
ಶ್ರೀ ಡಿ.ವಿ. ಪ್ರಹ್ಲಾದ್ ಅವರೊಂದಿಗೆ



ಅರವತ್ತು ತುಂಬಿದಾಗ ಡಾ॥ ಕೆ.ವಿ. ನಾರಾಯಣರ ಹಂಪಿಯ ಮನೆಯಲ್ಲಿ
ಡಾ॥ ಎಚ್.ಎಸ್. ರಾಘವೇಂದ್ರರಾವ್ ಅವರೊಂದಿಗೆ



ಹಂಪಿಯ ಮಹಾನವಮಿ ದಿಬ್ಬದ ಉಬ್ಬುಶಿಲ್ಪಗಳನ್ನು ನೋಡುತ್ತಿರುವ
ರಾಜು ದಂಪತಿಗಳು.



ಗಾಂಧೀಜಿಯವರ ವಾರ್ಧಾ ಆಶ್ರಮದಲ್ಲಿ ಅನ್ಯಭಾಷಾ ನಾಟಕಕಾರರೊಂದಿಗೆ



‘ಅಭಿನವ’ ಏರ್ಪಡಿಸಿದ್ದ ಮೈಸೂರು ಮಹಾರಾಜ ಕಾಲೇಜಿನ ಸಮಾರಂಭದಲ್ಲಿ
ಪ್ರೊ॥ ಓ.ಎಲ್. ನಾಗಭೂಷಣಸ್ವಾಮಿ, ಪ್ರೊ॥ ಚ. ಸರ್ವಮಂಗಳ,
ಮಗ ಎಸ್. ಋತ ಮತ್ತು ಪತ್ನಿ ಎನ್. ಸರಸ್ವತಿ (೨೦೦೬)



ಶಿವಮೊಗ್ಗ ಕರ್ನಾಟಕ ಸಂಘದಲ್ಲಿ (೨೦೦೩)




ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ಶಾಸಕ ಕೆ. ಚಂದ್ರಶೇಖರ್, ಶ್ರೀ ಜಿ. ನಾರಾಯಣ ಮತ್ತು ಡಾ॥ ಟಿ.ವಿ. ವೆಂಕಟಾಚಲ ಶಾಸ್ತ್ರಿಗಳೊಂದಿಗೆ



ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ಪ್ರೊ॥ ಯು.ಆರ್. ಅನಂತಮೂರ್ತಿಯವರೊಡನೆ ಕಲಾಪ್ರದರ್ಶನದ ಉದ್ಘಾಟನೆ




ಪ್ರೊ|| ಎಂ.ಎಚ್. ಕೃಷ್ಣಯ್ಯ-೭೦ರ ಸಮಾರಂಭದಲ್ಲಿ
ಪ್ರೊ|| ಎಲ್.ಎಸ್. ಶೇಷಗಿರಿರಾವ್ ಅವರೊಂದಿಗೆ



ಹಿರಿಯ ಲೇಖಕರಾದ ಕುಸುಮಾಕರ ದೇವರಗಣ್ಣೂರ ಅವರೊಂದಿಗೆ
ಜೊತೆಯಲ್ಲಿ ಗೆಳೆಯ ಎಸ್. ದಿವಾಕರ್



ನ್ಯಾಯಮೂರ್ತಿ ಶ್ರೀ ವೆಂಕಟಾಚಲಯ್ಯ, ಹಿರಿಯರಾದ ಶ್ರೀ ಎಚ್.ವೈ. ಶಾರದಾ ಪ್ರಸಾದ್ ಮತ್ತು ಲೇಖಕ ಶ್ರೀ ರಾಮಚಂದ್ರ ಗುಹ ಅವರೊಂದಿಗೆ




ಡಾ॥ ಎಚ್.ಎಸ್. ವೆಂಕಟೇಶಮೂರ್ತಿ, ಡಾ॥ ಜಿ.ಎಸ್. ಶಿವರುದ್ರಪ್ಪ, ಪ್ರೊ॥ ಚ. ಸರ್ವಮಂಗಳ ಮತ್ತು ಶ್ರೀ ಅಬ್ದುಲ್ ರಶೀದ್ ಅವರೊಂದಿಗೆ



ಕವಿಗೋಷ್ಠಿಯಲ್ಲಿ : ಶ್ರೀಮತಿ ಶೈಲಜಾ ಉಡಚಣ, ಶ್ರೀಮತಿ ಪದ್ಮಾ ಶಿವರುದ್ರಪ್ಪ, ಪ್ರೊ॥ ಜಿ.ಎಸ್. ಸಿದ್ಧಲಿಂಗಯ್ಯ, ಶ್ರೀ ಎಂ.ಎನ್. ವ್ಯಾಸರಾವ್, ಶ್ರೀ ವ್ಯಾಸರಾಯ ಬಲ್ಲಾಳ, ಡಾ. ಜಿ.ಎಸ್. ಶಿವರುದ್ರಪ್ಪ, ಡಾ. ಎನ್.ಎಸ್. ಲಕ್ಷ್ಮಿನಾರಾಯಣಭಟ್ಟ ಮತ್ತು ಡಾ॥ ಸುಮತೀಂದ್ರ ನಾಡಿಗ




Phoenix and other mime plays ಬಿಡುಗಡೆ ಸಂದರ್ಭದಲ್ಲಿ ಶ್ರೀ ಚಿರಂಜೀವಿ ಸಿಂಗ್, ಶ್ರೀ ವಿ. ರಾಮಮೂರ್ತಿ ಮತ್ತು ಡಾ॥ ಜಿ. ರಾಮಕೃಷ್ಣ ಅವರೊಂದಿಗೆ



ನಾಡೋಜ ಶ್ರೀ ಏಣಗಿ ಬಾಳಪ್ಪ ಅವರೊಂದಿಗೆ



ಹಿರಿಯರಾದ ಶ್ರೀ ಎಚ್.ಎಸ್. ದೊರೆಸ್ವಾಮಿಗಳೊಂದಿಗೆ,
ಹಿನ್ನೆಲೆಯಲ್ಲಿ 'ಗಾಂಧಿಬಜಾರ್' ಪತ್ರಿಕೆಯ ಬಾಕಿನ



ಶ್ರೀ ಬಿಳಿಗೆರೆ ಕೃಷ್ಣಶಾಸ್ತ್ರಿಗಳಿಂದ ಆಶೀರ್ವಾದಪೂರ್ವಕ ಗೌರವಾರ್ಪಣೆ, ಬಿಳಿಗೆರೆಯಲ್ಲಿ



ಸುಗತ ಶ್ರೀನಿವಾಸರಾಜು, ಡಾ॥ ವಿಜಯಾ ಹಾಗೂ
ಎಚ್.ಎಸ್. ರಾಘವೇಂದ್ರರಾವ್ ಅವರೊಂದಿಗೆ



ರಾಜು ಮೊಮ್ಮಕ್ಕಳು : (ಎಡಗಡೆಯಿಂದ) ಆರ್. ರಾಕೇಂದು,
ಎಸ್. ಸುಮೇರು ಮತ್ತು ಆರ್. ವಿಯತಾ



ರಾಜು ಮೇಷ್ಟ್ರರ ಕಾರ್ಯಕ್ಷೇತ್ರ ಕ್ರೈಸ್ಟ್ ಕಾಲೇಜು



ಸಿಂಗಪುರದ ಕಾಂಕ್ರೀಟ್ ಕಾಡಿನಲ್ಲಿ



ಕೊಡಗಿನ ಪ್ರಶಾಂತ ಕಾಡಿನಲ್ಲಿ

# ಶ್ರೀನಿವಾಸರಾಜು : ಸಾಹಿತ್ಯದ ಅಂತರ್ಜಾಲ

● ಡಾ. ಬಸವರಾಜ ಕಲ್ಗುಡಿ

ಸುಮಾರು ನಾಲ್ಕು ದಶಕಗಳಿಂದಲೂ ಕನ್ನಡ ಸಾಹಿತ್ಯ ಸಂಸ್ಕೃತಿಯ ಸದಭಿರುಚಿಯನ್ನು ನಿರಂತರವಾಗಿ ಕರ್ನಾಟಕದ ಎಲ್ಲ ಮೂಲೆಗಳಲ್ಲಿಯೂ ಹರಡುತ್ತಿರುವ ಬೆರಳೆಣಿಕೆಯ ಹೆಸರುಗಳಲ್ಲಿ ಚಿ. ಶ್ರೀನಿವಾಸರಾಜು ಅವರದು ಎದ್ದುಕಾಣುವ ಹೆಸರು. ಯಾವಾಗಲೂ ಅವರ ಹೆಗಲಿಗೆ ಜೋತುಬಿದ್ದಿರುವ ಪುಸ್ತಕಗಳು ತುಂಬಿರುವ ಬ್ಯಾಗು ಶ್ರೀನಿವಾಸರಾಜು ಅವರ ಕಾರ್ಯ ಚಟುವಟಿಕೆಯ ಸಂಕೇತ. ಸಾಹಿತ್ಯಸೃಷ್ಟಿಯ ಬಗ್ಗೆ ರಾಜು ಅವರದು ವಿಶಿಷ್ಟವಾದ ನಂಬಿಕೆ. ಸೃಜನಶೀಲತೆಗಿರುವ ವಿಶಿಷ್ಟ ವೈಯಕ್ತಿಕ ವ್ಯಕ್ತಿತ್ವವನ್ನು ಒಪ್ಪಿಯೂ ಅದು ಒಂದು ಸಮುದಾಯಕ ಚಟುವಟಿಕೆಯೆಂದು ಶ್ರೀನಿವಾಸರಾಜು ಅವರು ಗಾಢವಾಗಿ ನಂಬಿದ್ದಾರೆ. ಈ ನಂಬಿಕೆಯೇ – ಕನ್ನಡದ ಸೃಜನಶೀಲತೆಯಲ್ಲಿ ಹೊಸ ಹಾಗೂ ಉತ್ಕೃಷ್ಟ ಮನಸ್ಸುಗಳನ್ನು ಹುಡುಕಿ ಬೆಳೆಸುವತ್ತ ಅವರನ್ನು ಕಾರ್ಯಪ್ರವೃತ್ತಗೊಳಿಸಿದೆ. ಇಂಥ ಹೊಸ ಬೆಳಸುಗಳನ್ನು ಅನ್ವೇಷಿಸಲು ಅವರು ಕರ್ನಾಟಕದ ತುಂಬ ಓಡಾಡಿದ್ದು ಎಷ್ಟೋ! ಶ್ರೀನಿವಾಸರಾಜು ಅವರು ಹುಡುಕಿ, ಆಯ್ದು ಬೆಳೆಸಿದ ಅನೇಕ ಪ್ರತಿಭೆಗಳು ಇಂದು ಕನ್ನಡದಲ್ಲಿ ಪ್ರಮುಖ ಹೆಸರುಗಳೂ ಆಗಿವೆ. ರಾಜು ಅವರ ಇಂಥ ಕಾರ್ಯವು, ಕನ್ನಡದಲ್ಲಿ ಬರೆಯುವ ಮನಸ್ಸುಗಳ ಮೇಲೆ ಎಂಥ ಪವಿತ್ರವಾದ ವಾತಾವರಣವನ್ನು ನಿರ್ಮಾಣ ಮಾಡಿದೆ ಎನ್ನುವುದು, ಇವರೆಲ್ಲರೂ ರಾಜು ಅವರ ಬಗ್ಗೆ ತಾಳಿರುವ ವಾತ್ಸಲ್ಯ ಭಾವದಿಂದಲೇ ವ್ಯಕ್ತವಾಗುತ್ತದೆ. ಒಂದು ಬಗೆಯ ಪೋಷಕ ಗುಣದಿಂದಾಗಿ ಪಿತೃವಾತ್ಸಲ್ಯವು ಇಲ್ಲಿ ತಾನೇ ತಾನಾಗಿ ಮೆರೆದಿದೆ. ಸೃಷ್ಟಿಶೀಲ ಮನಸ್ಸಿಗೆ ಇಂಥ ಒಂದು ಪ್ರಚೋದನೆ ಎಂಥ ಅಗತ್ಯವೆಂದು ವಿವರಿಸಬೇಕಾಗಿಲ್ಲ. ಮಲೆನಾಡಿನ ಕಾಡಿನ ನಡುವೆ ಮನೆ ಮಾಡಿ ಬರೆಯಲು ಹಾತೊರೆಯುವ ಹುಡುಗರಿಂದ ಹಿಡಿದು, ಬಯಲುಸೀಮೆಯ ಸುಡುಬಿಸಿಲಿನ ತಪ್ತ, ಕುದಿಯುವ ಮನಸ್ಸುಗಳನ್ನು ಹುಡುಕಿ ತೆಗೆದ ಸಾಧನೆ ರಾಜು ಅವರದು.

ಕನ್ನಡದಲ್ಲಿ ಅರಿವು ಮತ್ತು ಅಭಿರುಚಿ ನಿರ್ಮಾಣದ ಕ್ರಿಯೆಯನ್ನು ಒಂದು ಪವಿತ್ರವಾದ ಕಾರ್ಯವೆಂದು ತಿಳಿದಿರುವ ಗಾಢ ಪರಂಪರೆ ಇದೆ. ಇಂಥ ಪರಂಪರೆಯಲ್ಲಿ ರಾಜರತ್ನಂ ಅವರದು ದೊಡ್ಡ ಹೆಸರು. ರಾಜರತ್ನಂ ಅವರ ಜೊತೆಗಿನ ಸಂಬಂಧವು ಶ್ರೀನಿವಾಸರಾಜು ಅವರಲ್ಲಿ ಸೃಜನಶೀಲತೆಯ ಹಲವು ಆಯಾಮಗಳನ್ನು ಕಾಣುವಂತೆ ಮಾಡಿದೆ ಎನ್ನುವಷ್ಟರಲ್ಲಿ ಅನುಮಾನವಿಲ್ಲ.

ಆಧುನಿಕ ಕನ್ನಡ ಸಾಹಿತ್ಯವು ಕಂಡುಕೊಂಡ ಸೂಕ್ಷ್ಮ ಸಾಂಸ್ಕೃತಿಕ ಸಂವೇದನೆಗಳಿಗೆ ಪ್ರಮುಖ ಕಾರಣಗಳು ಕಿರು ಸಾಹಿತ್ಯಿಕ ಪತ್ರಿಕೆಗಳು. ಸಾಂಪ್ರದಾಯಿಕ, ಸಾಮಾಜಿಕ, ಧಾರ್ಮಿಕ ಹಾಗೂ ರಾಜಕೀಯ ಆಲೋಚನೆಗಳಿಗೆ ಪರ್ಯಾಯವಾಗಿ ಹೊಸ ಚಿಂತನೆಗೆ ದಾರಿ ಮಾಡಿ ಕೊಟ್ಟವುಗಳು. ಇವು ಹೊಸ ಸಾಹಿತ್ಯ ಸೃಷ್ಟಿ ಮತ್ತು ಸಾಂಸ್ಕೃತಿಕ ಸಂವೇದನೆಗಳ ಅರ್ಥಪೂರ್ಣ ಸಂಬಂಧಗಳ ಹುಡುಕಾಟಕ್ಕಾಗಿ ತೀವ್ರ ಪ್ರಯತ್ನವನ್ನೂ ಇವು ಮಾಡಿದವು. ಎಪ್ಪತ್ತರ ದಶಕದಿಂದ ಸುಮಾರು ಕಾಲು ಶತಮಾನದ ಕಾಲ ಇವುಗಳು ನಮ್ಮ ಬದುಕನ್ನು ನಿರ್ಮಿಸಿದ, ಬೆಳೆಸಿದ ಬಗೆ ಅನ್ಯಾದೃಶವಾದದ್ದು. ಶ್ರೀನಿವಾಸರಾಜು ಅವರು ಇಂಥ ಹಲವಾರು ಕಿರು ಸಾಹಿತ್ಯಿಕ ಪತ್ರಿಕೆಗಳ ಉಗಮ, ಬೆಳವಣಿಗೆ ಹಾಗೂ ಪ್ರಸಾರಕ್ಕೆ ಹಲವಾರು ರೀತಿಯಲ್ಲಿ ಕಾರಣರೂ, ಪ್ರಚೋದಕರೂ ಆಗಿದ್ದಾರೆ. ಇವರು ಗೆಳೆಯರ ಜೊತೆಗೂಡಿ ಹುಟ್ಟುಹಾಕಿ ಬೆಳೆಸಿದ ಪಿ.ಪಿ. ಬಳಗದ 'ಅಂಕಣ' ಪತ್ರಿಕೆಯ ಜೊತೆಗೆ ಕ್ರಿಯಾತ್ಮಕವಾಗಿ ಸಂಬಂಧವನ್ನು ಇಟ್ಟುಕೊಂಡಿದ್ದವನು ನಾನು. 'ಅಂಕಣ' ಪತ್ರಿಕೆಯು ಎಂಬತ್ತರ ದಶಕದಲ್ಲಿ ಸಾಹಿತ್ಯ ಮತ್ತು ಅಂತರ್‌ಸಂಬಂಧೀಯ ಅರಿವಿನ ಹಲವು ನೆಲೆಗಳ ಪ್ರಮುಖ ವಾಗ್ವಾದದ ವೇದಿಕೆಯಾಗಿತ್ತು. ಶ್ರೀನಿವಾಸರಾಜು ಅವರು ಈ ಪತ್ರಿಕೆಯ ಹಿಂದಿನ ಕ್ರಿಯಾಶಕ್ತಿಯಾಗಿದ್ದರು. ಅವರ ಮನೆಯ ಬಳಗವೆಲ್ಲ 'ಅಂಕಣ'ವನ್ನು ಅಂಚೆಗೆ ಹಾಕಲು ಸಿದ್ಧಪಡಿಸುತ್ತಿದ್ದ ರೀತಿಯು ನನ್ನಲ್ಲಿ ಈಗಲೂ ಮೃದುವಾದ ಭಾವನೆಗಳನ್ನು ಉನ್ಮೀಲನಗೊಳಿಸುವಂತೆ ಮಾಡುತ್ತಿದೆ. ಅದನ್ನೊಂದು ಪ್ರೀತಿಯ ಹಾಗೂ ಪವಿತ್ರ ಕೆಲಸದಂತೆ ಪರಿವರ್ತಿಸುತ್ತಿದ್ದ ಆ ಬಳಗ ಈಗಲೂ ಅರಿವಿನ ಸಂವಾದವನ್ನು ಹಾಗೆಂದೇ ಭಾವಿಸುತ್ತದೆ. ಅದು ಆ ಮನೆಯ ವಾತಾವರಣದ ಪುಣ್ಯ ವಿಶೇಷ.

ಶ್ರೀನಿವಾಸರಾಜು ಹಾಗೂ ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಸಂಬಂಧ ಅವರ ಕಾರ್ಯ ಚಟುವಟಿಕೆಯ ಮತ್ತೊಂದು ಪ್ರಮುಖವಾದ ಅಂಗ. ಕ್ರೈಸ್ಟ್ ಕಾಲೇಜಿನಲ್ಲಿ ಕನ್ನಡ ಸಂಘದ ಸ್ಥಾಪನೆ ಮತ್ತು ಅದು ಹಾಕಿಕೊಂಡ ಸಾಹಿತ್ಯ ಸಂಸ್ಕೃತಿ ಪ್ರಸಾರ ಕುರಿತಾದ ಹತ್ತು ಹಲವು ಯೋಜನೆಗಳು ಶ್ರೀನಿವಾಸರಾಜು ಹಾಗೂ ಅವರ ಗೆಳೆಯರ ಬಳಗದ ದೂರ ದೃಷ್ಟಿಕೋನಕ್ಕೆ ಉದಾಹರಣೆಗಳು. ಅವರಿಂದ ಕ್ರೈಸ್ಟ್ ಕಾಲೇಜಿನ ಈ ಸಂಘಕ್ಕೆ ಕರ್ನಾಟಕ ವ್ಯಾಪ್ತಿಯ ಖ್ಯಾತಿ ಬರುವಂತಾಯಿತು. ಕನ್ನಡ ಸಂಘದ ಹಲವು ಯೋಜನೆಗಳೂ ಸಹ ಶ್ರೀನಿವಾಸರಾಜು ಅವರ ವ್ಯಕ್ತಿತ್ವದ ಹಲವು ಮುಖಗಳ ಬೆಳವಣಿಗೆಗೆ ಕಾರಣವಾದವು. ಕನ್ನಡ ಸಂಘ ಶ್ರೀನಿವಾಸರಾಜುರವರನ್ನು ಎತ್ತರಕ್ಕೆ ಬೆಳೆಸಿದ್ದು ಹಾಗೂ ರಾಜೂ ಅವರು ಅದರ ಖ್ಯಾತಿಗೆ ಕಾರಣರಾದದ್ದು ಒಂದು ಯೋಗಾಯೋಗವೆಂದೇ ಹೇಳಬೇಕು. ಎಷ್ಟು ಉದಯೋನ್ಮುಖ ಲೇಖಕರು ಎಷ್ಟು ಖ್ಯಾತಿವೆತ್ತ ಲೇಖಕರು ಕನ್ನಡ ಸಂಘದ ಪ್ರಕಟಣೆಯ ಭಾಗವಾಗಲು ಹಾತೊರೆದರು! ಕನ್ನಡದ ಮಹತ್ವದ ಲೇಖಕರ ಮಹತ್ವವನ್ನು ತಿಳಿ ಹೇಳುವ ಕೆಲಸವನ್ನು

ಪ್ರತಿವರ್ಷ ಹಬ್ಬದಂತೆ ಆಚರಿಸುವ ಕನ್ನಡ ಸಂಘ, ಸಾಂಸ್ಕೃತಿಕ ವಾತಾವರಣ ಮೂಡಿಸುವುದರಲ್ಲಿ ಪ್ರಧಾನ ಪಾತ್ರ ವಹಿಸಿತ್ತು.

ಶ್ರೀನಿವಾಸರಾಜು ಅವರ ಇನ್ನೊಂದು ಮಹತ್ವದ ಮುಖವೆಂದರೆ ಅವರೇ ಸ್ವತಃ ಸೃಜನಶೀಲ ಲೇಖಕರೂ ಆಗಿರುವುದು. ಕವಿ ಹಾಗೂ ನಾಟಕಕಾರರಾಗಿ ವಿಶಿಷ್ಟ ಸಂವೇದನೆಗಳನ್ನು ಅವರು ಕನ್ನಡ ಸಾಹಿತ್ಯದಲ್ಲಿ ಮೂಡಿಸಿದ್ದಾರೆ. 'ಭಸನಾಲ ಬಂಧು' ಎಂಬ ಕವನ ಸಂಕಲನ ಅವರ ಕಾವ್ಯ ವಸ್ತುವಿನ ಪ್ರಮುಖ ನೆಲೆಗಳನ್ನೂ, ಸಾಮಾಜಿಕ ಕಾಳಜಿಯ ಮುಖ್ಯ ಧೋರಣೆಯನ್ನು ರೂಪಿಸುತ್ತದೆ. ರಾಜು ಅವರು ಸೃಷ್ಟಿಸಿದ 'ಮೂಕ ನಾಟಕಗಳು' ಕನ್ನಡ ಸಾಹಿತ್ಯದ ಈ ಪ್ರಕಾರದಲ್ಲಿ ವಿಶಿಷ್ಟವಾದ ರಚನೆಗಳೆಂದೇ ಹೇಳಬೇಕು. ಶಬ್ದಗಳಿಗಿಂತ ಮೌನ ಹಾಗೂ ಕ್ರಿಯೆ ಬಹು ಮುಖ್ಯವೆನ್ನುವ ರಾಜು ಅವರ ವ್ಯಕ್ತಿತ್ವದ ಸಂವೇದನೆಯೇ ಒಂದು ರೂಪಕವಾಗಿದೆಯೆನ್ನುವಂತಿದೆ ಈ ನಾಟಕಗಳ ಸೃಷ್ಟಿ ಸಾಹಿತ್ಯ ಸೃಷ್ಟಿಯ ಸಂದರ್ಭಗಳಲ್ಲಿಯೂ ಆಳದಲ್ಲಿ ರಾಜು ಅವರ ವ್ಯಕ್ತಿತ್ವದ ಹಲವಾರು ನೆಲೆಗಳು ಪರೋಕ್ಷವಾಗಿ ತಮ್ಮ ಸ್ಥಾನವನ್ನು ಪಡೆದುಕೊಳ್ಳುವುದು ಅವರ ಬರವಣಿಗೆಯ ವಿಶೇಷ ಮತ್ತು ಸತ್ವವಾಗಿದೆ. ಮಾತು ಕಡಿಮೆಯಾಗಿ ಮೌನ ಬಂಗಾರವಾಗುತ್ತ ಕ್ರಿಯೆಗೆ ಆಸ್ಪದವೀಯುವುದು ರಾಜು ಅವರ ಒಟ್ಟು ಕಾರ್ಯ ಸಾಧನೆಯ ವಿಶಿಷ್ಟ ಗುಣ. ಕನ್ನಡ ಸಂಸ್ಕೃತಿಯ ಪ್ರಮುಖ ವ್ಯಕ್ತಿಯಾಗಿರುವ ರಾಜು ಅವರಿಗೆ ಕನ್ನಡದ ಕೆಲಸಕ್ಕಾಗಿ ಮೊತ್ತಮೊದಲ ಎಸ್.ವಿ.ಪಿ. ಪ್ರಶಸ್ತಿ ಸಿಕ್ಕಿರುವುದು ಸಹಜವಾಗಿದೆ. ಅವರ ಕಾರ್ಯ ಸಾಧನೆಗಳು ಇಂಥ ಹಲವಾರು ಪ್ರಶಸ್ತಿಗಳಿಗೆ ಘನತೆ ತರುತ್ತವೆ ಎಂದರೆ ಅತಿಶಯೋಕ್ತಿಯಲ್ಲ.

*ಕೃಪೆ : ವಿಜಯಕರ್ನಾಟಕ*



## ಆಡದೇ ಮಾಡುವ ಉತ್ತಮನು ಈ ನನ್ನ ಗೆಳೆಯ!

● *ಯಶವಂತ ಚಿತ್ತಾಲ*

ಶ್ರೀನಿವಾಸರಾಜು ನನ್ನ ಬದುಕಿನಲ್ಲಿ ಬಂದದ್ದು ನನ್ನ ಸಾಹಿತ್ಯದ ಅಭಿಮಾನಿಯಾಗಿ. ಭೇಟಿಯಾದ ಮೊದಲ ಕ್ಷಣದಿಂದಲೇ ನನ್ನ ಅಂತಃಕರಣವನ್ನು ವ್ಯಾಪಿಸುತ್ತ ಬೆಳೆದದ್ದು ಗೆಳೆಯರಲ್ಲಿ ಗೆಳೆಯನಾಗಿ. ಶಾಶ್ವತವಾಗಿ ನೆಲೆನಿಂತದ್ದು ನನ್ನ ಸಾಹಿತ್ಯ ಸೃಷ್ಟಿಗೆ ಸದಾಕಾಲದ ಉತ್ಸಾಹವಾಗಿ ಪ್ರೋತ್ಸಾಹವಾಗಿ!

"ಇವರು ಶ್ರೀನಿವಾಸರಾಜು. ನನ್ನ ಆಪ್ತ ಗೆಳೆಯರು. ನನ್ನ ಹಾಗೇ ನಿಮ್ಮ ಸಾಹಿತ್ಯದ ಅಭಿಮಾನಿಗಳು. ನಾವಿಬ್ಬರೂ ಇಲ್ಲಿಯ ಕಾಲೇಜುಗಳಲ್ಲಿ ಕಲಿಸುತ್ತೇವೆ."

ಸುಮಾರು ಕಾಲು ಶತಮಾನದ ಹಿಂದೆ-ನನ್ನ ಕಾದಂಬರಿ 'ಶಿಕಾರಿ' ಪ್ರಕಟವಾಗಿದ್ದ ಹೊಸತರಲ್ಲಿ ಕಿವಿಯ ಮೇಲೆ ಬಿದ್ದ ಈ ಚುಟುಕಾದ, ಮೇಲು ನೋಟಕ್ಕೆ ಮಾಮೂಲು ಅನ್ನಿಸುವ ಪರಿಚಯದ ಮಾತುಗಳನ್ನು ಆಡಿದವರು ನನ್ನ ಇನ್ನೊಬ್ಬ ಗೆಳೆಯರಾದ ಎಚ್.ಎಸ್. ರಾಘವೇಂದ್ರರಾವ್ ಅವರು.

ಆಗ ಬೆಳಗಿನ ೯ ಗಂಟೆಯಿರಬೇಕು. ಬೆಂಗಳೂರಿನಲ್ಲಿ ನಾನು ಇಳಕೊಂಡಿದ್ದ ಹೋಟೆಲ್ ರೂಮಿನ ಕದದ ಮೇಲೆ ಬಡಿದ ಸದ್ದು ಕೇಳಿಸಿ ಕದ ತೆರೆದಾಗ ಕಣ್ಣೆದುರು ಜೋಡಿಯಾಗಿಯೇ ಪ್ರಕಟಗೊಂಡಿದ್ದರು. ಒಬ್ಬರಿಗೊಬ್ಬರು ಹೊಂದಿಕೊಂಡು-ಕೈಯಲ್ಲಿ ಕೈಹಿಡಿದವರ ತರಹ-ಮುಗುಳ್ನಗುತ್ತ ಎದುರು ನಿಂತವರು ಮನಸ್ಸಿನಲ್ಲಿ ಮೂಡಿಸಿದ ಪ್ರತಿಮೆ ಇಂದಿಗೂ ಮಾಸಿಲ್ಲ. ಮುಂದೆ ನಡೆದ ಎಲ್ಲ ಮುಖಾಮುಖಿಗಳಿಗೆ ಈ ಮೊದಲ ಭೇಟಿ ಆದ್ಯಪ್ರತಿಮೆಯಾದಂತಿತ್ತು; ನನ್ನನ್ನು ಸಂಧಿಸಿದ ಪ್ರತಿಸಾರೆ ಇಬ್ಬರೂ ಜೊತೆಯಾಗಿ- 'ರಾಘು-ರಾಜು' ಆಗಿ ಪ್ರಕಟಗೊಂಡಿದ್ದರು. ಒಬ್ಬರೇ ಬಂದ ಸಂದರ್ಭಗಳು ಇಲ್ಲವೇ ಇಲ್ಲ ಎನ್ನುವ ಮಟ್ಟಿಗೆ ವಿರಳವಾದುವು! ನಾನು ಪ್ರಬಂಧ ಮಂಡಿಸಿದ ವಿಚಾರ ಸಂಕಿರಣಗಳಲ್ಲಿ, ಭಾಷಣ ಮಾಡಿದ ಸಭೆಗಳಲ್ಲಿ



ಪ್ರಶಸ್ತಿ ಪ್ರದಾನ ಸಮಾರಂಭಗಳಲ್ಲಿ ತಪ್ಪದೇ ಕಣ್ಣಿಗೆ ಬೀಳುತ್ತಿದ್ದದ್ದು ಇಬ್ಬರ ಜೋಡಿಯಾಗಿಯೇ! ನನ್ನ ಬದುಕಿನ ಶುಭ ಅವಸರಗಳಲ್ಲಿ ನನಗೆ ಕಳುಹಿಸಿದ ಶುಭ ಸಂದೇಶಗಳಲ್ಲಿ ಇಬ್ಬರ ಹೆಸರುಗಳಲ್ಲಿ – ರಾಘು ಮತ್ತು ರಾಜು! ಬೆಂಗಳೂರಿಗೆ ಬಂದಾಗ ಊಟಕ್ಕೆ ಕರೆದರೆ ಊಟಕ್ಕೆ ಸೇರುವುದು ಒಂದೋ ಇವರ ಮನೆಯಲ್ಲಿ ಇಲ್ಲವೇ ಅವರ ಮನೆಯಲ್ಲಿ. ಅಡುಗೆ ಮಾತ್ರ ಎರಡೂ ಮನೆಗಳ ಅನ್ನಪೂರ್ಣೆಯರು ಜೊತೆಗೂಡಿ ಅಟ್ಟದ್ದು! ಗಂಡಂದಿರ ಸಾಹಿತ್ಯ ಸಾಹಿತಿಗಳ ಬಗೆಗಿನ ಉತ್ಸಾಹದಲ್ಲಿ ಮನೆಯ ಮಂದಿ ಪಾಲುಗೊಳ್ಳುತ್ತಿದ್ದದ್ದು ಭೋಜನಶಾಲೆಯ ಸಂಭ್ರಮದ ಮೂಲಕ. ಅಪರೂಪವಾಗಿ ಊಟಕ್ಕೆ ರೆಸ್ಟೋರಾಂಟಿಗೆ ಕರೆದೊಯ್ಯುವುದೂ ಉಂಟು. ಆಗಲೂ ಎರಡೂ ಮನೆಯವರು ಕೂಡಿ ಆತಿಥೇಯರು!

ಇವರಿಬ್ಬರೂ ಬೇರ್ಪಡಿಸಲಾಗದ ಜೋಡಿಯಾಗಿ ಕಾಣಿಸಿಕೊಂಡ ವಿದ್ಯಮಾನಗಳಿಗೆ ಚೇತೋಹಾರಿಯಾದ ಪ್ರತೀಕವಾಗಬಲ್ಲ ಒಂದು ಘಟನೆ ನನ್ನ ಕಾದಂಬರಿ 'ಪುರುಷೋತ್ತಮ' ಪ್ರಕಾಶನಕ್ಕೆ ಹೋಗುವ ಸಂದರ್ಭದಲ್ಲಿ ನಡೆಯಿತು. ಮುದ್ರಣಕ್ಕೆ ಹೋಗುವ ಮೊದಲು ಕಾದಂಬರಿಯ ಹಸ್ತಪ್ರತಿಯನ್ನು ಈ ಇಬ್ಬರೂ ಗೆಳೆಯರು ಓದಬೇಕು ಎನ್ನುವುದು ನನ್ನ ಬಲವಾದ ಇಚ್ಛೆಯಾಗಿತ್ತು. ಹಾಗೆಂದೇ ಹಸ್ತಪ್ರತಿ ಸಿದ್ಧವಾದ ಮೇಲೆ ಬೆಂಗಳೂರಿಗೆ ಹೋಗಲು ಸಿಕ್ಕ ಮೊದಲ ಅವಕಾಶದಲ್ಲೇ ಹಸ್ತಪ್ರತಿಯನ್ನು ಬೆಂಗಳೂರಿಗೆ ಒಯ್ದಿದ್ದೆ. ಗೆಳೆಯರಿಬ್ಬರೂ ನಾನು ಇಳಕೊಂಡಿದ್ದ ಹೊಟೆಲ್ಲಿಗೇ ಬಂದು ಹಸ್ತಪ್ರತಿಯನ್ನು ತೆಗೆದುಕೊಂಡು ಹೋಗಿದ್ದರು. ನನ್ನ ಅತ್ಯಂತ ಮಹತ್ವಾಕಾಂಕ್ಷೆಯ ಕೃತಿ. ಸೃಜನಶೀಲತೆಯ ಸರ್ವಸ್ವವನ್ನೂ ತೊಡಗಿಸಿ ಬರೆದಂತೆ ಬರೆದದ್ದು. ಈ 'ಇಬ್ಬರು' ಗೆಳೆಯರ ಪ್ರತಿಕ್ರಿಯೆ ತಿಳಿದ ಮೇಲೇ ಪ್ರಕಾಶಕರಿಗೆ ಕಳುಹಿಸುವುದೆಂದು ನಿಶ್ಚಯಿಸಿದ್ದೆ. ಅವರು ಓದಿ ಮುಗಿಸುವುದನ್ನು ತುಂಬಾ ನರ್ವಸ್ ಆಗಿ ಕಾಯುತ್ತಿದ್ದೆ. ಎಣಿಸಿದಂತೆ ನಾಲ್ಕನೆಯ ದಿನದ ಬೆಳಗಿಗೇ ರಾಘು ಅವರ ಫೋನ್ ಕರೆ ಬಂತು. ಆಲಿಸುವಾಗ ಎದೆ ಡವಗುಡುತ್ತಿತ್ತು. ಶ್ವಾಸ ಬಿಗಿ ಹಿಡಿದು ಗೆಳೆಯರ ಕೊನೆಯ ತೀರ್ಪಿಗಾಗಿ ಕಾದೆ. "ನಾನು ಹಾಗೂ ರಾಜು ಇನ್ನು ಅರ್ಧ ಗಂಟೆಯಲ್ಲಿ ಹೊಟೆಲ್ಲಿಗೇ ಬರುತ್ತೇವೆ. ಹಸ್ತಪ್ರತಿಯನ್ನು ಅಲ್ಲಿಗೆ ಬಂದಾಗಲೇ ಹಿಂತಿರುಗಿಸುತ್ತೇವೆ." ಮಾತನಾಡಿದವರು ನಡೆದು ಬಂದ ಪದ್ಧತಿಯಂತೆ ರಾಘು ಆಗಿದ್ದರು. ಕಾದಂಬರಿ ಓದಿದ ಬಗ್ಗೆ ಚಕಾರ ಶಬ್ದವಿಲ್ಲ! ನಾನೇ ಕಾದಂಬರಿ ಹೇಗೆ ಅನ್ನಿಸಿತು? ಎಂದು ಕೇಳಿರಬೇಕು. "ಅಲ್ಲಿ ಬಂದ ಮೇಲೇ ಹೇಳುತ್ತೇವೆ" ಎಂದರು. ರಾಜು ಹತ್ತಿರ ನಿಂತು ಗೆಳೆಯ ಹೇಳುತ್ತಿದ್ದುದನ್ನು ಕೇಳುತ್ತಿರಬೇಕು. ಒಪ್ಪಿಗೆ ಸೂಚಿಸಿ ಗೋಣು ಹಾಕುತ್ತಿರಬೇಕು ನಿಃಸಂಶಯ.

ಅವರಿಬ್ಬರೂ ಹೊಟೇಲಿಗೆ ಬರುವುದನ್ನೇ ಕಾದೆ. ಕಾಯುವುದರಲ್ಲಿ ಉತ್ಸುಕತೆಗಿಂತ ಆತಂಕ ಉತ್ಕಂಡೆಗಳೇ ಉತ್ಕಟವಾಗಿದ್ದವು. ಕೊನೆಗೊಮ್ಮೆ ಬಂದರು. ಬರುವಾಗ ಕೈಯಲ್ಲೊಂದು ಹೂವಿನ ಗುಚ್ಛ ತಂದಿದ್ದರು. ಇಬ್ಬರೂ ಜೊತೆಗೂಡಿ ಗುಚ್ಛವನ್ನು ನನ್ನ ಕೈಗೆ ಒಪ್ಪಿಸುತ್ತ, "ಹಾರ್ದಿಕ ಅಭಿನಂದನೆಗಳು! ಕಾದಂಬರಿ ತುಂಬಾ ಚೆನ್ನಾಗಿದೆ. 'ಶಿಕಾರಿ'ಯನ್ನು ಬಹಳ ಹಿಂದೆ ಬಿಟ್ಟಿದ್ದೀರಿ" ಆಡಿದವರು ಮತ್ತೆ ರಾಘವೇಂದ್ರರಾವ್‌ರೇ ಆಗಿದ್ದರು. ರಾಜು ಖುಷಿಯಿಂದ ಮುಗುಳ್ನಗುತ್ತ, "ಮಾತು ಮಾಡದ್ದು ಈ ಹೂವುಗಳು ಮಾಡುತ್ತವೆ" ಎಂದು ತೀರ ಕೆಳದನಿಯಲ್ಲಿ ಗುಣಿಗುಣಿಸಿದರು. ಇನ್ನೊಮ್ಮೆ ಸುಂದರವಾಗಿ ಮುಗುಳ್ನಕ್ಕರು. ಕಣ್ಣುಗಳಲ್ಲಿಯ ಹೊಳಪಿನ

ಮೂಲಕವೇ ಗೆಳೆಯ ವ್ಯಕ್ತಪಡಿಸಿದ ಅಭಿಪ್ರಾಯವನ್ನು ಅನುಮೋದಿಸಿದರು. ಇದು ಥೇಟು ನಮ್ಮ ಪ್ರೀತಿಯ ಗೆಳೆಯ ರಾಜು! ಹೆಚ್ಚು ಮಾತಾಡುವವರಲ್ಲ. ಕೈಯಲ್ಲಿ ಹಿಡಿದು ತಂದ ಹೂವಿನ ಗುಚ್ಛದ ಹಾಗೆ. ಆಡಿದ ಮಾತಿಗಿಂತ ಹೆಚ್ಚಾಗಿ ಮುಖಭಾವದಿಂದ, ಮುಖವನ್ನು ಬೆಳಗುವ ಮಂದಸ್ಮಿತದಿಂದ, 'ಹೌದು', 'ಹೌದಲ್ಲ', 'ಅದ್ಭುತ' ಮುಂತಾದ ಒಂಟಿ ಶಬ್ದಗಳ ಮೂಲಕ ಗೆಳೆಯನ ಮಾತಿಗೆ ಸಮ್ಮತಿ ಸೂಚಿಸುವ ಸುಂದರ ಪರಿ ಕೌತುಕಾಸ್ಪದವಾದದ್ದು. ಅನುಭವಿಸಿಯೇ ನಂಬುವಂಥದ್ದು.

ಈ ಅಪರೂಪ ಗೆಳೆಯರ ಜೋಡಿಯ ಅನ್ಯೋನ್ಯತೆಯನ್ನು ಸೆನೆಯುವಾಗ, ಇಬ್ಬರ ವ್ಯಕ್ತಿತ್ವದ ಸಾಧ್ಯತೆಗಳ ವಿಕಸನಕ್ಕೆ ಪರಸ್ಪರರು ಕಾರಣವಾಗುವ ಅದ್ಭುತವನ್ನು ಗಮನಿಸುವಾಗ, ಮಾಂಡೋಕೋಪನಿಷತ್ತಿನಲ್ಲಿ ವರ್ಣಿಸಲ್ಪಟ್ಟ– 'ಸದಾ ಜೊತೆಯಲ್ಲಿರುವ ಸಖರಾದ ಎರಡು ಸುಂದರ ಪಕ್ಷಿಗಳು' ನೆನಪಿಗೆ ಬರುತ್ತವೆ. ಒಂದೇ ವೃಕ್ಷದ ಟೊಂಗೆಯೊಂದನ್ನು ಆಶ್ರಯಿಸುವ ಇವೆರಡರಲ್ಲಿ ಒಂದು ಮರದ ಸವಿಯಾದ ಹಣ್ಣನ್ನು ತಿನ್ನುತ್ತದೆ. ಇನ್ನೊಂದು ತಿನ್ನದೇ ನೋಡುತ್ತದೆ. ಈ ಸಖ್ಯದ ಅರ್ಥ ವಿವರಿಸಲು ವೇದಾಂತದ ನೆರವು ಬೇಕಿಲ್ಲ. ರಾಘು–ರಾಜು ಈ ಈರ್ವರ ಗೆಳೆತನವೇ ಸಾಕು! ಒಂದೇ ಆತ್ಮದ ಎರಡು–ಭಿನ್ನವಾಗಿಯೂ ಸಾಮರಸ್ಯವುಳ್ಳ–ಮಗ್ಗುಲಗಳಂತಿರುವ ಈ ಆತ್ಮೀಯರ ಸ್ನೇಹ ಬೇರುಬಿಟ್ಟದ್ದು ಇಬ್ಬರಿಗೂ ಸಾಹಿತ್ಯದಲ್ಲಿರುವ ಆಸ್ಥೆಯಲ್ಲಿ. ಇಂಥ ಆಸ್ಥೆಗೆ ಪ್ರೇರಣೆಯಾಗುವ, ನೆರವಾಗುವ ಜೀವಂತ ಸಂಗತಿಗಳಲ್ಲಿ ಗೆಳೆತನಕ್ಕೆ ಮಹತ್ವದ ಸ್ಥಾನವಿದೆ. ನಮ್ಮ ರಾಜು ಹುಟ್ಟಾ ಗೆಳೆಯರು. ಗೆಳೆತನ–ಗೆಳೆಯನು ಆಗಿರುವುದು–ಇದುವೇ ಅವರ ವ್ಯಕ್ತಿತ್ವದ ಹೆಗ್ಗುರುತಾಗಿದೆ. ಹಾಗೆಂದೇ ನನ್ನ ಅನುಭವಕ್ಕೆ ಬಂದ ರಾಜು ಅವರ ಬಗ್ಗೆ ಬರೆಯುವ ರುಜುವಾದ ರೀತಿ ಗೆಳೆತನದ ಕ್ರಿಯಾಶೀಲತೆಯನ್ನು ಕುರಿತು ಬರೆಯುವುದೆಂದು ತಿಳಿದಿದ್ದೇನೆ. ಕ್ರಿಯೆಯ ಮೂಲಕ ಕರ್ತೃವನ್ನು ಹುಡುಕುವ ಸಣ್ಣ ಪ್ರಯತ್ನವಿದು.

ಎಲ್ಲ ಸೃಷ್ಟಿಕಾರ್ಯದ ಹಿಂದಿನ ಪ್ರೇರಕಶಕ್ತಿ ಜೀವೋತ್ಕರ್ಷಿಯಾದ ಪ್ರೀತಿ. ಪ್ರೀತಿಸುವ ಸಾಮರ್ಥ್ಯ ಹೊಂದುವುದು, ಸೃಜನಶೀಲನಾಗುವುದು, ಮನುಷ್ಯನಾಗಿ ಮಾಗುವುದು ಸಮಾನಾರ್ಥವುಳ್ಳ ಪ್ರಕ್ರಿಯೆಗಳಾಗಿವೆ. ಗೆಳೆತನ ಈ ಪ್ರಕ್ರಿಯೆಯದೇ ವ್ಯಕ್ತಸ್ವರೂಪಗಳಲ್ಲಿ ಒಂದಾಗಿದೆ. ಹಾಗೆಂದೇ ಅದು, ನಮ್ಮ ಜೀವನಕ್ಕೆ ಧನ್ಯತೆಯ ಭಾವವನ್ನು ತಂದು ಕೊಡುವ ಸಂಬಂಧಗಳಲ್ಲೇ ಶ್ರೇಷ್ಠವಾಗಿದೆ. ನಮ್ಮ ಬದುಕಿನಲ್ಲಿ ಗೆಳೆಯನಷ್ಟು ಮೌಲಿಕವಾದ ಸಂಗತಿ ಇನ್ನೊಂದಿಲ್ಲ ಎನ್ನುವುದು ನನ್ನ ಎಂದಿನ ನಂಬಿಕೆಯಾಗಿದೆ. ನಾವು ಸೃಷ್ಟಿಕಾರ್ಯದಲ್ಲಿ ತೊಡಗುವ ಮೂಲಕ ಅರಸುತ್ತಿದ್ದದ್ದು ಈ ಸ್ನೇಹಿತನನ್ನೇ–ಜೀವನದ ಜಾತ್ರೆಯ ದಟ್ಟಣೆಯಲ್ಲಿ ಕಳೆದು ಹೋದವನನ್ನು. ನನ್ನ ಬಾಲ್ಯದ ಗೆಳೆಯ ಪುರುಷೋತ್ತಮ ಮತ್ತೆ ಮತ್ತೆ ನನ್ನ ಕತೆಗಳಲ್ಲಿ ಬಂದದ್ದು, ಕೊನೆಯಲ್ಲಿ ನನ್ನ ದೊಡ್ಡ ಕಾದಂಬರಿ 'ಪುರುಷೋತ್ತಮ'ಕ್ಕೆ ನಾಯಕನಾದದ್ದು ಇದೇ ಕಾರಣಕ್ಕೆಂದು ತಿಳಿಯುತ್ತೇನೆ. ನನ್ನ ಬಾಲ್ಯದ ಗೆಳತಿ ಪಾರೂ ಕಲ್ಯಾಣಿಯಾಗಿ, ಜಾನಕಿ ಸರಸ್ವತಿಯರಾಗಿ ಕಾಣಿಸಿಕೊಂಡಿದ್ದಕ್ಕೆ ಕೂಡ ಇದೇ ಅರ್ಥವೇನೋ! ಅಷ್ಟೇಕೆ, ನನ್ನ ಇತ್ತೀಚಿನ ಕತೆ–'ಕುಮಟೆಗೆ ಬಂದಾ ಕಿಂದರಿಜೋಗಿ' ಯಲ್ಲಿ ಬರುವ ಅನ್ಯೋನ್ಯ ಗೆಳೆಯರಿಬ್ಬರ ಜೋಡಿ–ಲವ–ಕುಶರೋ, ಭರತ–ಶತ್ರುಘ್ನರೋ ಎಂದು ಜನ ಆಡಿಕೊಳ್ಳಲು ಕಾರಣರಾದ ವಿಷ್ಣು–ಗೋವಿಂದರ ಪಾತ್ರ ಸೃಷ್ಟಿಗೆ ಈ ನನ್ನ

ಗೆಳೆಯರಿಬ್ಬರೂ ಪ್ರೇರಣೆಯಾಗಿರುವ ಅನುಮಾನ ನನ್ನದು. ಅದೇನೇ ಇದ್ದರೂ ಇದೀಗ ಅಚ್ಚಿನ ಮನೆಗೆ ಹೋದ ನನ್ನ ಒಂಬತ್ತನೇ ಕಥಾ ಸಂಗ್ರಹ – 'ಪುಟ್ಟನ ಹೆಜ್ಜೆ ಕಾಣೋದಿಲ್ಲಾ!' ರಾಘು ಮತ್ತು ರಾಜು – ಈ ಅಪರೂಪ ಗೆಳೆಯರ ಜೋಡಿಗೆ ಮುಡಿಪಾದ ಸುಂದರ ಘಟನೆ ಕೇವಲ ಒಂದು ಆಕಸ್ಮಿಕವಾಗಿರಲಾರದು!

ರಾಜು ನನ್ನ ಭಾವನಾಲೋಕದಲ್ಲಿ ಬೇರು ಪಸರಿಸಿ ನಿಂತ ಉತ್ಸಾಹದಾಯಕ ಬಗೆ ನನ್ನಂತಹ – 'ಹೊರನಾಡ ಸಾಹಿತಿ'ಯೆಂದು ಕರೆಸಿಕೊಳ್ಳುವವನ ಮಾನಸಿಕತೆಯ ಮೇಲೆ ಮಾಡುವ ಪರಿಣಾಮವನ್ನು ಸುಲಭವಾಗಿ ಊಹಿಸಬಹುದು. 'ಹೊರನಾಡ ಸಾಹಿತಿ' ಎನ್ನುವ ಅಭಿಧಾನ ಕಿವಿಗೆ ಕೇಳಿಸುವಷ್ಟು ನಿರುಪದ್ರವಿಯಲ್ಲ ಎಂಬುದನ್ನು ಅದರ ಬಾಧೆಯನ್ನು ಅನುಭವಿಸಿದವನೇ ಬಲ್ಲ. 'ಕಣ್ಣಿಗೆ ದೂರವಾದದ್ದು ಮನಸ್ಸಿನಿಂದ ಹೊರಗೆ' ಎನ್ನುವ ನಾಣ್ನುಡಿಯ ಇನ್ನೊಂದು ರೂಪದಂತಿದ್ದ ಈ ಅಭಿಧಾನ ನಿರಪರಾಧಿಗೆ ವಿಧಿಸಿದ ಶಿಕ್ಷೆಯಾಗಿದೆ ಎನ್ನುವುದು ನನ್ನ ಸ್ವಂತ ಅನುಭವವಾಗಿದೆ. ಮುಂಬಯಿಯಂಥ ತಾಯ್ನಾಡಿನಿಂದ ದೂರವಾದ ಜಾಗದಲ್ಲಿ ತೀರ ಒಬ್ಬಂಟಿಯಾಗಿ – ನನ್ನಷ್ಟಕ್ಕೆ ನಾನು ಎಂಬಂತೆ – ಬರೆಯುವುದೇ ಅಭ್ಯಾಸವಾಗಿಬಿಟ್ಟ ನನಗೆ ನಾನು ತೊಡಗಿಸಿಕೊಂಡ ಸಾಹಿತ್ಯರಚನೆಯೇ ವ್ಯರ್ಥವಾಗಿ ತೋರಿದ್ದುಂಟು. ಬರೆಯುವ ಉಮೇದು ಇದ್ದಕ್ಕಿದ್ದಂತೆ ಒಸರಿ ಹೋಗಿ ಬರವಣಿಗೆ ನಿಂತು ಹೋದದ್ದುಂಟು. ಇಂಥ ಸಮಯದಲ್ಲಿ ನನ್ನ ರಕ್ಷೆಗೆ ಬಂದವರು ರಾಜು ಅಂಥ ಗೆಳೆಯರು. 'ನೀವು ಬರೆಯುವುದು ನಮಗೆ ಬೇಕು' ಎನ್ನುವ ಭಾವನೆಯನ್ನು ಹುಟ್ಟಿಸಿ ಬರವಣಿಗೆಯನ್ನು ನಿಲ್ಲಿಸದ ಹಾಗೆ ನೋಡಿಕೊಂಡ ಅಂತಃಕರುಣಿಗಳು!

ದಾಸರ ಪದವೊಂದನ್ನು ಮನಸ್ಸಿನಲ್ಲಿಟ್ಟುಕೊಂಡು ಹೇಳುವುದಾದರೆ ಗೆಳೆಯನನ್ನು ನಂಬಿ ಕೆಟ್ಟವರಿಲ್ಲ. ನಂಬಿದವನನ್ನು ಕೆಡಿಸುವವನು ಗೆಳೆಯನಾಗಿರುವುದು ಶಕ್ಯವೇ ಇಲ್ಲ. ಇನ್ನೊಬ್ಬನ ಹಿತದ ಬಗೆಗಿನ ಕಾಳಜಿ ನಿರ್ಮಲ ಅಂತಃಕರಣದ, ಸೌಹಾರ್ದ ಸಹೃದಯತೆಗಳ ಹೆಗ್ಗುರುತಾಗಿದೆ. ಸೃಷ್ಟಿಕಾರ್ಯಕ್ಕೆ ಅತ್ಯವಶ್ಯವಾದ ಸದ್ಭಾವನೆಯ ವಾತಾವರಣ ಇಂಥ ಸೌಹಾರ್ದದ ಸಾಧನೆಯಾಗಿದೆ. ಸಾಹಿತಿಯ ಬದುಕಿನಲ್ಲಿ ಸಾಮಾಜಿಕ ಮನ್ನಣೆಗೆ ಇರುವ ಸ್ಥಾನವನ್ನು ಅಲ್ಲಗಳೆಯದೆಯೇ ಹೇಳಬಹುದಾದ ಮಾತೆಂದರೆ ಅದೊಂದೇ ಅವನ ಸೃಷ್ಟಿಕಾರ್ಯಕ್ಕೆ ಪ್ರಚೋದನೆ ಆಗಲಾರದು. ಸೃಜನಶೀಲ ಕೃತಿಯೊಂದರ ಹುಟ್ಟು ಹಾಗೂ ಬೆಳವಣಿಗೆಗಳಲ್ಲಿ ಅಂತರಂಗದ ಎಷ್ಟೊಂದು ಅಲೆಗಳು; ಅನುಭವದ ಎಷ್ಟೊಂದು ಪದರುಗಳು; ಪ್ರತಿಭೆಯ ಎಷ್ಟೊಂದು ಹೊಳಪುಗಳು ತೊಡಗಿಕೊಳ್ಳುತ್ತವೆ–ಹೇಳುವುದು ಕಷ್ಟ. ನಾನು ಬರೆದ ಕತೆಯನ್ನು ಕೇಳುವಾಗ ಗೆಳೆಯನ ಕಣ್ಣುಗಳಲ್ಲಿ ಕಂಡಂತಾದ ಹೊಳಪು, ಶಬ್ದಗಳಲ್ಲಿ ಪ್ರತಿಕ್ರಿಯಿಸುವಾಗ ಅವನ ದನಿಯಲ್ಲಿ ಕೇಳಿಸಿದಂತಾದ ಭಾವನಾತ್ಮಕ ನಡುಕವು ಕೂಡ ಹೊಸ ಬರವಣಿಗೆಗೆ ಪ್ರೇರಣೆಯಾದ ಉದಾಹರಣೆಗಳು ನನ್ನಲ್ಲೇ ಇವೆ. ಶ್ರೀನಿವಾಸರಾಜು ನನ್ನ ಸಾಹಿತ್ಯಕ ಜೀವನದಲ್ಲಿ ಬಂದದ್ದು ಈ ರೀತಿಯಾಗಿ. ಬಹಳ ಆಡದೆಯೂ ನನ್ನ ಸೃಷ್ಟಿಕಾರ್ಯಕ್ಕೆ ಪ್ರೋತ್ಸಾಹವಿತ್ತ, ಉತ್ಸಾಹ ತುಂಬಿದ ಆಪ್ತನಾಗಿ, ಗೆಳೆಯನಾಗಿ.

ನಿಜವಾಗಿ ನೋಡಿದಲ್ಲಿ ನಾನು ಕಪಿಯಾಗಿದ್ದರೆ ಈ ಗೆಳೆಯನ ಬಗ್ಗೆ ಬರೆದದ್ದು ಗೆಳೆತನದ

ಮೇಲಿನ ಸುಂದರ ಕವಿತೆಯಾಗುತ್ತಿತ್ತೇನೋ! ಕವಿಯಲ್ಲವಾದ್ದರಿಂದ ನನ್ನ 'ಲಬಸಾ' ಶೈಲಿಯಲ್ಲಿ ಬರೆದ ಈ ಪುಟ್ಟ ಲೇಖನವನ್ನು ಗೆಳೆತನದ ಮೇಲಿನ ಚುಟುಕಾದ 'ಲಬಸಾ'ದಿಂದ ಮುಗಿಸುತ್ತೇನೆ:

ಹ್ಯಾಗಿದ್ದೀಯಾ? (ಕೆಲವು ಲಬಸಾಗಳು)

ಕೇವಲ
ಔಪಚಾರಿಕ ಸೌಜನ್ಯಕ್ಕಾಗಿ ಕೇಳಿದ್ದಲ್ಲ
'ಹ್ಯಾಗಿದ್ದೀಯಾ'? ಎನ್ನುವ ಚುಟುಕಾದ ಪ್ರಶ್ನೆ.
ಹಾಗೆ ನೋಡಿದರೆ ಇದು ಪ್ರಶ್ನೆಯೇ ಅಲ್ಲ.
ಜನ್ಮಾಂತರದ ಸಂಬಂಧಗಳ ಉಗಮ ಸ್ಥಳ!

'ಚೆನ್ನಾಗಿದ್ದೇನೆ' ಎಂಬುದು ಕೂಡ ಬರಿದೆ
ಉತ್ತರವಲ್ಲ ಯಾರೋ ಕೇಳಿದ ಪ್ರಶ್ನೆಗೆ!
ಪರಕೀಯನನ್ನೂ ತನ್ನವನಾಗಿಸುವ ದಿವ್ಯ ಮಂತ್ರವಿದು.
ಉದರದಲುಂಟು 'ನೀನು ಹ್ಯಾಗಿದ್ದೀಯಾ' ಎನ್ನುವ ಮರು ಪ್ರಶ್ನೆ.

ಹಾಗೆ ನೋಡಿದರೆ ಇದು ಮರು ಪ್ರಶ್ನೆಯೂ ಅಲ್ಲ
ಬಾ ಎಂದು ಗೆಳೆತನಕ್ಕೆ ಕರೆ ನೀಡುತ್ತ
ಕುಲುಕಾಟಕ್ಕೆ ಎದುರು ಚಾಚಿದ ಉತ್ಸಾಹದ ಕೈ!

ಸ್ವತಃ ತಾವೇ ಒಬ್ಬ ಉತ್ತಮ ಸಾಹಿತಿಯಾಗಿ, ಕುಶಲ ಸಂಘಟಕರಾಗಿ, ದಕ್ಷ ಸಂಪಾದಕ – ಪ್ರಕಾಶಕರಾಗಿ ಹೆಸರು ಮಾಡಿರುವಾಗಲೂ 'ಗೆಳೆಯ'ನಾಗಿರುವುದರಲ್ಲೇ ಹೆಚ್ಚಿನ ಸುಖ ಕಾಣುವಂತಿರುವ ನಮ್ಮೆಲ್ಲರ ಅಕ್ಕರೆಯ ರಾಜು ಗೆಳೆತನಕ್ಕೆ ಕರೆ ನೀಡುತ್ತ ನಮ್ಮ ಕಡೆಗೆ ಚಾಚಿದ ಕೈಯನ್ನು ಉತ್ಸಾಹದಿಂದ ಕುಲುಕುತ್ತ ಅವರಿಗೆ ಬದುಕಿನ ಎಲ್ಲ ಶುಭಗಳೂ ಒದಗಿ ಬರಲಿ, ಅವರ ವ್ಯಕ್ತಿತ್ವದ ಸೊಬಗಿಗೆ–ನಿಃಶ್ಯಬ್ದ ಕ್ರಿಯಾಶೀಲತೆಗೆ–ಆಕರ್ಷಿತರಾದ ಗೆಳೆಯರ ಗುಂಪು ವರ್ಧಿಸುತ್ತಲೇ ಇರಲಿ ಎಂದು ಅಂತಃಕರಣಪೂರ್ವಕವಾಗಿ ಹಾರೈಸುತ್ತೇನೆ.

❑

## ಕನ್ನಡ ಶಬ್ದ ಜಗತ್ತಿನ ನಿಶ್ಶಬ್ದ ಆರಾಧಕ

● *ಎಚ್.ಎಸ್. ವೆಂಕಟೇಶಮೂರ್ತಿ*

ಆತ್ಮೀಯರಾದ ಚಿ.ಶ್ರೀನಿವಾಸರಾಜು ಅವರನ್ನು ಮೂವತ್ತೈದು ವರ್ಷಗಳಿಂದ ನಿಕಟವಾಗಿ ಬಲ್ಲೆ. ಕನ್ನಡ ಕೈಂಕರ್ಯಕ್ಕೆ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿರುವ ಇವರು ಮಹಾಸ್ನೇಹ ಜೀವಿ. ತಮ್ಮ ಪ್ರತಿಯೊಂದು ಕಾರ್ಯದಲ್ಲೂ ಶಿಸ್ತು ಸದಭಿರುಚಿ ತೋರಿಸುತ್ತಾ ಬಂದಿರುವವರು. ಕ್ರೈಸ್ಟ್ ಕಾಲೇಜಿನಲ್ಲಿ ಕನ್ನಡ ಸಂಘ ವನ್ನು ಕಟ್ಟಿ ಬೆಳೆಸಿದ ಇವರು ತುಂಬ ಅರ್ಥಪೂರ್ಣವಾಗಿ ತಮ್ಮ ಗುರುಗಳಾದ ಜಿ.ಪಿ. ರಾಜರತ್ನಂ ಅವರ ಪರಂಪರೆಯನ್ನು ಮುಂದು ವರೆಸಿದವರು. ಕ್ರೈಸ್ಟ್ ಕಾಲೇಜ್ ಕನ್ನಡ ಸಂಘದ ಮೂಲಕ ಇವರು ಪುಸ್ತಕ ಪ್ರಕಾಶನಕ್ಕೆ ಒಂದು ಹೊಸ ಆಯಾಮವನ್ನೇ ದೊರಕಿಸಿದರು. ಉದ್ದಕ್ಕೂ ಗುಣಮಟ್ಟದ ಅನೇಕ ಗ್ರಂಥಗಳನ್ನು ಪ್ರಕಟಿಸಿದರು. ಪ್ರಕಾಶನವನ್ನು ಒಂದು ವ್ಯಾಪಾರಿ ಉದ್ಯಮವಾಗಿ ಸ್ವೀಕರಿಸಿದವರು ಪ್ರಕಟಿಸಲಾಗದ, ಆದರೆ ಕನ್ನಡ ಸಂಸ್ಕೃತಿಯಲ್ಲಿ ಬಹುಮುಖ್ಯ ವೆನಿಸುವಂಥ ಕೃತಿಗಳನ್ನು ಪುಂಖಾನುಪುಂಖವಾಗಿ ಪ್ರಕಟಿಸುವ ಮೂಲಕ ಪುಸ್ತಕ ಸಂಸ್ಕೃತಿಯನ್ನು ನಿಜವಾದ ಅರ್ಥದಲ್ಲಿ ಜೀವಂತ ವಾಗಿರಿಸಿದರು. ಈ ದೃಷ್ಟಿಯಿಂದ ಕ್ರೈಸ್ಟ್ ಕಾಲೇಜ್ ಕನ್ನಡ ಸಂಘ ಬೇರೆ ಕಾಲೇಜುಗಳ ಕನ್ನಡ ಸಂಘಗಳಿಗೆ ಬಹು ದೊಡ್ಡ ಆದರ್ಶ ಮತ್ತು ಮಾದರಿಯಾಗಿ ಪರಿಣಮಿಸಿತು. ನಾನು ಸೇಂಟ್ ಜೋಸೆಫ್ ಕಾಮರ್ಸ್ ಕಾಲೇಜಿನಲ್ಲಿ ಕನ್ನಡ ಸಂಘ ಕಟ್ಟಿ ಅಲ್ಪಸ್ವಲ್ಪ ಕೆಲಸ ಮಾಡಿದ್ದರೆ ಅದಕ್ಕೆ ಗೆಳೆಯ ರಾಜು ಅವರ ಪ್ರೇರಣೆ-ಸ್ಫೂರ್ತಿಯೇ ಕಾರಣವೆಂದು ಪ್ರಾಂಜಲ ಮನಸ್ಸಿನಿಂದ ಒಪ್ಪಿಕೊಳ್ಳುತ್ತೇನೆ.

ಪ್ರೊ. ರಾಜು ಅವರ ವ್ಯಕ್ತಿತ್ವದ ಇನ್ನೊಂದು ಮುಖ್ಯ ಅಂಶ ಅವರ ಶಿಷ್ಯ ಪ್ರೀತಿ. ವಿದ್ಯಾರ್ಥಿಗಳಲ್ಲಿ ಅವರಿಗಿರುವ ಅಪಾರವಾದ ಆಸಕ್ತಿ. ರಾಜು ಅವರ ಮೂಲಕ ಬೆಳಕಿಗೆ ಬಂದಿರುವ ತರುಣ ಪ್ರತಿಭೆಗಳು ಅನೇಕ. ವಿದ್ಯಾರ್ಥಿಗಳಿಗಾಗಿ ರಾಜ್ಯಮಟ್ಟದಲ್ಲಿ

ನಿರಂತರವಾಗಿ ಸಾಹಿತ್ಯಕ ಸ್ಪರ್ಧೆಗಳನ್ನು ನೆರವೇರಿಸುತ್ತಾ, ಬಹುಮಾನಿತ ಕವಿತೆ- ಲೇಖನಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸುತ್ತಾ ಮಾದರಿ ಎನ್ನುವಂಥ ಕೆಲಸ ಮಾಡಿದರು. ಗುರುಗಳು–ಗೆಳೆಯರು–ಶಿಷ್ಯರು–ಈ ಮೂರು ವಲಯಗಳನ್ನು ತಮ್ಮ ಸ್ನೇಹದ ತೆಕ್ಕೆಯಲ್ಲಿ ತಬ್ಬಿ ಹಿಡಿದ ರಾಜು ಪರಂಪರೆಯ ಘನತೆಯನ್ನು ಎತ್ತಿ ಹಿಡಿದವರು; ವರ್ತಮಾನದ ಪ್ರತಿಭೆಗೆ ಕಣ್ತೆರೆದವರು; ಭವಿಷ್ಯದ ಕನಸುಗಳಿಗೆ ಆಸರೆಯಾದವರು. ಹೀಗೆ ಮೂರು ಪೀಳಿಗೆಯನ್ನು ಅಕ್ಷರ ಸಂಸ್ಕೃತಿಯಲ್ಲಿ ಬಂಧಿಸಿದ ವ್ಯಕ್ತಿಗಳು ಕನ್ನಡದಲ್ಲಿ ಇಲ್ಲ ಎನ್ನಲಾರೆ. ಆದರೆ ಅಂಥವರ ಸಂಖ್ಯೆ ವಿರಳ ಎಂದು ಮಾತ್ರ ಖಂಡಿತವಾಗಿ ಹೇಳಬಲ್ಲೆ. ಅಂಥ ವಿರಳರಲ್ಲಿ ಗಣ್ಯರಾದವರು ರಾಜು.

ನಿಶ್ಶಬ್ದ ದುಡಿತ ರಾಜು ಅವರಿಗೆ ಪ್ರಿಯವಾದುದು. ಅವರು ಬೇರೆಯವರಿಗೆ ತುಂಬ ಸಮಯ ಕೊಟ್ಟಿದ್ದಾರೆ. ಸ್ವಂತಕ್ಕೆ ಸಮಯ ಉಳಿಸಿಕೊಂಡಿಲ್ಲ. ಅವರು ಇನ್ನೂ ಅನೇಕ ನಾಟಕ ಬರೆಯಬಹುದಿತ್ತು, ಕವಿತೆ ಬರೆಯಬಹುದಿತ್ತು, ವಿಮರ್ಶೆ ಬರೆಯಬಹುದಿತ್ತು. ಬರೆಯುವುದಕ್ಕಿಂತ ಬರೆಸುವುದರಲ್ಲಿ ಅವರ ಒಲವು ಹೆಚ್ಚು. ಮೈಸೂರು ಕಡೆಯ ಜಿ.ಬಿ. ಜೋಷಿ ಇವರು. ಮೃದುವಾಗಿ ತೋರಿದರೂ ದೃಢವಾದ ವ್ಯಕ್ತಿತ್ವ ಇವರದ್ದು. ತಾವು ನಂಬಿದ್ದನ್ನು ಎಂದಿಗೂ ಬಿಟ್ಟುಕೊಡದ ಜಿಗಟುತನ. ಈ ಅಂತರಂಗದ ಗಟ್ಟಿತನವೇ ಅವರ ಯಶಸ್ಸಿನ ಮೂಲ ಕಾರಣವೆಂಬುದು ನನ್ನ ನಂಬಿಕೆ. ತಾವು ಅತ್ಯುತ್ತಮ ಎಂದು ನಂಬಿದ್ದನ್ನು ಅತ್ಯುತ್ತಮ ರೀತಿಯಲ್ಲಿ ಪ್ರಕಟಿಸುತ್ತಾ, ಪ್ರಚುರಗೊಳಿಸುತ್ತಾ, ಅವರು ನಿಸ್ವಾರ್ಥದಿಂದ ಸಾಹಿತ್ಯಸಂಸ್ಕೃತಿಯ ಮುಖ್ಯ ಹುದ್ದರಿಯಾಗಿ ದುಡಿದಿದ್ದಾರೆ. ಅವರೊಂದಿಗೆ ನಡೆಸಬಹುದಾದ ವಾಗ್ವಾದಗಳು ಯಾವತ್ತೂ ವೈಯಕ್ತಿಕ ನೆಲೆಯವಾಗಿರುವುದಿಲ್ಲ. ತಾತ್ವಿಕ ನೆಲೆಯವಾಗಿರುತ್ತವೆ. ಹಾಗಾಗಿ ಅವರು ಮೂವತ್ತೈದು ವರ್ಷಗಳಿಂದಲೂ ನನಗೆ ಪ್ರಿಯರಾದ ಗೆಳೆಯರಾಗಿ ಉಳಿದಿದ್ದಾರೆ. ಅವರಂತೇ ಅವರ ಶ್ರೀಮತಿಯವರೂ ನನಗೂ ನನ್ನಾಕೆಗೂ ಪ್ರಿಯರಾದವರು. ರಾಜು ದಂಪತಿಗಳಿಗೆ ನನ್ನ ಪ್ರೀತಿಯ ಅಭಿನಂದನೆಗಳನ್ನು ಸಲ್ಲಿಸಲು ಈ ಸಂದರ್ಭವನ್ನು ನಾನು ಉಪಯೋಗಿಸಿಕೊಳ್ಳುತ್ತೇನೆ. ನನ್ನ 'ವಿಮುಕ್ತಿ' ಖಂಡಕಾವ್ಯವನ್ನು ರಾಜು ತಮ್ಮ ಕನ್ನಡ ಸಂಘದ ಮೂಲಕ ಪ್ರಕಟಿಸಿದ್ದನ್ನು ಈ ಸಂದರ್ಭದಲ್ಲಿ ಪ್ರೀತಿಯಿಂದ ನೆನೆಯುತ್ತೇನೆ.



# ಪ್ರೊ॥ ಚಿ. ಶ್ರೀನಿವಾಸರಾಜು ನಾನು ಕಂಡಂತೆ

● ವ್ಯಾಸರಾಯ ಬಲ್ಲಾಳ

ತುಸು ಗಂಭೀರವೆನಿಸುವ ಮುಖ ಮುದ್ರೆ, ನಗು ಕಡಿಮೆ, ಸಾಹಿತ್ಯಿಕ ವಿಚಾರಗಳ ಕುರಿತು ಮಾತು ಬಂದಾಗ ತುಂಬ ಲವಲವಿಕೆ, ನಾಟಕ ಪ್ರಕಾರದ ಕುರಿತು ವಿಶೇಷ ಆಸಕ್ತಿ, ಚಿಂತನಶೀಲ ಪ್ರಕೃತಿ, ಸಾಹಿತ್ಯ ಸೇವೆಯಂತೆಯೇ ಸಾಹಿತ್ಯದ ಪರಿಚಾರಕತನ ಕೂಡ, ಯಾವಾಗಲೂ ಬಗಲಲ್ಲೊಂದು ಪುಸ್ತಕ ತುಂಬಿದ ಚೀಲ – ಹೀಗಿರುವ ಪ್ರೊ. ಚಿ. ಶ್ರೀನಿವಾಸರಾಜು ಅವರನ್ನು ನಾನು ಮೊದಲು ಕಂಡದ್ದು ಮುಂಬಯಿಯಲ್ಲಿ. ಅವರಿಗೆ ಅತ್ಯಂತ ಆಪ್ತರಾಗಿರುವ ಡಾ. ಎಚ್.ಎಸ್. ರಾಘವೇಂದ್ರರಾಯರ ಜತೆಗೆ ಮುಂಬಯಿಯ ಕರ್ನಾಟಕ ಸಂಘ ಏರ್ಪಡಿಸಿದ್ದ ಒಂದು ಸಾಹಿತ್ಯಿಕ ಕಾರ್ಯಕ್ರಮಕ್ಕಾಗಿ ಬಂದವರು ಮುಂಬಯಿಯ ನಮ್ಮ ಮನೆಗೂ ಬಂದಿದ್ದರು. ಬೆಂಗಳೂರಿನ ಸಾಹಿತ್ಯಿಕ ವಲಯದಿಂದ ಆಗ ತುಂಬ ದೂರವಿದ್ದ ನನಗೆ ಅವರಿಬ್ಬರೊಡನೆ ನಡೆಸಿದ ಸಾಹಿತ್ಯ ಸಂವಾದ ತುಂಬ ಸಂತೋಷ ಕೊಟ್ಟ ಅನುಭವ.

೧೯೯೫ರ ಕೊನೆಗೆ ನಾನು ಬೆಂಗಳೂರಿಗೆ ಬಂದು ನೆಲೆಸುವಂತಾದಾಗ ಅವರ ಸಂಪರ್ಕವನ್ನು ಹೆಚ್ಚಿಸಿಕೊಳ್ಳಲು ಸಾಧ್ಯವಾದದ್ದು. ನಾನು ಮುಂಬಯಿಯಲ್ಲಿ ಇದ್ದಾಗ ಒಮ್ಮೆ ಮಾತ್ರ ಬೆಂಗಳೂರಿನ 'ನವ ಕರ್ನಾಟಕ ಪ್ರಕಾಶನ'ದ ವಿಶ್ವ ಕಥಾ ಕೋಶದ ಒಂದು ಕಂತಿನ ಪುಸ್ತಕಗಳ ಬಿಡುಗಡೆಯ ಕಾರ್ಯಕ್ರಮಕ್ಕಾಗಿ ಆಗಮಿಸಿದ್ದಾಗ ಅವರನ್ನು ಕಂಡಿದ್ದೆ. ಆದರೆ ಮಾತನಾಡುವ ಅವಕಾಶ ದೊರಕಿರಲಿಲ್ಲ. ನನ್ನ ನೆನಪಿನಂತೆ ಆಗ ಒಂದು ಸಾಹಿತ್ಯಿಕ ಪತ್ರಿಕೆಯಾಗಿ ತುಂಬ ಪ್ರಚಾರ ಪಡೆದಿದ್ದ 'ಅಂಕಣ' ಎಂಬ ಕಿರು ಪತ್ರಿಕೆಯ ಸಂಪಾದಕೀಯ ಜವಾಬ್ದಾರಿಯನ್ನು ಅವರು ನಿರ್ವಹಿಸುತ್ತಿದ್ದರೆಂದು ತಿಳಿದುದು ಅದೇ ಸಂದರ್ಭದಲ್ಲಿ. ಮುಂದೆ 'ಬುದ್ಧಿಜೀವಿಗಳ ಅಪ್ರಾಮಾಣಿಕತೆ'ಯ ಕುರಿತ ನನ್ನ ಒಂದು ಲೇಖನವನ್ನು ಅವರು, ಆ ಪತ್ರಿಕೆಯಲ್ಲಿ ಪ್ರಕಟಿಸಿದ್ದರು. ಮುಂದೆ ಡಾ.ಎಸ್.ಎಲ್. ಭೈರಪ್ಪ ಅವರ 'ಸಾಕ್ಷಿ'

ಕಾದಂಬರಿಯ ವಿಚಾರ ನನ್ನ ಅನಿಸಿಕೆಗಳನ್ನು ನಾನು ಬರೆದಿರುವುದಾಗಿ ತಿಳಿದ ಅವರು ಅದನ್ನು ಕಳುಹಿಸಿಕೊಡುವಂತೆ ಕೇಳಿ ತಮ್ಮ ಪತ್ರಿಕೆಯಲ್ಲಿ ಅದನ್ನು ಪ್ರಕಟಿಸಿದ್ದರು. ಆ ಲೇಖನ ಅವರ ಪತ್ರಿಕೆಯಲ್ಲಿ ಪ್ರಕಟವಾದಾಗ ಅದು ಡಾ. ಭೈರಪ್ಪನವರ ಗಮನಕ್ಕೂ ಬಂದು ಮುಂದೆ ಶಿವಮೊಗ್ಗ ಕರ್ನಾಟಕ ಸಂಘದ ಆಶ್ರಯದಲ್ಲಿ ನಡೆದ ಭೈರಪ್ಪನವರ 'ಪರ್ವ' ಮತ್ತು 'ಸಾಕ್ಷಿ' ಕಾದಂಬರಿಗಳ ಅಧ್ಯಯನ ಶಿಬಿರದಲ್ಲಿ 'ಸಾಕ್ಷಿ'ಯ ಕುರಿತು ನನ್ನ ಅನಿಸಿಕೆಗಳನ್ನು ಮಂಡಿಸಲು ಕರೆ ಬಂದಿತ್ತು. ಲೇಖನವನ್ನು ನಾನು ಅಲ್ಲಿ ಓದಿದಾಗ ಅಲ್ಲಿ ನೆರೆದಿದ್ದ ಸಭಿಕರಲ್ಲಿ ಒಬ್ಬರು ನನ್ನ ಬಳಿಗೆ ಬಂದು ತಾವು 'ಸಾಕ್ಷಿ'ಯನ್ನು ಮೊದಲು ಓದಿದಾಗ ಅದು ತುಸು ಅಶ್ಲೀಲ ಕಾದಂಬರಿಯೆಂದು ಶಂಕಿಸಿದವರು, ನನ್ನ ಅನಿಸಿಕೆಗಳನ್ನು ಕೇಳಿ ತನ್ನ ಅಭಿಪ್ರಾಯವನ್ನು ಬದಲಿಸಿಕೊಳ್ಳಬೇಕಾಯಿತು ಎಂದು ಹೇಳಿದ್ದರು. ನಾನು ಆ ಕಾದಂಬರಿಯ ವಿಚಾರ ನನ್ನ ಅನಿಸಿಕೆಗಳನ್ನು ಬರೆದಿದ್ದೆನೆಂದು ತಿಳಿದು ಅದನ್ನು ತರಿಸಿಕೊಂಡು ಮೊದಲು ಪ್ರಕಟಿಸಿದ ಕೀರ್ತಿ ಪ್ರೊ. ಶ್ರೀನಿವಾಸರಾಜು ಅವರಿಗೆ ಸಲ್ಲುತ್ತದೆ.

ನಾನು ಬೆಂಗಳೂರಿಗೆ ಬಂದು ನೆಲೆಸುವಂತಾದ ಮೇಲೆ ನಮ್ಮ ಸ್ನೇಹದ ಸಂಪರ್ಕ ಹೆಚ್ಚಾಗಿ ಅವರು ಬಂದಾಗಲೆಲ್ಲ ಅವರೊಡನೆ ಮಾತನಾಡಿದಾಗ ನನ್ನ ವಯಸ್ಸಿನಲ್ಲಿ ನಾನು ಅನುಭವಿಸಿದ ಸಂತೋಷ ನೆನಪಾಗುತ್ತಿದೆ. ನಾನಿರುವ ಬಡಾವಣೆಯ ನೆರೆಯ ಇಸ್ರೋ ಬಡಾವಣೆಯಲ್ಲಿ ವಾಸಿಸುತ್ತಿದ್ದ ದಿ. ಎ.ಎನ್ ಮೂರ್ತಿರಾಯರನ್ನು ಕಾಣಲೆಂದು ಬರುತ್ತಿದ್ದ ಪ್ರೊ. ಶ್ರೀನಿವಾಸರಾಜು ನಮ್ಮಲ್ಲಿಗೆ ಬಾರದೆ ಮರಳುತ್ತಿರಲಿಲ್ಲ. ನಾನು ಬೆಂಗಳೂರಿನಲ್ಲೇ ಇರುವವನೆಂದು, ತಾನು ದುಡಿಯುತ್ತಿದ್ದ ಕ್ರೈಸ್ಟ್ ಕಾಲೇಜಿನ ಒಂದು ಸಮಾರಂಭಕ್ಕೆ ನನ್ನನ್ನು ಆಹ್ವಾನಿಸಿ ನನ್ನಿಂದ ಭಾಷಣ ಮಾಡಿಸಿದವರು ಅವರು. ಸಮಯ ಯಾವುದೇ ಇರಲಿ, ಪಿಎಚ್.ಡಿ. ವ್ಯಾಸಂಗ ಮುಗಿಸಿದ ವಿದ್ಯಾರ್ಥಿಗಳು ತಮ್ಮ ಮಹಾಪ್ರಬಂಧಗಳನ್ನು ಕನ್ನಡದಲ್ಲೇ ಮಂಡಿಸಬೇಕು ಎಂದು ನಾನು ಬೇರೊಂದು ಕಡೆ ಮಾಡಿದ ಭಾಷಣದ ಸಾಲುಗಳನ್ನು ಕಾಲೇಜಿನ ಮ್ಯಾಗಸಿನ್‌ನಲ್ಲಿ ಎತ್ತಿಕೊಂಡು ಮುದ್ರಿಸಿದವರು ಅವರು. ಅವರ ಕಾಲೇಜಿನಲ್ಲೇ ನಾನು ಇತರ ಕೆಲವು ಗಣ್ಯ ಸಾಹಿತಿಗಳ ಪರಿಚಯ ಮಾಡಿಕೊಳ್ಳುವಂತಾದುದು.

ಕಳೆದ ಶತಮಾನದ ಕೊನೆಗೆ ನವ ಕರ್ನಾಟಕ ಪ್ರಕಾಶನದವರೂ, ಡಾ. ವಿಜಯಾ ಮತ್ತಿತರರು ಸೇರಿ ಏರ್ಪಡಿಸಿದ ಅಭಿನಂದನೆ ಹಾಗೂ 'ಅಕ್ಕರೆ' ಎಂಬ ಗ್ರಂಥ ಸಮರ್ಪಣೆಯ ಕಾರ್ಯಕ್ರಮಗಳಲ್ಲೂ ತುಂಬ ಓಡಾಡಿ ಸಹಕರಿಸಿದವರು. ಅವರು ಅಭಿನಂದನೆಯ ಗ್ರಂಥದಲ್ಲಿ ತಾನೇ ಒಂದು ಪ್ರಶ್ನಾವಳಿಯನ್ನು ತಯಾರಿಸಿ ನನ್ನ ಸಂದರ್ಶನ ವಿವರಗಳನ್ನು ಆ ಗ್ರಂಥದಲ್ಲಿ ಪ್ರಕಟಿಸಿದ್ದರು.

ದೇಶದ ಪ್ರತಿಷ್ಠಿತ ಕಾಲೇಜುಗಳಲ್ಲಿ ಒಂದಾದ ಕ್ರೈಸ್ಟ್ ಕಾಲೇಜಿನ ಕನ್ನಡ ವಿಭಾಗದ ಪ್ರಮುಖರಾಗಿ ಅವರು ನಡೆಸಿದ ಪಠ್ಯೇತರ ಚಟುವಟಿಕೆಗಳ ಬಗೆಗೆ ಬರೆಯಲು ಒಂದು ಲೇಖನ ಸಾಲದು. ಅವುಗಳಲ್ಲಿ ಮುಖ್ಯವಾದದ್ದು ಹಲವಾರು ಮೌಲಿಕ ಕನ್ನಡ ಗ್ರಂಥಗಳ ಪ್ರಕಟಣೆ. ಗ್ರಂಥಗಳ ಆಯ್ಕೆ ಹಾಗೂ ಪ್ರಕಟಣೆಯ ವಿಚಾರಗಳಲ್ಲಿ ಅವರು ತೋರಿರುವ ಸಾಹಿತ್ಯಿಕ ದೃಷ್ಟಿ ಹಾಗೂ ಅವುಗಳನ್ನು ಪ್ರಕಟಿಸಲು ಬೇಕಾದ ಸಂಘಟನೆಯ ಸಾಮರ್ಥ್ಯ.

ಕರ್ನಾಟಕದಲ್ಲಿ ಸಾಹಿತ್ಯದ ದೃಷ್ಟಿಯಿಂದಲೇ ಈ ರೀತಿ ಗ್ರಂಥಗಳನ್ನು ಪ್ರಕಟಿಸಿದ ಎರಡು ಸಂಸ್ಥೆಗಳು ನನಗೆ ನೆನಪಾಗುತ್ತವೆ. ಒಂದು ಪ್ರೊ.ಚಿ. ಶ್ರೀನಿವಾಸರಾಜು ನೇತೃತ್ವದ ಕ್ರೈಸ್ಟ್ ಕಾಲೇಜು ಕನ್ನಡ ಸಂಘ, ಇನ್ನೊಂದು ಪುತ್ತೂರು ಕರ್ನಾಟಕ ಸಂಘದ ಅಧ್ಯಕ್ಷರಾಗಿದ್ದ ಬೋಳಂತಕೋಡಿ ಈಶ್ವರ ಭಟ್ಟರ ಸಾಹಸ. ಪ್ರೊ. ಶ್ರೀನಿವಾಸರಾಜು ಅವರು ಕಾಲೇಜಿನಲ್ಲಿ ಸಾಹಿತ್ಯಿಕ ಸ್ಪರ್ಧೆಗಳನ್ನು ಏರ್ಪಡಿಸಿ ವಿದ್ಯಾರ್ಥಿಗಳ ಪ್ರತಿಭೆಯನ್ನು ಶೋಧಿಸಲು ಪ್ರಯತ್ನಿಸಿದವರು. ಹಿರಿ ಕಿರಿಯ ಸಾಹಿತಿಗಳ ಗ್ರಂಥ ಪ್ರಕಟಣೆಗೂ ನೆರವಾದವರು. ಅವರು ಸರಕಾರದ ಗ್ರಂಥಪ್ರಕಾಶನ ಪ್ರಾಧಿಕಾರದ ಅಧ್ಯಕ್ಷರಾಗುವರೆಂಬ ಸುದ್ದಿ ಒಮ್ಮೆ ಹರಡಿತ್ತು. ಸರಿಯಾದ ಆಯ್ಕೆ ಎಂದು ನಾನು ಯೋಚಿಸುತ್ತಿದ್ದೆ. ಆದರೆ ಹಾಗಾಗಲಿಲ್ಲ. ನನ್ನ ರಾಜಕೀಯ ಪ್ರಬಂಧಗಳ ಒಂದು ಕೃತಿಯ ಬಿಡುಗಡೆಯ ಸಂದರ್ಭದಲ್ಲಿ ಅವರು ಮಾತನಾಡಿದ್ದರು.

ದ್ವಿಚಕ್ರ ವಾಹನದಲ್ಲೆ ಓಡಾಡುತ್ತಿದ್ದ ಶ್ರೀನಿವಾಸರಾಜು ಅವರು ಒಂದು ಅಪಘಾತಕ್ಕೊಳಗಾಗಿ ಚೇತರಿಸಿಕೊಂಡ ಮೇಲೆ ಅವರ ಸಂಪರ್ಕ ಕಡಿಮೆಯಾಗಿದೆಯಾದರೂ ಸಾಹಿತ್ಯಿಕ ಸಭೆ ಸಮಾರಂಭಗಳಲ್ಲಿ ಅವರು ಸಿಗುತ್ತಿರುತ್ತಾರೆ. ಅವರ ಕುಟುಂಬ ಕಲೆ, ಸಾಹಿತ್ಯ, ಪತ್ರಿಕೋದ್ಯಮಗಳಲ್ಲಿ ಹೆಸರು ಪಡೆದ ಕುಟುಂಬ. ಅವರ ಮಗ ಸುಪ್ರಸಿದ್ಧ ಪತ್ರಕರ್ತ. ಅವರು ಮುಂಬಯಿಯಲ್ಲಿ ನನ್ನ ಪರಿಚಯವನ್ನು ಹೆಚ್ಚಿಸಿಕೊಂಡು ನಾನು ಬೆಂಗಳೂರಿಗೆ ಬಂದ ಮೇಲೆ ಮಾರ್ಗದರ್ಶನ ಮಾಡುತ್ತಿದ್ದ ಆತ್ಮೀಯ ಬಂಧು. ಅವರ ಸ್ನೇಹ ನೆನಪಿಗೆ ಸೋದರ ಲೇಖಕನ ಗೌರವದ ಅಭಿನಂದನೆಯ ಎರಡು ಮಾತು ಈ ಲೇಖನ.



# ನಮ್ಮ ಶ್ರೀನಿವಾಸರಾಜು

● *ಶೇಷನಾರಾಯಣ*

**ಬೆಂ**ಗಳೂರಿನ ಯಾವುದೇ ಸಾಂಸ್ಕೃತಿಕ ಸಮಾರಂಭ ನಗರದ ಯಾವುದೇ ಭಾಗದಲ್ಲಿ ನಡೆಯಲಿ, ಅಲ್ಲಿ ಖಂಡಿತ ಶ್ರೀನಿವಾಸರಾಜು ಇದ್ದೇ ಇರುತ್ತಾರೆ. ಭಾಗವಹಿಸಲು ಆಗದೇ ಇರುವಂಥ ವಿಶೇಷ ಸಂದರ್ಭಗಳಲ್ಲಿ ಮಾತ್ರ ಅವರು ಗೈರು ಹಾಜರು.

ಆದರೆ ಅವರು ಬಂದದ್ದು ಹೋದದ್ದು ಯಾರಿಗೂ ತಿಳಿಯುವುದಿಲ್ಲ; ಇರುವುದೂ ತಿಳಿಯುವುದಿಲ್ಲ– ಹಾಗೆ ಎಲ್ಲೋ ಒಂದು ಮೂಲೆಯಲ್ಲಿ ಹಿಂದಿನ ಸಾಲಿನಲ್ಲಿ ಅಥವಾ ಮೂರು ನಾಲ್ಕನೆಯ ಸಾಲಿನಲ್ಲಿ ತಮ್ಮ ಗೆಳೆಯರೊಡನೆ ಅವರು ಕುಳಿತಿರುತ್ತಾರೆ. ಅವರು ಕಾಲು ಮೇಲೆ ಕಾಲು ಹಾಕಿ ಕುಳಿತಿದ್ದನ್ನು ನಾನು ನೋಡಿರುವುದು ತುಂಬಾ ಕಡಿಮೆ. ಅವರು ಹಾಗೆ ಹಾಕಿದ್ದ ದಿನ ಖಂಡಿತ ಅವರ ಕಾಲುಗಳು ಜುಂ ಹಿಡಿದಿರಬೇಕು ಎಂದುಕೊಳ್ಳುತ್ತೇನೆ. ನಾವು ಅವರ ಕಣ್ಣಿಗೆ ಬಿದ್ದರೆ "ನಮಸ್ಕಾರ ಸಾರ್, ಚೆನ್ನಾಗಿದ್ದೀರ?" ಎನ್ನುತ್ತಾರೆ.

ನಾನು ಕನ್ನಡ ಸಾಹಿತ್ಯ ಪರಿಷತ್ತಿನ ಬಿ.ಎಂ. ಶ್ರೀ ಅಚ್ಚುಕೂಟದಲ್ಲಿ ನಾಲ್ಕು–ಐದು ವರುಷಗಳು ವ್ಯವಸ್ಥಾಪಕನಾಗಿದ್ದೆ. ಅದನ್ನು ಬಿಟ್ಟು ೧೯೭೧ರಲ್ಲಿ ನಾನೇ ಒಂದು ಸ್ವಂತ ಮುದ್ರಣ ಪ್ರಾರಂಭಿಸಿದೆ.

ಶ್ರೀನಿವಾಸರಾಜು ಆಗ ಕ್ರೈಸ್ಟ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದರು. ಅವರು ೧೯೬೮ರಲ್ಲಿ ಕನ್ನಡ ಅಧ್ಯಾಪಕನಾಗಿ ತಮ್ಮ ವೃತ್ತಿಜೀವನವನ್ನು ಪ್ರಾರಂಭಿಸಿದರು. ಆಗಲೇ ಮೂರು ವರುಷಗಳಲ್ಲಿಯೇ ೧೯೭೧ರ ಕೊನೆಯ ದಿನಗಳಲ್ಲೋ ಅಥವಾ ೭೨ರ ಪ್ರಾರಂಭದ ದಿನಗಳಲ್ಲೋ ನಮ್ಮ ಮುದ್ರಣ ಮನೆಗೆ ಬಂದರು. ವಾಡಿಕೆಯಾಗಿ ಬರುವ ಗಿರಾಕಿಗಳಲ್ಲಿ ಒಬ್ಬರು ಎಂದುಕೊಂಡಿದ್ದೆ. ತಮ್ಮ ಪರಿಚಯ ಹೇಳಿಕೊಂಡರು.

೧೯೭೨ರಲ್ಲಿ ಶ್ರೀನಿವಾಸರಾಜು ಕ್ರೈಸ್ಟ್ ಕಾಲೇಜಿನಲ್ಲಿ ಕನ್ನಡ ಸಂಘವನ್ನು ಪ್ರಾರಂಭಿಸಿದರು. ಯಾವ ರಾಹುಕಾಲದಲ್ಲಿ

ಪ್ರಾರಂಭಿಸಿದರೋ? ಅದರಿಂದಲೇ ಬೇಗ ಬೇಗ ಒಂದರ ಹಿಂದೆ ಮತ್ತೊಂದು ಪ್ರಕಟಣೆಗಳನ್ನು ಹೊರತರಲು ಸಾಧ್ಯವಾಯಿತು ಎಂದು ಕಾಣುತ್ತದೆ.

ಮೊದಲ ಪ್ರಕಟಣೆ ಕ.ವೆಂ.ರಾಜಗೋಪಾಲ ಅವರ 'ನದಿಯ ಮೇಲಣ ಗಾಳಿ' ಕವಿತಾ ಸಂಕಲನ. ಆ ಕಾಲದಲ್ಲಿ ಡಿಟಿಪಿ – ಆಫ್‌ಸೆಟ್ ಇತ್ಯಾದಿಗಳು ಯಾವುದೂ ಇರಲಿಲ್ಲ. ಟಿವಿಗಳು ಇರಲಿಲ್ಲ; ಚಾನಲ್‌ಗಳೂ ಇಲ್ಲ. ಈಗ ನಮ್ಮ ಮನೆಯ ಹೆಂಗಸರು ಎಲ್ಲರೂ ಬೊಂಬೆಗಳ ಮುಂದೆಯೇ ಕುಳಿತಿರುತ್ತಾರೆ. ಮೂವತ್ತು ನಲ್ವತ್ತು ವರುಷಗಳಲ್ಲಿ ಹೇಗೆ ತಾಂತ್ರಿಕ ಸೌಲಭ್ಯಗಳು ಮುಂದುವರಿದಿದೆ ಎನ್ನುವಾಗ, ಹಳೆಯ ಆ ದಿನಗಳನ್ನು ನೋಡಿದವರಿಗೆ ದಿಗ್ಭ್ರಮೆಯಾಗುತ್ತದೆ.

ಕೈಯಿಂದ ಅಚ್ಚಿನ ಮೊಳೆಗಳನ್ನು ಜೋಡಿಸಿ, ಕಂಪೋಸ್ ಮಾಡಿ, ಈ ರೀತಿ ಮುದ್ರಣ ಆ ಬಗೆಯಲ್ಲಿಯೇ 'ನದಿಯ ಮೇಲಣ ಗಾಳಿ' ಸುಂದರವಾಗಿ ಮುದ್ರಣ ಮುಗಿಯಿತು. ಇದರ ಮುದ್ರಣ ಮುಗಿಯುತ್ತ ಇದ್ದಂತೆ ಒಂದು ದಿನ ನಾನು ಖಾರವಾಗಿ ಹೇಳಿದೆ. "ರಾಜಗೋಪಾಲ ಬರದಿದ್ರೆ ನಾನು ಪುಸ್ತಕವನ್ನು ಬೈಂಡ್ ಮಾಡಿಸೋಲ್ಲ. ಹಾಗಂತ ಅವರಿಗೆ ಹೇಳಿ....."

ಕ.ವೆಂ. ರಾಜಗೋಪಾಲ ನನ್ನ ಹಳೆಯ ಸ್ನೇಹಿತರು, 'ಚಿತ್ರಗುಪ್ತ' ಪತ್ರಿಕೆಯ ಕಾಲದ ಸ್ನೇಹಿತರು. ಹಾಗಿದ್ದೂ ತಮ್ಮ ಪುಸ್ತಕ ಅಚ್ಚಾಗುತ್ತ ಇರುವಾಗ, ಒಂದು ದಿನವೂ ಅವರು ನಮ್ಮ ಪ್ರೆಸ್ಸಿಗೇ ಬಂದಿಲ್ಲ. ಎಲ್ಲವನ್ನೂ ಶ್ರೀನಿವಾಸ ರಾಜು ಅವರೊಬ್ಬರೇ ನೋಡಿಕೊಳ್ಳುತ್ತ ಇದ್ದಾರೆ. ಇದು ಸರಿಯೇ? ಇದು ನ್ಯಾಯವೇ? ಗೆಳೆಯನ ಪ್ರೆಸ್ಸಿಗೆ ಒಂದು ದಿನವಾದರೂ ಅವರು ಬರುವುದು ಬೇಡವೇ?

ಶ್ರೀನಿವಾಸರಾಜು ಹೋಗಿ ಹೇಳಿರಬೇಕು ಎಂದು ಕಾಣುತ್ತದೆ. "ಏನ್ರೀ, ಅದು ನಿಮ್ಮ ಗಲಾಟೆ?" ಎನ್ನುತ್ತ ಒಂದು ದಿನ ಕ.ವೆಂ. ರಾಜಗೋಪಾಲ ನಮ್ಮ ಪ್ರೆಸ್ಸಿಗೆ ಬಂದರು.

"ಇಷ್ಟು ದಿನ ಯಾಕೆ ಬರಲಿಲ್ಲ? ನಿಮ್ಮದೇ ಕೆಲಸ ನಡೆಯುತ್ತ ಇದೆ" ಎಂದು ನಾನು ಅವರಿಗೆ ದಬಾಯಿಸಿದೆ.

ಈ ಕೃತಿಯ ಬಿಡುಗಡೆಯನ್ನು ಎಂ.ಪಿ.ಎಲ್. ಶಾಸ್ತ್ರಿಗಳು ನೆರವೇರಿಸಿದರು.

ಶ್ರೀನಿವಾಸರಾಜು ಆ ನಂತರ 'ಕ್ರಿಸ್ತಾಂಜಲಿ' ಎನ್ನುವ ಅಮೂಲ್ಯ ಕೃತಿಯನ್ನು ಹೊರತಂದರು. ಇದು ಸಹ ಕವಿತೆಗಳ ಸಂಕಲನವೇ. ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಪ್ರಕಟಣೆಗಳು ಕವಿತೆಗಳಿಂದಲೇ ಪ್ರಾರಂಭ. ಮಾರಾಟವಾಗುವ ಕಥೆ ಕಾದಂಬರಿಗಳಿಂದ ಅಲ್ಲ.

ಇದು ಏಸು ಕ್ರಿಸ್ತನ ಮೇಲೆ ೩೦–೩೭ ಕವಿಗಳು ರಚಿಸಿದ ಕವಿತಾ ಸಂಕಲನ. ಕುವೆಂಪು, ಬೇಂದ್ರೆ, ಗೋವಿಂದ ಪೈ, ವಿಸೀ, ಗೋಕಾಕ, ಎಂವಿಸೀ, ಕಣವಿ, ಜಿಎಸ್‌ಎಸ್, ಎಕ್ಕುಂಡಿ, ನಿಸಾರ್–ಮುಂತಾದವರು ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಕಡೆ ರಚಿಸಿ ಆಗಲೇ ಪ್ರಕಟವಾಗಿದ್ದು ಆಯ್ದು ಪೋಣಿಸಿದ ಮುತ್ತಿನ ಮಾಲೆ. ಅಮೂಲ್ಯ ಕೃತಿ. ನರಹಳ್ಳಿ ಬಾಲಸುಬ್ರಹ್ಮಣ್ಯ ಅವರೂ, ಈಗ 'ಪ್ರಜಾವಾಣಿ' ಸಾಪ್ತಾಹಿಕದ ಸಂಪಾದಕರಾಗಿರುವ ಲಕ್ಷ್ಮಣ ಕೊಡಸೆಯವರೂ ಇಬ್ಬರೂ ಸೇರಿ ಸಂಪಾದಿಸಿದ ಕೃತಿ.

ಈ ಕೃತಿಗೆ ರಾಜರತ್ನಂ ಅವರು ಮುನ್ನುಡಿಯನ್ನೂ ಮಾಸ್ತಿಯವರು ಬೆನ್ನುಡಿಯನ್ನೂ ಬರೆದಿದ್ದಾರೆ. ತಮ್ಮ ಮುನ್ನುಡಿಯಲ್ಲಿ ರಾಜರತ್ನಂರವರು "ಕ್ರಿಸ್ತಾಂಜಲಿ"ಯೊಳಗಿರುವ ಕವನಗಳೆಂಬ ಬಲ್ಬುಗಳ ವಾಟೇಜ್ ಬೇರೆಬೇರೆಯಾಗಿರುವುದು ಅನಿವಾರ್ಯವಾದರೂ ಅವೆಲ್ಲವುಗಳ ಒಳಗೆ ಹರಿಯುವುದು ಒಂದೇ ಕ್ರಿಸ್ತ ಕರೆಂಟು....." ಎಂದು ಸೊಗಸಾಗಿ ಮುನ್ನುಡಿಯನ್ನು ಬರೆದಿದ್ದಾರೆ. ಮಾಸ್ತಿಯವರು ಹೀಗೆಂದಿದ್ದಾರೆ. "ಕ್ರೈಸ್ತಗುರು ಲೋಕರ ಉದ್ಧಾರಕ್ಕಾಗಿ ಅವತರಿಸಿದ ದೈವಾಂಶ ಪುರುಷರ ಅಗ್ರಪಂಕ್ತಿಯಲ್ಲಿ ಒಂದು ಸ್ಥಾನಕ್ಕೆ ಅಧಿಕಾರಿ ಆದ ಒಬ್ಬ ಮಹಾ ಪುರುಷರು....."

ಕ್ರೈಸ್ಟ್ ಕಾಲೇಜು ಇರುವುದು ನಗರದ ಪೂರ್ವಭಾಗ. ಮಾಸ್ತಿಯವರ ಮನೆ ದಕ್ಷಿಣ. ರಾಜರತ್ನಂ ಮತ್ತು ಶ್ರೀನಿವಾಸರಾಜು ಮನೆಗಳು ಇರುವುದೋ ಉತ್ತರದ ಮಲ್ಲೇಶ್ವರ. ನಮ್ಮ ಪ್ರೆಸ್ ಇದ್ದುದು ನಗರದ ಮಧ್ಯಭಾಗ ಬಸವನಗುಡಿಯ ಸೌತ್ ಎಂಡ್ ರಸ್ತೆ. ಈಗಿನ ತೀ.ನಂ.ಶ್ರೀ ವೃತ್ತದ ಬಳಿ. ಅಲ್ಲಿಗೆ ಮೂರು ಮನೆಗಳಿಗೂ ಹೋಗಿದ್ದು ಬರಬೇಕಾದರೆ ಬೆಂಗಳೂರನ್ನು ಒಂದು ಪ್ರದಕ್ಷಿಣೆ ಮಾಡಿದ ಹಾಗಾಯಿತು. ಗುಡ್‌ಹೋಪ್ ಭೂಶಿರವನ್ನು ಸುತ್ತು ಹಾಕಿದ ಹಾಗೆ. ಹಾಗಾದ ಮೇಲೆ ಪುಸ್ತಕಗಳ ಪ್ರಕಟಣೆಗಾಗಿ ಶ್ರೀನಿವಾಸ ರಾಜು ಅವರು ಎಷ್ಟೆಲ್ಲ ದೇಹಶ್ರಮವನ್ನು ವಹಿಸುತ್ತ ಇದ್ದರು, ಎಷ್ಟು ಸುತ್ತಾಡುತ್ತ ಇದ್ದರು, ತಲೆ ಕೆಡಿಸಿಕೊಳ್ಳುತ್ತ ಇದ್ದರು ಎನ್ನುವುದನ್ನು ಯಾರೂ ಊಹಿಸಿಕೊಳ್ಳಬಹುದು.

ಇಲ್ಲಿ ಒಂದು ಅಪ್ಪಟ ಸತ್ಯವನ್ನು ಹೇಳಲೇಬೇಕು. "ಏನೇ ಅವರು ಮಾಡಿದರೂ ಒಳಬಾಗಿಲಿನಿಂದ ಮತಪ್ರಚಾರವೇ ಅವರ ಮುಖ್ಯ ಉದ್ದೇಶ" ಎಂದು ಗೂಬೆಯನ್ನು ಹಾರಿಬಿಡುವ ಮತಾಂಧರ ಮಾತುಗಳನ್ನು ನಾನು ಆಗಾಗ್ಗೆ ಕೇಳಿದ್ದೇನೆ; ಈಗಲೂ ಕೇಳುತ್ತ ಇದ್ದೇನೆ. ವ್ಯಾಪಾರ ಮೊದಲ ಉದ್ದೇಶ. ಆಮೇಲೆ ಮತಪ್ರಚಾರ. ಇವೆಲ್ಲವೂ ನಿಜವೇ ಆದರೆ ಅದರಲ್ಲಿ ಕೆಲವರು ಮಹನೀಯರು ನಾವು ಎಂದೂ ಮರೆಯದಂಥವರು ಕನ್ನಡ ನಾಡಿಗೂ ನುಡಿಗೂ ಎಂಥ ಸೇವೆಯನ್ನು ಮಾಡಿದ್ದಾರೆ ಎನ್ನುವಾಗ ಯಾರೂ ತುಟಿ ಪಿಟಿಕ್ ಪಟರ್ ಎನ್ನಲಾರರು. ಹೆಸರುಗಳನ್ನು ಹೇಳೋಣವೆ? ಕಿಟ್ಟೆಲ್ ರೈಸ್, ಕಬ್ಬನ್..... ಆ ಕಾಲದಲ್ಲಿಯೇ ಕಬ್ಬನ್ ಮಹಾಶಯ ಆಡಳಿತದಲ್ಲಿ ಕನ್ನಡವೇ ಇರಬೇಕು ಎಂದು ಅನುಷ್ಠಾನಕ್ಕೆ ತಂದಿದ್ದ. ಮದುವೆಯನ್ನೂ ಮಾಡಿಕೊಳ್ಳದೆ ಬ್ರಹ್ಮಚಾರಿಯಾಗಿಯೇ ಉಳಿದಿದ್ದ ಕನ್ನಡಕ್ಕಾಗಿ ದುಡಿದ ಈತ ಲಂಚ ಎನ್ನುವ ಎರಡು ಅಕ್ಷರ ಕಿವಿಗೆ ಬಿದ್ದರೆ ಸಾಕು ನಾಗರಹಾವಿನಂತೆ ಸೆಟೆದು ನಿಲ್ಲುತ್ತ ಇದ್ದ. ಈತನ ನೆನಪಿಗಾಗಿ ಇರುವುದೇ ಕಬ್ಬನ್ ಪಾರ್ಕ್.

ಬೆಂಗಳೂರಿನ ಯಾವ ದೊಡ್ಡ ಆಸ್ಪತ್ರೆಗೆ ಹೋದರೂ ಅಲ್ಲಿ ರೋಗಿಗಳಿಗೆ ಹಿತವಾಗಿ ಶ್ರದ್ಧೆಯಾಗಿ ಆರೈಕೆ ಮಾಡುವುದು ನೂರಕ್ಕೆ ಎಂಬತ್ತು ಜನರು ಬಿಳಿಯುಡುಗೆಯ ನರ್ಸ್ ಪೆಣ್ಮಣಿಗಳೇ ಕಾಣಸಿಗುತ್ತಾರೆ. ಶೈಕ್ಷಣಿಕ, ವೈದ್ಯಕೀಯ ಕ್ಷೇತ್ರಗಳಲ್ಲಿ ತುಂಬಾ ಜನ ಈ ಕ್ರೈಸ್ತ ಬಂಧುಗಳೇ ಇದನ್ನು ಯಾರೂ ಅಲ್ಲಗಳೆಯುವಂತಿಲ್ಲ.

ಶ್ರೀನಿವಾಸರಾಜು ಅವರ ಸಾಹಸಕ್ಕೆ, ಒಂದರ ನಂತರ ಮತ್ತೊಂದು ಪ್ರಕಟಣೆಯ ಯಶಸ್ಸಿಗೆ, ಆಗಿನ ಕ್ರೈಸ್ಟ್ ಕಾಲೇಜಿನ ಪ್ರಿನ್ಸಿಪಾಲರು ಆಡಳಿತ ವರ್ಗವೂ ಬೆಂಬಲ, ಸಹಕಾರ ನೀಡಿದ್ದೇ ಮುಖ್ಯಕಾರಣ. ಪ್ರಿನ್ಸಿಪಾಲರಾದ ರೆ.ಫಾ. ಮಾಣಿಗೈಲ್ಸ್ ಬೆನ್ನೆಲುಬಾಗಿ ನಿಂತರು. ಹೆಗಲಿಗೆ

ಹೆಗಲು ಕೊಟ್ಟರು. 'ಈತನಲ್ಲಿ ಸಾಮರ್ಥ್ಯವಿದೆ. ನಾವು ಪ್ರೋತ್ಸಾಹ ಕೊಟ್ಟರೆ ಎಂಥ ಕೆಲಸಗಳನ್ನೂ ಈತ ಮಾಡಬಲ್ಲ' ಎನ್ನುವ ಒಬ್ಬ ವ್ಯಕ್ತಿಯ ಆಳ ಅಗಲಗಳನ್ನು ಮಾಣಿಗೈಲ್ಸ್ ಚೆನ್ನಾಗಿ ತಿಳಿಯಬಲ್ಲ ಸಮರ್ಥದಲ್ಲಿ ಒಬ್ಬರಾಗಿದ್ದರು.

ಶ್ರೀನಿವಾಸರಾಜು ಒಂದು ದಿನ ಮಾಣಿಗೈಲ್ಸ್ ಅವರಿಗೂ ನನ್ನ ಪರಿಚಯ ಮಾಡಿಕೊಟ್ಟರು. ಮುಂದೆ ಕ್ರೈಸ್ಟ್ ಕಾಲೇಜಿನ ಸಮಗ್ರ ಮುದ್ರಣ ಕೆಲಸವೂ, ಬಿಲ್, ಅದು ಇದು ಇತ್ಯಾದಿ ನಮ್ಮ ಪ್ರೆಸ್ಸಿನಲ್ಲಿಯೇ ಆಗುವಂತಾಯಿತು. ಕೆಲವು ಸಲ ಸಣ್ಣ ಪುಟ್ಟ ಕೆಲಸಗಳು. ಆದರೆ ಶ್ರೀನಿವಾಸ ರಾಜುರವರೇ ಬಿಲ್ಲನ್ನು ಕೊಂಡೊಯ್ದು ಹಣವನ್ನೂ ತಂದುಕೊಡುತ್ತ ಇದ್ದರು. ಕಾಲೇಜಿಗೂ ನಮ್ಮ ಪ್ರೆಸ್ಸಿಗೂ ಬಹಳ ದೂರವಷ್ಟೆ. ಇಷ್ಟೆಲ್ಲ ಸಹಕಾರ ನೀಡುವ ಮಿತ್ರರಿದ್ದರೂ ನಮ್ಮ ಪ್ರೆಸ್ ಉಳಿಯಲಿಲ್ಲ. ದಿನದಿಂದ ದಿನಕ್ಕೆ ಸಾಲ ಹುತ್ತವಾಗಿ ಬೆಳೆಯಿತು. ೧೯೭೭ರವರೆಗೂ ಕುಂಟುತ್ತ ಹೆಜ್ಜೆ ಹಾಕಿದ ಈ ಕುದುರೆ ಆ ಬಳಿಕ ಒಂದು ದಿನ ಚುಪ್ ಎಂದು ಕೆಳಗೆ ಬಿದ್ದು ಸತ್ತೇ ಹೋಯಿತು. ಆ ವಿಚಾರ ಹಾಗಿರಲಿ.

ಬೆಂಗಳೂರಿನ ಯಾವ ಕನ್ನಡ ಸಂಘವೂ ಮಾಡದಷ್ಟು ಕೆಲಸವನ್ನು ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘ ಮಾಡಿತು ಅಥವಾ ಶ್ರೀನಿವಾಸರಾಜು ಮಾಡಿದರು. ಅವರಿಗೆ ಬೆಂಗಳೂರಿನ ಇಂಟರ್‌ಮೀಡಿಯೆಟ್ ಕಾಲೇಜ್ ಹಾಗೂ ಸೆಂಟ್ರಲ್‌ಕಾಲೇಜು ಕರ್ಣಾಟಕ ಸಂಘದಲ್ಲಿ ಕೆಲಸ ಮಾಡಿದ ಅನುಭವವೂ ಈಗ ನೆರವಿಗೆ ಬಂದಿತು. ದುಡಿದರು ದುಡಿದರು ದುಡಿದರು, ಹಗಲು ಇರುಳು ಎನ್ನದೆ ತಾವು ಹುಟ್ಟುಹಾಕಿದ ಸಂಸ್ಥೆಗಾಗಿ ಶ್ರೀನಿವಾಸರಾಜು ದುಡಿದೇ ದುಡಿದರು. ದುಡಿಮೆಯೇ ಕೈಲಾಸವಯ್ಯಾ ದುಡಿಮೆಗಾರನಿಗೆ ಮಾತ್ರ ಈ ಕಷ್ಟ ಸುಖಗಳ ಅರಿವು ಉಂಟಾಗುವುದು ಸಾಧ್ಯ. ದಂತಗೋಪುರದಲ್ಲಿ ಕುಳಿತವರಿಗೆ ಅಲ್ಲ. ತಾವು ಹೊತ್ತು ಹೆತ್ತ ಕೂಸಿನ ಬೆಳವಣಿಗೆಗೆ ಅವರು ಎಷ್ಟು ಶ್ರಮ ವಹಿಸಿದ್ದಾರೆ ಎಂದು ಊಹಿಸುವುದಕ್ಕೂ ಅಸಾಧ್ಯ. ಆ ರೀತಿ ಕೆಲಸ ಮಾಡಿದರು.

'ಕ್ರಿಸ್ತಾಂಜಲಿ' ಆದ ಮೇಲೆ ಕಿ.ರಂ. ನಾಗರಾಜ ಅವರ ಒಂದು ಸಣ್ಣಪುಸ್ತಕವೂ ಮೂರನೆಯದಾಗಿ ನಮ್ಮಲ್ಲಿ ಅಚ್ಚಾಯಿತು.

ಈ ಪುಸ್ತಕಗಳನ್ನು ಒಂದರ ಮೇಲೊಂದು ಪ್ರಕಟಿಸಿದ ಮೇಲೆ ಇವುಗಳ ಮಾರಾಟ ಹೇಗೆ ಆಯಿತು? ಹೇಗೆ ಮಾಡಿದರು? ಚಿದಂಬರ ರಹಸ್ಯ ಪ್ರಾಮಾಣಿಕತೆಯೇ ಈ ಗುಟ್ಟಿನ ರಹಸ್ಯ. ಸಾವಿರಾರು ಇಂಜಿನಿಯರುಗಳು ಭಾರತದಲ್ಲಿ ಇದ್ದರೂ ವಿಶ್ವೇಶ್ವರಯ್ಯನವರು ಮಾತ್ರ ಧ್ರುವ ನಕ್ಷತ್ರವಾಗಿದ್ದಾರೆ. ದುಡಿಮೆ ಮತ್ತು ಪ್ರಾಮಾಣಿಕತೆ ಇದ್ದರೆ ಎಂಥ ಕೆಲಸವನ್ನೂ ಸಾಧಿಬಹುದು ಎನ್ನುವುದಕ್ಕೆ ವಿಶ್ವೇಶ್ವರಯ್ಯನವರೇ ಸಾಕ್ಷಿ. ಆ ಸಾಲಿನಲ್ಲಿ ಬರುವವರು ಶ್ರೀನಿವಾಸರಾಜು. ಅವರ ಸಾಧನೆಗೆ ಇದುವೇ ಬಂಡವಾಳ.

ಅದು ಸರಿ. ಎಪ್ಪತ್ತು ಲಕ್ಷ ಜನಸಂಖ್ಯೆಯ, ನೂರೈವತ್ತು ಕೋಟಿಯ ಕ್ಷೀರಸಮುದ್ರದಲ್ಲಿ, ಎಷ್ಟು ಜನ ಪ್ರಾಮಾಣಿಕರು ನಮ್ಮಲ್ಲಿ ಇದ್ದಾರೆ? ಸಿಗುತ್ತಾರೆ? ಒಂದು ಎರಡು ಮೂರು– ಐದು ಜನ ಇದ್ದಾರೊ? ಹತ್ತು ಜನ ಸಿಗುತ್ತಾರೋ? ನಮ್ಮ ಬೆಂಗಳೂರು ನಗರದಲ್ಲಿ.

ಇಷ್ಟಂತೂ ನಿಜ. ಶ್ರೀನಿವಾಸರಾಜುವಿನ ಹೆಗಲ ಮೇಲೆ ಯಾವಾಗಲೂ ಒಂದು ಜೋಳಿಗೆ ಇದ್ದೇ ಇರುತ್ತಿತ್ತು. ಜೋಳಿಗೆಯ ತುಂಬಾ ಬಗೆಬಗೆಯ ಬಣ್ಣಬಣ್ಣದ ಮುಖಪುಟದ ಪುಸ್ತಕಗಳು.

ಅವು ಹೊರಗೆ ತಲೆಯಿಕ್ಕಿ ಇಣುಕುತ್ತ ಇದ್ದವು. ನಮ್ಮನ್ನು ಕೊಳ್ಳಿರಪ್ಪಾ ಮಾರಾಯ್ರಾ ಎನ್ನುತ್ತ ಅವು ಬೇಡಿಕೊಳ್ಳುತ್ತ ಉಹೂ ಚೀರಿಕೊಳ್ಳುತ್ತ ಇದ್ದುವು.

ಶ್ರೀನಿವಾಸರಾಜು ತಾವು ಹುಟ್ಟುಹಾಕಿದ ದಿನದಿಂದ ನಿವೃತ್ತರಾಗಿ ಕಾಲೇಜು ಕಟ್ಟಡದಿಂದ ಹೊರ ಬೀಳುವವರೆಗೆ ನೂರ ಎಂಬತ್ತು ಪ್ರಕಟಣೆಗಳನ್ನು ಹೊರತಂದಿದ್ದಾರೆ. ಊಹಿಸುವುದಕ್ಕೆ ಅಸಾಧ್ಯವಾದ ಸಂಗತಿ. ಆದರೆ ಈ ಸಾಹಸ ನೂರಕ್ಕೆ ನೂರರಷ್ಟು ಸತ್ಯ.

೨೦೦೦ರ ಇಸವಿಯಲ್ಲಿ ಶ್ರೀನಿವಾಸರಾಜು ತಮ್ಮ ಕಾಲೇಜಿನಿಂದ ನಿವೃತ್ತರಾದರು. ಆಗ ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘ "ಅಪ್ಪಾಜೀ, ನಮಗೆ ಇನ್ನು ಯಾರು ಗತಿ?" ಎಂದು ಕೂಗಿಕೊಂಡಿತು.

ಕೆಲಸಕ್ಕೆ ಸೇರಿದ ಮೂರು ವರುಷಗಳಲ್ಲಿಯೇ ಒಂದು ಪುಟ್ಟ ಕಂದಮ್ಮನಿಗೆ ತಂದೆಯಾಗಿ, ಮೂವತ್ತೆಂಟು ವರ್ಷಗಳ ದೀರ್ಘಕಾಲ ಅದನ್ನು ಮುನ್ನಡೆಸಿದ ಕೀರ್ತಿ, ಶ್ರೀನಿವಾಸರಾಜು ಅವರೊಬ್ಬರಿಗೇ ಸಲ್ಲಬೇಕು. ಬೆಂಗಳೂರು ನಗರದಲ್ಲಿ ಅಥವಾ ಕರ್ಣಾಟಕದಲ್ಲಿ ಯಾರು ಹೀಗೆ ಮಾಡಿದ್ದಾರೆ? ದುಡಿದಿದ್ದಾರೆ?

ನಾನು ನಮ್ಮ ಪ್ರೆಸ್ಸನ್ನು ಮುಚ್ಚಿ ನಾಲ್ಕು ವರುಷಗಳು ಮದರಾಸಿನಲ್ಲಿ ಉಳಿದಿದ್ದು, ಮತ್ತೆ ಬೆಂಗಳೂರಿಗೇ ಹಿಂದಿರುಗಿದ ಮೇಲೆ, ಒಂದು ದಿನ ನನ್ನನ್ನು ಖಂಡಿತ ಅವರ ಸಮಾರಂಭಕ್ಕೆ ಬರಬೇಕೆಂದು ಶ್ರೀನಿವಾಸರಾಜು ಒತ್ತಾಯಿಸಿದರು, ಕಾರಣ ಆಮೇಲಷ್ಟೇ ನನಗೆ ತಿಳಿದು ಬಂತು.

ಅವರು ಈಗ ಮಾಡಲು ಹೊರಟಿರುವುದು ನೂರನೆಯ ಪ್ರಕಟಣೆಯ ಸಮಾರಂಭ. ಡಾ.ಎಚ್. ನರಸಿಂಹಯ್ಯನವರಿಂದ ಪುಸ್ತಕ ಬಿಡುಗಡೆ. ಕೃತಿ : ಎಚ್.ಎಸ್ ರಾಘವೇಂದ್ರ ರಾವ್ ಅವರ 'ಹಾಡು ಹಾದಿಯ ತೋರಿತು'.

ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಮೊದಲ ಕೃತಿಯನ್ನು ಅಚ್ಚುಮಾಡಿದ ಮುದ್ರಕ ಎಂದು ನನ್ನನ್ನೂ ಕರೆಯಿಸಿದ್ದರು ಹೋಗಿದ್ದೆ. ನನಗೂ ಶಾಲು ಹೊದಿಸಿದರು. ಹೂಹಾರ ಹಾಕಿದರು.

ಆ ಹಾರದ ಪ್ರತಿಯೊಂದು ಹೂವೂ ಕೃತಜ್ಞತೆಯ ಸಂಕೇತಗಳಾಗಿದ್ದವು. ಈ ಕೃತಜ್ಞತೆಯೇ ಅವರ ಯಶಸ್ಸಿನ ಹಾದಿ.

ಅದು ಸರಿ. ಇಷ್ಟೆಲ್ಲ ಕೆಲಸ ಮಾಡಿರುವ ಒಬ್ಬ ಸಾಧಕನಿಗೆ, ಭಿಕ್ಷೆಯ ಪರಿಚಾರಕನಿಗೆ ಕನ್ನಡ ನಾಡು-ನುಡಿ-ಸರಕಾರ ಯಾವ ಬಗೆಯ ಗೌರವವನ್ನು ಸಲ್ಲಿಸಿದೆ? ಕನ್ನಡ ಜನ ಯಾವ ಬಗೆಯ ಕೃತಜ್ಞತೆಯನ್ನು ಸಲ್ಲಿಸಿದ್ದಾರೆ? ❑

# ಕನ್ನಡ ಪ್ರೀತಿಯ ಅಕ್ಷಯ ಪಾತ್ರೆ

● *ಬಿ.ಆರ್. ಲಕ್ಷ್ಮಣರಾವ್*

ಶ್ರೀನಿವಾಸರಾಜು ಜೊತೆ ನನ್ನ ಸ್ನೇಹ ನಲವತ್ತು ವರ್ಷಗಳಿಗೂ ಹಿಂದಿನದು. ೧೯೬೪ರಲ್ಲಿ ನಾನು ಬೆಂಗಳೂರಿನ ಸರ್ಕಾರಿ ಕಲಾ ಮತ್ತು ವಿಜ್ಞಾನ ಕಾಲೇಜಿನಲ್ಲಿ ಬಿ.ಎ. ಪದವಿಗಾಗಿ ಸೇರಿದಾಗ ರಾಜು ನನಗೆ ಸಹಪಾಠಿ. ನನಗಿಂತ ವಯಸ್ಸಿನಲ್ಲಿ ಕೊಂಚ ಹಿರಿಯನಾದರೂ ನಮ್ಮದು ಮೊದಲಿಂದ ಅತ್ಯಂತ ಸಲಿಗೆಯ ಏಕವಚನದ ಗೆಳೆತನ. ರಾಜು ಎಂದೇ ನಾನು ಅವನನ್ನು ಕರೆಯುತ್ತಿದ್ದುದು.

ನಾನು ಇಂಗ್ಲಿಷ್ ಮೇಜರ್ ವಿದ್ಯಾರ್ಥಿಯಾಗಿದ್ದೆ. ರಾಜೂದು ಕನ್ನಡ. ಕನ್ನಡ ವಿಭಾಗದೊಂದಿಗೆ ನನ್ನ ಸಂಪರ್ಕಕ್ಕೆ ರಾಜೂನೇ ಸೇತುವೆಯಾಗಿದ್ದ. ಸಾಹಿತ್ಯ ಪರಿಚಾರಿಕೆ ಅವನ ಸಹಜ ಪ್ರವೃತ್ತಿ ಅದು ಆಗಿನಿಂದಲೇ ಕಾರ್ಯೋನ್ಮುಖವಾಗಿತ್ತು. ಅದರಿಂದ ಲಾಭ ಪಡೆದು ಮುಂದೆ ಬಂದ ಅನೇಕರಲ್ಲಿ ನಾನೂ ಒಬ್ಬ. ೧೯೬೭ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯ ಒಂದು ಕವನ ಸ್ಪರ್ಧೆ ಏರ್ಪಡಿಸಿತ್ತು. ಈ ವಿಷಯವನ್ನು ನನಗೆ ತಿಳಿಸಿದ ರಾಜು, ನನ್ನ 'ವಿಜ್ಞಾನ' ಎಂಬ ಕವನವನ್ನು ನನ್ನಿಂದ ಪಡೆದು, ತಾನೇ ಅದನ್ನು ಸ್ಪರ್ಧೆಗೆ ಕಳಿಸಿದ. ಅದಕ್ಕೆ ಪ್ರಥಮ ಬಹುಮಾನ ಬಂತು. ಇದನ್ನು ನನಗೆ ತಿಳಿಸಿ, ಸಂತೋಷದಿಂದ ಅಭಿನಂದಿಸಿ, ಕೈಕುಲುಕಿದವನೂ ಅವನೇ. ಕಾಲೇಜಿನ ಸಭಾಂಗಣದಲ್ಲಿ ನಡೆದ ಅದ್ದೂರಿಯ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಬಂದಿದ್ದ ನ್ಯಾಯಮೂರ್ತಿ ತುಕೋಳ್ ಅವರಿಂದ ಬಹುಮಾನ ಹಾಗೂ ಪ್ರಶಸ್ತಿ ಪತ್ರ ಸ್ವೀಕರಿಸಿದ ಹೆಮ್ಮೆ ನನ್ನದಾಯಿತು. ರಾಜು ಸ್ನೇಹಋಣ ನನಗೆ ಅಲ್ಲಿಂದ ಮೊದಲಾಯಿತು. ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘ ಹೊರತಂದ ಅಂದಿನ ಉದಯೋನ್ಮುಖ ಕವಿಗಳ 'ಚಿನ್ನದ ಗೆರೆ' ಎಂಬ ಕವನ ಸಂಕಲನದಲ್ಲಿ ನನ್ನ ಕೆಲವು ಕವನಗಳು ಪ್ರಕಟವಾಗಲೂ ಸಹ ಈ ರಾಜೂನೇ ಕಾರಣ.

೧೯೬೭ರಲ್ಲಿ ಬಿ.ಎ ಪದವಿ ಪಡೆದ ನಂತರ ನಾನು ನನ್ನೂರಾದ

ಚಿಂತಾಮಣಿಗೆ ಹಿಂತಿರುಗಿ ಇಲ್ಲೇ ಒಂದು ಖಾಸಗಿ ಪ್ರೌಢಶಾಲೆಯಲ್ಲಿ ಉಪಾಧ್ಯಾಯನಾಗಿ ಸೇರಿಕೊಂಡೆ. ರಾಜು ಕನ್ನಡ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ ಪಡೆದು, ಬೆಂಗಳೂರಿನ ಕ್ರೈಸ್ಟ್ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕನಾದ. ತನ್ನ ನೆಚ್ಚಿನ ಗುರುಗಳಾದ ಜಿ.ಪಿ. ರಾಜರತ್ನಂ ಅವರ ಹಾದಿಯಲ್ಲಿ ಮುನ್ನಡೆದು ಕನ್ನಡದ ಪರಿಚಾರಿಕೆಗೆ ತನ್ನನ್ನು ಸಮರ್ಪಿಸಿಕೊಂಡ. ತನ್ನ ಕಾಲೇಜಿನಲ್ಲಿ 'ಕನ್ನಡ ಸಂಘ' ಪ್ರಾರಂಭಿಸಿ, ಅನೇಕ ಉತ್ಕೃಷ್ಟ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಜೊತೆಗೆ, ಒಂದು ಪ್ರಕಾಶನ ಸಂಸ್ಥೆಯನ್ನೂ ಸಹ ಹುಟ್ಟುಹಾಕಿದ. ಮೌಲಿಕ ಸಾಹಿತ್ಯ ಕೃತಿಗಳನ್ನೂ ಹೊರತಂದ. ಊರೂರಿಗೆ ಅವುಗಳನ್ನು ಹೊತ್ತೊಯ್ದು ವಿತರಿಸಿದ. ಜೊತೆಗೆ ಪ್ರತಿವರ್ಷ ಉದಯೋನ್ಮುಖ ಕವಿಗಳಿಗೆ ಹಾಗೂ ಪ್ರಬಂಧಕಾರರಿಗೆ ರಾಜ್ಯಮಟ್ಟದ ಸ್ಪರ್ಧೆ ಏರ್ಪಡಿಸಿ, ಬಹುಮಾನ ವಿಜೇತರ ರಚನೆಗಳನ್ನು ಕಿರುಹೊತ್ತಿಗೆಗಳಾಗಿ ಪ್ರಕಟಿಸಿದ. ಇಂದು ಕನ್ನಡದ ಪ್ರತಿಷ್ಠಿತ ಕವಿಗಳಾಗಿರುವ ಅನೇಕರು ರಾಜು ಏರ್ಪಡಿಸಿದ ಸ್ಪರ್ಧೆಗಳಿಂದ ಮೊದಲಿಗೆ ಬೆಳಕಿಗೆ ಬಂದವರು ಎಂಬುವುದು ಉಲ್ಲೇಖನೀಯ ಸಂಗತಿ.

ರಾಜು ಸ್ವತಃ ಉತ್ತಮ ಕವಿ, ನಾಟಕಕಾರ ಹಾಗೂ ಚಿಂತಕ. ಆದರೆ ಅವನೆಂದೂ ತನ್ನನ್ನು ತಾನು promote ಮಾಡಿಕೊಳ್ಳುವುದರಲ್ಲಿ ಆಸಕ್ತಿ ವಹಿಸಲಿಲ್ಲ. ಪ್ರತಿಭಾವಂತರನ್ನು ಗುರುತಿಸಿ, ಅವರನ್ನು ಮೇಲ್ತರುವುದರಲ್ಲಿ ನಿರ್ವ್ಯಾಜ ಆಸಕ್ತಿ, ಉತ್ಸಾಹ ತೋರಿಸಿದ. ಕನ್ನಡ ನಾಡು ನುಡಿಗಳ ಉನ್ನತಿಯೇ ಅವನ ಜೀವನ ಧ್ಯೇಯವಾಯಿತು. ಈ ನಿಟ್ಟಿನಲ್ಲಿ ಅವನ ಸಾಧನೆ, ಸೇವೆ ಅನುಪಮ, ಶ್ಲಾಘನೀಯ.

ನಾನು ಚಿಂತಾಮಣಿಗೆ ಹಿಂತಿರುಗಿದ ನಂತರವೂ ರಾಜುವಿನೊಂದಿಗೆ ನನ್ನ ಸ್ನೇಹದ ಕೊಂಡಿ ಕಳಚಲಿಲ್ಲ. ಅದು ನಿರಂತರವಾಗಿ ಮುಂದುವರಿಯಿತು. ೧೯೭೭ರಲ್ಲಿ ನನ್ನ ಎರಡನೆಯ ಕವನ ಸಂಕಲನ 'ಟುವಟಾರ'ವನ್ನು ಅವನು ತಮ್ಮ 'ಕ್ರೈಸ್ಟ್ ಕಾಲೇಜ್ ಕನ್ನಡ ಸಂಘ'ದ ಮೂಲಕ ಪ್ರಕಟಿಸಿ ಉಪಕರಿಸಿದ. ಆ ಸಂಕಲನವನ್ನು ಶ್ರೀ ವಿ.ಕೃ. ಗೋಕಾಕ್ ಬಿಡುಗಡೆ ಮಾಡಿದರು. ಅವರನ್ನು ನಾನು ಮುಖತಃ ಭೇಟಿಯಾದದ್ದು ಅದೇ ಮೊದಲು ಮತ್ತು ಕೊನೆಯಬಾರಿ.

ರಾಜು ಈಗ ನಿವೃತ್ತ. ಆದರೆ ಅವನ ಕನ್ನಡದ ಕೈಂಕರ್ಯ ಎಂದಿನಂತೆ ಮುಂದುವರಿದೇ ಇದೆ. ಈಗಲೂ ಯಾವುದಾದರೂ ಸಭೆ ಸಮಾರಂಭಗಳಲ್ಲಿ ಮುಖತಃ ಭೇಟಿಯಾದಾಗಲೆಲ್ಲ ತನ್ನ ಬಗಲಚೀಲದಿಂದ ತಾನು ಪ್ರಕಟಿಸಿದ ಯಾರದ್ದಾದರೂ ಒಂದು ಮೌಲಿಕ ಕೃತಿಯನ್ನು ಹೊರತೆಗೆದು ಕೊಡುತ್ತಲೇ ಇರುತ್ತಾನೆ. ಅವನ ಬಗಲಚೀಲ ಅವನ ಕನ್ನಡ ಪ್ರೀತಿಯ ಒಂದು ಅಕ್ಷಯ ಪಾತ್ರೆ. ಅವನ ನಿಃಸ್ವಾರ್ಥ ಕನ್ನಡ ಸೇವೆಗೆ ನಾಡಿನಾದ್ಯಂತ ಅವನಿಗೆ ಸಾಕಷ್ಟು ಮನ್ನಣೆ, ಗೌರವ ದೊರೆತಿವೆ. ಇನ್ನಷ್ಟು ದೊರೆಯಬೇಕಿತ್ತು, ನಿಜ. ಆದರೆ ವಶೀಲಿಬಾಜಿಯಿಂದ ಹಾಗೂ ಸಾಹಿತ್ಯಿಕ ರಾಜಕೀಯದಿಂದ ಸದಾ ದೂರವಿರುವ ಇವನಂಥವನಿಗೆ ಅವು ದಕ್ಕದೇ ಹೋದದ್ದು ಸಹಜವೇ ಆಗಿದೆ. ಆದರೆ ಇದರಿಂದ ನನ್ನಂಥ ಗೆಳೆಯರಿಗೆ ನಿರಾಸೆ ಆಗಿರಬಹುದೇ ವಿನಹ ಅವನಿಗಲ್ಲ. ಏಕೆಂದರೆ, ನಾನು ಮೊದಲೇ ಹೇಳಿದಂತೆ, ಸಾಹಿತ್ಯ ಪರಿಚಾರಿಕೆ ಅವನ ಸಹಜ ಪ್ರವೃತ್ತಿ. ಇಂಥ ಮೆಲುಮಾತಿನ, ನಿಗರ್ವಿ ಸೌಜನ್ಯಮೂರ್ತಿಯಾದ ನನ್ನ ಆತ್ಮೀಯ ಹಳೆಯ ಗೆಳೆಯನಿಗೆ ನನ್ನ ಹೃತ್ಪೂರ್ವಕ ಧನ್ಯವಾದಗಳು ಹಾಗೂ ಶುಭಾಶಯಗಳು. ❑

# ಎಳೆಯ ಕವಿಗಳ ಕಿಂದರಿಜೋಗಿ

● ಎಸ್. ಮಂಜುನಾಥ

ನನ್ನ ಮೊದಲ ಕವನ ಸಂಕಲನ 'ಹಕ್ಕಿ ಪಲ್ಟಿ' ಪ್ರಕಟವಾಗಿದ್ದು ಕ್ರೈಸ್ಟ್ ಕಾಲೇಜಿನಿಂದ. ಕ್ರೈಸ್ಟ್ ಕಾಲೇಜಿನಿಂದ ಕವನ ಸಂಕಲನ ಪ್ರಕಟವಾಗುವುದೆಂದರೆ ಕಷ್ಟದ ವಿಷಯವಾಗಿರಲಿಲ್ಲ; ಸುಲಭ ಮತ್ತು ಸಹಜವಾದ ಸಂಗತಿಯಾಗಿತ್ತು. ಅಂದರೆ, ಅವು ಒಳ್ಳೆಯ ಕವಿತೆಯಾಗಿರಬೇಕಿತ್ತು ಅಷ್ಟೆ. ನನಗೆ ತಗಲಿದ್ದು ಶ್ರೀನಿವಾಸರಾಜು ಅವರಿಗೆ ಒಂದು ಪತ್ರ, ನಂತರ ಹಸ್ತಪ್ರತಿಯನ್ನು ಶ್ರೀನಿವಾಸರಾಜು ಅವರೊಂದಿಗೆ ಎಚ್.ಎಸ್. ರಾಘವೇಂದ್ರರಾವ್ ಮತ್ತು ಕೆ.ವಿ. ನಾರಾಯಣ ನೋಡಿದರು ಅನಿಸುತ್ತದೆ. ನನ್ನ ಸಂಕಲನ ಪ್ರಕಟಣೆಗೆ ಒಪ್ಪಿತವಾಯ್ತು. ಇಡೀ ಪ್ರಕ್ರಿಯೆಯನ್ನು ಉತ್ತಮ ಕವಿತೆಗೆ ಹೀಗೆ ಸುಲಭವಾಗಿ ಇರಿಸಿದವರೆಂದರೆ ಶ್ರೀನಿವಾಸರಾಜು. ಹೆಣ್ಣಿಗೆ ಮೊದಲ ಹೆರಿಗೆ ತವರುಮನೆಯಲ್ಲಾದಂತೆ ಅಷ್ಟು ಸರಳವಾಗಿ ನನ್ನಂತೆ ಅನೇಕರು ಸಂಕಲನಗಳ ಹೆರಿಗೆಗೆ ಚಿ.ಶ್ರೀ. ಸೂಲಗಿತ್ತಿಯಾಗಿ ಹೀಗೆ ಕಾರ್ಯನಿರ್ವಹಿಸಿದ್ದಾರೆ.

ತಾವೋನಲ್ಲಿ ಒಂದು ಕತೆಯಿದೆ. ಒಬ್ಬ ಯಜಮಾನನನ್ನು ಮನೆಯವರೆಲ್ಲರೂ ಗೌರವ ವಿಧೇಯತೆಯಿಂದ ಕಾಣುತ್ತಿರುತ್ತಾರೆ. ಹೇಗೆಂದರೆ ಅವರು ಹೊರಗಿಂದ ಬಂದರೆ ಅವನಿಗೆ ಕಾಲಿಗೆ ನೀರು ಕೊಡುವವರೊಬ್ಬರು, ನಂತರ ಕೈಕಾಲು ಒರೆಸಿಕೊಳ್ಳಲು ವಸ್ತ್ರ ಕೊಡುವವರೊಬ್ಬರು, ಆಮೇಲೆ ಅವರಿಗೆ ಬೀಸಣಿಗೆಯಿಂದ ಗಾಳಿ ಹಾಕುವವರೊಬ್ಬರು ಹೀಗೆ ಆ ಯಜಮಾನ ತಾವೋ ತಿಳಿದು ಬರಲು ಹೊರಟು ಹೋಗುತ್ತಾನೆ. ಎಷ್ಟೋ ದಿನಗಳ ಬಳಿಕ ತಾವೋ ಅರಿತು ಬಂದಾಗ, ಯಾರೂ ಅವನನ್ನು ಭಯ ಗೌರವದಿಂದ ಕಾಣುವುದಿಲ್ಲ. ಚಾಪೆ ಮೇಲೆ ಎಲ್ಲರೂ ಅವನಿಗೆ ಮುತ್ತಿಕೊಂಡು ಕೂರುತ್ತಾರೆ. ಅವನೊಂದಿಗೆ ಎಲ್ಲರೂ ಸಲಿಗೆ ಪ್ರೀತಿಯಿಂದ ಮಾತಾಡುತ್ತಾರೆ.

ಶ್ರೀನಿವಾಸರಾಜು ಅವರ ವ್ಯಕ್ತಿತ್ವದ ಸುಲಭತೆಯೆಂದರೆ ಹೊಸ ಹುಡುಗ ಕವಿಗಳಿಗೆ ಇಂಥದೇ ಆಗಿತ್ತು. ಹಿರಿಯರಿಗೂ ಅವರೊಂದಿಗೆ ಸಹಜ ಪ್ರೀತಿ ಸಾಧ್ಯವಾಗುತ್ತಿತ್ತು. ಕವಿತೆ ಬರೆಯುವ ಎಳೆಯನನ್ನೂ ಅವರು ಹಾಗೆ ಗೌರವ ಅಭಿಮಾನದಿಂದ ಕಂಡಿದ್ದಾರೆ. ಅವನ ಕವಿತೆಯ ಬಗ್ಗೆ ಹೆಚ್ಚು ವಿಮರ್ಶಕರಾಗದೇ, ಬರೇ ಅವನ ಸೃಜನಶೀಲತೆಯ ಬಗ್ಗೆ ಪ್ರೀತಿ ಆದರಗಳಿಂದ ನಡೆದುಕೊಂಡಿದ್ದಾರೆ. ಇದರಿಂದ ಕವಿಗೆ ಅಗತ್ಯವಾದ ಆತ್ಮಪ್ರತ್ಯಯವನ್ನು ಅವರು ಅತ್ಯಂತ ಸುಲಭವಾಗಿ ಚಿಗುರಿಸಿಬಿಟ್ಟಿದ್ದಾರೆ.

ಸಸಿ ನೆಟ್ಟು ಬೆಳೆಸಿದ ಹಾಗೇ ಅವರು ಹೊಸ ಕವಿಗಳನ್ನು ಗುರುತಿಸಿ ಬೆಳೆಸಿರುವುದು. ಹಾಗೆ ಬೆಳೆಸುವುದರಲ್ಲೇ ಸಂತೋಷ ಮತ್ತು ಸಾರ್ಥಕತೆಯನ್ನು ಅವರು ಕಂಡಿದ್ದಾರೆ. ಅದೊಂದು ಅಹಂಕಾರ ರಹಿತವಾದ ವಿಶೇಷ ಮನೋಧರ್ಮ.

ನನ್ನ 'ಹಕ್ಕಿ ಪಲ್ಟಿ' ಬಿಡುಗಡೆಯಾಗಿದ್ದು ಕುವೆಂಪು ಅವರ ಹಸ್ತದಿಂದ, ಬೇಂದ್ರೆ ಹುಟ್ಟಿದ ದಿನ. ಇದನ್ನು ಮೈಸೂರಿನಲ್ಲಿ ಆಗಿಸಿದ್ದು ಶ್ರೀನಿವಾಸರಾಜು. ಅವತ್ತು ನಾವು ಅನೇಕರು ಕುವೆಂಪು ಅವರ ಮುಂದೆ ಕವಿತೆ ಓದುವಂತೆ ಮಾಡಿದರು, ರಾಜು. ನನ್ನ ಎರಡನೆಯ ಸಂಕಲನ 'ಬಾಹುಬಲಿ'ಯನ್ನು ತಂದದ್ದು ಅವರೇ. ಆಗಲೂ, ಅಧಿಕೃತವಾದ ಸಭೆಯ ತರುವಾಯ ಕ್ರೈಸ್ಟ್ ಕಾಲೇಜಿನ ಹುಲ್ಲುಹಾಸಿನ ಮೇಲೆ ನಮ್ಮನ್ನೆಲ್ಲ ದುಂಡಗೆ ಕೂರಿಸಿ ಪದ್ಯ ಓದಿಸಿದ್ದರು ರಾಜು ಅವರು. ಯಾಕೋ ಆ ಸಮಾರಂಭಕ್ಕಿಂತಲು ನನಗೆ ರಾಜು ಅವರ ಅನಧಿಕೃತ ಅಧ್ಯಕ್ಷತೆಯ ಈ ಕವಿಗೋಷ್ಠಿಯೇ ಹೆಚ್ಚು ನೆನಪಲ್ಲಿದೆ. ಅಂದರೆ, ಕವಿತೆ ಓದಿಸಲು ಅವರು ಎಲ್ಲೆಂದರೆ ಅಲ್ಲಿ ಹೇಗೆಂದರೆ ಹಾಗೆ. ನಂತರ ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಕವಿತಾ ಸ್ಪರ್ಧೆಯಲ್ಲಿ ಬಹುಮಾನಿತರಾದ ಹುಡುಗರ ಹಿಂಡನ್ನು ಕಟ್ಟಿಕೊಂಡು ಶ್ರೀ ರಾಜು ಅವರು ಪು.ತಿ.ನ. ಮನೆಗೆ ನಡೆದರು. ರಾಜು ಅವರ ಹಿಂದೆ ಹೊರಟ ಆ ಕವಿಗುಂಪನ್ನು ನೆನೆದೇ ನನಗೆ ಅವರು ಎಳೆಕವಿಗಳ ಕಿಂದರಿಜೋಗಿ ಎನ್ನುವ ರೂಪಕ ಉಚಿತವೆನಿಸುತ್ತಿದೆ.

ಬರೀ ಒಳ್ಳೆಯ ಮನಸ್ಸಿದ್ದರೆ ಒಳ್ಳೆಯ ಕವಿತೆ ಬಂದುಬಿಡುವುದಿಲ್ಲ. ಆದರೆ ಒಳ್ಳೆಯ ಮನಸ್ಸಿಲ್ಲದೆಯೂ ಅದು ಬರಲಾರದು. ಯಾಕೆಂದರೆ ಕವಿತೆ ಬರಿಯ ಕಲಾಕೌಶಲ್ಯವಷ್ಟೇ ಅಲ್ಲ. ಅದು ನಮ್ಮ ಅಹಂಕಾರವನ್ನು ಪಳಗಿಸುವ ಸಾಧನವೂ ಹೌದು. ಹಾಗಾಗಿ ಯಾವುದೋ ಹಂತದಲ್ಲಿ ನಮ್ಮ ಸೃಜನಶೀಲ ಸಂವೇದನೆ ಒಳಿತಿನಿಂದಲೇ ನಿಯಂತ್ರಿಸಲ್ಪಡುತ್ತದೆ ಎಂದು ನನ್ನ ನಂಬಿಕೆ. ಶಿವೇತರ ಕ್ಷತಿ ಮತ್ತು ಶಿವದ ಸಂಗ್ರಹ ಇವು ಕವಿತೆಯಿಂದ ಆಗತಕ್ಕದ್ದು.

ಶ್ರೀನಿವಾಸರಾಜು ಅವರು ತಮ್ಮ ವ್ಯಕ್ತಿತ್ವದಿಂದ ಕಾವ್ಯಕ್ಕೆ ಇಂಥ ಮಾದರಿಯೂ ಬೆಂಬಲವೂ ಸದಾ ಆಗಿದ್ದಾರೆ. ಶ್ರೀನಿವಾಸರಾಜು ಅವರೊಂದಿಗೆ ಅಹಂಕಾರದ ಸಂಘರ್ಷಕ್ಕಿಳಿದ ಸಾಹಿತಿಯ ಸುದ್ದಿ ಈವರೆಗೆ ಕೇಳಿಬಂದಿಲ್ಲ. ಕನ್ನಡದಲ್ಲಿ ಇದೊಂದು ಅಪೂರ್ವದ ವಿದ್ಯಮಾನವೇ. ಇದು ಹೀಗಿರಲು ರಾಜು ಅವರ ಸ್ವಭಾವದಲ್ಲಿರುವ ವಿಶೇಷ ಸತ್ವವೇನು ಎಂಬುದನ್ನು ನಾವೆಲ್ಲರೂ ಧ್ಯಾನಿಸಬೇಕು ಮತ್ತು ಅದು ನಮ್ಮ ಸಾಂಸ್ಕೃತಿಕ ಪರಿಸರಕ್ಕೆ ಎಷ್ಟು ಹಿತಕಾರಿಯಾದದ್ದು ಎಂಬುದನ್ನೂ.

ನೆನೆದರೆ ಮನಸ್ಸು ಉಬ್ಬುವಂಥ ಹಿರಿಯ ಚೇತನ ಶ್ರೀ ಟಿ.ಎಸ್. ವೆಂಕಣ್ಣಯ್ಯನವರನ್ನು ಯಾರೋ ಒಮ್ಮೆ ಕೇಳಿದರಂತೆ: 'ನೀವು ಇನ್ನೂ ಹೆಚ್ಚು ಬರೆದು ಸಾಹಿತ್ಯ ಲೋಕದಲ್ಲಿ ಶಾಶ್ವತ ಹೆಸರು ಮಾಡಬಹುದಲ್ಲ' ಎಂದು. ಅದಕ್ಕೆ ವೆಂಕಣ್ಣಯ್ಯನವರು ಅರ್ಥಪೂರ್ಣವಾದ ಒಂದು ಮಾತು ಹೇಳಿದರಂತೆ : 'ಶಾಶ್ವತವೆನಿಸಿಕೊಳ್ಳುವುದಕ್ಕಿಂತಲು ಮುಖ್ಯವಾದ್ದು ಇದೆ ಎಂದು ನಾನು ತಿಳಿದಿದ್ದೇನೆ'. ಅವರು ಮತ್ತೊಂದು ಮಾತೂ ಹೇಳಿದರಂತೆ, ಹೀಗೆ: 'ನಾನು ದೊಡ್ಡ ಮೀನುಗಳನ್ನು ಬಲೆಹಾಕಿ ಹಿಡಿಯುವಂಥವನು (ಶ್ರೀ ಕುವೆಂಪುರವರನ್ನು ಸೂಚಿಸಿ)'. ಟಿ.ಎಸ್. ವೆಂಕಣ್ಣಯ್ಯನವರಂತೆ ಶ್ರೀ ರಾಜು ಅವರೂ ಕ್ರೈಸ್ಟ್ ಕಾಲೇಜು ಕನ್ನಡ ಸಂಘದಲ್ಲಿ ಕನ್ನಡದ ಹೊಸ ಕವಿಗಳಿಗಾಗಿ ಬಲೆ ಬೀಸಿ ಕೂತಿದ್ದಂತು ನಿಜ. ಅವರು ಹಿಡಿದ ಮೀನುಗಳಿಂದ ಅವರಿಗೆ ಸಮಧಾನವಾಗಿದೆಯೋ ಇಲ್ಲವೋ ಅವರನ್ನೇ ಕೇಳಬೇಕು!



## ಸಾಹಿತ್ಯಪರಿಚಾರಕ – ಚಿ.ಶ್ರೀನಿವಾಸರಾಜು

● ನೀಲತ್ತಹಳ್ಳಿ ಕಸ್ತೂರಿ

ಕಾಗೆ ಒಂದಗುಳ ಕಂಡಡೆ ಕರೆಯದೇ ತನ್ನ ಬಳಗವನ್ನೆಲ್ಲವ?
ಕೋಳಿ ಒಂದು ಕುಟುಕ ಕಂಡಡೆ ಕರೆಯದೇ ತನ್ನ ಕುಲವನ್ನೆಲ್ಲವ?

–ಇದು 'ಅಣ್ಣ'ನ ವಚನ. ಎಂದೂ ಹೇಳಿದ್ದು. ತಾ ಕಂಡ ಶಿವಪಥವ ಎಲ್ಲರಿಗೂ ತೋರಬೇಕು ಎಂಬ ಕಾಳಜಿ ಉಳ್ಳ ಸಂತನ ಮಾತು.

ಅದೇ ರೀತಿ ಭಗವದ್ ರಾಮಾನುಜರೂ ಮಾಡಿದರಂತೆ. ಮೋಕ್ಷಕ್ಕೆ ಮಾರ್ಗ ಎಂದು ತಮಗೆ ಗುರುಗಳಿಂದ ಬೋಧಿತವಾದ ಮಂತ್ರವನ್ನು, ಗುರುವಿನ ಆಜ್ಞೆ ಮೀರಿ, ಸಾರ್ವಜನಿಕರೆಲ್ಲರನ್ನೂ ಕರೆದು ಸಾರಿ ಹೇಳಿದರಂತೆ. ಗುರುವಿನ ಕೋಪ ತಮ್ಮ ಮೇಲೆ ಹರಿದಾಗ, "ಗುರುವೇ, ತಮ್ಮ ಆಜ್ಞೆ ಮೀರಿದ ತಪ್ಪಿಗೆ ನನಗೆ ಶಿಕ್ಷೆ ಆದರೂ ಚಿಂತೆಯಿಲ್ಲ. ನಾನು ಮಾಡಿದ್ದರಿಂದ ಇತರರಿಗೆ ಒಳ್ಳೆಯದು ಆಗುವುದಾದರೆ ಸಾಕು" ಎಂದರಂತೆ. ಗುರುವೇ ಶಿಷ್ಯನಿಗೆ ಮನ ಸೋತು ಶರಣಾದರಂತೆ.

ಇದು ಅಣ್ಣನ ಮಾರ್ಗ, ಇದು ರಾಮಾನುಜ ಮಾರ್ಗ, ಇದು ನಮ್ಮ ರಾಜರತ್ನಂ ಮಾರ್ಗ.

ಆಧ್ಯಾತ್ಮಿಕ ಸಾಧನೆಯ ಈ ವಿಷಯವನ್ನು ರಾಜರತ್ನಂ ಸಾಹಿತ್ಯದಲ್ಲಿ ಜಾರಿಗೆ ತಂದರು. ಇದಕ್ಕೆ ಸಾಹಿತ್ಯಪರಿಚಾರಿಕೆ ಎಂದು ಹೆಸರು ಕೊಟ್ಟರು. ತಮ್ಮನ್ನು 'ಸಾಹಿತ್ಯಪರಿಚಾರಕ' ಎಂದು ಕರೆದುಕೊಂಡರು. ಅದರಲ್ಲಿ ಹೆಮ್ಮೆಯನ್ನು ಪಟ್ಟರು, ಧನ್ಯತೆಯನ್ನು ಅನುಭವಿಸಿದರು.

"ಒಳಗಡೆ ಅಡುಗೆ ಸಿದ್ಧವಾಗಿದೆ. ಅದರ ಪರಿಮಳ ಸೂಸುತ್ತಿದೆ. ಹೊರಗೆ ಹಸಿದ ಜನ ಊಟಕ್ಕೆ ಕಾದು ಕುಳಿತಿದ್ದಾರೆ. ಎಲೆಯ ಮುಂದೆ ಸಿದ್ಧವಾದ ಅಡುಗೆಯನ್ನು ತಿನ್ನಲು ಸಿದ್ಧವಾಗಿ ಕಾದಿರುವ ಜನರಿಗೆ ಬಡಿಸಬೇಕು. ಅಕ್ಕರೆಯಿಂದ ಬಡಿಸಬೇಕು. ಆಗ ಮಾತ್ರ ಮಾಡಿದ ಅಡುಗೆ ಸಾರ್ಥಕ. ಹಸಿದ ಜೀವಗಳಿಗೆ ತೃಪ್ತಿ."

ಇದು ಸಾಹಿತ್ಯಪರಿಚಾರಿಕೆಗೆ ರಾಜರತ್ನಂ ಕೊಡುತ್ತಿದ್ದ ವಿವರಣೆ. ಎಲ್ಲ ಕಡೆ ಅವರು ಹೇಳುತ್ತಿದ್ದರು ಈ ಮಾತನ್ನು, ಅದನ್ನೇ ಮಾಡುತ್ತಿದ್ದರು ಕೂಡ. ಅದರಿಂದ ಏನೇ ಕಷ್ಟವಾಗಲಿ, ನಷ್ಟವಾಗಲಿ, ತಮ್ಮ ಅಮೂಲ್ಯ ಸಮಯ ಹಾಳಾಗಲಿ, ಅವರಿಗೆ ಚಿಂತೆಯಿಲ್ಲ. ಸಾಹಿತ್ಯ ಕ್ರಿಯೆಯಲ್ಲಿ ಈ ಪರಿಚಾರಿಕೆಯೂ ಮುಖ್ಯ ಅಂಗ. ಇದು ನಡೆದರೇ ಸಾಹಿತ್ಯಕ್ಕೆ ಸಾರ್ಥಕತೆ. ಸಾಮಾನ್ಯವಾಗಿ ಯಾರೂ ಮಾಡದ ಈ ಕೆಲಸವನ್ನು ನಾನು ಮಾಡುತ್ತೇನೆ. ಇದು ಅವರ ನಿಲುವು. ಈ ಸಾಹಿತ್ಯ ಪರಿಚಾರಿಕೆಯ ಡಿಂಡಿಮವನ್ನು ಅವರು ದೆಹಲಿಯಲ್ಲೂ ಬಾರಿಸಿದರು. ೧೯೭೪ರಲ್ಲಿ ೪೭ನೆಯ ಕನ್ನಡ ಸಾಹಿತ್ಯ ಸಮ್ಮೇಳನ ದೆಹಲಿಯಲ್ಲಿ ನಡೆಯಿತಲ್ಲ ಅದಕ್ಕೆ ಜಿ.ಪಿ. ರಾಜರತ್ನಂ ಅವರೇ ಅಧ್ಯಕ್ಷರು. ಅಧ್ಯಕ್ಷ ಭಾಷಣದಲ್ಲಿ ಸಾಹಿತ್ಯ ಪರಿಚಾರಿಕೆಯ ಪಲ್ಲವಿಯನ್ನು ಪಲುಕದೆ ಇರಲಿಲ್ಲ.

ರಾಜರತ್ನಂ ಅವರ ಸಾಹಿತ್ಯ ಪರಿಚಾರಿಕೆ ಹಲವು ಬಗೆಯದು. ತಾವು ಓದಿ ಮೆಚ್ಚಿಕೊಂಡ ಸಾಹಿತ್ಯಕೃತಿಗಳ ಬಗ್ಗೆ ಅವು ಯಾರದೇ ಆಗಿರಲಿ ಪ್ರಚಾರ ಮಾಡುವುದು, ಭಾಷಣ ಮಾಡುವುದು, ಪ್ರತಿಗಳನ್ನು ಮಾರಾಟ ಮಾಡುವುದು ಅವುಗಳ ಬಗ್ಗೆ ಜನರ ಮನಸೆಳೆಯುವುದು ಇತ್ಯಾದಿ.

ಎರಡನೆಯದು, ಮಿತ್ರರು ಅಥವಾ ಅದಕ್ಕಿಂತ ಮಿಗಿಲಾಗಿ ಶಿಷ್ಯರು, ಯುವಜನರನ್ನು ಬರೆವಣಿಗೆಗೆ ಪ್ರೇರೇಪಿಸುವುದು. ಅವರುಗಳು ಬರೆದುದನ್ನು ತಿದ್ದಿ, ಒಪ್ಪಮಾಡಿ ಪ್ರಕಟಿಸುವುದು. ಆ ಕೃತಿಗಳನ್ನು ಹೊತ್ತು ಮಾರುವುದು.

"ಹೀನ ಮನದವನಂತೆ ಕಂಡ ನಿಧಾನವನ್ನು ತಾನೊಬ್ಬನುಂಬನೆ ದಾನಿ? ನೀ ಕಂಡ ಶಿವಪಥವ ಮಾನವರಿಗರುಹು" ಅಲ್ಲಮ ಪ್ರಭುವಿನ ಈ ಮಾತು ರಾಜರತ್ನಂ ಅವರಿಗೆ ಪ್ರಿಯ, ದಾರಿದೀಪ, ಅವರ ಸಾಹಿತ್ಯದ ಕೆರಿಯರ್ (ಜೀವನ ಪಥ) ಬಹುಭಾಗವೆಲ್ಲ ಈ 'ಸಲ್ಲಲಿತಸನ್ಮಾರ್ಗ'ದಲ್ಲಿ ನಡೆದುದೇ.

ಬೆಂಗಳೂರಿನ ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದಲ್ಲಿ ರಾಜರತ್ನಂ ಅವರ ಈ ಪರಿಚಾರಿಕೆ ಹದಿನಾರು ವರ್ಷ ನಡೆಯಿತು. ೧೯೪೨ ರಿಂದ ೧೯೬೮ ರವರೆಗೆ. ಈ ಕಾರ್ಯಾವಧಿಯನ್ನು ಟಿ. ಶ್ರೀನಿವಾಸರಾಜು "ರತ್ನಪರ್ವ"ಎಂದು ಗುರುತಿಸಿದ್ದಾರೆ. ಹಿಂದೆ ಎ.ಆರ್. ಕೃಷ್ಣಶಾಸ್ತ್ರಿಗಳ ಕೈಯಲ್ಲಿ ಕರ್ನಾಟಕ ಸಂಘ ಇದ್ದಾಗ ನಡೆದದ್ದು "ಕೃಷ್ಣ"ಪರ್ವ ೧೯೩೯ರವರೆಗೆ.

ರಾಜರತ್ನಂ ಆಗಾಗ ನಮ್ಮ ಗಾಂಧೀ ಸಾಹಿತ್ಯ ಸಂಘಕ್ಕೆ ಬರುತ್ತಿದ್ದರು. "ನೋಡಿ, ಈಚೆಗೆ ನಾನು ಈ ಪುಸ್ತಕ ಓದಿದೆ. ಇದು ಜನಕ್ಕೆ ಅವಶ್ಯವಾಗಿ ತಿಳಿಯಬೇಕಾದ ಕೃತಿ. ಒಂದು ಕಾರ್ಯಕ್ರಮ ಹಾಕಿಕೊಳ್ಳೋಣ. ಇದರ ಬಗ್ಗೆ ಮಾತಾಡುತ್ತೇನೆ" ಎನ್ನುವರು. ಹೀಗೆ ಎಷ್ಟು ಕೃತಿಪರಿಚಯ ಮಾಡಿಕೊಡುತ್ತಿದ್ದರೋ! ಎ.ಆರ್. ಕೃಷ್ಣಶಾಸ್ತ್ರಿಗಳ 'ನಿರ್ಮಲ ಭಾರತಿ'ಯ ನೂರಾರು ಪುಸ್ತಕಗಳನ್ನು ತಂದು ಮಕ್ಕಳಿಗೆ ವಿತರಿಸುತ್ತಿದ್ದರು. ಇಂದು ಕನ್ನಡದಲ್ಲಿ ಪ್ರಮುಖರಾಗಿರುವ ಹಲವಾರು ಬರೆಹಗಾರರಿಗೆ ಪ್ರೇರಕರು ರಾಜರತ್ನಂ ಅವರೇ. ಸಾಹಿತ್ಯ ಲಾಲನೆ, ಪಾಲನೆ, ಪೋಷಣೆ, ಪ್ರಚಾರ ಇವೆಲ್ಲ ಸೇರಿ ಅವರ ಸಾಹಿತ್ಯ ಪರಿಚಾರಿಕೆ! ಹೊಸಗನ್ನಡದ ಒಂದು ಅಪೂರ್ವ ಅಂಶ!

ಇದೇನಿದು? ಯಾರ ಬಗ್ಗೆ ಹೇಳಹೊರಟು ಇನ್ನಾರ ಬಗ್ಗೆಯೊ ಹೇಳಿದ್ದಾಯಿತಲ್ಲ! – ಬೇಸರ ಬೇಡಿ.

ಸಾಹಿತ್ಯ ಪರಿಚಾರಿಕೆ ರಾಜರತ್ನಂ ಹಿಂದೆಯೆ ಹೊರಟುಹೋಯಿತೇ ಎಂದು ಚಿಂತಿತರಾದಾಗ, "ಇಲ್ಲ ಇನ್ನೂ ಇದ್ದೇನೆ"ಎಂಬ ಮೆಲುದನಿ ಹೊರಟಿತು. ಅದೇ ನಮ್ಮ ಚಿ. ಶ್ರೀನಿವಾಸರಾಜು ಅವರ ದನಿ.

ರಾಜರತ್ನಂ ಅವರ ಸಾಹಿತ್ಯ ಪರಿಚಾರಿಕೆ ಕುರಿತು ಈವರೆಗೆ ಏನೇನು ಹೇಳಿದೆನೊ, ಅವೆಲ್ಲ ಚಿ. ಶ್ರೀನಿವಾಸರಾಜು ಕುರಿತೂ ಹೇಳಿದಂತೆಯೆ. ಅಲ್ಲಿ ಸಲ್ಲುವುದು ಎಲ್ಲವೂ ಇಲ್ಲೂ ಸಲ್ಲುತ್ತದೆ!.

ಶ್ರೀನಿವಾಸರಾಜು ರಾಜರತ್ನಂ ಅವರ ನೇರ ಶಿಷ್ಯರಾಗಿದ್ದುದು ಕೆಲವು ತಿಂಗಳು ಅಷ್ಟೆ ಎಂ.ಎ. ತರಗತಿಯಲ್ಲಿ ಅಂತಿಮ ವರ್ಷದಲ್ಲಿ. ಆದರೆ ಅವರು 'ರತ್ನ'ರಿಗೆ ಬಾಳಶಿಷ್ಯರು, ರಾಜರತ್ನಂ ಮಾರ್ಗ ಎಂಬುದು ಇದ್ದರೆ, ಅದರಲ್ಲಿ ನಿಷ್ಠೆಯಿಂದ ನಡೆದ, ಈಗಲೂ ನಡೆಯುತ್ತಿರುವ ಏಕೈಕ ಪಥಿಕ ಶ್ರೀನಿವಾಸರಾಜು.

ರಾಜರತ್ನಂ ರಂಗ ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘ. ರಾಜು ಅವರದು ಕ್ರೈಸ್ಟ್ ಕಾಲೇಜು ಕನ್ನಡ ಸಂಘ. ಆ ಕಾಲೇಜು ಸೇರಿದಾಗ ರಾಜುಗೆ ಪೂರ್ವ ವಯಸ್ಸು ಅದೇ ಮೊದಲ ಅನುಭವ, ಪರಕೀಯ ಎನ್ನಿಸುವುದೊ ಎಂಬ ಶಂಕೆಯಿದ್ದ ಕ್ರೈಸ್ತ ಕಾಲೇಜು! ಹೊಸದಾಗಿ ಆರಂಭಿಸಬೇಕು. ರಾಜು ಯಾವುದಕ್ಕೂ ಅಂಜಲಿಲ್ಲ, ಅಳುಕಲಿಲ್ಲ. ಕನ್ನಡ ಸಂಘ ಕಟ್ಟಿದರು, ಬೆಳೆಸಿದರು. ಹಲವಾರು ಹೊಸ ಸಾಹಿತ್ಯ ಪೈರುಗಳನ್ನು ಬೆಳೆಸಿದರು. ಆ ಬೆಳವಣಿಗೆಯೊಂದಿಗೇ ತಾವೂ ಬೆಳೆಯುತ್ತ ಬಂದರು.

ಕ್ರೈಸ್ಟ್ ಕಾಲೇಜು ಸಂಘಕ್ಕೆ ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘವೇ ಮೇಲುಪಂಕ್ತಿ, ಸ್ಫೂರ್ತಿ. ರಾಜರತ್ನಂ ಗರಡಿಯಲ್ಲಿನ ತಾಲೀಮು ರಾಜು ಅವರಿಗೆ ಅಲ್ಪಕಾಲದ್ದೇ ಆಗಿದ್ದರೂ, ಘನಿಷ್ಠವಾಗಿತ್ತು, ಸಾರಭೂತವಾಗಿತ್ತು. ಅದೇ ಮೂಲ ಬಂಡವಾಳ. ಅದೇ ಮಾರ್ಗದಲ್ಲೆ ರಾಜು ಅವರ ಕೈಂಕರ್ಯವೂ ಸಾಗಿತು. ಯುವ ಬರಹಗಾರರಿಗೆ ಪ್ರೇರಣೆ, ಪ್ರೋತ್ಸಾಹ, ಭಾಷಣ, ಲೇಖನ, ಕವನ, ನಾಟಕ ರಚನೆಗಳಲ್ಲಿ ಮಾರ್ಗದರ್ಶನ, ಬರಹಗಳ ಪ್ರಕಟನೆಗೆ ಸನ್ನಾಹ. ಜೊತೆಜೊತೆಗೇ ಹಿರಿಯರ ಕೃತಿಗಳ ಪ್ರಕಟನೆ ಕೂಡ. ೧೯೭೫ರಲ್ಲಿ ಕಾಲೇಜು ಬೆಳ್ಳಿ ಹಬ್ಬದ ಸಂಭ್ರಮ ಕಾಣುವ ವೇಳೆಗೆ ಕನ್ನಡ ಸಂಘ ನೂರು ಪುಸ್ತಕಗಳನ್ನು ಪ್ರಕಟಿಸಿತ್ತು. ನೂರು ದೀಪಗಳನ್ನು ತೇಲಿಬಿಟ್ಟಿತ್ತು. ಪ್ರಕಟನೆಗಳ ವೈವಿಧ್ಯ ಬೆರಗುಗೊಳಸುವಂಥದು! ಕಾವ್ಯ, ನಾಟಕ, ವಿಮರ್ಶೆ, ಪ್ರಬಂಧ, ಅನುವಾದ, ವೈಚಾರಿಕ, ವಿಜ್ಞಾನ ! ವಿದ್ಯಾರ್ಥಿಗಳ ಬರೆಹಗಳೇ ಸುಮಾರು ೧೩. ಅತ್ಯಂತ ಹಿರಿಯ ಸಾಹಿತಿ ಎ.ಎನ್. ಮೂರ್ತಿರಾವ್ ಅವರ ಕೃತಿಯಿಂದ ಹಿಡಿದು, ಅತ್ಯಂತ ಕಿರಿಯ ಬರೆಹಗಾರರವರೆಗೂ ಲೇಖಕರು ! ಎಷ್ಟೋ ಕೃತಿಗಳು ಅಕಾಡೆಮಿ ಮತ್ತಿತರ ಪ್ರತಿಷ್ಠಿತ ಪ್ರಶಸ್ತಿಗಳಿಗೆ ಭಾಜನವಾದವು. ಆ ನೂರು ಪುಸ್ತಕಗಳಲ್ಲಿ ರಾಜು ಅವರದು ಒಂದೂ ಇಲ್ಲ. ಎಲ್ಲಾ ಇತರರದೇ.

ಪ್ರಕಟಿತ ಪುಸ್ತಕಗಳ ವಿಷಯ ಹಾಗೂ ಕೃತಿಕಾರರ ವೈವಿಧ್ಯವನ್ನು ನೋಡಬೇಕು. ಇಂದಿನ ಸಾಹಿತ್ಯಕ್ಕೆ ಈ "ಪರಿಚರ್ಯೆ" ಎಂಥ ಅದ್ಭುತ ಕೊಡುಗೆ ನೀಡಿದೆ! ಹೊಸ ಬರಹಗಾರರಲ್ಲಿ ಹಲವಾರು ಈಗ ಖ್ಯಾತರಾಗಿದ್ದಾರೆ. ಅಲ್ಲಿ ಪಡೆದ Take off ನಿಂದ ಗರಿಗೊಂಡು, ಸಾಹಿತ್ಯ ಲೋಕದಲ್ಲಿ ನಿಸೂರಾಗಿ ಯಾನ ನಡೆಸಿದ್ದಾರೆ.

ಪ್ರತಿ ವರ್ಷ ಬೇಂದ್ರೆ ಅವರ ಹೆಸರಿನಲ್ಲಿ ನಡೆಯುವ ಕಾವ್ಯ ರಚನಾ ಸ್ಪರ್ಧೆ ಅನೇಕ ಹೊಸ ಕವಿಗಳನ್ನು ಗುರುತಿಸಿದೆ. ಬರಹಗಾರ ವಿದ್ಯಾರ್ಥಿಗಳನ್ನು ಕಟ್ಟಿಕೊಂಡು ರಾಜು ಅವರು ಅವರಿಗೆಲ್ಲ ಸಾಹಿತ್ಯಯಾತ್ರೆಗಳನ್ನು ಮಾಡಿಸಿದ್ದಾರೆ. ಹಳೆಯ ಹಿರಿಯ ಲೇಖಕರು, ಪು.ತಿ.ನ., ಮಾಸ್ತಿ, ಕಾರಂತ ಮೊದಲಾದವರ ದರ್ಶನ ಮಾಡಿಸಿದ್ದಾರೆ.

ರಾಜು ಮಹಾಗಟ್ಟಿಗರು, ಎಲ್ಲಿಂದಲೊ ಕಾಣಿಕೆ ಸಂಗ್ರಹಿಸುತ್ತಾರೆ. ಯಾರನ್ನೊ ಪ್ರವರ್ತಕರನ್ನಾಗಿ, ಪ್ರಾಯೋಜಕರನ್ನಾಗಿ ಕೂಡಿಸಿಕೊಳ್ಳುತ್ತಾರೆ. ತಮಗೆ ಇರುವ ಎಲ್ಲ ಸಾಹಿತಿ-ಸಂಪರ್ಕವನ್ನು, ಪರಿಚಯವನ್ನೂ ತಮ್ಮ ಕಾರ್ಯಕ್ಕೆ ಬಳಸಿಕೊಳ್ಳುತ್ತಾರೆ. ಎಲ್ಲವನ್ನೂ ಕಿಂಚಿತ್ತೂ ಸದ್ದು ಗದ್ದಲ ಆರ್ಭಟ ಇಲ್ಲದೆ ಮಾಡುತ್ತಾರೆ.

ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದ ಹೊಸ ಅವತಾರವೇ ಕ್ರೈಸ್ಟ್ ಕಾಲೇಜು ಕನ್ನಡ ಸಂಘ. ಅಲ್ಲಿ ಗುರು ರಾಜರತ್ನಂ ಇಲ್ಲಿ ಶಿಷ್ಯ ಶ್ರೀನಿವಾಸರಾಜು!

ಈ ಪರಿಚಾರಿಕೆಯ ಸಂಭ್ರಮದಲ್ಲಿ ಶ್ರೀನಿವಾಸರಾಜು ಅವರ ಸ್ವಂತಪ್ರತಿಭೆಗೆ ಅವಕಾಶ ಕುಂಠಿತವಾಗಿರುವುದು ಸ್ಪಷ್ಟ. ಸ್ವತಃ ಅವರು ಸ್ವೋಪಜ್ಞ ಸಾಹಿತಿ, ಕವಿ, ನಾಟಕಕಾರ, ಪ್ರಬಂಧಕಾರ, ವಿಮರ್ಶಕ. ಮೇಲಾಗಿ ಶಿಷ್ಯರಿಗೆ ಪ್ರಿಯರಾದ "ಮೇಷ್ಟ್ರು". ಸಾಹಿತ್ಯ ಸೇವೆಗಾಗಿ ರಾಜು ಮಾಡುತ್ತಿರುವುದು ಈ ಮಹಾತ್ಯಾಗ! ಯಾರಾದರೂ ಮಾಡಬೇಕಲ್ಲ. ಎಲ್ಲರೂ ಪಲ್ಲಕ್ಕಿಯಲ್ಲಿ ಕುಳಿತರೆ ಹೊರುವವರು ಯಾರು? ಮಾಡಿಟ್ಟ ಅಡುಗೆಯನ್ನು ಬಡಿಸುವವರು ಬೇಕಲ್ಲ!

ಅಂತೂ ಚಿ. ಶ್ರೀನಿವಾಸರಾಜು ಅವರು ರಾಜರತ್ನಂ ಆರಂಭಿಸಿದ ಸಾಹಿತ್ಯ ಪರಿಚಾರಿಕೆಯ ಎರಡನೆಯ ಅಧ್ಯಾಯವನ್ನು ಬರೆಯುತ್ತಿದ್ದಾರೆ!

ರಾಜು ಇರುವುದು ನಮ್ಮ ಬೀದಿಯಲ್ಲೆ, ೧೯೬೯ರಿಂದ ಪರಿಚಯ. ಆಗ ನಮ್ಮ ಗಾಂಧೀ ಸಾಹಿತ್ಯ ಸಂಘದಲ್ಲಿ ಗಾಂಧೀಜಿ ಶತಮಾನೋತ್ಸವದ ಸಲುವಾಗಿ ನಡೆದ ವಿದ್ಯಾರ್ಥಿ ವಿಚಾರಗೋಷ್ಠಿಗಳಿಗೆ ಬರುತ್ತಿದ್ದರು. ಈಗಲೂ ಸಂಘ ಎಂದರೆ ಅವರಿಗೆ ಆದರ. ನಮ್ಮ ಸಂಘ ಎನ್ನುತ್ತಾರೆ. "ನಾನು ಭಾಷಣ ಆರಂಭಿಸಿದ್ದು ಸಂಘದಲ್ಲೆ" ಎನ್ನುತ್ತಾರೆ. ರಿಟೈರ್ ಆದ ಮೇಲೆ ಅವರ ಕೆಲಸ ಒಂದಲ್ಲ ಹಲವು. ರಾಜರತ್ನಂ ಹೇಳುತ್ತಿದ್ದಂತೆಯೆ Re-tyre ಆಗಿದ್ದಾರೆ.

ರಾಜು ಅವರ ಶಿಷ್ಯವಾತ್ಸಲ್ಯ ದೊಡ್ಡದು, ಸದಾ ಶಿಷ್ಯರ ಬಗ್ಗೆಯೆ ಕಾಳಜಿ. ಅನೇಕ ಯುವಕರಿಗೆ ಅವರಲ್ಲಿ ತುಂಬ ಸಲಿಗೆ, ಎಂದೂ ಅವರು ತರುಣರಿಂದ ದೂರವಾಗಿಲ್ಲ. 'ಸಂಚಯ', 'ಅಭಿನವ' ಮೊದಲಾದ ಗುಂಪುಗಳಿಗೆ ತೀರ ಆಪ್ತರು. ಆ ಯುವ ಜನರ ಸಾಹಿತ್ಯ ಕ್ರೀಡೆಗಳಿಗೆ ರಾಜು ಅವರ ಸಹಕಾರ, ಸಹ"ಚರ್ಯೆ" ಮಾರ್ಗದರ್ಶನ ನಿರಂತರ ಸಾಗಿದೆ. ತನ್ನದೇ ಗೂಡು ಕಟ್ಟಿಕೊಂಡು ದಂತ ಗೋಪುರದಲ್ಲಿ ಕೂತು, ಸ್ವಂತ ಸಾಹಿತ್ಯ

ನಿರ್ಮಾಣದಲ್ಲಿ ನಿರತರಾಗಿರುವವರಲ್ಲ. ಎಲ್ಲರೊಡನೆ ಒಂದಾಗಿ ನಡೆದು ಎಲ್ಲರ ಮುನ್ನಡೆಯಲ್ಲೂ ತಾನು ಖುಷಿ ಪಡುವ ಸ್ವಭಾವ. "ನಕ್ಕು ನಗಿಸುವಾ ಕಲೆ ಶ್ರೇಷ್ಠ" ಎಂದ ಹಾಗೆ.

ಶ್ರೀನಿವಾಸರಾಜು ಸರಳವ್ಯಕ್ತಿ, ಮಿತಭಾಷಿ, ಹಿತಭಾಷಿ. ವಾದ–ವಿವಾದಗಳಿಂದ ದೂರ, ರಚನಾತ್ಮಕ ಕಾರ್ಯದಲ್ಲಿ ಆಸಕ್ತ. ಕೋಪಕ್ಕೂ ಅವರಿಗೂ ಕೆಳೆ ಇಲ್ಲ. ಪಾಠ ಹೇಳುವುದೆಂದರೆ ಅವರಿಗೆ ಖುಷಿ. ಸಂತೃಪ್ತಿಯ ಗುಟ್ಟು ತಿಳಿದವರು. ಅಂತೆಯೆ ನೆಮ್ಮದಿಯಾಗಿ ಬಾಳುವವರು. ತಳಮಳ, ಗಡಿಬಿಡಿ, ಗಾಬರಿ, ಅಸೂಯೆ, ಯಾವುದನ್ನೂ ನಾನು ಅವರಲ್ಲಿ ಕಂಡಿಲ್ಲ. ಆದ್ದರಿಂದಲೇ ಏನೊ ಅವರ ಸಾಹಿತ್ಯ ಪರಿಚಾರಿಕೆ ಇಷ್ಟು ಸುಮುಖವಾಗಿ ಸಾಗಿರುವುದು. "ಲೋಕಸಂಗ್ರಹ"ಕ್ಕೆ ಒಂದು ಉದಾಹರಣೆ.

ಗುರು ಪರಂಪರೆಯನ್ನು ಮುಂದುವರಿಸುತ್ತಿರುವುದಕ್ಕೆ ಚಿ. ಶ್ರೀನಿವಾಸರಾಜು ನಿದರ್ಶನ. ವಂದನೆಗೆ ಭಾಜನ!



# ತತ್ತ್ವಬದ್ಧ ವ್ಯಕ್ತಿತ್ವ

● *ಗೊ.ರು. ಚನ್ನಬಸಪ್ಪ*

೧೯೮೯ರ ಮಧ್ಯಭಾಗ. ಚಿ.ಶ್ರೀನಿವಾಸರಾಜು ಅವರು ಆಗ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಗಳಾಗಿದ್ದರು. ಅವರ ಜೊತೆಯಲ್ಲಿ ಮತ್ತೊಬ್ಬ ಗೌರವ ಕಾರ್ಯದರ್ಶಿಗಳಾಗಿದ್ದ ಡಾ. ಸಾ.ಶಿ. ಮರುಳಯ್ಯ ಅವರು ವೈಯಕ್ತಿಕ ಕಾರಣಗಳಿಂದ ರಾಜಿನಾಮೆ ನೀಡಿದ್ದರು. ತೆರವಾದ ಆ ಸ್ಥಾನಕ್ಕೆ ಬರಬೇಕೆಂದು ಆಗ ಅಧ್ಯಕ್ಷರಾಗಿದ್ದ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರು ನನ್ನನ್ನು ಕೇಳಿದರು. ಬೇರೆ ಬೇರೆ ಸಂಘಟನೆಗಳಲ್ಲಿ ನಾನು ತೊಡಗಿಕೊಂಡಿದ್ದ ಕಾರಣ "ಸಾಧ್ಯವಿಲ್ಲ" ಎಂದು ತಿಳಿಸಿದೆ. ಆದರೂ ಅವರು ಒತ್ತಾಯ ಮಾಡಿದರು. ಆತ್ಮೀಯರಾದ ಜಿ. ನಾರಾಯಣ ಅವರೂ 'ಪರಿಷತ್ತಿನ ಹಿತದೃಷ್ಟಿಯಿಂದ ಒಪ್ಪಿಕೊಳ್ಳಿ' ಎಂದು ಸಲಹೆ ಮಾಡಿದರು. ಹಾಗಾಗಿ ನಾನು ಒಪ್ಪಿಕೊಂಡೆ. ೧೯೮೯ರ ಅಕ್ಟೋಬರ್ ೧೪ರಂದು ನಾನು ಪರಿಷತ್ತಿನ ಗೌರವ ಕಾರ್ಯದರ್ಶಿಯಾಗಿ ಜವಾಬ್ದಾರಿ ವಹಿಸಿಕೊಂಡೆ. ಚಿ.ಶ್ರೀನಿವಾಸರಾಜು ಅವರೊಡನೆ ಹತ್ತಿರದ ಪರಿಚಯ ಮತ್ತು ಸಂಬಂಧ ಬೆಳೆದದ್ದು ಆಗಲೇ.

ಉತ್ತಮ ಕನ್ನಡ ಕಾರ್ಯಕರ್ತರಾಗಿ, ಶ್ರೇಷ್ಠ ನಾಟಕಕಾರರಾಗಿ, ತೂಕದ ವಿಮರ್ಶಕರಾಗಿ ಆಗಲೇ ನಾಡಿಗೆ ಪರಿಚಿತರಾಗಿದ್ದ ಸಾತ್ವಿಕ ಸ್ವಭಾವದ ಚಿ. ಶ್ರೀನಿವಾಸರಾಜು ಅವರೊಡನೆ ಪರಿಷತ್ತಿನ ಕಾರ್ಯ ನಿರ್ವಹಣೆ ನನಗೆ ಒಂದು ಹಾರ್ದಿಕ ಅನುಭವವಾಗಿತ್ತು. ಅವರು ಆಗ ಕ್ರೈಸ್ಟ್ ಕಾಲೇಜಿನಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದರು. ಹಗಲೆಲ್ಲ ತಮ್ಮ ವೃತ್ತಿ ಕರ್ತವ್ಯ ಸಲ್ಲಿಸಿ. ಸಂಜೆ ಪರಿಷತ್ತಿನ ಕಾರ್ಯಾಲಯಕ್ಕೆ ಬಂದು ರಾತ್ರಿ ೮–೯ ಘಂಟೆಯವರೆಗೆ ಕೆಲಸ ಮಾಡುತ್ತಿದ್ದುದುಂಟು. ಯಾರೊಡನೆಯೂ ಹೆಚ್ಚು ಮಾತಾಡದ ಶ್ರೀನಿವಾಸರಾಜು ಕಾರ್ಯಾಲಯದ ಕಡತಗಳೊಂದಿಗೆ 'ಮೌನ ಸಂವಾದ' ನಡೆಸುತ್ತಿದ್ದರು. ಪರಿಷತ್ತಿಗೆ ಹೊಸ ಹೊಸ ಕಾರ್ಯ

ಯೋಜನೆಗಳನ್ನು ರೂಪಿಸುವಲ್ಲಿ ಅವನ್ನು ಕಾರ್ಯಗತಗೊಳಿಸುವಲ್ಲಿ ಅವರಿಗಿದ್ದ ಆಸಕ್ತಿ ನಿಜಕ್ಕೂ ದೊಡ್ಡದು.

ಒಂದೇ ಜಾಯಮಾನದವರಾದ ಕಾರಣ ನಮ್ಮಿಬ್ಬರ ಸಂಬಂಧ ತುಂಬ ಆತ್ಮೀಯವಾಗಿತ್ತು. ಪರಿಷತ್ತಿನ ಆಗಿನ ಸ್ಥಿತಿ-ಗತಿ ಪದಾಧಿಕಾರಿಗಳಿಗೆ ಅಷ್ಟೇನೂ ಸುಗಮವಾಗಿರಲಿಲ್ಲ. ಆ ಹಿಂದೆ ಸರ್ಕಾರದ ಆಡಳಿತಾಧಿಕಾರಿಗಳ ಅಧೀನದಲ್ಲಿದ್ದ ಪರಿಷತ್ತು ಒಂದು ಸರ್ಕಾರಿ ಕಛೇರಿಯಾಗಿತ್ತೇ ವಿನಃ ಅದೊಂದು ಸ್ವಯಂ ಸೇವಾ ಸಾಂಸ್ಕೃತಿಕ ಸಂಸ್ಥೆಯಾಗಿರಲಿಲ್ಲ. ಅಂತಹ ಸಂದರ್ಭದಲ್ಲಿ ಪ್ರೊ.ಜಿ.ಎಸ್. ಸಿದ್ಧಲಿಂಗಯ್ಯನವರು ಪರಿಷತ್ತಿಗೆ ಸಹಜವಾದ ಪ್ರಾತಿನಿಧಿಕ ಸ್ವರೂಪವನ್ನು ತಂದುಕೊಡಲು ತುಂಬ ಹೆಣಗಬೇಕಾಗಿತ್ತು. ಪರಿಷತ್ತಿನ ಹಣಕಾಸು ಪರಿಸ್ಥಿತಿಯಂತೂ ಚಿಂತಾಜನಕವಾಗಿತ್ತು. ಆಗ ಶ್ರೀನಿವಾಸರಾಜು ಮತ್ತು ನಾನು ಅಧ್ಯಕ್ಷರ ಬೆಂಬಲಕ್ಕೆ ನಿಂತು ಸಾರ್ವಜನಿಕರಿಗೆ ವಸ್ತುಸ್ಥಿತಿಯನ್ನು ಸ್ಪಷ್ಟಪಡಿಸಲು ಪ್ರಯತ್ನಿಸಿದೆವು. ಆ ಪ್ರಯತ್ನದ ಫಲವಾಗಿ ಮತ್ತು ಪ್ರೊ. ಸಿದ್ಧಲಿಂಗಯ್ಯನವರ ದಕ್ಷ ನಿರ್ವಹಣೆಯಿಂದಾಗಿ ಪರಿಷತ್ತು ಮತ್ತೆ ತನ್ನ ಘನತೆ-ಗೌರವಗಳನ್ನು ಸಂಪಾದಿಸಲು ಸಾಧ್ಯವಾಯಿತೆಂಬುದು ಒಂದು ಸಮಾಧಾನದ ಸಂಗತಿ.

ನಾನು ಪರಿಷತ್ತಿಗೆ ಗೌರವ ಕಾರ್ಯದರ್ಶಿಯಾಗಿ ಹೋದ ಸಂದರ್ಭದಲ್ಲಿ ಆಗಲೇ ಹುಬ್ಬಳ್ಳಿಯಲ್ಲಿ ನಡೆಯಲು ನಿರ್ಧಾರವಾಗಿದ್ದ ೫೯ನೇ ಕನ್ನಡ ಸಾಹಿತ್ಯ ಸಮ್ಮೇಳನದ ಪೂರ್ವಭಾವಿ ಕೆಲಸಗಳು ನಡೆದಿದ್ದವು. ಸ್ವಾಗತ ಸಮಿತಿ ರಚನೆ, ಸಮ್ಮೇಳನ ಕಾರ್ಯಕ್ರಮಗಳು, ಇತ್ಯಾದಿಯಾಗಿ ಹೆಚ್ಚು ಕಡಿಮೆ ಎಲ್ಲ ನಿರ್ಧಾರವಾಗಿತ್ತು. ಸಮ್ಮೇಳನಾಧ್ಯಕ್ಷರ ಆಯ್ಕೆಯೊಂದಷ್ಟೇ ಆಗಬೇಕಾಗಿತ್ತು. ಬಹುಶಃ ಪರಿಷತ್ತಿನ ಅಗಾಧ ಕಾರ್ಯಗಳಲ್ಲೆಲ್ಲ ಈ ಸಮ್ಮೇಳನಾಧ್ಯಕ್ಷರ ಆಯ್ಕೆ ಅತ್ಯಂತ ಕ್ಲಿಷ್ಟವಾದದ್ದು ಮತ್ತು ಸೂಕ್ಷ್ಮವಾದದ್ದು ಎಂಬುದು ನನ್ನ ಅನುಭವ.

ಪರಿಷತ್ತಿನ ನಿಯಮ ಪ್ರಕಾರ, ಸಮ್ಮೇಳನಾಧ್ಯಕ್ಷತೆಗೆ ಸ್ವಾಗತ ಸಮಿತಿ ಸೂಚಿಸುವ ಹೆಸರುಗಳು, ಪರಿಷತ್ತಿನ ಕಾರ್ಯಸಮಿತಿ ಸದಸ್ಯರು ಸೂಚಿಸುವ ಹೆಸರುಗಳು ಮತ್ತು ಇತರ ಸದಸ್ಯರಿಂದ ಬರುವ ಸಲಹೆಗಳು – ಇವೆಲ್ಲವನ್ನು ಪರಿಶೀಲಿಸಿ, ಪರಿಷತ್ತಿನ ಕಾರ್ಯಸಮಿತಿ ಅಂತಿಮ ಆಯ್ಕೆ ನಡೆಸಬೇಕು.

ಆ ಮಧ್ಯೆ ಅನಿರೀಕ್ಷಿತವಾಗಿ ಸಾರ್ವತ್ರಿಕ ಚುನಾವಣೆಗಳು ಬಂದುದರಿಂದಾಗಿ ನಮ್ಮ ಸಮ್ಮೇಳನವು ಎರಡು ತಿಂಗಳು ಮುಂದೆ ಹೋಗುವುದು ಅನಿವಾರ್ಯವಾಯಿತು. ಸಮ್ಮೇಳನಾಧ್ಯಕ್ಷರ ಆಯ್ಕೆಗೆ ೧೯೯೦ರ ಜನವರಿ ೧೭ರಂದು ಕಾರ್ಯಕಾರಿ ಸಮಿತಿಯ ಸಭೆ ಸೇರಿತು. ಅಷ್ಟರಲ್ಲಿ ಸ್ವಾಗತ ಸಮಿತಿಯವರು ಸೂಚಿಸಿದ್ದ ಡಾ.ಆರ್.ಸಿ. ಹಿರೇಮಠ ಅವರ ಹೆಸರೂ ಸೇರಿದಂತೆ ಕಾರ್ಯಸಮಿತಿ ಸದಸ್ಯರು ಮತ್ತಿತರರು ಸೂಚಿಸಿದ ಹೆಸರುಗಳನ್ನೆಲ್ಲಾ ಸಭೆಯ ಮುಂದಿಡಲಾಯಿತು. ಅಧ್ಯಕ್ಷರು ಸದಸ್ಯರ ವೈಯಕ್ತಿಕ ಅಭಿಪ್ರಾಯಗಳನ್ನು ಪಡೆದರು. ಇಲ್ಲಿ ಯಾರು ಯಾರ ಹೆಸರನ್ನು ಸೂಚಿಸಿದರು ಅಥವಾ ವಿರೋಧಿಸಿದರು ಎಂದು ಹೇಳುವ ಅಗತ್ಯವಿಲ್ಲ. ನಾಲ್ಕು ಜನ ಇದ್ದ ಕಡೆ ಭಿನ್ನ ಭಿನ್ನ ಅಭಿಪ್ರಾಯಗಳಿದ್ದದ್ದೇ.

ಸಭೆಯಲ್ಲಿ ಸಾಕಷ್ಟು ಚರ್ಚೆ ನಡೆದು ಬಹುಮತದಂತೆ ಡಾ. ಆರ್.ಸಿ. ಹಿರೇಮಠ ಅವರನ್ನು ಸಮ್ಮೇಳನಾಧ್ಯಕ್ಷರೆಂದು ಸಭಾಧ್ಯಕ್ಷರು ಘೋಷಿಸಿದರು. ಆ ಸಂದರ್ಭದಲ್ಲಿ ಸಭೆಯಲ್ಲಿದ್ದ

ಡಾ. ಜಿ.ಎಸ್ ಶಿವರುದ್ರಪ್ಪ ಅವರು ಹೇಳಿದ ಒಂದು ಒಳ್ಳೆಯ ಮಾತನ್ನು ಇಲ್ಲಿ ಉಲ್ಲೇಖಿಸುವುದು ಉಚಿತವೆಂದು ಕಾಣುತ್ತದೆ: "ಇಲ್ಲಿ ಏನೇ ಚರ್ಚೆ ನಡೆದರೂ ಅಂತಿಮ ತೀರ್ಮಾನಕ್ಕೆ ನಾವೆಲ್ಲ ಬದ್ಧರು. ಈಗ ಆಗಿರುವುದು ಸರ್ವಾನುಮತದ ತೀರ್ಮಾನವೆಂದೇ ಪರಿಗಣಿಸಬೇಕು". ಅವರ ಮಾತಿಗೆ ಸಭೆ ಸಮ್ಮತಿಸಿತು.

ಸಭೆಯ ಮಾರನೆಯ ದಿನ ಅಧ್ಯಕ್ಷ ಪ್ರೊ. ಸಿದ್ಧಲಿಂಗಯ್ಯನವರು ಪತ್ರಿಕಾಗೋಷ್ಠಿ ಕರೆದು ಸಭೆಯ ತೀರ್ಮಾನವನ್ನು ಪ್ರಕಟಿಸಿದರು. ಆ ಗೋಷ್ಠಿಗೆ ಶ್ರೀನಿವಾಸರಾಜು ಅವರು ಬರಲಿಲ್ಲ! ಬದಲಾಗಿ "ನಾನು ಅಧ್ಯಕ್ಷರ ವಿಶ್ವಾಸ ಕಳೆದುಕೊಂಡಿರುವ ಕಾರಣ ಗೌರವ ಕಾರ್ಯದರ್ಶಿಯಾಗಿ ಮುಂದುವರೆಯಲಾರೆ" ಎಂಬರ್ಥದ ರಾಜಿನಾಮೆ ಪತ್ರ ಕಳುಹಿಸಿದ್ದರು. ವಿಷಯ ತಿಳಿದು ನನಗೆ ವ್ಯಥೆಯೆನಿಸಿತು. ಶ್ರೀನಿವಾಸರಾಜು ಅವರನ್ನು ಕಂಡು ದುಡುಕಬಾರದೆಂದು ಬಹಳ ಹೇಳಿದೆ. ಆದರೆ ಅವರ ನಿಶ್ಚಲ ನಿರ್ಧಾರದ ಮುಂದೆ ನನ್ನ ಪ್ರಯತ್ನ ಫಲ ನೀಡಲಿಲ್ಲ.

ಸಮ್ಮೇಳನಾಧ್ಯಕ್ಷರ ಆಯ್ಕೆಯ ಬಗೆಗೆ ಅವರು ಅಸಮಧಾನಗೊಂಡಿದ್ದರು. "ಕಾರ್ಯಸಮಿತಿ ಬಹುಮತದಿಂದ ಕೈಗೊಂಡಿರುವ ನಿರ್ಧಾರಕ್ಕೆ ನಾವು ಬದ್ಧರಾಗಿರಬೇಕಾಗುತ್ತದೆ. ಪರಿಷತ್ತಿನ ನಿಯಮ ಪ್ರಕಾರ ನಿರ್ಧಾರವಾಗಿದೆ. ನೀವು ಬೇಸರಪಟ್ಟುಕೊಳ್ಳಬಾರದು. ಒಂದು ಸಮ್ಮೇಳನ ಸಂದರ್ಭವೇ ದೊಡ್ಡದಾಗಬಾರದು. ಅದಕ್ಕಿಂತ ಪರಿಷತ್ತಿನ ಘನತೆ ಗೌರವಗಳ ರಕ್ಷಣೆ ಮುಖ್ಯ. ಮುಂದೆ ನಿಮ್ಮಿಂದ ಪರಿಷತ್ತಿಗೆ ಸಲ್ಲಬೇಕಾದ ಸೇವೆ ಬಹಳವಿದೆ. ದಯವಿಟ್ಟು ನಿಮ್ಮ ರಾಜಿನಾಮೆ ಪತ್ರವನ್ನು ಹಿಂದಕ್ಕೆ ತೆಗೆದುಕೊಳ್ಳಿ" ಎಂದು ನಾನು ಶ್ರೀನಿವಾಸರಾಜು ಅವರಿಗೆ ಆತ್ಮೀಯವಾಗಿ ಮತ್ತೆ ಹೇಳಿದೆ. ಆದರೆ ಅವರು "ದಯವಿಟ್ಟು ತಪ್ಪು ಭಾವಿಸಬೇಡಿ. ನಿಮ್ಮ ಜೊತೆಯಲ್ಲಿ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸುವುದು ನನಗೂ ಅಭಿಮಾನದ ಸಂಗತಿ. ಆದರೆ ಸಮ್ಮೇಳನಾಧ್ಯಕ್ಷರ ಆಯ್ಕೆಯ ಕ್ರಮ ನನಗೆ ಒಪ್ಪಿಗೆಯಾಗಿಲ್ಲ. ನಾನು ನಂಬಿದ ತತ್ತ್ವಕ್ಕಾಗಿ ನಡೆದುಕೊಳ್ಳಬೇಕಾಗುತ್ತದೆ. ಇದರಿಂದ ನನ್ನ-ನಿಮ್ಮ ಪರಸ್ಪರ ವಿಶ್ವಾಸಕ್ಕೆ ಆತಂಕವೇನಿಲ್ಲ. ಪರಿಷತ್ತಿನ ಬಗೆಗೂ ನನಗೆ ಅಸಮಾಧಾನವಿಲ್ಲ" ಎಂದು ಮನಬಿಚ್ಚಿ ಹೇಳಿದರು.

ಶ್ರೀನಿವಾಸರಾಜು ಅವರ ಅಸಮಾಧಾನಕ್ಕೆ ಕಾರಣವಿತ್ತು. ಹುಬ್ಬಳ್ಳಿ ಸಮ್ಮೇಳನದ ಸ್ವಾಗತ ಸಮಿತಿಯವರು ಸಲಹೆ ಮಾಡಬೇಕಾಗಿದ್ದ ಮೂರು ಹೆಸರುಗಳಿಗೂ 'ಜಾಣ್ಮೆ'ಯಿಂದ ಡಾ.ಆರ್.ಸಿ. ಹಿರೇಮಠ ಅವರ ಹೆಸರನ್ನೇ ಸೂಚಿಸಿದ್ದರು. 'ಸಾಹಿತ್ಯ ಸಂಬಂಧದ ಇಂತಹ ಸಂದರ್ಭಗಳಲ್ಲೂ ಈ 'ಜಾಣ್ಮೆ'ಗಳು ಪ್ರಯೋಗವಾಗುವುದು ಒಳ್ಳೆಯ ಲಕ್ಷಣವಲ್ಲ. ಸ್ವಾಗತ ಸಮಿತಿಯ ಈ ಕ್ರಮವನ್ನು ಪರಿಗಣಿಸುವುದು ಸೂಕ್ತವಲ್ಲ' ಎನ್ನುವುದು ಶ್ರೀನಿವಾಸರಾಜು ಅವರ ನಿಲುವಾಗಿರಬೇಕು. ನನ್ನ ಅಭಿಪ್ರಾಯವೂ ಅದೇ ಆಗಿತ್ತು. ಆದರೆ 'ರಾಜಿ ಮನೋಭಾವ'ದ ನಾನು ಪರಿಷತ್ತಿನ ನಿರ್ಧಾರಕ್ಕೆ ಬದ್ಧನಾದೆ. ತತ್ತ್ವಬದ್ಧರಾದ ಶ್ರೀನಿವಾಸರಾಜು ಒಪ್ಪಿಕೊಳ್ಳಲಿಲ್ಲ. ಹಾಗಾಗಿ, ಅವರಂತಹ ಕ್ರಿಯಾಶೀಲ ಮತ್ತು ಅರ್ಪಣಾಭಾವದ ಕಾರ್ಯದರ್ಶಿಯೊಬ್ಬರನ್ನು ಪರಿಷತ್ತು ಕಳೆದುಕೊಂಡಂತಾಯಿತು. ಆಗ ತಾನೇ ಕಾರ್ಯದರ್ಶಿಯಾಗಿ ಹೋಗಿದ್ದ ನಾನೂ ಒಂದು ರೀತಿಯಲ್ಲಿ ಒಂಟಿಯಾಗಿದೆ.

ಸಾಮಾನ್ಯವಾಗಿ ಯಾರೊಡನೆಯೂ ವಿವಾದಕ್ಕಿಳಿಯದ, ವಿರಸಮಾಡಿಕೊಳ್ಳದ

ಶ್ರೀನಿವಾಸರಾಜು ಅತ್ಯಂತ ಮೃದು ಹೃದಯಿ. ಆದರೂ, ಆ ಪ್ರಸಂಗದಲ್ಲಿ ಕಟುವಾದ ನಿಲುವನ್ನೇ ತಳೆದಿದ್ದರು. ಯಾವುದೇ ಸಂದರ್ಭವಿರಲಿ, ನೀತಿಗೆ ಭಂಗವುಂಟಾದಲ್ಲಿ, 'ಸೂಕ್ತ'ವೆನಿಸದಿದ್ದಲ್ಲಿ ಶ್ರೀನಿವಾಸರಾಜು ಎಂದೂ ರಾಜಿಮಾಡಿಕೊಂಡವರಲ್ಲ. ಅವರದು ಗಂಭೀರ ನಿಲುವು; ಗಟ್ಟಿ ನಿಲುವು.

ಸಾಹಿತ್ಯ ಕ್ಷೇತ್ರದಲ್ಲಿ ಸಾಕಷ್ಟು ಕೃಷಿ ಮಾಡಿದ್ದರೂ ಒಮ್ಮೆಯೂ ತೋರಿಕೊಳ್ಳುವುದಿಲ್ಲ. ಬಸವಣ್ಣನವರು ಹೇಳುವ 'ಎನಗಿಂತ ಕಿರಿಯರಿಲ್ಲ' ಎಂಬ ಮಾತು ಶ್ರೀನಿವಾಸರಾಜು ಅವರಿಗೆ ಜೀವನಸೂಕ್ತಿಯಾಗಿದೆ. ಅವರಿಗೆ ಮಾತಿಗಿಂತ ನೀತಿ ಮುಖ್ಯ; ನುಡಿಗಿಂತ ನಡೆ ಮುಖ್ಯ. ಸದಾ ಕನ್ನಡದ ಚಿಂತನೆ ಮತ್ತು ಕಾರ್ಯದಲ್ಲಿ ತೊಡಗಿದವರು. ಸಾಹಿತ್ಯ ಸಂಸ್ಕೃತಿಗಳ ಕ್ಷೇತ್ರದಲ್ಲಿ ತುಂಬ ಸೌಮ್ಯ ಹೆಸರು ಚಿ. ಶ್ರೀನಿವಾಸರಾಜು. ಅವರದು ಎಲ್ಲರಿಗೂ ಹತ್ತಿರವಾಗುವ ತತ್ತ್ವಬದ್ಧ ವ್ಯಕ್ತಿತ್ವ



## ಇಷ್ಟು ಸಾಲದೇನು?

● ಪ್ರಸನ್ನ

ಶ್ರೀನಿವಾಸರಾಜು ಪಿ.ಪಿ. ಬಳಗದ ಸದಸ್ಯರು. ಪಿ.ಪಿ. ಎಂದರೇನು? ಪೆನ್ನು ಪೇಪರ್ರು ಎಂದಿದ್ದೀತು, ಪುಸ್ತಕ ಪ್ರೋಗ್ರೆಸ್ ಎಂದಿದ್ದೀತು ಅಥವಾ ಪೋಲಿಪಟಾಲಮ್ಮು ಎಂದಿದ್ದೀತು. ನನಗೆ ಈಗಲೂ ಗೊತ್ತಿಲ್ಲ. ನಾನಾಗ ಚಿಕ್ಕವನು. ಆಗ ನನಗೆ ಪಿಪಿ ಬಳಗವು ಸಾಹಿತ್ಯ ಲೋಕದ ಸೀಕ್ರೆಟ್ ಸೊಸಾಯ್ಟಿಯಂತೆ ಕಂಡಿತ್ತು.

ನನಗೆ ಬಳಗದ ಪರಿಚಯವಾದದ್ದು ಕೆ.ವಿ. ನಾರಾಯಣರ ಮೂಲಕ. ಕಿ.ರಂ. ಆಗಲೇ ಗೊತ್ತಿದ್ದರು. ಅವರಿನ್ನೂ ಸೆಂಟ್ರಲ್ ಕಾಲೇಜಿನಲ್ಲೇ ಇದ್ದರು. ಖಾದಿಯ ಬಿಳಿಯ ಜುಬ್ಬ ಬಿಳಿಯ ಪಾಯಿಜಾಮ ಹಾಕಿಕೊಂಡು ಗಡಿಬಿಡಿಯಿಂದ ಓಡಾಡುತ್ತಿದ್ದರು. ಆಗಿನ್ನೂ ಗುಂಡು ಹಾಕುತ್ತಿರಲಿಲ್ಲವಾಗಿ ಈಗಿಗಿಂತಲೂ ಆಕರ್ಷಕವಾಗಿ ಕಾಣುತ್ತಿದ್ದರು. ರಾಜು, ರಾಘವೇಂದ್ರರಾವ್, ಕಾನಂ, ವೆಂಕಟರಾಜು ಇವರೆಲ್ಲ ನಂತರ ಪರಿಚಿತರಾದರು.

ಅದೊಂದು ವೃತ್ತಿಪರ ಶಿಸ್ತಿನ ವಿಮರ್ಶಾ ಬಳಗ. ಸಾಹಿತ್ಯಾಸಕ್ತಿಯ ಜೊತೆಗೆ ಎಡಪಂಥೀಯ ಒಲವೂ ಇತ್ತೆಂದು ಕಾಣುತ್ತದೆ. ನಾನು ಮೊದಲಬಾರಿ ಬಳಗದವರನ್ನು ಭೇಟಿಯಾದ ಜಾಗದಲ್ಲಿ ಕುವೆಂಪು, ಬೇಂದ್ರೆ, ಪು.ತಿ.ನ. ಇತ್ಯಾದಿ ಕನ್ನಡ ಕವಿಗಳ ಬಡಕಲು ಮಯ್ಯಿನ ಕವನ ಸಂಕಲನಗಳ ನಡುವೆ ದಢೂತಿ ದೇಹದ ಅನುವಾದಿತ ರಷಿಯನ್ ಕೃತಿಗಳನ್ನು ಕಂಡಿದ್ದೆ. ಜೊತೆಗೆ ಅದೇ ಸುಮಾರಿಗೆ ನಕ್ಸಲ್‌ಬಾರಿಯ ಜನಕ ಚಾರು ಮಜುಮ್‌ದಾರ್ ಸೀಕ್ರೆಟ್ಟಾಗಿ ಬೆಂಗಳೂರಿಗೆ ಬಂದಿದ್ದರೆಂದೂ, ಬಂದು ಒಂದೆರಡು ದಿನ ಇದ್ದರೆಂದೂ ಕೇಳಿದ್ದೆ. ನಾರಾಯಣ ಒಂದು ದಿನ, ಒಂದು ಕತೆ ಹೇಳಿದ್ದ. ರಕ್ತಕ್ರಾಂತಿಯ ಜನಕ ಚಾರು ಮಜುಮ್‌ದಾರ್‌ಗೆ ಜಿರಲೆಗಳನ್ನು ಕಂಡರೆ ಪ್ರಾಣಭಯ ಎಂದಿದ್ದ. ಜಿರಲೆಗಳ ಸಂಗತಿ ಯನ್ನು ಅವನೇ ಚಾರು ಮಜುಮ್‌ದಾರ್ ಸಂಗಡ ಇದ್ದಾಗ ಕಂಡದ್ದೇ



ಅಥವಾ ಮತ್ತಾರೋ ಹೇಳಿದ್ದ ಸಂಗತಿಯೇ ನನಗೆ ತಿಳಿದಿರಲಿಲ್ಲ. ಅಂತೂ ರಷಿಯನ್ ಕೃತಿಗಳನ್ನೂ ನಾರಾಯಣನ ಕತೆಯನ್ನೂ ತಾಳೆ ಹಾಕಿ, ನೀವು ಸಿಪಿಐನಾ ಎಂದು ಕೇಳಿದ್ದೆ. ಇಲ್ಲ ಅಂದಿದ್ದರು. ಎಮ್ಮಾ ಎಂದಿದ್ದೆ. ಇಲ್ಲ ಅಂದಿದ್ದರು. ಎಮ್ಮೆಲ್ಲಾ ಅಂದಿದ್ದೆ. ಇಲ್ಲ ಅಂದಿದ್ದರು. ಆಗ ನನಗೆ ಗೊತ್ತಿದ್ದ ಪ್ರಶ್ನೆಗಳು ಅಷ್ಟು ಮಾತ್ರ.

ಪಿ.ಪಿ.ಯಂತಹದ್ದೇ ಬಳಗವೊಂದರ ಚಿತ್ರಣವನ್ನು ನಾನು ಇಂಗ್ಲಿಷ್ ಗುಪ್ತಚರ ಕಾದಂಬರಿಕಾರ ಲಾ-ಕರ್ರೆಯ ಆರಂಭಿಕ ಕಾದಂಬರಿಗಳಲ್ಲಿ ಕಂಡಿದ್ದೇನೆ. ಆತನ ಕಾದಂಬರಿಯ ನಾಯಕ ಸ್ಮೈಲೆ ಇಂತಹದ್ದೇ ಒಂದು ಬಳಗದ ಸದಸ್ಯ. ಪಿ.ಪಿ. ಬಳಗಕ್ಕೆ ಸೆಂಟ್ರಲ್ ಕಾಲೇಜಿನ ಹಿನ್ನೆಲೆಯಿದ್ದಂತೆ ಸ್ಮೈಲೆ ಬಳಗಕ್ಕೆ ಆಕ್ಸ್‌ಫರ್ಡಿನ ಹಿನ್ನೆಲೆಯಿದೆ. ಪಿ.ಪಿ. ಬಳಗಕ್ಕೆ ಎಡಪಂಥೀಯ ಒಲವು ಹಾಗೂ ಕನ್ನಡ ಸಾಹಿತ್ಯಗಳ ಜಂಟಿ ಒಲವಿದ್ದಂತೆ ಸ್ಮೈಲೆಗೆ ಮಧ್ಯಕಾಲೀನ ಜರ್ಮನ್ ಕಾವ್ಯ ಹಾಗೂ ರಷಿಯನ್ ಪರ ಒಲವಿನ ಹಿನ್ನೆಲೆಯಿದೆ. ಸ್ಮೈಲೆ ಬೊಜ್ಜು ದೇಹದ ಗುಪ್ತಚರ ಹಾಗೂ ಪ್ರಚಂಡ ಬುದ್ಧಿವಂತ, ಜರ್ಮನ್ ಕಾವ್ಯದ ಪರಮ ಅಭಿಮಾನಿ. ಸುಂದರಿ, (ಹಾಗೂ ಶ್ರೀಮಂತೆ) ಹೆಣ್ಣೊಬ್ಬಳನ್ನು ಮದುವೆಯಾಗಿಯೂ ಒಂಟಿಯಾಗಿರುವವನು.

ಬುದ್ಧಿಜೀವಿ ಬಳಗಗಳೇ ಹಾಗೆ; ಅಂತಸ್ತಿನ ಸೂಚನೆಗಳವು; ದಡ್ಡ ಪ್ರಶ್ನೆಗಳನ್ನು ಅಡ್ಡ ತರುಬುವ ಬೌದ್ಧಿಕ ಜೀವಿಗಳು. ವಿದ್ಯಾರ್ಥಿ ದೆಸೆಯಲ್ಲಿ ಒಟ್ಟಾಗುವ ಇಂತಹ ಬಳಗಗಳು ಮುದಿಯಾದರೂ ಉಳಿದುಬರುತ್ತವೆ; ಖ್ಯಾತಿ, ಕುಖ್ಯಾತಿ, ಬೊಜ್ಜು, ಸಕ್ಕರೆ ಖಾಯಿಲೆ, ವಿಚ್ಛೇದನ ಇತ್ಯಾದಿ ಏನೆಲ್ಲ ಅವಘಡಗಳು ಅನಂತರದಲ್ಲಿ ಬಂದು ಕಾಡಿದರೂ ಹಳತು ಹೊಸತೋ ಎಂಬಂತೆ ಉಳಿದುಬಿಡುತ್ತದೆ. ಶ್ರೀನಿವಾಸರಾಜು ಯಾವುದನ್ನೂ ತಿರಸ್ಕರಿಸಿದವರಲ್ಲ ಅಥವಾ ಯಾವುದನ್ನೂ ಅತಿಯಾಗಿ ಹಚ್ಚಿಕೊಂಡವರೂ ಅಲ್ಲ. ಅವರ ಸಾಹಿತ್ಯಾಭಿಮಾನಕ್ಕೆ ಕೂಡ ಒಂದು ರೀತಿಯ ವೃತ್ತಿಪರ ಶಿಸ್ತಿದೆ. ಅದು ಬರೇ ಭಾವುಕತೆಯ ಪ್ರದರ್ಶನವಲ್ಲ.

ಸೆಂಟ್ರಲ್ ಕಾಲೇಜಿಗೆ ಅಂತಹದ್ದೊಂದು ಜೀವಂತಿಕೆಯಿತ್ತು. ಇತ್ತ ಇಂಗ್ಲಿಷ್ ವಿನ್ಯಾಸದ ಕೆಂಪು ಸ್ಥಾವರ. ಅತ್ತ ಮೈಸೂರು ಪೇಟ ಧರಿಸಿದ ಅಧ್ಯಾಪಕ ವರ್ಗ (ಮುಗಳಿ, ರಾಜರತ್ನಂ, ಶಿವರುದ್ರಪ್ಪನವರ ಕಾಲಕ್ಕೆ ಮೈಸೂರು ಪೇಟ ಮರೆಯಾಗಿತ್ತು, ಬೊಕ್ಕತಲೆ ಕಾಣಿಸಿಕೊಳ್ಳ ತೊಡಗಿತ್ತು). ಕಾಲೇಜಿನ ಸುತ್ತ ಮುತ್ತ ಬಳೆಪೇಟೆ, ಭಾನುವಾರದ ಪುಸ್ತಕದಂಗಡಿಗಳು, ಕುಮಾರ ಲಾಡ್ಜ್ ಖಾಲಿದೋಸೆ, ನವ್ಯ ಚಳವಳಿ, ರಂಗಭೂಮಿ, ಸೆನೆಟ್ ಹಾಲಿನ ಸಭೆಗಳು ಹರಡಿಕೊಂಡಿದ್ದವು. ಹೊರಗಿನವರು ದಂಡು ಪ್ರದೇಶವನ್ನು ತಲುಪಿದ್ದರೇ ಹೊರತು ದಂಡು ದಂಡಾಗಿ ಇಡೀ ಊರನ್ನು ಮುತ್ತಿಕೊಂಡಿರಲಿಲ್ಲ. ಅವೆನ್ಯೂ ರಸ್ತೆಯಲ್ಲಿ ಪರಸ್ಪರ ಡಿಕ್ಕಿ ಹೊಡೆಯುತ್ತಿದ್ದದ್ದು ಮನುಷ್ಯ ಮನುಷ್ಯರೇ ಹೊರತು ವಾಹನಗಳ ಚಕ್ರಗಳಲ್ಲ.

ಶ್ರೀನಿವಾಸರಾಜು ಬಳಗದ ಹಿರಿಯಣ್ಣ; ಕೊಂಚ, ರಾಜರತ್ನಂ ತರಹ ಅವರು. ಕಿ.ರಂ., ಕೈಲಾಸಂ ತರಹ. ನಾರಾಯಣನನ್ನು ನಾನು, ಅವನ ಗುಂಡು ಮುಖ ಹಾಗೂ ಗಾಂಭೀರ್ಯದ ಕಾರಣಕ್ಕಾಗಿ 'ಮರಿ' ಗುಂಡಪ್ಪ ಎಂದು ಕರೆಯುತ್ತಿದ್ದೆ. ರಾಘವೇಂದ್ರರಾವ್ ಅಪ್ಪಟ ವಿಮರ್ಶಕ. ರಾಜು ರಾಜರತ್ನಂ ತರಹ ಎಂದೆ. ಏಕೆಂದು ಹೇಳುತ್ತೇನೆ. ತನ್ನ ಜೀವನದ ಉದ್ದಕ್ಕೂ ರಾಜು ಇತರರ ಪುಸ್ತಕಗಳನ್ನು ಪ್ರಕಟಿಸುತ್ತ ಸಮಯ ಕಳೆದರು, ಇತರರ ಕೃತಿಗಳನ್ನು ಬಗಲ ಚೀಲದಲ್ಲಿಟ್ಟುಕೊಂಡು ಹೊತ್ತೊಯ್ದು ಮಾರಿದರು, ಸಾಹಿತ್ಯ ಗೋಷ್ಠಿಗಳ ಬ್ಯಾಕ್ ಸ್ಟೇಜ್

ಕೆಲಸ ಮಾಡಿದರು, ಶಿಸ್ತಿನಿಂದ ಪಾಠ ಹೇಳಿದರು. ಬಾಲಕನಂತೆ ಸಂಸ ಕವಿಯ ರೂಮಿಗೆ ಎಡತಾಕಿದ ರಾಜರತ್ನಂ ಗುಣ, ರಾಜು ಅವರಲ್ಲಿ ನಾನು ಧಾರಾಳವಾಗಿ ಕಂಡಿದ್ದೇನೆ. ತನಗಿಂತ ಕಿರಿಯ ಲೇಖಕರನ್ನೂ ಸಹ ತಲೆಯ ಮೇಲೆ ಹೊತ್ತವರು ರಾಜು.

ರಾಜು ಒಂದಿಷ್ಟು ಬರೆದರೂ ಕೂಡ. ಆದರೆ ಬರಹವದು ಬಯಸದೆ ಬಂದ ಕೂಸು ಎಂಬಂತೆ ಅವರು ಮುಜುಗರ ಪಟ್ಟುಕೊಂಡದ್ದೇ ಜಾಸ್ತಿ. ಹಾಗಾಗಿ ರಾಜು ಬರೆಯ ಬಹುದಾದಷ್ಟು ಬರೆಯಲಿಲ್ಲ. ಎಪ್ಪತ್ತರ ದಶಕದಲ್ಲಿ ಬಿಹಾರದ ಭಸನಾಲ ಎಂಬಲ್ಲಿ ಕಲ್ಲಿದ್ದಲು ಗಣಿ ದುರಂತವೊಂದು ಸಂಭವಿಸಿತು. ಹಾಪ್ಕಿನ್ಸ್ ಕವಿಯನ್ನು ಡಾಯಿಷ್ ನೌಕೆಯ ಅವಘಡವು ಕಲಕಿದಂತೆ ರಾಜು ಅವರ ಮನಸ್ಸನ್ನು ಭಸನಾಲದ ದುರಂತವು ಕಲಕಿತು. 'ಭಸನಾಲ' ಬಂಧು ಎಂಬ ನಾಟಕವೊಂದನ್ನು ಬರೆದರು. ನಾವು ಸಮುದಾಯದಿಂದ ಆ ನಾಟಕವನ್ನು ಹಲವು ಬಾರಿ ಆಡಿದ್ದೆವು. ಅದು ಅವರ ಮೊದಲ ನಾಟಕವಿರಬೇಕು. ಆನಂತರದಲ್ಲಿ ಹಲವು ಬೀದಿನಾಟಕಗಳನ್ನು ಹಾಗೂ ನಾಟಕಗಳನ್ನು ರಾಜು ಬರೆದರು.

ರಾಜು ಅಂತಹವರನ್ನು ಹೇಗೆ ಅಳೆಯುವುದು? ಸಣ್ಣ ಪುಟ್ಟ ವಿಶ್ವವಿದ್ಯಾಲಯವೊಂದರ ವೀಸಿ ಕೂಡ ಆಗಲಿಲ್ಲ ಅವರು. ಬಹುಮಾನ ಗೆಲ್ಲಲಿಲ್ಲ, ಉದ್ಗ್ರಂಥಗಳನ್ನು ರಚಿಸಲಿಲ್ಲ, ಭಾಷಣಗಳನ್ನು ಬಿಗಿಯಲಿಲ್ಲ, ರಾಜಕೀಯ ಹೇಳಿಕೆಗಳನ್ನು ನೀಡಲಿಲ್ಲ. ಈಗಲೂ ಅವರು ಹಾಗೆಯೇ ಇದ್ದಾರೆ, ಅದೇ ಮಲ್ಲೇಶ್ವರದ ಅದೇ ತಗ್ಗಿನ ಮನೆಯಲ್ಲಿ. ಅದೇ ಕೆಲಸ ಮಾಡುತ್ತಿದ್ದಾರೆ. ತಪ್ಪಿರುವುದು ಅಳೆಯುವ ಮಾನದಂಡದಲ್ಲಿ. ಶ್ರೀನಿವಾಸರಾಜು ಸದ್ದಿಲ್ಲದೆ ಮಾಡಿದ ಕೆಲಸಗಳ ಮಹತ್ವವನ್ನು ಅಳೆಯುವ ಮನಃಸ್ಥಿತಿ ನಮಗಿಲ್ಲ.

ವರ್ಷಕ್ಕೆ ಎರಡೆರಡು ಸಂಕಲನಗಳನ್ನು ಹೊರತರುವ ಲೇಖಕರುಗಳು ಅಧಿಕಾರ ಹಿಡಿದಿದ್ದಾರೆ, ಹೆಚ್ಚಿನವರು ಆಡಳಿತ ನಡೆಸುವಲ್ಲಿ ವಿಫಲರಾಗಿದ್ದಾರೆ, ಕೆಲವರು ಭ್ರಷ್ಟರಾಗಿದ್ದಾರೆ. ಭ್ರಷ್ಟತೆಯನ್ನು ಅತ್ತ ಇಟ್ಟರೂ, ಹೆಚ್ಚಿನ ಸಾಹಿತಿ ಕಲಾವಿದರಿಗೆ ವೃತ್ತಿಪರ ಶಿಸ್ತು, ಆಡಳಿತ, ವ್ಯವಹಾರಗಳು ತಿಳಿದಿಲ್ಲ. ಅದು ತಿಳಿಯದಿರುವುದೇ ಹೆಮ್ಮೆಯ ಸಂಗತಿ ಎಂಬಂತೆ ಕನ್ನಡದಲ್ಲಿ ಬಿಂಬಿಸಲಾಗುತ್ತಿದೆ. ಈಗಲೂ ಕನ್ನಡ ಪುಸ್ತಕಗಳ ವ್ಯಾಪಾರ ಸಾವಿರದ ಗಡಿ ದಾಟಲಿಕ್ಕೆ ತಿಣುಕುತ್ತಿವೆ. ಕಾಂಪ್ಲಿಮೆಂಟರಿಗಳು, ಲೈಬ್ರರಿ ಖರೀದಿಗಳನ್ನು ಅತ್ತ ಇಟ್ಟರೆ ಎರಡು-ಮೂರು ನೂರು ಪ್ರತಿಗಳೂ ಖರ್ಚಾಗುವುದೂ ಕಷ್ಟವಾಗಿದೆ. ಪಕ್ಕದ ಕೇರಳದಲ್ಲಿ ಉದಯೋನ್ಮುಖ ಲೇಖಕರ ಪ್ರಥಮ ಪುಸ್ತಕವು ಐದು ಸಾವಿರ ಪ್ರತಿ ಖರ್ಚಾಗುತ್ತಿವೆ. ಲೇಖಕರಿಗೆ ಗೌರವ ಧನ ಸಲ್ಲುತ್ತಿದೆ, ಪುಸ್ತಕಗಳನ್ನು ಕೊಂಡು ಮಾರುವವರ ಹತ್ತಿರ ತಲುಪಿಸುವಲ್ಲಿ ಮಲಯಾಳಿಗಳು ಯಶಸ್ವಿಯಾಗಿದ್ದಾರೆ.

ಮಲಯಾಳಿಗಳಿಗೆ ತಿಳಿದಿರುವ ಹಲವು ಶಿಸ್ತುಗಳು ರಾಜು ಅವರಿಗೆ ತಿಳಿದಿವೆ, ಪ್ರಾಮಾಣಿಕತೆ ಯಿದೆ, ಪ್ರೀತಿಯಿದೆ. ಕನ್ನಡದ ಕೆಲಸದಲ್ಲಿ ಅವರನ್ನು ಬರೇ ಕಾಪಿ ಎಡಿಟಿಂಗಿಗೆ ಬಳಸಿಕೊಳ್ಳುವ ಬದಲು, ಅವರನ್ನೇ ಜವಾಬ್ದಾರಿಯ ಸ್ಥಾನದಲ್ಲಿ ಕೂರಿಸಬಹುದಿತ್ತು. ಇರಲಿ ಬಿಡಿ. ಶ್ರೀನಿವಾಸ ರಾಜು, ತಾನು ಏನಾಗಬೇಕೆಂದು ಬಯಸಿದರೊ ಅದೇ ಆಗಿದ್ದಾರೆ. ಇತರರಿಂದ ಏನನ್ನೂ ಕಿತ್ತುಕೊಳ್ಳದೆ, ತನ್ನಿಂದ ಸಾಧ್ಯವಾದದ್ದನ್ನು ಇತರರಿಗೆ ನೀಡಿ, ಕನ್ನಡದ ಕೆಲಸ ಮಾಡಿದ್ದಾರೆ. ಇಷ್ಟು ಸಾಲದೇನು? ❑

# ಅಪರೂಪದ ಸಹೃದಯ

● *ಅಂದನೂರು ಶೋಭ*

**ಕ**ರ್ನಾಟಕ ಸರ್ಕಾರ, ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ ೨೦೦೪-೦೬ರ ಅವಧಿಗೆ ಏಳು ಜನ ಸದಸ್ಯರನ್ನು ನೇಮಿಸಿದಾಗ, ಇತರರೊಂದಿಗೆ ಪ್ರೊ. ಚಿ. ಶ್ರೀನಿವಾಸರಾಜು ಹಾಗೂ ನನ್ನನ್ನು ನೇಮಿಸಿತ್ತು. ಹೀಗಾಗಿ, ನಾವುಗಳು ಪ್ರಾಧಿಕಾರದ ಕೆಲಸ-ಕಾರ್ಯಗಳಲ್ಲಿ, ಕನ್ನಡ ಅನುಷ್ಠಾನದ ತಪಾಸಣೆಗಾಗಿ ಒಟ್ಟೊಟ್ಟಿಗೆ ಹೋಗುತ್ತಿದ್ದೆವು. ಇಲ್ಲೆಲ್ಲಾ ತುಂಬಾ ಸಂಯಮದಿಂದ ಬಹಳ ಸೌಜನ್ಯದಿಂದ ಪ್ರೊ. ರಾಜು ಅವರು ನಡೆದುಕೊಳ್ಳುತ್ತಿದ್ದ ರೀತಿ ಇತರರಿಗೆ ಮಾರ್ಗ ದರ್ಶನದಂತಿತ್ತು. ಪ್ರಾಧಿಕಾರದ ಇತರೆ ಚಟುವಟಿಕೆಗಳೊಂದಿಗೆ ಮೊಟ್ಟ ಮೊದಲ ಬಾರಿಗೆ ಯುವ ಜನತೆಗೆ ಕನ್ನಡ ನಾಡು-ನುಡಿ-ಭಾಷೆಯ ಬಗೆಗೆ ಅಭಿಮಾನ, ಆಸಕ್ತಿ ಮೂಡಲೆಂದು, ಈ ಕುರಿತು ರಚಿತವಾಗಿರುವ ಕವಿತೆಗಳನ್ನೊಳಗೊಂಡ "ಕನ್ನಡ ಕನ್ನಡ ಹಾ! ಸವಿಗನ್ನಡ", "ನನ್ನದು ಈ ಕನ್ನಡ ನಾಡು", ಈ ಎರಡು ಕೃತಿಗಳನ್ನು ಪ್ರಕಟಿಸಬೇಕೆಂದು ನಿರ್ಧರಿಸಿ, ಕೃತಿಗಳ ಸಂಪಾದಕರನ್ನಾಗಿ ಪ್ರೊ. ರಾಜು ಹಾಗೂ ನನ್ನನ್ನು ಪ್ರಾಧಿಕಾರ ನೇಮಿಸಿತ್ತು. ಈ ಕೃತಿಗಳಲ್ಲಿ ಅಳವಡಿಸಲು ಕವಿತೆಗಳ ಆಯ್ಕೆಯಲ್ಲಿ ಪ್ರೊ. ರಾಜು ಅವರು ಇಟ್ಟುಕೊಂಡಿದ್ದ ಮಾನದಂಡ, ಕವಿತೆಗಳಿಗಾಗಿ ಶೋಧನೆ, ಪಟ್ಟ ಶ್ರಮ, ಅದಕ್ಕಾಗಿ ಅನೇಕರನ್ನು ಸಂಪರ್ಕಿಸಿ ಕವಿತೆಗಳನ್ನು ಪಡೆದ ರೀತಿ ತುಂಬ ಆಶ್ಚರ್ಯವನ್ನುಂಟು ಮಾಡಿತು. ಶ್ರೀ ಎಚ್.ಎಂ. ರಂಗನಾಥ್, ಶ್ರೀ ರಾಘವೇಂದ್ರ ಇಟಗಿ, ಶ್ರೀ ಮೂಗೂರು ಮಲ್ಲಪ್ಪ, ಶ್ರೀ ಕೆ. ರಾಘವಾಚಾರ್ ಅವರುಗಳ ಕವಿತೆಗಳು, ಅವರ ಬಗೆಗೆ ಮಾಹಿತಿಗಾಗಿ ಎಲ್ಲೆಡೆಯೂ ವಿಚಾರಿಸಿ, ಕೊನೆಗೆ ದೊರಕಿದಾಗ, ರಾಜು ಅವರಿಗಾದ ಸಂತಸವನ್ನು ವರ್ಣಿಸಲು ಸಾಧ್ಯವಿಲ್ಲ. ಸ್ವತಃ ರಾಜು ಅವರು ಲೇಖಕರಾಗಿರುವುದರಿಂದ, ಇತರ ಲೇಖಕರನ್ನು ಕಂಡರೆ ಇವರಿಗೆ ಅಪಾರ ಅಭಿಮಾನ ಮತ್ತು ಗೌರವ. ಈ ಮೇಲಿನ ಸಂಕಲನಗಳು ಸರ್ಕಾರದ ವತಿಯಿಂದ ಪ್ರಕಟವಾಗುತ್ತಿರುವುದರಿಂದ



ದಾಖಲೆಗಳಾಗಿ ಬಹುಕಾಲ ಉಳಿಯುವಂತಹ ಕೃತಿಗಳಾದ್ದರಿಂದ ಯಾವ ಉದ್ದೇಶಕ್ಕಾಗಿ ಕೃತಿಗಳನ್ನು ಪ್ರಕಟಿಸುತ್ತಿರುವುದೋ ಅದಕ್ಕೆ ಚ್ಯುತಿಯಾಗಬಾರದೆಂದು ಅನ್ವೇಷಣೆ ಮಾಡಿ ಕವಿತೆಗಳನ್ನು ಕವಿಗಳ ಬಗೆಗೆ ಮಾಹಿತಿಯನ್ನು ಪಡೆಯಲು ಶ್ರಮಿಸಿದ್ದಾರೆ. ಪ್ರಾಧಿಕಾರ ಪ್ರಕಟಿಸಿದ ಮೊದಲ ಕೃತಿ "ಕನ್ನಡ ಕನ್ನಡ ಹಾ! ಸವಿಗನ್ನಡ" ಪ್ರಕಟವಾದ ವರ್ಷವೇ ೫೦೦೦ ಪ್ರತಿಗಳು ಮಾರಾಟವಾಗಿ ಎರಡನೆಯ ಮುದ್ರಣ ಮಾಡುವಂತಾಯಿತು.

ಪ್ರೊ. ರಾಜು ಅವರಲ್ಲಿನ ವಿಶೇಷ ಗುಣವೆಂದರೆ, ಅವರು ಯಾವುದೇ ಒತ್ತಡಕ್ಕೂ ಮಣಿಯದೆ, ವಸ್ತುಸ್ಥಿಯನ್ನರಿತು, ಹಾಕಿಕೊಂಡ ಚೌಕಟ್ಟಿಗೆ ಅನುಗುಣವಾಗಿ ಕಾರ್ಯಯೋಜನೆಗಳನ್ನು ಪರಿಪೂರ್ಣಗೊಳಿಸುವ ಕಲೆಗಾರಿಕೆ ಅನನ್ಯವಾದುದು. ತಾವು ಸದಸ್ಯರಾಗಿರುವುದರಿಂದ ತಮ್ಮ ಕವಿತೆಗಳನ್ನು "ನನ್ನದು ಈ ಕನ್ನಡ ನಾಡು' ಸಂಕಲನಕ್ಕೆ ಆಯ್ಕೆ ಮಾಡಿಕೊಳ್ಳುವುದು ಉಚಿತವಲ್ಲವೆಂದು, ಇತರರು ತಮ್ಮ ಕವಿತೆಗಳನ್ನು ಸೇರಿಸಲೇ ಬೇಕೆಂದು ಆಗ್ರಹಿಸಿದರೂ, ರಾಜು ಅವರು ತಮ್ಮ ನಿಲುವನ್ನು ಬದಲಾಯಿಸಲಿಲ್ಲ. ಹಾಗೂ ತಮ್ಮ ಕವಿತೆಗಳನ್ನು ಈ ಸಂಕಲನದಲ್ಲಿ ಸೇರಿಸಲೇ ಇಲ್ಲ. ಅಷ್ಟರಮಟ್ಟಿಗೆ ಖಂಡಿತವಾಗಿ ನುಡಿದಂತೆ ನಡೆಯುವವರು.

ಪ್ರೊ. ರಾಜು ಅವರು ಪ್ರಾಧಿಕಾರದ ಸಭೆಗಳಲ್ಲಿ ಯಾವುದೇ ಚರ್ಚೆಯಲ್ಲಿ ಭಾಗವಹಿಸಿದರೂ ಬಹಳ ತಾಳ್ಮೆಯಿಂದ, ಇತರರ ಮಾತುಗಳನ್ನು ಆಲಿಸಿ, ವಸ್ತುನಿಷ್ಠವಾಗಿ ವಿಶ್ಲೇಷಿಸಿ ತಮ್ಮ ಅಭಿಪ್ರಾಯಗಳನ್ನು ಮಂಡಿಸುತ್ತಿದ್ದುದು ಇವರ ವಿಶೇಷತೆ. ಒಂದು ರೀತಿಯ ಆತ್ಮೀಯ ವಾತಾವರಣವನ್ನೇ ನಿರ್ಮಿಸುತ್ತಿದ್ದರು.

ಪ್ರೊ. ಶ್ರೀನಿವಾಸರಾಜು ಅವರು ಪ್ರಚಾರಪ್ರಿಯರಲ್ಲ, ಮೌನ ಸಾಧಕರು. ಸದ್ದುಗದ್ದಲವಿಲ್ಲದೆ ಕನ್ನಡ ಪರ ಕೆಲಸಗಳನ್ನು ಆದ್ಯತೆಯಿಂದ, ಇತರರಿಗೆ ನೋವಾಗದಂತೆ ಕಾರ್ಯನಿರ್ವಹಿಸುತ್ತಾರೆ. ಉದಾರತೆ, ಸ್ನೇಹಪರತೆ, ಸಾಂಸ್ಕೃತಿಕ ಸದಭಿರುಚಿಯ ಪೋಷಕ ಗುಣ ಬೇರೆ ಯಾರಲ್ಲೂ ಕಾಣದಂತಹ ಈ ಅಪರೂಪದ ಗುಣ ಇವರಲ್ಲಿ ಎದ್ದು ಕಾಣುತ್ತದೆ.

ಅಷ್ಟೇ ಅಲ್ಲದೆ, ಹಿರಿಯರು, ಕಿರಿಯರೆನ್ನದೆ, ಅತ್ಯುತ್ತಮವಾದ ಕೆಲಸವನ್ನು ಯಾರೇ ನಿರ್ವಹಿಸಲಿ, ಅವರನ್ನು ಅಭಿನಂದಿಸಿ ಉತ್ತೇಜಿಸುವಂತಹ ದೊಡ್ಡ ಗುಣ ರಾಜು ಅವರಿಗಿದೆ. ಉದಾಹರಣೆಗೆ ನಾನು ೧೯೯೨ರಲ್ಲಿ, ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗ ಹಾಗೂ ಮುದ್ರಣಾಲಯದ ಕಾರ್ಯನಿರ್ವಾಹಕ ನಿರ್ದೇಶಕಿಯಾಗಿದ್ದವಳು ಅದನ್ನು ಬಿಟ್ಟು ಉಪನಿರ್ದೇಶಕಿಯಾಗಿ ಬೆಂಗಳೂರು ವಿಶ್ವವಿದ್ಯಾಲಯದ ಅಂಚೆ ತೆರಪು ಹಾಗೂ ದೂರ ಶಿಕ್ಷಣ ನಿರ್ದೇಶನಾಲಯಕ್ಕೆ ಸ್ವತಃ ವರ್ಗಮಾಡಿಸಿಕೊಂಡು ಹೋದೆ. ಇದಕ್ಕೆ ಕಾರಣ ಈ ವಿಭಾಗ ಅಸ್ತಿತ್ವಕ್ಕೆ ಬಂದು ೨೫ ವರ್ಷವಾಗಿದ್ದರೂ ಅಲ್ಲಿ ಬಿ.ಎ./ ಬಿ.ಕಾಂ ಅಂಚೆ ತೆರಪಾಗಿ, ಉಳಿದಂತೆ ಸ್ನಾತಕ ಪದವಿಗಳೆಲ್ಲವೂ ಬಾಹ್ಯವಾಗಿದ್ದವು; ಎಲ್ಲವೂ ಇಂಗ್ಲೀಷ್ ಮಾಧ್ಯಮ. ಗ್ರಾಮೀಣ ಪರಿಸರದಿಂದ ಬಂದ ವಿದ್ಯಾರ್ಥಿಗಳು ಇಂಗ್ಲಿಷ್‌ನಲ್ಲಿ ಅಭ್ಯಾಸಮಾಡಿ ಕನ್ನಡದಲ್ಲಿ ಬರೆಯಬೇಕಾಗಿತ್ತು. ಇದರಿಂದಾಗಿ ವಿದ್ಯಾರ್ಥಿಗಳು ತುಂಬಾ ಕಷ್ಟಪಡುತ್ತಿದ್ದರು. ಇದರ ಅರಿವಿದ್ದ ನಾನು ೧೯೯೩ರಲ್ಲಿ ವರ್ಗಮಾಡಿಸಿಕೊಂಡು ಬಂದು ಮೊಟ್ಟಮೊದಲಿಗೆ ಬಿ.ಎ.ಯಿಂದ ಎಂ.ಎ.

ವರೆವಿಗೂ ಕನ್ನಡ ಮಾಧ್ಯಮವನ್ನು ಪ್ರಾರಂಭಿಸಿ, ಬಾಹ್ಯವಾಗಿದ್ದ ಸ್ನಾತಕ ಪದವಿಗಳನ್ನೆಲ್ಲಾ ಅಂಚೆ ತೆರಪಾಗಿ ಪರಿವರ್ತಿಸಿ, ಎಲ್ಲರಿಗೂ ಕನ್ನಡದಲ್ಲಿ ಮಾರ್ಗದರ್ಶಿ ಅಭ್ಯಾಸ ಪಾಠಗಳನ್ನು ಬರೆಯಿಸಿ ವಿತರಿಸಿದಾಗ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಓದಲು ಬಂದರು. ಈ ವಿಷಯವನ್ನು ಅರಿತ ಪ್ರೊ. ರಾಜು ಅವರು ನಿರ್ದೇಶನಾಲಯಕ್ಕೆ ಬಂದು ನನ್ನನ್ನು ಅಭಿನಂದಿಸಿದ್ದಲ್ಲದೆ, ಇನ್ನೂ ಹೆಚ್ಚಿನ ಕೆಲಸಗಳನ್ನು ಮಾಡುವಂತೆ ಪ್ರೋತ್ಸಾಹಿಸಿದ್ದರು. ಇಂದು ಒಳ್ಳೆಯ ಕೆಲಸಗಾರರನ್ನು ಗುರುತಿಸುವುದಾಗಲೀ, ಪ್ರೋತ್ಸಾಹಿಸುವುದಾಗಲೀ ಇಲ್ಲವೇ ಇಲ್ಲ. ಬದಲಿಗೆ ಅಂಥವರಿಗೆ ತೊಂದರೆ ಕೊಡುವವರೇ ಹೆಚ್ಚಾಗಿದ್ದಾರೆ.

ಇಂದು ಎಲ್ಲೆಡೆಯೂ ಸ್ಪರ್ಧಾತ್ಮಕ ಮನೋಧರ್ಮದವರನ್ನೇ ನೋಡುತ್ತೇವೆ. ಅದು ಆರೋಗ್ಯಕರವಾಗಿದ್ದರೆ ಸರಿ. ಆದರೆ ಮತ್ತೊಬ್ಬರನ್ನು ತುಳಿದು, ಇಲ್ಲವೇ ಒಬ್ಬರ ಗೋರಿಯ ಮೇಲೆ ಮಲ್ಲಿಗೆ ಬೆಳೆದು ಸುವಾಸನೆಯಲ್ಲಿ ಮೈಮರೆಯುವವರೇ ಜಾಸ್ತಿ. ಇಂತಹ ಪರಿಸರದಲ್ಲೂ ಪ್ರೊ. ರಾಜು ಅವರು ಯಾರಿಂದಲೂ ಏನನ್ನೂ ನಿರೀಕ್ಷಿಸದೆ, ಯಾವುದೇ ಕೆಲಸವನ್ನು ಕೈಗೊಂಡರೂ ಶ್ರದ್ಧೆಯಿಂದ ಪ್ರೀತ್ಯಾದರದಿಂದ, ತಮ್ಮೊಂದಿಗೆ ಇತರರನ್ನು ಸೇರಿಸಿಕೊಂಡು ಕಾರ್ಯನಿರ್ವಹಿಸುವ ಸಹೃದಯ ಗುಣ ಬಹಳ ಅಪರೂಪವಾದದ್ದು.

ಪ್ರೊ. ರಾಜು ಅವರು ಕನ್ನಡ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಶಿಕ್ಷಣ ಕ್ಷೇತ್ರಕ್ಕೆ ಅನುಪಮ ಸೇವೆ ಸಲ್ಲಿಸಿದ್ದಾರೆ. ಚಿಂತನಶೀಲರು, ಕಾವ್ಯ, ನಾಟಕ, ವಿಮರ್ಶಾ ಪ್ರಕಾರಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಅಷ್ಟೇ ಅಲ್ಲದೆ ಪ್ರಕಾಶಕರಾಗಿ ಕ್ರೈಸ್ಟ್ ಕಾಲೇಜಿನಲ್ಲಿ ಕನ್ನಡ ಪುಸ್ತಕಗಳ ಪ್ರಕಟಣೆಯನ್ನು ಆರಂಭಿಸಿ, ಅತ್ಯಂತ ದಕ್ಷತೆಯಿಂದ ೧೦೦ ಪುಸ್ತಕಗಳನ್ನು ಪ್ರಕಟಿಸಿದ ಹೆಗ್ಗಳಿಕೆ ಇವರದು. ಇವರು, ವಿಶ್ವವಿದ್ಯಾಲಯಗಳ ಪ್ರಸಾರಾಂಗದಂತಹ ಒಂದು ವಿಭಾಗ ಮಾಡುವಂತಹ ಕೆಲಸವನ್ನು ಒಬ್ಬ ವ್ಯಕ್ತಿಯಾಗಿ ಖಾಸಗಿ ಕಾಲೇಜಿನಲ್ಲಿ ಕಾರ್ಯನಿರ್ವಹಿಸಿರುವುದು ಅತ್ಯಂತ ಪ್ರಶಂಸನೀಯವಾದುದು. ಇವರ ಕಾಲಾವಧಿಯಲ್ಲಿ ಅತ್ಯಂತ ಮೌಲಿಕವಾದ ೧೦೦ ಪುಸ್ತಕಗಳನ್ನು ಪ್ರಕಟಿಸಿರುವುದಲ್ಲದೆ, ಅನೇಕ ಪ್ರತಿಭಾವಂತರನ್ನು ಬೆಳಕಿಗೆ ತಂದಿದ್ದಾರೆ. ವ್ಯಕ್ತಿಗಿಂತ ಕೃತಿ ಮುಖ್ಯ. ಇದೇ ಇವರು ಇಟ್ಟುಕೊಂಡಿರುವ ಮಾನದಂಡ, ಅಷ್ಟೇ ಅಲ್ಲದೆ ವಿದ್ಯಾರ್ಥಿಗಳಿಗೆ ಸ್ಪರ್ಧೆಗಳನ್ನು ಏರ್ಪಡಿಸಿ, ಅವರಲ್ಲಿ ಸುಪ್ತವಾಗಿದ್ದ ಸೃಜನಶೀಲತೆ ಹೊರಹೊಮ್ಮುವಂತೆ ಕಾರ್ಯಗೈದಿದ್ದಾರೆ. ತರುಣಕವಿ/ಕವಯಿತ್ರಿಯನ್ನು ನಾಡಿಗೆ ಪರಿಚಯಿಸಿದ್ದಾರೆ. ಯಾವ ಅಕಾಡೆಮಿಯೂ ಮಾಡದಂತಹ ಕೆಲಸವಿದು. ಹಾಗೆಯೇ ಕವಿತೆಗಳ ಆಯ್ಕೆ ಇತ್ಯಾದಿಯಲ್ಲಿ ಗುಣಮಟ್ಟಕ್ಕೆ ಆದ್ಯತೆ. ಪ್ರೊ. ರಾಜು ಅವರಿಗೆ ಯಾವುದೇ ಕೆಲಸವನ್ನು ವಹಿಸಿದರೂ ಬಹಳ ಶಿಸ್ತಿನಿಂದ, ಅಚ್ಚುಕಟ್ಟಾಗಿ ನಿರ್ವಹಿಸುತ್ತಾರೆ; ವೈಚಾರಿಕ ನೆಲೆಗಟ್ಟಿನಲ್ಲಿ ವಿಶ್ಲೇಷಿಸುವಂತಹ ವೈಜ್ಞಾನಿಕ ಮನೋಭಾವದವರು. ಇವರ ಉದಾತ್ತ ವಿಚಾರ, ಮೌಲ್ಯಾಧಾರಿತ ಜೀವನ ಆದರ್ಶನೀಯ.

ಶಿಸ್ತು, ಸಮಯ ಪರಿಪಾಲನೆ, ಅಚ್ಚುಕಟ್ಟುತನ, ಎಲ್ಲರನ್ನು ಪ್ರೀತಿ ವಿಶ್ವಾಸದಿಂದ ಗೌರವದಿಂದ ಮಾತನಾಡಿಸುವ ಪರಿ.... ಇತ್ಯಾದಿ ಅಪರೂಪದ ಗುಣಗಳನ್ನು ನನ್ನ ನೆಚ್ಚಿನ ವಿದ್ಯಾಗುರುಗಳಾಗಿದ್ದ ಡಾ. ಜಿ.ಎಸ್. ಶಿವರುದ್ರಪ್ಪ ಅವರಲ್ಲಿ ಕಂಡುಬರುತ್ತಿತ್ತು. ಈ ಎಲ್ಲಾ ಗುಣಗಳು ಪ್ರೊ. ರಾಜು ಅವರಲ್ಲಿ ಪ್ರತಿಬಿಂಬಿಸುತ್ತಿವೆ. ಹೀಗಾಗಿ ರಾಜು ಅವರನ್ನು ಕಂಡರೆ ಎಲ್ಲರಿಗೂ ಗೌರವ ಮತ್ತು

ಅಭಿಮಾನ. ಸ್ನೇಹ ಸೌಜನ್ಯ ಸಜ್ಜನಿಕೆಯ ಪ್ರತಿರೂಪದಂತಿರುವ ರಾಜು ಅವರ ಜೀವನೋತ್ಸಾಹ ಸಮಾಜಮುಖಿ ಬದುಕು ಅನುಕರಿಸುವಂತಹದು.

ನಾವುಗಳು ಪ್ರೀತಿಯ ಮೊದಲಕ್ಕರವನ್ನು ತಾಯಿಯಿಂದ ಕಲಿತು, ತದನಂತರ ಜೀವನ ದುದ್ದಕ್ಕೂ ಶಿಕ್ಷಣದಿಂದ, ಪುಸ್ತಕಗಳಿಂದ, ಜೀವನದಿಂದ, ಸಂದರ್ಭಗಳಿಂದ, ಪರಿಸರದಿಂದ, ಇತರರಿಂದ, ಆಪ್ತರಿಂದ.... ನಮ್ಮ ಕಲಿಕೆ ಮುಂದುವರಿಯುತ್ತದೆ. ಆದರೆ, ಇಂದು ವ್ಯಾಪಾರ ಮನೋಭಾವವೇ ಎಲ್ಲೆಡೆಯೂ ತಾಂಡವವಾಡುತ್ತಿರುವಾಗ, ಆಪ್ತರು, ಸಹೃದಯದವರು ದೊರಕುವುದೇ ಅಪರೂಪವಾಗಿದೆ. ಆದರೂ ಪ್ರೊ. ಚಿ. ಶ್ರೀನಿವಾಸರಾಜು ಅಂತಹ ಆಪ್ತರು ನಮ್ಮ ನಡುವೆ ಇರುವುದೇ ನಮ್ಮ ಅದೃಷ್ಟ.



# ಒಡನಾಡಿದ ಆಪ್ತಕ್ಷಣಗಳು

● ಚಿಂತಾಮಣಿ ಕೊಡ್ಲೆಕೆರೆ

**ಧಾ**ರವಾಡದಲ್ಲಿ ನಾನು ಓದುತ್ತಿದ್ದ ದಿನಗಳು ಅವು. ಪ್ರೊ. ಚಿ. ಶ್ರೀನಿವಾಸರಾಜು ಅವರು ಒಂದು ಮಧ್ಯಾಹ್ನ ನಮ್ಮ ಹಾಸ್ಟೆಲ್ ರೂಮಿಗೆ ಬಂದರು. ನಾನು ಕ್ಲಾಸಿಗೆ ಹೋಗಿದ್ದೆ. ವಾಪಸು ಬರುವ ಹೊತ್ತಿಗೆ ಚಿ. ಶ್ರೀ ಅವರ ಚೀಟಿ ನನಗಾಗಿ ಕಾಯುತ್ತಿತ್ತು. ಅವರು ಹೋಟೆಲ್ ಧಾರವಾಡದಲ್ಲಿ ಉಳಿದುಕೊಂಡಿದ್ದರು. ಸಾಯಂಕಾಲ ಬಿಡುವಾಗಿ ಬನ್ನಿರೆಂದು ತಿಳಿಸಿದ್ದರು, ಹೋದೆ.

ಶ್ರೀನಿವಾಸರಾಜು ಅವರು ಅಂದು ಬರುವುದು ನನಗೆ ತಿಳಿದಿತ್ತು. ಮೊದಲೇ ಅವರು ಪತ್ರ ಬರೆದು ತಿಳಿಸಿದ್ದರು. ಆದರೆ ಅವರೇ ರೂಮಿಗೆ ಹುಡುಕಿಕೊಂಡು ಬಂದಾರೆಂಬ ಕಲ್ಪನೆ ಇರಲಿಲ್ಲ. ಆ ವರ್ಷ ಕ್ರೈಸ್ಟ್ ಕಾಲೇಜ್ ಏರ್ಪಡಿಸಿದ ಸ್ಪರ್ಧೆಗಳಲ್ಲಿ ನನಗೆ ಬಹುಮಾನ ಬಂದಿತ್ತು. ಬಹುಮಾನ ಪಡೆಯಲು ನಾನು ಬೆಂಗಳೂರಿಗೆ ಹೋಗಿರಲಿಲ್ಲ. ನನಗಾಗಿ ಬಹುಮಾನಗಳನ್ನು ಶ್ರೀನಿವಾಸರಾಜು ಅವರು ಹೊತ್ತು ತಂದಿದ್ದರು. ಅದರಷ್ಟೇ ಮುಖ್ಯ ಸಂಗತಿ ಎಂದರೆ 'ಉದಯೋನ್ಮುಖ ಕವಿ'ಯನ್ನು ಅವರು ಮುಖತಃ ನೋಡಬಯಸಿದ್ದರು. ಒಟ್ಟಿನಲ್ಲಿ ನಮ್ಮ ಭೇಟಿ ಅವರು ಅಂದು ತಂಗಿದ್ದ ಹೋಟೆಲ್‌ರೂಮಿನಲ್ಲಿ ನೆರವೇರಿತು. ಪ್ರಥಮ ಭೇಟಿಯಲ್ಲೇ ನಾನು ಅವರ ಸೌಜನ್ಯ ಪೂರ್ಣ ವ್ಯಕ್ತಿತ್ವದಿಂದ ಪ್ರಭಾವಿತನಾದೆ. ಅವರು ರಾಜರತ್ನಂರ ವಿದ್ಯಾರ್ಥಿಯಾಗಿದ್ದರೆಂದು ತಿಳಿದಮೇಲಂತೂ ಅವರ ವ್ಯಕ್ತಿತ್ವಕ್ಕೊಂದು ಸ್ವರ್ಣಪ್ರಭೆ ಸೇರಿಕೊಂಡಿತು. ನಾನು ರಾಜರತ್ನಂರನ್ನು ನೋಡಿದವನಲ್ಲ. ಅವರ ವಿದ್ಯಾರ್ಥಿಯಾಗಿದ್ದ ನನ್ನ ತಂದೆಯವರು ರಾಜರತ್ನಂರ ಪದ್ಯಗಳನ್ನು ಓದಿ, ಕಥೆಗಳನ್ನು ಹೇಳಿ ಅವರ ಕುರಿತು ಮೂಡಿಸಿದ್ದ ಪೂಜ್ಯಭಾವ ಎಂಥದೆಂದರೆ ರಾಜರತ್ನಂರ ವಿದ್ಯಾರ್ಥಿಗಳೆಲ್ಲ ಒಂದು 'ಗುರುಕುಲ'ಕ್ಕೆ ಸೇರಿದವ ರೆಂದುಕೊಳ್ಳುತ್ತಿದ್ದೆ. ಈ ಸೂತ್ರ ಎಷ್ಟು ಬಲವಾದುದೆಂದರೆ ಮುಂದೆ



ನನ್ನ ತಂದೆಯವರೂ ಶ್ರೀನಿವಾಸರಾಜು ಅವರ ಸ್ನೇಹಿತರಾದರು ಮತ್ತು ಈ ಸ್ನೇಹ ಮುಂದುವರಿಯುತ್ತಿದೆ.

ಈ ವಿಷಯ ಇಷ್ಟು ವಿವರವಾಗಿ ಹೇಳಲು ಕಾರಣವೆಂದರೆ ಶ್ರೀನಿವಾಸರಾಜು ಅವರು ರಾಜರತ್ನಂ ನಿರ್ಮಿಸಿದ ಪುಸ್ತಕ ಸಂಸ್ಕೃತಿಯನ್ನು ವಿಶಿಷ್ಟವಾಗಿ ಮುಂದುವರಿಸಿದ್ದು ಮತ್ತು ಬೆಳೆಸಿದ್ದು. ನಮ್ಮ ಜನಾಂಗದ ಲೇಖಕರೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಶ್ರೀನಿವಾಸರಾಜು ಅವರಿಗೆ ಋಣಿಗಳಾಗಿದ್ದೇವೆ. ನಾಡಿನಾದ್ಯಂತ ಇರುವ, ಇನ್ನೂ ಕಣ್ಣು ಬಿಡುವ ವಯಸ್ಸಿನ ಎಳೆಯ ಕವಿಗಳನ್ನು ಒಟ್ಟು ಸೇರಿಸಿ ಅವರೊಂದು ವಿನೂತನ 'ಗುರುಕುಲ'ವನ್ನು ನಿರ್ಮಿಸಿದ್ದಾರೆ. ಈ ಗುರುಕುಲದಲ್ಲಿ ಒಂದು ಸಲ ಕವಿತೆಗಳ ಮೌಲ್ಯಮಾಪಕನಾಗುವ ಗೌರವವನ್ನೂ ಶ್ರೀನಿವಾಸರಾಜು ಅವರು ನನಗೆ ಒದಗಿಸಿಕೊಟ್ಟಿದ್ದಾರೆ.

ಶ್ರೀನಿವಾಸರಾಜು ಅವರು ಹೆಚ್ಚು ಮಾತನಾಡುವವರಲ್ಲ, ಗಟ್ಟಿಯಾಗಿ ಮಾತನಾಡುವವರೂ ಅಲ್ಲ. ನಮ್ಮ ಬರಹಗಳನ್ನು ಓದಿ ಅವರು ಖಚಿತ ವಿಮರ್ಶೆಯ ಮಾತುಗಳನ್ನಾಡುವುದೂ ಅಪರೂಪವೇ. ಸೃಜನಶೀಲತೆಯನ್ನು ಉಳಿಸುವುದು, ಬೆಳೆಸುವುದರಲ್ಲಿಯೇ ಅವರು ಸಂತೋಷ, ಸಾರ್ಥಕತೆ ಕಂಡವರು. ಸಿಕ್ಕಾಗಲೆಲ್ಲ ಅವರ ಬಗಲುಚೀಲದಿಂದ ಹೊಸ ಪುಸ್ತಕಗಳನ್ನು ತೆಗೆದು ಕೈಗೆ ನೀಡುತ್ತಲೇ ಇರುತ್ತಾರೆ. ಈ ಪ್ರೀತಿಯ ಆಳವಾದರೂ ಎಷ್ಟು, ಅರ್ಥವಾದರೂ ಎಂಥದು, ಇದನ್ನು ಪಡೆಯಲು ನನಗಿರುವ ಅರ್ಹತೆಯಾದರೂ ಏನು ಎಂದು ಅನೇಕ ಸಲ ಚಡಪಡಿಸಿದ್ದೇನೆ.

ನಮ್ಮ ಬದುಕಿನಲ್ಲಿ ಕೆಲವರು ಏನೇನೂ ಅಪೇಕ್ಷೆ ಇಲ್ಲದೆ ಅನೇಕ ಬಗೆಯ ನೆರವನ್ನಿತ್ತು ಆ ನೆರವನ್ನಿತ್ತಿದ್ದೇವೆಂಬ ಅರೆಕ್ಷಣದ ತೋರಿಕೆಯೂ ಇಲ್ಲದೆ ನಡೆದುಬಿಡುತ್ತಾರೆ. ಶ್ರೀನಿವಾಸರಾಜು ಅವರೊಡನೆ ಪ್ರತಿಸಲ ಭೇಟಿ ಆದಾಗಲೂ ನನ್ನಲ್ಲಿ ಅಂಥ ಭಾವ ಬಂದಿವೆ. ಅವರ ಕವಿತೆಗಳು, ಮೂಕನಾಟಕಗಳು, ಶತಕ ಮೀರಿದ ಪುಸ್ತಕ ಪ್ರಕಟಣೆಗಳು, ಇತರೆಲ್ಲ ಕಾರ್ಯಗಳನ್ನೂ ಮಿಕ್ಕು, ಮೀರಿ ಉಳಿಯುವಂಥದು ಅವರ ಪ್ರಸನ್ನ ವಿನಯಶೀಲ ವ್ಯಕ್ತಿತ್ವ. ನಮಗೆಲ್ಲ ಅವರು ಪ್ರೀತಿ, ಭರವಸೆಗಳ ಅಪೂರ್ವ ಸಂಕೇತವಾಗಿದ್ದಾರೆ.



# ಪ್ರೊ॥ ಚಿ. ಶ್ರೀನಿವಾಸರಾಜು – ನಾನು ಕಂಡಂತೆ

● *ಕೆ.ಎಲ್. ಗೋಪಾಲಕೃಷ್ಣಯ್ಯ*

ವಯಸ್ಸಿನಲ್ಲೂ ಹಿರಿಯರಾದವರು ತಮಗಿಂತ ಕಿರಿಯರನ್ನು 'ಚಿರಂಜೀವಿ' ಎಂದು ಸಂಬೋಧಿಸುವುದು ಸಂಪ್ರದಾಯ. ಪ್ರೊ॥ ಶ್ರೀನಿವಾಸರಾಜು ಅವರ ಹೆಸರಿನ ಮೊದಲಿನಲ್ಲಿ ಚಿ॥ ಎಂಬುದು ತಾನೆ ಸೇರಿಕೊಂಡಿದೆ. ಇವರ ಮನೆಯ ಹೆಸರೂ 'ಚಿರಂಜೀವಿ' ಎಂದು. ನನಗಂತೂ ರಾಜು ಅವರನ್ನು ಚಿರಂಜೀವಿ ಎಂದು ಸಂಬೋಧಿಸುವ ಅರ್ಹತೆಯಿದೆ. ಪ್ರೊ॥ ಶ್ರೀನಿವಾಸರಾಜು ಅವರಿಗಿಂತ ವಯಸ್ಸಿನಲ್ಲಿ ನಾನು ಸಾಕಷ್ಟು ದೊಡ್ಡವ.

ನನಗೆ ಮೊದಲು ಶ್ರೀನಿವಾಸರಾಜು ಅವರ ಸಂಪರ್ಕವೊದಗಿದುದು ನನ್ನ ಸಹೋದ್ಯೋಗಿ ಮಿತ್ರ ಡಾ॥ ಎಚ್.ಎಸ್. ರಾಘವೇಂದ್ರ ರಾವ್ ಅವರ ಮೂಲಕ. ರಾಜು ಮತ್ತು ಎಚ್.ಎಸ್.ಆರ್. ಅವರ ಮಿತ್ರತ್ವ ಒಂದು ರೀತಿ ಅವಿನಾಭಾವ ಸಂಬಂಧ. ರಾಜು ಎತ್ತರ ನಿಲುವಿನ ದಷ್ಟ ಪುಷ್ಟವಾಗಿ ಬೆಳೆದ ವ್ಯಕ್ತಿ. (ಈಚೆಗೆ ಇವರು ಸ್ವಲ್ಪ ಬಡವಾಗಿದ್ದಾರೆ– ಕ್ಷಮಿಸಿ ಇದು ನಮ್ಮೂರಕಡೆ ಮಾತು) ದಢೂತಿ ಆಕಾರದ ರಾಜು ಅವರ ಸ್ಕೂಟರಿನಲ್ಲಿ ಅವರ ಹಿಂದೆ ಪುಟ್ಟದಾಗಿ ಕುಳಿತ ಎಚ್.ಎಸ್.ಆರ್. ಸಭೆ ಸಮಾರಂಭಗಳಿಗೆ ಒಮ್ಮೊಮ್ಮೆ ಕಾಲೇಜಿಗೆ ಬರುತ್ತಿದ್ದುದು ಪರಿಚಿತ ದೃಶ್ಯ. ಒಂದೆರಡು ಬಾರಿ ನಮ್ಮ ಮನೆಗೆ ಇಬ್ಬರೂ ಜೊತೆಯಾಗಿ ಬಂದುದುಂಟು. ನಮ್ಮ ಕುಟುಂಬದವರಿಗೆ ಕೂಡ ರಾಜು ಹೆಚ್ಚು ಪರಿಚಿತರಾದುದು ಎಚ್.ಎಸ್.ಆರ್. ಒಡನಾಡಿ ಎಂದೇ. ಮದುವೆಗಳಂಥ ಸಮಾರಂಭಗಳಲ್ಲಿ ಪರಸ್ಪರ ಭೇಟಿಯಾಗುವ ಮೂಲಕ ನಮ್ಮ ಮನೆಯವರಿಗೂ ರಾಜು ಕುಟುಂಬದವರಿಗೂ ಪರಿಚಯ ಬೆಳೆಯಿತು. ಶ್ರೀನಿವಾಸರಾಜು ಅವರ ಮಗ ಚಿ॥ ಸುಗತ ನನ್ನ ವಿದ್ಯಾರ್ಥಿ. ಕೋದಂಡರಾಮಪುರ ಈಜುಕೊಳದ ರಸ್ತೆಯ ಶ್ರೀನಿವಾಸರಾಜು ಅವರ ಮನೆಗೆ ನಾನು ಒಂದೆರಡು ಬಾರಿ ಹೋಗಿಬಂದ ನೆನಪು. ಕಳೆದ ಸುಮಾರು ಮೂವತ್ತೈದು ವರ್ಷಗಳಲ್ಲಿ ಪರಸ್ಪರ ಪರಿಚಯ ಬೆಳೆಯುತ್ತ ಬಂದಿದೆ.

ನಮ್ಮ ಮನೆಗೆ ಬಂದಾಗ ಅಥವಾ ನಾವೆಲ್ಲ ಒಟ್ಟಾಗಿ ಹೋಟೆಲಿಗೆ ಹೋದಾಗ ರಾಜು ಕಾಫಿ, ಟೀ ಏನೂ ಕುಡಿಯುತ್ತಿರಲಿಲ್ಲ. ಹಾಗೆಂದು ಅವರಿಗೆ ಸಕ್ಕರೆ ಕಾಯಿಲೆಯೇನೂ ಇರಲಿಲ್ಲ. (ಕಾಫಿ. ಟೀ ಬದಲಿಗೆ ಇನ್ನಷ್ಟು ತಿಂಡಿ ತಿನ್ನುತ್ತಿದ್ದರೆಂದು ತೋರುತ್ತದೆ.) ಪ್ರಾಯಶಃ ಇದು ಇವರಿಗೆ ಗುರುಗಳಾಗಿದ್ದ ಪ್ರೊ|ಜಿ.ಪಿ. ರಾಜರತ್ನಂ ಅವರಿಂದ ಬಂದ ವ್ರತವಿರಬಹುದು. ತಾವು, ಗುರುವರ್ಯ ರಾಜರತ್ನಂ ಮನೆಗೆ ಹೋದಾಗ ಅವರು ತಮ್ಮ ಮನೆಭಾಷೆಯಾದ ತಮಿಳಿನಲ್ಲಿ ಮಗಳನ್ನು ಕರೆದು ರಾಜುಗೆ ಒಂದು ಲೋಟ ಹಾಲು ತರಿಸಿ ಕೊಡುತ್ತಿದ್ದರಂತೆ. ರಾಜು, ರಾಜರತ್ನಂ ಅವರನ್ನು ಕುರಿತು ಬರೆದ ಲೇಖನ ಒಂದರಲ್ಲಿ ಈ ಸಂಗತಿಯನ್ನು ಸ್ಮರಿಸಿಕೊಂಡಿದ್ದಾರೆ.

ನನ್ನ ಓದು, ಬರಹಕ್ಕೆ ಬೇಕಾದ ಯಾವುದಾದರೂ ಪುಸ್ತಕ ನನ್ನ ಬಳಿ ಇಲ್ಲದಿದ್ದರೆ ನಾನು ಮೊದಲು ಕೇಳುತ್ತಿದ್ದುದು ಎಚ್.ಎಸ್.ಆರ್. ಅವರನ್ನು. ತಮ್ಮ ಬಳಿಯೂ ಆ ಪುಸ್ತಕ ಇಲ್ಲದಿದ್ದರೆ ಎಚ್.ಎಸ್.ಆರ್. ರಾಜು ಅವರ ಮೂಲಕ ಅದನ್ನು ತರಿಸಿಕೊಡುತ್ತಿದ್ದರು. ಈ ಇಬ್ಬರ ಬಳಿ ಸಾಕಷ್ಟು ದೊಡ್ಡ ಪ್ರಮಾಣದ ಪುಸ್ತಕಗಳ ಸಂಗ್ರಹವಿರುವುದು ತಿಳಿದ ವಿಷಯ.

ಶ್ರೀನಿವಾಸರಾಜು ಅವರ ವ್ಯಕ್ತಿತ್ವಕ್ಕೆ ಹಲವು ಮುಖಗಳು; ಕನ್ನಡ ಅಧ್ಯಾಪಕ, ಲೇಖಕ, ಸಾಹಿತ್ಯ ಪರಿಚಾರಕ, ಕನ್ನಡ ಕಾರ್ಯಕರ್ತ, ಕನ್ನಡದ ಅಭಿವೃದ್ಧಿ ಚಿಂತಕ – ಹೀಗೆ.

೧೯೮೧–೮೨ನೇ ವರ್ಷದಿಂದ ನಮ್ಮ ಕಾಲೇಜಿನಲ್ಲಿ ಬಿ.ಎ. ತರಗತಿಗೆ 'ಐಚ್ಛಿಕ ಕನ್ನಡ' ಬೋಧನೆಯನ್ನು ಆರಂಭಿಸಲಾಯಿತು. ಆಗ ಕ್ರೈಸ್ಟ್ ಕಾಲೇಜಿನಲ್ಲಿ ಐಚ್ಛಿಕ ಕನ್ನಡ ಬೋಧನೆ ಇರಲಿಲ್ಲ. ಕನ್ನಡ ಅಧ್ಯಯನಲ್ಲಿ ವಿಶೇಷ ಆಸಕ್ತಿ ಹೊಂದಿದ್ದ ನಾಲ್ಕೈದು ಜನ ವಿದ್ಯಾರ್ಥಿಗಳನ್ನು ರಾಜು ನಮ್ಮ ಕಾಲೇಜಿಗೆ ಕಳಿಸಿಕೊಟ್ಟರು. ಇವರಲ್ಲಿ ಮೂವರು ಮಲೆಯಾಳಂ ಮಾತೃಭಾಷೆಯವರು. ಕನ್ನಡವನ್ನು ಚೆನ್ನಾಗಿ ಕಲಿತು ಶಾಲಾಕಾಲೇಜುಗಳ ಅಧ್ಯಾಪಕರಾಗಲು ಇಲ್ಲವೆ ಚರ್ಚ್‌ನ ಪಾದ್ರಿಗಳಾಗಲು ಬಯಸಿದವರು. ಕನ್ನಡಕ್ಕೆ ಇವರು ಒಲಿಯುವಂತೆ ಮಾಡಿದ ಶ್ರೇಯಸ್ಸು ಬಹುಮಟ್ಟಿಗೆ ರಾಜು ಅವರಿಗೆ ಸೇರುತ್ತದೆಂದು ಬೇರೆ ಹೇಳಬೇಕಾಗಿಲ್ಲ. ಅಂದಹಾಗೆ, ಇತ್ತೀಚೆಗೆ ಮಾಸಪತ್ರಿಕೆಯೊಂದರಲ್ಲಿ (ಹೊಸತು, ಸೆಪ್ಟೆಂಬರ್, ೨೦೦೬) ರಾಜು 'ಅನ್ಯಭಾಷೀಯರು ಮತ್ತು ಕನ್ನಡ' ಎಂಬ ಪುಟ್ಟ ಲೇಖನ ಬರೆದು, 'ಹೊರಗಿನಿಂದ ಬಂದವರು' ಸ್ಥಳೀಯರೊಡನೆ ಒಂದಾಗಿ ಸೌಹಾರ್ದದಿಂದ ಬದುಕಬೇಕಾದರೆ ಇಲ್ಲಿನ ಭಾಷೆ, ಕನ್ನಡವನ್ನು ಕಲಿಯುವುದರ ಅಗತ್ಯವನ್ನು ಒತ್ತಿಹೇಳಿದ್ದಾರೆ. ಇದು ಶ್ರೀನಿವಾಸರಾಜು ತುಂಬ ಹಿಂದಿನಿಂದಲೂ ಪ್ರತಿಪಾದಿಸುತ್ತಾ ಬಂದಿರುವ ಸಂಗತಿ. ಕ್ರೈಸ್ಟ್ ಕಾಲೇಜಿನಿಂದ ಬಂದ ವಿದ್ಯಾರ್ಥಿಗಳು ಪ್ರೊ| ಶ್ರೀನಿವಾಸರಾಜು ಅವರ ಮಾರ್ಗದರ್ಶನ ಮತ್ತು ಕಾಲೇಜಿನ ಕನ್ನಡ ಸಂಘಗಳ ಬಗೆಗೆ ಹೆಮ್ಮೆಯಿಂದ ಮಾತಾಡುವುದನ್ನು ನಾನು ಕೇಳಬಲ್ಲೆ. ಮತಧರ್ಮಗಳ ವಿಚಾರದಲ್ಲಿ ನನ್ನದು ಸಾಂಪ್ರದಾಯಕ ನಂಬಿಕೆಗಳಿಗಿಂತ ಭಿನ್ನ ನಿಲುವು. ಪಾಠ ಮಾಡುವಾಗ ಪ್ರಾಸಂಗಿಕವಾಗಿ ಯಾದರೂ ಈ ವಿಚಾರ ಚರ್ಚೆಗೆ ಬರುತ್ತಿತ್ತು. ರಾಜು ಅವರ ಕಡೆಯಿಂದ ಬಂದ ಶಿಷ್ಯರು ವೈಯಕ್ತಿಕವಾಗಿ ಮತಧರ್ಮನಿಷ್ಠರಾದರೂ ನನ್ನ ಅಭಿಪ್ರಾಯಗಳನ್ನು ತಾಳ್ಮೆಯಿಂದ ಕೇಳಿ ಕೊಳ್ಳುತ್ತಿದ್ದರು. ಪ್ರಾಯಶಃ ರಾಜು ಅವರಿಂದ ಇವರಿಗೆ ದೊರೆತ ಶಿಕ್ಷಣವೇ ಇದಕ್ಕೆ ಕಾರಣವಿರಬೇಕೆಂದು ನನ್ನ ಅನಿಸಿಕೆ.

ರಾಜು ಈವರೆಗೆ ಮೂರು ಏಕಾಂಕ ನಾಟಕಗಳು, ಐದು ಮೂಕ ನಾಟಕಗಳು, ಎರಡು ಏಕಾಂಕಗಳು, ನಿಷ್ಕ್ರಮಣ, ಹಳಿಯಮೇಲಿನ ಸದ್ದು – ಎಂಬ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. 'ಛಸನಾಲ ಬಂಧು' ಇವರ ಕವನ ಸಂಕಲನ. 'ಜಾವಿಕಟ್ಟೆ ಬಳಿ' ಎಂಬುದು ಅನುವಾದ ಕೃತಿ. ಹಲವು ಲೇಖನಗಳನ್ನು ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ಇವರ ಸಂಪಾದಕತ್ವದಲ್ಲಿ 'ಅಂಕಣ' ಎಂಬ ಸಾಹಿತ್ಯ ಪತ್ರಿಕೆಯೂ ಪ್ರಕಟವಾಗುತ್ತಿತ್ತು. ನಾನು ಬರೆದ ಒಂದೇ ಕತೆ (ರತಿ–ವಿರತಿ) ಪ್ರಕಟವಾದುದು 'ಅಂಕಣ'ದಲ್ಲಿ. ಈಗ ಈ ಪತ್ರಿಕೆ ಪ್ರಕಟವಾಗುತ್ತಿದೆಯೊ ಇಲ್ಲವೋ ತಿಳಿಯದು.

ರಾಜು, 'ಜಿ.ಪಿ. ರಾಜರತ್ನಂ ಮತ್ತು ಕರ್ನಾಟಕ ಸಂಘ' ಎಂಬ ಪುಸ್ತಕ ಬರೆದುದು ಅನಿರೀಕ್ಷಿತವಾಗಲಿ, ಆಕಸ್ಮಿಕವಾಗಲಿ ಅಲ್ಲ. ನಾನು ಬೆಂಗಳೂರಿನ ಸೆಂಟ್ರಲ್ ಕಾಲೇಜು ವಿದ್ಯಾರ್ಥಿಯಾಗಿರಲಿಲ್ಲ. ಹೀಗಾಗಿ ಪ್ರೊ॥ ರಾಜರತ್ನಂ ಅವರ ಬಗೆಗಾಗಲಿ ಅವರು ಕಟ್ಟಿ ಬೆಳೆಸಿದ 'ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘ'ದ ಬಗೆಗಾಗಲಿ ಹೆಚ್ಚು ತಿಳಿದವನಲ್ಲ. ಆದರೆ ಕ್ರೈಸ್ಟ್ ಕಾಲೇಜು ಕನ್ನಡ ಸಂಘದ ಬಗೆಗೆ ಮತ್ತು ಅದನ್ನು ಕಟ್ಟಿ ಬೆಳೆಸಿದ ಶ್ರೀನಿವಾಸರಾಜು ಅವರ ಸಂಘಟನಾ ಶಕ್ತಿಯ ಬಗೆಗೆ ತಕ್ಕಮಟ್ಟಿಗೆ ತಿಳಿದಿದ್ದೇನೆ.

ಸಾಮಾನ್ಯವಾಗಿ ಕಾಲೇಜು ಕನ್ನಡ ಸಂಘಗಳ ಕಾರ್ಯ ನಿರ್ವಾಹಕ ಮಂಡಳಿಗಳಲ್ಲಿ ಆಯಾಕಾಲೇಜಿನ ಕನ್ನಡ ಅಧ್ಯಾಪಕರು, ವಿದ್ಯಾರ್ಥಿಪ್ರತಿನಿಧಿಗಳು ಪದನಿಮಿತ್ತರಾಗಿ ಪ್ರಿನ್ಸಿಪಾಲರು– ಇರುವುದು ರೂಢಿ. ಆದರೆ ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಕಾರ್ಯಕಾರಿ ಮಂಡಳಿಯ ರಚನೆಯದು ಬೇರೆ ಮಾದರಿ. ಕನ್ನಡ ಸಂಘದ 'ಸಲಹೆ–ಸಹಕಾರ ಮಂಡಲಿ'ಯಲ್ಲಿ ಕಾಲೇಜಿನ ಬೇರೆಬೇರೆ ವಿಭಾಗದ ಅಧ್ಯಾಪಕರು ಸದಸ್ಯರಾಗಿದ್ದಾರೆ; ಮಾತ್ರವಲ್ಲ ಬೆಂಗಳೂರಿನ ಜನಪ್ರಿಯ 'ನೇತ್ರಾಪ್ರಿಂಟರ್ಸ್'ನ ಶ್ರೀ ಮುನಿಧರ್ಮಯ್ಯನವರೂ ಇಲ್ಲಿ ಸೇರಿದ್ದಾರೆ. ಇದು ರಾಜು ಅವರ ಸಂಘ ಕಟ್ಟುವ ಚಾತುರ್ಯ ಮತ್ತು ಪುಸ್ತಕಗಳ ಪ್ರಕಟಣೆಯಲ್ಲಿ ಅವರು ವಹಿಸುವ ಶ್ರದ್ಧೆಗಳಿಗೆ ಸಾಕ್ಷಿಯಾಗಿದೆ.

ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದ ಹಾಗೆ, ಅದಕ್ಕಿಂತಲೂ ಹೆಚ್ಚಿನ ಪ್ರಮಾಣದಲ್ಲಿ, ಕ್ರೈಸ್ಟ್ ಕಾಲೇಜು ಕನ್ನಡ ಸಂಘವು ವಿದ್ಯಾರ್ಥಿಗಳ ಲೇಖನ ಕಲೆಗೆ ಪ್ರೋತ್ಸಾಹ ನೀಡುತ್ತ ಪುಸ್ತಕಗಳನ್ನು ಪ್ರಕಟಿಸುತ್ತ ಬಂದಿದೆ. ವಿದ್ಯಾರ್ಥಿಗಳಿಗಾಗಿ ಅಂತರ ಕಾಲೇಜು ಮಟ್ಟದಲ್ಲಿ ಡಾ॥ ಅನಕೃ ಸ್ಮಾರಕ ಲೇಖನ ಸ್ಪರ್ಧೆ, ದ.ರಾ.ಬೇಂದ್ರೆ ಸ್ಮೃತಿ ಕವನ ಸ್ಪರ್ಧೆ ಡಾ॥ ಜಿ.ಪಿ.ರಾಜರತ್ನಂ ಸ್ಮಾರಕ ವಿದ್ಯಾರ್ಥಿವಿಕಾಸ ಮಾಲೆಗಳನ್ನು ನಡೆಸಿಕೊಂಡು ಬಂದಿದೆ. ವರ್ಷವರ್ಷವೂ ನಡೆಯುವ ಸ್ಪರ್ಧೆಗಳ ತೀರ್ಪುಗಾರರಾಗಿ ರಾಜು ಅವರು ಡಾ॥ ಬಿ.ಸಿ. ರಾಮಚಂದ್ರಶರ್ಮ, ಡಾ॥ ಸುಮತೀಂದ್ರನಾಡಿಗ, ಪ್ರೊ॥ ಕಿ.ರಂ. ನಾಗರಾಜರಂಥ ಘಟಾನು ಘಟಿಗಳನ್ನೆ ಹಿಡಿಯುತ್ತಾರೆ. ನಾನು ಕೂಡ ಒಂದೆರಡು ಬಾರಿ ಕನ್ನಡ ಸಂಘದ ಚಟುವಟಿಕೆಗಳಲ್ಲಿ ಭಾಗವಹಿಸಿದುದ್ದುಂಟು. ವಿದ್ಯಾರ್ಥಿಗಳಿಗಾಗಿ ಸ್ಪರ್ಧೆಗಳನ್ನು ನಡೆಸಿ, ಬಹುಮಾನಗಳನ್ನು ವಿತರಿಸಿ ಅಷ್ಟಕ್ಕೆ ಮುಗಿಸಿ ಬಿಡುವುದು ರಾಜು ಅವರ ಜಾಯಮಾನವಲ್ಲ. ಆಯಾ ವರ್ಷದಲ್ಲಿ ನಡೆದು ಸ್ಪರ್ಧೆಗಳಲ್ಲಿ ಬಹುಮಾನ ಪಡೆದ ಲೇಖನಗಳನ್ನು (ಕವನ ಸ್ಪರ್ಧೆಗೆ ಬಂದ ೨೦೦–೩೦೦ ಕವಿತೆಗಳ ಪೈಕಿ ಹಲವನ್ನು ಆಯ್ದು) ಪುಸ್ತಕ ರೂಪದಲ್ಲಿ ಪ್ರಕಟಿಸಿ, ಅತ್ಯಂತ ಕಡಿಮೆ ಬೆಲೆಗೆ – ಕೆಲವೊಮ್ಮೆ ಉಚಿತವಾಗಿಯೆ ಓದುಗರಿಗೆ ತಲುಪಿಸುತ್ತ ಬರಲಾಗಿದೆ.

ಕ್ರೈಸ್ಟ್ ಕಾಲೇಜು ಕನ್ನಡ ಸಂಘವು ಈವರೆಗೆ ಸುಮಾರು ಇನ್ನೂರು ಪುಸ್ತಕಗಳನ್ನು ಪ್ರಕಟಿಸಿರಬಹುದು. ವಿದ್ಯಾರ್ಥಿಗಳ ಬರಹವನ್ನು ಪ್ರಕಟಿಸುವುದರ ಜೊತೆಗೆ ರಾಜು ತಮ್ಮ ಮಿತ್ರರನ್ನು ಹಿಡಿದು ಕುಮ್ಮಕ್ಕು ಕೊಟ್ಟು ಅವರಿಂದ ವಿವಿಧ ವಿಷಯಗಳ ಮೇಲೆ ಪುಸ್ತಕಗಳನ್ನು ಬರೆಸಿ ಪ್ರಕಟಿಸಿದ್ದಾರೆ. ಮುಂದೆ ಪ್ರಸಿದ್ಧರಾದ ಅನೇಕ ಕವಿಗಳು, ಲೇಖಕರ ಉದಯೋನ್ಮುಖ ಕೃತಿಗಳು ಕ್ರೈಸ್ಟ್ ಕಾಲೇಜು ಕನ್ನಡ ಸಂಘದ ಮೂಲಕ ಪ್ರಕಟವಾಗಿರುವುದೊಂದು ವಿಶೇಷ. ಪ್ರತಿಭಾ ನಂದಕುಮಾರ್, ಎನ್.ವಿ. ಭಾಗ್ಯಲಕ್ಷ್ಮಿ, ಬಿ.ಆರ್. ಲಕ್ಷ್ಮಣರಾವ್, ಎಚ್.ಎಸ್. ಶಿವಪ್ರಕಾಶ್, ಎಚ್.ಎಸ್. ರಾಘವೇಂದ್ರರಾವ್, ಡಾ|| ವಿಜಯಾದಬ್ಬೆ, ಡಾ|| ಕೆ.ವಿ. ತಿರುಮಲೇಶ್, ಡಾ|| ಕೆ.ವಿ. ನಾರಾಯಣ, ತೇಜಸ್ವಿನಿ ನಿರಂಜನ, ಡಾ|| ಬಸವರಾಜ ಕಲ್ಗುಡಿ, ಕ.ವೆಂ ರಾಜಗೋಪಾಲ, ಕೆ.ಎಂ. ಮುನಿಕೃಷ್ಣಪ್ಪ ಮೊದಲಾದವರ ಕೃತಿಗಳು ಕ್ರೈಸ್ಟ್‌ಕಾಲೇಜು ಕನ್ನಡ ಸಂಘದ ಪ್ರಕಟಣೆಗಳಲ್ಲಿ ಸೇರಿವೆ. ಇಷ್ಟು ಮಾತ್ರವಲ್ಲದೆ ಹಿರಿಯರಾದ ಡಾ|| ರಂ.ಶ್ರೀ. ಮುಗಳಿ, ಶ್ರೀರಂಗ, ಪ್ರೊ|| ಎ.ಎನ್. ಮೂರ್ತಿರಾಯರ ಕೃತಿಗಳೂ ಈ ಕನ್ನಡ ಸಂಘದಿಂದ ಪ್ರಕಟವಾಗಿವೆ. ಪುಸ್ತಕಗಳ ಪ್ರಕಟಣೆಗಾಗಿ ಮತ್ತು ಪ್ರಕಟವಾದ ಪುಸ್ತಕಗಳನ್ನು ಮಾರಾಟಮಾಡಿ ಮುಂದಿನ ಚಟುವಟಿಕೆಗಳಿಗೆ ಹಣ ಹೊಂದಿಸಿಕೊಳ್ಳುವುದಕ್ಕಾಗಿ ಹಾಗೂ ದಾನ, ದತ್ತಿನಿಧಿಗಳನ್ನು ಕೂಡಿಸುವುದಕ್ಕಾಗಿ ಶ್ರೀನಿವಾಸರಾಜು ಅವರು ಅಪಾರವಾಗಿ ಶ್ರಮಿಸಿದರೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಪ್ರೊ|| ಜಿ.ಪಿ. ರಾಜರತ್ನಂ ಅವರ ಬಗೆಗೆ ಹೇಳಿದಂತೆ ಶ್ರೀನಿವಾಸರಾಜು ಅವರನ್ನು ಕೂಡ 'ಸಾಹಿತ್ಯ ಪರಿಚಾರಕ' ಎಂದು ಗುರುತಿಸಬೇಕಾಗುತ್ತದೆ. 'ಪರಿಚಾರಿಕೆ ಶಬ್ದಕ್ಕೆ ಮಲೆನಾಡಕಡೆ ಸೇವೆ ಎಂಬ ಸಾಮಾನ್ಯಾರ್ಥದ ಜೊತೆಗೆ ಸಮಾರಂಭಗಳಲ್ಲಿ ಅಡಿಗೆ ತಯಾರಿಸಿ, ಬಡಿಸುವುದು ಎಂಬ ವಿಶೇಷಾರ್ಥವಿದೆ. ಶ್ರೀನಿವಾಸರಾಜು ಈ ಎಲ್ಲ ಅರ್ಥಗಳಲ್ಲಿ ಸಾಹಿತ್ಯ ಪರಿಚಾರಕರು.

೧೯೮೭ ಮತ್ತು ೮೭ನೇ ವರ್ಷಗಳಲ್ಲಿ ಪದವಿ ಪೂರ್ವ ಶಿಕ್ಷಣಮಂಡಳಿಯು, ಪದವಿಪೂರ್ವ ತರಗತಿಗಳಿಗೆ 'ಸಂಯೋಜಿತ ಪಠ್ಯಪುಸ್ತಕಗಳನ್ನು ತಯಾರಿಸುವ ಯೋಜನೆ ಹಾಕಿಕೊಂಡು 'ಪಠ್ಯಪುಸ್ತಕ ಸ್ಥಾಯೀ' ಸಮಿತಿಗಳನ್ನು ರಚಿಸಿದ್ದಲ್ಲದೆ ಪಠ್ಯವಸ್ತುವಿನ ಆಯ್ಕೆಗಾಗಿ ಶಿಕ್ಷಕರ ಕಾರ್ಯಾಗಾರವನ್ನು ಉಪಕ್ರಮಿಸಿತು. 'ಕಾಲೇಜು ಕನ್ನಡ ಅಧ್ಯಾಪಕರ ಒಕ್ಕೂಟ'ದ ವತಿಯಿಂದ ಬೆಂಗಳೂರಿನ ಬಸವನಗುಡಿ ನ್ಯಾಷನಲ್ ಕಾಲೇಜಿನಲ್ಲಿ ಒಂದುವಾರವೊ ಹತ್ತುದಿನಗಳೊ ನಡೆದ ಕಾರ್ಯಾಗಾರಗಳಲ್ಲಿ ಕರ್ನಾಟಕದ ಬೇರೆಬೇರೆ ಭಾಗಗಳಿಂದ ಬಂದ ಸುಮಾರು ನಲವತ್ತಕ್ಕೂ ಹೆಚ್ಚು ಅಧ್ಯಾಪಕರು ಭಾಗವಹಿಸಿದ್ದರು. ಪಿ.ಯು.ಸಿ. ಮೊದಲವರ್ಷಕ್ಕೆ 'ಸಾಹಿತ್ಯ ಸಮಕ್ಷಮ' ಮತ್ತು ಎರಡನೆ ವರ್ಷಕ್ಕೆ 'ಸಾಹಿತ್ಯ ಸಮಾಗಮ' ಎಂಬ ಹೆಸರುಗಳಲ್ಲಿ ಸಂಯೋಜಿತ ಪಠ್ಯಪುಸ್ತಕಗಳನ್ನು ಸಿದ್ಧಪಡಿಸಲಾಯಿತು. ಪಠ್ಯಪುಸ್ತಕ ಸಿದ್ಧತೆಯ ಕೆಲಸದಲ್ಲಿ ಶ್ರೀನಿವಾಸರಾಜು ನಿರಂತರವಾಗಿ ತಮ್ಮನ್ನು ತೊಡಗಿಸಿಕೊಂಡರು. ಶ್ರದ್ಧೆ ಉತ್ಸಾಹಗಳಿಂದ ಹಲವು ಕಡೆ ಓಡಾಡಿ ಪಠ್ಯವಸ್ತುವನ್ನು ಸಂಗ್ರಹಿಸುವಲ್ಲಿ ಮತ್ತು ಪಠ್ಯವಸ್ತುವಿಗೆ ಆಯ್ಕೆಗೆ ಸಂಬಂಧಿಸಿದಂತೆ ನಡೆಯುತ್ತಿದ್ದ ಚರ್ಚೆಗಳಲ್ಲಿ ರಾಜು ಅವರಿಂದ ದೊರೆತ ಸಹಾಯ, ಸಹಕಾರಗಳ ನೆನಪು ನನ್ನ ಮನಸ್ಸಿನಲ್ಲಿ ಸದಾ ಉಳಿಯುತ್ತದೆ. ಈ ಸಂದರ್ಭವು ರಾಜು ಅವರೊಡನೆ ಹೆಚ್ಚಿನ ಆಪ್ತತೆಯನ್ನು ಬೆಳೆಸಿ ಕೊಳ್ಳಲು ನನಗೆ ಒಳ್ಳೆಯ ಅವಕಾಶವೊದಗಿಸಿತು.

ಪ್ರೊ ಶ್ರೀನಿವಾಸರಾಜು ಕನ್ನಡಸಾಹಿತ್ಯ ಪರಿಷತ್ತು, ಸಾಹಿತ್ಯ ಅಕಾಡೆಮಿ, ಕನ್ನಡ ಪುಸ್ತಕ ಪ್ರಾಧಿಕಾರ – ಮೊದಲಾದ ಸಂಸ್ಥೆಗಳಲ್ಲಿ ಸದಸ್ಯರೋ, ಕಾರ್ಯದರ್ಶಿಗಳೋ ಆಗಿದ್ದುಕೊಂಡು ಕನ್ನಡ ಅಭಿವೃದ್ಧಿಗಾಗಿ ಅಮೂಲ್ಯ ಸೇವೆ ಸಲ್ಲಿಸಿದ್ದಾರೆ. ಹಾಗೆಯೆ ಸಂಸ್ಥೆಯಲ್ಲಿ ಭಿನ್ನಾಭಿಪ್ರಾಯಗಳು ವ್ಯಕ್ತವಾದಾಗ ತಮ್ಮದೇ ಆದ ಸ್ಪಷ್ಟ ನಿಲುವು ತಾಳಿದ್ದಾರೆ.

೧೯೯೦ನೇ ವರ್ಷದಲ್ಲಿ ಹುಬ್ಬಳ್ಳಿಯಲ್ಲಿ ಜರುಗಲಿದ್ದ ಐವತ್ತೊಂಬತ್ತನೆ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಸಂಬಂಧಿಸಿದಂತೆ ಪರಿಷತ್ತಿನಲ್ಲಿ ಭಿನ್ನಾಭಿಪ್ರಾಯಗಳು ತಲೆಯೆತ್ತಿದವು. ಆ ಸಂದರ್ಭದಲ್ಲಿ, ಸಮ್ಮೇಳನಾಧ್ಯಕ್ಷರನ್ನು ಆಯ್ಕೆಮಾಡುವ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರಿ ಸಮಿತಿಗೆ ಶ್ರೀನಿವಾಸರಾಜು ಕಾರ್ಯದರ್ಶಿಯಾಗಿದ್ದರು. ನಿರ್ದಿಷ್ಟ ವಿದ್ವಾಂಸರೊಬ್ಬರನ್ನು ಹುಬ್ಬಳ್ಳಿ ಸಮ್ಮೇಳನಕ್ಕೆ ಆರಿಸಬೇಕೆಂಬ ಸೂಚನೆ ಬಂದಾಗ ಶ್ರೀನಿವಾಸರಾಜು ಅವರಿಗೆ ಅದು ಒಪ್ಪಿಗೆಯಾಗಲಿಲ್ಲ. ಆಗ ಅವರು ತಮ್ಮ ಅಭಿಪ್ರಾಯವನ್ನು ಮಂಡಿಸಿದ್ದು ಹೀಗೆ–

೧) "ಈಗಾಗಲೇ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರಿ ಸಮಿತಿಯೇ ಅತ್ಯುತ್ತಮ ಲೇಖಕರೆಂದು ಆಯ್ಕೆ ಮಾಡಿರುವ ಐದುಮಂದಿ ಗೌರವಸದಸ್ಯರಲ್ಲಿ-ಇಬ್ಬರು ಈಗಾಗಲೆ ಸಮ್ಮೇಳನದ ಅಧ್ಯಕ್ಷರಾಗಿಬಿಟ್ಟಿದ್ದಾರೆ. ಆದ್ದರಿಂದ ಉಳಿದ ಮೂವರನ್ನು (ಕೆ.ಎಸ್. ನರಸಿಂಹ ಸ್ವಾಮಿ, ನಿರಂಜನ ಮತ್ತು ಸಿಂಪಿಲಿಂಗಣ್ಣ) ಮೊದಲು ಸಮ್ಮೇಳನದ ಅಧ್ಯಕ್ಷರಾಗಿ ಮಾಡಿದ ಮೇಲೆ ಉಳಿದವರ ಬಗ್ಗೆ ವಿಚಾರಮಾಡೋಣ' (ಈ ಮೂವರ ಪೈಕಿ ಕೆ.ಎಸ್. ನರಸಿಂಹಸ್ವಾಮಿ ಮತ್ತು ಸಿಂಪಿಯವರು ಮುಂದೆ ಸಮ್ಮೇಳನಾಧ್ಯಕ್ಷರಾದರು. ನಿರಂಜನರು ಸಮ್ಮೇಳನಾಧ್ಯಕ್ಷರಾಗಲೇ ಇಲ್ಲ.)

೨) "ಈಗ ನಡೆಯುತ್ತಿರುವುದು ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನವಾದ್ದರಿಂದ ಧಾರವಾಡದವರನ್ನೇ ಹುಬ್ಬಳ್ಳಿಯಲ್ಲಿ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿ ಆಯ್ಕೆ ಮಾಡುವುದು ಒಳ್ಳೆಯ ಸಂಪ್ರದಾಯವಲ್ಲ..... ನಮ್ಮ ಜಿಲ್ಲೆಯಲ್ಲಿ ಆಗುವ ಸಮ್ಮೇಳನಕ್ಕೆ ನಮ್ಮವರನ್ನೇ ಆರಿಸುವ, ನಮ್ಮ ಕಾಲಿಗೆ ನಾವೇ ನಮಸ್ಕಾರ ಮಾಡಿಕೊಳ್ಳುವ ಸಂಪ್ರದಾಯಕ್ಕೆ ಅವಕಾಶ ಮಾಡಿಕೊಡುವುದು ಬೇಡ.... ಇತ್ಯಾದಿ."

ಪ್ರೊ॥ ಶ್ರೀನಿವಾಸರಾಜು ಅವರ ಸಲಹೆ ಅಂಗಿಕಾರವಾಗಲಿಲ್ಲವೆಂಬುದು ಬೇರೆ ವಿಚಾರ. "...... ತಪ್ಪನ್ನು ತಿದ್ದಿಕೊಳ್ಳುವ ಪ್ರಾಂಜಲಮನಸ್ಸು ಕಾರ್ಯಕಾರಿ ಸಮಿತಿಯಲ್ಲಿ ಕಂಡು ಬರಲಿಲ್ಲ...." – ಹೀಗಾಗಿ ಅವರು ತಮ್ಮ ಕಾರ್ಯದರ್ಶಿ ಸ್ಥಾನಕ್ಕೆ ರಾಜೀನಾಮೆ ನೀಡಿ ಹೊರಬಂದರು.

ಹುಬ್ಬಳ್ಳಿ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರ ಆಯ್ಕೆಯ ವಿಚಾರದಲ್ಲಿ ತಲೆಯೆತ್ತಿದ ಭಿನ್ನಾಭಿಪ್ರಾಯಗಳು ಬೆಂಗಳೂರಿನಲ್ಲಿ ಸಾಹಿತಿಗಳ ಸಮಾವೇಶವೊಂದನ್ನು ಸಂಘಟಿಸುವುದರಲ್ಲಿ ಪರ್ಯವಸಾನವಾದವು. ಈ ಸಮಾವೇಶದ ಪೂರ್ವ ಸಿದ್ಧತೆಯಾಗಿ 'ಸಾಹಿತ್ಯದಲ್ಲಿ ಶ್ರೇಷ್ಠತೆ– ಒಂದು ಸಂವಾದ" ಎಂಬ ಒಂದು ಪುಟ್ಟ ಕೃತಿಯನ್ನು ಪ್ರಕಟಿಸಲಾಯಿತು; ಪ್ರಬಂಧಮಂಡನೆ ಮತ್ತು ಪ್ರಶ್ನೋತ್ತರಗಳನ್ನೊಳಗೊಂಡ ಸಂವಾದಗೋಷ್ಠಿ ನಡೆಯಿತು. ಗೋಷ್ಠಿಯಲ್ಲಿ ಪ್ರೊ॥ ಶ್ರೀನಿವಾಸರಾಜು ಅವರು 'ಸಾಹಿತ್ಯ ಸಮಾವೇಶ ಏಕೆ?' ಎಂಬ ಪ್ರಬಂಧ ಮಂಡಿಸಿದರು.

(ಈ ಲೇಖನದ ಎಲ್ಲ ಉದ್ಧರಣಗಳನ್ನು "ಸಾಹಿತ್ಯದಲ್ಲಿ ಶ್ರೇಷ್ಠತೆ ಒಂದು ಸಂವಾದ" – ೧೯೯೦ ಬೆಂಗಳೂರು ಎಂಬ ಪುಸ್ತಕದಿಂದ ಆರಿಸಿಕೊಳ್ಳಲಾಗಿದೆ.)

ರಾಜು ಅವರ ಅಭಿಪ್ರಾಯದಲ್ಲಿ ಈ ಸಮಾವೇಶವು ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಪರ್ಯಾಯವಲ್ಲ. ಸಮಾವೇಶದಲ್ಲಿ ಪಿ. ಲಂಕೇಶ್ ಮೊದಲಾದವರು ಕನ್ನಡ ಸಾಹಿತ್ಯಪರಿಷತ್ತಿಗೆ ಪರ್ಯಾಯವಾಗಿ ಬೇರೊಂದು ಸಂಸ್ಥೆಯನ್ನು ಕಟ್ಟಬೇಕಾದ ಅಗತ್ಯವನ್ನು ಪ್ರತಿಪಾದಿಸಿದರು. ಆದರೆ ಪ್ರೊ॥ ಶ್ರೀನಿವಾಸರಾಜು ಅವರದು ಇದಕ್ಕೆ ಸಹಮತವಿರಲಿಲ್ಲ ಎನ್ನಬಹುದು–

"...... ಬೆಂಗಳೂರಿನಲ್ಲಿ ನಡೆಯಲಿರುವ ಸಾಹಿತ್ಯ ಸಮಾವೇಶ ಯಾವುದೇ ರೀತಿಯಲ್ಲಿ ಪರ್ಯಾಯ ಅಥವಾ ಸಮಾನಾಂತರ ಸಾಹಿತ್ಯ ಸಮ್ಮೇಳನವಲ್ಲ. ಇಲ್ಲಿ ಯಾರನ್ನೂ ಸಮ್ಮೇಳನದ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿಲ್ಲ, ಮಾಡುವುದಿಲ್ಲ" ಎಂದು ಘೋಷಿಸಿದರು. ಅಲ್ಲದೆ ಸಮಾವೇಶದ ಪ್ರಮುಖ ವಿಷಯ (Theme)ವಾಗಿದ್ದ 'ಸಾಹಿತ್ಯದಲ್ಲಿ ಶ್ರೇಷ್ಠತೆ' ಎಂಬ ಸೈದ್ಧಾಂತಿಕ ನಿಲುವಿನ ಅನುಸಾರ ಕನ್ನಡ ಸಾಹಿತ್ಯ ಪರಿಷತ್ತನ್ನು ಇನ್ನೂ ಶಕ್ತಿಪೂರ್ಣವಾಗಿ, ಜೀವಂತವಾಗಿಡುವುದರ ಬಗ್ಗೆ ತಮ್ಮ ಕಳಕಳಿಯನ್ನು ವ್ಯಕ್ತಪಡಿಸಿದರು. 'ನಾನು ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಯಾಗುವವರೆಗೂ ಅದರಿಂದ ಹೊರಗೇ ಉಳಿದವನು. ಹೊರಗೆ ನಿಂತು ಟೀಕಿಸುವುದಕ್ಕಿಂತ ಒಳಗೆ ಏನಾಗಿದೆ ಎಂದು ನೋಡುವ ದೃಷ್ಟಿಯಿಂದ ಹಿರಿಯರ, ಗೆಳೆಯರ ಒತ್ತಾಯದ ಮೇರೆಗೆ ಕಾರ್ಯದರ್ಶಿಯಾದೆ....

......ನಾನು ಅಲ್ಲಿ ಇದ್ದಾಗ ಎಲ್ಲವೂ ಸರಿಯಿತ್ತು ಅಥವಾ ಸರಿಹೋಗುತ್ತಿತ್ತು ಎಂಬ ಭ್ರಮೆ ಆಗಲೂ ಇರಲಿಲ್ಲ ಈಗಲೂ ಇಲ್ಲ. ಆ ಕೆಲಸವನ್ನು ಪಾಲಿಗೆ ಒದಗಿಬಂದ ಒಂದು ಅನುಭವ ಮಾತ್ರ, ಇಂದಲ್ಲ ನಾಳೆ ಕನ್ನಡ ಸಾಹಿತ್ಯ ಪರಿಷತ್ತು ಕಳೆದುಕೊಂಡ ಘನತೆಯನ್ನು ಮರಳಿ ಪಡೆಯಲಿ ಎಂಬುದೇ ನನ್ನ ಆಶಯ.......

"(ಪ್ರಸ್ತುತ) ಸಮಾವೇಶವನ್ನು ಬೆಂಗಳೂರಿನಲ್ಲಿ ಕರೆಯಲಾಗಿದ್ದು ಪ್ರಮುಖವಾಗಿ ಬೆಂಗಳೂರಿನ ಸಾಹಿತಿಗಳೇ ಇದರಲ್ಲಿ ಭಾಗವಹಿಸಿದರೂ ಇದು ಬೆಂಗಳೂರಿಗೇ ಸೀಮಿತವಾದ ಸಮಾವೇಶವಲ್ಲ. ಇಲ್ಲಿ ಮೂಡಿಬರುವ ಮಂಥನದ ಬೆಳಕಿನಲ್ಲಿ ಮುಂದಿನ ಯೋಜನೆಗಳಿಗೆ, ಯೋಚನೆಗಳಿಗೆ ನಾಂದಿಯಾಗಬಹುದೆಂಬುದೇ ನಮ್ಮೆಲ್ಲರ ಆಶಯ........" ಹೀಗೆ ನಮ್ಮ ಸದಿಚ್ಛೆಯನ್ನು ವ್ಯಕ್ತಪಡಿಸಿದ್ದುಂಟು.

ಪ್ರಾಯಶಃ ಪ್ರೊ॥ ಶ್ರೀನಿವಾಸರಾಜು ಅವರಿಗೂ ನನಗೂ ಇರುವ ವಯಸ್ಸಿನ ಅಂತರದಿಂದಾಗಿ ನಮ್ಮ ಸ್ನೇಹವು ಇನ್ನೂ ಹೆಚ್ಚಿನ ಆಪ್ತತೆಯನ್ನು ಕಂಡುಕೊಳ್ಳುವುದು ಸಾಧ್ಯವಾಗಿರಲಿಕ್ಕಿಲ್ಲವೆಂಬ ಅಳುಕು ನನ್ನಲ್ಲಿದೆ. ಹಾಗೆಯೆ ರಾಜು ಅವರ ಒಡನಾಟದಲ್ಲಿನ ಕೆಲವಾದರೂ ಕ್ಷಣಗಳ ನೆನಪುಗಳು ನನ್ನ ಮನಸ್ಸಿನಲ್ಲಿ ಸದಾ ಹಸುರಾಗಿರುತ್ತವೆ. ❑

# ಜೋಳಿಗೆ ಮತ್ತು ಪುಟಾಣಿ ಡೋಲು

● *ಜಯಂತ ಕಾಯ್ಕಿಣಿ*

ಮರಾಠಿಯಲ್ಲಿ 'ರಾಘು-ಮೈನಾ' ಜೋಡಿ ಎಂಬುದು ಜೋಡಿ ಹಕ್ಕಿಗಳ ದೇಹವನ್ನು ವರ್ಣಿಸುವ ಒಂದು ನಿತ್ಯದ ಮಾತು. ಯಾರಾದರೂ ಜೋಡಿಗಿಳಿ ಸಾಕಿದರೆ ಅದರಲ್ಲೊಂದು ರಾಘು, ಇನ್ನೊಂದು ಮೈನಾ. ನಮ್ಮ 'ರಾಘು-ರಾಜು' ಜೋಡಿಯನ್ನು ನೆನೆದಾಗೆಲ್ಲ ನನಗೆ ಈ 'ರಾಘು ಮೈನಾ'ದ್ದೇ ಧ್ಯಾನ. ಸ್ನೇಹವೆಂಬುದು ದುಸ್ತರವಾಗುತ್ತಿರುವ, ದುರ್ಲಭವಾಗುತ್ತಿರುವ ಈ ದಿನಗಳಲ್ಲಿ, ಕಾರ್ಯಕಾರಣದ ಎಲ್ಲೆಗಳನ್ನು ಮೀರಿದ ಸದಭಿರುಚಿ, ಸಂಸ್ಕಾರ, ಅಂತಃಕರಣಗಳ ನಂಟಿನ ಮೂರ್ತ ರೂಪದಂತಿರುವ 'ರಾಘು-ರಾಜು' ಸ್ನೇಹ ಇತರ ಸಹಜೀವಿಗಳ ಪಯಣಕ್ಕೂ ಸ್ಥೈರ್ಯವನ್ನು ನೀಡಬಲ್ಲ ಸರಳ ಸುಂದರ ಸಂಗತಿಯಾಗಿದೆ. ಹಾಗಂತ ಯಾವುದೇ ಸಹಜ ಸಂಬಂಧಗಳಂತೆ ಈ ಸಂಬಂಧವನ್ನು ನಾವು ಕೊಂಡಾಡಿ ಸರಳೀಕರಿಸಿಬಿಡುವುದೂ ಅದರ ಘನತೆಗೆ ಅಪಚಾರವೆಸಗಿದಂತೆ. ನನಗೆ ರಾಜು ಅವರು ಎಟುಕಿದ್ದು ರಾಘು ಮೂಲಕವೇ.

೧೯೮೫ರಲ್ಲಿ ನನ್ನ 'ಅಮೃತ ಬಳ್ಳಿ ಕಷಾಯ' ಪುಸ್ತಕವನ್ನು ಕ್ರೈಸ್ತ ಕಾಲೇಜ್ ಕನ್ನಡ ಸಂಘದ ಮೂಲಕ ಪ್ರಕಟಿಸಿದ ಸಂದರ್ಭದಲ್ಲಿ ನಾನು ಅವರನ್ನು ಕಂಡಿದ್ದು. ಪುಸ್ತಕ ಅಚ್ಚಾಗಿ ಬಂದಾಗ ಅದರಲ್ಲಿ ಉಳಿದಿದ್ದ ಕೆಲ ಅಚ್ಚಿನ ದೋಷಗಳನ್ನು ನೋಡಿ- "ಛೆ.... ಛೆ........ ಹೀಗಾಗಬಾರದಿತ್ತು, ಜಯಂತ್‌ಗೆ ಬೇಜಾರಾದೀತು. ಇಡೀ ಪುಸ್ತಕವನ್ನೇ ಹೊಸದಾಗಿ ಮುದ್ರಿಸೋಣ" ಎಂದು ಮರುಮುದ್ರಣಕ್ಕೆ ಅಣಿಯಾದರು ಅವರು. ಆಮೇಲೆ 'ಇರಲಿ ಬಿಡಿ' ಎಂದು ಸ್ನೇಹಿತರ ಮೂಲಕ ನಾನೇ ಅವರಿಗೆ ಸಮಾಧಾನ ಮಾಡಿ ನಿಲ್ಲಿಸಬೇಕಾಯಿತು.

ಅವರು ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಮೂಲಕ ಬೆಳಕಿಗೆ ತಂದ ಲೇಖಕರ ಬಗ್ಗೆ ನಾನು ಹೇಳಬೇಕಾಗೇ ಇಲ್ಲ. ಅದೊಂದು ಜೀವಂತ ಇತಿಹಾಸ. ಶಿವಪ್ರಕಾಶ್, ಪ್ರತಿಭಾ, ಮಂಜುನಾಥ್, ಚಿಂತಾಮಣಿ, ರಷೀದ್, ಮಮತಾ, ಕುಕ್ಕರಹಳ್ಳಿ ಕನ್ನಡದ ಮುಖ್ಯ

ಹೆಸರುಗಳೆಲ್ಲ ಅಲ್ಲಿವೆ. ಮನಸ್ಸು ಮಾಡಿದ್ದರೆ ಅವರು ಸ್ವತಃ ಕವಿಯಾಗಿ (ಭಸನಾಲ ಬಂಧು), ನಾಟಕಕಾರನಾಗಿ, ವಿಮರ್ಶಕನಾಗಿ ತಮ್ಮ ಕೃಷಿಯಲ್ಲಿ ಮುಂದುವರೆಯಬಹುದಾಗಿತ್ತು. ಆದರೆ ಇಲ್ಲ. ಅವರು ಸ್ವಯಂ ಸ್ಫೂರ್ತಿಯಿಂದ ತುಸು ಪಕ್ಕಕ್ಕೆ ಸರಿದು (ಹಿಂದೆ ಅಲ್ಲ!) ಸಾಹಿತ್ಯವನ್ನು ಪೋಷಿಸುವ ಕೈಂಕರ್ಯವನ್ನು ಕೈಗೊಂಡರು. ಮೊನ್ನೆಮೊನ್ನೆ ಪ್ರಕಟಗೊಂಡ ವಿಭಾ ತಿರಕಪಡಿಯ ಕವನಸಂಗ್ರಹದ ಪ್ರಕಟಣೆಯಲ್ಲಿ ಅವರು ತಳೆದ ಆಸ್ಥೆ ಮತ್ತು ಅಚ್ಚೆ ಮೂರು ದಶಕಗಳ ಹಿಂದಿನಷ್ಟೆ ಉಸ್ಫೂರ್ತವಾಗಿತ್ತು. ಈಗಲೂ ಅವರ ಕಣ್ಣು ಹೊಸ ಪತ್ರಿಭೆಗಳನ್ನು ಹೆಕ್ಕಲು ಚುರುಕಾಗಿರುತ್ತದೆ. ಇಲ್ಲವಾದರೆ ಅಂಕುರ ಬೆಟಗೇರಿ, ಕವಿತಾ ರೈ, ಭಗವತಿಯಂಥ ಹೊಸ ಸೊಲ್ಲಿನ ಕವಿಗಳು ನಮಗೆ ಸಂಕಲನ ರೂಪದಲ್ಲಿ ಹೇಗೆ ಸಿಗುತ್ತಿದ್ದರು?

ರಾಜು ಅವರ ಕಾವ್ಯಕಲಾಪಗಳಿಗೆ ಒಂದು ಸಾತ್ವಿಕ ತೇಜ ಇದೆ. ನಮ್ಮ ನಾಡಿನ ಅಪರೂಪದ ಸಾಂಸ್ಕೃತಿಕ ಉಮೇದುವಾರ ಅವರು. ತಾನಿದ್ದ ಆವರಣದಲ್ಲಿ ಸರಳವಾಗೇ ದೊಡ್ಡ ಬದಲಾವಣೆಯನ್ನು ತರಬಲ್ಲ ಇಂಥ ಸಾಂಸ್ಕೃತಿಕ ಉಮೇದುವಾರರೇ ನಾಡು-ನುಡಿಗಳ ಒಳಮನಸ್ಸನ್ನು ಸದ್ದಿರದೇ ರೂಪಿಸುತ್ತಿರುತ್ತಾರೆ. ಸಾಂಸ್ಥಿಕಗೊಂಡಷ್ಟೂ ಜಡವಾಗುವ, ಶುಷ್ಕಗೊಳ್ಳುವ, ಹುಲುತನಕ್ಕೆ ಈಡಾಗುವ ಸಂಸ್ಕೃತಿಯ ಜೀವ ರಾಜು ಅವರಂಥ ವ್ಯಕ್ತಿಗಳಲ್ಲಿ ಒಂದು ಅಲೆಯಾಗಿ ಹೊಮ್ಮುತ್ತದೆ. ದುಡ್ಡು, ಸತ್ತೆ, ಗದ್ದುಗೆ, ಪ್ರಚಾರಗಳ ಸೋಂಕಿಲ್ಲದೆಲೆ ಸಮುದಾಯ ತನ್ನ ಸಾಂಸ್ಕೃತಿಕ ಮುಖವನ್ನು ನೆಲೆಯನ್ನು ಕಂಡುಕೊಳ್ಳುತ್ತದೆ.

ಪ್ರತಿಶಾಲೆಯಲ್ಲೂ ಇಂಥ ಒಬ್ಬ ಶಿಕ್ಷಕರಿದ್ದ ಕಾಲವೊಂದಿತ್ತು. ಪ್ರತಿ ಊರಿನಲ್ಲೂ ಇಂಥ ಒಬ್ಬ ಉಮೇದುವಾರರಿದ್ದರು. ಹೊಸ ಮಕ್ಕಳಿಗೆ ಹಾಡು, ನಾಟಕ, ಭಾಷಣ ಬರವಣಿಗೆಯ ಹುಚ್ಚು ಹಿಡಿಸಿ ಕಾಲಿಗೆ ಗೆಜ್ಜೆ ಕಟ್ಟಿ ಹೊಸ ದಿಗಂತದೆಡೆ ಹಾರಿಸಿಬಿಡುವ ಕಾಯಕ ಅವರದು. ಹಾರಿಸಿದ ನಂತರ ಆಕಾಶವನ್ನು ನೋಡುತ್ತ ಕೂರುವವರಲ್ಲ ಅವರು.

ಕೆಲ ವರ್ಷಗಳ ಹಿಂದೆ ನಮ್ಮ ಸಚಿನ್ ತೆಂಡೂಲ್ಕರ್ ಯಾವುದೋ ಮೈಲಿಗಲ್ಲು ದಾಟಿದಾಗ ಟೆಲಿವಿಷನ್ ಚಾನಲ್‌ರವರು ಅವರ ಶಾಲಾದಿನಗಳ ಕ್ರಿಕೆಟ್ ಕೋಚ್ ಆಚರೇಕರ್ ಮಾಸ್ತರ್‌ರನ್ನು ಸಂದರ್ಶಿಸಲು ಹೋದರು. ಆಗ ಆ ಮಾಸ್ತರು ಶಿವಾಜಿಪಾರ್ಕ್ ಮೈದಾನದಲ್ಲಿ ನೂರಾರು ಎಳೇ ಶಾಲಾ ಬಾಲಕರ ನಡುವೆ ಇದ್ದರು. ಹೊಸ ಹುಡುಗರನ್ನು ಕೋಚ್ ಮಾಡುತ್ತಿದ್ದರು! ಅದರಲ್ಲಿ ಅವರು ಎಷ್ಟು ತನ್ಮಯರಾಗಿದ್ದರೆಂದರೆ, ತಮ್ಮ ಶಾಲೆಯ ಹುಡುಗರು ಒಳ್ಳೇ ಶಾಟ್ ಹೊಡೆದರೆ, ಖುಷಿಯಿಂದ ಜೋರಾಗಿ ಬಾರಿಸಲು ಪುಟಾಣಿ ಡೋಲೊಂದನ್ನು ಹೆಗಲಲ್ಲಿ ತೂಗಿಕೊಂಡಿದ್ದರು. ಸಚಿನ್ ತೆಂಡೂಲ್ಕರ್‌ನ ಹೊಸ ಜಗತ್ತಿಗೆ ಸಂಬಂಧವೇ ಇರದ ಶುದ್ಧವಾದ ಅನಾಮಿಕ ಕ್ರೀಡಾ ಆವರಣವೊಂದು ಅಲ್ಲಿತ್ತು. ಅವರ ಹೆಗಲಿನಲ್ಲಿ ತೂಗಿದ ಪುಟಾಣಿ ಡೋಲು ಅವರದೇ ಸಮಾಧಾನವನ್ನು ಹೊಮ್ಮಿಸುತ್ತಿತ್ತು! ರಾಜು ಅವರ ಹೆಗಲ ಜೋಳಿಗೆಯೂ ನನಗೆ ಆ ಡೋಲಿನಂತೇ ತೋರುತ್ತದೆ!

ಇಂಥ ಶುದ್ಧ, ಅನಾಮಿಕ, ಜೀವನ್ಮುಖಿ ಗುರುಗಳ ಹೃದಯದಲ್ಲಿ ಮನೆ ಮಾಡಿರುವ ಸಮಾಧಾನವೇ ಅವರಿಗೆ ಸಂದಿರುವ ದಕ್ಷಿಣೆ. ನಮ್ಮದೇನಿದ್ದರೂ ಮಾತುಗಳ ಪ್ರದಕ್ಷಿಣೆ!

"ರಾಘ-ರಾಜು" ಇಬ್ಬರೂ ಚೆನ್ನಾಗಿರಬೇಕು. ಏಕೆಂದರೆ, ಅವರು ಚೆನ್ನಾಗಿದ್ದರೆ ಎಲ್ಲವೂ ಚೆನ್ನಾಗಿರುತ್ತದೆ. ❑



# ಮಾಜಿದೊರೆಯ ಪುಸ್ತಕಸೇವೆ

● ರಹಮತ್ ತರೀಕೆರೆ

**ನಾ**ವು ಕೆಲವರು ೧೯೯೨ರಲ್ಲಿ ನಮ್ಮಮ್ಮ ಊರುಮನೆಯನ್ನು ಬಿಟ್ಟು, ಹಂಪಿಯ ವಿರೂಪಾಕ್ಷ ಗುಡಿಯ ಮುಂದಿರುವ ಪಾಳು ಮಂಟಪಗಳಲ್ಲಿ ಆರಂಭಗೊಂಡ ಕನ್ನಡ ವಿಶ್ವವಿದ್ಯಾಲಯಕ್ಕೆ ಸೇರಿ ಕೊಂಡಿದ್ದೆವು. ಆಗ ಬೆಂಗಳೂರಿನಿಂದ ಶ್ರೀನಿವಾಸರಾಜು ಹಾಗೂ ಅವರ ಗೆಳೆಯರಾದ ಎಚ್.ಎಸ್. ರಾಘವೇಂದ್ರರಾವ್ ಅವರೂ ಅಲ್ಲಿಗೆ ಬಂದರು. ರಾಜು ಪ್ರಸಾರಾಂಗದ ಮುಖ್ಯಸ್ಥರಾಗಿಯೂ ರಾಘವೇಂದ್ರರಾಯರು ಪ್ರಾಧ್ಯಾಪಕರಾಗಿಯೂ ನೇಮಕಗೊಂಡು ಬಂದಿದ್ದರು. ಇವರಿಬ್ಬರನ್ನು ಶಿವಮೊಗ್ಗೆಯಲ್ಲಿದ್ದಾಗ ನೋಡಿದ್ದೆ, ಆದರೆ ಸ್ನೇಹ–ಸಲುಗೆ ಸಾಧ್ಯವಾಗಿರಲಿಲ್ಲ. ಇಲ್ಲಿದ್ದ ಕಾಲದಲ್ಲಿ ಇವರ ಜತೆ ಭದ್ರವಾದ ಸಂಬಂಧ ಏರ್ಪಟ್ಟಿತು.

ಶ್ರೀನಿವಾಸರಾಜು ಅವರು ಹಂಪಿಗೆ ಬಂದಿದ್ದು ಒಂದು

ರೀತಿಯಲ್ಲಿ ಶತಮಾನಗಳ ನಂತರ ಮರಳಿ ಮನೆಗೆ ಎನ್ನಬಹುದು. ಯಾಕೆಂದರೆ ಅವರ ಪೂರ್ವಜರು ಆನೆಗೊಂದಿಯ ರಾಜವಂಶದವರಂತೆ. (ಅವರ ಹೆಸರಲ್ಲಿರುವ ರಾಜು ಎಂಬ ಕುರುಹು ಇದರ ಪಳೆಯುಳಿಕೆ ಇರಬಹುದು). ಆದರೆ ತುಂಡು ಜುಬ್ಬವುಟ್ಟು, ಹೆಗಲಲ್ಲಿ ಬ್ಯಾಗು ಹಾಕಿಕೊಂಡು ಕ್ಯಾನವಾಸಿನ ಓಪನ್ ಶೂ ಧರಿಸಿ ಲುಟುಪುಟು ಓಡಾಡುವ ಈ ರಾಜವಂಶೀಯನಲ್ಲಿ ರಾಜತ್ವದ ಯಾವ ಗತ್ತುಗಳೂ ಇರಲಿಲ್ಲ. ಬದಲಿಗೆ ಸಾಧು ಹಸುವಿನಂತಹ ಸ್ವಭಾವವಿತ್ತು. ರಾಜು ಅನೇಕ ವಿಷಯಗಳಲ್ಲಿ ಬಹಳ ಮುಗ್ಧರಾಗಿದ್ದರು. ಬೆಂಗಳೂರಿನಲ್ಲಿ ಹುಟ್ಟಿ ಬೆಳೆದು ಇಷ್ಟೊಂದು ಅಮಾಯಕವಾಗಿ ಸರಳವಾಗಿ ಇರುವುದು ಸಾಧ್ಯವೇ ಎಂದು ನಾನು ಸೋಜಿಗಪಡುತ್ತಿದ್ದೆ. ಅವರಲ್ಲಿ ದೊರೆಯ ಆಳುವ ಗುಣಗಳ ಬದಲಿಗೆ ನಮ್ರವಾಗಿ ಸದ್ದಿಲ್ಲದೆ ಸೇವೆ ಸಲ್ಲಿಸುವ ಗುಣಗಳೇ ಹೆಚ್ಚಿದ್ದವು. ಲೇಖಕರಿಂದ ಹಸ್ತಪ್ರತಿ ಪಡೆಯುವುದು, ಅದನ್ನು ಬೆಂಗಳೂರಿನ ಯಾವುದೋ ಸಂದಿನಲ್ಲಿರುವ ಪ್ರೆಸ್ಸಿಗೆ ಒಯ್ಯುವುದು, ಅದರ ಕರಡಚ್ಚನ್ನು ತಿದ್ದುವುದು, ಕಲಾವಿದರಿಂದ ಚಿತ್ರ ಬರೆಯಿಸುವುದು, ಬೈಂಡ್ ಮಾಡಿಸುವುದು, ಪುಸ್ತಕದ ಅಂಗಡಿಗೆ ಸಾಗಿಸುವುದು, ಲೇಖಕರನ್ನು ಕಾಲೇಜಿಗೆ ಕರೆಸುವುದು, ಅವರಿಂದ ಉಪನ್ಯಾಸ ಮಾಡಿಸುವುದು, ಅದನ್ನು ಪ್ರಕಟಿಸುವುದು, ಪ್ರಕಟಿಸಿದ್ದನ್ನು ಹಂಚುವುದು, ವಿದ್ಯಾರ್ಥಿಗಳಿಗೆ ಸ್ಪರ್ಧೆ ಇಡುವುದು, ಅವರು ಬರೆದದ್ದನ್ನು ಮೌಲ್ಯಮಾಪನ ಮಾಡಿಸುವುದು, ಬಹುಮಾನ ಕೊಡುವುದು– ಇಂತಹ ಸಾಹಿತ್ಯಸೇವೆಗಳನ್ನು ಅವರು ಉದ್ದಕ್ಕೂ ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಮೂಲಕ ಮಾಡಿಕೊಂಡು ಬಂದವರು. ಇವು ಯಾವುವೂ ರಾಜಕಾರ್ಯಗಳಲ್ಲ.

ಶ್ರೀನಿವಾಸರಾಜು ಅವರ ಭಾಷಣಗಳನ್ನು ಕೇಳಿದ್ದೇನೆ. ಬರೆಹವನ್ನು ಓದಿದ್ದೇನೆ. ನನಗೆ ಅವರೊಬ್ಬ ತೀವ್ರವಾದ ಪ್ರಚೋದನೆ ನೀಡುವ ಚಿಂತಕರೆಂದಾಗಲಿ, ಕನ್ನಡ ಸಾಹಿತ್ಯ ಪರಂಪರೆಯ ಬಗ್ಗೆ ಒಳನೋಟ ಕೊಡುವ ವಿದ್ವತ್ತುಳ್ಳವರೆಂದಾಗಲಿ ಎಂದೂ ಅನಿಸಿಲ್ಲ. ನನ್ನ ನೆನಪಲ್ಲಿ ಇರುವುದು ಅವರ 'ಭಸನಾಲಾ ಬಂಧು' ಎಂಬ ಕವನವೊಂದೇ. ಅದು ಅವರ ಅತ್ಯುತ್ತಮ ಪದ್ಯಗಳಲ್ಲಿ ಒಂದು. ಶ್ರೀನಿವಾಸರಾಜು ಅವರ ಸಾಹಿತ್ಯವಿಲ್ಲದೆ ಕನ್ನಡ ಸಾಹಿತ್ಯವನ್ನು ಕಲ್ಪಿಸಿಕೊಳ್ಳಬಹುದು. ಆದರೆ ಅವರಿಲ್ಲದೆ ಈಗ ನಡುವಯಸ್ಸಿನಲ್ಲಿ ಹಾಗೂ ತಾರುಣ್ಯದಲ್ಲಿ ಇದ್ದುಕೊಂಡು ಬರೆಯುತ್ತಿರುವ ಅನೇಕ ಲೇಖಕರನ್ನು ಕಲ್ಪಿಸಿಕೊಳ್ಳುವುದು ಕಷ್ಟ. ಹಲವಾರು ಜನ ತರುಣ ಲೇಖಕರನ್ನು ರಾಜು ಬೆಳಕಿಗೆ ತಂದರು. ಇದನು ಗುರುತಿಸಲು 'ಕ್ರೈಸ್ಟ್ ಕಾಲೇಜು ಕನ್ನಡ ಸಂಘ ಹುಡುಕಿಕೊಟ್ಟ ಪ್ರತಿಭೆಗಳು' ಎಂದು ಒಂದು ಪಟ್ಟಿಯನ್ನೇ ಮಾಡಬಹುದು. ಈ ಪ್ರತಿಭೆಗಳು ಬೆಂಗಳೂರಿನವು ಮಾತ್ರವಲ್ಲ. ಮಂಗಳೂರು, ಶಿವಮೊಗ್ಗ, ಶಿರಸಿ, ಅಂಕೋಲಾ, ಭಾಲ್ಕಿ, ಜಮಖಂಡಿ, ಬಾಗಲಕೋಟೆ, ಕೊಪ್ಪಳ, ಹಾವೇರಿ, ಗುಲಬರ್ಗ ಸಿಂಧನೂರು–ಹೀಗೆ ಕರ್ನಾಟಕದ ನಾನಾ ಪಟ್ಟಣಗಳಿಂದ ಬಂದವು. ರಾಜು ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದಿಂದ ಪ್ರಕಟಿಸಿದ ನೂರಾರು ಪುಸ್ತಕಗಳಲ್ಲಿ ದೊಡ್ಡ ಸಂಖ್ಯೆ ಈ ಹೊಸ ಲೇಖಕರವು. ಹೊಸದಾಗಿ ಬರೆಯುತ್ತಿರುವ ಲೇಖಕರ ಪುಸ್ತಕ ಪ್ರಕಟಿಸುವುದು ಮಾರುಕಟ್ಟೆ ಅರ್ಥಶಾಸ್ತ್ರದ ಪ್ರಕಾರ ಜಾಣ ಕೆಲಸವಲ್ಲ. ತಾರಾಮೌಲ್ಯ ಇನ್ನೂ ಬಾರದ ತರುಣ ಲೇಖಕರ ಪುಸ್ತಕಗಳನ್ನು ಯಾರು ಕೇಳುತ್ತಾರೆ? ಅದರಲ್ಲೂ ಕವನಗಳನ್ನು? ಹೊಸ ಲೇಖಕರಿಂದ ಬರೆಯಿಸುವ, ಬರೆದಿದ್ದನ್ನು ಓದಿ ಪ್ರೋತ್ಸಾಹಿಸುವ ಹಾಗೂ ಪ್ರಕಟಿಸುವ ಕೆಲಸಗಳನ್ನು

ಜಿ.ಪಿ. ರಾಜರತ್ನಂ ಅವರು ಹಿಂದೆ ಮಾಡುತ್ತಿದ್ದರೆಂದು ಕೇಳಿಬಲ್ಲೆವು. ರಾಜು ರಾಜರತ್ನಂ ಶಿಷ್ಯರಾಗಿ ಈ ಸಾಹಿತ್ಯ ಸೇವೆಯನ್ನು ಮುಂದುವರೆಸಿದರು. ಕನ್ನಡ ಪುಸ್ತಕ ಸಂಸ್ಕೃತಿಯ ಚರಿತ್ರೆಯಲ್ಲಿ ಇದು ವಿಶಿಷ್ಟವಾಗಿ ಉಲ್ಲೇಖಗೊಳ್ಳಬೇಕು.

ಹಂಪಿಗೆ ಬರುವ ಹೊತ್ತಿಗೆ ನಾನು ಸಣ್ಣಪುಟ್ಟ ವಿಮರ್ಶೆಯ ಲೇಖನಗಳನ್ನು ಬರೆದುಕೊಂಡಿದ್ದೆ. ರಾಘವೇಂದ್ರರಾವ್ ಹಾಗೂ ಶ್ರೀನಿವಾಸರಾಜು ಜೋಡಿ ಇವನ್ನೆಲ್ಲ ಪಡೆದುಕೊಂಡು ನನ್ನ ಮೊದಲ ಪುಸ್ತಕ 'ಪ್ರತಿಸಂಸ್ಕೃತಿ'ಯನ್ನು ಕನ್ನಡ ಸಂಘದಿಂದ ಪ್ರಕಟಿಸಿತು. ಈ ಕಾರಣಕ್ಕೆ ರಾಘು-ರಾಜು ಎಂಬ ಎರಡು ಹೆಸರುಗಳನ್ನು ಒಟ್ಟಿಗೆ ಉಚ್ಚರಿಸಬೇಕಾಗುವುದು. ಒಬ್ಬರ ಬಿಟ್ಟು ಮತ್ತೊಬ್ಬರ ಬಗ್ಗೆ ಮಾತಾಡುವುದು ಕಷ್ಟ ಎಂಬಂತೆ ಅವು ಬೆಸೆದುಹೋಗಿವೆ. 'ಇವರು ಈ ಶತಮಾನದ ಅತ್ಯುತ್ತಮ ಗೆಳೆಯರು' ಎಂದು ಮಿತ್ರ ಪುರುಷೋತ್ತಮ ಬಿಳಿಮಲೆ ಹೇಳುತ್ತಿದ್ದರು. ಇವರ ಗೆಳೆತನದ ಬಗ್ಗೆ ದಂತಕತೆಗಳೆ ಹುಟ್ಟಿಕೊಂಡಿದ್ದವು. ಅವನ್ನು ಹುಟ್ಟಿಸುವಲ್ಲಿ ಚಂದ್ರಮೋಹನ್ ಮುಂತಾದ ಗೆಳೆಯರ ಪಿತೂರಿ ಇರಬಹುದು. ರಾಜು ತಮ್ಮ ಮಡದಿಯನ್ನು ಸ್ಕೂಟರಿನಲ್ಲಿ ಕರೆದುಕೊಂಡು ಬರುವಾಗ, ಒಂದೊಮ್ಮೆ ದಾರಿಯಲ್ಲಿ ರಾಘವೇಂದ್ರರಾವ್ ಕಂಡರೆ, ತಮ್ಮ ಮಡದಿಯನ್ನು ಇಳಿಸಿ 'ನೀನು ಆಟೋದಲ್ಲಿ ಬಾ' ಎಂದು ಹೇಳಿ, ರಾಘುವನ್ನು ಹತ್ತಿಸಿಕೊಂಡು ಹೋಗುತ್ತಾರೆ ಎನ್ನುವುದು ಅದರಲ್ಲಿ ಒಂದು. ರಾಜು ಆಜಾನುಬಾಹು. ರಾಘು ಕುಳ್ಳಗೆ ಇದ್ದಾರೆ. ಕುಳ್ಳಗಿರುವವರ ಹೆಗಲ ಮೇಲೆ ಉದ್ದ ಇರುವವರು ಕೈಭಾರ ಹಾಕಿ ನಡೆಯುವುದು ಲೋಕರೂಢಿ. ಆದರೆ ಇದು ಇವರಲ್ಲಿ ಉಲ್ಟಾ ಆಗಿತ್ತು. ಹೇಗೋ ರಾಜು ಹೆಗಲನ್ನು ಎಟುಕಿಸಿಕೊಂಡು ಅದರ ಮೇಲೆ ಕೈಹಾಕಿಕೊಂಡು ರಾಘು ನಡೆಯುತ್ತಿದ್ದರು. ಸ್ಕೂಟರಲ್ಲಿ ಕೂತಾಗಲೂ ಹೀಗೇ. ರಾಜು ಬಾಯಿ ಬಳಿ ಕಿವಿತಂದು ಕೂರುತ್ತಾರೆ ಎಂದು ಕಂಡವರು ಹೇಳುತ್ತಿದ್ದರು. ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘಕ್ಕೆ ರಾಘು ಮನೋಹರ ಗ್ರಂಥಮಾಲೆಗೆ ಕುರ್ತಕೋಟಿಯವರು ಇದ್ದಂತೆ. ಲೇಖಕರನ್ನು ಗುರುತಿಸುವುದು, ಅವರ ಬರಹವನ್ನು ಓದುವುದು, ತಿದ್ದುಪಡಿ ಮಾಡುವುದು, ಮುನ್ನುಡಿ ಹಿನ್ನುಡಿ ಬರೆಯುವುದು, ತಮ್ಮ ಸಾಹಿತ್ಯಿಕ ವಿಶ್ಲೇಷಣೆಗಳಲ್ಲಿ ಅವರ ಬರೆಹವನ್ನು ಚರ್ಚಿಸುವುದು, ಕೊಂಚ ಉದಾರವಾಗಿಯೇ ಮೆಚ್ಚುವುದು- ಇವೆಲ್ಲವನ್ನು ರಾಘು ಮಾಡಿಕೊಂಡು ಬಂದರು. ಅವರಂತೆ ಲೇಖಕರ ಕೃತಿಗಳನ್ನು ಹಸ್ತಪ್ರತಿಗಳಲ್ಲೆ ಓದಿದವರು ಕರ್ನಾಟಕದಲ್ಲಿ ಮತ್ತೊಬ್ಬರು ಇದ್ದಾರೆಯೊ ಇಲ್ಲವೋ? ರಾಜು-ರಾಘು ಇಬ್ಬರು ಕಾಲೇಜು ಅಧ್ಯಾಪಕರು. ಒಬ್ಬರು ಪಾಠ ಮಾಡುತ್ತಲೆ ಬರೆಯುವ ವಿದ್ಯಾರ್ಥಿಗಳನ್ನು ಪತ್ತೆ ಮಾಡಿ, ಅವರಿಂದ ಬರೆಯಿಸಿ, ಓದಿ ತಿದ್ದುವುದನ್ನು ಮಾಡಿದರು; ಮತ್ತೊಬ್ಬರು ಅದನ್ನು ಪ್ರಕಟಿಸಿ, ಮಾರಾಟ ಮಾಡಿದರು. ಅನೇಕ ಪದವಿ ಕಾಲೇಜುಗಳು ಇಂತಹ ಗುರುಗಳು ಇರುವ ಕಾರಣದಿಂದಲೇ ಇನ್ನೂ ಮಾನವೀಯವಾಗಿ ಸೃಜನಶೀಲವಾಗಿ ಇವೆಯೆಂದು ತೋರುತ್ತದೆ. ಗಮನಿಸಲೇಬೇಕಾದ ಸಂಗತಿ ಎಂದರೆ, ಕನ್ನಡ ಕ್ರೈಸ್ಟ್ ಕಾಲೇಜಿನ ಮೂಲಕ ಇವರಿಬ್ಬರು ಗುರುತಿಸಿ ಬರೆಯಿಸಿ ಪ್ರಕಟಿಸಿದ ಲೇಖಕರ ಸಾಮಾಜಿಕ ಹಿನ್ನೆಲೆ. ಅದೊಂದು ಜಾತ್ಯತೀತವಾದ ಲೇಖಕರ ಪಟ್ಟಿಯಾಗಿದೆ.

ಹೀಗೆ ವಿದ್ಯಾರ್ಥಿಗಳ ಮಧ್ಯೆ ಸಾಹಿತ್ಯಕ ಕೆಲಸ ಮಾಡಿಕೊಂಡಿದ್ದ ರಾಜು ಮತ್ತು ರಾಘು, ವಿದ್ಯಾರ್ಥಿಗಳೆ ಇಲ್ಲದ ಸಂಶೋಧನೆಗೆಂದು ಸ್ಥಾಪಿತವಾದ ಕನ್ನಡ ವಿಶ್ವವಿದ್ಯಾಲಯಕ್ಕೆ ಬಂದರು.

ಇಲ್ಲಿ ಬಂದಮೇಲೂ ಅವರು ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಕೆಲಸವನ್ನು ಬಿಡಲಿಲ್ಲ. ಒಮ್ಮೆ ತರುಣ ಲೇಖಕರಿಗೆ ವಿದ್ಯಾರ್ಥಿಗಳಿಗೆ ಉಪಯುಕ್ತವಾಗುವ ಒಂದು ಕ್ರಿಯಾ ಯೋಜನೆಯನ್ನು ರಾಜು ಕನ್ನಡ ವಿಶ್ವವಿದ್ಯಾಲಯದ ಮೊದಲನೆಯ ನುಡಿಹಬ್ಬದ ಪ್ರಯುಕ್ತ ಏರ್ಪಟ್ಟ ಒಂದು ಸಭೆಯಲ್ಲಿ ಉತ್ಸಾಹದಿಂದ ಬಹಿರಂಗಗೊಳಿಸಿದರು. ಈ ಬಗ್ಗೆ ಅವರು ಕುಲಪತಿ ಕಂಬಾರರ ಜತೆ ಚರ್ಚೆ ಮಾಡಿರಲಿಲ್ಲ ಎಂದು ತೋರುತ್ತದೆ. ಕಂಬಾರರು ಅವರನ್ನು ಈ ಕಾರಣಕ್ಕೆ ಕಠಿಣವಾಗಿ ಮಾತನಾಡಿಸಿದರು. ರಾಜುಗೆ ಪ್ರತಿರೋಧ ಮಾಡುವ, ತಮ್ಮನ್ನು ಸಮರ್ಥಿಸಿಕೊಳ್ಳುವ ಗುಣ ಕಡಿಮೆ. ಅವರು ಒಂದು ಸ್ವತಂತ್ರ ಕಾಲೇಜು ಪರಿಸರದಲ್ಲಿ ಕೆಲಸ ಮಾಡಿ ಬಂದವರು. ವಿಶ್ವವಿದ್ಯಾಲಯದಂತಹ ಪ್ರಾತಿನಿಧಿಕ ಸಂಸ್ಥೆಗಳಲ್ಲಿದ್ದು, ಅಲ್ಲಿ ಯುದ್ಧ ತಂತ್ರಗಳನ್ನು ರೂಪಿಸಿ, ಅಲ್ಲಿನ ಎಡರು ತೊಡರುಗಳನ್ನು ನಿವಾರಿಸಿಕೊಂಡು ಕೆಲಸ ಮಾಡುವಲ್ಲಿ ಕಷ್ಟ ಪಡುತ್ತಿದ್ದರು. ಅದಕ್ಕೆ ನಾನು ಅವರನ್ನು ಹಸುವಿಗೆ ಹೋಲಿಸಿದ್ದು. ಅವರನ್ನು ಕಂಡವರಿಗೆ ಎರಡು ಕಠಿಣ ಮಾತು ಆಡಿದರೆ ನಡೆಯುತ್ತದೆ ಅನಿಸುತ್ತದೆಯೊ ಏನೊ? ಕೆಲವರಿಗೆ ಅವರನ್ನು ಕಂಡರೆ 'ಮೋಸಮಾಡಬಹುದು' ಎಂದೂ ಅನಿಸಬಹುದು. ರಾಜು ಅವರು ಪ್ರಸಾರಾಂಗದ ನಿರ್ದೇಶಕರಾಗಿದ್ದಾಗ ಒಬ್ಬ ಸಹಾಯಕ ಅವರ ಹೆಸರಲ್ಲಿ ಹಣವನ್ನು ಪಡೆಯಲು ಯತ್ನಿಸಿದ್ದ. ಇವರು ಇಷ್ಟೊಂದು ವ್ಯಾವಹಾರಿಕವಾಗಿ ಹೇಗೆ ದಡ್ಡರಾದರು ಎಂದು ನನಗೆ ಗೊತ್ತಿಲ್ಲ. ತಮ್ಮ ಈ ಮುಗ್ಧತೆ, ಹಿಂಜರಿಕೆ ಆದರ್ಶವಾದಗಳಿಂದಾಗಿಯೇ ತಮ್ಮ ನೈತಿಕತೆಯನ್ನು ಕಾಪಾಡಿಕೊಳ್ಳಲು ಇವರಿಗೆ ಸಾಧ್ಯವಾಗಿರಬಹುದು. ರಾಜು ಕನ್ನಡ ವಿಶ್ವವಿದ್ಯಾಲಯದಲ್ಲಿದ್ದಾಗ ಎಷ್ಟೋ ಕಾರಣಕ್ಕಾಗಿ ನೋಯಬೇಕಾಯಿತು. ಮೃದುಮನಸ್ಸಿನ ಅವರು ಒಳಗೇ ನವೆದು ಕೊಳ್ಳುತ್ತಿದ್ದರು. ಇಲ್ಲಿದ್ದ ದಿನಗಳು ಅವರ ಪಾಲಿಗೆ ಒಳ್ಳೆಯ ದಿನಗಳಾಗಿರಲಿಲ್ಲ. ವಿಶ್ವವಿದ್ಯಾಲಯವನ್ನು ಬಿಟ್ಟು ತೆರಳುವಾಗ ಅವರಲ್ಲಿ ಬಹಳ ದುಗುಡವಿತ್ತು. ನಾನೂ ರಾಘವೇಂದ್ರರಾಯರೂ ಕಳಿಸಲು ಹೊಸಪೇಟೆಯ ಬಸ್ಸುನಿಲ್ದಾಣಕ್ಕೆ ಹೋಗಿದ್ದೆವು.

ಮೃದ್ವಂಗಿ ಜೀವಿಯಾದ ರಾಜು ಅವರಿಗೆ ಕೋಪವೇ ಬರುವುದಿಲ್ಲ ಎಂದು ನನ್ನ ನಂಬಿಕೆಯಾಗಿತ್ತು. ಆದರೆ ಇದು ಸುಳ್ಳಾಯಿತು. ಸಂಪನ್ನರಿಗೆ ಸಿಟ್ಟು ಬರಬಾರದು ಎಂಬ ಮಾತೂ ನೆನಪಾಯಿತು. ನಾವೆಲ್ಲ ಆಗಾಗ್ಗೆ ಹೋಗುತ್ತಿದ್ದ ಒಂದು ಉತ್ತರ ಭಾರತೀಯ ತಿನಿಸುಗಳಿರುವ ಹೋಟೆಲಿಗೆ ಹೋಗಿ, ಒಮ್ಮೆ ಊಟಕ್ಕೆ ಕುಳಿತಿದ್ದೆವು. ಅವತ್ತು ಯಾಕೋ ಏನೋ ಹೋಟೆಲಿನಲ್ಲಿ ಅಸಾಧ್ಯ ಜನಸಂದಣಿಯಿತ್ತು. ಮಾಣಿಯು ಸರ್ಕಸ್ಸಿನಲ್ಲಿ ಹಗ್ಗದಾಟ ಆಡುವರಂತೆ ಅಡುಗೆ ಮನೆಗೂ ಟೇಬಲಿಗೂ ಗರಗರ ಗಿರಕಿ ಹೊಡೆಯುತ್ತಿದ್ದನು. ಏನನ್ನಾದರೂ ಆರ್ಡರ್ ಮಾಡಿದರೆ ಹತ್ತು ನಿಮಿಷ ಕಾಯಬೇಕಿತ್ತು. ಆತ ಒಮ್ಮೆ ರೊಟ್ಟಿ ಕೊಟ್ಟವನು ಪಲ್ಯವನ್ನು ಬಹಳ ಹೊತ್ತಿನ ತನಕ ತಂದುಕೊಡಲಿಲ್ಲ. ಅರ್ಧಂಬರ್ಧ ಉಂಡಿದ್ದ ನಮ್ಮ ಕೈ ಒಣಗಿತು. ದಕ್ಷಿಣ ಭಾರತದ ಊಟವಾದರೆ ತಾಟಿನಲ್ಲಿ ಒಟ್ಟಿಗೆ ಎಲ್ಲವೂ ಬಂದು ಬಿಡುತ್ತದೆ. ಉತ್ತರ ಭಾರತದ್ದಾದರೆ ಹೇಳಿದ ಮೇಲೆ ಅದು ತಯಾರಾಗುತ್ತದೆ. ಆ ದಿನ ಅಗತ್ಯಕ್ಕಿಂತ ಹೆಚ್ಚೇ ತಡವಾಯಿತು. ಕೂಡಲೇ ರಾಜು ಒಂದು ಗರ್ಜನೆ ಹಾಕಿದರು. ಜನರೆಲ್ಲ ಊಟಬಿಟ್ಟು ಅವಾಕ್ಕಾಗಿ ನೋಡಿದರು. ಮಾಲೀಕನು ಗಲ್ಲದ ಕೆಲಸ ನಿಲ್ಲಿಸಿ ಆತಂಕದಿಂದ ನೋಡಿದನು. ಸಪ್ಲೇರು ಭೂಮಿ ನುಂಗಬಾರದೆ ಎಂದು ಕಂಗಾಲಾದನು. ರಾಜನಕೋಪ ಈ ಪರಿ ಇರುತ್ತದೆ

ಎಂದು ಊಹೆ ಮಾಡಿರಲಿಲ್ಲ. ಆದರೆ ಈ ಕೋಪ ಬಡಪಾಯಿ ಸಪ್ಲೇರನ ಮೇಲೆ ಸುರಿಯಿತಲ್ಲ ಎಂದು ಬೇಜಾರೂ ಆಯಿತು.

ಈಚೆಗೆ ರಾಜು ಅವರನ್ನು ನಾನು ಎರಡು ಕಾರ್ಯಕ್ರಮಗಳಲ್ಲಿ ನೋಡಿದೆ. ಮೊದಲನೆಯದಾಗಿ ಕವಿ ವಿಭಾ ಅವರ ಪುಸ್ತಕ ಬಿಡುಗಡೆ ಕಾರ್ಯಕ್ರಮದಲ್ಲಿ. ಕನ್ನಡದಲ್ಲಿ ಅದ್ಭುತವಾಗಿ ಕವಿತೆ ಬರೆಯುತ್ತಿದ್ದ ವಿಭಾ, ತನ್ನ ಮೊದಲ ಹೆರಿಗೆಯಲ್ಲಿ ವೈದ್ಯರ ಪ್ರಮಾದದಿಂದ ತೀರಿಕೊಂಡರು. ಅವರ ಕವಿತೆಗಳನ್ನು ಪ್ರಕಟಿಸಿ, ಬಿಡುಗಡೆ ಮಾಡುವ ಒಂದು ಕಾರ್ಯಕ್ರಮ ಗದಗದಲ್ಲಿ ಏರ್ಪಟ್ಟಿತ್ತು. ನಾವೆಲ್ಲ ಭಾಷಣ ಮಾಡಿದೆವು. ರಾಜು ಭಾಷಣ ಮಾಡಲಿಲ್ಲ. ಹಾಗೆ ಕಂಡರೆ ಅವರು ವಾಗ್ಮಿಯಲ್ಲ. ಎರಡೇ ವಾಕ್ಯ ಮಾತಾಡಿ, "ವಿಭಾ ತರಹದ ಲೇಖಕಿಯರು ಇನ್ನೂ ಬಹಳ ಜನ ಇದ್ದಾರೆ. ಅವರನ್ನು ಉತ್ತೇಜಿಸಲು ವಿಭಾ ಹೆಸರಲ್ಲಿ ಒಂದು ವೇದಿಕೆ ಮಾಡಿರಿ. ಪ್ರತಿವರ್ಷ ಕಾರ್ಯಕ್ರಮ ಮಾಡಿ ಅದರಲ್ಲಿ ಆ ಹೊಸ ಲೇಖಕಿಯನ್ನು ಗುರುತಿಸಿರಿ. ಈ ವೇದಿಕೆಗೆ ಇಗೋ ನನ್ನ ಸಾವಿರ ರೂಪಾಯಿ ದೇಣಿಗೆ" ಎಂದು ಕೊಟ್ಟು ಕುಳಿತುಕೊಂಡರು. ಇದು ರಾಜು ಅವರು ಯೋಚಿಸುವ ಹಾಗೂ ಕೆಲಸ ಮಾಡುವ ರೀತಿ; ಹೊಸ ಲೇಖಕರ ಬಗ್ಗೆ ಅವರಿಗಿರುವ ಬದ್ಧತೆ; ಈ ಬದ್ಧತೆಯೇ ಪಾಶ್ಚಿಮಾತ್ಯ ಪರಿಸರವೂ ಸಿರಿವಂತ ಮನೆತನಗಳಿಂದ ಬಂದ ತರುಣತರುಣಿಯರೂ ಆಂಗ್ಲ ಮಾತಾಡುವವರೂ ಮಲೆಯಾಳದವರ ಕ್ರೈಸ್ಟ್ ಕಾಲೇಜಿನಲ್ಲಿ ಒಂದು ದ್ವೀಪದಂತೆ ಇರುವ ಕನ್ನಡಸಂಘವನ್ನು ಕಟ್ಟಲು ಕಾರಣವಾಗಿರ ಬಹುದು. ಈ ಬಗೆಯ ಕೆಲಸ ರಾಜು ಅವರಿಗೆ ಮಾತ್ರ ಸಾಧ್ಯ. ಒಮ್ಮೆ ನಾನು ಶಿವಮೊಗ್ಗೆಯಲ್ಲಿ ಅಧ್ಯಾಪಕನಾಗಿರುವಾಗ, ಅವರು ನನಗೆ ಒಂದು ಪತ್ರ ಕಳಿಸಿದರು. 'ಕ್ರೈಸ್ಟ್ ಕಾಲೇಜಿನಲ್ಲಿ ಒಂದು ಕನ್ನಡ ಅಧ್ಯಾಪಕನ ಜಾಗ ಇದೆ. ಬಾ' ಎಂದು. ನನಗೆ ಬೆಂಗಳೂರು ಎಂದರೆ ಮೊದಲೆ ಆಗದು. ಎರಡನೆಯದಾಗಿ ರಾಜು ಕೈಗೆ ಸಿಕ್ಕರೆ ಅವರ ಹಿಂದೆ ದೊಡ್ಡ ಪುಸ್ತಕದ ಗಂಟನ್ನು ಹೊತ್ತುಕೊಂಡು ಹೋಗುವ ಪರಿಸ್ಥಿತಿ ಖಂಡಿತಾ ಬರುತ್ತದೆ. ಭೂಮಿಯನ್ನು ಹೊತ್ತು ದೇಹ ಕುಗ್ಗಿಹೋಗಿ ಮೊಣಕಾಲು ಬಗ್ಗಿಹೋಗಿರುವ ಗ್ರೀಕ್ ವೀರ ಹರ್ಕುಲಿಸನಂತೆ ನಾನು ನನ್ನ ಆಕಾರವನ್ನೇ ಕಳೆದುಕೊಳ್ಳಬಹುದು. ಶಕ್ತಿಯೆಲ್ಲ ಪುಸ್ತಕೋದ್ಯಮದಲ್ಲಿ ತೊಡಗಿ ಓದು-ಬರೆಹ ಮಾಡುವುದಕ್ಕೆ ಕಷ್ಟವಾಗಬಹುದು ಎಂದು ಊಹಿಸಿ ನಯವಾಗಿ ಒಲ್ಲೆಯೆಂದೆ. ಈ ಶ್ರೀನಿವಾಸರಾಜು ಯಾವ ಕಾಲದಲ್ಲೊ ದೊರೆಯಾಗಿ ಮಾಡಿದ ಯಾವುದೋ ತಪ್ಪಿಗೆ ಈ ಜನ್ಮದಲ್ಲಿ ಪುಸ್ತಕಗಳ ಸೇವೆಯನ್ನು ಮಾಡಿ ಇದರ ಶಾಪವನ್ನು ಪರಿಹರಿಸಿಕೊಳ್ಳುತ್ತಿದ್ದಾರೊ ತಿಳಿಯದು. ನಾನು ಬಲಿಹೋಗಲಿಲ್ಲ. ಆದರೆ ರಾಜು ಅವರು ತಮ್ಮನ್ನು ತೇದುಕೊಂಡು ನಮ್ಮಂತಹವರ ಪುಸ್ತಕಗಳನ್ನು ಪ್ರಕಟಿಸಿದರು.

ಈಚೆಗೆ ಎರಡನೆಯ ಸಲ ರಾಜು ಅವರನ್ನು ಕಂಡಿದ್ದು, ನಮ್ಮ ವಿಭಾಗ ಬಿ.ಎಂ.ಶ್ರೀ.ಯವರ 'ಇಂಗ್ಲಿಷ್ ಗೀತಗಳು' ಕುರಿತು ಏರ್ಪಡಿಸಿದ್ದ ವಿಚಾರ ಸಂಕಿರಣದಲ್ಲಿ. ರಾಜು ಹೆಗಲಿಗೆ ಚೀಲ ಹಾಕಿಕೊಂಡು ಬಂದು, ಅದರೊಳಗಿದ್ದ ಪುಸ್ತಕ ಪತ್ರಿಕೆಗಳನ್ನೆಲ್ಲ ಅವರಿವರಿಗೆ ಕೊಟ್ಟು, ಎರಡೂ ದಿನ ಅಲ್ಲಾಡದೆ ಕೂತು, ಚರ್ಚೆಗಳನ್ನೆಲ್ಲ ಕೇಳಿದರು. ಅವರು ಎದ್ದು ಮಾತಾಡಿದ್ದು ಒಂದೆ ಸಲ. ಅದು ಕರ್ನಾಟಕ ಸಂಘಕ್ಕೆ ಸಂಬಂಧಪಟ್ಟ ವಿಷಯ ಬಂದಾಗ. ಶ್ರೀಕಂಠಯ್ಯನವರು ತಮ್ಮ ತರಗತಿಗಳಲ್ಲಿ ಕನ್ನಡ ಮಾತಾಡುವುದನ್ನು ನಿಷೇಧ ಮಾಡಿದ್ದರು ಎಂಬ ಚರ್ಚೆ

ಬಂದಾಗ, ರಾಜು ಹೇಳಿದರು. "ಅಷ್ಟು ಮಾತ್ರವಲ್ಲ. 'ಕರ್ಣಾಟಕ ಸಂಘ'ದವರು ಕಾರ್ಯಕ್ರಮಕ್ಕೆ ಕರೆಯಲು ಬಂದಾಗ, ನಾನು ಇಂಗ್ಲಿಷಿನಲ್ಲೆ ಮಾತಾಡುತ್ತೇನೆ ಎಂದು ಕರಾರು ಹಾಕಿದ್ದರು" ಎಂದು ದನಿ ಎತ್ತರಿಸಿ ಹೇಳಿದರು. ಈ ಏರುದನಿಗೆ ಕಾರಣ, ಶ್ರೀಕಂಠಯ್ಯನವರ ಮೇಲಿನ ಕೋಪವಲ್ಲ: ಕನ್ನಡ ಹಾಗೂ ಕರ್ನಾಟಕ ಸಂಘಗಳ ಜತೆಗಿರುವ ಅವರ ಭಾವನಾತ್ಮಕ ಸಂಬಂಧ.

ಕನ್ನಡ ಸಂಘ, ಪುಸ್ತಕ ಪ್ರಕಟಣೆಗಳಿಗೆ ತಮ್ಮ ಇಡೀ ಬದುಕನ್ನು ಕೊಟ್ಟವರಲ್ಲಿ ಶ್ರೀನಿವಾಸ ರಾಜು ಒಬ್ಬರು. ಅವರನ್ನು ಸರಕಾರ ಒಮ್ಮೆ ಸಮ್ಮಾನಿಸಿತು. ಇನ್ನೊಮ್ಮೆ ಅಪಮಾನಿಸಿತು. ರಾಜು, ಅವರನ್ನು ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾಗಿಸಲು ಅದು ನಿರ್ಧರಿಸಿದಾಗ ಸಂಗಾತಿಗಳೆಲ್ಲ ಅವರನ್ನು ಅಭಿನಂದಿಸುತ್ತಿದ್ದರು. ಆದರೆ ಮಾರನೆಯ ದಿನ ನೋಡುವಾಗ ಅವರ ಹೆಸರನ್ನು ಸರ್ಕಾರ ಕೈಬಿಟ್ಟಿತ್ತು. ಇದು ಸರಕಾರದ ತಪ್ಪೊ, ಸರಕಾರಗಳು ಕೆಲಸ ಮಾಡುವ ವಿಧಾನವನ್ನು ಅರಿಯದೆ ಅಭಿನಂದಿಸಿದ ಅಭಿಮಾನಿಗಳ ತಪ್ಪೊ ತಿಳಿಯದು. ಇಂತಹದಕ್ಕೆಲ್ಲ ಲಾಬಿಮಾಡದ ರಾಜು ಮಾತ್ರ ಅನಗತ್ಯವಾಗಿ ಮುಜುಗರಕ್ಕೆ ಈಡಾದರು. ಒಂದು ಕಾಲೇಜಿನ ಕನ್ನಡ ಸಂಘದಿಂದ ಕನ್ನಡ ಪುಸ್ತಕ ಚರಿತ್ರೆಯು ದಾಖಲು ಮಾಡುವಷ್ಟು ಕೆಲಸ ಮಾಡಿರುವ ರಾಜುವಿಗೆ ಇಂತಹ ಪ್ರಾಧಿಕಾರಗಳ ಮೂಲಕವೇ ಸೇವೆ ಸಲ್ಲಿಸುವ ಅನಿವಾರ್ಯತೆಯಿಲ್ಲ; ಎಂತಲೇ ಅವರು ಪ್ರೊಫೆಸರ್‌ರಾಗಿ ನಿವೃತ್ತರಾದ ಮೇಲೂ ಬಗಲಲ್ಲಿ ಬ್ಯಾಗು ನೇತುಹಾಕಿಕೊಂಡು, ಅದರಲ್ಲಿ ಪುಸ್ತಕ ಪತ್ರಿಕೆ ತುಂಬಿಕೊಂಡು ಹಂಚುತ್ತಾ ಇರುವ ದೃಶ್ಯವನ್ನು ನಾವಿನ್ನೂ ನೋಡುತ್ತಿದ್ದೇವೆ.



# ಸೋಗಿಲ್ಲದ ರಾಜು

● ಎಂ.ಆರ್. ಕಮಲ

ಸೃಜನಶೀಲ ಸಾಹಿತಿಗಳಾಗಿ ಹೆಸರು ಗಳಿಸಲು; ತಮ್ಮದೇ ಧ್ವನಿಯನ್ನು ಸಾಹಿತ್ಯದಲ್ಲಿ ಮೂಡಿಸಲು ಸಹಜ ಪ್ರತಿಭೆ, ಸತತ ಪರಿಶ್ರಮ ಅಗತ್ಯವೆನ್ನುವುದು ನಮಗೆಲ್ಲರಿಗೂ ಗೊತ್ತು. ಆದರೆ ಇದರ ಜೊತೆಜೊತೆಗೆ ಬರವಣಿಗೆಯ ಆರಂಭ ಕಾಲದಲ್ಲಿ ಬೆನ್ನುತಟ್ಟಿ ಆತ್ಮ ವಿಶ್ವಾಸ ತುಂಬಬಲ್ಲ ಪರಿಸರ, ನಿರಂತರ ಪ್ರೋತ್ಸಾಹವನ್ನು ತುಂಬುವ ವ್ಯಕ್ತಿಗಳು ಒದಗಿಬಂದರೆ ಬರಹಗಾರರಿಗೆ ಅದೊಂದು ಪ್ರತಿಭೆ ಮತ್ತು ದೈವಕೃಪೆಗಳು ಸಂಲಗ್ನಗೊಂಡ ಸುಮುಹೂರ್ತವೆಂದೇ ಹೇಳಬಹುದು.

ಕನ್ನಡ ನವೋದಯ ಸಾಹಿತಿಗಳ ಸಹೃದಯತೆ, ಕಾವ್ಯ-ಭಾಷೆಗಳ ಬಗ್ಗೆ ಅವರಿಗಿದ್ದ ಶುದ್ಧಾಂತಃಕರಣ ಈ ಬಗೆಯ ಪರಂಪರೆಯೊಂದನ್ನು ಕನ್ನಡ ಭಾಷೆಗೆ ಒದಗಿಸಿಕೊಟ್ಟಿರುವುದು ನಮ್ಮ ಸೌಭಾಗ್ಯವಾಗಿದೆ. ಮಾಸ್ತಿ, ವಿಸೀ, ತೀನಂಶ್ರೀ, ತಳುಕಿನ ವೆಂಕಣ್ಣಯ್ಯ, ತ.ಸು. ಶಾಮರಾಯರು, ಜಿ.ಪಿ ರಾಜರತ್ನಂ ಇಂತಹ ಪರಂಪರೆಯನ್ನು ಬೆಳೆಸಿದ ಮಹನೀಯರು. ಈ ಪರಂಪರೆಯನ್ನು ಮುಂದುವರೆಸಿಕೊಂಡು ಬಂದ ಅಪರೂಪದ ವ್ಯಕ್ತಿ ಚಿ. ಶ್ರೀನಿವಾಸರಾಜು ಅವರು. ಈ ಮಾತನ್ನು ಬರೆಯಲು ಕಾರಣವೆಂದರೆ ಅದೇ ಬಗೆಯ ನಿಷ್ಕಲ್ಮಷ ಸಾಹಿತ್ಯ ಪ್ರೀತಿ, ತರುಣ ಲೇಖಕರ ಬಗ್ಗೆ ಅಪಾರ ಭರವಸೆ ಮತ್ತು ನಂಬಿಕೆಗಳನ್ನು ನಾನು ಚಿ. ಶ್ರೀನಿವಾಸರಾಜು ಅವರಲ್ಲಿ ಕಂಡಿರುವುದಾಗಿದೆ. ಅವರು ಸೃಜನಶೀಲ ಸಾಹಿತಿಗಳಾಗಿ, ಸಾಹಿತ್ಯ ಅಧ್ಯಾಪಕರಾಗಿ, ಪತ್ರಿಕೆ ಸಂಪಾದಕರಾಗಿ, ಕನ್ನಡ ಸಂಘಟಕರಾಗಿ ಕೆಲಸ ಮಾಡಿರುವುದು ಎಷ್ಟು ಗಮನಾರ್ಹವಾಗಿದೆಯೋ, ಹೊಸ ಪ್ರತಿಭೆಗಳನ್ನು ಬೆಳಕಿಗೆ ತರುವಲ್ಲಿ ಅವರು ವಹಿಸಿದ ಕಾಳಜಿಯೂ ಅಷ್ಟೇ ಪ್ರಮುಖವಾಗಿದೆ. ಅಂದು ತರುಣರಾಗಿದ್ದ ಅನೇಕ ಲೇಖಕರ ಕೃತಿಗಳನ್ನು ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ವತಿಯಿಂದ ಪ್ರಕಟಿಸುವ ಮೂಲಕ ಅವರು ಹೊಸದೊಂದು ಪರಂಪರೆಯನ್ನೇ

ಹುಟ್ಟುಹಾಕಿದರೆಂದರೆ ಅದು ಅತಿಶಯೋಕ್ತಿಯ ಮಾತಾಗಲಾರದು. ಏಕೆಂದರೆ ಈ ಬಗೆಯ ಕಟ್ಟುವ ಕೆಲಸಕ್ಕೆ ನಿಷ್ಕಲ್ಮಶ ಪ್ರೀತಿ, ಎಲ್ಲರ ಬಗೆಗೂ ತೆರೆದ ಮನಸ್ಸು, ನಿರಂತರ ಕೆಲಸ ಮಾಡುವ ಅದಮ್ಯ ಉತ್ಸಾಹ ಅಗತ್ಯವಾಗುತ್ತದೆ. ಎಲ್ಲರೂ ರಂಗದ ಮೇಲೆ ಪ್ರಕಾಶಿಸಲು ಬಯಸುವಾಗ ತೆರೆಯ ಹಿಂದೆ ನಿಂತು ರಂಗದ ಸೊಬಗನ್ನು ಎಲ್ಲರೂ ಮೆಚ್ಚುವಂತೆ ಮಾಡುವ ತೆರೆಮರೆಯ ಕಾಯಕವಿದು. ಇಂತಹ ಸಾಹಿತ್ಯ ರಂಗಸಜ್ಜಿಕೆಯ ಕೆಲಸವನ್ನು ಚಿ. ಶ್ರೀನಿವಾಸ ರಾಜು ಅವರು ನಾಲ್ಕು ದಶಕಗಳಿಂದ ಬೇಸರವಿಲ್ಲದೇ ಮಾಡಿರುವುದು ಅವರ ಸಾಹಿತ್ಯ ಪ್ರೀತಿ, ಅಚಲ ನಿಷ್ಠೆಯನ್ನು ತೋರುತ್ತದೆ.

ಪರೋಕ್ಷವಾಗಿ, ಪ್ರತ್ಯಕ್ಷವಾಗಿ ಚಿ. ಶ್ರೀನಿವಾಸರಾಜು ಅವರು ನನ್ನಂತಹ ಅನೇಕ ಅಧ್ಯಾಪಕರ ಮೇಲೆ ಪ್ರಭಾವ ಬೀರಿದ್ದಾರೆ. ಕ್ರೈಸ್ಟ್ ಕಾಲೇಜಿನಲ್ಲಿ ಅವರು ವಿದ್ಯಾರ್ಥಿಗಳಿಗೆಂದೇ 'ದ.ರಾ. ಬೇಂದ್ರೆ ಸ್ಮಾರಕ ದತ್ತಿ ನಿಧಿ' ಸ್ಪರ್ಧೆಯನ್ನು ನಡೆಸುತ್ತಿದ್ದಾಗ ಎರಡು ಬಾರಿ ತೀರ್ಪುಗಾರಳಾಗುವ ಅವಕಾಶವನ್ನು ನನಗೆ ನೀಡಿದ್ದರು. ಬಹುಮಾನ ಮತ್ತು ಮೆಚ್ಚುಗೆ ಗಳಿಸಿದ ವಿದ್ಯಾರ್ಥಿಗಳ ಕವನಗಳ ಸಂಕಲನವನ್ನು ನಂತರ ಪ್ರಕಟಿಸಲಾಗುತ್ತಿತ್ತು. (ಈ ಸ್ಪರ್ಧೆಗಳಲ್ಲಿ ಬಹುಮಾನ ಮತ್ತು ಮೆಚ್ಚುಗೆ ಗಳಿಸಿದ ಅನೇಕ ವಿದ್ಯಾರ್ಥಿಗಳು ಈಗಾಗಲೇ ಕಾವ್ಯ ಕ್ಷೇತ್ರದಲ್ಲಿ ತಮ್ಮದೇ ಗಟ್ಟಿ ಹೆಜ್ಜೆಯನ್ನು ಊರಿದ್ದಾರೆ.) ನನ್ನ ಮಟ್ಟಿಗೆ ಪ್ರತಿಭೆಗಳನ್ನು ಶೋಧಿಸುವ ಮಾರ್ಗವನ್ನು ತೋರಿದ ಪರೋಕ್ಷ ಗುರು ಚಿ. ಶ್ರೀನಿವಾಸರಾಜು ಅವರು. ಅವರಿಂದ ಪ್ರಭಾವಿತಳಾಗಿಯೇ 'ಗೋಡೆ ಪತ್ರಿಕೆ' ಮತ್ತು 'ಕೈಬರಹ ಪತ್ರಿಕೆ'ಗಳನ್ನು ಕಾಲೇಜಿನಲ್ಲಿ ಆರಂಭಿಸಿ ಅನೇಕ ವಿದ್ಯಾರ್ಥಿಗಳನ್ನು ನಾನು ಬರವಣಿಗೆಗೆ ಹಚ್ಚಿದ್ದೇನೆ. ಸ್ಪರ್ಧೆಗಳನ್ನು ನಡೆಸಿದ್ದೇನೆ.

ಚಿ. ಶ್ರೀನಿವಾಸರಾಜು ಅವರಿಗೆ ಅಪಾರ ಶಿಷ್ಯರಿದ್ದಾರೆ. ಅವರು ತೋರಿದ ಹಾದಿಯಲ್ಲಿ ಆತ್ಮಬಲವೊಂದನ್ನೇ ನೆಚ್ಚಿ ನಡೆಯುವವರಿದ್ದಾರೆ ಎಂಬುದು ಇತ್ತೀಚೆಗೆ ನನ್ನ ಅರಿವಿಗೆ ಬಂದಿತು. ಶ್ರೀನಿವಾಸರಾಜು ಅವರ ಶಿಷ್ಯರಿಬ್ಬರೂ (ದಂಪತಿಗಳು) ಕೆಲ ತಿಂಗಳು ಹಿಂದೆ ನಮ್ಮ ಮನೆಗೆ ಬಂದಿದ್ದರು. ತಾವು ಹಿರಿಯ ಕವಿಗಳಾದ ಶ್ರೀ ಕೆ. ಎಸ್. ನಿಸಾರ್ ಅಹಮದ್ ಅವರ ಬಗ್ಗೆ ಸಾಕ್ಷ್ಯ ಚಿತ್ರವನ್ನು ತೆಗೆಯುತ್ತಿರುವುದಾಗಿಯೂ, ಅದಕ್ಕಾಗಿ ಅವರ ಬಗ್ಗೆ ಹೆಚ್ಚು ತಿಳಿದವರು ಮತ್ತು ಆತ್ಮೀಯ ಶಿಷ್ಯರನ್ನು ಸಂದರ್ಶಿಸುತ್ತಿರುವುದಾಗಿ ಹೇಳಿದರು. ಬೇರೆ ಬೇರೆ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿದ್ದವರಲ್ಲಿ ಸಾಹಿತ್ಯದ ಬಗೆಗಿನ ಇಂತಹ ಶ್ರದ್ಧೆಯನ್ನು ಕಂಡು ಪ್ರಶ್ನಿಸಿದಾಗ ತಾವಿಬ್ಬರೂ ಚಿ. ಶ್ರೀನಿವಾಸರಾಜು ಅವರ ಶಿಷ್ಯರೆಂದು, ಅವರ ಪ್ರಭಾವದಿಂದಲೇ ಇಂತಹ ಸಾಹಸಕ್ಕೆ ಕೈ ಹಾಕಿರುವುದಾಗಿ ಹೆಮ್ಮೆಯಿಂದ ಹೇಳಿಕೊಂಡರು. ನನ್ನ ಹೃದಯ ತುಂಬಿ ಬಂತು.

ಚಿ. ಶ್ರೀನಿವಾಸರಾಜು ಅವರ ಸಹೃದಯತೆ, ಆತ್ಮೀಯತೆ, ಸೋಗಿಲ್ಲದ ನೇರ ನಡವಳಿಕೆ ನನ್ನಲ್ಲಿ ಬೆರಗನ್ನು ಹುಟ್ಟಿಸಿದೆ. ಆಫ್ರಿಕನ್-ಅಮೆರಿಕನ್ ಹೆಣ್ಣು ಮಕ್ಕಳ ಆತ್ಮಕಥೆಗಳ ಅನುವಾದದ ಕಾರ್ಯವನ್ನು ಕೈಗೆತ್ತಿಕೊಂಡಿರುವ ಸಂದರ್ಭದ ಹಿನ್ನೆಲೆಯಲ್ಲಿ ನನ್ನ ಅನುಭವವನ್ನು ಹಂಚಿ ಕೊಳ್ಳುವುದಕ್ಕೆ ನಾನು ಈ ಮಾತನ್ನು ಹೇಳಬೇಕಾಯಿತು. ಒಂದು ಸಂಜೆ, ಆರು ಗಂಟೆಯ ಸಮಯವಿರಬೇಕು ಕರೆಗಂಟೆಯ ಸದ್ದಾಯಿತು. ಬಾಗಿಲು ತೆರೆದರೆ. ಚಿ. ಶ್ರೀನಿವಾಸರಾಜು ಅವರು. ಕೊಂಚ ತಬ್ಬಿಬ್ಬಾಯಿತು. ಏನು ಮಾತನಾಡಬೇಕೆಂದೇ ತೋಚಲಿಲ್ಲ. ನಾನು ಅನುವಾದ

ಮಾಡಿರುವ ಪುಸ್ತಕಗಳು ಅಂಗಡಿಯಲ್ಲಿ ಸಿಗದಿದ್ದುದರಿಂದ ತೆಗೆದುಕೊಂಡು ಹೋಗಲು ಬಂದೆ ಎಂದು ಸರಳವಾಗಿ ಹೇಳಿದಾಗ ನನಗೆ ಸಂಕೋಚವಾಯಿತು. ನನ್ನ ಪುಸ್ತಕಗಳನ್ನು ಅವರಿಗೆ ಕಳಿಸಿಕೊಟ್ಟಿಲ್ಲದಿರುವುದಕ್ಕೆ ನನ್ನನ್ನೇ ನಾನು ಹಳಿದುಕೊಂಡೆ. ಒಂದಷ್ಟು ಹೊತ್ತು ಸಾಹಿತ್ಯದ ಬಗ್ಗೆ ಮಾತನಾಡಿ ತಮ್ಮ ಪುಸ್ತಕವೊಂದನ್ನು ಕೊಟ್ಟು ಎಂದಿನಂತೆ ಪುಸ್ತಕಗಳನ್ನು ತುಂಬಿಕೊಂಡಿದ್ದ ಹೆಗಲ ಚೀಲವನ್ನು ಹೊತ್ತು ಹೊರಟು ಬಿಟ್ಟರು.

ಒಂದು ವಾರ ಕಳೆದಿರಬಹುದು. ಅಂಚೆಯಲ್ಲಿ ಲಕೋಟೆಯೊಂದು ಬಂತು. ಚಿ. ಶ್ರೀನಿವಾಸರಾಜು ಅವರ ಪತ್ರ, ಪತ್ರದ ಜೊತೆಗೆ ೫೦೦ ರೂಗಳ ಚೆಕ್. ನಾನು ಕೈಗೆತ್ತಿಕೊಂಡಿರುವ ಅನುವಾದದ ಕಾರ್ಯದ ಬಗ್ಗೆ ಮೆಚ್ಚುಗೆ ಮತ್ತು ಹಾರೈಕೆಯ ಮಾತುಗಳು. ನಾನು ಅವರಿಗೆ ಕೊಟ್ಟ ಪುಸ್ತಕದ ಬೆಲೆ ನೂರು ರೂಗಳು ಆಗಿರಲಿಲ್ಲ. ನನಗೆ ಕಸಿವಿಸಿ, ಸಂಕೋಚದ ಜೊತೆಗೆ ಕೊಂಚ ಸಿಟ್ಟು ಸೇರಿ ಅವರಿಗೆ ಫೋನ್ ಮಾಡಿ ಚೆಕ್ ಹಿಂದಿರುಗಿಸುತ್ತೇನೆಂದು ಹೇಳಿದೆ. ನಾನು ಅನುವಾದ ಕಾರ್ಯವನ್ನು ಗಂಭೀರವಾಗಿ ಸ್ವೀಕರಿಸಿರುವುದು ಮೆಚ್ಚುಗೆಗೆ ಪಾತ್ರವಾದುದೆಂದು, ಮುಂದೆ ಅನುವಾದ ಮಾಡಬಹುದಾದ ಪುಸ್ತಕಗಳನ್ನು ಕಳಿಸಿಕೊಡಲೆಂದು ತಾವು ಐನೂರರ ಚೆಕ್ ಕೊಟ್ಟಿರುವುದಾಗಿ ಹೇಳಿ ಚೆಕ್ ಹಿಂದಿರುಗಿಸದಂತೆ ಮಾಡಿಬಿಟ್ಟರು. ಅವರ ಮಾತಿನ ಅಂತರಾರ್ಥ ನನಗೆ ಹೊಳೆಯಿತು. ನನ್ನ ಅನುವಾದ ಕಾರ್ಯ ನಿಲ್ಲದೇ ನಿರಂತರವಾಗಿ ನಡೆಯಲೆಂಬುದೇ ಅವರ ಮಾತಿನ ಹಿಂದಿನ ಉದ್ದೇಶವಾಗಿತ್ತು. ಐನೂರರ ಚೆಕ್ ಸಾಹಿತ್ಯದ ಕೆಲಸವನ್ನು ನಿಷ್ಠೆಯಿಂದ ಮಾಡಲು ಸೋಮಾರಿಯಾದ ನನಗೆ ಚಾವಟಿಯೇಟು.

ಇಂತಹ ಸರಳ, ಸಜ್ಜನಿಕೆಯ ನಡೆಯನ್ನು ಸಾಹಿತಿಗಳಲ್ಲಿ ಕಾಣುವುದಂತೂ ತೀರಾ ಅಪರೂಪವೆನ್ನಬಹುದು. ಚಿ. ಶ್ರೀನಿವಾಸರಾಜು ಅವರ ಸಾಹಿತ್ಯ ಕೆಲಸವು ಕೇವಲ ಪ್ರಶಂಸೆಗೆ ಅರ್ಹವಾದುದು ಮಾತ್ರವಲ್ಲ, ಅನುಕರಣೀಯವೂ ಆಗಿದೆ. ಅವರ ಕೆಲಸಕ್ಕಾಗಿ ಕನ್ನಡ ನುಡಿ ಅವರಿಗೆ ಕೃತಜ್ಞವಾಗಿರಬೇಕಿದೆ.

❑

## ಛಲ ಬಿಡದ ವಿಕ್ರಮ 'ರಾಜು'

● *ಎ. ಚಂದ್ರಶೇಖರ ನಂಗಲಿ*

ಕ್ರೈಸ್ಟ್ ಕಾಲೇಜ್ ಕನ್ನಡ ಸಂಘದಿಂದ ಪ್ರಕಟವಾದ ನನ್ನ ಪುಸ್ತಕ 'ನಾ ನಿಲ್ಲುವಳಲ್ಲ' ಮೊದಲ ಮಾತುಗಳಲ್ಲಿ ಚಿ॥ ಶ್ರೀನಿವಾಸರಾಜು ಅವರನ್ನು ನಾನು 'ಛಲ ಬಿಡದ ತ್ರಿವಿಕ್ರಮ'ನೆಂದು ಕರೆದಿದ್ದೇನೆ. ಕೇವಲ ನೂರು ರೂಗಳಿಂದ ಆರಂಭವಾದ 'ಕನ್ನಡ ಸಂಘ' ಕ್ರಮೇಣ ಕನ್ನಡ ನಾಡಿನ ಪ್ರತಿಷ್ಠಿತ ಪ್ರಕಾಶನ ಸಂಸ್ಥೆಯಾಗಿ ಪರಿಣಮಿಸಿದ ಪ್ರತ್ಯಕ್ಷ ನಿದರ್ಶನ ನಮ್ಮ ಕಣ್ಮುಂದಿದೆ. ಇದರ ಇಂಜಿನ್ ಅಥವಾ ಚಾಲಕಶಕ್ತಿ ಶ್ರೀನಿವಾಸರಾಜು ಎಂಬುದು ಮುಖ್ಯಾಂಶ.

೧೯೭೭ರಲ್ಲಿ ಕನ್ನಡ ಎಂ.ಎ. ಪೂರೈಸಿದಾಗ ಗೆಳೆಯರೆಲ್ಲ ಸೇರಿ ಪ್ರತಿವಾರಕ್ಕೊಮ್ಮೆ ಭೇಟಿಮಾಡುವ ಉದ್ದೇಶವಿಟ್ಟುಕೊಂಡು ಇದಕ್ಕಾಗಿ ಸೋಮವಾರವನ್ನೂ ಮತ್ತು ಸೆಂಟ್ರಲ್ ಕಾಲೇಜು ಲೈಬ್ರರಿ ಮುಂದಿನ ಕಟ್ಟೆಯನ್ನೂ ಗೊತ್ತುಪಡಿಸಿ, 'ಸೋಮವಾರಕಟ್ಟೆ'ಯನ್ನು ಪ್ರಾರಂಭಿಸಿದೆವು. ಇದು ಎಲ್ಲರ ಬಾಯಲ್ಲಿ ಸೋಮಾರಕಟ್ಟೆ, ಸೋಮಾರಿ ಕಟ್ಟೆಯಾಗಿ ಪರಿವರ್ತಿತವಾಯಿತು. ವಾರಕ್ಕೊಮ್ಮೆ ಸೇರುವ ಈ ಸಂಪ್ರದಾಯಕ್ಕೆ ಬಹುದೊಡ್ಡ ಪರಂಪರೆಯೇ ಇದೆ ಯೆಂಬುದು ನಮಗೆ ಕ್ರಮೇಣ ಗೊತ್ತಾಯಿತು. ಸೋಮಾರಿಕಟ್ಟೆಯು ಪಿ.ಪಿ. ಬಳಗದಲ್ಲಿ ಒಂದು ಉಪನದಿಯಂತೆ ಬೆರೆತು ಹೋಯ್ತು. ನಮ್ಮ ವಿದ್ಯಾಗುರುಗಳಾದ ಡಾ॥ ಕೆ. ವಿ. ನಾರಾಯಣ ಮತ್ತು ಪ್ರೊ॥ ಕಿ.ರಂ. ನಾಗರಾಜ ಅವರ ಒತ್ತಾಸೆಯಿಂದ ಚಿ. ಶ್ರೀನಿವಾಸ ರಾಜು, ಎಚ್.ಎಸ್. ರಾಘವೇಂದ್ರರಾವ್, ಕ.ನಂ. ನಾಗರಾಜು, ಎನ್.ಬಿ. ಚಂದ್ರಮೋಹನ್ ಕೂಡ ಬರಲಾರಂಭಿಸಿದರು. ಇದರಿಂದ ನಮಗೆ ಸಾಹಿತ್ಯ-ಸಂಸ್ಕೃತಿ ಸಂಬಂಧವಾದ ವಿದ್ಯಮಾನಗಳು, ಪರಸ್ಪರ ಸಂಪರ್ಕ ಸಾಧ್ಯವಾಗುತ್ತಿತ್ತು. ಇಂಥ ದಿನಗಳಲ್ಲೆ 'ಆಲೋಕ'ವೆಂಬ ಸಾಹಿತ್ಯ ಪತ್ರಿಕೆಯ ಉದಯವಾದದ್ದು; ಇದೇ ಮುಂದೆ 'ಅಂಕಣ' ವೆಂಬ ಹೆಸರು ಪಡೆಯಿತು. ಬಗಲಲ್ಲೊಂದು ಪುಸ್ತಕ ಜೋಳಿಗೆಯಿಟ್ಟು ಕೊಂಡು ಸಾಹಿತ್ಯ ಪರಿಚಾರಕನಾಗಿ ದುಡಿಯುತ್ತಿದ್ದ ಶ್ರೀನಿವಾಸರಾಜು



ಅವರ ವೈಶಿಷ್ಟ್ಯವನ್ನು ಒಂದು ಮಾತಿನಲ್ಲಿ ಹೇಳುವುದಾದರೆ ಪ್ರತಿಯೊಂದು ಕೆಲಸವನ್ನು ಸ್ವಂತ ಜವಾಬ್ದಾರಿಯಿಂದ ನಿರ್ವಹಿಸುತ್ತಿದ್ದರೂ ತಾವೇನೂ ಮಾಡುತ್ತಿಲ್ಲವೆಂಬಂತೆ ಹಿಂದೆ ಸರಿದು ಗೆಳೆಯರ ಬಳಗವನ್ನು ಮುಂದಿಡುತ್ತಿದ್ದರು. 'ನಾನು' ಎಂಬುದನ್ನು ಹೇಗೆ ಕಳೆದುಕೊಳ್ಳಬೇಕೆಂಬುದಕ್ಕೆ ಒಂದು ಮಾದರಿಯಾಗಿ ನಮ್ಮ ನಡುವಿದ್ದರು.

ಬೆಂಗಳೂರಿನ 'ಗ್ಯಾಸ್' ಕಾಲೇಜಿನಲ್ಲಿ ನಾನು ಬಿ.ಎ. ವ್ಯಾಸಂಗ ಮಾಡುತ್ತಿದ್ದಾಗ ಸಿದ್ಧಲಿಂಗಯ್ಯ, ಡಿ.ಆರ್. ನಾಗರಾಜ, ಅಗ್ರಹಾರ ಕೃಷ್ಣಮೂರ್ತಿ ಮುಂತಾದವರು ನನ್ನ ಸೀನಿಯರ್‌ಗಳಾಗಿ ಓದುತ್ತಿದ್ದು ಆಗಲೇ ಸುಪ್ರಸಿದ್ಧರಾಗಿದ್ದರು. ಸಿದ್ಧಲಿಂಗಯ್ಯ ಕವಿತೆ ಬರೆಯುತ್ತಿದ್ದ ಕಾಲದಲ್ಲೆ ನಾನು ಕೂಡ ಕವಿತೆ ಬರೆಯುತ್ತಿದ್ದೆನಾದರೂ ಇದುವರೆಗೆ ಕವನ ಸಂಕಲನವನ್ನು ತರಲಿಲ್ಲ. ಇದಕ್ಕೆ ಪ್ರಮುಖ ಕಾರಣ ನನ್ನ ವ್ಯಕ್ತಿತ್ವದಲ್ಲುಂಟಾದ ಸ್ಥಿತ್ಯಂತರ. ಕೆ.ವಿ.ಎನ್. ಮತ್ತು ಕಿ.ರಂ. ಅವರ ಸಹವಾಸದಿಂದ ನನಗೆ ವಿಮರ್ಶೆ–ವಿಚಾರ ಸಾಹಿತ್ಯಗಳ ಕಡೆಗೆ ಹೆಚ್ಚು ಒಲವುಂಟಾಯಿತು. ಈ ದಿನಗಳಲ್ಲಿ ನನಗೆ ಎದುರಾಗುತ್ತಿದ್ದ ಸಮಸ್ಯೆಯೆಂದರೆ ಅಧ್ಯಯನ ಗ್ರಂಥಗಳ ಕೊರತೆ. ಇದಕ್ಕೆ ಪರಿಹಾರವಾಗಿ ಕೆ.ವಿ.ಎನ್. ಅವರು 'ರಾಜು' ಅವರ ಗ್ರಂಥಭಂಡಾರದ ಬಗ್ಗೆ ಪ್ರಸ್ತಾಪಿಸಿ ವಿಲ್ಸನ್‌ಗಾರ್ಡನ್ ಬಳಿಯಿರುವ ಅವರ ಬಾಡಿಗೆಮನೆಯ ವಿಳಾಸ ನೀಡಿದರು. ರಾಜು ಅವರಿಗೆ ಈಗಾಗಲೇ ಆಪ್ತನಾಗಿದ್ದ ನಾನು ಅವರ ಗ್ರಂಥ ಭಂಡಾರವನ್ನು ನನ್ನದೇ ಎಂಬಂತೆ ಅವಶ್ಯಬಿದ್ದಾಗಲೆಲ್ಲ ಬಳಸಿಕೊಂಡಿದ್ದೇನೆ. ಪುಸ್ತಕಗಳ ವಿಷಯದಲ್ಲಿ ಎಷ್ಟೇ ಸಾರ್ವಜನಿಕ ಲೈಬ್ರರಿಗಳು ಇದ್ದರೂ ಅಂತಿಮವಾಗಿ ಖಾಸಗಿಯಾದ ಲೈಬ್ರರಿಗಳೇ ನಮಗೆ ದಕ್ಕುವುದೆಂಬ ಸಂಗತಿ ನನಗೆ ಮನದಟ್ಟಾದುದಲ್ಲದೆ, ಆಗಿನಿಂದಲೇ ಯಥಾಶಕ್ತಿ ಪುಸ್ತಕ ಕೊಂಡುಕೊಳ್ಳುವುದರ ಮಹತ್ವವನ್ನು ಅರಿತುಕೊಂಡೆ. ಮನೆಯಲ್ಲಿ ವ್ಯಕ್ತಿಗಳಿಗಾಗಿ ಪ್ರತ್ಯೇಕ ರೂಮು ಮೀಸಲಿಡುವುದನ್ನು ನೋಡಿದ್ದ ನಾನು ಮೊದಲಬಾರಿಗೆ ಪುಸ್ತಕಗಳಿಗಾಗಿಯೇ ಒಂದು ಕೊಠಡಿ ಮೀಸಲಿಟ್ಟುದನ್ನು ರಾಜು ಅವರ ಮನೆಯಲ್ಲೇ ನೋಡಿದ್ದು. ಲೈಬ್ರರಿಗಳಲ್ಲಿ ರ್‍ಯಾಕುಗಳ ಮಧ್ಯೆ ನಡೆದಾಡುವಂತೆ ರಾಜು ಅವರ ಪುಸ್ತಕ ಕೊಠಡಿಯಲ್ಲಿ ನಾನು ನಡೆದಾಡಿದ್ದೇನೆ; ಇದರ ಪ್ರಯೋಜನವನ್ನು ಸಾಕಷ್ಟು ಪಡೆದುಕೊಂಡಿದ್ದೇನೆ. ಡಾ॥ ಜಿ.ಎಸ್. ಶಿವರುದ್ರಪ್ಪ, ಡಾ॥ ಕೆ.ವಿ. ನಾರಾಯಣ ಅವರ ಸೂಚನೆಮೇರೆಗೆ ಭಾಷಣ ಅಥವಾ ಲೇಖನ ರಚನೆಮಾಡುವ ಸಂದರ್ಭದಲ್ಲಿ ನನ್ನ ನೆರವಿಗೆ ಬರುತ್ತಿದ್ದದ್ದು ರಾಜು ಲೈಬ್ರರಿಯೇ; ರಾಜು ಲೈಬ್ರರಿ ಜಿಂದಾಬಾದ್!

ಬೆಂಗಳೂರಿನಲ್ಲಿರುವವರಿಗೆ ಕೆಲವೊಂದು ಸೌಲಭ್ಯಗಳು ವಿಶೇಷವಾಗಿರುವುದಕ್ಕೆ ಸೆಮಿನಾರು ಗಳು ಉತ್ತಮ ನಿದರ್ಶನ. ಬೆಂಗಳೂರಿನಲ್ಲಿ ನಡೆಯುವ ಪ್ರಮುಖ ಸೆಮಿನಾರುಗಳಲ್ಲಿ ಪಿ.ಪಿ. ಬಳಗದ ಗೆಳೆಯರು ಹಾಜರಿದ್ದು ಹಿಂದಿನ ಸಾಲಿನ ಹುಡುಗರಾಗಿ ಕುಳಿತಿರುವುದು ಇಂದಿಗೂ ಮುಂದುವರೆಯುತ್ತಿದೆ. ರಾಜು ಅವರು ಇಂಥ ಹಿಂದಿನ ಸಾಲಿನ ಹುಡುಗರಾಗಿದ್ದರೂ ವಿಶೇಷವಾಗಿ ಪ್ರವೇಶದ್ವಾರದ ಪಕ್ಕದಲ್ಲಿ ಕ್ರೈಸ್ಟ್ ಕಾಲೇಜ್ ಕನ್ನಡ ಸಂಘದ ಪ್ರಕಟಣೆಯನ್ನಿಟ್ಟು ಕೊಂಡು ಮಾರಾಟ ಮಾಡುತ್ತಿದ್ದರು. ಜಿಲ್ಲಾಧಿಕಾರಿಗಳ ಕಚೇರಿಯಲ್ಲಿ ದವಾಲಿಧರಿಸಿದ ಜವಾನನಂತೆ, ಸಾಹಿತ್ಯಿಕ ಸಮಾರಂಭಗಳಲ್ಲಿ ಕನ್ನಡ ದೀಕ್ಷೆಯ ದವಾಲಿ ಧರಿಸಿದ ಪರಿಚಾರಿಕನಾಗಿ ನಿಲ್ಲುತ್ತಿದ್ದ ರಾಜು ಅವರ ಚಿತ್ರ ನನ್ನ ಚಿತ್ತ ಭಿತ್ತಿಯಲ್ಲಿ ಅಚ್ಚಳಿಯದೆ ಉಳಿದು ಬಿಟ್ಟಿದೆ.

ರಾಜು ಅವರ ಈ ಸಾಹಿತ್ಯ ಪರಿಚಾರಿಕೆ ಸಾಹಿತ್ಯಿಕ ಸಮಾರಂಭಗಳಿಗೆ ಮಾತ್ರ ಸೀಮಿತ ವಾಗಿರಲಿಲ್ಲ. ಬೆಂಗಳೂರು ವಿಶ್ವವಿದ್ಯಾಲಯದ ವ್ಯಾಪ್ತಿಗೆ ಬರುವ ಕನ್ನಡ ಅಧ್ಯಾಪಕರೆಲ್ಲರೂ ಸೇರುವ ಸುಸಂದರ್ಭವೆಂದರೆ ಪದವಿ ಪರೀಕ್ಷೆಗಳ ಮೌಲ್ಯಮಾಪನ. ಈ ಕಾರ್ಯದಲ್ಲಿ ಎಲ್ಲರಂತೆ ಭಾಗವಹಿಸುತ್ತಿದ್ದ ರಾಜು ಅವರು ತಮ್ಮ ಪಕ್ಕದಲ್ಲಿ ಒಂದು ಟೇಬಲ್ ಇಟ್ಟುಕೊಂಡು ಕ್ರೈಸ್ಟ್ ಕಾಲೇಜ್ ಕನ್ನಡ ಸಂಘದ ಪ್ರಕಟಣೆಗಳನ್ನು ಹರಡಿ, ಮಾರಾಟ ಕಾರ್ಯವನ್ನು ನಿರ್ವಹಿಸುತ್ತಿದ್ದರು. ರಾಜು ಅವರ ಈ ಕೈಂಕರ್ಯದಲ್ಲಿ ನಾನು ಕೂಡ "ಅಳಿಲಭಕ್ತಿ ಮರಳಸೇವೆ" ಎಂಬಂತೆ ಕೈಜೋಡಿಸಿದ್ದುಂಟು. ರಾಜು ಅವರು ನಿವೃತ್ತರಾಗುವ ಸಂದರ್ಭದಲ್ಲಿ ಈ ವಿಶಿಷ್ಟ ಸಂಪ್ರದಾಯ ನಿಲ್ಲಬಾರದೆಂಬ ಉಮೇದಿನಿಂದ ಒಂದೆರಡು ವರ್ಷಗಳ ಮಟ್ಟಿಗೆ ನಾನು ಕೂಡ ಪುಸ್ತಕ ಹರಡಿಕೊಂಡು ಕುಳಿತಿದ್ದೇನೆ. 'ನಾ ನಿಲ್ಲುವಳಲ್ಲ' ಎಂಬ ನನ್ನ ಪ್ರಥಮ ವಿಮರ್ಶಾ ಸಂಕಲನವೂ ಈ ಪುಸ್ತಕಗಳ ಜೊತೆಗಿದೆಯೆಂಬ ಭಾವನೆಯೂ ಇದಕ್ಕೆ ಪ್ರೇರಕವಾಗಿದೆ. ಕನ್ನಡ ಸಂಘದ ಜವಾಬ್ದಾರಿಗಳಿಂದ ರಾಜು ಅವರು ಸಂಪೂರ್ಣ ಮುಕ್ತರಾದಾಗ ನಾನು ಕೂಡ ಆ ಸಾಹಿತ್ಯ ಪರಿಚಾರಿಕೆಯ ಉಮೇದಿನಿಂದ ಮುಕ್ತನಾದೆ.

ಕನ್ನಡ ಮೌಲ್ಯಮಾಪನದ ಸಂದರ್ಭದಲ್ಲಿ ರಾಜು ಅವರು ಸಂಘಟಿಸುತ್ತಿದ್ದ ಮತ್ತೊಂದು ಕಾರ್ಯವೆಂದರೆ, ಪಿ.ಪಿ. ಬಳಗದ ಗೆಳೆಯರೆಲ್ಲ ಸೇರಿ ದೊಡ್ಡ ಹೋಟೆಲಿನಲ್ಲಿ ಊಟಮಾಡುವುದು. ಇದಕ್ಕಾಗಿ ಏನಾದರೊಂದು ವಿಶೇಷವನ್ನು ನಾವೇ ಹುಡುಕಿಕೊಂಡು ಬಡ್ತಿ-ಪ್ರಶಸ್ತಿ ಪಡೆದವರನ್ನು ಮುಖ್ಯ ಅತಿಥಿಗಳಾಗಿ ಆರಿಸಿಕೊಳ್ಳುತ್ತಿದ್ದೆವು. ಬೆಂ.ವಿ.ವಿ.ದಿಂದ ಹಂಪಿಯ ಕನ್ನಡ ವಿಶ್ವ ವಿದ್ಯಾಲಯಕ್ಕೆ ಅಡಿಯಿರಿಸಿದ್ದ ಡಾ॥ ಕೆ.ವಿ. ನಾರಾಯಣ ಅವರು ಇದೇ ಕಾರಣಕ್ಕಾಗಿ ಒಮ್ಮೆ ಮುಖ್ಯ ಅತಿಥಿಗಳಾಗಿ ಊಟದ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಪ್ರತಿವರ್ಷ ನಮ್ಮೊಂದಿಗೆ ಬೆರೆತು ಎಲ್ಲರಂತೆ ಊಟದ ವೆಚ್ಚ ಹಂಚಿಕೊಳ್ಳುತ್ತಿದ್ದ ಕೆ.ವಿ.ಎನ್. ಆ ವರ್ಷ ಮಾತ್ರ ಗೆಳೆಯರ ಪ್ರೀತಿ ಒತ್ತಾಯಗಳಿಗೆ ಮಣಿದು ಮುಖ್ಯ ಅತಿಥಿಯ ಗೌರವವನ್ನು ಪಡೆದಿದ್ದರು. ಇಂಥ ಎಷ್ಟೋ ಊಟಗಳನ್ನು ಮತ್ತು ಸಂತಸದ ಕ್ಷಣಗಳನ್ನು ನಮಗಾಗಿ ಸಂಘಟಿಸುತ್ತಿದ್ದ ರಾಜು ಅವರ ವಿಶಾಲತೆಯನ್ನು ಹೇಗೆ ಮರೆಯಲು ಸಾಧ್ಯ?

ರಾಜು ಅವರನ್ನು ಕುರಿತು ಬರೆಯುವಾಗ ನನಗೆ ನೆನಪಾಗುವ ಮತ್ತೊಂದು ಘಟನೆಯೆಂದರೆ ನಮ್ಮ ಸಹಪಾಠಿಯೊಬ್ಬನ ಅಂತರ್ ಜಾತೀಯ ವಿವಾಹ ಪ್ರಕರಣ. ಪ್ರೇಮಿಗಳನ್ನು ಮಹಾನ್ ಸಾಹಸಿಗಳೆಂದು ತಿಳಿಯುವ ನಮ್ಮ ಸಮಾಜದಲ್ಲಿ ಜಾತೀಯಗೋಪುರಗಳನ್ನು ಹೊಡೆದುರುಳಿಸುವ ಘಟನೆಗಳು ಸಂಭವಿಸುತ್ತಿರುವುದು ಸರಿಯಷ್ಟೆ. ಆದರೆ ಇಂಥ ಪ್ರಸಂಗವು ಏರ್ಪಡುವ ಮೊದಲ ಕ್ಷಣಗಳಲ್ಲಿ ಒಂದು ಬಗೆಯ ಆತಂಕ ಇದ್ದೇ ಇರುತ್ತದೆ. ಗಂಡು-ಹೆಣ್ಣುಗಳ ಪಾಣಿಗ್ರಹಣ ವನ್ನು ಆ ಕ್ಷಣಕ್ಕೆ ಒಂದು ವಾಸ್ತವವನ್ನಾಗಿ ಸ್ವೀಕರಿಸಲು ತಂದೆ-ತಾಯಿಗಳು ನಿರಾಕರಿಸುವುದುಂಟು. ಇಂಥ ಸಂದರ್ಭಗಳಲ್ಲಿ ಯಾರಾದರೊಬ್ಬರು ಆ ಸ್ಥಾನವನ್ನು ಭರ್ತಿಮಾಡಿ ಸಾಗುವ ಅನುರಾಗ ಪ್ರವಾಹಕ್ಕೆ ಅನುಕೂಲ ಪಾತ್ರ ಮಾಡಿಕೊಡಬೇಕಾಗುತ್ತದೆ. ರಾಜು ಮತ್ತು ಸರಸ್ವತಿ ದಂಪತಿಗಳು ಇಂಥ ಅಯಾಚಿತ ಪಾತ್ರವನ್ನು ಸಂತೋಷವಾಗಿ ನಿರ್ವಹಿಸಿದ್ದಾರೆ. ಯಾವುದೇ ಪ್ರತಿಫಲಾಪೇಕ್ಷೆ ಯಿಲ್ಲದೆ, ಮದುವಣಗಿತ್ತಿಯನ್ನು ಮಗಳಂತೆ ಕಂಡು 'ಕನ್ಯಾದಾನ' ಮಾಡಿಕೊಟ್ಟ ರಾಜು ದಂಪತಿಗಳ ಸಕಾಲಿಕ ನಡೆ ಅನುಸರಣೀಯವಾಗಿದೆ. ಪಿ.ಪಿ. ಬಳಗದ ಗೆಳೆಯರ ಹಾಜರಿಯಲ್ಲಿ

ಆರ್ಯಸಮಾಜದಲ್ಲಿ ನಡೆದ ಆ ಮದುವೆಯ 'ಶಾಸ್ತ್ರೀಯ' ವಿಧಿಗಳಲ್ಲಿ ನಾವು ಕಳೆದುಕೊಂಡದ್ದು ಏನೆಂಬುದನ್ನು ಕಾಲ ಪುರುಷನೇ ಹೇಳಬೇಕು; ಕಾಲಂಗೆ ಬಾಯಿಲ್ಲಂ ಗಡಾ!

ಕನ್ನಡ ಸಾಹಿತ್ಯಕ್ಕೆ ಕ್ರೈಸ್ಟ್ ಕಾಲೇಜ್ ಕನ್ನಡ ಸಂಘದ ಕೊಡುಗೆ ಉಳಿದವರಿಗೆ ಮಾದರಿಯಾಗಿದೆ. ಇದೇ ಸಂದರ್ಭದಲ್ಲಿ ಇಂಗ್ಲೀಷ್ ಸಾಹಿತ್ಯದಲ್ಲಿ ಅತ್ಯುನ್ನತ ಶಿಕ್ಷಣ ಪಡೆದಿರುವ ರಾಜು ಅವರ ಮಗ ಸುಗತನ ಬಗ್ಗೆ ಬರೆಯದಿದ್ದರೆ ಈ ಲೇಖನ ಅಪೂರ್ಣವಾಗುತ್ತದೆ. ಕನ್ನಡ ಸಾಹಿತ್ಯ-ಸಂಸ್ಕೃತಿಗೆ ರಾಜು ಕೊಟ್ಟಿರುವ ಮುಖ್ಯ ಕೊಡುಗೆಯಲ್ಲಿ ಸುಗತ ಕೂಡ ಒಬ್ಬನೆಂಬುದನ್ನು ಮರೆಯಲಾಗದು. ಸುಗತ ಸಂಪಾದಿಸಿರುವ 'ಎಕೂಷೆ ಫೆಬ್ರವರಿ' ಎಂಬ ಲೋಕ ತಾಯ್ನುಡಿ ದಿನದ ಮಹತ್ವವನ್ನು ಸಾರುವ ಈ ಪುಸ್ತಕವು ದೇಶಭಾಷಾ ಸಂರಕ್ಷಣೆಯ ಕಾಯಕದಲ್ಲೊಂದು ಗಮನಾರ್ಹ ಕೊಡುಗೆಯಾಗಿದೆ.

ಕನ್ನಡ ಸಾಹಿತ್ಯದ ಪರಿಚಾರಿಕೆಯನ್ನೇ ಬದುಕಿದ ರಾಜು ಅವರು ಪುಸ್ತಕ ಸಂಸ್ಕೃತಿಯನ್ನು ಸದ್ದುಗದ್ದಲವಿಲ್ಲದೆ ಎತ್ತಿಹಿಡಿದ ಧೀಮಂತ ಚೇತನವಾಗಿ ಬಹುಮುಖ್ಯರಾಗುತ್ತಾರೆ. ಈ ದಿಸೆಯಲ್ಲಿ ಜಿ.ಪಿ. ರಾಜರತ್ನಂ ಪರಂಪರೆಯನ್ನು ಪುನರುಜ್ಜೀವನಗೊಳಿಸಿದ ರಾಜು ಅವರ ನಿರ್ವಹಣಾ ಕೌಶಲ್ಯ ಮೆಚ್ಚುವಂಥದು. ಗುಣಕ್ಕೆ ಮಚ್ಚರಮುಂಟೆ? ಕನ್ನಡದ ನಿತ್ಯ ಸಚಿವ ಸಂಪುಟಕ್ಕೆ ಪಂಪನೇ ಮುಖ್ಯಮಂತ್ರಿಯಾಗಿರುವಂತೆ, ಕನ್ನಡದ ನಿತ್ಯ ಪುಸ್ತಕ ಪ್ರಾಧಿಕಾರಕ್ಕೆ ರಾಜು ಅವರೇ ಅಧ್ಯಕ್ಷರೆಂದು ಹೇಳಿದರೆ ಉತ್ಪ್ರೇಕ್ಷೆಯಾಗುವುದಿಲ್ಲ.

ಕ್ರೈಸ್ಟ್ ಕಾಲೇಜ್ ಕನ್ನಡ ಸಂಘದ ಪ್ರಕಟಣೆಗಳು ಕವಿ ಬೇಂದ್ರೆಯವರ ಜನ್ಮದಿನದಂದೆ ಬಿಡುಗಡೆಯಾಗುತ್ತಿತ್ತು. ಒಮ್ಮೆ ಇಂಥ ಒಂದು ಸಂದರ್ಭದಲ್ಲಿ ಡಾ॥ ಬೆಸಗರಹಳ್ಳಿ ರಾಮಣ್ಣನವರು ಮುಖ್ಯ ಅತಿಥಿಯಾಗಿ ಮಾತನಾಡಿದ್ದಾರೆ. 'ಕೊಳಲು ಮತ್ತು ಖಡ್ಗ' – ಎಂಬ ಅವರದೇ ಕಥಾಸಂಕಲನವನ್ನು ಕನ್ನಡ ಸಂಘ ಪ್ರಕಟಿಸಿತ್ತು. ಕೃತಿಬಿಡುಗಡೆಯ ಸಮಾರಂಭದಲ್ಲಿ ಭಾಗವಹಿಸಿದ್ದ ನಮ್ಮೆಲ್ಲರ ಪ್ರೀತಿಯ ರಾಮಣ್ಣನವರು ತಮ್ಮ ಕತೆಗಳು ಮೊದಲು ಪ್ರಕಟವಾದ ಕ್ಷಣಗಳಿಂದ ಹಿಡಿದು ಅದುವರೆಗಿನ ಎಲ್ಲ ಪ್ರಕಟಣೆಗಳನ್ನು ಮೆಲಕು ಹಾಕುತ್ತಾ ಕ್ರೈಸ್ಟ್ ಕಾಲೇಜ್ ಕನ್ನಡ ಸಂಘವು ಪ್ರಕಟಿಸಿರುವ 'ಕೊಳಲು ಮತ್ತು ಖಡ್ಗ'ದಿಂದ ನನಗೆ ತುಂಬ ಹೆಮ್ಮೆಯೆನಿಸುತ್ತಿದೆಯೆಂದೂ ತಮ್ಮ ಮನಸ್ಸಿನಲ್ಲಿದ್ದ ಒಂದು ಬಗೆಯ ಕೊರತೆ ಈ ಪ್ರಕಟಣೆಯಿಂದ ದೂರವಾಯಿತೆಂದೂ ಹೇಳುತ್ತಾ ಸಭೆಯಲ್ಲಿ ನಗೆಯ ಅಲೆಗಳನ್ನೆ ಉಂಟುಮಾಡಿದರು. ರಾಮಣ್ಣ ಇರುವ ಕಡೆ ನಗೆಯ ಅಲೆಗಳಿಗೆ ಕೊರತೆಯೆ?

ಡಾ॥ ಬೆಸಗರಹಳ್ಳಿ ರಾಮಣ್ಣನವರು ಬದಲಿ ಮೂತ್ರ ಪಿಂಡ ಚಿಕಿತ್ಸೆಗೊಳಗಾಗಿ ವಿಶ್ರಮಿಸಿಕೊಳ್ಳುತ್ತಿದ್ದ ಸಂದರ್ಭದಲ್ಲಿ ಅವರನ್ನು ಭೇಟಿಮಾಡಲು ರಾಜು ಮತ್ತು ನಾನು ಜೊತೆಗೂಡಿ ಮಂಡ್ಯಕ್ಕೆ ಹೋಗಿದ್ದೆವು. ರಾಮಣ್ಣನವರ ಸಂಭ್ರಮ ಹೇಳತೀರದು. ನಾಟಿಕೋಳಿಯ ಬಗ್ಗೆ ನನಗಿದ್ದ ರುಚಿನಿಷ್ಠೆಯನ್ನು ಬಲ್ಲವರಾಗಿದ್ದ ರಾಮಣ್ಣನವರು ಈ ಸರ್ತಿ ಪುಳಿಚಾರಿನವರ ಜೊತೆ ಬಂದಿರುವುದಕ್ಕೆ ಪೇಚಾಡಿಕೊಂಡರು. ಈಗಾಗಲೇ ರಾಮಣ್ಣನವರ ಮನೆಯಲ್ಲಿ ಬಾಡೂಟ ಸವಿದಿದ್ದ ನಾನೆ ಅವರನ್ನು ಸಮಾಧಾನಪಡಿಸುತ್ತಾ ಸಸ್ಯಾಹಾರಿ ಊಟವನ್ನು ಮಾಡಿದ್ದಾಯ್ತು.

ಮನೆಯಲ್ಲಿ ಇದ್ದಷ್ಟು ಹೊತ್ತು ರಾಮಣ್ಣನವರು ಮಹಾನ್ ಕತೆಗಾರರಾದ ಪ್ರೇಮ್‌ಚಂದ್ ಬಗ್ಗೆ ವಿಶೇಷ ಉಪನ್ಯಾಸವನ್ನೆ ನೀಡಿದರು.

ತಾವು ಮುಂದೆ ಬರೆಯಬೇಕೆಂದಿರುವ ಕೃತಿಗಳ ಕುರಿತು ಸಂಕ್ಷಿಪ್ತ ಮಾಹಿತಿಯನ್ನೂ ಕೊಟ್ಟರು. ನಾವಿಬ್ಬರು ಬೇಗನೆ ಬರೆದು ಪೂರೈಸಿರೆಂದು ಹೃದಯಪೂರ್ವಕವಾಗಿ ಹಾರೈಸಿ ರಾಮಣ್ಣರನ್ನು ಬೀಳ್ಕೊಂಡು ಬಂದೆವು. ರಸ್ತೆಯ ತಿರುವಿನಲ್ಲಿ ನಾವಿಬ್ಬರು ಮರೆಯಾಗುವವರೆಗೆ ಮನೆಗೇಟಿನ ಬಳಿ ನಿಂತಿದ್ದು ಕೈ ಬೀಸುತ್ತಿದ್ದ ಡಾ॥ ಬೆಸಗರಹಳ್ಳಿಯವರ ಚಿತ್ರವೂ ನನ್ನ ಚಿತ್ತ ಭಿತ್ತಿಯಲ್ಲಿ ಅಚ್ಚಳಿಯದೆ ಉಳಿದುಬಿಟ್ಟಿದೆ. ಮುಂದೆ ಕೆಲವೇ ದಿನಗಳಲ್ಲಿ ಅವರ ನಿಧನವಾರ್ತೆ ನಮ್ಮನ್ನು ವಿಷಣ್ಣರಾಗಿಸಿತು.

ಗೆಳೆಯ ರಾಜು ಅವರ ಕವನಸಂಕಲನ ಮತ್ತು ಏಕಾಂಕ ನಾಟಕಗಳು ವಿಶೇಷವಾಗಿ ಮೃತ್ಯು ಸಂಬಂಧವಾಗಿಯೇ ಇರುವುದನ್ನು ಈ ಹಿನ್ನೆಲೆಯಲ್ಲೆ ಪರಿಭಾವಿಸಬೇಕು. ರಾಜು ಕೃತಿಗಳ ಸ್ಥಾಯಿಭಾವ ಮೃತ್ಯುವೇ ಆಗಿದೆ: "ನಾವು ಬದುಕಿರುವುದೇ ನಿಜವಾದಲ್ಲಿ ಇರಲಿ ನಮಗೆ ಸತ್ತುಹೋದವರ ಧ್ವನಿಗಳು ಅಥವಾ ನದಿಗಳಲ್ಲಿ ನಮ್ಮನ್ನು ದೂಡಿ ಕನಸುಗಳಲ್ಲದೇ ಬೇರೇನನ್ನೂ ಹಾರೈಸದ ಕಾಡುಗಳ, ಪರ್ವತದ ಹೃದಯ"–ಎಂಬ ಇಟಲಿಯ ಕವಿ ಸಾಲ್ವತೋರೆ ಕಾಸಿಮೋದೊ ಕವಿತೆಯ ಸಾಲುಗಳು ರಾಜು ಸಾಹಿತ್ಯವನ್ನು ಓದುವಾಗ ನೆನಪಾಗುತ್ತದೆ.

❑

# ತಾಯಿಗುಣದ ಎಲ್ಲರ ಗೆಳೆಯ

● *ಕೆ. ಸತ್ಯನಾರಾಯಣ*

ಸ್ವಭಾವದಲ್ಲಿ ಹಿರಿತನ, ಹಾಗೂ ಗೆಳೆತನ ಮತ್ತು ಒಡನಾಟದಲ್ಲಿ ಸೋದರತೆ ಮತ್ತು ಆತ್ಮೀಯತೆ ಪ್ರಿಯರಾದ ಶ್ರೀನಿವಾಸರಾಜು ಅವರ ವ್ಯಕ್ತಿತ್ವದ ಹೆಗ್ಗುರುತು. ಕಳೆದ ಇಪ್ಪತ್ತೈದು ವರ್ಷಗಳಿಂದ ನನಗೆ ಅವರೊಡನೆ ಒಡನಾಟವಿದೆ. ಈ ಕಾಲಾವಧಿಯಲ್ಲಿ ಕನ್ನಡ ಸಂಸ್ಕೃತಿಯ, ಪ್ರಕಾಶನ ಪ್ರಪಂಚದ, ಲೇಖಕರ ಆಸೆ–ಆಕಾಂಕ್ಷೆಗಳ ಸ್ವರೂಪವೇ ಬದಲಾಗಿಹೋಗಿದೆ. ಶ್ರೀನಿವಾಸರಾಜು ಅವರಿಗೆ ಸಲ್ಲಿಸ ಬಹುದಾದ ಗೌರವವೆಂದರೆ ಈ ಬದಲಾವಣೆಯ ಹಿನ್ನೆಲೆಯಲ್ಲಿಯು ಅವರ ವ್ಯಕ್ತಿತ್ವ, ಚಟುವಟಿಕೆಗಳು ಹೇಗೆ ಕಾಣುತ್ತದೆಂದು ಪರಿಶೀಲಿಸುವ ಪ್ರಯತ್ನ ಮಾಡುವುದು. ಅಂತಹ ಒಂದು ಪ್ರಯತ್ನ ಈ ಬರಹ.

ಶ್ರೀನಿವಾಸರಾಜು ಅವರು ತಮ್ಮನ್ನ ಕನ್ನಡದ ಒಬ್ಬ ಕೆಲಸಗಾರ ರೆಂದೇ ಕರೆದುಕೊಂಡಿದ್ದಾರೆ. ಪರಿಚಾರಿಕೆ, ಸೇವೆ, ಸಂಸ್ಕೃತಿ, ಚಿಂತನೆ ಇಂತಹ ದೊಡ್ಡ ದೊಡ್ಡ ಪದಗಳನ್ನು ಅವರು ಬಳಸದೆ 'ಕೆಲಸ' ಅನ್ನುವ ಪದವನ್ನು ಬಳಸುವುದು ನನಗೆ ತುಂಬಾ ಕುತೂಹಲಕರ ವಾಗಿ ಕಂಡಿದೆ. ಕಾವ್ಯ ರಚನೆ, ನಾಟಕಕಾರರೂ ಮೂಕ ನಾಟಕಗಳ ಪ್ರಕಟಣೆ ಇವು ಅವರ ವ್ಯಕ್ತಿತ್ವದ ಇನ್ನೊಂದು ಭಾಗವಾಗಿದ್ದರು. ಆ ದಿಕ್ಕಿನಲ್ಲಿ ಅವರು ಹಾಕಬಹುದಾದಷ್ಟು ಸಮಯ, ವ್ಯವಧಾನ, ಏಕಾಗ್ರತೆಯನ್ನು ಹಾಕಲಿಲ್ಲವೆಂಬುದೇ ನನ್ನ ದೂರು. ಕನ್ನಡ ನಾಡಂತು ಶ್ರೀನಿವಾಸರಾಜು ಅವರನ್ನು ಒಬ್ಬ ಗಣ್ಯ, ಮೌಲಿಕ, ಹಾಗು ಸಾಹಿತ್ಯಿಕವಾಗಿ ದೂರದೃಷ್ಟಿ ಮತ್ತು ಸಮತೋಲನ ಹಾಗೂ ಇತಿಹಾಸಿಕ ಪ್ರಜ್ಞೆ ಇರುವ ಪ್ರಕಾಶಕ ಮಿತ್ರರೆಂದೇ ಗುರುತಿಸಿದೆ. ಆದರೆ ಈ ಗುರುತಿಸುವಿಕೆ ಗುರುತಿಸಬೇಕಾದ ರೀತಿ–ಪ್ರಮಾಣ ದಲ್ಲಾಗಲಿಲ್ಲ ಎಂಬುದು ನಮ್ಮ ಸಾಂಸ್ಕೃತಿಕ ಲೋಕದ ಕೃಪಣತೆಯನ್ನು ತೋರಿಸುತ್ತದೆ.

ಈವತ್ತಿನ ಸಾಹಿತ್ಯಿಕ–ಸಾಂಸ್ಕೃತಿಕ ಲೋಕವು ಉತ್ತಮವಾಗಿದೆ.

ಕರ್ನಾಟಕ ಸರ್ಕಾರವೊಂದೇ ನಾನಾ ರೀತಿಯ ಅಕಾಡೆಮಿ, ಪ್ರಾಧಿಕಾರ, ಪರಿಷತ್ತು, ಇಲಾಖೆಗಳ ಮೇಲೆ ಕೋಟ್ಯಾಂತರ ರೂಪಾಯಿಗಳನ್ನು ಪ್ರತಿವರ್ಷವೂ ತೊಡಗಿಸುತ್ತಿದೆ. ಈ ಮೊತ್ತ ಇನ್ನೂ ಹೆಚ್ಚಾಗಬೇಕೆಂದು ಲೇಖಕರ ಒತ್ತಾಯವೂ ಇದೆ. ಈಗ ಕೊಡುತ್ತಿರುವ ಹಣದ ಸದುಪಯೋಗ ಆಗುತ್ತಿದೆಯೆ, ನಾನಾ ಪ್ರಾಧಿಕಾರ ಅಕಾಡೆಮಿಗಳು ಮಾಡುತ್ತಿರುವ ಕೆಲಸದಲ್ಲಿ ಗೊಂದಲ Over Lapping, ಪುನರಾವರ್ತನೆ ಇದೆಯೇ ಎಂಬುದರ ಪರಿಶೀಲನೆ ಕೂಡ ಆದಂತಿಲ್ಲ.

ಹಾಗೆಯೇ ಈವತ್ತಿನ ಸಾಂಸ್ಕೃತಿಕ ಸಾಹಿತ್ಯಕ ಲೋಕವು ಬಹುಪಾಲು Media Driven ಆಗಿದೆ (ಮಾಧ್ಯಮ ಪ್ರೇರಿತ). ಅನಂತಮೂರ್ತಿ, ಕಂಬಾರ, ಕಾರ್ನಾಡ್‌ರಂತಹ ಲೇಖಕರು ಕೂಡ ತಮ್ಮ ಕೃತಿ ಅಥವಾ ಲೇಖಕ ವ್ಯಕ್ತಿತ್ವದ ಮೂಲಕ ಮಾತಾಡುವುದಕ್ಕಿಂತ ಹೆಚ್ಚಾಗಿ ತಮ್ಮ ಸಾರ್ವಜನಿಕ ವ್ಯಕ್ತಿತ್ವದ ಮೂಲಕವೇ ಮಾತಾಡುತ್ತಿರುತ್ತಾರೆ. ಅಥವಾ ಹಾಗೆ ಮಾತಾಡುವಂತೆ ಮಾಧ್ಯಮಗಳು ಅವರನ್ನು ಸದಾ ಕಾಲ ಪುಸಲಾಯಿಸುತ್ತಿರುತ್ತವೆ. ಇಂತಹ ಗಣ್ಯ-ಸ್ಥಾಪಿತ ಲೇಖಕರ ಪಾಡೇ ಹೀಗಾದ ಮೇಲೆ ಸಣ್ಣಪುಟ್ಟ ಲೇಖಕರ ಪಾಡು ಏನಾಗಬೇಡ! ಸುದ್ದಿಮಾಧ್ಯಮಗಳು ಲೇಖಕರನ್ನು "ತೋರಿಸಲು" ಇಷ್ಟ ಪಡುತ್ತವೆ. ಅವರ ಕೃತಿಗಳನ್ನಲ್ಲ. ಈಗ ಪತ್ರಿಕೆಗಳಲ್ಲಿ ಪ್ರಕಟವಾಗುವ ವಿಮರ್ಶೆಗಳಂತೂ ಪ್ರಕಾಶಕರನ್ನು ಮತ್ತು ಲೇಖಕರನ್ನು ತಮ್ಮ ಗುರಿಯಾಗಿಟ್ಟುಕೊಂಡಿರುತ್ತವೆ; ಓದುಗರನ್ನಲ್ಲ.

ಇಂತಹ ಸನ್ನಿವೇಶದ ಲಾಭವನ್ನು ಸಕಾರಣವಾಗಿಯೇ ಪ್ರಕಾಶಕರು ಪಡೆಯುತ್ತಾರೆ. ಈವತ್ತಿನ ಬಹುಪಾಲು ಲೇಖಕರಿಗೆ ತಮ್ಮ ಕೃತಿ ಪ್ರಕಟಗೊಂಡು ಓದುಗರನ್ನು ಕಾಲಾಂತರದಲ್ಲಿ ಒಲಿಸಿಕೊಳ್ಳಬೇಕೆಂಬ ಆಸೆಗಿಂತ ಹೆಚ್ಚಾಗಿ, ಪುಸ್ತಕವು ಹೇಗಾದರೂ, ಯಾರಿಂದಲಾದರೂ ಪ್ರಕಟಗೊಂಡು, ಅದರ ಬಗ್ಗೆ ನಾಲ್ಕಾರು ಪತ್ರಿಕೆಗಳಲ್ಲಿ ಮಾಹಿತಿ ಕಾಣಿಸಿಕೊಂಡರೆ ಸಾಕು. ಹಾಗಾಗಿ ಪ್ರಕಾಶಕರು ಲೇಖಕರಿಗೆ ಒಂದಿಷ್ಟು "ಗೌರವ' ಪ್ರತಿ ಕೊಟ್ಟು, ಲೇಖಕರು ಕಾಣಿಸಿಕೊಳ್ಳುವ ಹಾಗೆ ಒಂದು ಸಣ್ಣ ಸಮಾರಂಭ ಮಾಡಿ, ಪತ್ರಿಕೆಗಳಲ್ಲಿ ಒಂದೆರಡು ಸಲ ಪುಸ್ತಕಗಳ ಬಗ್ಗೆ ಬರುವ ಹಾಗೆ ಮಾಡಿ ಪುಸ್ತಕವನ್ನು ಸರ್ಕಾರದ ಯಾವುದಾದರೂ ಯೋಜನೆಯಡಿ ಗ್ರಂಥಾಲಯಗಳಿಗೆ ತಳ್ಳಿ ಬಿಡುತ್ತಾರೆ. ಓದುಗ ಸಮುದಾಯದೊಡನೆ ಒಡನಾಡುವ, ಅವರನ್ನು ಬೆಳೆಸುವ ವಾಂಛೆಯೇ ಅವರಿಗಾಗುವುದಿಲ್ಲ.

ಮೇಲಿನ ಮಾತುಗಳನ್ನು ಓದುತ್ತಿದ್ದಂತೆಯೇ ನಾನು ರಾಜು ಅವರ ಬಗ್ಗೆ ಏನು ಬರೆಯಬಹುದೆಂದು ಯಾರಾದರೂ ಊಹಿಸಬಹುದು. ಅವರ ಚಟುವಟಿಕೆಗಳ ಪಾರದರ್ಶಕತೆ ಅಂತಹುದು.

ರಾಜು ಮತ್ತು ಅವರ ಶ್ರೀಮತಿ ಸರಸ್ವತಿಯವರು ಸಾಕಷ್ಟು ಅನುಕೂಲಸ್ಥ ಹಿನ್ನೆಲೆಯಿಂದ ಬಂದರೂ, ಆ ಹಿನ್ನೆಲೆ ಗೋಚರವಾಗುವ ಹಾಗೆ ಅಥವಾ ಅದರಿಂದ ಪ್ರೇರಣೆ ಪಡೆದವರ ಹಾಗೆ ತಮ್ಮ ಚಟುವಟಿಕೆಗಳನ್ನು ನಡೆಸಲಿಲ್ಲ. ನನಗೆ ತಿಳಿದ ಹಾಗೆಯೆ ಅವರು ಮುದ್ರಕಮಿತ್ರರಾದ ಶ್ರೀ ಮುನಿಧರ್ಮಯ್ಯನವರ ಹತ್ತಿರ ಸಾಲ ನಿಲ್ಲಿಸಿಕೊಳ್ಳುತ್ತಿದ್ದರು. ಬಹುತೇಕ ಪುಸ್ತಕಗಳ ಪ್ರಕಾಶಕರ ಹಿಂದೆ ಅವರ ಸ್ವಂತ ದುಡ್ಡು ಅಥವಾ ಸಮಾನಮನಸ್ಕ ಮಿತ್ರರಿಂದ ತಾತ್ಕಾಲಿಕವಾಗಿ

ಪಡೆದ ನೆರವು ಇರುತ್ತಿತ್ತು. ಈಗ ಗಣ್ಯ ಕವಿಗಳಾಗಿರುವವರ ಕವನ ಸಂಕಲನವೊಂದನ್ನು ಪ್ರಕಟಿಸಲು ಅವರ ಮನೆಯವರ ಖಾಸಗಿ ಒಡವೆಯನ್ನು ಜಿಕರಿ ಮಾಡಿದ್ದರು ಅಥವಾ ಅಡವು ಇಟ್ಟಿದ್ದರು. ಅವರ ಬಂಧುಗಳಲ್ಲೊಬ್ಬರು ಆಗರ್ಭ ಶ್ರೀಮಂತರು. ಅವರಿಗೆ ರಾಜು ಅವರು ಕೆಲಸ ಮಾಡುವ ರೀತಿಯ ಸ್ಥೂಲ ಪರಿಚಯ ಮಾತ್ರವಿತ್ತು. ಅದರ ಮೌಲಿಕತೆಯ ಬಗ್ಗೆಯೂ ಒಂದು ಅಂದಾಜಿತ್ತು. ಆದರೆ ರಾಜು ಅವರ ಚಟುವಟಿಕೆಗಳ ವ್ಯಾಪ್ತಿ ಕೇವಲ ಹತ್ತಾರು ಸಾವಿರ ರೂಪಾಯಿಗಳಲ್ಲೇ ಮುಗಿದು ಹೋಗುತ್ತದೆ ಎಂದಾಗ ಅವರಿಗೆ ಆಶ್ಚರ್ಯವಾಗಿತ್ತು. ಅದಕ್ಕಿಂತಲೂ ಹೆಚ್ಚಾಗಿ ಅಷ್ಟು ಕಡಿಮೆ ಮೊತ್ತದ ಚಟುವಟಿಕೆಗೆ ಅಷ್ಟೊಂದು ಪಡಿಪಾಟಲು ಪಡಬೇಕಾದ ಅವಶ್ಯಕತೆಯಿದೆಯೆ ಎಂಬುದು ಅವರಿಗೆ ಒಗಟಾಗಿತ್ತು. ಇದ್ದಕ್ಕಿದ್ದಂತೆ ಬೃಹತ್ ಹಣವನ್ನು ತೊಡಗಿಸಿ ನೂರಾರು ಪುಸ್ತಕಗಳನ್ನು ರಾತ್ರೋರಾತ್ರಿ ಪ್ರಕಟಿಸುವ ಈವತ್ತಿನ ಪ್ರಕಾಶಕರ ನಡುವೆ ಪುಸ್ತಕ ಪ್ರಕಾಶನವು ನಿಧಾನವಾಗಿ, ಸ್ವಾವಲಂಬಿಯಾಗಿ ಸ್ವಯಂಭೂ ಆಗಿ ಬೆಳೆಯಬೇಕಾದ ಒಂದು ಸಾಂಸ್ಕೃತಿಕ ಉದ್ಯಮ ಎಂಬ ರಾಜು ಅವರ ತಿಳುವಳಿಕೆ ಈಗಲೂ ನನಗೆ ಬಹು ಬೆಲೆಯುಳ್ಳದ್ದಾಗಿ ಕಾಣುತ್ತದೆ.

ರಾಜು ಒಬ್ಬರೆ ಕನ್ನಡದ ಮೌಲಿಕ ಪ್ರಕಾಶಕರು ಎಂಬುದು ನನ್ನ ಮಾತಿನ ಅರ್ಥವಲ್ಲ. ಮನೋಹರ ಗ್ರಂಥಮಾಲಾ, ಅಕ್ಷರ ಪ್ರಕಾಶನ ಇವು ಮಾಡಿರುವ ಕೆಲಸ ಕೂಡ ಮೌಲಿಕವಾದ್ದು. ಆದರೆ ಅವುಗಳ ಹಿಂದೆ ಸ್ಥಾಪಿತ–ಪ್ರತಿಷ್ಠಿತ ಲೇಖಕರ ಒತ್ತಾಸೆಯಿತ್ತು ಎಂಬುದನ್ನು ಮರೆಯಬಾರದು. ಜವಾಬ್ದಾರಿಯನ್ನು ಹೊರುವ ದೃಷ್ಟಿಯಿಂದ ಮಾತ್ರ ರಾಜು ತಮ್ಮ ಹೆಸರನ್ನು ಮುಂದೆ ಮಾಡುತ್ತಿದ್ದರೆ ಹೊರತು, ಉಳಿದಂತೆ ತಮ್ಮ ಸ್ವಭಾವಕ್ಕನುಗುಣವಾಗಿ ಪರಿಚಿತರು, ಮಿತ್ರರನ್ನು ತಮ್ಮ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳುತ್ತಿದ್ದರು. ಎಚ್.ಎಸ್. ರಾಘವೇಂದ್ರರಾವ್, ಮುನಿಧರ್ಮಯ್ಯ, ಡಾ. ವಿಜಯಾ ಇವರ ಹೆಸರುಗಳು ಎಲ್ಲರಿಗೂ ಗೊತ್ತಿರುವಂತದ್ದು. ಆದರೆ ರಾಜು ತಾವು ಕೆಲಸಮಾಡುತ್ತಿದ್ದ ಕಾಲೇಜಿನ ಕನ್ನಡ ವಿಭಾಗದ ಸಹೋದ್ಯೋಗಿಗಳು ಮಾತ್ರವಲ್ಲದೆ, ಕಾಲೇಜಿನ ಆಡಳಿತವರ್ಗ, ಇತರೆ ವಿಭಾಗಗಳ ಸಹೋದ್ಯೋಗಿಗಳ ಒತ್ತಾಸೆ ಒಲವನ್ನು ಕೂಡ ಪಡೆಯುವಲ್ಲಿ ಯಶಸ್ವಿಯಾಗಿದ್ದರು. ಮತ್ತು ಸಮಯ ಸಂದರ್ಭ ಬಂದಾಗಲೆಲ್ಲ ಅವರಿಗೆ ನಾನಾ ರೀತಿ ನೆರವಾದವರನ್ನು ಒತ್ತಾಸೆಯಾಗಿ ನಿಂತವರನ್ನು ಸಾರ್ವಜನಿಕವಾಗಿ ಪ್ರಸ್ತಾಪಿಸುತ್ತಿದ್ದರು, ಗುರುತಿಸುತ್ತಿದ್ದರು. ಅವರಿಂದ ಪ್ರಕಟಣೆಗೊಂಡ ಯಾವುದೇ ಪುಸ್ತಕ ತೆಗೆದು ನೋಡಿದರೂ ಸಲಹೆ–ಸಹಕಾರ ನೀಡಿದವರ ಉದ್ದದ ಪಟ್ಟಿಯೇ ಇರುತ್ತದೆ.

ಲೇಖಕರನ್ನು ಗುರುತಿಸುವಲ್ಲಿ ರಾಜು ಕನ್ನಡದ ಯಾವುದೇ ಪ್ರಕಾಶಕನು ತೋರಿಸದ ಗತಿಶೀಲತೆಯನ್ನು ತೋರಿಸಿದ್ದಾರೆ. ಅವರು ಪ್ರಕಟಿಸಿರುವ ಲೇಖಕರನ್ನು ನೀವು ಯಾವುದೇ ಚಳುವಳಿ, ಪ್ರದೇಶ, ಜಾತಿ, ಸಾಹಿತ್ಯಿಕ ಗುಂಪುಗಳೊಡನೆ ಮಾತ್ರವೇ ಸಮೀಕರಿಸುವುದು ಕಷ್ಟ. ಎಲ್ಲ ಹಿನ್ನೆಲೆಯ ಎಲ್ಲ ಮನೋಧರ್ಮದ, ಕರ್ನಾಟಕದ ಬೇರೆ ಬೇರೆ ಭಾಗಗಳ ಲೇಖಕರನ್ನು ಅವರು ಪ್ರಕಟಿಸಿದ್ದಾರೆ. ಇವರಲ್ಲಿ ಬಹುಪಾಲು ಲೇಖಕರನ್ನು ಅವರಾಗಿಯೇ ಕೇಳಿಕೊಂಡು ಪ್ರಕಟಿಸಿದ್ದಾರೆ. ಹಾಗೆಯೇ ತಮಗೆ ಪರಿಚಯವಿರುವ ಲೇಖಕ ಮಿತ್ರರೂ ಕೂಡ ಪ್ರಕಾಶನದ ನೆರವು ಕೇಳಿದರು ಮಾತ್ರ ಅನ್ನುವ ಕಾರಣಕ್ಕೇ ಅವರನ್ನು ನಿಕೃಷ್ಟರನ್ನಾಗಿ ಕಂಡಿಲ್ಲ. ವೈವಿಧ್ಯ,

ಪ್ರಯೋಗಶೀಲತೆಗೆ ಆಸರೆ, ಹೊಸ ಪ್ರತಿಭೆಯ ಶೋಧನೆ ಇವುಗಳನ್ನೇ ಮಾನದಂಡವಾಗಿಟ್ಟು ಕೊಂಡರೆ ರಾಜು ನಿಸ್ಸಂದೇಹವಾಗಿ ಕಳೆದ ಕಾಲು ಶತಮಾನದ ಪ್ರಕಾಶಕರಲ್ಲಿ ಮುಂಚೂಣಿಯಲ್ಲಿ, ಏಕಾಂಗಿಯಾಗಿ ನಿಲ್ಲುತ್ತಾರೆ.

ರಾಜು ಲೇಖಕರನ್ನು ಬೆಳಕಿಗೆ ತಂದು, ಪ್ರೋತ್ಸಾಹಿಸುತ್ತಿದ್ದ ರೀತಿ ಈವತ್ತಿನ Media Driven ಸಾಂಸ್ಕೃತಿಕ ಲೋಕದ ದಿನಗಳಲ್ಲಿ ಬೇರೊಂದು ರೀತಿಯಲ್ಲಿ ಹೊಳೆಯುತ್ತದೆ. ನನಗೆ ತಿಳಿದ ಹಾಗೆ ಅವರು ಮಾಧ್ಯಮಗಳ ಮೇಲೆ ಅವಲಂಬಿತವಾದವರೇ ಅಲ್ಲ. ಕಣ್ಣು ಕುಕ್ಕುವ ಬಿಡುಗಡೆ ಸಮಾರಂಭವನ್ನೂ ಕೂಡ ಮಾಡಿದವರಲ್ಲ. ಸಮಾರಂಭದ ಅತಿಥಿಗಳು ಕೂಡ ಯಾವತ್ತು ಸಿನಿಮಾನಟರು, ಅಧಿಕಾರಿಗಳು, ಮಂತ್ರಿಗಳು ಇದ್ದಂತಿರಲಿಲ್ಲ. ಆಹ್ವಾನ ಪತ್ರಿಕೆಗಳು ಕೂಡ ಸರಳವಾಗಿರುತ್ತಿದ್ದವು. ಅವರಿಂದ ಪುಸ್ತಕ ಪ್ರಕಟವಾದರೆ ಲೇಖಕನಿಗೆ ಸಾಹಿತ್ಯಾಸಕ್ತರ ನಡುವೆ ಪುಸ್ತಕ ಹಂಚುವ ಗೋಜೇ ಇಲ್ಲ. ತಾವು ಪ್ರಕಟಿಸಿದ ಎಲ್ಲ ಪುಸ್ತಕಗಳನ್ನೂ ಅವರು ಹೆಚ್ಚು ಕಡಿಮೆ ತಮ್ಮ ಎಲ್ಲ ಲೇಖಕರಿಗೆ ತಲುಪಿಸುತ್ತಾರೆ. ಸಾಹಿತ್ಯಲೋಕದ ಪ್ರತಿಷ್ಠಿತರಿಗಂತೂ ಖಂಡಿತ ಕೊಟ್ಟೇ ಕೊಡುತ್ತಾರೆ. ನಂತರ ಪತ್ರಿಕೆಗಳಿಗೆ ರಿವ್ಯೂ, ಗಿವ್ಯೂಗೆ ಇತ್ಯಾದಿ. ಹೀಗಾಗಿ ಸ್ವತಃ ರಾಜುರವರೇ ತಾವು ಪ್ರಕಟಿಸಿದ ಪುಸ್ತಕದ ಬಗ್ಗೆ ಮಾತಾಡದೇ ಹೋದರೂ ಅವರನ್ನು ಮೀರಿ ಆ ಪುಸ್ತಕಗಳ ಬಗ್ಗೆ ಒಂದು ರೀತಿಯ Grapevine ಅಭಿಪ್ರಾಯ ನಿರ್ಮಾಣವಾಗುತ್ತದೆ. ಇದಲ್ಲದೆ ತೀರಾ ಹೊಸಬರ ಪುಸ್ತಕಗಳನ್ನು ಪ್ರಕಟಿಸುವಾಗ ಅದಕ್ಕೆ ಸೂಕ್ತವಾದ ಮುನ್ನುಡಿ, ಹಿನ್ನುಡಿ ಬರೆಯಿಸುವ ಜವಾಬ್ದಾರಿಯನ್ನು ಅವರೇ ಹೊರುತ್ತಾರೆ. ಇದೆಲ್ಲಕ್ಕಿಂತ ಮುಖ್ಯವಾಗಿ ಒಮ್ಮೆ ಒಬ್ಬ ಲೇಖಕನನ್ನು ಪ್ರಕಟಿಸಿದ ಮೇಲೆ, ಮುಂದೆ ಅವನ ಪುಸ್ತಕಗಳನ್ನು ಯಾರೇ ಪ್ರಕಟಿಸಿದರೂ, ಲೇಖಕನನ್ನು ತಮ್ಮ ಲೇಖಕನೆಂದೇ ಭಾವಿಸಿ ಆತನ ಸಾಹಿತ್ಯದ ಜೀವನವನ್ನು ಗಮನಿಸುತ್ತಲೇ ಇರುತ್ತಾರೆ. ನನ್ನ ಬಂಧು ಎಸ್. ವೆಂಕಟೇಶ್ ಅವರ ಅನುಭವ ಕಥನವನ್ನು ಕ್ರೈಸ್ಟ್ ಕಾಲೇಜಿನಿಂದ ಪ್ರಕಟಿಸಿದರು. ಆಮೇಲೆ ವೆಂಕಟೇಶ್ ಇತರ ಪ್ರಕಾಶಕರಿಂದ ಪುಸ್ತಕಗಳನ್ನು ಪ್ರಕಟಿಸಿದಾಗಲೂ ರಾಜು ಪ್ರೋತ್ಸಾಹಿಸಿದ್ದರು. ಈಚಿನ ಪ್ರವಾಸ ಕಥನವೊಂದರ ಬಿಡುಗಡೆಗೆ ವೆಂಕಟೇಶ್ ಅವರಿಗೆ ಪರಿಚಯವಿದ್ದ ಲೇಖಕರನ್ನು, ವಿಮರ್ಶಕರನ್ನು, ಸಾಹಿತ್ಯ ಲೋಕದ ಪ್ರಭೃತಿಗಳನ್ನು ಆಹ್ವಾನಿಸಿದ್ದರೂ ಬಂದಿದ್ದವರು ರಾಜು ಒಬ್ಬರೇ. ಹಾಗಾಗಿ ಸಾಹಿತ್ಯ ಲೋಕದ ಪ್ರತಿಷ್ಠಿತರು ಹೋಗದ ಎಷ್ಟೋ ಸಮಾರಂಭಗಳಲ್ಲಿ ರಾಜು ಹಾಜರಿರುತ್ತಾರೆ. ಮುಖ್ಯವಾದ ಮಾತೆಂದರೆ ಅವರು ಇಂತಹ ಸಂಗತಿಗಳನ್ನೆಲ್ಲ ಘೋಷಿತ ಕಾರ್ಯಕ್ರಮದಂತೆ ಮಾಡುವುದಿಲ್ಲ. ಇದರಲ್ಲೆಲ್ಲ ಒಂದು ಅಂತರಂಗದ ಪ್ರೇರಣೆಯಿದೆ. ಸೋದರ ಭಾವವಿದೆ. ಹಾಗಾಗಿ ಅವರ ಪ್ರೀತಿಯನ್ನು ಪಡೆಯುವವರಿಗೂ ಮುಜುಗರವಾಗುವುದಿಲ್ಲ.

ರಾಜು, ಸಾಹಿತ್ಯ ಪರಿಷತ್, ವಿಶ್ವವಿದ್ಯಾಲಯಗಳಲ್ಲೂ ಕೆಲಸ ಮಾಡಿದವರು. ಸ್ವಲ್ಪಸ್ವಲ್ಪ ಕಾಲ. ಪುಸ್ತಕ ಪ್ರಾಧಿಕಾರದ ನಾಯಕತ್ವಕ್ಕೆ ಅವರು ಅತ್ಯಂತ ಸೂಕ್ತ ವ್ಯಕ್ತಿಯಾದರೂ ರಾಜಕೀಯ ಜಾತಿಯ ಪ್ರಭಾವ ಇಲ್ಲದ್ದರಿಂದ ಅವರಿಗೆ ಆ ಗೌರವ ಸಿಗಲಿಲ್ಲ. ಇದರಿಂದ ನಷ್ಟವೇನೂ ಇಲ್ಲ. ಏಕೆಂದರೆ ನನಗನ್ನಿಸುವ ಹಾಗೆ ರಾಜು ಅಂತವರಿಗೆ ದೊಡ್ಡ ದೊಡ್ಡ ಸರ್ಕಾರಿ ಸಂಸ್ಥೆ ಗಳಿಗಿಂತ ಸಣ್ಣಪುಟ್ಟ ಸಂಘಸಂಸ್ಥೆಗಳೇ ಹೆಚ್ಚು ಸೂಕ್ತ. ಮುಂದೆ ಕೂಡ ಅವರು ಯಾವುದಾದರೂ ಪ್ರಾಧಿಕಾರ ಅಕಾಡೆಮಿ ಗಿಕಾಡೆಮಿಯಲ್ಲಿ ಕೆಲಸ ಮಾಡಿದರೂ ಆ ಯಾವ ಕೆಲಸವೂ ಈಗಾಗಲೇ

ಕ್ರೈಸ್ಟ್ ಕಾಲೇಜ್, ಅಂಕಣ ಪ್ರಕಾಶನಗಳ ಮೂಲಕ ಮಾಡಿರುವ ಕೆಲಸಕ್ಕೆ ಸಮಾನವಾದು ದಾಗಿರುವುದಿಲ್ಲ.

ಹಿರಿಯ ಮಿತ್ರರಾಗಿ ರಾಜು ಅವರಲ್ಲಿ ನನಗಿಷ್ಟವಾದ ಗುಣಗಳೆಂದರೆ ಅವರಲ್ಲಿರುವ ಪ್ರೀತಿ, ತಿಳುವಳಿಕೆ, ಮತ್ತು ಔದಾರ್ಯ. ಸ್ನೇಹಿತರನ್ನು ತಪ್ಪು ತಿಳಿಯುವ ಸಂದರ್ಭ ಬಂದಾಗ ಸ್ನೇಹಿತರಿಗೆ Benefit of Doubt ಕೊಡುತ್ತಾರೆ. ಎನ್‌ಸಾರ್, ಹೀಗೆ ಇಬ್ಬರು ಸ್ನೇಹಿತರ ನಡುವೆ ಈಗ ಭಿನ್ನಾಭಿಪ್ರಾಯ ಬಂದಿದೆಯಂತಲ್ಲ ಅಂತ ನೇರವಾಗಿ ಕೇಳಿದರೆ, ಇಲ್ಲ ಇನ್ನೂ ಕೆಲವು ದಿನದಲ್ಲಿ ಅದು ಸರಿಹೋಗುತ್ತೆ ಎಂದು ಖಚಿತವಾಗಿ ಭವಿಷ್ಯ ಹೇಳುತ್ತಾರೆ. ಅವರ ಪರಿಚಯವಿರುವವರು ಯಾರೇ ಆದರೂ ಸರಿ, ರಾಜು ಅವರ ಪ್ರೀತಿ ಮತ್ತು ಔದಾರ್ಯದ ಬಗ್ಗೆ ತಾವು ಪಡೆದ ಅನುಭವದಿಂದ ಕೆಲವು ನೆನಪುಗಳನ್ನು ಹೇಳಲೇಬೇಕಾಗುತ್ತದೆ. ನಾನು ಕೂಡ ಅದಕ್ಕೆ ಹೊರತಲ್ಲ. ನನ್ನದೊಂದು ಪ್ರಬಂಧ ಸಂಕಲನ (ನಮ್ಮ ಪ್ರೀತಿಯ ಕ್ರಿಕೆಟ್) ಮತ್ತು ಪ್ರವಾಸ ಕಥನ (ಸದ್ದು! ದೇವರು ಸ್ನಾನ ಮಾಡುತ್ತಿದ್ದಾರೆ) ಪ್ರಕಟಿಸುವುದರ ಜೊತೆಗೆ ಓದುಗರ ನಡುವೆ ಅದನ್ನು ಪ್ರತಿಷ್ಠಾಪಿಸುವಲ್ಲಿ ಕೂಡ ನೆರವಾದರು. ಅವರ ಹಿರಿಯ ಮಗ ಸುಗತ ಸಾಹಿತ್ಯಿಕ ಪತ್ರಿಕೆಯೊಂದರ ಸಂಪಾದಕರಾಗಿದ್ದ ಸಂದರ್ಭದಲ್ಲಿ ನನ್ನನ್ನು ಸಾರ್ವಜನಿಕವಾಗಿ ಟೀಕೆ ಮಾಡಿ ಬರೆದಿದ್ದರು. ಆ ಸಂದರ್ಭದಲ್ಲು ರಾಜು ನಮ್ಮ ಮದ್ರಾಸು ಬೆಂಗಳೂರು ಮನೆಗೆ ಬರುತ್ತಿದ್ದರು. ಇದೆಲ್ಲಕ್ಕಿಂತ ಮೇಲಾಗಿ ಅವರಿಗೊಂದು ಅಪಘಾತವಾಗಿ Fracture ಆದ ಸಂದರ್ಭದಲ್ಲಿ ಅವರನ್ನು ಭೇಟಿಯಾಗಿದ್ದಾಗ ಅಪಘಾತಕ್ಕೆ ಕಾರಣನಾಗಿದ್ದ ವ್ಯಕ್ತಿಯ ಬಗ್ಗೆ ಒಂದೇ ಒಂದು ಕಹಿ ಮಾತನಾಡಲಿಲ್ಲ. ಅದರ ಬದಲಾಗಿ ಆತನ ವೈಯಕ್ತಿಕ ಹಿನ್ನೆಲೆ ಬಗ್ಗೆ ಕೆಲವು ಮಾಹಿತಿಗಳನ್ನು ಕೊಟ್ಟರು.

ರಾಜು ಅವರ ಇಡೀ ವ್ಯಕ್ತಿತ್ವವನ್ನು ಒಟ್ಟಾಗಿ ಹಿಡಿಯುವ ಕಲ್ಪನೆ ಯಾವುದು ಎಂದು ನಾನು ಬಹಳ ದಿನಗಳಿಂದ ಹೋಚಿಸುತ್ತಲೇ ಇದ್ದೇನೆ. ಬಹುಶಃ ಅವರಲ್ಲಿರುವ "ತಾಯಿಗುಣ" (Nurturing Instinct) ವೇ ಇತರರನ್ನು ಅವರ ಕಡೆಗೆ ಆಕರ್ಷಿಸುತ್ತದೆ ಎಂದು ಕಾಣುತ್ತದೆ. ಗೆಳೆಯರಾಗಿ, ಪ್ರಕಾಶಕರಾಗಿ, ಲೇಖಕರಾಗಿ ಅವರಲ್ಲಿ ನಮಗೆ ಕಾಣಿಸುವುದು ಪಾಲನಾ ಪ್ರವೃತ್ತಿಯೇ. ನಮ್ಮ ಕಾಲ ಸ್ಪರ್ಧೆಯನ್ನು ಮುಖ್ಯ ಆಶಯವನ್ನಾಗಿ ಒಪ್ಪುತ್ತದೆ. ಮನೆಯಲ್ಲಿ ಸೋದರರ ಜೊತೆ, ಆಫೀಸಿನಲ್ಲಿ ಸಹೋದ್ಯೋಗಿಗಳ ಜೊತೆ, ಸಾಹಿತ್ಯ ಕ್ಷೇತ್ರದಲ್ಲಿ ಜೊತೆ ಬರಹಗಾರರೊಡನೆ ಹೀಗೆ ಎಲ್ಲ ಕಡೆಯೂ ಸ್ಪರ್ಧೆಯ ತುರುಸೇ. ಒಬ್ಬರನ್ನೊಬ್ಬರು ಹತ್ತಿಕ್ಕುವ, ಒಬ್ಬರಿಗಿಂತ ಇನ್ನೊಬ್ಬರು ಮೇಲುಗೈ ಸಾಧಿಸುವ ಪ್ರವೃತ್ತಿಯನ್ನೇ ಮನುಷ್ಯ ಸಹಜ ಸ್ವಭಾವ ಎಂದು ನಮಗೆ ನಾವೇ ಸಮಾಧಾನ ಮಾಡಿಕೊಳ್ಳುತ್ತೇವೆ, ಬೇರೆ. ಹೀಗಾಗಿ ಪ್ರತಿಭೆಯನ್ನು ಗುರುತಿಸುವ, ಪೋಷಿಸುವ, ಅದು ಮಾಗುವುದಕ್ಕಾಗಿ ಕಾಯುವುದು "ತಾಯಿಗುಣ" ವಿರುವವರಿಗೆ ಮಾತ್ರ ಸಾಧ್ಯ. ಕನ್ನಡ ಸಾಹಿತ್ಯ ವಲಯದಲ್ಲಿ ಶ್ರೀನಿವಾಸರಾಜು, ರಾಘವೇಂದ್ರರಾವ್, ಕೆ.ವಿ. ನಾರಾಯಣ್ ಇವರ ಹೆಸರುಗಳನ್ನು ಅವರ ಆತ್ಮೀಯ ಗೆಳೆತನದ ಕಾರಣದಿಂದಾಗಿ ಒಟ್ಟಿಗೇ ಪ್ರಸ್ತಾಪಿಸಲಾಗುತ್ತದೆ. ವ್ಯಕ್ತಿತ್ವದಲ್ಲಿ, ಬರಹದಲ್ಲಿ, ಸ್ವಭಾವದಲ್ಲಿ ಈ ಮೂವರೂ ಭಿನ್ನರು. ಆದರೆ ಈ ಮೂವರಲ್ಲೂ ಇರುವ ಒಂದು ಸಾಮಾನ್ಯ ಗುಣವೆಂದರೆ "ತಾಯಿಗುಣ".

ಇತರರನ್ನು ನಿಷ್ಕಾಮವಾಗಿ ಪಾಲಿಸಿ, ಪೋಷಿಸುವ ಸ್ವಭಾವ. ಈ ತಾಯಿಗುಣವೇ ಈ ಮೂವರ ಸ್ನೇಹಸೇತುವಾಗಿರಬೇಕು.

ಈವತ್ತು ಎರಡು ಪುಸ್ತಕ ಬರೆದವನು, ಮೂರು ಪುಸ್ತಕ ಪ್ರಕಾಶನ ಮಾಡಿದವನು, ನಾಲ್ಕು ಪ್ರಶಸ್ತಿ ಹಂಚಿಕೆಯನ್ನು ನಿರ್ವಹಿಸುವವನು ತನಗೇ ತಾನೇ ಒಂದು ಶಕ್ತಿ ಕೇಂದ್ರವಾಗಿರುತ್ತಾನೆ. ನೂರಾರು ಪುಸ್ತಕಗಳನ್ನು ಪ್ರಕಟಿಸಿರುವ ರಾಜು ಹತ್ತಿರ ಯಾವ ಅಧಿಕಾರವೂ ಇಲ್ಲ, ಪ್ರಭಾವವೂ ಇಲ್ಲ. ಸಾಹಿತ್ಯ ಸಂಸ್ಕೃತಿ ಪ್ರಚಾರದ ಮೂಲಕ ಅವರು ವೈಯಕ್ತಿಕವಾಗಿ ಬಲಗೊಳ್ಳಲು, ಶಕ್ತಿವಂತರಾಗಲು (Empowerment) ಪ್ರಯತ್ನಿಸಲಿಲ್ಲ. ಇದಕ್ಕೆ ರಾಜು ಅವರ ಸ್ವಭಾವದಷ್ಟೇ ಅವರು ಕ್ರಿಯಾಶೀಲರಾಗಿದ್ದ ಕಾಲಾವಧಿಯು ಕಾರಣವಾಗಿರಬೇಕು. ಈವತ್ತಿನ ಸಂಸ್ಕೃತಿ ಚಿಂತನೆಯ ಪ್ರಕಾರ ಮನುಷ್ಯನ ಯಾವುದೇ ಚಿಂತನೆ, ಕ್ರಿಯೆಯಲ್ಲು ಮುಗ್ಧತೆ, ಬೆರಗು, ಸಂತೋಷವಿಲ್ಲ. ಎಲ್ಲದರಲ್ಲು ಒಂದಲ್ಲ ಒಂದು ಇತಿಹಾಸಿಕ ಹುನ್ನಾರವಿದ್ದೇ ಇರುತ್ತದೆ. ಕೇವಲ ಆತ್ಮ ಸಂತೋಷಕ್ಕಾಗಿ, ಕೇವಲ ಸ್ನೇಹಿತರಿಗಾಗಿ, ಒಬ್ಬ ಮನುಷ್ಯ ಕೆಲಸ ಮಾಡುತ್ತಲೇ ಇದ್ದರೆ ಈವತ್ತಿನ ಚಿಂತನೆಯ ಪ್ರಕಾರ ನಾವು ಅದನ್ನು ಹೇಗೆ ವಿವರಿಸಿಕೊಳ್ಳಬೇಕು. ಅಕ್ಷರ ಸಂಸ್ಕೃತಿಗೆ ತೆರೆದುಕೊಳ್ಳುವುದರ ಮೂಲಕವೇ ಸಬಲೀಕರಣಕ್ಕೆ ಒಳಗಾಗುವ Empowerment ಕಲ್ಪನೆಯೇ ಬೇರೆ. ಬರವಣಿಗೆಯ ಮೂಲಕ ನಾವೇ ಒಂದು ಶಕ್ತಿಕೇಂದ್ರವಾಗುತ್ತಾ, ಅಧಿಕಾರದ ಸ್ಥಾನಮಾನ, ರಾಜಾಶ್ರಯಗಳನ್ನು ಹುಡುಕುವ Empowerment ಕಲ್ಪನೆಯನ್ನು ನಾವು ಪ್ರಶ್ನಿಸುತ್ತಿರುವುದು. ರಾಜು ಅಂತವರು ತಾವೇ ಒಂದು ಶಕ್ತಿ ಕೇಂದ್ರವಾಗದೆ ಮೊದಲನೆ ರೀತಿಯ Empowermentಗೆ ಒತ್ತಾಸೆಯಾಗಿ ನಿಂತವರು.

ರಾಜು ಅವರ ಕ್ರಿಯಾಶೀಲತೆ ಸಾಧನಗಳನ್ನು ಮುಂದಿನ ಪೀಳಿಗೆ Role Model ಆಗಿ ಸ್ವೀಕರಿಸಿದೆ. ಅವರ ಕನ್ನಡ ಸಂಘದ ಸ್ಪರ್ಧೆಗಳಲ್ಲಿ ಬಹುಮಾನ ಪಡೆದ ಬರಹಗಾರರಲ್ಲಿ ಬಹುತೇಕರು ರಾಜು ಅವರ ರೀತಿಯಲ್ಲೇ ಇನ್ನು ಆದರ್ಶದ ಹಂಬಲವನ್ನು, ಕನಸುಗಾರಿಕೆಯನ್ನು, ಸಾಹಿತ್ಯ ಮತ್ತು ಜೀವನದ ಬಗ್ಗೆ ಮುಗ್ಧತೆ ಮತ್ತು ಬೆರಗನ್ನು ಉಳಿಸಿಕೊಂಡೇ ಇದ್ದಾರೆ. ಅವರೆಲ್ಲ "ರಾಜುಮೆಷ್ಟ್ರು"ಗಾಗಿಯೇ ಬರೆಯುತ್ತಿರುವಂತಿದೆ. ಕೆಲವರಾದರೂ ತಮ್ಮದೇ ಆದ ರೀತಿಯಲ್ಲಿ ವಿಶಿಷ್ಟರಾಗಲು ಪ್ರಯತ್ನಿಸುತ್ತಿದ್ದಾರೆ. ಮಕ್ಕಳು ತಂದೆಯನ್ನೇ Role Model ಆಗಿ ಒಪ್ಪಿಕೊಳ್ಳುವುದಕ್ಕಿಂತ ಜಗತ್ತಿನಲ್ಲಿ ಇನ್ನೂ ಯಾವ ದೊಡ್ಡ ಪುರಸ್ಕಾರವೂ ಇರಲಾರದು.

❑

# ರಾಜು ಹೀಗೆ ನೆನಪಿನಲ್ಲಿದ್ದಾರೆ

● ಅಮರೇಶ ನುಗಡೋಣಿ

೧೯೮೬ರಲ್ಲಿ ನಾನು ಗುಲಬರ್ಗಾ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಎಂ.ಎ. ಓದಲು ಸೇರಿಕೊಂಡೆ. ತುಂಬ ಅಸಹಾಯಕ ಸ್ಥಿತಿಯಲ್ಲಿದ್ದೆ. ಕನ್ನಡ ಎಂ.ಎ. ಪದವಿಗಾಗಿ ಓದುವುದು ಎಂದರೆ ವಿಪರೀತ ಬೇಸರ ಬರುತ್ತಿತ್ತು. ಇದಕ್ಕಿಂತ ಊರಲ್ಲಿದ್ದು ಹೊಲದ ಕೆಲಸ ಮಾಡಿಕೊಂಡಿದ್ದು ಜೀವಿಸಿದ್ದರೆ ಬೇಸಿತ್ತು ಎಂದು ಅನ್ನಿಸತೊಡಗಿತ್ತು. ಪಾಠ-ಪ್ರವಚನಗಳು ತಲೆಗೆ ಹೋಗುತ್ತಿರಲಿಲ್ಲ. ಸುಮ್ಮನೆ ಕಾಲ ನೂಕುತ್ತಿದ್ದೆ. ಆಗ ಕಥೆಗಾರನಾಗುವ ಯಾವ ಕನಸು ಕಂಡಿರಲಿಲ್ಲ. ಒಂದು ದಿನ ಕನ್ನಡ ವಿಭಾಗದ ಸೂಚನಾ ಫಲಕದಲ್ಲಿ, 'ದ.ರಾ.ಬೇಂದ್ರೆ ಕೃತಿ ಅಂತರ ಕಾಲೇಜು ಕವನ ಸ್ಪರ್ಧೆ-೪' ಎಂಬ ಒಂದು ನೋಟಿಸ್ ಅಂಟಿಸಲಾಗಿತ್ತು. ಅದು ಆಕಸ್ಮಿಕವಾಗಿ ಕಣ್ಣಿಗೆ ಕಂಡಿತು. ಓದಿಕೊಂಡು ಸುಮ್ಮನಾದೆ. ಕವನ ಬರೆಯುವ ಉಮೇದಿ ಹುಟ್ಟಲಿಲ್ಲ. ವಾರ ಕಳೆದ ಮೇಲೆ ಯಾಕೋ ಕವನ ಬರೆಯಬೇಕೆನಿಸಿತು. ಎರಡು ಕವನ ಬರೆದೆ. ಅವೆರಡನ್ನು ತಿದ್ದಿ ತೀಡಿಕೊಂಡು ಸ್ಪರ್ಧೆಗೆ ಕಳಿಸಲು ಯೋಚಿಸಿ ವಿಳಾಸ ಬರೆದುಕೊಳ್ಳಲು ಹೋದೆ. ಅದರೆ ನಿಯಮಗಳಲ್ಲಿ ವಿದ್ಯಾರ್ಥಿಗಳು ತಾವು ಓದುವ ಸಂಸ್ಥೆಯ ಮುಖ್ಯಸ್ಥರಿಂದ, ಇದೇ ಕಾಲೇಜಿನ ವಿದ್ಯಾರ್ಥಿ ಎಂಬ ಪತ್ರ ಇರಬೇಕು ಎಂದಿತ್ತು. ನನಗೆ ನಿರಾಶೆಯಾಯಿತು. ಯಾಕೆಂದರೆ, ಮುಖ್ಯಸ್ಥರನ್ನು ಕೇಳಲು ಹೆದರಿಕೆಯಾಯಿತು. ವಾರದ ಹಿಂದೆ ಜಾನಪದ ವಿದ್ಯಾರ್ಥಿಗಳು ಅದೇ ಮುಖ್ಯಸ್ಥರ ಬಳಿ ಹೋಗಿ, 'ಜಿ.ಎಂ. ಪರಮಶಿವಯ್ಯ ಅವರು ಯಾವುದೋ ಕೆಲಸಕ್ಕೆ ಮೈಸೂರಿನಿಂದ ಗುಲಬರ್ಗಾಕ್ಕೆ ಬಂದಿದ್ದಾರೆ. ಈಗ ಕ್ಯಾಂಪಸ್ಸಿನಲ್ಲಿದ್ದಾರೆ. ವಿಭಾಗಕ್ಕೆ ಕರೆಸಿ, ಗೌರವಿಸಿ, ಒಂದು ಉಪನ್ಯಾಸ ನೀಡಲು ಆಹ್ವಾನಿಸಬೇಕು ಅಂದುಕೊಂಡಿದ್ದೇವೆ. ತಮ್ಮ ಅನುಮತಿ......' ಎಂದು ವಿನಂತಿಸಿಕೊಂಡಿದ್ದರು. 'ಅವರ ಸನ್ಮಾನಕ್ಕ ಒಂದು ಕೌದಿ ತಂದಿದ್ದೀರೇನು?' ಎಂದು ಗದರಿಸಿದ್ದರು. ಈಗ ನಾನು ಪತ್ರ ಕೇಳಲು



ಹೋದರೆ, 'ಬೇಂದ್ರೆ ಮೊಮ್ಮಗ ಆಗ್ವೇಕೇನಲೇ ತಮ್ಮ' ಅಂದು ಬಯ್ಯದೆ ಬಿಡುವುದಿಲ್ಲ ಅನ್ನಿಸಿತು. ಆದರೂ ಎರಡು ದಿನ ಬಿಟ್ಟು ಧೈರ್ಯಮಾಡಿ ಹೋದರೆ, ಅವರು ರಜೆ ಮೇಲಿದ್ದರು. ಪ್ರಭಾರ ಇದ್ದ ಬೇರೆ ಗುರುಗಳಿಂದ ಪತ್ರ ಬರೆಸಿಕೊಂಡೆ. ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರಿಗೆ ಎರಡು ಕವನ ಆ ಪತ್ರ ಸೇರಿಸಿ ಅಂಚೆ ಮೂಲಕ ಕಳಿಸಿದೆ. ಅಕ್ಷರಶಃ ಅದರ ಫಲಿತಾಂಶ ನಿರೀಕ್ಷಿಸದೆ ಮರೆತು ನನ್ನ ಪಾಡಿಗೆ ನಾನಿದ್ದೆ.

ಕೆಲವು ತಿಂಗಳ ಮೇಲೆ ನನ್ನ ಹೆಸರಿಗೆ ಒಂದು ಬಂಡಲ್ಲು ಬಂತು. ಪಾಪ ಅಂಚೆಯಾತ ಹುಡುಕಿಕೊಂಡು ಬಂದು ಕೊಟ್ಟು ಹೋದ. ಬಂಡಲ್ಲನ್ನು ಕುತೂಹಲದಿಂದ ಒಡೆದು ನೋಡಿದರೆ 'ಪ್ರತಿದಿನದ ಸೂರ್ಯ' ಎಂಬ ಚಿಕ್ಕ ಕವನ ಸಂಕಲನದ ೨೫ ಪ್ರತಿಗಳು, ತೆರೆದು ನೋಡಿದರೆ ನನ್ನ ಎರಡು ಕವನಗಳು. ಕವನಗಳನ್ನು ಓದಿ ಪರಿಶೀಲಿಸಿ ಆಯ್ಕೆ ಮಾಡಿದವರು ಡಾ.ಬಿ.ಸಿ. ರಾಮಚಂದ್ರಶರ್ಮ. ಈ ಕವನ ಸಂಕಲನವನ್ನು ಡಾ.ಜಿ.ಎಸ್. ಶಿವರುದ್ರಪ್ಪನವರಿಗೆ ಅರ್ಪಿಸಲಾಗಿತ್ತು. (ಈ ಸಂಕಲನವು ಈ ಹೊತ್ತಿಗೂ ನನ್ನ ಬಳಿ ಇದೆ.) ಈ ಮಹನೀಯರು ಯಾರೆಂದು ಆಗ ನನ್ನ ಅರಿವಿಗೆ ಬಂದಿರಲಿಲ್ಲ. ಈ ಬಂಡಲ್ಲಿನಲ್ಲಿ ಕೆಲವು ಪುಸ್ತಕಗಳೂ ಇದ್ದವು. ಈಗ ನನ್ನ ಬಳಿ ಇರುವ ಆ ಪುಸ್ತಕಗಳಲ್ಲೊಂದು 'ಕನ್ನಡ ಸಾಹಿತ್ಯ ಚರಿತ್ರೆ'. ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್ ಎಂಬ ಇಂಗ್ಲೀಷ್ ಮೊಹರ್ ಮೇಲೆ ಒಂದು ಒನಕೆಬಂಡಿ ಹುಳದ ಥರ ಸಹಿ ಇತ್ತು. ಈ ಸಹಿ ಮಾಡಿದವರು ಯಾರೆಂದು ನನಗೆ ಆಗ ಗೊತ್ತಾಗಿರಲಿಲ್ಲ. ಅದು ಪ್ರೊ. ಚಿ.ಶ್ರೀನಿವಾಸರಾಜು ಅವರ ಸಹಿ ಎಂದು ಏಳೆಂಟು ವರ್ಷಗಳ ಮೇಲೆ ಗೊತ್ತಾಯಿತು. ಈ ಕನ್ನಡ ಸಂಘದ ರೂವಾರಿಗಳೂ ಇವರೇ ಎಂಬುದು ಕೂಡ. ಯಾವಾಗ ಎಂದರೆ ಬಹುಶಃ ೧೯೯೫ ರಲ್ಲಿ. ನಾನು ಉದ್ಯೋಗ ಅರಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಬಂದಿದ್ದೆ. ಶ್ರೀ ಚಿ.ಶ್ರೀನಿವಾಸರಾಜು ಇಲ್ಲಿ ಕೆಲಸ ಮಾಡಲು ಬಂದಿದ್ದರು. ಕವಿ ಎಸ್.ಜಿ. ಸಿದ್ಧರಾಮಯ್ಯ ಅವರ 'ಅವಳೆದೆಯ ಜಂಗಮ' ಪುಸ್ತಕ ಬಿಡುಗಡೆಯನ್ನು ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ಏರ್ಪಡಿಸಿದ್ದರು. ಕನ್ನಡ ಸಂಘ ಪ್ರಕಟಿಸಿದ ಪುಸ್ತಕಗಳಲ್ಲಿ ಅದೂ ಒಂದು. ಅದನ್ನು ಶ್ರೀರಾಜು ಅವರೇ ವ್ಯವಸ್ಥೆ ಮಾಡಿದ್ದರು. ಅಂದು ಡಾ.ಎಚ್.ಎಸ್. ರಾಘವೇಂದ್ರರಾವ್ ಅವರು ನನ್ನನ್ನು ಕರೆದು ಶ್ರೀರಾಜು ಅವರಿಗೆ ಪರಿಚಯಿಸಿದರು. 'ಅಮರೇಶ್ ಕನ್ನಡ ಸಂಘದ ಬಳಗಕ್ಕೆ ಸೇರಿದವರು. ಕವನ ಬರೆದು ಬಹುಮಾನ ಪಡೆದಿದ್ದಾರೆ' ಅಂದರು. ನನಗೆ ಖುಷಿಯಾಯಿತು. ಬಹುಶಃ ನನಗೆ ನೆನಪಿದ್ದಂತೆ, ಅವರನ್ನು ನಾನು ಕಂಡದ್ದು, ಮಾತಾಡಿದ್ದು ಮತ್ತು ಸ್ನೇಹ ಬೆಳೆದದ್ದು ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂದು ಕಾಣುತ್ತದೆ. ಶ್ರೀರಾಜು ಅವರು ಕನ್ನಡ ಸಂಘ, ಅದರ ಪುಸ್ತಕ ಚಟುವಟಿಕೆಗಳನ್ನು ಒಂದು ವ್ರತದಂತೆ ನಡೆಸಿಕೊಂಡು ಹೋಗುತ್ತಿದ್ದುದ್ದನ್ನು ಅಂದಿನ ಪುಸ್ತಕಗಳ ಬಿಡುಗಡೆಯ ಸಮಾರಂಭದ ಸಮಯದಲ್ಲಿ ಕಂಡೆನು.

ಶ್ರೀ ಚಿ.ಶ್ರೀನಿವಾಸರಾಜು ಕನ್ನಡ ವಿಶ್ವವಿದ್ಯಾಲಯದಲ್ಲಿ ಪ್ರಸಾರಾಂಗದ ನಿರ್ದೇಶಕರಾಗಿದ್ದರು. ನಾನು ಅಲ್ಲಿ ಡಾ.ಎಚ್.ಎಸ್. ರಾಘವೇಂದ್ರರಾವ್ ಅವರ ಬಳಿ ಸಹಾಯ ಸಂಶೋಧಕನಾಗಿದ್ದೆ. ಶ್ರೀರಾಜು ಡಾ. ಎಚ್.ಎಸ್.ಆರ್. ಅವರ ಮನೆಯಲ್ಲೇ ವಾಸವಾಗಿದ್ದರು. ಒಂದು ದಿನ ಡಾ.ಎಚ್.ಎಸ್.ಆರ್. ಅವರು ನನ್ನನ್ನು ತಮ್ಮ ಮನೆಗೆ ಕರೆದುಕೊಂಡು ಹೋದರು. 'ರಾಜು, ಅಮರೇಶರ ಎರಡನೆ ಕಥಾಸಂಕಲನವನ್ನು ಕನ್ನಡ ಸಂಘದಿಂದ ನೀವು ಪ್ರಕಟಿಸಬೇಕು'

ಎಂದರು. 'ಆಯ್ತು' ಅಂದರು. ಸದ್ದುಗದ್ದಲವಿಲ್ಲದೆ ನನ್ನ 'ತಮಂಧದ ಕೇಡು' ಕನ್ನಡ ಸಂಘದಿಂದ ಪ್ರಕಟಿಸಿದರು. ಅದರ ಬಿಡುಗಡೆ ಸಮಾರಂಭಕ್ಕೆ ನಾನು ಬೆಂಗಳೂರಿಗೆ ಹೋಗಲಿಲ್ಲ. ಅಷ್ಟು ಹೊತ್ತಿಗೆ ಶ್ರೀ ರಾಜು ಕನ್ನಡ ವಿಶ್ವವಿದ್ಯಾಲಯದಿಂದ ಕ್ರೈಸ್ತ ಕಾಲೇಜಿಗೆ ಮರಳಿ ಹೋಗಿದ್ದರು. ಗೆಳೆಯರ ಮೂಲಕ ಲೇಖಕರ ಗೌರವ ಪ್ರತಿಗಳು ಎಂದು ನನಗೆ ನನ್ನ ಕಥಾಸಂಕಲನಗಳನ್ನು ಕಳಿಸಿದರು. ನಮಗೆ ಬೇಕಾದವರಿಗೆ ಗೌರವ ಪ್ರತಿ ಕೊಡುವ 'ಸತ್ ಸಂಪ್ರದಾಯ'ವನ್ನು ನಾನೂ ಪಾಲಿಸಿದ್ದರಿಂದ ಮೂರೇ ದಿನಗಳಲ್ಲಿ ನನ್ನ ಕಥಾಸಂಕಲನದ ಪ್ರತಿಗಳು ಮುಗಿದು ಹೋದವು. ಆದರೆ ಗೌರವ ಪ್ರತಿ ಕೊಡಬೇಕೆಂದುಕೊಂಡವರ ಪಟ್ಟಿ ದೊಡ್ಡದಿತ್ತು. ಸುಮ್ಮನಾಗಿ ಬಿಟ್ಟೆ. ನಂತರ ಆಗಾಗ ಕೆಲವರು 'ನಿಮ್ಮ ಕಥಾಸಂಕಲನವನ್ನು ಓದಿದೆವು' ಅಂತ ಹೇಳುತ್ತಿದ್ದರು. ನಾನು ಆ ಮಹನಿಯರಿಗೆ ಗೌರವ ಪ್ರತಿ ಕೊಡಬೇಕಾಗಿತ್ತು. ಅಳುಕಿನಿಂದಲೆ, 'ಪುಸ್ತಕ ಎಲ್ಲಿ ಸಿಕ್ಕಿತು?' ಅಂತ ಕೇಳಿದರೆ, 'ರಾಜು ಕೊಟ್ಟಿದ್ದರು' ಅಂತ ಹೇಳುತ್ತಿದ್ದರು. ಕನ್ನಡ ಸಂಘದಿಂದ ಪ್ರಕಟವಾದ ಪುಸ್ತಕಗಳು ಅನೇಕ ಬರಹಗಾರರಿಗೆ ಉಚಿತವಾಗಿ ರಾಜು ಕೊಡುತ್ತಿದ್ದರು ಎಂದು ಗೊತ್ತಾಯಿತು. ಒಮ್ಮೆ ನಾನು ಬೆಂಗಳೂರಿಗೆ ಹೋದಾಗ ಅವರ ಕಾಲೇಜಿಗೆ ಹೋದೆ. ಅವರನ್ನು ಕಂಡು ಮಾತಾಡಿದಾಗಲೇ ನನಗೆ ಕನ್ನಡ ಮಾತು ಕೇಳಿದ್ದು, ಗೆಳೆಯರಿಗೆ ಪರಿಚಯಿಸಿದರು. ಚಹ ಕುಡಿಸಿದರು. ಪ್ರಕಟಣೆಗಳ ಒಂದೊಂದು ಪ್ರತಿಯನ್ನು ಕೊಟ್ಟರು. 'ಸರ್, ನನ್ನ ಸಂಕಲನವೇ ನನ್ನ ಬಳಿ ಇಲ್ಲ' ಅಂದೆ. ಅವರು ತಕ್ಷಣವೇ ಒಂದು ಬಂಡಲ್ ಕೊಟ್ಟರು. ನಾನು ಸೌಜನ್ಯಕ್ಕೆ 'ಇವುಗಳಿಗೆ ಒಂದಷ್ಟು ಹಣ ಕೊಡ್ತೀನಿ' ಅಂದೆ. 'ನೀವು ಕೊಟ್ಟರೆ ಅದು ಕನ್ನಡ ಸಂಘಕ್ಕೆ ಉಪಯೋಗವಾಗುತ್ತದೆ' ಅಂದರು ನಗುತ್ತ. ನಾನು ಬೇಗ ಹಣ ಕಳಿಸಲಿಲ್ಲ. ಅವರೂ ಕೇಳಲಿಲ್ಲ. ಒಂದು ದಿನ ನನಗೆ ಫೋನ್ ಮಾಡಿ, "ನಮ್ಮ ವಿದ್ಯಾರ್ಥಿಗಳಿಗೆ ಕೊಡಲು 'ನಮ್ಮ ಕನ್ನಡ ಕಾವ್ಯ' ಬೇಕು. ನಾನು ಹಣ ಕಳಿಸ್ತೀನಿ. ಪುಸ್ತಕವನ್ನು ಕೊಂಡು ಕಳಿಸಿರಿ" ಅಂದರು. ನಾನು ಅವರ ಋಣ ತೀರಿಸಬೇಕಾಗಿತ್ತು. "ಹಣ ಬೇಡ ಸರ್, ನಾನೇ ಕೊಂಡು ನಿಮಗೆ ಕಳಿಸುತ್ತೇನೆ" ಅಂದು ಕಳಿಸಿದೆ.

ಕನ್ನಡ ವಿಶ್ವವಿದ್ಯಾಲಯದಲ್ಲಿ ಶ್ರೀ ರಾಜು ಅವರು ಪ್ರಸಾರಾಂಗದ ನಿರ್ದೇಶಕರಾಗಿದ್ದರಷ್ಟೆ. ಅವರು ಕನ್ನಡ ಪುಸ್ತಕಗಳನ್ನು ಸುಂದರವಾಗಿ ಪ್ರಕಟಿಸಲು ಚಿಂತಿಸುತ್ತಿದ್ದರು. ಹಂಪೆ ಗದಗಿಗೆ ಸಮೀಪವಿತ್ತು. ಗದಗು ಕೂಡಾ ಪ್ರಕಟಣೆಗೆ ಹೆಸರಾಗಿದೆ. ನನ್ನನ್ನು ಒಂದು ಸಲ ಮಾಹಿತಿ ಕೇಳಿದರು. ನನಗೆ ಗದಗಿನ ತ್ವರಿತ ಮುದ್ರಣಾಲಯದಲ್ಲಿ ಹೆಸರು ಗೊತ್ತಿತ್ತು. ಹೇಳಿ, 'ಸರ್, ಪುಸ್ತಕ ಪ್ರಕಟಣೆಯ ಕುರಿತು ನನಗೆ ಹೆಚ್ಚಿನ ಅರಿವಿಲ್ಲ' ಎಂದು ಹೇಳಿದೆ. ಶ್ರೀ ರಾಜು ಅವರು ನಾಲ್ಕಾರು ಮುದ್ರಣಾಲಯದಿಂದ ಮುದ್ರಣದ ವೆಚ್ಚಗಳನ್ನು ಸಂಗ್ರಹಿಸಿಕೊಂಡಿದ್ದರು. ಅದರ ಬಗ್ಗೆ ತಲೆಬಿಸಿ ಮಾಡಿಕೊಂಡಿದ್ದಾರೆಂದು ಅನ್ನಿಸಿತು. ಕನ್ನಡ ಸಂಘದಿಂದ ಪುಸ್ತಕಗಳನ್ನು ಪ್ರಕಟಿಸಿರುವ ಇವರಿಗೆ ಇಲ್ಲಿ ಯಾಕೆ ಕಷ್ಟವಾಗುತ್ತಿದೆ? ಅಂತ ಮಾತ್ರ ನನಗೆ ಅನ್ನಿಸಿತು ಅಷ್ಟೆ. ಮುಂದೆ ಶ್ರೀ ರಾಜು ಅವರು ಡಾ. ಚಂದ್ರಶೇಖರ ಕಂಬಾರ ಅವರ ಆಡಳಿತದ ವೈಖರಿಗೆ ಒಗ್ಗಿಕೊಳ್ಳುವುದು ಆಗಲಿಲ್ಲವೆಂದು ಕಾಣುತ್ತದೆ. ಮಾತೃ ಸಂಸ್ಥೆಗೆ ಮರಳಿ ತಣ್ಣಗೆ ಹೋಗಿ ಸೇರಿಕೊಂಡರು.

ಶ್ರೀ ಚಿ. ಶ್ರೀನಿವಾಸರಾಜು ಇರುವಾಗ ಕನ್ನಡ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಪದವಿಗಾಗಿ ಅಧ್ಯಯನ ಮಾಡುವ ಅಭ್ಯರ್ಥಿಗಳಿಗೆ ಒಂದು ಸಂಶೋಧನ ಕಮ್ಮಟ ನಡೆಯಿತು. ನಾನೂ ಅಭ್ಯರ್ಥಿಯಾಗಿದ್ದೆ. ಸಂಶೋಧನೆ ಅಂದರೇನು, ಅದರ ಸ್ವರೂಪ, ತಾತ್ವಿಕತೆ ಕುರಿತು ಒಂದು ವಾರ ಕಮ್ಮಟ ನಡೆಯಿತು. ಭಾಗವಹಿಸಿದ್ದ ನನಗೆ ಸಂಶೋಧನೆ ಮಾಡುವುದಕ್ಕಿಂತ ಕಥೆ ಬರೆಯುವುದೇ ಮೇಲು ಅಂದುಕೊಂಡು ವಿದ್ವಾಂಸರು ಹೇಳಿದ್ದನ್ನು ಕೇಳಿಸಿಕೊಂಡೆ. ಹಾಗೇ ಒಂದು ಅಡ್ಡ ಯೋಚನೆ ಬಂತು. 'ಕಥೆ, ಕಾದಂಬರಿ, ನಾಟಕ, ಕಾವ್ಯಗಳನ್ನು ಕುರಿತು ಅಧ್ಯಯನ ಮಾಡಿ, ಅದರ ಮೇಲೆ ವಿಮರ್ಶೆ ಬರೆದು ಪದವಿ ಪಡೆಯುವುದಕ್ಕಿಂತ, ೧೦ ಅಥವಾ ೧೨ ಒಳ್ಳೆಯ ಕಥೆಗಳನ್ನು ಬರೆದುಕೊಡುತ್ತೇನೆ. ಅದಕ್ಕೆ ಪಿಎಚ್.ಡಿ. ಪದವಿ ಕೊಡಿ' ಎಂದು ಕೇಳಿಬಿಟ್ಟೆ. ಕೆಲವರು ನಕ್ಕರು. ಕೆಲವರು ಯು.ಜಿ.ಸಿ. ನಿಯಮದ ಪ್ರಕಾರ ಅದಕ್ಕೆ ಪದವಿ ಕೊಡಲು ಬರುವುದಿಲ್ಲ ಅಂದರು. ಆದರೂ ನನ್ನ ಬುದ್ಧಿಗೇಡಿ ಅಭಿಪ್ರಾಯವೂ ಒಂದೆರಡು ಸಲ ಚರ್ಚೆಗೂ ಬಂತು. ಶ್ರೀ ಶ್ರೀನಿವಾಸರಾಜು, 'ಅಮರೇಶ್', ನೀವು ಕೇಳಿದ್ದು ತಪ್ಪು ಅಲ್ಲ. ನಿಯಮಗಳಲ್ಲಿ ಸೃಜನಶೀಲ ಸಾಹಿತ್ಯ ಪ್ರಕಾರಗಳಿಗೆ ನೇರವಾಗಿ ಪಿಎಚ್.ಡಿ. ಪದವಿ ಕೊಡಲು ಅವಕಾಶವಿಲ್ಲ. ರಚನೆಯಾದ ಸೃಜನಶೀಲ ಸಾಹಿತ್ಯವನ್ನು ಕುರಿತು ಅಧ್ಯಯನ ಮಾಡಿದರೆ ಮಾತ್ರ ಪದವಿ ಸಿಗುತ್ತದೆ. ಇನ್ನೊಂದು ಡಿ.ಲಿಟ್. ಪದವಿ ಇದೆ. ಅದು ಸ್ವಲ್ಪ ಬೇರೆ ರೀತಿಯದ್ದು. ಅದನ್ನು ನೀವು ಮಾಡಬಹುದು' ಅಂತ ಒಮ್ಮೆ ಹೇಳಿದರು.

ಇಂಥ ಕೆಲವು ನೆನಪುಗಳಲ್ಲಿ ರಾಜು ಇದ್ದಾರೆ. ಬೆಂಗಳೂರಿಗೆ ಹೋದಾಗ ಅವರು ನೆನಪಾಗುತ್ತಾರೆ. ಅವರ ಮನೆಗೆ ಒಬ್ಬನೇ ಹೋಗಲು ಪ್ರಯತ್ನಿಸಿ ಸಿಗದೇ ಮರಳಿದ್ದೇನೆ. ರಾಜು ನೆನಪಾಗುವುದು ಕಡಿಮೆ. ನೆನಪಾದರೆ ಮಾತ್ರ ಬಿಳಿಯ ಅರ್ಧ ತೋಳಿನ ಜುಬ್ಬ ತೊಟ್ಟು, ಅಗಲವಾದ ಮುಖದಲ್ಲಿ ಪ್ರೀತಿಯ ನಗು ನಗುತ್ತಿರುವ ರಾಜು ಕಾಣಿಸುತ್ತಾರೆ.

❑

## ನಮ್ಮ ಕಪಾಟುಗಳು ತುಂಬಲಿ

● *ಅಲಕ ತೀರ್ಥಹಳ್ಳಿ*

ನನಗೆ ಆಗ ಹದಿನೇಳು ವರ್ಷ ವಯಸ್ಸು–ಎಂಇಎಸ್‌ನಲ್ಲಿ ಓದುತ್ತಿದ್ದೆ. ಅದ್ಯಾರೊ ಪುಣ್ಯಾತ್ಮರು ನಾವು ಬಾಡಿಗೆಗೆ ಇದ್ದ ಬೀದಿಯ ಇನ್ನೊಂದು ತುದಿಯಲ್ಲಿದ್ದ ಶ್ರೀನಿವಾಸರಾಜು ಅವರ ಮನೆಗೆ ಕರೆದು ಕೊಂಡು ಹೋಗಿದ್ದರು. ಅವರು ನನ್ನನ್ನು ಪರಿಚಯಿಸುತ್ತಿದ್ದಂತೆಯೇ ರಾಜು ಅವರು ಹೇಳಿದರು: 'ಓಹ್! ಇವರನ್ನಷ್ಟೇ ಯಾಕೆ, ಇವರ ಅಪ್ಪನ ಪರಿಚಯವೂ ನನಗೆ ಇದೆ!' ನನಗೊಮ್ಮೆ ಆಶ್ಚರ್ಯ– ಅರೆ!ಸಾಗರದ ಸಮೀಪದ ಕುಗ್ರಾಮವೊಂದರಲ್ಲಿ ವಾಸವಾಗಿರುವ ರೈತಾಪಿ ಅಪ್ಪಯ್ಯನ ಪರಿಚಯವೇ ಬೆಂಗಳೂರಿನ ಈ ಪ್ರೊಫೆಸರ್ ಅವರಿಗೆ! ಅಷ್ಟರಲ್ಲಿ ಅವರೇ ಮುಂದುವರಿಸಿದರು: 'ಏನ್ ಯೋಚ್ನೆ ಮಾಡ್ತಿದ್ದೀರಿ? ನಿಮ್ಮ ಕವನ....' (ಅಂತರ ಕಾಲೇಜು ವಿದ್ಯಾರ್ಥಿ ಕವಿ ಸಮ್ಮೇಳನವೊಂದರಲ್ಲಿ ನಾನು ಓದಿದ 'ಅಪ್ಪ ಮುದುಕ ನಾಗುತ್ತಿದ್ದಾನೆ' ಎಂಬ ಕವನವನ್ನು ಬಹುಮಾನಕ್ಕೆ ಆಯ್ಕೆಮಾಡಿದವ ರಲ್ಲಿ ಒಬ್ಬರು ಕ.ವೆಂ. ಆಗಿದ್ದರೆ ಇನ್ನೊಬ್ಬರು ಇವರೆ ಅಂತೆ!) ಅವತ್ತು ತಮ್ಮ ಎದುರು ನನ್ನನ್ನು ಕೂರಿಸಿಕೊಂಡು, ವಾಣಿಜ್ಯದ ವಿದ್ಯಾರ್ಥಿಯಾದ ನನಗೆ ಸಾಹಿತ್ಯದ ಓನಾಮಗಳನ್ನು ಬರೆಸಿದವರು ಶ್ರೀನಿವಾಸರಾಜು ಅವರು! ಅಷ್ಟರ ನಂತರ ಎಷ್ಟು ಬಾರಿ ಅವರ ಮನೆಗೆ ಹೋದೆನೊ, ಅವರಿಂದ ಏನೆಲ್ಲವನ್ನು ಪಡೆದುಕೊಂಡೆನೋ ಹೇಳಲಾರೆ. ಪ್ರತಿ ಬಾರಿಯೂ ನನ್ನ ತಲೆಯ ತುಂಬ ಹೊಸ ವಿಚಾರಗಳು– ಕೈತುಂಬ ಪುಸ್ತಕಗಳು!



ನಾನು ಪಿಯುಸಿ ಮುಗಿಸುತ್ತಿದ್ದಂತೆ ನನ್ನನ್ನು ಬಸವನಗುಡಿಯ ನ್ಯಾಷನಲ್ ಕಾಲೇಜಿಗೆ ಸೇರಿಕೊಂಡು ಇಂಗ್ಲಿಷನ್ನು ಐಚ್ಛಿಕ ವಿಷಯ ವಾಗಿ ಓದಲು ಅವರು ಪ್ರೇರೇಪಿಸಿದಾಗ ನಾನು ಕೇಳಿದೆ: 'ಇದೇನು ಸಾರ್, ನೀವು ಕನ್ನಡದವರಾಗಿ ನನಗೆ ಇಂಗ್ಲಿಷ್ ಸಾಹಿತ್ಯ ಓದಲು ಹೇಳುತ್ತಿದ್ದೀರಿ?' ಆಗ ಅವರು, ವಿದ್ಯಾರ್ಥಿಗೆ ಪಾಠ ಹೇಳುವ

ಧಾಟಿಯಲ್ಲಿಯೇ ಉತ್ತರಿಸಿದರು. 'ಒಂದು, ಕನ್ನಡ ನಮ್ಮ ಮಾತೃ ಭಾಷೆ; ಅದನ್ನು ಸ್ವಲ್ಪ ಪರಿಶ್ರಮದಲ್ಲಿ ಓದಿಕೊಳ್ಳಬಹುದು. ಇಂಗ್ಲಿಷ್ ಹಾಗಲ್ಲ; ಇನ್ನು ನ್ಯಾಷನಲ್ ಕಾಲೇಜಿನಲ್ಲಿ ಎಂತೆಂಥ ಮೇಷ್ಟರಿದ್ದಾರೆ-ಕೆ.ಡಿ.ಎನ್. ಜಿ.ಆರ್., ಹೆಚ್ಕೆಆರ್....' ಹೌದು. ರಾಜು ಅವರು ಹೇಳಿದ್ದು ಅಕ್ಷರಶಃ ಸತ್ಯವಾಗಿತ್ತು. ಅಲ್ಲಿ ಇಂಗ್ಲಿಷ್ ವಿಭಾಗವಷ್ಟೇ ಅಲ್ಲ- ಸಂಸ್ಕೃತ ಹಾಗೂ ಕನ್ನಡ ವಿಭಾಗದ ಒಬ್ಬೊಬ್ಬರೂ ಸಾಹಿತ್ಯ ಪ್ರಿಯರಾಗಿದ್ದರು. ಅಲ್ಲಂತೂ ನಾನು ಕತೆ-ಕವನ-ನಾಟಕ-ಚಿತ್ರಕಲೆ ಎಂದೆಲ್ಲ ಹವ್ಯಾಸಗಳನ್ನೂ ಹಚ್ಚಿಕೊಂಡುಬಿಟ್ಟಿದ್ದೆ. ಅವೆಲ್ಲದರ ಹಿಂದೆ ಶ್ರೀನಿವಾಸರಾಜು ಅವರು ಇದ್ದೇ ಇರುತ್ತಿದ್ದರು. ತಮ್ಮಲ್ಲಿದ್ದ ಉತ್ತಮ ಪುಸ್ತಕಗಳನ್ನು ಕೊಟ್ಟು ಓದಲು ಪ್ರೇರೇಪಿಸುತ್ತಿದ್ದರು. ಬರೀ ಸಾಹಿತ್ಯವಷ್ಟೇ ಏಕೆ ವಿಶ್ವದ ಪ್ರಸಿದ್ಧ ಚಿತ್ರಗಳನ್ನು-ಕಲಾವಿದರನ್ನು ಪರಿಚಯಿಸುವ ಬೆಲೆಬಾಳುವ ಪುಸ್ತಕಗಳನ್ನು ಮನೆಗೇ ಕೊಟ್ಟು ಕಳಿಸುತ್ತಿದ್ದರು. ಏನನ್ನಾದರೂ ಬರೆಯುವಂತೆ ಪ್ರೇರೇಪಿಸಿ, ನಂತರ ಕೈಹಿಡಿದು ತಿದ್ದಿ ತೀಡಿಸುತ್ತಿದ್ದರು. ಆಮೇಲೆ ನಾನು ಸಾಹಿತ್ಯ ಸ್ಪರ್ಧೆಗಳಲ್ಲಿ ಗೆದ್ದ ಬಗ್ಗೆ ತಿಳಿಸಿದಾಗಲಂತೂ ನನಗಿಂತಲೂ ಸಂತೋಷಪಡುತ್ತಿದ್ದವರು ಅವರೆ! ಮಕ್ಕಳ ಉತ್ತಮ ಅಂಕಪಟ್ಟಿಯನ್ನು ನೋಡಿ ಆನಂದಿಸುವ ಅಮ್ಮಂದಿರಂತೆ!

ನಾನು ಇಂಗ್ಲಿಷ್ ಎಂ.ಎ. ಮುಗಿಸಿ, ಬೆಂಗಳೂರಿನ ಕಾಲೇಜೊಂದರಲ್ಲಿ ಉಪನ್ಯಾಸಕನಾಗಿ ಕೆಲಸಕ್ಕೆ ಸೇರಿಕೊಂಡೆ. ಎಂದಿನಂತೆ ಈ ಸುದ್ದಿಯನ್ನು ಹೊತ್ತು ಶ್ರೀನಿವಾಸರಾಜು ಅವರಲ್ಲಿಗೆ ಓಡಿದೆ. ಅವತ್ತು ರಾಜು ದಂಪತಿಗಳು ಪಟ್ಟ ಸಂತೋಷವನ್ನು ನಾನೆಂದೂ ಮರೆಯಲಾರೆ-ಪ್ರಾಯಶಃ ಅವರ ಮನೆಯ ಮುಂದಿರುವ ತೆಂಗಿನ ಗಿಡದ ಮೊದಲ ಹಿಂಗಾರವನ್ನು ನೋಡಿದಾಗಲೂ ಅವರು ಅಷ್ಟೊಂದು ಸಂಭ್ರಮ ಪಟ್ಟಿದ್ದಾರೊ ಇಲ್ಲವೊ!

ನಾನು ಮುಂದುವರಿಸಿಕೊಂಡುಬಂದ ಕತೆ-ಕವನ-ನಾಟಕಗಳಲ್ಲಿ ರಾಜು ಅವರ ಪರಿಶ್ರಮವಿದೆ. ಅವರಿಗೆ ಮೊದಲು ತೋರಿಸದೆ ಅಥವಾ ಆ ಬಗ್ಗೆ ಒಂದೆರಡಾದರೂ ವಿಷಯವನ್ನು ಚರ್ಚಿಸದೆ ಅವುಗಳನ್ನು ನಾನು ಹೊರಹಾಕುವುದು ಸಾಧ್ಯವೇ ಆಗುತ್ತಿಲ್ಲ. ಈಗ್ಗೆ ೫-೬ ವರ್ಷಗಳ ಹಿಂದೆ. ನಾನು ಬಾನುಲಿ ನಾಟಕವೊಂದನ್ನು ಬರೆದು, ಅದರ ಕರಡು ಪ್ರತಿಯನ್ನು ರಾಜು ಅವರಿಗೆ ಕಳಿಸಿಕೊಟ್ಟಿದ್ದೆ. ಕೆಲವೇ ದಿನಗಳಲ್ಲಿ ಬಂತು ನೋಡಿ-ನಾಟಕದ ಹೆಸರಿನಿಂದ ಮೊದಲುಗೊಂಡು, ಪ್ರತಿ ದೃಶ್ಯವನ್ನು ಕುರಿತೂ ಅವರು ಮಾಡಿದ ಸುಮಾರು ೧೦-೧೫ ಪುಟಗಳ ವಿಶೇಷ ಟಿಪ್ಪಣಿ! (ಕೊನೆಗೆ ಆ ನಾಟಕವು ರಾಷ್ಟ್ರೀಯ ನಾಟಕವಾಗಿ ಪುರಸ್ಕೃತವಾಯಿತು) ಹಾಗೆಂದು ಅವರು ಎಂದೂ ನನ್ನ ಸೃಜನಶೀಲತೆಗೆ ಚ್ಯುತಿ ತಂದವರಲ್ಲ; ತಮ್ಮ ಅಭಿಪ್ರಾಯವನ್ನು ಹೇರಿದವರಲ್ಲ, 'ಹೀಗೂ ಒಮ್ಮೆ ಯೋಚಿಸಿ ನೋಡಿ' ಎನ್ನುತ್ತಿದ್ದವರು. ಅದರಿಂದ ಬರವಣಿಗೆಗೆ ಹಲವು ಆಯಾಮಗಳು ಪ್ರಾಪ್ತವಾಗುವ ಬಗೆಯನ್ನು ವಿವರಿಸುತ್ತಿದ್ದವರು. ಈ ಮೂವತ್ತಕ್ಕೂ ಹೆಚ್ಚು ವರ್ಷಗಳ ನಮ್ಮ ಗುರು-ಶಿಷ್ಯರ ಸಂಬಂಧ ತಾಯಿ-ಮಗುವಿನ ಸಂಬಂಧದಂತೆ ಯಾವ ಅಬ್ಬರವಿಲ್ಲದೆ ಸಾಗಿಬಂದಿದೆ. ನಾನು ಅವರಿಂದ ಪಡೆದುಕೊಂಡ ಪುಸ್ತಕಗಳು, ಕಲಿತುಕೊಂಡ ವಿಷಯಗಳಿಗೆ ಲೆಕ್ಕವೇ ಇಲ್ಲ. ಆದರೆ ನಾನು ಮಾತ್ರ ಅವರಿಗೆ ಏನನ್ನೂ ಕೊಟ್ಟವನಲ್ಲ; ೧೯೭೭ರಲ್ಲಿ ಅವರು ಪ್ರಕಟಿಸಿ, ಪ್ರೀತಿಯಿಂದ ತಮ್ಮ ಹಸ್ತಾಕ್ಷರದೊಂದಿಗೆ ನನಗೆ ಕೊಟ್ಟಿದ್ದ 'ಐದು ಮೂಕ ನಾಟಕಗಳು' ಪುಸ್ತಕ ಇಂದಿಗೂ

ನನ್ನ ಹತ್ತಿರವಿದೆ: ಆದರೆ ಇತ್ತೀಚೆಗೆ ನನ್ನ ಕಥಾಸಂಕಲನದ ಬಿಡುಗಡೆಯ ಸಂಭ್ರಮವನ್ನು ಹಂಚಿಕೊಳ್ಳಲು ನನಗಿಂತಲೂ ಮೊದಲು ಬಂದು ಸಭೆಯ ಹಿಂಬದಿಯಲ್ಲಿ ಅವರು ಕುಳಿತು ಕೊಂಡಿದ್ದರು! (ಅವರು ಎಂದೂ ಮುಂದಿನ ಸಾಲಿನಲ್ಲಿ ಕೂರುವವರಲ್ಲ!) ಕಾರ್ಯಕ್ರಮಗಳೆಲ್ಲವೂ ಮುಗಿದು, ನಾನು ಊರಿಗೆ ಬಂದಾಗ ಇದ್ದಕ್ಕಿದ್ದಂತೆ ನೆನಪಿಸಿಕೊಂಡೆ-ಅರೆ! ರಾಜು ಅವರಿಗೆ ಪ್ರೀತಿಯ ಕಾಣಿಕೆಯಾಗಿ ನನ್ನ ಒಂದು ಪುಸ್ತಕವನ್ನು ಕೊಡಬೇಕಿತ್ತಲ್ಲವೆ?...... ಇಲ್ಲ. ಅದೇಕೊ ಅವರು ನನ್ನಿಂದ ಹಾಗೆ ಪುಸ್ತಕವನ್ನು ಪಡೆಯಬೇಕಾದಂಥವರು ಎಂದು ಅನ್ನಿಸಲೇ ಇಲ್ಲ!

ನಾನು ಅವರ ಮನೆಗೆ ಹೋದಾಗಲೆಲ್ಲ ಪುಸ್ತಕಗಳನ್ನು ಕೊಟ್ಟು ಕಳಿಸುವ ಪರಿಪಾಟದ ಬಗ್ಗೆ ಹೇಳಿಯಾಯಿತಲ್ಲವೆ? ನಮ್ಮ ಒತ್ತಾಯಕ್ಕೆ ಕಟ್ಟುಬಿದ್ದು ಒಮ್ಮೆ ತೀರ್ಥಹಳ್ಳಿಗೂ ಶ್ರೀದಂಪತಿಗಳು ಬಂದುಬಿಟ್ಟರು. ಬರುವಾಗ ಅವರ ಚೀಲದ ತುಂಬಾ ಬೇಂದ್ರೆ, ಚಿತ್ತಾಲ, ಕಡೆಂಗೋಡ್ಲು, ಕೈಲಾಸಂ....!

ನಾನು ಕೇಳಿದೆ: 'ಸಾರ್, ಇದನ್ನೆಲ್ಲಾ ಹಿಂದಕ್ಕೆ ಕೊಡೋದು ಹ್ಯಾಗೆ-ಯಾವಾಗ?'

ಎಂದಿನಂತೆ ಮುಗುಳು ನಗೆಯ ಉತ್ತರ: 'ಇಲ್ಲ, ಇವೆಲ್ಲಾ ನಿಮಗೇ. ಓದಿ, ನಂತರ ಓದೋರಿಗೆ ಕೊಟ್ಬಿಡಿ'.

'ಹಂಗಂದ್ರೆ ಹ್ಯಾಗೆ ಸಾರ್, ಹಣಾನಾದ್ರೂ......' (ಹೀಗೆ ಕೇಳುವುದು ಅವರಿಗೆ ನೋವಿನ ವಿಚಾರ ಆದರೂ ಕೇಳಿದೆ) ಅಷ್ಟರಲ್ಲಿ ಅವರ ಜೊತೆಯೇ ನಿಂತಿದ್ದ ಸರಸ್ವತಿಯವರು ಹೇಳುತ್ತಾರೆ:

'ದಯವಿಟ್ಟು ತಗೊಂಡು ನೀವೇ ಇಟ್ಕೊಳ್ಳಿ; ಮೂರು ಮಹಡಿ ಕಟ್ಟಿಸ್ಕೊಂಡಿದೀವಿ; ಎರಡರಲ್ಲಿ ಬರೀ ಪುಸ್ತಕಗಳೇ ತುಂಬ್ಕೊಂಡಿದಾವೆ; ಇನ್ನು ನೀವೆಲ್ಲಾ ವಾಪಾಸ್ ಕೊಟ್ರೇ ಅಂದ್ರೆ, ನಮಗೆ ಮಲ್ಕೊಳ್ಳಿಕ್ಕೂ ರೂಮಿರೋಲ್ಲ-ಅಷ್ಟೇ!' ಹೌದು. ರಾಜು ಅವರು ತಮ್ಮ ಪುಸ್ತಕಗಳ ಕೋಣೆಯಲ್ಲಿ ತಾವು ಕಾಲುಮುದುರಿಕೊಂಡು ಕುಳಿತು, ನಮ್ಮ ಮನೆಯ ಕಪಾಟುಗಳನ್ನು ತುಂಬಿಕೊಟ್ಟವರು! ತಾವು ಉಕ್ಕದೆ ನಮ್ಮನ್ನು ಉಕ್ಕಿಸಿದವರು!

ಇಷ್ಟಿದ್ದೂ ನನಗೆ ಅವರ ಬಗ್ಗೆ ಒಂದು ಅಸಮಾಧಾನ ಉಳಿದುಕೊಂಡೇಬಿಟ್ಟಿದೆ:

ಈ ಮೇಲಿನ ಎಲ್ಲಾ ಅನುಭವಗಳೂ ನನ್ನದೊಬ್ಬನದೇ ಆಗಿಲ್ಲದಿರುವುದು-ನನಗೆ ಅಸೂಯೆ ಆಗುವಷ್ಟು ಸಂಖ್ಯೆಯಲ್ಲಿ ನನ್ನಂಥವರೆ ಇರುವುದು!

ಅವರು ಕಾಲುಚಾಚಿ ಓದಲಿ-ನಮ್ಮ ಕಪಾಟುಗಳು ತುಂಬಲಿ!



# ಹಸನ್ಮುಖಿ ಶ್ರೀನಿವಾಸರಾಜು

● ಬಿ.ಜಿ. ಹರೀಶ್

ಶ್ರೀನಿವಾಸ ರಾಜು.
ಕನ್ನಡದ ಸೇವಕ. ಮಾಸ್ತಿಯವರ ಭಾಷೆಯಲ್ಲಿ ಹೇಳುವುದಾದರೆ ಕನ್ನಡದ ಒಬ್ಬ ಮೋಜನ್.

ಅವರನ್ನು ನಾನು ನೋಡಿರಲಿಲ್ಲ. ಕೇಳಿದ್ದೆ – ಹಾಸನದಲ್ಲಿ. ಹಾಸನದ ನನ್ನ ಪ್ರೀತಿಯ ಸರ್ಕಾರಿ ಗ್ರಂಥಾಲಯದಲ್ಲಿ ಶರ್ಮರ 'ಸಪ್ತಪದಿ', ರಾಘವೇಂದ್ರರಾಯರ 'ಹಾಡೆ ಹಾದಿಯ ತೋರಿತು' ಮೂರ್ತಿರಾಯರ ಲಲಿತ ಪ್ರಬಂಧಗಳ ಪುಟ ತೆರೆದಾಗ ಅಲ್ಲಿ ಕ್ರೈಸ್ಟ್ ಕಾಲೇಜಿನ ಹೆಸರಿರುತ್ತಿತ್ತು. ಮುಂದೆ ಸುಧಾ ಪತ್ರಿಕೆಯಲ್ಲಿ ಈ ಕಾಲೇಜಿನ ಬಗ್ಗೆ ಓದುವಾಗ ಮುಂದೊಂದು ದಿನ ನಾನು ಶ್ರೀನಿವಾಸರಾಜು ಅವರನ್ನು ನೋಡುತ್ತೇನೆಂದು ಭಾವಿಸಿರಲಿಲ್ಲ. ಕ್ರೈಸ್ಟ್ ಕಾಲೇಜಿನಲ್ಲಿ ಅಧ್ಯಾಪಕನಾಗುತ್ತೇನೆಂದೂ ಅಂದು ಕೊಂಡಿರಲಿಲ್ಲ.

ಕ್ರೈಸ್ಟ್ ಕಾಲೇಜಿನ ಪ್ರಕಟಣೆಗಳು ನನಗೆ ಆತ್ಮೀಯವಾಗಲು ಕಾರಣ ಅದರ ಸರಳತೆ, ಅಚ್ಚುಕಟ್ಟುತನ. ಹಳಬರು – ಹೊಸಬರು ಎಂದು ಭೇದ ತೋರದಿದ್ದರೂ ಸ್ವಲ್ಪ ಹೊಸಬರಾದ ಲೇಖಕರ ಕಡೆ ಅದು ವಹಿಸುತ್ತಾ ಬಂದಿರುವ ಪಕ್ಷಪಾತದಿಂದ, ಈ ಕನ್ನಡ ಸಂಘದ ಗ್ರಂಥಗಳು ಹೊಸ ಅಲೆಯ ಓದುಗರನ್ನು ತಲುಪುತ್ತಾ ಬಂದಿವೆ.



ಪರಿಮಳ ತುಂಬಿದ ಹೂವನ್ನು ನೋಡುವಾಗ ಸಂತೋಷ ವಾಗುತ್ತದೆ. ಆದರೆ ಹೂವಿನ ದಂಡೆಯನ್ನು ಕಟ್ಟಿ ಹಿಡಿದಿರುವ ದಾರ ಕಾಣುವುದಿಲ್ಲ. ಹಾಗೇ ಶ್ರೀನಿವಾಸರಾಜು. ಕ್ರೈಸ್ಟ್ ಕಾಲೇಜಿನ ೧೭೫ಕ್ಕೂ ಹೆಚ್ಚಿನ ಪುಸ್ತಕಗಳ ಹಿಂದಿರುವ 'ಸೂತ್ರ' ಧಾರ ಅವರು. ಸಂಬಳ, ಭತ್ಯೆಗಳಲ್ಲಿ, ಟೈಂ ಟೇಬಲ್, ಪ್ರಶ್ನೆಪತ್ರಿಕೆ ತಯಾರಿಕೆಯಲ್ಲಿ ಎಷ್ಟೋ ಅಧ್ಯಾಪಕ ಜೀವನ ಸವೆದು ಹೋಗುತ್ತಿರುವಾಗ ಕ್ರೈಸ್ಟ್

ಕಾಲೇಜಿನಲ್ಲಿ ಬೇರು ಬಿಟ್ಟು ನಾಡಿನ ಎಲ್ಲ ಭಾಗದ ಲೇಖಕರನ್ನು (ಲೇಖಕಿಯರೂ ಸೇರಿದಂತೆ. ಪ್ರತಿಭಾ ನಂದಕುಮಾರ್, ವೈದೇಹಿ, ಕಮಲಾ ಹಂಪನಾ, ಸುಧಾಶರ್ಮ ಚವತ್ತಿ, ಭಗವತಿ ಇವರ ಪುಸ್ತಕಗಳು ಅಚ್ಚಾಗಿದ್ದು ಇಲ್ಲಿಂದಲೆ), ಸ್ಪರ್ಶಿಸಿದ ಹೊಂಗೆಮರ ಶ್ರೀನಿವಾಸರಾಜು. ಒಟ್ಟಿನಲ್ಲಿ 'ಅವರೆ ಅವರಿಗು ಹೆಚ್ಚು ಅವರಿಗಿಂತ!'

* * * *

Excellence and Service ಇದು ಕ್ರೈಸ್ಟ್ ಕಾಲೇಜಿನ ಧ್ಯೇಯ ವಾಕ್ಯ. ಕನ್ನಡ ಸಂಘದ ಪುಸ್ತಕಗಳ ಪ್ರಕಟಣೆ ಮೂಲಕ Excellence ತೋರಿಸಿದ ರಾಜು ಮೇಷ್ಟ್ರು (ಇದು ಅವರಿಗೆ ಕರ್ನಾಟಕದಲ್ಲಿ ದೊರೆತಿರುವ nickname), ಈ ಕೆಲಸವನ್ನು ಯಾವ ವ್ಯಾವಹಾರಿಕ – ವೈಯುಕ್ತಿಕ ಲಾಭದ ಲೆಕ್ಕಾಚಾರವೂ ಇಲ್ಲದೆ Service ಆಗಿ ಪರಿವರ್ತಿಸಿದ್ದಾರೆ. ದಣಿದು ಕೆಲಸ ಮುಗಿದ ಮೇಲೆ ಅದನ್ನು ಮುಟ್ಟಿ, ಸವರಿ ಮೈದಡವುವರು ವಿರಳ. ಎಷ್ಟೋ ಏಣಿಗಳು ಮುರಿದೂ ಹೋಗುತ್ತವೆ! ಆದರೆ ಕಾಲೇಜಿನ ಇಂದಿನ ಆಡಳಿತ ಮಂಡಳಿಯವರೂ ಅವರನ್ನು ಒಂದಲ್ಲ ಒಂದು ಕಾರ್ಯಕ್ರಮಕ್ಕೆ ಕರೆದು ಗೌರವ ತೋರಿಸುತ್ತಿದ್ದಾರೆ. ಡಿಗ್ರಿ ಕಾಲೇಜಿನ ಅಧ್ಯಾಪಕರಾದ ಶ್ರೀಮತಿ ಡಾ.ರತಿ, ಡಾ.ಕೃಷ್ಣಸ್ವಾಮಿ, ಡಾ. ಶಿವಪ್ರಸಾದ್ ಇವರು ಪ್ರೀತಿಯಿಂದ ರಾಜು ಅವರನ್ನು ಬರಮಾಡಿಕೊಳ್ಳುತ್ತಿದ್ದಾರೆ. ಪ್ರೀತಿ–ಗೌರವಗಳು ಎರಡೂ ಬದಿಯಲ್ಲಿ ಹರಿಯುತ್ತಿವೆ. ಪರಿಚಯವಾದ ಎಷ್ಟೋ ದಿನಗಳ ನಂತರ ಅವರನ್ನೊಮ್ಮೆ ಕೇಳಿದೆ – 'ನಿಮ್ಮ ಈ ಕಾಲೇಜಿಗೆ ಹೇಗೆ ಬಂದಿರಿ'? ಶ್ರೀರಾಜು ಹೇಳಿದರು 'ನಾನು ಕೆಲಸಕ್ಕೆ ಸೇರಿದ್ದು ಇಲ್ಲೆ. ಮೊದಲು ಸೇರಿದ ಕನ್ನಡ ಅಧ್ಯಾಪಕನ ಕೆಲಸದಲ್ಲೇ ಕೊನೆವರೆಗೆ ಮುಂದುವರೆದೆ'. ವಾಲ್ಮೀಕಿ ಮುನಿ ರಾಮಾಯಣದಲ್ಲಿ ಒಂದು ಮುಖ್ಯ ಲಕ್ಷಣವನ್ನು ಶ್ರೀರಾಮನ ಬಗ್ಗೆ ಹೇಳುತ್ತಾನೆ.

ನಾ ಶ್ರೇಯಸಿ ರತೋ ವಿದ್ವಾನ್ ನ ವಿರುದ್ಧ ಕಥಾರುಚಿಃ ।
ಲೋಕೇ ಪುರುಷಸಾರಜ್ಞಃ ಸಾಧುರೇಕೋ ವಿನಿಮಿತಃ ॥

ವಿದ್ವಾಂಸನಾದ ಆತನು ಅಶ್ರೇಯಸ್ಸಿನಲ್ಲಿ ರತನಾದವನಲ್ಲ, ವಿರುದ್ಧ ಕಥೆಯಲ್ಲಿ ರುಚಿಯುಳ್ಳವನಲ್ಲ. ಲೋಕದಲ್ಲಿ ಪುರುಷರುಗಳ ಸಾರವನ್ನು ತಿಳಿದವನು. ಲೋಕದಲ್ಲಿ ವಿನಿರ್ಮಿತವಾದ ಒಬ್ಬನೇ ಸಾಧು ಆತ.

ದೊಡ್ಡ ದೊಡ್ಡ ಗ್ರಂಥಗಳನ್ನು ಬರೆದವರಷ್ಟೇ ವಿದ್ವಾಂಸರಾದರೆ ಶ್ರೀನಿವಾಸರಾಜು ವಿದ್ವಾಂಸರಲ್ಲ. ಆದರೆ ಗ್ರಂಥಕಾರರನ್ನು ಕಂಡು ಅವರ ಪ್ರತಿಭೆಗೆ ಸ್ನೇಹದ ಒತ್ತಡ ತಂದು ಅವರ ಗ್ರಂಥಗಳನ್ನು ಅಚ್ಚು ಮಾಡಿಸುವ ಪುಣ್ಯದ ಕೆಲಸ ವಿದ್ವತ್ತಿಕೆಯದು ಎಂದಾದರೆ ಅವರು ದೊಡ್ಡ ವಿದ್ವಾಂಸರೇ. ಹಿರಿಯ ಕಿರಿಯ ಲೇಖಕ ಎಂಬ ಭೇದವಿಲ್ಲದೆ ಎಲ್ಲ ಕನ್ನಡ(ಕನ್ನಡೇತರ!) ಲೇಖಕರನ್ನೂ 'ಇವ ನಮ್ಮವ' ಎಂದು ನೋಡುವಿಕೆ ವಿದ್ವಾಂಸತ್ವವಾದರೆ ಶ್ರೀನಿವಾಸರಾಜು ಪಂಡಿತರು – ಸಮದರ್ಶಿಗಳು. ಇಲ್ಲದಿದ್ದರೆ ದೂರದೂರಿನ ವಿಭಾ ತೀರಿ ಕೊಂಡರೆ, ಅವಳ ಕವಿತೆಗಳು ಮೂಲೆಗುಂಪಾಗದಂತೆ ಪುಸ್ತಕ ರೂಪಕ್ಕೆ ತಂದವರು ಶ್ರೀನಿವಾಸ ರಾಜು. ನಮ್ಮ ಕಿರಿಯ ಕವಿಗಳಾದ ಸಂದೀಪ್ ನಾಯಕ್, ವಿಕ್ರಂ ವಿಸಾಜಿ ಇವರನ್ನು ಪ್ರೋತ್ಸಾಹಿಸಿದವರು.

ಚಿಕ್ಕ ವಯಸ್ಸಿನ ಎಳೆಯ ಲೇಖಕರೇನೋ ಪುಸ್ತಕ ಪ್ರಕಟಿಸಲು ಕೇಳಿದರೆ ಒಪ್ಪುತ್ತಾರೆ.

ಆದರೆ 'ಬಲಿತ' ಹಿರಿಯ ಲೇಖಕರು? ಅದೇ ಶ್ರೀನಿವಾಸರಾಜು ಅವರ ಹೆಗ್ಗಳಿಕೆ. ಯಾವಾಗಲೂ ಯಾರು ಏನು ಬರೆಯುತ್ತಿದ್ದಾರೆ, ಯಾರಿಂದ ಹಸ್ತ ಪ್ರತಿ ಕೇಳಬಹುದು ಎಂಬ 'ಮುಹೂರ್ತ ಗಣನೆ' ಅವರ ಮನಸ್ಸಿನ ಒಂದು ಮೂಲೆಯಲ್ಲಿ ಇದ್ದೇ ಇರುತ್ತದೆ. ಹಾಗಾಗಿಯೇ ಪುತಿನ, ಎಕ್ಕುಂಡಿ, ಜಿ.ಎಸ್. ಶಿವರುದ್ರಪ್ಪ, ರಾ. ಶರ್ಮರ ತಲೆಮಾರಿನವರಿಂದ ಎಚ್.ಎಸ್. ವೆಂಕಟೇಶಮೂರ್ತಿ, ಶಿವಪ್ರಕಾಶ್, ಪ್ರತಿಭಾ, ವೈದೇಹಿ ತಲೆಮಾರಿನವರಿಂದ ಇವರು ಹಸ್ತ ಪ್ರತಿ ಪಡೆದು ಗ್ರಂಥ ಪ್ರಕಾಶಿಸಬಲ್ಲರು. ಇದಕ್ಕೆ ಕಾರಣ ಇವರ ಬಳಿ ಸುಳಿದಾಡಿದವರಿಗೆ ತೋರುವ ಇವರ ಚಾರಿತ್ರ್ಯ, ಪ್ರೀತಿ, ಕನ್ನಡದ ಮೇಲಿನ ಸದ್ದಿಲ್ಲದ ಕ್ರಿಯಾವಂತಿಕೆ.

* * * *

ಶ್ರೀನಿವಾಸರಾಜು ಅವರ ಕಾಲದ ನಂತರ ಕ್ರೈಸ್ಟ್ ಕಾಲೇಜಿನಲ್ಲಿ ಪಾಠ ಹೇಳಿದವನು ನಾನು. ಆದರೆ ಅವರು ಕನ್ನಡ ಸಂಘ ಕಟ್ಟಿದ್ದು, ಕಾಲೇಜಿನ ಲಾಂಛನದಲ್ಲಿ ಕನ್ನಡದಲ್ಲಿ 'ಕ್ರೈಸ್ಟ್ ಕಾಲೇಜು' ಎಂದು ಹೆಸರು ಬರಲು ಇವರು ಮತ್ತು ರಾಮಕೃಷ್ಣ ಅವರು ಶ್ರಮಿಸಿದ್ದು ಇದೆಲ್ಲಾ ಈಗ ಅಲ್ಲೇ ಅಧ್ಯಾಪಕರಾಗಿರುವ ಹಳೆಯ ವಿದ್ಯಾರ್ಥಿಗಳಿಂದ ಕೇಳಿಬಲ್ಲೆ. ಅವರ ವಿದ್ಯಾರ್ಥಿನಿ, ನನ್ನ ಸಹೋದ್ಯೋಗಿ ಸಂತೋಷ್ ಕುಮಾರಿ (ಗಣಿತಶಾಸ್ತ್ರದ ಅಧ್ಯಾಪಕಿ) ಅವರು ಹೇಳುತ್ತಾರೆ ಪದವಿ ತರಗತಿಯ ಮೊದಲ 'ಕ್ಲಾಸ್'ಗೆ ಬಂದ ರಾಜು ಮೇಷ್ಟ್ರು ಎಲ್ಲರಿಗೂ ಕನ್ನಡದಲ್ಲಿ ತಮ್ಮ ಪರಿಚಯ ಮಾಡಿಕೊಂಡು ಉಳಿದವರಿಗೂ ಕನ್ನಡದಲ್ಲಿ ಹೆಸರು, ಆಸಕ್ತಿ ಇತ್ಯಾದಿಗಳನ್ನು ಹೇಳಲು ಪ್ರೇರೇಪಿಸಿದ್ದನ್ನು ನೆನಪಿಸಿಕೊಳ್ಳುತ್ತಾರೆ.

ಶ್ರೀನಿವಾಸರಾಜು ಅವರು ಕಾಲೇಜಿನಲ್ಲಿ ಬಿ.ಎ. ಕನ್ನಡ ಐಚ್ಛಿಕ ತರಗತಿ ಪ್ರಾರಂಭಿಸಿ ಅದಕ್ಕೆ ವಿದ್ಯಾರ್ಥಿಗಳನ್ನು ಜೋಡಿಸಿದ್ದರು. ಆದರೆ ಈಗ ಕನ್ನಡದ ಐಚ್ಛಿಕ ಅಲ್ಲಿ ಬಿದ್ದು ಹೋಗಿದೆ. ಆದರೂ ಹಳೆಯ ವಿದ್ಯಾರ್ಥಿಗಳು (ಬಿ.ಎ. ಬಿ.ಎಸ್ಸಿ, ಬಿಕಾಂ, ಪಿಯುಸಿ) ಕಾಲೇಜಿನಿಂದ ಬೀಳ್ಕೊಡುವಾಗ ತಮ್ಮ ನೆನಪಿಗಾಗಿ ಕನ್ನಡದ ಶ್ರೇಷ್ಠ ಗ್ರಂಥಗಳನ್ನು ಕೊಡುಗೆಯಾಗಿ ಕೊಟ್ಟಿದ್ದಾರೆ. ಪುಸ್ತಕ ಪ್ರೀತಿಯನ್ನು ಬಾಯಿಬಿಟ್ಟು ಹೇಳದೆ ವಿದ್ಯಾರ್ಥಿಗಳಲ್ಲಿ ಅವರು ಮೂಡಿಸಿದ್ದನ್ನು, ಕಾಲೇಜಿನಲ್ಲಿದ್ದಾಗ ನಾನು – ಬಿಡುವಿನ ವೇಳೆಯಲ್ಲಿ ಆಗಾಗ ಈ ಹಳೆಯ ನಿತ್ಯನೂತನ ಗ್ರಂಥಗಳ ಮೈದಡವುವಾಗ ಕಣ್ಮುಂದೆ ತಂದು ಕೊಂಡು ಪುಲಕಿತನಾಗಿದ್ದೇನೆ. ಆದರೆ ಈಗ ಡಿಗ್ರಿ ಕಾಲೇಜಿನ ಲೈಬ್ರರಿಯ ಕೊನೆಯ ತುದಿಯಲ್ಲಿರುವ ಧೂಳು ಹಿಡಿದಿರುವ ಸಾವಿರಾರು ಉತ್ತಮ ಗ್ರಂಥಗಳ ರಾಶಿ ನೋಡಿದರೆ ಬೇಸರವಾಗುತ್ತದೆ. ಕ್ರಿಯಾಶಕ್ತಿಯಿಲ್ಲದ ಪ್ರೀತಿಗೆಲ್ಲಿ ಬೆಲೆ?

* * * *

ಆ ದಿನ ನೆನಪಿದೆ. ಸೆಪ್ಟೆಂಬರ್ ಐದು, ಶಿಕ್ಷಕರ ದಿನ. ಸೂರ್ಯವಂಶಿಯಾದ ನನ್ನನ್ನು ಅವರ ಫೋನಿನ ಕರೆ ಎಬ್ಬಿಸಿತು. ರಾಧಾಕೃಷ್ಣನ್ ನೆನಪನ್ನು ತಂದುಕೊಂಡು, ನನಗೆ ಶಿಕ್ಷಕರ ದಿನಾಚರಣೆ ಶುಭಾಶಯ ಹೇಳಿದ ಮೇಲೆ ಮುಖ್ಯ ವಿಷಯಕ್ಕೆ ಬಂದರು. 'ನನಗೊಂದು ಸಹಾಯ ಆಗಬೇಕು ನಿಮ್ಮಿಂದ'. ನನ್ನಿಂದ ಇವರಿಗೇನು ಸಹಾಯವಾದೀತು? ಎಂದು ಯೋಚಿಸುತ್ತಲೇ 'ದಯವಿಟ್ಟು ಹೇಳಿ ಸರ್' ಎಂದೆ. ಶೇಷಾದ್ರಿಪುರಂ ಕಾಲೇಜಿನಲ್ಲಿ ಹುಡುಗರಿಗೆ ನೀವು ವಿಮರ್ಶೆ, ಸಂಸ್ಕೃತಿ ಕುರಿತು ಪಾಠ ಹೇಳಬೇಕು ಎಂದರು. ತಾವು ಮಾಡಿಕೊಡುವ

ಅವಕಾಶವನ್ನು ತಮಗೆ ಬೇರೆಯವರು ಮಾಡುತ್ತಿರುವ ಸಹಾಯ ಎಂದು ಹೇಳುವುದು ಸಂಸ್ಕೃತಿಯಲ್ಲವೆ?

ಆರ್ಯಸ್ಸರ್ವಸಂಶ್ಚೈವ ಸದೈಕ ಪ್ರಿಯದರ್ಶನಃ
(ಆರ್ಯನು, ಸರ್ವಸಮನು, ಸದಾ ಒಂದೇ ರೀತಿಯಾಗಿ ಪ್ರಿಯದರ್ಶನನು)

* * * *

ಹಿಂದೆ ಗಳಗನಾಥರು, ಜಿ.ಪಿ. ರಾಜರತ್ನಂ ಮೊದಲಾದ ಮಹನೀಯರು ಪುಸ್ತಕಗಳನ್ನು ಹೊತ್ತು ಊರೂರು ಸುತ್ತಿ ಕನ್ನಡ ಪುಸ್ತಕ ಓದುವುದನ್ನು ಪ್ರೋತ್ಸಾಹಿಸುತ್ತಿದ್ದರು. ಜಿ.ಪಿ. ರಾಜರತ್ನಂ ಶ್ರೀನಿವಾಸರಾಜು ಅವರ ಗುರುಗಳು. ಅವರ ಮನೆ ಮುಂದೆ ಆಟೋದಲ್ಲಿ ಹೋಗುವಾಗ 'ಇದು ನಮ್ಮ ಗುರುಗಳ ಮನೆ' ಎಂದು ಕೈಮುಗಿದಿದ್ದನ್ನು' ಸಂಚಯ'ದ ಗೆಳೆಯ ಪ್ರಹ್ಲಾದ್ ನೆನಪಿಸಿಕೊಳ್ಳುತ್ತಾರೆ. 'ರಾಜರತ್ನಂ' ಪರಂಪರೆಯ 'ಶ್ರೀನಿವಾಸರಾಜು' ಅವರು ದೇವರನ್ನು ನಂಬುತ್ತಾರೋ ಇಲ್ಲವೋ ಗೊತ್ತಿಲ್ಲ. ಆದರೆ ಪುಸ್ತಕ ಸರಸ್ವತಿಯನ್ನಂತೂ ಬಲವಾಗಿ ನಂಬಿದ್ದಾರೆ. ಮನಸ್ಸು ಮಾಡಿದ್ದರೆ ಇವರಿಗಿರುವ ಅಧ್ಯಯನದ ಬಲಕ್ಕೆ ಹತ್ತಾರು ಉತ್ತಮ ಗ್ರಂಥ ಬರೆಯಬಹುದಿತ್ತು. ಆದರೆ ಹೂವಿಗಿರುವ ಹಣ್ಣಾಗುವ ತವಕವನ್ನು ಬದಿಗೊತ್ತಿ ಬೇರಿಗಿರುವ ಮಣ್ಣಿನಲ್ಲೇ ಹುದುಗಿ ಉಳಿದು, ತಾಳಿ ಬಾಳಿ ಸಂಸ್ಕೃತಿಯ ಮರಕ್ಕೆ ಆಸರೆಯಾದವರು ಶ್ರೀನಿವಾಸರಾಜು. ಗಿಡದಲ್ಲಿ ಹೂವು ಮೊಳೆಯುವಾಗ, ಸೂರ್ಯನು ಭೂಮಿಗೆ ಬರುವಾಗ ತಮಟೆ ಬಾರಿಸಿ ಗದ್ದಲ ಮಾಡುವುದಿಲ್ಲ. ಅದೇ ರೀತಿ ಕನ್ನಡದ ಕೆಲಸವನ್ನು ಮಾಡುತ್ತಲೇ ಇರುವ ನಮ್ಮ ಪ್ರೀತಿಯ ರಾಜುಮೇಷ್ಟ್ರು. ನನಗೆ ದೇವರಲ್ಲಿ ನಂಬಿಕೆ ಇದೆ. ನಾನು ನಂಬುವ ದೇವರು ಕರ್ನಾಟಕದ ಈ ಪುಸ್ತಕದ ಮೇಷ್ಟ್ರಿಗೆ ಎಲ್ಲ ನೆಮ್ಮದಿ, ಆರೋಗ್ಯ, ಪ್ರೀತಿಯನ್ನು ಹೀಗೇ ನೀಡುತ್ತಿರಲಿ.

❑



# ಸಾಹಿತ್ಯ ಲೋಕದ ಡಾನ್

● *ಡಿ.ಕೆ. ಶ್ಯಾಮಸುಂದರರಾವ್*

**ಮ**ಹಾನಗರಗಳಲ್ಲಿ ಭೂಗತ ಜಗತ್ತೊಂದಿದೆ, ಅದನ್ನಾಳುವ ಒಬ್ಬ ಡಾನ್ ಇರುತ್ತಾನೆ ಎಂದು ಕೇಳಿದ್ದೇವೆ. ಸ್ನೇಹ-ಸೌಜನ್ಯ-ಪ್ರೀತಿಗಳೆಂಬ ಅಮೃತೋಪಮ ಗುಣಗಳ ಮೂಲಕ ಸಾಹಿತ್ಯ ಲೋಕದ ಹಿರಿ-ಕಿರಿಯರೆಲ್ಲರ ಅಂತರಂಗ ಜಗತ್ತಿನಲ್ಲಿ ಗೌರವಯುತಸ್ಥಾನವನ್ನು ಪಡೆದ ವ್ಯಕ್ತಿಯನ್ನು 'ಸಾಹಿತ್ಯ ಲೋಕದ ಡಾನ್' ಎನ್ನದೆ ಇನ್ನೇನನ್ನ ಬೇಕು? ಈ ಡಾನ್ ಅಜಾತಶತ್ರು, ಲೋಕಮಿತ್ರ, ಅನೇಕ ಉದಯೋನ್ಮುಖ ಲೇಖಕರನ್ನು ಬೆಳೆಸಿದ ಕೃಷಿಕ. ಸಮಚಿತ್ತದ ಸ್ಥಿತಪ್ರಜ್ಞ, ಇವರು ನಮ್ಮೆಲ್ಲರ ಪ್ರೀತಿಯ 'ರಾಜು'.

ಇದೇ (೨೦೦೬) ನವೆಂಬರ್ ತಿಂಗಳಲ್ಲಿ ನಡೆದ ಸಂಗತಿ. ನನ್ನ 'ಕಾಮಧೇನು ಪುಸ್ತಕ ಭವನ'ಕ್ಕೆ ಬಂದವರ ಪೈಕಿ ಒಬ್ಬರು ವಿಶೇಷವಾಗಿ ನನ್ನ ಗಮನಸೆಳೆದರು. ಕಾರಣ, ಅವರ ಪುಸ್ತಕಗಳ ಆಯ್ಕೆಯ ಅಭಿರುಚಿ, ಪುಸ್ತಕಗಳ ಬಗೆಗಿನ ಅವರ ಅಸಾಧಾರಣವಾದ ಗೀಳು ಅಥವಾ ಕೊಳ್ಳುಬಾಕತನ. ಪುಸ್ತಕಗಳ ಪ್ರದರ್ಶನ ಹಾಗೂ ಮಾರಾಟಕೇಂದ್ರಗಳಲ್ಲೆಲ್ಲಾ ಇವರ ಹಾಜರಿ ನಿಶ್ಚಿತ. ಕುತೂಹಲಿತನಾಗಿ ಈ ಮಹನೀಯರ ಪರಿಚಯಮಾಡಿಕೊಂಡು ಇಂತಹ ಪುಸ್ತಕಪ್ರೀತಿ

ನಿಮಗೆ ಅಂಟಿದ್ದಾದರೂ ಹೇಗೆ? ಎಂದು ಕೇಳಿದೆ. ಒಂದು ಖಾಸಗಿ ಕಾಲೇಜಿನಲ್ಲಿ ಪ್ರಾಂಶುಪಾಲ ರಾಗಿರುವ ಶ್ರೀಯುತರು ಮುಖದ ತುಂಬಾ ತೆಳುವಾದ ಮುಗುಳ್ನಗೆಯನ್ನು ಹರಡಿಕೊಂಡು ಕಣ್ಣುಗಳಲ್ಲಿ ಆನಂದೋಲ್ಲಾಸದ ಬೆಳಕನ್ನು ಚೆಲ್ಲುತ್ತಾ ಉತ್ಸಾಹದಿಂದ ಹೇಳಿದರು. "ಸಾರ್, ನನ್ನಲ್ಲಿ ಓದುವ ಹವ್ಯಾಸವನ್ನು ರೂಢಿಸಿದವರು ನನ್ನ ಒಬ್ಬ ಗುರುಗಳು. ಈ ಹವ್ಯಾಸ ನನ್ನ ಬದುಕಿನ ಬೆಳಕಾಗಿ, ನನ್ನ ಜೀವನದ ಸರ್ವಸ್ವವಾಗಿ ನನ್ನನ್ನು ನಡೆಸುತ್ತಿದೆ."

"ನಿಮಗೆ ಈ ಚಟವನ್ನು ಅಂಟಿಸಿದ ಗುರುಗಳ ಹೆಸರೇನು?" ಎಂದು ಕೇಳಿದೆ.

ಅವರು ಹೇಳಿದರು : "ನನ್ನ ಗುರುಗಳ ಹೆಸರು ಪ್ರೊ. ಜಿ. ಶ್ರೀನಿವಾಸರಾಜು". ಈಗ ಆನಂದೋಲ್ಲಾಸಭರಿತ ರೋಮಾಂಚನವನ್ನನುಭವಿಸುವ ಸರದಿ ನನ್ನದಾಯಿತು. ಕೇಳಿದಾಕ್ಷಣಕ್ಕೆ ಮಧುರಾನುಭವವನ್ನು ಉದ್ದೀಪಿಸುವ ಸಾಮರ್ಥ್ಯ-ಸಂಪನ್ನತೆ ಎಷ್ಟು ಹೆಸರುಗಳಿಗಿರುತ್ತದೆ. ಇಂಥ ಸ್ಯಾಂಪಲ್ಲುಗಳು ಅಪರೂಪ. ಪ್ರೀತಿಭರಿತ ಗೆಳೆತನದ ಅಮೃತಸಿಂಚನವನ್ನು ಅಪಾರವಾದ ತಮ್ಮ ಸ್ನೇಹವಲಯದಲ್ಲಿ ಸದಾ-ಸರ್ವದಾ ಸ್ಫುರಿಸುತ್ತಿರುವ ಎಲ್ಲರ ಪ್ರೀತಿಯ "ರಾಜು"ರವರದು ಅಪರೂಪದಲ್ಲಿ ಅಪರೂಪದ ವ್ಯಕ್ತಿತ್ವ. ತಮ್ಮ ಅಧ್ಯಾಪನ ಜೀವನದ ಮೂರೂವರೆದಶಕಗಳಿಗೂ ಮಿಕ್ಕು ಇವತ್ತಿಗೂ ಮುಂದುವರಿಯುತ್ತಿರುವ ಸಂದರ್ಭದಲ್ಲಿ ಇವರಿಂದ "ಪುಸ್ತಕ ಪ್ರೀತಿಯ ದೀಕ್ಷೆ" ಪಡೆದ ಇವರ ಶಿಷ್ಯರ, ಗೆಳೆಯರ ಸಂಖ್ಯೆಯ ಲೆಕ್ಕ ಇಟ್ಟವರ್‍ಯಾರು?

ಪ್ರೊ. ಶ್ರೀನಿವಾಸರಾಜುರವರ ವ್ಯಕ್ತಿತ್ವದ ಹಲವಾರು ಆಯಾಮಗಳನ್ನು ಗುರುತಿಸಿ ಒಂದೊಂದರದೂ ಅಂದಾಜು ಪಟ್ಟಿಯನ್ನು ಸಿದ್ಧಪಡಿಸುವುದು ಸುಲಭದ ಕೆಲಸವೇನು? ಪ್ರಾಧ್ಯಾಪಕ, ಪುಸ್ತಕ ಪ್ರಕಾಶನ ಲೋಕದಲ್ಲಿ ಸದ್ದಿಲ್ಲದೆ ಅಸಾಧಾರಣವೂ ವಿಶಿಷ್ಟವೂ ಆದ ಸಾಧನೆ ಮಾಡಿದ ಪ್ರಕಾಶಕ, ಲೇಖಕ, ಸಂಘಟಕ, ಸ್ನೇಹಿತ, ಹೀಗೆ ಹಲವಾರು ಕ್ಷೇತ್ರಗಳಲ್ಲಿ ಅಚ್ಚಳಿಯದ ಛಾಪನ್ನು ಮೂಡಿಸಿರುವ ಸಿದ್ಧಪುರುಷನ ಸಾಮರ್ಥ್ಯದ ಸೋಜಿಗವನ್ನು ಅಕ್ಷರವಾಗಿ ದಾಖಲಿಸುವುದು ಸುಲಭವಲ್ಲವಾದರೂ ಸಂತಸದ ಪ್ರಯತ್ನವೆಂಬುದು ನನ್ನ ಭಾವನೆ. ರಾಜುರವರ ವೃತ್ತಿಜೀವನ ಸಂಬಂಧಿಯಾದ ಸಾಧನೆ-ಸಿದ್ಧಿಗಳನ್ನು ಕುರಿತು ಬರೆಯಲು ನಾನಿಲ್ಲಿ ಪ್ರಯತ್ನಿಸಿಲ್ಲ. ಸುಮಾರು ಮೂವತ್ತೈದು ವರ್ಷಗಳಿಗಿಂತಲೂ ಹೆಚ್ಚಿನ ಕಾಲಾವಧಿ ಯಲ್ಲಿಯೂ ರಾಜುರವರ ಒಡನಾಟದಲ್ಲಿ ನಾನು ಕಂಡಿರುವ ಒಂದೆರಡು ಸಂಗತಿಗಳನ್ನು ಪ್ರಸ್ತಾಪಿಸುವ ಪ್ರಯತ್ನ ಇಲ್ಲಿದೆ.

### ಪಿ.ಪಿ. ಸಂಘದ ಫೀಲ್ಡ್ ಮಾರ್ಷಲ್

ಪಿ.ಪಿ. ಹೆಸರನ್ನು ಕೇಳಿದ್ದೀರಾ? ಇದೊಂದು ಅಮಿತವೂ ಅನಿಯಮಿತವೂ ಆದ ಸಂಘಟನೆ. ಸಾಹಿತ್ಯದ ಸಹವಾಸವಿರುವ ಸಮಾನಾಸಕ್ತ ಸ್ನೇಹ ಜೀವಿಗಳೆಲ್ಲರೂ ಇದರ ಅಘೋಷಿತ ಸದಸ್ಯರು. 'ಶೆಟ್ಟಿ ಬೀಡುಬಿಟ್ಟಲ್ಲೇ ಪಟ್ನ' ಅನ್ನೋಹಾಗೆ ಪಿ.ಪಿ. ಸದಸ್ಯರು ಒಬ್ಬಿಬ್ಬರಾಗಲೀ ಹೆಚ್ಚು ಮಂದಿಯಾಗಲೀ ಕಲೆತಾಗ ಪರಸ್ಪರ ಮಾತುಕತೆ (ಅದು ಸಾಮಾನ್ಯವಾಗಿ ಸಾಹಿತ್ಯಕವಾದುದಾಗಿರುತ್ತದೆ ಅಥವಾ ಗೆಳೆಯರ ಆಪ್ತ ಸಮಾಲೋಚನೆಯಾಗಿರುತ್ತದೆ) ಈ ಸಂಘದ ಸಭೆಯಾಗುತ್ತದೆ. ಇಂಥ ಸಭೆಗಳಲ್ಲಿ ಸಮಕಾಲೀನ ಸಾಹಿತ್ಯದ ಪರಾಮರ್ಶೆ ನಡೆಯಬಹುದು, ಹೊಸಪ್ರಕಟಣೆಗಳ ಕುರಿತ ಮಾತುಕತೆ ನಡೆಯಬಹುದು, ಮರಿಕವಿ ತನ್ನ

ಕವನ ಓದಬಹುದು, ಕೇಳುಗರು ಮೆಚ್ಚಬಹುದು–ಬಿಡಬಹುದು. ಪಕ್ಕದಲ್ಲಿ ಕ್ಯಾಂಟೀನಿದ್ದರೆ ಕಾಫಿ ಸಮಾರಾಧನೆಯಾಗಬಹುದು. ಹೀಗೆ ಸಂಘಟನೆಯ ಮೀಟಿಂಗುಗಳು ಅವಿರತವಾಗಿ ನಡೆಯುವ ಪರಿಪಾಠ ನಡೆದುಬಂದಿದೆ. ಇವು ಅಬಾಧಿತವಾಗಿ ನಡೆಯಲು ಕಾರಣವೂ ಇದೆ. ಯಾಕೆಂದರೆ ಇದರ ಮೀಟಿಂಗುಗಳಿಗೆ ಬೇರೆ ಸಭೆ ಸಮಾರಂಭಗಳಿಗೆ ಅಗತ್ಯವಿರುವ ನಿಗದಿತ ಸ್ಥಳ–ಸಮಯ–ಖರ್ಚು–ವೆಚ್ಚಗಳ ಗೋಜಿಲ್ಲ. ಪಿ.ಪಿ. ಸಭೆಗಳಿಗೆ ಸ್ಥಳದ ಕಾಲದ ನಿರ್ಬಂಧಗಳಿಲ್ಲ. ಸದಸ್ಯರು ಭೇಟಿಯಾದ ಯಾವುದೇ ಸ್ಥಳದಲ್ಲಿ, ಹುಲ್ಲು ಹಾಸಿನ ಮೇಲೆ, ಕಲ್ಲು ಬೆಂಚಿನ ಮೇಲೆ, ಲೈಬ್ರರಿಯ ವರಾಂಡದಲ್ಲಿ–ಹೀಗೆ ಕಾಲದೇಶಗಳ ನಿರ್ಬಂಧವಿಲ್ಲದ, ನಿರಂತರವಾಗಿ ಸಾಗಿರುವ ಪಿ.ಪಿ. ಸದಸ್ಯರ ಒಡನಾಟದಲ್ಲಿ / ಚರ್ಚೆಗಳಲ್ಲಿ ಮಾತುಮಾತು ಮಥಿಸಿ ಸಾಹಿತ್ಯದ ನವನೀತ ಮೂಡಿಬಂದಿದೆ. ಸುಮಾರು ೧೯೭೦ರ ದಶಕದ ಸಂದರ್ಭದಲ್ಲಿನ ಪಿ.ಪಿ. ಬಳಗದ ಸದ್ಯಕ್ಕೆ ನೆನಪಿಗೆ ಬರುವ ಕೆಲವು ಹೆಸರುಗಳನ್ನು ಇಲ್ಲಿ ಉಲ್ಲೇಖಿಸ ಬಯಸುತ್ತೇನೆ. ಹೆಚ್. ಸತ್ಯನಾರಾಯಣ, ಕೆ.ವಿ. ನಾರಾಯಣ, ಕ.ನಂ. ನಾಗರಾಜ್, ಎಚ್.ಎಸ್. ರಾಘವೇಂದ್ರ ರಾವ್, ರಾಜಶೇಖರ್, ಶೂದ್ರ ಶ್ರೀನಿವಾಸ್, ಎಂ. ಪ್ರಸನ್ನಕುಮಾರ್, ದೇವರ ಕೊಂಡಾ ರೆಡ್ಡಿ, ಕೋದಂಡರಾಮಶೆಟ್ಟಿ, ಚಂದ್ರಮೋಹನ್, ಡಿ.ವಿ. ಕೃಷ್ಣಮೂರ್ತಿ, ಶಿವಣ್ಣ, ಎಸ್.ಜಿ. ಸಿದ್ಧರಾಮಯ್ಯ, ಕೆ.ಆರ್. ಗಣೇಶ್, ವೆಂಕಟರಾಜು, ನಾಗರಾಜ ಶೆಟ್ಟಿ, ಬಷೀರ್, ದೊರಂಗೌ, ಆರ್. ಶೇಷಶಾಸ್ತ್ರಿ, ಎಚ್.ಎಸ್. ಮಾಧವರಾವ್, ಹಿರೇಮಠ್, ಬಿ.ಪಿ. ವೀರೇಂದ್ರ ಕುಮಾರ್ ಹೀಗೆ ಇನ್ನೂ ಅನೇಕರು ಪಿ.ಪಿ. ಸದಸ್ಯರು. ಪಿ.ಪಿ. ಸಂಘ ಪುಸ್ತಕ ಪ್ರಕಟಣಾ ಕಾರ್ಯದಲ್ಲೂ ಭಾಗಿಯಾದುದುಂಟು. ಇಲ್ಲಿ ಹೊಸಕವಿಗಳು ಬೆಳಕು ಕಂಡಿದ್ದಾರೆ. ಅನುಭವಿ ಲೇಖಕರ ಕೃತಿಗಳು ಅನಾವರಣಗೊಂಡಿವೆ. ಆಧುನಿಕ ಸಾಹಿತ್ಯ ಸಂದರ್ಭದಲ್ಲಿ ಅಂತರಗಂಗೆಯಂತೆ ಗುಪ್ತಗಾಮಿನಿಯಾಗಿಯೇ ಸಾಗಿಬರುತ್ತಿರುವ ಪಿ.ಪಿ. ಸಂಘಟನೆಯ ಅಧ್ವರ್ಯು, ಸಂಸ್ಥಾಪಕ ಅಧ್ಯಕ್ಷ, ಆಜೀವ ಅಧ್ಯಕ್ಷ ಒಬ್ಬರಿದ್ದಾರೆ. ಇವರು ಅನ್‌ಲಿಮಿಟೆಡ್ ಪಿ.ಪಿ. ಸಂಘದ ಫೀಲ್ಡ್ ಮಾರ್ಷಲ್. ಇವರ ಹೆಸರು ಪ್ರೊ. ಜಿ. ಶ್ರೀನಿವಾಸರಾಜು.

### ಮೊಬೈಲ್ ಗೆಜೆಟೆಡ್ ಆಫೀಸು

೧೯೭೧ರ ಕಾಲಮಾನದ ಸಂದರ್ಭ. ಪಿ.ಪಿ.ಗಳು ಸಂಜೆ ಹೊತ್ತು ಸೆಂಟ್ರಲ್ ಕಾಲೇಜಿನ ಲೈಬ್ರರಿ ಎದುರಿಗೆ ಸಮಾವೇಶಗೊಳ್ಳುವ ಪರಿಪಾಠ ಇತ್ತು. ಎಂ.ಎ. ಓದುತ್ತಿರುವವರು, ಓದು ಮುಗಿಸಿ ಉದ್ಯೋಗದ ಬೇಟೆಯಲ್ಲಿ ನಿರತರಾಗಿರುವವರು, ವಿವಿಧೆಡೆ ಅಧ್ಯಾಪಕರಾಗಿ ಸೇವಾ ನಿರತರಾಗಿರುವವರು, ಸಮಾನಾಸಕ್ತರಾದ ಇನ್ನಿತರರು–ಹೀಗೆ ವೈವಿಧ್ಯಯುತ ಪಿ.ಪಿ. ಸದಸ್ಯರ ನಿತ್ಯಸಮಾವೇಶ. ಸಮಾವೇಶವೆಂದರೆ ಶಿಸ್ತಿನಿಂದ ಕುಳಿತು ಭಾಷಣಾದಿ ಕಾರ್ಯಕ್ರಮನಿರತ ಸಾಂಪ್ರದಾಯಿಕ ಸಭೆಯಲ್ಲ. ಕಲ್ಲುಬೆಂಚಿನ ಮೇಲೆ ಕುಳಿತು ಕೆಲವರ ಹರಟೆ. ಕೆಲವರು ಗಂಭೀರವಾಗಿ ಚರ್ಚೆಮಾಡುತ್ತಿದ್ದಾರೆ. ವಿವಿಧ ಕಾಲೇಜುಗಳಲ್ಲಿ ಖಾಲಿಯಿರುವ ವೇಕೆನ್ಸಿಗಳ ಬಗ್ಗೆ ಕೆಲವರು ವಿಚಾರ ಮಾಡುತ್ತಿದ್ದಾರೆ. ಮಾತು ಕತೆಗಳನ್ನು ಮಧ್ಯದಲ್ಲಿಯೇ ಬರಖಾಸ್ತು ಗೊಳಿಸಿದ ಕೆಲವರು ವಯೋಮಾನದ ಬಿಗುಮಾನವನ್ನು ಬಿಟ್ಟು ಹಸುಮಕ್ಕಳಂತೆ ಆಟೋಟಗಳಲ್ಲಿ ತೊಡಗಿದ್ದಾರೆ. ನಿಗದಿಪಡಿಸಿಕೊಂಡ ಒಂದು ಆಟವಾಡಲು ಸ್ಥಾಯಿಯಾಗಿ ನಿಂತ ಕೇಂದ್ರಬಿಂದು ವಾಗಿ ಒಂದು ಮೇಟಿಕೋಲಿನ ಅಗತ್ಯ ಬೀಳುತ್ತದೆ. ಕ್ರೀಡಾ ಸ್ಥಳದಲ್ಲೊಂದು ಕಡೆ ದೃಢಕಾಯರಾದ

ಒಬ್ಬರು ನಿಂತಿರುತ್ತಾರೆ. ಕ್ರೀಡಾ ನಿರತರು ಈ ನಿಂತಿರುವ ದೃಢಕಾಯರೇ ಮೇಟಿಕೋಲು ಎಂದು ಘೋಷಿಸಿ ಅವರ ಸುತ್ತಾ ಸುತ್ತಾಟದಲ್ಲಿ ಮಗ್ನರಾಗುತ್ತಾರೆ. ತನ್ನನ್ನು ಮೇಟಿಕೋಲು ಮಾಡಿದವರತ್ತ ಮೇಟಿಯಣ್ಣ ಹುಸಿಕೋಪ ಮಾಡಿಕೊಳ್ಳುತ್ತಾರಾದರೂ ಕಿಂಚಿತ್ತಾದರೂ ಕದಲಿದರೆ ಕೇಳಿ! ಅಘೋಷಿತವಾಗಿ ಇವರೂ ಆಟದಲ್ಲಿ ಭಾಗಿ. ಈ ಮೇಟಿಯಣ್ಣ ಮತ್ಯಾರೂ ಅಲ್ಲ, ಪಿ.ಪಿ. ಸಂಘದ ಮಾನ್ಯ ಅಧ್ಯಕ್ಷರೇ. ಇದಕ್ಕೇನನ್ನಬೇಕು? ವಿದ್ಯಾರ್ಥಿ ದೆಸೆಯೆಂಬುದು ಆಯುರ್ಮಾನದ ಸುವರ್ಣ ಕಾಲ. ಈ ಕಾಲಮಾನದ ಮನಸ್ಥಿತಿಯಿದೆಯಲ್ಲ ಅದು ಒಬ್ಬ ಕವಿ ಹೇಳುವಂತೆ "ಓಂಕಾರದ ಶಂಖನಾದಕಿಂತ ಕಿಂಚಿದೂನ". ಹಾಡು ಹಕ್ಕಿಯಂತೆ ಆನಂದವನ್ನು ಬದುಕುವ ಈ ಸ್ಥಿತಿಗೆ ಸಾಟಿಯಾದುದು ಇನ್ನೊಂದು ಇದ್ದೀತೇ? ರಾತ್ರಿ ಸಮಯ ಎಂಟೋ ಎಂಟೂವರೆಯೋ ಆದಾಗ ಯಾರಾದರೂ ಹೊತ್ತಾಯ್ತು ಎಂದು ಎಚ್ಚರಿಸಬೇಕು. ಯಾಕೆಂದರೆ ಇವರೆಲ್ಲಾ ಕಾಲಾತೀತರು. ನಂತರ ಸದಸ್ಯರ ಕೆಲಸಕಾರ್ಯಗಳ ಕುರಿತ ಚರ್ಚೆ. ಎಲ್ಲೆಲ್ಲಿ ಉದ್ಯೋಗಗಳಿವೆ? ಯಾರ್‍ಯಾರು ಅರ್ಜಿ ಸಲ್ಲಿಸಿದ್ದಾರೆ ಮುಂತಾದ ಮಾಹಿತಿಗಳ ವಿಚಾರ ವಿನಿಮಯ. ಇಂತಹ ಅವಕಾಶಗಳ ಮಾಹಿತಿ ಪಡೆದು ಉದ್ಯೋಗಾರ್ಥಿ ಸದಸ್ಯರನೇಕರು ಅರ್ಜಿಯನ್ನು ಸಿದ್ಧಪಡಿಸುವ 'ಕಾರ್ಯಾಗಾರ'ವೂ ನಡೆಯುತ್ತಿತ್ತು. ಅರ್ಜಿಯ ಜೊತೆ ಅಂಕಪಟ್ಟಿ ಇತ್ಯಾದಿ ಪೂರಕ ಮಾಹಿತಿಯ ಪ್ರಮಾಣಪತ್ರಗಳನ್ನು ಲಗತ್ತಿಸಬೇಕಲ್ಲ. ಅವು ಪತ್ರಾಂಕಿತ ಅಧಿಕಾರಿಯಿಂದ ದೃಢೀಕರಿಸಲ್ಪಡಬೇಕು. ಅದಕ್ಕೂ ಒಂದು ಸಿದ್ಧ ವ್ಯವಸ್ಥೆ ಇತ್ತು. ಸಂಘದ ಅಧ್ಯಕ್ಷರ ಸ್ಕೂಟರೇ ಸಂಚಾರೀ ಗೆಜೆಟೆಡ್ ಆಫೀಸು. ಪಿ.ಪಿ.ಯ ಅಧ್ಯಕ್ಷರು ಸ್ಕೂಟರಿಂದ ಸೀಲುಪ್ಯಾಡುತೆಗೆದು ಅರ್ಜಿದಾರರ ದಾಖಲೆ ಪತ್ರಗಳಿಗೆ ಸೀಲು ಸಹಿ ಹಾಕಿ ದೃಢೀಕರಿಸಿ ಕೊಡುತ್ತಿದ್ದರು. ಮರುದಿನ ಅರ್ಜಿಗಳು ರವಾನೆಯಾಗುತ್ತಿದ್ದವು. ಈ ಸಂಚಾರಿ ಗೆಜೆಟೆಡ್ ಆಫೀಸಿನ ಆಶ್ರಯದಲ್ಲಿ ಸಿದ್ಧಗೊಂಡ ಅಸಂಖ್ಯಾತ ಅರ್ಜಿಗಳು ಫಲಪ್ರದವಾಗಿವೆ. ಆಪ್ತೇಷ್ಟರ ಕಷ್ಟ-ಸುಖಗಳಲ್ಲಿ ಭಾಗಿಯಾಗುವ ಮಾರ್ಗದರ್ಶನ ನೀಡುವ ಆತ್ಮೀಯವೂ ಸೌಹಾರ್ದಯುತವೂ ಆದ ಬಾಂಧವ್ಯದ ಸನ್ನಿವೇಶ ಇಲ್ಲಿದೆಯೆಂಬುದು ಸಂಗತಿ. ಈ ಸ್ಥಿತಿಗತಿಯ ಸಂಪರ್ಕಸೇತು ಪಿ.ಪಿ. ಸಂಘದ ಹೈಕಮ್ಯಾಂಡ್ ಪ್ರೊ. ಚಿ. ಶ್ರೀನಿವಾಸರಾಜು.

ಪ್ರೊ. ಚಿ. ಶ್ರೀನಿವಾಸರಾಜೂರವರಂತಹ ಹಿತಕಾರೀ ಬಂಧುವಿನ ಸಂಪರ್ಕ ಪಡೆದದ್ದು ಹೆಮ್ಮೆಯ ಹಾಗೂ ಸುದೈವದ ಸಂಗತಿ ಎಂಬ ಭಾವನೆ ಇವರ ಬಳಗದ ಎಲ್ಲರದೂ, ನನ್ನದೂ.



# ಶ್ರಾವಣದ ಮಾತುಗಳೊಂದಿಗೆ ಎದುರಾದ ಕೃಷಿಕ

● *ಕೆ.ಆರ್. ಸಿದ್ಧಗಂಗಮ್ಮ*

ಎಂಬತ್ತರ ದಶಕವದು. ಎಚ್.ಎಸ್. ಶಿವಪ್ರಕಾಶರ 'ಮಳೆ ಬಿದ್ದ ನೆಲದಲ್ಲಿ' ಕವನ ಸಂಕಲನದ ಬಿಡುಗಡೆಯ ಸಮಾರಂಭ. ಹಬ್ಬದ ಸಂಭ್ರಮ. ಯಾರೋ ಹೂಗುಚ್ಛ ತರುತ್ತಿದ್ದಾರೆ. ಮತ್ತಿನ್ಯಾರೋ ಟೇಬಲ್‌ಕ್ಲಾತ್ ಸರಿಪಡಿಸುತ್ತಿದ್ದಾರೆ. ಯಾರನ್ನೋ ತೋರಿಸಿ 'ಇವರೇ ಇವರೇ' ಎನ್ನುತ್ತಿದ್ದಾರೆ. 'ಇದ್ದಕ್ಕೆಲ್ಲ ಕಾರಣ ಈ ಬಿಳಿಯ ಶರ್ಟ್ ಹಾಕಿದ್ದಾರಲ್ಲ, ಜೋಳಿಗೆ ಒಂದು ನೇತು ಹಾಕ್ಕೊಂಡಿದ್ದಾರಲ್ಲ ಅವರೇ' ಎಂದು ಮತ್ಯಾರದೋ ಅಂಬೋಣ. 'ಕ್ರೈಸ್ತ ಕಾಲೇಜಿನ ಕನ್ನಡ ಸಂಘದ ಅಧ್ಯಕ್ಷರು ಇವರಂತೆ'. ಅಧ್ಯಕ್ಷರೇ! ಕಾರ್ಯದರ್ಶಿಗಳೇ! ಮತ್ತೆ ಎಲ್ಲ.....' ಮತ್ತಿನ್ಯಾರೋ ಹೇಳುತ್ತಿದ್ದಾರೆ. ಈ ಕಾರಣಪುರುಷ ಮಾತ್ರ ದೂರದಿಂದ ಕಣ್ಣಲ್ಲೇ ವೇದಿಕೆ ನೋಡಿ ಹತ್ತಿರದಲ್ಲಿದ್ದ ಒಬ್ಬ ಹುಡುಗನಿಗೆ ಮುಗಳ್ನಗುತ್ತ, ಮೆಚ್ಚಿಗೆ ಸೂಚಿಸುತ್ತ ಪುಟ್ಟ ಸಲಹೆಯೊಂದನ್ನು ನೀಡಿರಬೇಕು. ಆ ಹುಡುಗ ವೇದಿಕೆಯ ಬಳಿ ಹೋಗಿ ಸುದ್ದಿ ರವಾನಿಸಿದ. ಕಾರ್ಯಕ್ರಮ ಪ್ರಾರಂಭವಾಯ್ತು.

ಕನ್ನಡ ಸಾಹಿತ್ಯ ಜಗತ್ತನ್ನು ಬೆರಗುಗಣ್ಣುಗಳಿಂದ ನೋಡುತ್ತಿದ್ದ ನನಗೆ ಈ ಮನುಷ್ಯನನ್ನು ಅಲ್ಲಿಗೆ ಬಂದ ಹಿರಿಯ-ಕಿರಿಯ ಸಾಹಿತಿಗಳೆಲ್ಲ ಮಾತನಾಡಿಸುತ್ತಿದ್ದುದ್ದಷ್ಟೇ ಕಾಣಿಸುತ್ತಿತ್ತು. ಇವರ ಮುಖದಲ್ಲಿನ ಮಂದಹಾಸ, ಕಣ್ಣುಗಳಲ್ಲಿ ಹರಿಯುತ್ತಿದ್ದ ಪ್ರೀತಿಯ ನದಿ. ಆ ಕಾರ್ಯಕ್ರಮಕ್ಕೇ ಒಂದು ಮೆರಗು ನೀಡುತ್ತಿತ್ತು. ಈ ಪ್ರೀತಿಯ ನದಿಯಲ್ಲಿ ತೊಯ್ಸಿಕೊಳ್ಳುವ ತಹತಹ ಅಲ್ಲಿದ್ದವರ ಮಾತುಗಳಲ್ಲಿ ಮನದಲ್ಲಿ! ಆ ನದಿಯ ನೀರಿಗೆ ಕೈ ಹಾಕಿ ಬೊಗಸೆಯಾದರೂ ನೀರು ಸಿಕ್ಕಲೆಂದು ಕೈ ಚಾಚಿದವರು ಎಷ್ಟೊಂದು ಮಂದಿ ಅಲ್ಲಿದ್ದರು. ಬಾಯಾರಿದವರಿಗೆ ನೀರಿಗೆ ನೀರಲ್ಲದೆ ಬೇರೇನಿದೆ ಸಮ.

ಬೆರಳ ಸಂದಿಯ ಬದುಕನ್ನು ಹಿಡಿದಿಟ್ಟ ಭಾಗ್ಯಲಕ್ಷ್ಮಿ ತನ್ನ ಮೊದಲ ಸಂಕಲನವನ್ನು ಕೊಟ್ಟಿದ್ದು ಈ ಸಂಘದ ಪ್ರಕಟಣೆಗೆ.

ಶಿವಪ್ರಕಾಶರಂತಹ ಕವಿಗಳು ತಮ್ಮ ಎರಡನೆಯ ಕಾವ್ಯ ಸಂಕಲನವನ್ನು ಕೊಟ್ಟದ್ದು ಈ ಹಿರಿಯರ ಮಡಿಲಿಗೆ. ಕಿರಿಯರು-ಹಿರಿಯರು ಎಂಬ ವ್ಯತ್ಯಾಸವಿಲ್ಲದೇ ತನ್ನ ಜೊಗಸೆಗೆ ಸಿಕ್ಕ ಬೀಜಗಳನ್ನು ಅತ್ಯಂತ ಶ್ರದ್ಧೆಯಿಂದ ಬಿತ್ತುವ ಅಪ್ಪಟ ಕನ್ನಡ ರೈತ ಚಿ. ಶ್ರೀನಿವಾಸರಾಜು ಅವರಂತಹವರು ಕನ್ನಡ ತಾಯಿಯ ಚೊಚ್ಚಲು ಮಕ್ಕಳು ಎಂದರೆ ಸರಿಹೋಗಬಹುದೇ.

ಮೊನ್ನೆ ಹಂಪಿಯಲ್ಲಿ ಸ್ನೇಹಿತರಾದ ನಾರಾಯಣಸ್ವಾಮಿಯವರು ಈ ರೈತನ ಬಗ್ಗೆ ಹಾಡಿದಾಗ, ಟೊಳ್ಳುಗಟ್ಟಿ ಕಾಳುಗಳೆನ್ನದೆ ಶ್ರದ್ಧೆಯಿಂದ ಬಿತ್ತುವ ಬೆಳೆಯುವ ರೈತನ ಚಿತ್ರ ಇನ್ನಷ್ಟು ದಟ್ಟವಾಯಿತು. ಅವರ ಹಾಡಿಗೆ ನಾನೆರೆಡು ಸಾಲು ಸೇರಿಸಲೇ ಎನ್ನುವ ತಹತಹ. ಹೇಳಲಾರದೇ ಗಂಟಲಲ್ಲೇ ಉಳಿದವು ನನ್ನ ಎರಡು ಸಾಲುಗಳು.

ಕುಪ್ಪಳ್ಳಿಯಲ್ಲಿ ಕಾವ್ಯ ಶಿಬಿರ ನಡೆದಿತ್ತು. ಮಲೆನಾಡಿನ ಹಸುರು ಪರಿಸರ ಕವಿತೆಗಳ ಹುಟ್ಟಿಗೆ ಹದವಾದ ನೆಲ. ಪಕ್ಕದಲ್ಲಿದ್ದ ಗೀತನ ಬಳಿ ಮಾತು ಎಲ್ಲೆಲ್ಲೋ ಹೋಗಿ ಹಾಡು ಇನ್ನೆಲ್ಲೋ ಮುಟ್ಟಿ, ಚಿ. ಶ್ರೀನಿವಾಸರಾಜು ಅವರ ಹೆಸರು ನೆನಪಾಯಿತು. ಇಂತಹವರೂ ಇರಬೇಕು ಕಾವ್ಯ ಜಗತ್ತಿನಲ್ಲಿ. ಬೀಜ ಹಾಕುವುದಷ್ಟೇ ಅಲ್ಲ ಕಾಲಕಾಲಕ್ಕೆ ಬೇಕಾದ ನೀರು ಗೊಬ್ಬರಗಳನ್ನು ನೀಡುವ, ಸಿಕ್ಕಗೊಬ್ಬರ ಗಾಳಿ-ಬೆಳಕುಗಳಿಂದ ಹುಲುಸಾಗಿ ಬೆಳೆದ ಬೆಳೆಯನ್ನು ನೋಡಿ ಜೀವನದ ಸಂತೃಪ್ತಿ ಕಾಣುವ ಮನಸ್ಸುಗಳು ಕನ್ನಡ ನೆಲದಲ್ಲಿ ಹೆಚ್ಚಬೇಕು ಎನ್ನುತ್ತಿದೆ. ಗೆಳತಿ ಗೀತ ಅಂದಳು : 'ನಿಮಗೇನು ಅನ್ನಿಸುತ್ತಿದೆಯೋ ಅದ್ನ ಮೇಷ್ಟ್ರ ಬಗ್ಗೆ ಬರೆದು ಬಿಡಿ. ನಾವೊಂದು ರೈಲಿನಲ್ಲಿ ಹೊರಟಿದ್ದೇವೆ, ಈಗಾಗಲೇ ರೈಲು ಹೊರಟಿದೆ. ಹತ್ತುವುದು ಬಿಡುವುದು ಯೋಚಿಸಲೂ ಪುರುಸೊತ್ತಿಲ್ಲ. ನೀವೇನಾದರೂ ಬರೆದು ಬೇಗ ಕೊಟ್ಟರೆ ಪತ್ರ ರವಾನಿಸುವುದು ನನ್ನ ಕೆಲಸ' ಅಂದಳು.

ನನ್ನಲ್ಲೇ ಉಳಿದು ನನ್ನನ್ನೇ ಕದಡಿದ ಘಟನೆಯನ್ನು ಬಿಚ್ಚುತ್ತಾ ಹೋದೆ. 'ಶ್ರಾವಣದ ಮಾತುಗಳು' ಎಂಬ ನನ್ನ ಕವನ ಸಂಕಲನದ ಬಿಡುಗಡೆಗೆ ಚಿ॥ ಶ್ರೀನಿವಾಸರಾಜು ಅವರೇ ಬರಬೇಕು ಅಂತ ಆಳದಲ್ಲೆಲ್ಲೋ ಅನ್ನಿಸುತ್ತಿತ್ತು. ಎಲ್ಲಿದ್ದಾರೋ? ಏನೋ ಗೊತ್ತಿಲ್ಲ. ಅವರು ಬರಬಹುದೇ? ಗೊತ್ತು ಪರಿಚಯ ಇಲ್ಲ, ನಾನವರ ಶಿಷ್ಯಳೂ ಅಲ್ಲ, ಪರಿಚಿತಳೂ ಅಲ್ಲ. ರಾಶಿರಾಶಿಯಾಗಿ ಪ್ರಕಟವಾಗುತ್ತಿರುವ ಕನ್ನಡ ಕವಿತೆಗಳಲ್ಲಿ ಎಲ್ಲೋ ಮೂಲೆಯಲ್ಲಿ ಪ್ರಕಟವಾದ ನನ್ನ ಎರಡು ಪದ್ಯಗಳನ್ನು ಈ ಹಿರಿಯರು ಓದಿರುತ್ತಾರೆ ಎಂದು ಯಾವ ನಂಬಿಕೆ? ಆ ನಂಬಿಕೆಯಿಂದ ೫೦೦ ಕಿ.ಮೀ. ದಾಟಿ ಧಾರವಾಡಕ್ಕೆ ಬಂದು ನನ್ನ ಕವನ ಸಂಕಲನಕ್ಕೆ ಸೂಲಗಿತ್ತಿಯಾಗುತ್ತಾರೆ ಎಂದು ಭಾವಿಸುವುದು ಭ್ರಮೆಯಲ್ಲವೇ! ಸ್ನೇಹಿತರ ಮುಂದೆ ನನ್ನೆಲ್ಲ ಅನುಮಾನಗಳನ್ನು ತೋಡಿಕೊಂಡೆ. ಪ್ರಯತ್ನಿಸುವ ಎಂದು ಶೇಷಾದ್ರಿಪುರಂ ಕಾಲೇಜಿನ ನನ್ನ ಹಳೆಯ ಸ್ನೇಹಿತರ ತಂಡವೊಂದು ಚಿ॥ ಶ್ರೀನಿವಾಸರಾಜು ಅವರ ಮನೆಗೆ ಲಗ್ಗೆ ಹಾಕಿತು. ನಾನು ಎಲ್ಲೋ ದೂರದಲ್ಲಿ ನಿಂತಿದ್ದೆ. ಅವರ ಗಮನ ಬೀಳಲು ಸಾಧ್ಯವೇ ಇರದಷ್ಟು ದೂರ! ಎಲ್ಲ ಕೇಳಿದ 'ರಾಜು ಸರ್' ನಗುತ್ತಾ ಒಪ್ಪಿಗೆ ಸೂಚಿಸಿದರು. ಕವನ ಸಂಕಲನವನ್ನು ಮನೆಗೇ ತಲುಪಿಸಲು ವಿಳಾಸ ಕೊಟ್ಟರು.

ಈ ಹಿರಿಯರು ಒಪ್ಪಿದ್ದೇ ಸಂಭ್ರಮ. ಕಾರ್ಯಕ್ರಮಕ್ಕೆ ಎಲ್ಲ ಪದ್ಧತಿಗಳೂ ನಡೆಯುತ್ತಿವೆ.

ನಮ್ಮ ಪ್ರಕಾಶಕರು ಪುಸ್ತಕಗಳನ್ನು ಕೊರಿಯರ್ ಕಳುಹಿಸಿದರು. ೫೦೦ ಕಿ.ಮಿ.ನಿಂದ ಫೋನ್ ಬಂತು. 'ಕವನ ಸಂಕಲನ ಬಂದಿಲ್ಲ ಕಾರ್ಯಕ್ರಮಕ್ಕೆ ಇನ್ನು ಒಂದು ವಾರವಿದೆಯಷ್ಟೇ'. 'ಮತ್ತೊಂದು ಸಂಕಲನ ಕಳುಹಿಸಿ, ರಾಜು ಸರ್‌ಗೆ ಸಂಕಲನ ಸಿಕ್ಕಿಲ್ಲ' ಪ್ರಕಾಶಕರಿಗೆ ನನ್ನ ಕಳಕಳಿಯ ಬೇಡಿಕೆ. 'ಈಗಾಗಲೇ ಪೋಸ್ಟ್‌ನಲ್ಲಿ ಕಳಿಸಿದ್ದೀವಿ ಮೇಡಂ, ಆದರೂ ನಿಮ್ಮ ಸಮಾಧಾನಕ್ಕೆ ಮತ್ತೊಮ್ಮೆ ಕಳಿಸುವೆ ಕೊರಿಯರ್‌ನಲ್ಲಿ' ಎಂದವರು ಧಾರವಾಡದ ಮಹಿಳಾ ಸಾಹಿತ್ಯಿಕದ ಪ್ರಕಾಶಕಿ. ಮತ್ತೆರಡು ದಿನಗಳು ದಾಟಿದವು. 'ಸರ್‌ಗೆ ಪುಸ್ತಕವೇ ತಲುಪಿಲ್ಲ' ಮತ್ತೆ ಫೋನ್‌ಗಳ ಮೇಲೆ ಫೋನ್–ಬೆಂಗಳೂರಿನ ಸ್ನೇಹಿತರದು. ಧ್ವನಿ ಒಂದೇ 'ಪುಸ್ತಕ ತಲುಪಿಲ್ಲ' ಮೇಷ್ಟ್ರು ಬೆಂಗಳೂರನ್ನು ಬಿಟ್ಟು ಧಾರವಾಡಕ್ಕೆ ರೈಲು ಹತ್ತುವ ದಿನವೂ ಪುಸ್ತಕ ತಲುಪಿಲ್ಲ.

ಯಾವ ಪುಸ್ತಕದ ಬಿಡುಗಡೆಗೆ ಬರಬೇಕೋ, ಯಾವ ಪುಸ್ತಕದ ಬಗ್ಗೆ ಎರಡು ಮಾತು ಹೇಳಬೇಕೋ, ಅದೇ ತಲುಪಿಲ್ಲ ಇನ್ನು ಹೋಗುವುದಾದರೂ ಹೇಗೆ? ಬಿಡುವುದಾದರೂ ಹೇಗೆ?

ಕಾರ್ಯಕ್ರಮಕ್ಕೆ ಒಪ್ಪಿಸಿದ ಸ್ನೇಹಿತರ ಕಸಿವಿಸಿ. ಮೇಷ್ಟ್ರಿಗೆ ಏನು ಹೇಳುವುದು? ಶಿಸ್ತಿನ ಜೀವನದ, ಬೇರೆಯವರನ್ನು ನೋಯಿಸದೆ ತನ್ನ ಬದುಕನ್ನು ಅತ್ಯಂತ ನಾಜೂಕಿನಿಂದ ಕಟ್ಟಿ ಕೊಂಡು ಸಾಧ್ಯವಾದಷ್ಟೂ ಸುತ್ತಲಿನ ಪರಿಸರಕ್ಕೆ ಸಂತೋಷ–ಪ್ರೀತಿಗಳನ್ನೇ ನೀಡುವ ಜೀವಕ್ಕೆ ಎಂತಹ ಸಂದಿಗ್ಧತೆ. ಈ ಸ್ಥಿತಿಗೆ ನಾವು ಕಾರಣರಾದೆವಲ್ಲ ಎಂಬ ನೋವು ಸ್ನೇಹಿತರಿಗೆ.

'ಬೆಳಿಗ್ಗೆ ಧಾರವಾಡಕ್ಕೆ ಬಂದ ತಕ್ಷಣವೇ ಅವರ ಹೋಟೆಲ್ ರೂಂನಲ್ಲಿ ಕಣ್ಣಿಗೆ ಬೀಳುವ ಹಾಗೆ ಒಂದು ಪ್ರತಿಯನ್ನು ಇಟ್ಟುಬಿಡೋಣ' ಎಂಬ ಪ್ರಕಾಶಕರ ಸಮಾಧಾನ–'ಇರುವುದು ೨೯ ಕವಿತೆ ಓದುವುದು ಎಷ್ಟು ಹೊತ್ತು'–ಸೇರಿಸಿದ ಮಾತುಗಳು. 'ಬೆಂಗಳೂರೇನು ದೂರವೇ! ರಾತ್ರಿ ಯಾರನ್ನಾದರೂ ಕಳಿಸಿದ್ದರೇ ಬೆಳಗ್ಗೆ ಅವರ ಕೈಯಲ್ಲಿಟ್ಟು ವಾಪಸ್ ಬೆಳಗಾವಿ ಮುಟ್ಟ ಬಹುದಿತ್ತು' ಎಂದರೊಬ್ಬರು. 'ಛೆ! ಒಬ್ಬ ಹಿರಿಯ ಸಾಹಿತಿ–ಸಹೃದಯರಿಗೆ ಇಂತಹ ಅಗೌರವವೇ! ಈ ರೀತಿಯ ನಡಾವಳಿಗೆ ಕ್ಷಮೆಯೇ ಇಲ್ಲ'– ಎಂದರು ಇನ್ನೊಬ್ಬರು. ಹೀಗಾಗಬಾರದಿತ್ತು, ನಿಜ ತಪ್ಪು ನನ್ನದೇ.

ರಾಜು ಸರ್ ಅವರದು ದೊಡ್ಡ ಮನಸ್ಸು. ಸ್ನೇಹಿತರ ಒತ್ತಾಯಕ್ಕೆ ಕಟ್ಟುಬಿದ್ದರು. ಬೀಜ ಟೊಳ್ಳೋ–ಗಟ್ಟಿಯೋ ಎಂದು ಯೋಚಿಸಲಿಲ್ಲ ಈ ರೈತ. ತನ್ನ ಕೈಲಾದ ನೀರು ಗೊಬ್ಬರ ಹಾಕುವುದಷ್ಟೇ ತನ್ನ ಕೆಲಸ ಎಂದರು. ಮುಂದಿನದು ಅವರವರ ಪುಣ್ಯ ಎಂದರು ಸಾತ್ವಿಕ ಜೀವಿ. ನನ್ನ ಜೀವನದಲ್ಲೇ ಇದೊಂದು ವಿಚಿತ್ರ ಸಂದರ್ಭ ಎನ್ನುತ್ತಲೇ ಧಾರವಾಡದಲ್ಲಿ ಇಳಿದರು ಅವರು. ಸಮಯ ಬೆಳಗಿನ ೮ ಘಂಟೆ ಇರಬಹುದು. ರಾತ್ರಿ ಎಲ್ಲ ಪ್ರಯಾಣದ ಸುಸ್ತು. ಸ್ವಲ್ಪ ಅಡ್ಡಾಗಲೇ! ಸಂಜೆಯ ಕಾರ್ಯಕ್ರಮಕ್ಕೆ ತಯಾರಿ!! ಕಣ್ಣೆದುರು ಪುಸ್ತಕ.

ಧಾರವಾಡದ ವಿದ್ಯಾವರ್ಧಕ ಸಂಘಕ್ಕೆ ತನ್ನದೇ ವರ್ಚಸ್ಸಿದೆ. ಉತ್ತರ ಕರ್ನಾಟಕದ ಕನ್ನಡಿಗರು ಕಟ್ಟಿ ಬೆಳಸಿದ ಈ ಸಂಘ, ಅಂದಿನಿಂದ ಈ ತನಕ ಬೆಳೆಯುತ್ತಲೇ ಇರುವ ಕನ್ನಡ ಬಳಗ. ಕನ್ನಡ ನವೋದಯದ ಕಹಳೆಯನ್ನು ತೀವ್ರವಾಗಿ ಧ್ವನಿಸಿದ ಕ್ರಿಯಾಶೀಲ ಗುಂಪಿನ ನೆಲೆ ಆ ಸಂಘ. ರಾಜು ಸರ್ ಕಾರ್ಯಕ್ರಮಕ್ಕೆ ಬಂದರು. ಪುಸ್ತಕವನ್ನು ಸಕಾಲಕ್ಕೆ

ತಲುಪಿಸದ ದೊಡ್ಡ ತಪ್ಪಿನ ಹೊಣೆಗಾರಿಕೆ ಹೊತ್ತ ನಾನು ಏನು ಹೇಳುವುದು? 'ಕ್ಷಮಿಸಿ' ಎಂಬ ಅಕ್ಷರಗಳು ಹೇಳಬೇಕಾದದ್ದನ್ನೆಲ್ಲ ಹೇಳಿಬಿಡಲು ಶಕ್ತವೇ-ಭಾಷೆಗೆ. ಶಬ್ದಕ್ಕೆ ಹೇಳ ಬೇಕಾದದ್ದನ್ನೆಲ್ಲ ಹೇಳುವ ಶಕ್ತಿ ಇರಲು ಸಾಧ್ಯವಾಗಿದ್ದಿದ್ದರೆ!!

ಸಭೆಯಲ್ಲಿ ರಾಜು ಸರ್ ಹೇಳಿದರು 'ಏನೋ ಕಾರಣಕ್ಕೆ ನನಗೆ ಪುಸ್ತಕ ಇಂದಷ್ಟೇ ಸಿಕ್ಕಿದೆ. ಯಾವುದೇ ಪುಸ್ತಕವನ್ನು ಒಂದು ಅಥವಾ ಎರಡು ಓದಿಗೆ ವಿಮರ್ಶೆ ಮಾಡುವುದು ಸರಿಯಲ್ಲ. ಆದರೆ ಈ ಸಂಕಲನದ ಬಗ್ಗೆ ನನ್ನ ಓದಿಗೆ ಸಿಲುಕಿದ ಒಂದೆರಡು ವಿಚಾರಗಳನ್ನು ನಿಮ್ಮೆದುರು ಹಂಚಿಕೊಳ್ಳುತ್ತಿದ್ದೇನೆ' ಎನ್ನುತ್ತಾ ೪೫ ನಿಮಿಷ ನಿರರ್ಗಳವಾಗಿ ಮಾತನಾಡಿದರು.

ಯಾವುದೇ ಕಾವ್ಯದ ಬಗ್ಗೆ ನಿಜವಾದ ಪ್ರಾಮಾಣಿಕ ಪ್ರೀತಿ ಕಾಳಜಿಗಳು ಆ ವ್ಯಕ್ತಿಯ ಮಾತುಗಳಲ್ಲಿದ್ದವು. ನಾನು ತೀರಾ ಕುಬ್ಜಳಾದೆ. ವಿದ್ಯಾವರ್ಧಕ ಸಂಘದಲ್ಲಿ ಮರುದಿನ ಮತ್ತೊಂದು ಸಾಹಿತ್ಯಿಕ ಕಾರ್ಯಕ್ರಮವಿತ್ತು. ಚಿ॥ ಶ್ರೀನಿವಾಸರಾಜು ಅವರಿಗೆ ಅದರಲ್ಲಿ ಪಾಲ್ಗೊಳ್ಳಬೇಕೆಂದು ಆಸೆಯಾಯಿತು. ತಾವು ಇನ್ನೊಂದು ದಿವಸ ಧಾರವಾಡದಲ್ಲಿ ಇರುವ ಆಸೆ ವ್ಯಕ್ತಪಡಿಸಿದರು. ನಾವು ಅಂದೇ ಬೆಳಗಾವಿಗೆ ವಾಪಸ್ಸಾಗಬೇಕಿತ್ತು. ಮೇಷ್ಟ್ರಿಗೆ ನಮನಗಳನ್ನು ಹೇಳಲು ಹೋಟೆಲ್‌ಗೆ ಹೋದೆವು. 'ಧನ್ಯವಾದಗಳನ್ನು' ಬಿಟ್ಟು ಹೇಳಲು-ಕೇಳಲು ನನ್ನಲ್ಲಿ ಮತ್ತೇನಿತ್ತು?

ಬೆಂಗಳೂರಿಗೆ ಹಿಂತಿರುಗಿದ ರಾಜು ಸರ್ ನನಗೆ ಉಡುಗೊರೆಯಾಗಿ 'ಹೊಸತು' ಸಂಚಿಕೆಗೆ ಎರಡು ವರ್ಷದ ಸಬ್‌ಸ್ಕ್ರಿಪ್ಶನ್ ಮಾಡಿಸಿದರು. ಪ್ರತಿ ತಿಂಗಳು 'ಹೊಸತು' ಬರುತ್ತಲೇ ಇತ್ತು. ಮಧ್ಯ ಮಧ್ಯವಂತೂ ತಾವು ಓದಿದ ಒಳ್ಳೆಯ ಪುಸ್ತಕಗಳನ್ನು ನನಗೆ ಓದಲು ಕಳಿಸುತ್ತಲೇ ಬಂದಿದ್ದಾರೆ. ಈ ರೈತನಿಗೆ ಈ ಸಾಹಿತ್ಯ-ಕಾವ್ಯದ ಪ್ರೀತಿ ರಕ್ತದಲ್ಲೇ ಹರಿದಿದೆ. ಸಹಜ ಬದುಕಿನ ಕ್ರಮವಾಗಿದೆ. ನಿಸ್ವಾರ್ಥದಿಂದ ಭೂಮಿಯನ್ನು ಹದ ಮಾಡಲು ನಿರಂತನವಾಗಿ ತನ್ನದೇ ಆದ ರೀತಿಯಲ್ಲಿ ಪ್ರಯತ್ನಿಸುತ್ತಲೇ ಇರುವ ಈ ಚೊಚ್ಚಲು ಮಗನಿಗೆ ಶಬ್ದಗಳನ್ನು ಮೀರಿದ ಯಾವ ಭಾಷೆಯಲ್ಲಿ ಕೃತಜ್ಞತೆಗಳನ್ನು ಹೇಳುವುದು?

❑

# ಸದ್ದಿಲ್ಲದ ಸಾಹಿತ್ಯದ ನಿರಂತರ ರೂವಾರಿ

● ಎಚ್.ಎಸ್. ಶಿವಪ್ರಕಾಶ್

ಸುಮಾರು ಕಳೆದ ಮೂವತ್ತೈದು ವರ್ಷಗಳಲ್ಲಿ ಕನ್ನಡ ಸಾಹಿತ್ಯದಲ್ಲಿ ಎದ್ದವರೆಷ್ಟೋ, ಬಿದ್ದವರೆಷ್ಟೋ. ಪಂಥಗಳು ಬಂದಿವೆ, ಹೋಗಿವೆ. ಹಳೆಯ ಪ್ರತಿಭೆಗಳಲ್ಲಿ ಕೆಲವು ಮರುಹುಟ್ಟು ಪಡೆದಿವೆ. ನವಪ್ರತಿಭೆಗಳಲ್ಲಿ ಹಲವು ಮರಗಟ್ಟಿಹೋಗಿವೆ. ಈ ಎಲ್ಲ ಅನಿರೀಕ್ಷಿತ ಮತ್ತು ಬಹುಮಟ್ಟಿಗೆ ದಾಖಲಿತ ಇತಿಹಾಸದಲ್ಲಿ ಸದಾ ಸದ್ದಿರದೆ ಪದವಿಗಳನ್ನು ಬಯಸದೆ, ಪ್ರತಿಭೆ ಎಲ್ಲೆಲ್ಲಿ ಕಂಡಿತೋ ಅಲ್ಲೆಲ್ಲ ಅದನ್ನು ಹೊರಗೆ ತಂದು, ಜಗಕ್ಕೆ ಪರಿಚಯಿಸುವ ಸಾಹಿತ್ಯದ ಮೀಸಲು ಸೇವೆಯನ್ನು ಸದಾ ಮಾಡುತ್ತ ಬಂದ ಹಿರಿಯ ಮಿತ್ರ ಶ್ರೀನಿವಾಸ ರಾಜು ಅವರ ಸಾಧನೆ ಅತ್ಯಂತ ಅಪರೂಪವಾದ್ದು, ಅನುಪಮವಾದದ್ದು.

ಅಂದರೆ ಶ್ರೀನಿವಾಸರಾಜು ಅವರು ಕೇವಲ ಪ್ರಕಾಶಕರಲ್ಲ. ಅವರು ಸ್ವತಃ ಒಬ್ಬ ಉತ್ತಮ ಬರಹಗಾರರು. ಸ್ವಂತ ಕಾವ್ಯ ಮತ್ತು ನಾಟಕ ರಚನೆ ಮಾಡಿದ್ದಾರೆ. ಕನ್ನಡದಲ್ಲಿ ಮೊಟ್ಟ ಮೊದಲ ಬಾರಿಗೆ ಮೂಕ ನಾಟಕಗಳನ್ನು ಬರೆದರು. ಅವರ ನಾಟಕಗಳು ರಂಗದ ಮೇಲೆ ಕೂಡ ಯಶಸ್ವಿಯಾಗಿವೆ. ಅದರಲ್ಲೂ ಮುಖ್ಯವಾಗಿ "ಹಳಿಯ ಮೇಲಿನ ಸದ್ದು", "ನಾಳೆ ಯಾರಿಗೂ ಇಲ್ಲ" ಅನೇಕ ಪ್ರಯೋಗಗಳನ್ನು ಕಂಡಿವೆ. ಇಷ್ಟಾಗಿಯೂ ರಾಜು ಅವರು ತಮ್ಮನ್ನು ಮುಡಿಪಾಗಿಟ್ಟುಕೊಂಡದ್ದು ತಮ್ಮ ಸ್ವಂತ ಬರವಣಿಗೆಯ ಸ್ವಾರ್ಥಕ್ಕಾಗಿ ಅಲ್ಲ; ಪರರ ಪ್ರತಿಭೆಯ ಪ್ರಕಾಶನಕ್ಕೆ. ಇಷ್ಟೊಂದು ನಿಸ್ವಾರ್ಥಭಾವದಿಂದ ಪ್ರತಿಭಾವಂತ ಬರಹಗಾರರನ್ನು ಅರಸಿಕೊಂಡು ಹೋಗಿ, ಹುಡುಕಿತೆಗೆದು ಬೆಳಕಿಗೆ ತರುವ ಕಾರ್ಯವನ್ನು ಈ ಮಟ್ಟದಲ್ಲಿ ಮಾಡಿದ ಇನ್ನೊಬ್ಬರು ನನಗೆ ನೆನಪಾಗುತ್ತಿಲ್ಲ.

ವ್ಯಕ್ತಿಗತವಾಗಿ ನಾನು, ರಾಜು ಅವರಿಗೆ ತುಂಬಾ ಋಣಿ. ನಾನು ಮೊದಲು ಕವಿತೆ ಬರೆಯಲು ಶುರುಮಾಡಿದಾಗ ನನಗೆ

ಪ್ರೋತ್ಸಾಹ ಕೊಟ್ಟವರು ಇಬ್ಬರೇ : ಕಿ.ರಂ. ನಾಗರಾಜ್ ಮತ್ತು ರಾಜು. ಮಿಕ್ಕವರಿಗೆ ಆಗ ನನ್ನ ಕವಿತೆಗಳ ಬಗ್ಗೆ ಒಂದು ತರಹ ತಾತ್ಸಾರ. ಏಕೆಂದರೆ ನನ್ನ ಕವಿತೆಗಳು ಅಂದಿನ ನವ್ಯ ಮಾದರಿಯಲ್ಲಿರಲಿಲ್ಲ. ಅವುಗಳಲ್ಲಿ ಹಾವುಗಳು ಹರಿದಾಡುತ್ತಿರಲಿಲ್ಲ. ಅಂದಿನ ಪ್ರಚಲಿತ ಮತ್ತು ಪ್ರತಿಷ್ಠಿತ ಅಭಿರುಚಿಗಿಂತ ಭಿನ್ನವಾಗಿದ್ದ ಬರವಣಿಗೆಯನ್ನು ಗುರುತಿಸುವ ಸಹೃದಯತೆ ಕಿ.ರಂ. ಮತ್ತು ರಾಜು ಅವರಿಗೆ ಇತ್ತು. ನನ್ನ ಈತನಕದ ಆರು ಸಂಕಲನಗಳಲ್ಲಿ ನಾಲ್ಕನ್ನು ರಾಜು ಅವರೇ ಹೊರತಂದರು.

ಇದು ನನ್ನೊಬ್ಬನ ಕತೆಯಿಲ್ಲ. ನನ್ನ ತಲೆಮಾರಿನ ಪ್ರಸಿದ್ಧ ಬರಹಗಾರರನ್ನು ತೆಗೆದುಕೊಳ್ಳಿ. ಎಸ್.ಜಿ. ಸಿದ್ಧರಾಮಯ್ಯ, ಎನ್.ವಿ. ಭಾಗ್ಯಲಕ್ಷ್ಮಿ, ಬಿ.ಆರ್. ಲಕ್ಷ್ಮಣರಾವ್, ಟಿ.ಎಸ್. ಸೀತಾರಾಮ್, ಬಸವರಾಜ ಕಲ್ಗುಡಿ, ಕುಂ. ವೀರಭದ್ರಪ್ಪ, ಎಸ್. ಮಂಜುನಾಥ, ಡಿ.ವಿ. ರಾಜಶೇಖರ್, ಪ್ರತಿಭಾ ನಂದಕುಮಾರ್, ಈ ಎಲ್ಲರೂ ನನ್ನಷ್ಟೇ ಋಣಿಗಳು. ನಮಗಿಂತ ಕಿರಿಹರೆಯದ ಕುಶಲ ಬರಹಗಾರರಾದ ಅಬ್ದುಲ್ ರಶೀದ್, ಮೊಗಳ್ಳಿ ಗಣೇಶ್, ಎನ್.ಕೆ. ಹನುಮಂತಯ್ಯ, ಅಮರೇಶ ನುಗಡೋಣಿ, ರಹಮತ್ ತರಿಕೆರೆ, ಎಚ್. ನಾಗವೇಣಿ, ವಿಕ್ರಮ್ ವಿಸಾಜಿ, ಇತ್ಯಾದಿ ಆಗಿ ರಾಜು ಅವರ ಮೂಲಕ ಬೆಳಕು ಕಂಡವರು ಇನ್ನೂ ಅದೆಷ್ಟೋ ಜನರು. ನಮಗಿಂತ ಹಿರಿಯರಾದ ಕಿ.ರಂ. ನಾಗರಾಜ ಅವರ ಮೊಟ್ಟ ಮೊದಲನೆಯ (ಕಟ್ಟಕಡೆಯ?) ವಿಮರ್ಶಾ ಪುಸ್ತಕವನ್ನು ಹೊರ ತಂದವರು ರಾಜು ಅವರೇ. ಆ ಕೃತಿ ಕನ್ನಡ ವಿಮರ್ಶಾ ಸಾಹಿತ್ಯದಲ್ಲಿ ಅಸಾಧಾರಣವಾದ್ದು. ಅದೇ ರೀತಿ, ಶ್ರೀ ಕೆ.ವಿ. ನಾರಾಯಣ, ಡಿ.ಎನ್. ಶಂಕರಭಟ್ಟ, ರಾಘವೇಂದ್ರ ಖಾಸನೀಸ, ಎಚ್.ಎಸ್. ಬಿಳಿಗಿರಿ, ಎಚ್. ನರಸಿಂಹಯ್ಯ ಮತ್ತು ಹೆಚ್.ಎಸ್. ರಾಘವೇಂದ್ರರಾವ್ ಅವರ ಪುಸ್ತಕಗಳನ್ನು ರಾಜು ಅವರೇ ಪ್ರಕಟಿಸಿದರು.

ಇನ್ನೊಂದು ವಿಶೇಷವೆಂದರೆ ಕಳೆದ ಶತಮಾನದ ಅತ್ಯಂತ ಶ್ರೇಷ್ಠ ಕವಿಗಳಾದ ಪು.ತಿ.ನ., ರಾಮಚಂದ್ರಶರ್ಮ, ಸು.ರಂ. ಎಕ್ಕುಂಡಿ ಮತ್ತು ಗೋಪಾಲಕೃಷ್ಣ ಅಡಿಗ ಅವರ ಕೊನೆಯ ಕವನ ಸಂಕಲನಗಳನ್ನು ರಾಜು ಅವರು ಪ್ರಕಟಿಸಿದರು.

ಮೇಲ್ಕಂಡ ಪಟ್ಟಿ ರಾಜು ಅವರ ಹೃದಯ ವೈಶಾಲ್ಯದ ದರ್ಪಣ. ಅವರು ಪ್ರಕಟಿಸಿದ ಬರಹಗಾರರು ಯಾವುದೇ ಜಾತಿ, ಪಂಥ, ಗುಂಪು ಅಥವಾ ಮಠಕ್ಕೆ ಸೇರಿದವರಲ್ಲ. ಅವರೆಲ್ಲರ ನಡುವಿನ ಏಕಸೂತ್ರತೆ ಪ್ರತಿಭೆಯೊಂದೇ. ಸುಮಾರು ನೂರೈವತ್ತು ಪುಸ್ತಕಗಳನ್ನು ರಾಜು ಅವರು ಹೊರತಂದಾಗ ಸರ್ಕಾರದ ಸಹಾಯಕ್ಕೆ ಕೈಯೊಡ್ಡಲಿಲ್ಲ. ಕಾಲೇಜಿನ ಆಡಳಿತ ಮಂಡಳಿಯನ್ನು ಕೇಳಲಿಲ್ಲ; ವಿದೇಶಿ ಹಣಕ್ಕೆ ಭಿಕ್ಷೆ ಬೇಡಲಿಲ್ಲ. ಈ ಎಲ್ಲ ಪ್ರಕಟಣೆಗಳ ಆರ್ಥಿಕ ಮೂಲ ರಾಜು ಅವರ ಪ್ರತಿತಿಂಗಳ ತಮ್ಮ ಸಂಬಳದ ಶೇಕಡ ೧೦ರಷ್ಟರ ಜೊತೆಗೆ, ಎಲ್ಲೋ ಕೆಲವರು ಧಾರಾಳವಾಗಿ ಕೊಟ್ಟ ಕೆಲವು ನೂರು ರೂಗಳ ಕಾಣಿಕೆ. ಇಷ್ಟು ಕಡಿಮೆ ಹಣ ಸಂಪನ್ಮೂಲದ ಜೊತೆಗೆ ಇಚ್ಛಾಶಕ್ತಿಯ ಆತ್ಮಸಂಪನ್ಮೂಲ ಸೇರಿದರೆ, ಎಷ್ಟನ್ನು ಕಟ್ಟಬಹುದು ಎಂಬುದನ್ನು ತಮ್ಮ ಮತ್ತು ಮುಂದಿನ ತಲೆಮಾರುಗಳಿಗೆ ರಾಜು ಅವರು ಮಾಡಿ ತೋರಿಸಿದ್ದಾರೆ.

ಅವರು ಕೆಲಸ ಮಾಡುತ್ತಿದ್ದ ಕ್ರೈಸ್ಟ್ ಕಾಲೇಜ್‌ನ ಕನ್ನಡ ಸಂಘ ನಮ್ಮ ಕಾಲದ ಶ್ರೇಷ್ಠ ಸಾಹಿತ್ಯದ ಜಲಕಣ್ಣಾಯಿತು. ಇಷ್ಟರಿಂದಲೇ ತೃಪ್ತರಾಗದ ರಾಜು ಪಿ.ಪಿ. ಬಳಗ ಕಟ್ಟಿಕೊಂಡು

‘ಅಂಕಣ’ ಎಂಬ ಕಿರು ಸಾಹಿತ್ಯಿಕ ಪತ್ರಿಕೆಯನ್ನು ತಂದರು. ‘ಅಂಕಣ’ ಕಲ್ಪನೆಯಲ್ಲಿ ಕಿರಿದಾದರೂ ಗುಣದಲ್ಲಿ ಹಿರಿದು. ಅತ್ಯುತ್ತಮ ಮಟ್ಟದ ವಿಶ್ಲೇಷಣಾತ್ಮಕ ಬರವಣಿಗೆಗಳು ಅದರಲ್ಲಿ ಅಚ್ಚಾದವು.

ಇದು ರಾಜು ಅವರ ಸಾರ್ವಜನಿಕ ಬದುಕಿನ ಆಯಾಮ. ಅವರ ವೈಯಕ್ತಿಕ ಬದುಕಿನ ಆಯಾಮ ಇದಕ್ಕಿಂತಲೂ ಕಡಿಮೆ ಏನೂ ಇಲ್ಲ. ತಮ್ಮ ಸಾಹಿತ್ಯಮಿತ್ರರ ಎಲ್ಲ ಸುಖ-ದುಃಖಗಳಲ್ಲಿ ರಾಜು ಅವರು ಯಾವಾಗಲೂ ಭಾಗಿಗಳಾಗಿದ್ದಾರೆ. ಹಲವು ಪ್ರೇಮ ವಿವಾಹಗಳನ್ನು ಮಾಡಿಸಿದ್ದಾರೆ. ಕಷ್ಟದಲ್ಲಿದ್ದವರಿಗೆ ಹಣ ಸಹಾಯ ಮಾಡಿದ್ದಾರೆ. ಮನೆ ಹುಡುಕಲು ನೆರವಾಗಿದ್ದಾರೆ. ಸಾವು ನೋವುಗಳಲ್ಲಿ ಸಾಂತ್ವನ ನೀಡಿದ್ದಾರೆ. ಅಪಾಯಗಳಲ್ಲಿ ಆಸರೆ ಆಗಿದ್ದಾರೆ. ರಾಜು ಅವರ ಮಟ್ಟಿಗೆ ಸಾಹಿತ್ಯವೆಂದರೆ ಕೇವಲ ಬರವಣಿಗೆಯಲ್ಲ. ಸಾಹಿತ್ಯ ಎಂದರೆ ಒಟ್ಟಾಗಿರುವುದು, ಕೂಡಿರುವುದು. ಕಷ್ಟ ಸುಖಗಳಲ್ಲಿ ಮಿತ್ರರೊಟ್ಟಿಗೆ ಇದ್ದ ಶ್ರೀನಿವಾಸರಾಜು, ಈ ಅರ್ಥದಲ್ಲೂ ಸಾಹಿತಿಗಳು.

ರಾಜು ಅವರು ಪ್ರಚಾರದ ಬೆನ್ನು ಹತ್ತಲಿಲ್ಲ. ಪ್ರಭಾವಿಗಳಿಗೆ ಶರಣಾಗಲಿಲ್ಲ. ತಮ್ಮ ಅಚ್ಚುಮೆಚ್ಚಿನ ಕೆಲಸವನ್ನು ಅನಾದೃಷ್ಯವಾದ ನಚ್ಚುಗೆಯಿಂದ ಮಾಡುತ್ತಾ ಬಂದವರು. ಅವರಿಗೆ ಯಾವ ಪ್ರಸಿದ್ಧ ಪ್ರಶಸ್ತಿಗಳು ಬರಲಿಲ್ಲ, ಪದವಿಗಳು ದೊರಕಲಿಲ್ಲ. ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾಗಲು ಅವರು ಅತ್ಯಂತ ಯೋಗ್ಯರಾಗಿದ್ದರು. ಆದರೆ ಈ ವಿಚಾರದಲ್ಲಿ ಸರ್ಕಾರಕ್ಕೆ ಇತರ ಒತ್ತಡಗಳು ಇದ್ದವು. ಅವರು ಮಾಡಿರುವ ಒಟ್ಟು ಸೇವೆಯನ್ನು ಪರಿಗಣಿಸಿದರೆ, ಅವರಿಗೆ ಉಪಕುಲಪತಿ ಪದವಿಯೂ ಸಿಗಬಹುದಿತ್ತು, ಅದೂ ಆಗಲಿಲ್ಲ. ರಾಜು ಅವರಿಗೇನೂ ಮೊದಲಿನಿಂದ ಈ ಬಗೆಯ ಬಯಕೆಗಳು ಇರಲಿಲ್ಲ. ಆದರೆ ಸಮಾಜ ಮತ್ತು ಸರ್ಕಾರ ಇದನ್ನು ಗುರುತಿಸಬೇಕಾಗಿತ್ತು. ಆದರೆ ಅವರು ಪ್ರಕಟಿಸಿದ ಬಹಳ ಜನ ಬರಹಗಾರರಿಗೆ ಬಹುಮಾನಗಳು, ಪ್ರಶಸ್ತಿಗಳು ಬಂದಿವೆ. ಅವರು ಪ್ರಕಟಿಸಿದವರು ಉನ್ನತ ಹುದ್ದೆಗಳನ್ನು ಅಲಂಕರಿಸಿದ್ದಾರೆ. ಆದರೆ ತನ್ನಿಚ್ಛೆಯಂತೆ ತಾನು ಬದುಕಿ, ಅದರಲ್ಲಿ ಸಂಪೂರ್ಣ ಆತ್ಮತೃಪ್ತಿಯನ್ನು ರಾಜು ಅವರು ಪಡೆದಿದ್ದಾರೆ. ಇಂತಹ ಹಿರಿಯ ನಿಸ್ವಾರ್ಥಿ ಜೀವಕ್ಕೆ, ಅವರಿಗಿಂತಲೂ ಕಿರಿಯನಾದ ನಾನು ನಮ್ರನಾಗಿ ತಲೆಬಾಗುತ್ತೇನೆ. ಅವರಿಗೆ ನನ್ನ ತುಂಬು ಮನದ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಯಾಕೆಂದರೆ, ನನ್ನಲ್ಲಿಲ್ಲದ ವಿಶಾಲ ಮನೋಭಾವನೆಯನ್ನು, ಕರ್ತಾರ ಶಕ್ತಿಯನ್ನು, ಕನ್ನಡ ಸಾಹಿತ್ಯದ ಸದ್ದಿರದ, ಈ ನಿರಂತರ ರೂವಾರಿಯಲ್ಲಿ ಕಂಡಿದ್ದೇನೆ.

❑

# ಸಂಯಮದ ನೆಲೆಯಲ್ಲಿ ನಿಂತ ಕೈಮರ

● ಜಿ.ಕೆ. ರವೀಂದ್ರ ಕುಮಾರ್

ಕ್ರೈಸ್ಟ್ ಕಾಲೇಜು ಕನ್ನಡ ಸಂಘ ಏರ್ಪಡಿಸುತ್ತಿದ್ದ ಕವನ, ಪ್ರಬಂಧ ಮುಂತಾದ ಸ್ಪರ್ಧೆಗಳಲ್ಲಿ ಬಹುಮಾನ ಪಡೆದು ಅದನ್ನು ಸ್ವೀಕರಿಸಿ ಬಂದ ಅನೇಕರು ತಮ್ಮ ಸಂಭ್ರಮವನ್ನು ನನ್ನೊಂದಿಗೆ ಹಂಚಿಕೊಂಡಿದ್ದಾರೆ. ಅವರ ಬಹುಮಾನಿತ ಲೇಖನಗಳು ಪುಟ್ಟ ಪುಸ್ತಕ ರೂಪದಲ್ಲಿ ಹೊರಬಂದಾಗ ಅಮೂಲ್ಯ ಭಾವದಿಂದ ಅವುಗಳನ್ನು ನನಗೆ ನೀಡಿದ್ದಾರೆ. ಆಗೆಲ್ಲ ಅವರು ಬಹುಮಾನದ ಬಗೆಗಷ್ಟೇ ಮಾತನಾಡದೆ ಅದರ ಹಿಂದಿನ ಪ್ರೇರಣೆಯಾದ ಶ್ರೀನಿವಾಸರಾಜು ಅವರ ಬಗ್ಗೆ ನಿಲ್ಲಿಸಲು ಮನಸ್ಸಿಲ್ಲದಷ್ಟು ಮಾತನಾಡಿದ್ದಾರೆ. ಬೆಂಗಳೂರಿಗೆ ಹೊದರೆ ಸಾಕು ರಾಜು ಮೇಷ್ಟ್ರು ಕೈತುಂಬಾ ಪುಸ್ತಕಗಳನ್ನು ನೀಡಿ ಬಾಯ್ತುಂಬಾ ಮಾತನಾಡಿ ಕಳಿಸ್ತಾರೆ ಅಂತ ಹೇಳಿ ಖುಷಿ ಪಡುವ ಅನೇಕ ಹುಡುಗರನ್ನು ನಾನು ನೋಡಿದ್ದೇನೆ. "ಸಂಚಯ"ದ ಗೆಳೆಯ ಪ್ರಹ್ಲಾದ್ ಜೊತೆ ಮಾತನಾಡುವಾಗೆಲ್ಲ ಶ್ರೀನಿವಾಸರಾಜು ಅವರು ಪ್ರಹ್ಲಾದ್ ಅವರ ಚಿಂತನೆಯ, ಚಟುವಟಿಕೆಯ ಹಿಂದಿನ ನೈತಿಕ ಶಕ್ತಿಯಾಗಿರುವುದನ್ನು ಗಮನಿಸಿದ್ದೇನೆ. ಆನಂದ (ಋಗ್ವೇದಿ), ಶ್ರೀಧರ (ಎನ್.ಎಸ್. ಶ್ರೀಧರಮೂರ್ತಿ) ಮುಂತಾದವರ ಜೊತೆ ಮಾತನಾಡುವಾಗಲೂ ಸುಳಿದು ಹೋಗುವ ಮೇಷ್ಟ್ರು ನನಗೆ ಬಹಳ ಇಂಟರೆಸ್ಟಿಂಗ್ ವ್ಯಕ್ತಿತ್ವ.

ನಿಜ ಹೇಳಬೇಕೆಂದರೆ ನನಗೆ ಸ್ವಲ್ಪ ಅಸೂಯೆಯೂ ಆಗಿದೆ. ಸಾಹಿತ್ಯಕ್ಕೆ ನನ್ನದು ಸ್ವಲ್ಪ ಲೇಟ್ ಎಂಟ್ರಿ, ಇಲ್ಲವಾದಲ್ಲಿ ಆ ಹುಡುಗರಂತೆ ನಾನೂ ಬಹುಮಾನ ಪಡೆದು ಸಂಭ್ರಮಿಸಬಹುದಿತ್ತು. ಅದೇನೇ ಇರಲಿ, ಅನೇಕರು ಬಹುಮಾನ ಕೊಡುತ್ತಾರೆ. ಆದರೆ ಅದು ಬಹುಮಾನ ಪಡೆಯುವವರ ಒಂದು ದಿನದ ಉಪಚಾರವಾಗಿ ನಂತರ ಮರೆತೂ ಹೋಗುತ್ತದೆ. ಆದರೆ ಅದನ್ನು ಕೊಡುವುದರ ಜೊತೆಗೆ ಬೆಳೆಸಿಕೊಳ್ಳುವ ಆಪ್ತ ಸಂಬಂಧ, ನಂತರದ ಅವರ ಸಾಹಿತ್ಯ

ಚಟುವಟಿಕೆಗಳನ್ನು ಗಮನಿಸುವ ಪ್ರೀತಿ, ಇವರಿಗೆ ನಾನು ಉತ್ತರಿಸಬೇಕಾಗುವುದು ಎಂದು ಪ್ರತಿಯೊಬ್ಬರೂ ಅಂದುಕೊಂಡು ಹೊಣೆಗಾರಿಕೆಯಿಂದ ವರ್ತಿಸುವುದು, ಎಂದೂ ನನ್ನೊಡನೆ ನಿಮ್ಮ ಸೃಜನಾತ್ಮಕ ಗೊಂದಲಗಳನ್ನು ಹಂಚಿಕೊಳ್ಳಬಹುದು ಎಂಬ ಹಾಗೆ ಅವರಂತೆ ಗಾಢ ಚೈತನ್ಯದಂತಿರುವುದು ಬಹಳ ಅಪರೂಪ. ನಮ್ಮ ಸಾಹಿತ್ಯ ವಾತಾವರಣವೇ ಒಂದು ರೀತಿಯಲ್ಲಿ ಬೆಂಗಳೂರಿನಂತಿದೆ ಎಂದು ರೂಪಕಾತ್ಮವಾಗಿ ಭಾವಿಸಿದಲ್ಲಿ ಶ್ರೀನಿವಾಸರಾಜು ಅಲ್ಲಿ ಅನೇಕರ ಪಾಲಿನ ಆಲದ ಮರ. ನೆರಳು ಬೇಕು ಎನ್ನುವವರಿಗೆ ಅಲ್ಲಿ ಸದಾ ನೆರಳು.

ಅವರ ಬರಹದ ಮೆಲುದನಿ, ಸೂಕ್ಷ್ಮತೆ, ಆಳ ವ್ಯಾಪ್ತಿಗಳನ್ನು ನೋಡಿದಾಗ ಅವರು ಬರಹಗಾರರಾಗಿಯೇ ಉಳಿದು ಪ್ರಶಸ್ತಿ ಮುಂತಾದ ಗೌರವಗಳಿಗೆ ತಲೆಬಾಗಿಸಬಹುದಿತ್ತು. ಆದರೆ ಸಾಹಿತ್ಯ ಪರಿಚಾರಿಕೆಯ ದಾರಿ ತುಳಿದ ಅವರಿಗೆ ಗೌರವ ಪಡೆಯುವುದಕ್ಕಿಂತ ಇನ್ನೊಬ್ಬರನ್ನು ಗೌರವಿಸುವುದರಲ್ಲಿಯೇ ಹೆಚ್ಚು ಗೌರವ ಕಂಡಿದೆ. ಹೀಗಾಗಿ ಬರಹ ಅವರ ಎರಡನೆಯ ಆದ್ಯತೆಯಾಗಿ ಉಳಿದಿದೆ. ಇದು ಕನ್ನಡ ಸಾಹಿತ್ಯದ ನಷ್ಟವೂ ಹೌದು. ಮಾತಿಗಿಂತಲೂ ಕೃತಿಯಲ್ಲೇ ಹೆಚ್ಚು ನಂಬಿಕೆ ಇಟ್ಟಿರುವ ಶ್ರೀನಿವಾಸರಾಜು ಅವರ ಒಂದು ಪುಸ್ತಕದ ಹೆಸರು "ಮೂಕ ನಾಟಕಗಳು'. ಎಷ್ಟು ಅರ್ಥಪೂರ್ಣವಾಗಿದೆಯಲ್ಲವೇ? ಸಾಹಿತ್ಯದ ಹಲವು ತಲೆಮಾರುಗಳ ಜೊತೆ ಆಪ್ತ ಸಂಪರ್ಕ ಮತ್ತು ಹೊಸ ಓದು ಅವರಲ್ಲಿ ಇರುವುದರಿಂದ ಬೇರೆಲ್ಲರಿಗಂತಲೂ ಅವರಲ್ಲಿ ಹಂಚಿಕೊಳ್ಳುವುದಕ್ಕೆ ಹೆಚ್ಚು ಸಾಮಗ್ರಿ ಇದೆಯೆಂದು ನನ್ನ ಭಾವನೆ. ಆದರೂ ಏಕೋ ಶ್ರೀನಿವಾಸರಾಜು ಬಾಯಿಬಿಡುವುದಿಲ್ಲ. ಅವರು ಅಂಕೋಲೆಗೆ ಬಂದಿದ್ದಾಗ ಅವರ ಸಂಪಾದನೆಯ "ನಮ್ಮ ಕೈಲಾಸಂ; ನೆನಪಿನ ಸಂಪುಟ" ಪುಸ್ತಕ ನನಗೆ ನೀಡಿದ್ದರು. ಅಷ್ಟು ಒಳ್ಳೆಯ ಪುಸ್ತಕವನ್ನು ಕುತೂಹಲದಿಂದ ನೋಡಿದಾಗ ಸಂಪಾದಕರಾಗಿ ಅವರ ಮಾತು ಚೂರುಪಾರು ಅಷ್ಟೆ. ಅಲ್ಲಿ ಅವರು ಮೌಲಿಕವಾದುದನ್ನು ಏನಾದರೂ ಬರೆಯಬಹುದಿತ್ತು ಅಲ್ಲವೇ ಎಂದು ಎಷ್ಟೋ ಸಲ ಅನ್ನಿಸಿದೆ. ಅದು ಹೋಗಲಿ, ಇತ್ತೀಚೆಗೆ "ಹೊಸತು" ಪತ್ರಿಕೆ ಹೊರತಂದ "ಪರಿಮಳದ ಸುಗ್ಗಿ" ಎಂಬ ಕವಿತಾವಾಚಿಕೆಯ ಸಂಪಾದಕ ರಾಗಿಯೂ ಅಷ್ಟೆ... ಯಥಾಪ್ರಕಾರ ಹತ್ತಾರು ಸಾಲು! ಈ ಜಿಪುಣತನದಿಂದ ಅವರು ಹೊರ ಬರಲೇಬೇಕು ಎಂಬ ನನ್ನ ಹಂಬಲಕ್ಕೆ ದನಿಗೂಡಿಸುವವರು ಇದ್ದಾರೆ ಎಂದು ನಂಬಿಕೆ. ಅವರು ಮಾತನಾಡುವುದರಲ್ಲಿ ಕೆಲವು ಲಾಭಗಳಿವೆ. ವಿಮರ್ಶೆಯ ಪರಿಭಾಷೆಯಿಂದ ಹೊರಬಂದು "ಸಾಹಿತ್ಯ-ಚಿತ್ರ"ಗಳನ್ನು ಕಟ್ಟಿಕೊಡಲು ಅವರಿಗೆ ಸಾಧ್ಯವಿದೆ. ಬಹುಶಃ ಅವರಿಗೆ ಮಾತ್ರ ಸಾಧ್ಯವಿದೆ.

ಕನ್ನಡಕ್ಕೆ ಹೋರಾಟಗಾರರು ದೊರೆಯಬಹುದು. ಆದರೆ ಕೆಲಸಗಾರರು ದೊರೆಯುವುದು ಕಡಿಮೆ. ಇಂಥ ಅಪರೂಪದ ಕೆಲಸವನ್ನು ಪ್ರೀತಿಯಿಂದ ಅರ್ಥಪೂರ್ಣವಾಗಿ ನಿರ್ವಹಿಸುವವರು ಬಹಳ ಕಡಿಮೆ. ಕ್ರೈಸ್ಟ್ ಕಾಲೇಜು ಕನ್ನಡ ಸಂಘದಿಂದ ಅವರು ನಡೆಸಿದ ಸಾಹಿತ್ಯ ಚಟುವಟಿಕೆಗಳು, ಹೊರತಂದ ಪುಸ್ತಕಗಳು ಚಾರಿತ್ರಿಕ ಮಹತ್ವ ಪಡೆದಿವೆ. ಈ ಸಂದರ್ಭದಲ್ಲಿ ಇವರೊಂದಿಗೆ ಹೆಗಲೆಣೆಯಾಗಿ ನಿಂತ ಕಾಲೇಜು ಆಡಳಿತ ಮಂಡಳಿಯನ್ನೂ ಇಲ್ಲಿ ನೆನಪು ಮಾಡಿಕೊಳ್ಳಬೇಕು. ಶ್ರೀನಿವಾಸರಾಜು ಅವರಂಥ ನೂರಾರು ಕನಸುಗಳ, ನಿರ್ವಂಚನೆಯ, ಕ್ರಿಯಾಶೀಲ ವ್ಯಕ್ತಿತ್ವದ ಅವರು ದೊರೆತಾಗ ಸಮರ್ಪಕವಾಗಿ ಬಳಸಿಕೊಳ್ಳುವುದು ಸಮಾಜ ಹಾಗೂ ಸರಕಾರದ

ಹೊಣೆಗಾರಿಕೆ. ಈ ಹಿನ್ನೆಲೆಯಲ್ಲಿ ಅವರನ್ನು ಸಮರ್ಪಕವಾಗಿ ಬಳಸಿಕೊಂಡಿಲ್ಲ ಎಂದು ವಿಷಾದದಿಂದಲೇ ಹೇಳಬೇಕಿದೆ. ಅದರ ವಿಮರ್ಶೆ ಮಾಡುವುದಕ್ಕಿಂತಲೂ ನಮ್ಮ ನೆಲೆಯಲ್ಲಿಯೇ ನಾವೇನು ಮಾಡಲು ಸಾಧ್ಯವಿದೆ ಎಂದು ನಾನು ಆಲೋಚಿಸುತ್ತಿದ್ದೇನೆ. ಶ್ರೀನಿವಾಸರಾಜು ಇದ್ದಾರೆ. ಅವರೊಂದಿಗೆ ಸಮಾನ ಮನಸ್ಕ ಸಹವರ್ತಿಗಳಿದ್ದಾರೆ. ಅವರ ಬಗ್ಗೆ ಗೌರವಪಿರಿಸಿ ಕೊಂಡಿರುವ ನನ್ನಂಥವರು ಅನೇಕರಿದ್ದಾರೆ. ಅವರ ಮೂಲಕ ಬೆಳಕಿಗೆ ಬಂದ ನೂರಾರು ಲೇಖಕರು ನಾಡಿನೆಲ್ಲೆಡೆ ಇದ್ದಾರೆ ಮತ್ತು ಅವರ ಶಿಷ್ಯ ಬಳಗವಿದೆ. ಇದನ್ನು ಬಳಸಿಕೊಂಡು ಅವರ ನೇತೃತ್ವದಲ್ಲಿ ಪುಸ್ತಕ ಚಿಂತನೆ, ಪ್ರಕಾಶನದ ಒಂದು ಸಹಕಾರಿ ಸ್ವಾಯತ್ತ ಸಂಸ್ಥೆಯನ್ನು ಹುಟ್ಟುಹಾಕಬಹುದಲ್ಲವೇ? ಅಖಿಲ ಭಾರತ ಸಾಹಿತ್ಯ ಸಮ್ಮೇಳನಗಳು ಸಾಹಿತ್ಯದ ಹೊರಗೇ ಹೆಚ್ಚು ಆಸಕ್ತಿ ಬೆಳೆಸಿಕೊಳ್ಳುತ್ತಿರುವುದರಿಂದ ಸಾಹಿತ್ಯ ಚರ್ಚೆಯ ಪುಟ್ಟಪುಟ್ಟ ಒಗ್ಗೂಡುವಿಕೆಗಳ ಅಗತ್ಯವಿದೆ. ಪ್ರತಿವರ್ಷದ ಕನ್ನಡ ಸಾಹಿತ್ಯದ ವ್ಯವಸ್ಥಿತ ಸಮೀಕ್ಷೆಗಳು ಜರುಗಬೇಕಿವೆ. ಇವೆಲ್ಲಕ್ಕೂ ಅದು ವೇದಿಕೆಯಾಗಬಹುದೇನೋ. ಹೀಗೆ ಅಪೇಕ್ಷೆಗಳನ್ನು ಹುಟ್ಟುಹಾಕಬಲ್ಲ ಶಕ್ತಿ ಅವರಲ್ಲಿದೆ.

ನನ್ನ ಚೊಚ್ಚಲ ಸಂಕಲನ "ಸಿಕಾಡ" ಕ್ರೈಸ್ಟ್ ಕಾಲೇಜಿನಿಂದ ಪ್ರಕಟವಾಗಲಿ ಎಂಬ ಅಪೇಕ್ಷೆಯಿಂದ ಅವರಿಗೊಂದು ಪತ್ರ ಬರೆದಿದ್ದೆ. ಆದರೆ ಅದಕ್ಕೆ ಉತ್ತರವೇ ಬರಲಿಲ್ಲ. ಉತ್ತರಕ್ಕಾಗಿ ಕಾದುಕಾದು ಕೊನೆಗೆ "ಸಿಕಾಡ"ದ ಮಾರ್ಗ ಬದಲಾಯಿತು. ಒಂದು ಉತ್ತರವನ್ನು ನೀಡಲಿಲ್ಲವಲ್ಲ ಎಂದು ಮನಸ್ಸು ಸ್ವಲ್ಪ ಭಾರವಾಗಿತ್ತು. ಆದರೆ ತರುವಾಯ ನನಗೆ ತಿಳಿದುಬಂದುದು ಅವರಿಗೆ ನನ್ನ ಪತ್ರ ತಲುಪಿಯೇ ಇರಲಿಲ್ಲವೆಂದು. ಇಂಥ ಸಾಧ್ಯತೆಯ ಬಗ್ಗೆ ಯೋಚಿಸದೆ ಮನಸ್ಸು ಭಾರವಾಗಿಸಿಕೊಂಡದ್ದಕ್ಕಾಗಿ ನನಗೇ ಸಂಕೋಚವೆನಿಸಿತು. ಕ್ರೈಸ್ಟ್ ಕಾಲೇಜಿನ ಸಂಭ್ರಮದ ಒಂದು ಪಾಲಿಂದಲೂ ನಾನು ವಂಚಿತನಾದೆನಲ್ಲ ಎಂದು ಎನಿಸುತ್ತದೆ. ಅದು ಸಾಧ್ಯವಾಗಿದ್ದಲ್ಲಿ ಶ್ರೀನಿವಾಸರಾಜು ಅವರೊಡನೆ ಹೆಚ್ಚು ಒಡನಾಟವಿರುತ್ತಿತ್ತೇನೋ.

ಕನ್ನಡದ ಉಳಿವಿನ ಈ ಬಿಕ್ಕಟ್ಟಿನ ಸಂದರ್ಭದಲ್ಲಿ ಶ್ರೀನಿವಾಸರಾಜು ಅವರಂಥ ಮೇಷ್ಟ್ರ ಅಗತ್ಯ ಬಹಳವಿದೆ. ಸಾಧನೆಯ ಪ್ರದರ್ಶನವೇ ಆಗಿರುವ ಈ ದಿನಗಳಲ್ಲಿ ಸಂಯಮದ ನೆಲೆಯಲ್ಲಿ ನಿಂತ ಕೈಮರ ಅವರು. ಕನ್ನಡ ನಾಡು ಅವರನ್ನು ಸಮರ್ಥವಾಗಿ ಬಳಸಿಕೊಳ್ಳಲಿ ಎಂದು ಪ್ರೀತಿಯಿಂದ ಹಾರೈಸುವೆ.

❑

# ಅಕ್ಷರ ಬಳ್ಳಿಯ ಬಳಗ

● *ಎಸ್.ಜಿ. ಸಿದ್ಧರಾಮಯ್ಯ*

ಆತ್ಮೀಯರ ಬಗ್ಗೆ ಮಾತನಾಡುವುದೆಂದರೆ ಶಬ್ದ ಸೂತಕದಲ್ಲಿ ನರಳುವುದೆಂದೇ ಅರ್ಥ. ಕಾರಣ ಪ್ರೀತಿ ಸೀಮೆಯ ದಾಖಲಾತಿಗಳು ನೆನಪಿನಷ್ಟು ಪವಿತ್ರವಲ್ಲ. ಅಣ್ಣ ಶ್ರೀನಿವಾಸರಾಜುವನ್ನು ಕುರಿತು ನಾನು ಎಂದೂ ರಾಜು ಎಂದಾಗಲೀ ಶ್ರೀನಿವಾಸರಾಜು ಎಂದಾಗಲೀ ಕರೆದದ್ದೇ ಇಲ್ಲ. ನಮ್ಮ ಪಿ.ಪಿ. ಬಳಗ ಪ್ರಾರಂಭವಾದಾಗಿನಿಂದ ನನಗೆ ನೆನಪಿರುವಂತೆ ನನ್ನ ಬಾಯಲ್ಲಿ ರಾಜು ಅಣ್ಣನೇ. ಹಳ್ಳಿಗಾಡಿನಿಂದ ಮೊದಲ ಬಾರಿಗೆ ಬೆಂಗಳೂರಿಗೆ ಬಂದು ಅದೂ ಸೆಂಟ್ರಲ್ ಕಾಲೇಜಿನ ಆ ಆವರಣದ ಗಂಡು ಹೆಣ್ಣುಗಳ ಮಾಯಾಲೋಕವನ್ನು ಕಂಡ ನನಗೆ ದಿಗ್ಭ್ರಮೆ, ಕೀಳರಿಮೆ, ಪರಕೀಯತೆ ಒಟ್ಟೊಟ್ಟಿಗೇ ಕಾಡತೊಡಗಿದ್ದ ದಿನಗಳವು. ನವ್ಯದ ಭಾಷಾ ಚತುರರ ಮಾತಿನ ಚುರುಕಿಗೆ ಕೀಳರಿಮೆಯಲ್ಲಿ ಮಾತುಕಟ್ಟಿದವನಾಗಿ ತೀರ ಕುಸಿದ ಭಾವದಲ್ಲಿ ಗುಂಪು ಕಂಡರೆ ನಾನು ದೂರ ಸರಿದು ಹೋಗುತ್ತಿದ್ದ ಕಾಲವದು. ಅಂಥ ನನ್ನನ್ನು ಪಿಸುಮಾತಿನ ಆಪ್ತತೆಯಲ್ಲಿ ಹತ್ತಿರ ಕರೆದು, ಅಂತರಂಗದ ಒಳಹೊಕ್ಕು ಆತ್ಮವಿಶ್ವಾಸ ಬೆಳೆಸಿದ ಅಣ್ಣ ಶ್ರೀನಿವಾಸರಾಜು. ಪಿ.ಪಿ. ಬಳಗದಲ್ಲಿ ಮೊದ ಮೊದಲು ಬರೀ ಕೇಳುಗನಾಗಿದ್ದ ನನ್ನನ್ನು ಚರ್ಚೆಯಲ್ಲಿ ಭಾಗವಹಿಸಿ, ಕೊನೆ ಕೊನೆಗೆ ವಾಗ್ವಾದದ ಒಳಸುಳಿಗಳಲ್ಲಿ ಹರಟುವಂತೆ ಬೆಳಸಿದ ಹಿರಿಯಣ್ಣ.

ಈ ಮಧ್ಯೆ ಎಂ.ಎ. ಮುಗಿಸಿಕೊಂಡು ಸರ್ಕಾರಿ ಕೆಲಸದ ಕಾರಣದಿಂದಾಗಿ ಊರೂರು ಸುತ್ತುವ ವರ್ಗಾವಣೆಯ ಕಾಲ್ಚೆಂಡಾಟಕ್ಕೆ ಬಲಿಯಾದ ನನಗೆ ಬೆಂಗಳೂರೆಂಬುದು ಮತ್ತೊಮ್ಮೆ ಮಾಯಾನಗರಿಯಾಗಿ ದೂರ ಸರಿಯಿತು. ಪಿ.ಪಿ. ಬಳಗದ ಸಂಪರ್ಕ ಹಲವು ವರ್ಷಗಳವರೆಗೆ ಕಡಿದು ಹೋಯಿತು. ೧೯೯೨ರ ಸಮಯ, ಬೆಂಗಳೂರಿಗೆ ವರ್ಗಾವಣೆಯ ಬಗ್ಗೆ ಕಾಲೇಜು ಶಿಕ್ಷಣ ಇಲಾಖೆಗೆ ಬಂದಿದ್ದಾಗ ಸೆಂಟ್ರಲ್ ಕಾಲೇಜಿನ ಹತ್ತಿರ ಅಚಾನಕ್ಕಾಗಿ ರಾಘು ರಾಜು ಭೇಟಿಯಾದರು. ಆಗ ಆ ನಡುವಿನಲ್ಲಿ ಬಂದಿರುವ ನನ್ನ



ಎರಡೂ ಕವನ ಸಂಕಲನಗಳ ಬಗ್ಗೆ ಪ್ರಸ್ತಾಪಿಸಿದ ರಾಘು ಹೊಸದಾಗಿ ಬರೆದಿರುವುದರ ಬಗ್ಗೆ ಕೇಳಿದರು. ಪ್ರಕಟಣೆಗೆ ಸಿದ್ಧವಾಗಿರುವ ಮೂರನೆಯ ಕವನ ಸಂಕಲನ 'ಅವಳೆದೆಯ ಜಂಗಮ'ದ ಬಗ್ಗೆ ಹೇಳಿದಾಗ ಆ ಹೆಸರು ಕೇಳಿಯೇ ವಿಶೇಷ ಕುತೂಹಲಿತರಾದ ರಾಘು ಹಸ್ತಪ್ರತಿಯನ್ನು ಕಳಿಸುವಂತೆ ಹೇಳಿದರು. ತಕ್ಷಣ ಬಗಲ ಚೀಲದಲ್ಲಿದ್ದ ಕವನಗಳನ್ನು ತೆಗೆದು ತೋರಿಸಿದಾಗ ಅಲ್ಲೇ ಮರದ ಬುಡದಲ್ಲಿದ್ದ ಕಲ್ಲು ಬೆಂಚಿನ ಮೇಲೆ ಕುಳಿತು ಇಬ್ಬರೂ ಪ್ರೀತಿ ಆಸಕ್ತಿಯಿಂದ ನನ್ನ ಕವನ ವಾಚನವನ್ನು ಆಲಿಸಿದರು. ಕವನಗಳ ಭಾಷಿಕ ದೇಸೀಯತೆಯ ಬಗ್ಗೆ ವ್ಯವಸಾಯ ಸಂಸ್ಕೃತಿಯ ಜಾನಪದೀಯ ಸೊಗಡಿನ ತಾಜಾತನದ ಬಗ್ಗೆ ಇಬ್ಬರೂ ಮೆಚ್ಚುಗೆಯ ಮಾತುಗಳನ್ನಾಡಿದರು. 'ಈ ಸಂಕಲವನವನ್ನು ಯಾರು ಪ್ರಿಂಟ್ಹಾಕುತ್ತಿರುವವರು' ಎಂದು ಅಣ್ಣ ಪ್ರಶ್ನಿಸಿದ. ಇನ್ನೂ ಯಾರಿಗೂ ಕೊಟ್ಟಿಲ್ಲವೆಂದಾಗ 'ನಿನ್ನ ಅಭ್ಯಂತವಿಲ್ಲದಿದ್ದರೆ, ನಮ್ಮ ಕ್ರೈಸ್ಟ್ ಕಾಲೇಜಿನಲ್ಲಿ ಪ್ರಕಟಿಸುತ್ತೇವೆ ಕೊಡು' ಎಂದ. ನಾನು ಮೂಕವಿಸ್ಮಿತನಾದೆ. ಮರುಕ್ಷಣದಲ್ಲಿಯೇ ರಾಜು, 'ಆದರೆ, ಒಂದು ಕಂಡೀಷನ್, ಹಸ್ತಪ್ರತಿಯನ್ನು ಸಲಹಾ ಸಮಿತಿಯ ಮುಂದೆ ಇರಿಸಿ, ಒಪ್ಪಿಗೆ ಬಂದ ಮೇಲೆ' ಎಂದು ಒಂದು ಉಪವಾಕ್ಯವನ್ನೂ ಜೋಡಿಸಿದ. ಸಲಹಾ ಸಮಿತಿಯ ಒಬ್ಬ ಸದಸ್ಯ ಈಗಾಗಲೇ ಅಲ್ಲೇ ಮೆಚ್ಚುಗೆಯ ಮಾತುಗಳನ್ನಾಡಿರುವುದನ್ನು ಕೇಳಿದ್ದ ನನಗೆ ಈ ಉಪವಾಕ್ಯ ಅಣ್ಣನ ಶಿಸ್ತುಬದ್ಧ ನಿಷ್ಠುರ ಕ್ರಮವಾಗಿ ಮಾತ್ರ ಕಂಡು 'ಆಯಿತು, ಆಯಿತು' ಎಂದೆ. ಎರಡನೆಯ ಮಾತಿಲ್ಲದೆ, ವಾರದೊಳಗೆ ಹಸ್ತಪ್ರತಿಯನ್ನು ಅಣ್ಣನ ಮನೆಯ ವಿಳಾಸಕ್ಕೆ ಕಳಿಸಿದೆ. ಹಾಗೆಯೇ ರಾಘುವಿಗೆ ಮುನ್ನುಡಿ ಬರೆದುಕೊಡಲು ವಿನಂತಿಸಿದೆ. ಪ್ರೀತಿಯಿಂದ ಒಪ್ಪಿದ ರಾಘು ಅರ್ಥಪೂರ್ಣ ಮುನ್ನುಡಿ ಬರೆದರು. ಕುಂಟ ಕರಿಯಣ್ಣನನ್ನು ಸಂಕೇತಿಸಿದ ದೇವರಾಜ್ ಅವರ ರೇಖಾ ಚಿತ್ರವನ್ನೊಳಗೊಂಡ ಸುಂದರ ಮುಖಪುಟ ವಿನ್ಯಾಸದೊಂದಿಗೆ ಪುಸ್ತಕ ಹೊರ ಬಂದಾಗ ನನಗಾದ ಸಂತೋಷ ಅನುಪಮವಾದುದು. ಆ ಪುಸ್ತಕದ ಜೊತೆಗೆ ಕ್ರೈಸ್ಟ್ ಕಾಲೇಜಿನಿಂದ ಪ್ರಕಟವಾಗಿದ್ದ ಇನ್ನೂ ಕೆಲವು ಪುಸ್ತಕಗಳನ್ನು ಆಗಿನ್ನು ಪ್ರಾರಂಭವಾಗಿದ್ದ ಕನ್ನಡ ವಿಶ್ವವಿದ್ಯಾಲಯದ ಹಳೆಯ ಮಂಟಪದಲ್ಲಿ ಬಿಡುಗಡೆ ಮಾಡಲಾಯಿತು. ಅದೊಂದು ಅವಿಸ್ಮರಣೀಯ ಮುದ ನೀಡಿದ ಸಂದರ್ಭ. ಕರ್ನಾಟಕ ಸಾಹಿತ್ಯ ಅಕಾಡೆಮಿಯು ನೀಡುವ ವಾರ್ಷಿಕ ಪುಸ್ತಕ ಬಹುಮಾನವನ್ನು ಈ ಸಂಕಲನ ಪಡೆದುದು ಮತ್ತೊಂದು ವಿಶೇಷ. ಇದಾದ ಮೂರು ವರ್ಷಗಳ ಮೇಲೆ ನನ್ನ ಮತ್ತೊಂದು ಕವನ ಸಂಕಲನವನ್ನು ಪ್ರಕಟಿಸುವ ಕಾರ್ಯವನ್ನು ಅಣ್ಣನೇ ಕೈಗೆತ್ತಿಕೊಂಡ.

'ಸೊಲ್ಲು ಫಲವಾಗಿ' ಸಂಕಲನದ ಹಸ್ತಪ್ರತಿಯ ಜೊತೆಗೆ ಗೆಳೆಯ ಚಂದ್ರಶೇಖರ ನಂಗಲಿ ಬರೆದಿದ್ದ ಮುನ್ನುಡಿಯನ್ನೂ ಕಳಿಸಿದ್ದೆ. ಅಣ್ಣನ ಮಗ ಸುಗತ ನನ್ನ ಕಾವ್ಯದ ಪ್ರೀತಿಯ ಓದುಗ. 'ಅವಳೆದೆಯ ಜಂಗಮ' ಓದಿದ್ದ ಸುಗತ, ಸೊಲ್ಲು ಫಲವಾಗಿ ಸಂಕಲನಕ್ಕೆ ತಾನೇ ಬೆನ್ನುಡಿ ಬರೆಯುವ ಅಪೇಕ್ಷೆ ವ್ಯಕ್ತಪಡಿಸಿದಾಗ ಅತೀವ ಸಂತೋಷವಾಯಿತು. ಅಣ್ಣನ ಮತ್ತೊಬ್ಬ ಮಗ ಋತ ಆ ಸಂಕಲನಕ್ಕೆ ಸುಂದರ ಮುಖಪುಟ ರಚಿಸಿದ. ಅಪ್ಪ ಪ್ರಕಾಶಕ, ಒಬ್ಬ ಮಗ ಬೆನ್ನುಡಿಕಾರ, ಮತ್ತೊಬ್ಬ ಮಗ ಮುಖಪುಟ ವಿನ್ಯಾಸಕಾರ. ಇಡೀ ಕುಟುಂಬ ಆ ಸಂಕಲನ ಪ್ರಕಟಣೆಯ ಬಗೆಗೆ ತೋರಿದ ಕಾಳಜಿಪೂರ್ಣ ಬಾವುಣಿಕೆಯ ನಡವಳಿಯಲ್ಲಿ ನಾನು ಆ ಕುಟುಂಬದ ಜೊತೆ ಅಕ್ಷರ ಬಳ್ಳಿಯ ಬಳಗವಾದೆ. ಈ ಸಂಕಲನಕ್ಕೆ ನಾಡಿನ ಶ್ರೇಷ್ಠ ಕವಿ

ಪುತಿನ ಕಾವ್ಯ ಪ್ರಶಸ್ತಿ ಬಂದಾಗ ಅಣ್ಣನ ಕುಟುಂಬ ಸಂಭ್ರಮಿಸಿದ ಬಗೆ ನನ್ನ ನೆನಪಿನಲ್ಲಿ ಮಾಸದೆ ಉಳಿದ ಸವಿ ಮೆಲುಕು.

* * *

ಕನ್ನಡದ ಶ್ರೇಷ್ಠ ಸಣ್ಣ ಕತೆಗಾರ ರಾಘವೇಂದ್ರ ಖಾಸನೀಸರ ಸಮಗ್ರ ಕಥೆಗಳನ್ನು ಕನ್ನಡ ಪುಸ್ತಕ ಪ್ರಾಧಿಕಾರ ಬಹಳ ಹಿಂದೆಯೇ ಪ್ರಕಟಿಸಿತ್ತು. ಆ ಮುದ್ರಣದ ಪ್ರತಿಗಳೆಲ್ಲ ಮುಗಿದು ಹೋಗಿ ಬಹಳಷ್ಟು ವರ್ಷಗಳಾದರೂ ಅದರ ಮರುಮುದ್ರಣವನ್ನು ಪ್ರಾಧಿಕಾರ ಮತ್ತೆ ಮಾಡಿಸಲಿಲ್ಲ. ಆ ಮಧ್ಯೆ ರಾಘವೇಂದ್ರ ಖಾಸನೀಸರಿಗೆ ಪಾರ್ಕಿಸನ್ ರೋಗ ಬಡಿಯಿತು. ಅವರು ಮಾನಸಿಕವಾಗಿ ದೈಹಿಕವಾಗಿ ತುಂಬಾ ಬಳಲಿದರು. ಅಂಥ ಸಂದರ್ಭದಲ್ಲೂ ಅವರಿಗೆ ಮತ್ತೊಮ್ಮೆ ತಮ್ಮ ಕಥೆಗಳನ್ನು ಮರು ಮುದ್ರಿಸುವ ಬಯಕೆ. ಪ್ರಾಧಿಕಾರಕ್ಕೆ ಬರೆದರೆ ಪ್ರಾಧಿಕಾರ ಅದನ್ನು ಕೈಗೆತ್ತಿಕೊಳ್ಳುತ್ತಿಲ್ಲ. ಕೊನೆಗೆ ತಾವೇ ಮುದ್ರಿಸುವ ಅಪೇಕ್ಷೆಯಿಂದ ಹಕ್ಕುಸ್ವಾಮ್ಯವನ್ನು ಹಿಂತಿರುಗಿಸುವಂತೆ ಪ್ರಾಧಿಕಾರಕ್ಕೆ ಬರೆದರೆ ಅದಕ್ಕೂ ಪ್ರತಿಕ್ರಿಯೆ ಇಲ್ಲ. ಎರಡು ವರ್ಷಗಳ ದೀರ್ಘ ಅವಧಿಯ ನಿರೀಕ್ಷೆಯಲ್ಲಿ ಬಳಲಿದ ಖಾಸನೀಸರಿಗೆ ತಮ್ಮ ಹಕ್ಕುಸ್ವಾಮ್ಯ ತಮಗೆ ಮರಳಿಬರುವ ಬಗ್ಗೆ ದಿಗಿಲಾಯಿತು. ದೈಹಿಕ ಯಾತನೆಯ ಆ ಸಂದರ್ಭದಲ್ಲಿ ಮಾನಸಿಕ ವ್ಯಥೆಯ ಈ ನೋವು ಕೂಡಿಕೊಂಡು ಖಾಸನೀಸರ ಧೃತಿ ಕುಂದಿತು. ಒಮ್ಮೊಮ್ಮೆ ಕನವರಿಕೆಯಲ್ಲಿ 'ಅಯ್ಯೊ ನನ್ನ ಕಥೆಗಳ ಹಕ್ಕುಗಳನ್ನು ಕಳೆದುಕೊಂಡೆ, ಸರ್ಕಾರ ನನ್ನ ಹಕ್ಕುಗಳನ್ನು ಕಿತ್ತುಕೊಂಡಿತು' ಎಂದು ಬಡಬಡಿಸತೊಡಗಿದರು. ಆಗಾಗ ಖಾಸನೀಸರನ್ನು ನೋಡಿ ಮಾತನಾಡಿಸಿಕೊಂಡು ಬರಲು ಅವರ ಮನೆಗೆ ಹೋಗುತ್ತಿದ್ದ ಶ್ರೀನಿವಾಸರಾಜುಗೆ ಈ ವಿಚಾರ ಗೊತ್ತಾಯಿತು. ರಾಜು ತಡಮಾಡಲಿಲ್ಲ. ಹಕ್ಕುಸ್ವಾಮ್ಯದ ವಾಪಸಾತಿಗೆ ತಾವೇ ಒಂದು ಪತ್ರ ಬರೆದು ಅದಕ್ಕೆ ಖಾಸನೀಸರ ಸಹಿ ಪಡೆದು ನೇರವಾಗಿ ಪ್ರಾಧಿಕಾರಕ್ಕೆ ಬಂದರು.

'ಸಿಂಗುಸಿ ನಿನಗೆ ಖಾಸನೀಸರು ಗೊತ್ತಲ್ಲ. ನಮ್ಮ ಸೆಂಟ್ರಲ್ ಕಾಲೇಜು ಲೈಬ್ರರಿಯಲ್ಲಿದ್ದ ಕತೆಗಾರ. ನಮ್ಮ ಪಿ.ಪಿ. ಬಳಗದ ಎಲ್ಲರ ಜೊತೆಗೆ ಪ್ರೀತಿ ವಿಶ್ವಾಸ ತೋರಿ ಸಜ್ಜನಿಕೆಯಿಂದ ಮಾತನಾಡುತ್ತಿದ್ದ ಕಥೆಗಾರ' – ಅಂದರು. 'ಏನಣ್ಣ ಖಾಸನೀಸರನ್ನು ನಾನು ಮರೆಯಲು ಸಾಧ್ಯವೇ? ಯಾಕೆ ಏನಾಯ್ತು ಅವರಿಗೆ?' ಅಂದೆ. ರಾಜು ಖಾಸನೀಸರ ಕಾಯಿಲೆಯ ವಿಷಯವನ್ನು ಸಾದ್ಯಂತ ಹೇಳಿ 'ಈಗ ನೀನು ನನಗೊಂದು ಸಹಾಯ ಮಾಡಬೇಕು ಅಂದರು. 'ಹೇಳಣ್ಣ ನಾನೇನು ಮಾಡಬೇಕು ಅಪ್ಪಣೆ ಕೊಡು' – ಅಂದೆ. ಖಾಸನೀಸರು ನಿದ್ದೆ ಎಚ್ಚರದಲ್ಲೂ ಬಡಬಡಿಸುವ ಹಕ್ಕುಸ್ವಾಮ್ಯದ ವಿಚಾರವನ್ನು ಹೇಳಿದರು. ಪ್ರಾಧಿಕಾರದ ಸರ್ವಸದಸ್ಯರ ಸಭೆ ಯಾವಾಗ? ಸಭೆಗೆ ಇಡದೆ ಈ ಕ್ಷಣ ಅವರ ಹಕ್ಕುಸ್ವಾಮ್ಯವನ್ನು ಅವರಿಗೇ ಮರಳಿಸಿರುವಂತೆ ಒಂದು ಸಾಲು ನೀನೇ ಬರೆದುಕೊಡುವುದಕ್ಕೆ ಸಾಧ್ಯವೇ? ನಾನೇ ಖುದ್ದು ಅವರಿಗೆ ಅದನ್ನು ಮುಟ್ಟಿಸುತ್ತೇನೆ. ಅವರ ಮನಸ್ಸಿಗೆ ನೆಮ್ಮದಿ ಸಿಗಲಿ. ನೀನು ಆಮೇಲೆ ಸರ್ವಸದಸ್ಯರ ಸಭೆಯಲ್ಲಿ ಬೇಕಾದರೆ ಘಟನೋತ್ತರ ಅನುಮತಿ ಪಡೆದರಾಯಿತು. ನೀನು ದೊಡ್ಡ ಮನಸ್ಸು ಮಾಡಿ ನನಗೆ ಇಷ್ಟು ಸಹಾಯ ಮಾಡು' – ಅಂದರು. ಈ ವಿಚಾರ ಕೇಳಿ ನನಗೆ ತುಂಬಾ ಖೇದ ವಾಯಿತು. ಆಗಿರುವ ಅನಾಹುತವನ್ನು ಕೆದಕುವುದರಲ್ಲಿ ಯಾವುದೇ ಅರ್ಥವಿಲ್ಲವೆನ್ನಿಸಿತು.

ತಕ್ಷಣ ಒಂದು ಪತ್ರ ತಯಾರಿಸಿ ಅಣ್ಣನೊಟ್ಟಿಗೆ ನಾನೂ ಖಾಸನೀಸರ ಮನೆಗೆ ಹೋಗಿ ಆ ಪತ್ರವನ್ನು ಅವರಿಗೆ ಕೊಟ್ಟೆವು. ಆ ಪತ್ರವನ್ನು ಅಣ್ಣನ ಕೈಲೇ ಕೊಡಿಸುವ ನನ್ನ ಅಪೇಕ್ಷೆ ನಡೆಯಲಿಲ್ಲ. ನೀನೇ ಕೊಡು ಇದೊಂದು ಮಹತ್ವದ ಘಟನೆ. ಪುಸ್ತಕ ಪ್ರಾಧಿಕಾರದ ಅಧ್ಯಕ್ಷನಾಗಿ ನೀನೇ ಪತ್ರವನ್ನು ಖಾಸನೀಸರಿಗೆ ಕೊಟ್ಟಾಗ ಅವರಿಗೆ ಆಗುವ ಆತಂಕದ ಬಿಡುಗಡೆ ಬಹಳ ದೊಡ್ಡದು ಅಂದು ನನ್ನ ಕೈಲೇ ಕೊಡಿಸಿದರು. ಪತ್ರವನ್ನು ತೆಗೆದುಕೊಂಡ ಖಾಸನೀಸರ ಕಣ್ಣುಗಳಲ್ಲಿ ತೃಪ್ತಿಯ ಮಿಂಚು. ರಾಜು ಕಡೆ ಅವರು ಹನಿಗಣ್ಣಾಗಿ ನೋಡಿದರು. ರಾಜು ಕಣ್ಣಲ್ಲಿ ಮೂಡಿದ ಪ್ರತಿಸ್ಪಂದನದ ಮಿಂಚು ನನ್ನಲ್ಲಿ ಕೃತಕೃತ್ಯತೆಯ ಭಾವ ಮೂಡಿಸಿತು. ಮನುಷ್ಯ ಸಂಬಂಧಗಳ ಘನತೆ ಬೆಳಗುವುದು ಬರೀ ಬರೆಯುವುದರಲ್ಲಲ್ಲ. ಹೀಗೆ ಬರೆಯುವುದರಲ್ಲಿ ರಾಜುಗೆ ಸಾಹಿತ್ಯ ಎಷ್ಟರಮಟ್ಟಿಗೆ ಬದುಕಿನ ಕಾಳಜಿ ಸಂಪನ್ನ ಬದ್ಧತೆಯೋ ಅದಕ್ಕೂ ಮಿಗಿಲಾಗಿ ಬದುಕಿನ ಸಂದರ್ಭದಲ್ಲಿನ ನಡೆನುಡಿಗಳು ಸೂತಕವಾಗದೆ ವಿಧಿಗಳಾಗ ಬೇಕೆಂಬುದೂ ಸ್ವಭಾವಗಳಾಗಬೇಕೆಂಬುದೂ ಕರ್ತವ್ಯದ ಭಾಗ. ತಮ್ಮ ಈ ಗುಣಶೀಲತೆಯ ಬಗ್ಗೆ ಎಲ್ಲೂ ಒಂದು ಶಬ್ದ ಕೂಡ ಮಾತಾಡುವುದಿಲ್ಲ ಅವರು. ಆಡದೆ ಮಾಡಿ ಮೌನವಾಗುವ ಸಂತನ ನಡತೆ ಇದು.

ಇತ್ತೀಚೆಗೆ ನಾನು ಎರಡು ಕಾಲೇಜುಗಳ ವಿಶೇಷ ಕಾರ್ಯಕ್ರಮಗಳಲ್ಲಿ ಭಾಗವಹಿಸಬೇಕಾಗಿ ಬಂದಿತು. ಅದಕ್ಕೆ ಶ್ರೀನಿವಾಸರಾಜು ಕಾರಣ. ಒಂದು ಸೌಂದರ್ಯ ಪಿ.ಯು. ಕಾಲೇಜು, ಮತ್ತೊಂದು ಶ್ರೀ ಭಗವಾನ್ ಮಹಾವೀರ ಜೈನ್ ಕಾಲೇಜು. ರಾಜುವಿನ ಸೇವೆಯನ್ನು ಪ್ರತ್ಯಕ್ಷವಾಗಿ ಪರೋಕ್ಷವಾಗಿ ಹಲವು ಸಂಘಸಂಸ್ಥೆಗಳು ಪಡೆದುಕೊಳ್ಳುತ್ತಿವೆ. ನಾನು ಮೇಲೆ ಹೇಳಿದ ಎರಡೂ ಕಾಲೇಜುಗಳ ಪ್ರಾಂಶುಪಾಲರು ಅಧ್ಯಾಪಕರು ರಾಜುವನ್ನು ಕಂಡು 'ಕ್ರೈಸ್ಟ್ ಕಾಲೇಜಿನಲ್ಲಿ ನೀವು ಮಾಡಿದಂತೆ ನಾವು ನಮ್ಮ ಕಾಲೇಜುಗಳಲ್ಲಿ ಸಾಹಿತ್ಯಿಕ ಸ್ಪರ್ಧೆ ಹಾಗೂ ಪ್ರಕಟಣೆಗಳನ್ನು ಮಾಡಬೇಕೆಂದಿದ್ದೇವೆ. ನಮಗೆ ಸಲಹೆ ಸೂಚನೆ ನೀಡಿ' – ಎಂದು ಕೇಳಿಕೊಂಡಿದ್ದಾರೆ. ಆಗ ರಾಜು ಅಪೂರ್ಣ ಕಥೆಯನ್ನು ಪೂರ್ಣಗೊಳಿಸುವ ಕಥಾ ರಚನಾ ಸ್ಪರ್ಧೆಯನ್ನು ಆ ಕಾಲೇಜುಗಳಿಗೆ ಪರಿಚಯಿಸಿದ್ದಾರೆ. ಈ ಸ್ಪರ್ಧೆಯನ್ನು ರಾಜ್ಯದಾದ್ಯಂತ ಇರುವ ಕಾಲೇಜುಗಳಿಗೆ ವಿಸ್ತರಿಸಿಕೊಂಡಂತೆ ಮಾಡಲು ಹೇಳಿದ್ದಾರೆ. ಈ ಸ್ಪರ್ಧೆ ಒಂದು ವಿಶಿಷ್ಟ ಬಗೆಯದು. ಚೀನಿಮೂಲದ ಎರಡು ಚಿಕ್ಕದಾದ ಕಥೆಗಳನ್ನು ಆರಿಸಿದ ರಾಜು ಎರಡೂ ಕಾಲೇಜುಗಳಿಗೆ ಒಂದೊಂದು ಕಥೆಯ ಪೂರ್ವಾರ್ಧ ಭಾಗಗಳನ್ನು ಕೊಟ್ಟಿದ್ದಾರೆ. ಎಲ್ಲ ಕಾಲೇಜುಗಳಿಗೂ ಈ ಅಪೂರ್ಣ ಕಥೆಯನ್ನು ಪ್ರತಿಮಾಡಿ ಕಳಿಸಿ ಅಲ್ಲಿ ವಿದ್ಯಾರ್ಥಿಗಳಿಗೆ ಪೂರ್ಣಗೊಳಿಸುವ ಸ್ಪರ್ಧೆ ಏರ್ಪಡಿಸಿ ಅವುಗಳನ್ನು ತರಿಸಿಕೊಂಡು ಉತ್ತಮ ರಚನೆಗೆ ಬಹುಮಾನ ಕೊಡುವಂತೆ ಹೇಳಿದ್ದಾರೆ. ಆಯ್ಕೆಗೊಂಡ ಎಲ್ಲ ಉತ್ತರಾರ್ಧದ ಕಥೆಗಳನ್ನು ಪೂರ್ಣ ಪ್ರಕಟಿಸುವಾಗ ಮೂಲ ಕಥೆಯ ಪೂರ್ವಾರ್ಧವನ್ನು ಪ್ರಾರಂಭದಲ್ಲಿ ಕೊಟ್ಟು ವಿದ್ಯಾರ್ಥಿಗಳ ಪೂರ್ಣ ಭಾಗಗಳನ್ನು ಅವರೇ ನೀಡಿರುವ ವಿಶೇಷ ಶೀರ್ಷಿಕೆಗಳೊಂದಿಗೆ ಮುಂದುವರಿದ ಪುಟಗಳಲ್ಲಿ ಪ್ರಕಟಿಸುವಂತೆ ತಿಳಿಸಿದ್ದಾರೆ. ಕೊನೆಯಲ್ಲಿ ಮೂಲಕಥೆಯ ಉತ್ತರಭಾಗದ ಪೂರ್ಣ ಕಥಾಭಾಗವನ್ನು ಪ್ರಕಟಿಸಲು ತಿಳಿಸಿದ್ದಾರೆ. ಅವರ ಈ ಸಲಹೆಯನ್ನು ಕಾರ್ಯಗತಗೊಳಿಸಿದ ಎರಡೂ ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಭಾಗವಹಿಸುವಿಕೆಯಿಂದ

ಹಿಡಿದು ಪುಸ್ತಕ ಪ್ರಕಟಣೆಯವರೆಗಿನ ಅಧ್ಯಾಪಕರ ಕ್ರಿಯಾಶೀಲತೆ ಒಂದು ಸಂಭ್ರಮದ ಆಚರಣೆಯಾಗಿ ಹರಿದಿದೆ. ಸ್ಪರ್ಧೆ ಮುಗಿದು ಪುಸ್ತಕ ಪ್ರಕಟವಾದಾಗ ಬಿಡುಗಡೆಗಾಗಿ ನನ್ನನ್ನು ಕರೆಸಿದ್ದರು. ಅಲ್ಲಿ ನಾಡಿನ ಬೇರೆಬೇರೆ ಕಾಲೇಜುಗಳಿಂದ ಅಧ್ಯಾಪಕರು, ವಿದ್ಯಾರ್ಥಿಗಳು ಪೋಷಕರು ಭಾಗವಹಿಸಿದ್ದನ್ನು ಕಂಡು ಪುಳಕಿತನಾದೆ. ಇದೊಂದು ವಿನೂತನ ರೀತಿಯ ಸೃಜನಶೀಲ ಸ್ಪರ್ಧೆ. ಹೀಗೆ ಸ್ಪರ್ಧೆ ನಡೆಸುವುದರಿಂದ ಕಾಲೇಜುಗಳೂ ನಾಡಿನಾದ್ಯಂತ ಗಮನ ಸೆಳೆಯುತ್ತವೆ. ಶೈಕ್ಷಣಿಕ ವಾತಾವರಣದಲ್ಲಿ ನಾಡಿನ ಎಲ್ಲ ಕಾಲೇಜುಗಳು ಒಳಗೊಳ್ಳುವುದರಿಂದ ಆಗುವ ಸಾಂಸ್ಕೃತಿಕ ಬಾಂಧವ್ಯದ ಲಾಭ ಹೇಳಿ ಕಳೆಯದ ಭಾವಭಾಗ್ಯ. ಇದು ರಾಜು ಅವರು ವಿದ್ಯಾರ್ಥಿಗಳಿಗಾಗಿ ಶಿಕ್ಷಣದಲ್ಲಿನ ಸೃಜನಶೀಲ ಬೆಳವಣಿಗೆಗಾಗಿ ರೂಪಿಸಿದ ಹೊಸಹೊಸ ಯೋಜನೆಗಳ ಬಿತ್ತರೂಪ. ಇಂಥ ಸಾಹಿತ್ಯ ಸಂಸ್ಕೃತಿ ಶಿಕ್ಷಣಗಳ ಸಂಪನ್ನಭಾವದ ಸರಳ ಸುಂದರ ಅಣ್ಣನ ವ್ಯಕ್ತಿತ್ವಕ್ಕೆ ಶರಣು.

❑

# ಬುದ್ಧನನ್ನು ಹೋಲುವ ರಾಜು

● ಕುಂ. ವೀರಭದ್ರಪ್ಪ

ಎಷ್ಟು ಹತ್ತಿರದಲ್ಲಿದ್ದರೂ ಕೊನೆತನಕ ಅಪರಿಚಿತರಾಗಿಯೇ ಉಳಿದುಬಿಡುವವರೇ ಬಹು ಸಂಖ್ಯಾತರು. ನೋಡಿದೊಡನೆ ಥಟ್ಟನೆ ನೆನಪಿನಲ್ಲಿ ಉಳಿದುಬಿಡುವುದಷ್ಟೇ ಅಲ್ಲ, ಅಂತರಂಗದಲ್ಲಿ ಸದಾ ಬೆಳೆಯುತ್ತಲೇ ಇರುವವರಾಗಲೀ, ಎಂದೋ ಕೇಳಿದ ಕೆಲಮಾತುಗಳು ದಿನಂಪ್ರತಿ ಅಸಂಖ್ಯಾತವಾಗುತ್ತಲೇ ಇರುತ್ತವೆ. ಅಲ್ಲದೆ ಅವು ಮಿಂಚುಹುಳುಗಳಾಗಿ ಅಂತರಂಗದ ತುಂಬೆಲ್ಲ ಅನುಭಾವ ಸದೃಶ ಬೆಳಕನ್ನು ಸಿಂಪಡಿಸುತ್ತಲೇ ಇರುತ್ತವೆ. ಇಂಥ ಅಲ್ಪಸಂಖ್ಯಾತರ ಪೈಕಿ ನನ್ನನ್ನು ಬಹುವಾಗಿ ತುಂಬ ಆಕರ್ಷಿಸಿದ್ದು ಚಿ. ಶ್ರೀನಿವಾಸ ರಾಜು. ಇವರು ಪುಸ್ತಕ ಸಂಸ್ಕೃತಿ ಪರಿಚಾರಕರು, ಮೂಕನಾಟಕಗಳ ರಚಯತರು, ಕವಿಗಳು, ವಿಚಾರವಾದಿಗಳು, ಸಹೃದಯಿಗಳು. ಹೀಗೆ ಏನೆಲ್ಲ ಹೌದು: ಅಷ್ಟೇ ಮಿಗಿಲಾದ ಸಂಗತಿ ಎಂದರೆ ಅಜಾತಶತ್ರು, ಧ್ವನಿ ಏರಿಸುವುದೊತ್ತಟ್ಟಿಗಿರಲಿ ಒಂದೇ ಒಂದು ಚಣ ಹುಬ್ಬೇರಿಸಿ ದುದನ್ನು ನಾನೆಂದೂ ಕಾಣೆ, ಒಂಥರಾ ರಿಜರ್ವ್‌ಡ್ ಎನ್ನಬಹು ದಾದಂಥ ವ್ಯಕ್ತಿತ್ವ ರಾಜುರವರದ್ದು. ತೂಗಿತೂಗಿ ಮಾತಾಡಬೇಕೆಂಬ ಮುಜುಗರ, ಸಂಕೋಚದಿಂದಾಗಿಯೇ ನಾನವರಿಗೆ ಮುಖಾಮುಖಿ ಯಾಗುವ ಉಸಾಬರಿಗೆ ಹೋಗಿಯೇ ಇಲ್ಲ. ಅದೇ ಶಾಶ್ವತವಾಗಿ ಉಳಿಯುವ ಮುಗುಳ್ನಗೆ, ಅದೇ ಹಿತಮಿತ ಮಾತು ದವಳಕಾಂತಿಯ ಮುಖೀಯ ರಾಜುರವರನ್ನು ನೋಡಿದವರು ಒಂದುಕ್ಷಣ ಬುದ್ಧನ ಮುಖವನ್ನು ನೆನಪಿಸಿಕೊಳ್ಳದೆ ಇರಲಾರರು. ಅರ್ಥಪೂರ್ಣ ಮಿತಿಯೊಳಗೆ ಮೌಲಿಕ ಸಾಧನೆ ಮಾಡಿದ್ದರೂ ಈ ಸನ್ಮಿತ್ರರು ಎಂದೂ ಪದವಿ ಪ್ರಶಸ್ತಿಗಳಿಗೆ ಹಪಹಪಿಸಿದವರಲ್ಲವೇ ಅಲ್ಲ. ಪ್ರಖರ ವೈಚಾರಿಕ ತಿಳುವಳಿಕೆ ಇದ್ದರೂ ನಿಷ್ಠುರವಾಗಿ ಮಾತಾಡಿದವರಲ್ಲವೇ ಅಲ್ಲ. ಅಂಥ ಸಂದರ್ಭ ಬಂದಾಗ ನಸುನಗೆಯಿಂದ ತಮ್ಮ ಇರುವಿಕೆ ಯನ್ನು ಕುರುಹಿನೊಂದಿಗೇನೆ ನಿರ್ಗಮಿಸಿಬಿಡುವ ತಣ್ಣಗಿನ ಸ್ವಭಾವ ದವರು. ಇಲ್ಲೆಲ್ಲೋ ಚಿ. ಶ್ರೀನಿವಾಸರಾಜು ಇದ್ದ ಹಾಗೆ ಇತ್ತಲ್ಲ

ಎಂದು ಹುಡುಕಾಡುವ ಹಾಗೆ, ರಾಜು ನುಡಿದರೆ ಮೌನ ನಡೆದರೆ ನಿರ್ಗಮನ ಒಟ್ಟಿನಲ್ಲಿ. ನನಗೀ ಮಹನೀಯ ಹೀಗೇ ಪರಿಚಯ ಆದರೂಂತ ನಿಖರವಾಗಿ ಹೇಳುವುದು ಕಷ್ಟ. ಅವರು ತುಂಬಾನೆ ಚಿರಪರಿಚಿತರು ಅಲ್ಲದಿದ್ದರೂ ಅಪರಿಚಿತರೇನಲ್ಲ. ಅವರ ಮೊಟ್ಟಮೊದಲ ಸಲ ಪರಿಚಯ ಎಲ್ಲಾಯ್ತು? ಹೇಗಾಯ್ತು? ಅಂತ ಹುಡುಕುತ್ತ ಹೋದಲ್ಲಿ..

ಬದುಕಿನೊಂದಿಗೆ ಸಾಹಿತ್ಯಿಕವಾಗಿ ಕಣ್ಣುಜ್ಜಿಕೊಳ್ಳುತ್ತಿದ್ದಾಗಿನ ಕಾಲ ಈಗಿನಷ್ಟು ಸುಭಿಕ್ಷವಾಗಿರಲಿಲ್ಲ. ತನ್ನ ನಿರಂಕುಶ ನಡವಳಿಕೆಯಿಂದ ಇಂದಿರಾಗಾಂಧಿ ಅಂತರ್ರಾಷ್ಟ್ರೀಯವಾಗಿ ಕಣ್ಣು ಹಿಗ್ಗಲಿಸುವಂತೆ ಮಾಡಿದ್ದಳಷ್ಟೆ. ಒಂದಲ್ಲಾ ಒಂದು ಚಳವಳಿಗಳು ದೇಶದ ಯುವ ಮನಸ್ಸುಗಳನ್ನು ಸಂಘಟಿಸುವಂತೆ ಮಾಡಿದ್ದವು. ಬರಹ ಮತ್ತು ಮಾತಿನ ಕಮ್ಮಟ ಆ ಕಾಲವಾಗಿತ್ತು, ಚೂರುಪಾರು ಓದಿಕೊಂಡಿದ್ದ ನಾವು ಸಹಜವಾಗಿಯೇ ಚಳವಳಿ ಮತ್ತು ಸಾಹಿತ್ಯದ ಕಡೆ ಆಕರ್ಷಿತಗೊಂಡಿದ್ದೆವು. ನಾಡಿನ ಹಲವು ಮೂಲೆ ಮುರುಗಟ್ಟುಗಳಿಂದ ಕೇಳಿಬರುತ್ತಲಿದ್ದ ಜನಪರ ಕಾಳಜಿಯ ಧ್ವನಿಗಳನ್ನು ಶಿಸ್ತಿನಿಂದ ಆಲಿಸುತ್ತಿದ್ದೆವು. ಕನ್ನಡ ಸಾಹಿತ್ಯಕ್ಕೆ ವೈಚಾರಿಕ ಕ್ಷಿತಿಜವನ್ನು ಪರಿಚಯಿಸಿದ ಪ್ರಮುಖ ಲೇಖಕರು ಸರ್ವಾಧಿಕಾರಿಗಳ ವಿರುದ್ಧ ಎಷ್ಟೊಂದು ಅರ್ಥಪೂರ್ಣವಾಗಿ ಬರೆಯುತ್ತಿದ್ದರು ಮತ್ತು ಮಾತಾಡುತ್ತಿದ್ದರೆಂದರೆ ನಾವೆಲ್ಲ ಪಂಚೇಂದ್ರಿಯಗಳನ್ನರಳಿಸಿಕೊಂಡು ಆಲಿಸುತ್ತಿದ್ದೆವು. ಪ್ರತಿಯೊಬ್ಬ ಲೇಖಕರ ನಡಾವಳಿಯನ್ನು ಎಚ್ಚರಿಕೆಯಿಂದ ಗಮನಿಸುತ್ತಿದ್ದೆವು. ಸರ್ವಾಧಿಕಾರಿ ಶಕ್ತಿಗಳೊಂದಿಗೆ ಕೈಜೋಡಿಸಿದ ಲೇಖಕ ಎಷ್ಟೇ ಪ್ರಭಾವಶಾಲಿಯಾಗಿದ್ದರೂ ಮುಲಾಜಿಲ್ಲದೆ ಖಂಡಿಸುತ್ತಿದ್ದೆವು. ಜನಪರ ಕಾಳಜಿಯ ಯುವಲೇಖಕ ಸಮೂಹಕ್ಕೆ ಹೆದರಿದ ಅನೇಕ ಮಂದಿ ಮಹತ್ವದ ಲೇಖಕರು ಅಲ್ಲೂ ಸಲ್ಲುತ್ತ ಇಲ್ಲೂ ಸಲ್ಲುತ್ತ ಉಭಯಚರಜೀವಿಗಳಾಗಿದ್ದರು. ಇನ್ನೂ ಕೆಲವರು ಅರ್ಥವಾಗದ ರೂಪಕ ಸಂಕೇತಗಳಿಂದ ಕೃತಿಯನ್ನು ಒಟ್ಟರಿಸಿ ನಮ್ಮನ್ನು ದಾರಿತಪ್ಪಿಸಲು ಪ್ರಯತ್ನಿಸುತ್ತಿದ್ದರು. ಕೆಲವು ಮತ್ತು ಬಹುಮುಖ್ಯ ಲೇಖಕರಂತೂ ಒಂದು ಹೊಚ್ಚ ಹೊಸ ಸಾಹಿತ್ಯಿಕ ಮಾದರಿಯ ನಿರ್ಮಾಣದಲ್ಲಿ ತೊಡಗಿದ್ದರೆಂಬುದು ಗಮನಾರ್ಹ. ಅಂಥ ಲೇಖಕರ ಪಡೆಯ ಚುಕ್ಕಾಣಿ ಹಿಡಿದಿದ್ದ ನಾಡೋಜ ಜಿ.ಎಸ್.ಶಿವರುದ್ರಪ್ಪ ಅನುಭವಮಂಟಪದ ರೂವಾರಿ ಮತ್ತು ಮುಖ್ಯಸ್ಥ ಅಲ್ಲಮಪ್ರಭುವನ್ನು ಹೋಲುತ್ತಿದ್ದರು. 'ಕಪ್ಪುಜನರ ಕೆಂಪುಕಾವ್ಯ' ಸಂಕಲನ ಮೂಲಕ ಸಾಹಿತ್ಯಾಸಕ್ತರ ಗಮನ ಸೆಳೆದಿದ್ದ ನಾವು ಆ ಅಂಥ ಲೇಖಕರ ಪಡೆಯನ್ನು ಆದರ್ಶವಾಗಿಟ್ಟುಕೊಂಡಿದ್ದೆವು. ಅವರು ಪ್ರಕಟಿಸುತ್ತಿದ್ದ ಪ್ರತಿಯೊಂದು ಕೃತಿಯನ್ನು ಉತ್ಕಟತೆಯಿಂದ ಸ್ವಾಗತಿಸಿ ಓದುವುದೊಂದೇ ಅಲ್ಲ ಪಾರಾಯಣ ಮಾಡುತ್ತಿದ್ದೆವು. ಅವುಗಳನ್ನು ನಮ್ಮದೇ ಆದ ರೀತಿಯಲ್ಲಿ ವಿಮರ್ಶಿಸಿಕೊಳ್ಳುತ್ತಿದ್ದೆವು. ವಿಚಾರಧಾರೆಯ ಹುಟ್ಟುವಳಿ ಮತ್ತು ವಿತರಣಾ ವ್ಯವಸ್ಥೆಯ ಮುಖ್ಯ ಕೇಂದ್ರವಾಗಿದ್ದ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಮುಖ್ಯವಾಗಿ ಜಿ.ಎಸ್.ಎಸ್. ಮುಖ್ಯಸ್ಥರಿದ್ದ ಕನ್ನಡ ಅಧ್ಯಯನ ಕೇಂದ್ರಕ್ಕೆ ಭೇಟಿ ನೀಡುವುದು, ಎದುರಾದ ಲೇಖಕರನ್ನು ತರುಬಿ ಕೈಕುಲುಕುವುದು ಮಾತನಾಡಿಸುವುದು ಇದೆಲ್ಲವನ್ನು ಭಲೆಖುಷಿಯಿಂದ ಮಾಡುತ್ತಿದ್ದೆವು. ಆ ಸಂದರ್ಭದಲ್ಲಿ ಕಿ.ರಂ. ನಾಗರಾಜ ಸಂಪಾದಿಸಿದ್ದ 'ಆಪತ್ಕಾಲೀನ ಕವಿತೆಗಳ ಸಂಕಲನ'ದ ಕವಿಗಳನ್ನು ಹುಡುಕಾಡುತ್ತಿದ್ದೆವು. ನಮ್ಮ ಅಂದಿನ ದುರಾದೃಷ್ಟಕ್ಕೋ, ಕ್ರೈಸ್ಟ್ ಕಾಲೇಜಿನ ಪುಣ್ಯಕ್ಕೋ ರಾಜು ನಾವು ಹುಡುಕಾಡುತ್ತಿದ್ದ ನಿಗೂಢ ತಾಣಗಳಲ್ಲಿರುತ್ತಿರಲಿಲ್ಲ. ಆದ್ದರಿಂದ ಆಗ ಅವರನ್ನು ಭೇಟಿ ಮಾಡುವುದು

ಸಾಧ್ಯವಾಗಲಿಲ್ಲ. ಎಲ್ಲೋ ಇದ್ದ ಕ್ರೈಸ್ಟ್ ಕಾಲೇಜನ್ನು ಹುಡುಕುವ ಗೋಜಿಗೂ ಹೋಗುತ್ತಿರಲಿಲ್ಲ. ಕಾರಣ ಬೆಂಗಳೂರನ್ನು ಪ್ರವೇಶಿಸಿದ ಒಂದೆರಡು ದಿನಗಳಲ್ಲಿಯೇ ನಮ್ಮ ಜೇಬುಗಳು ಅಪಮೌಲ್ಯ ಕ್ಕೀಡಾಗಿಬಿಡುತ್ತಿದ್ದವು. ಆದರೂ ಅವರ ಕುರಿತು ಅನೇಕ ರೀತಿಯಲ್ಲಿ ಕಲ್ಪಿಸಿಕೊಳ್ಳುತ್ತಿದ್ದೆವು. ನಮ್ಮ ಕಲ್ಪನೆಯೊಳಗೆ ಅವರಿಗೆ ಮೀಸೆಯನ್ನು ಧಾಳವಾಗಿ ಮುಡಿಸದೆ ಇರುತ್ತಿರಲಿಲ್ಲ. ಯಾಕೆಂದರೆ ಅವರು ರಾಜು, ಕುರುಚಲು ಗಡ್ಡವನ್ನೂ ಸಹ ಕಾರಣ ಅದು ಬಂಡಾಯದ ಉಚ್ಛ್ರಾಯ ಕಾಲವಾಗಿತ್ತು. ಗಡ್ಡ ಬಿಟ್ಟಿರದವರು ಕವಿಗಳೇ ಅಲ್ಲವೆಂಬುದು ನಮ್ಮ ತೀರ್ಮಾನವಾಗಿತ್ತು. ಆ ಸಂದರ್ಭದಲ್ಲಿ ಬಂಡಾಯ ಲೇಖಕರು ಜಳಕ ಮಾಡುವುದು ಒತ್ತಟ್ಟಿಗಿರಲಿ, ಹಲ್ಲು ಸಹ ಉಜ್ಜುತ್ತಿರಲಾರರು ಎಂಬ ವದಂತಿಗೆ ನಾವೆಲ್ಲ ಬಲಿ-ಮರುಳಾಗಿದ್ದೆವು. ಅದರೊಟ್ಟಿಗೆ ಜೀಡಿ-ಗುಂಡು ಇತ್ಯಾದಿ. ಮುಖವನ್ನು ಯಾರು ಹೆಚ್ಚು ಹೆಚ್ಚಾಗಿ ಗಂಟಿಟ್ಟು ಕೊಂಡಿರುತ್ತಾರೋ ಮತ್ತು ಅವರ ಮುಖವೆಂಬ ನಿಘಂಟಿನೊಳಗೆ ಮುಗುಳ್ನಗು ಎಂಬ ಪದವಿರುವುದೇ ಇಲ್ಲವೋ ಅಂಥವರು ಮಾತ್ರ ಬಂಡಾಯ ಲೇಖಕರಾಗಿರಲು ಸಾಧ್ಯವೆಂದೇ ನಾವು ಭಾವಿಸಿದ್ದೆವು. ತದನಂತರ ಆ ಕಲ್ಪನೆ, ವದಂತಿಗಳು ನಗಣ್ಯಕ್ಕೊಳಗಾದವು. ಅದು ಬೇರೆ ಸಂಗತಿ. ರಾಜು ಕವಿತೆಗಳ ಮೂಲಕ ಮೂಕ ನಾಟಕಗಳ ಮೂಲಕ ನಮಗೆಲ್ಲ ಹೆಚ್ಚು ಅರ್ಥ ಮತ್ತು ಇಷ್ಟವಾಗುತ್ತಾ ಹೋದರು. ಬಹಳ ವರ್ಷಗಳವರೆಗೆ ಅವರು ಅಷ್ಟೇ ನಿಗೂಢವಾಗಿ ನೇಪಥ್ಯದಲ್ಲಿ ಉಳಿದರು. ಧ್ವನಿ ಮತ್ತು ಹುಬ್ಬುಗಳನ್ನೇರಿಸಲು ಗೊತ್ತಿಲ್ಲದವರು ಮಾತ್ರ ನೇಪಥ್ಯದಲ್ಲಿ ಉಳಿಯಲು ಸಾಧ್ಯವೆಂಬುದಕ್ಕೆ ರಾಜುರವರೇ ಸಾಕ್ಷಿ.

ಅವರನ್ನು ಎಲ್ಲಿ ಮತ್ತು ಹೇಗೆ ಪ್ರಪ್ರಥಮವಾಗಿ ಭೇಟಿಯಾದೆ ಎಂಬುದು ನನಗಿನ್ನೂ ಅಸ್ಪಷ್ಟ. ಇಲ್ಲೇ ಇದ್ದರಲ್ಲ! ಹೀಗೇ ಇದ್ದರಲ್ಲ ಎಂದು ಅವರಿವರಿಂದ ಕೆಲ ಉದ್ಗಾರಗಳು ಮಾತ್ರ ಕೇಳಿಬಂದದ್ದುಂಟು. ಕ್ರೈಸ್ಟ್ ಕಾಲೇಜಿನ ಕನ್ನಡ ವಿಭಾಗವನ್ನು ಮುತುವರ್ಜಿಯಿಂದ ರಾಜು ಕಟ್ಟಿ ಬೆಳೆಸಿದರೆಂಬುದು ನಿರ್ವಿವಾದದ ಸಂಗತಿ. ಹಾಗೆಯೇ ಅವರು ಪ್ರಖರವಿಚಾರವಾದಿ ಎಚ್. ನರಸಿಂಹಯ್ಯ ಅವರನ್ನು ಅರ್ಥಪೂರ್ಣವಾಗಿ ಕನ್ನಡ ಸಾರಸ್ವತಲೋಕಕ್ಕೆ ಪರಿಚಯಿಸಿದವರು. ಎಷ್ಟೇ ಗಾಂಧಿವಾದಿಯಾಗಿದ್ದರೂನೂವೆ ಪುಟ್ಟಪರ್ತಿ ಸ್ವಯಂ ಘೋಷಿತ ದೇವಮಾನವ ಸಾಯಿಬಾಬವಿರದಿದ್ದಲ್ಲಿ ನರಸಿಂಹಯ್ಯನವರು ಹೆಚ್ಚು ಪರಿಚಯವಾಗು ತ್ತಿರಲಿಲ್ಲವೇನೋ! ಅಪ್ಪಟ ಸಸ್ಯಾಹಾರಿ ಮತ್ತು ಬ್ರಹ್ಮಚಾರಿಯಾಗಿರುವರೂ ಸಾಯಿಬಾಬನ ಭೂತವನ್ನು ಪರಿಣಾಮಕಾರಿಯಾಗಿ ಬಿಡಿಸಬಲ್ಲರು ಎಂಬುದಕ್ಕೆ ನರಸಿಂಹಯ್ಯ ಅವರೇ ಪ್ರತ್ಯಕ್ಷ ಪುರಾವೆಯಾಗಿದ್ದರು. ಅವರ ಪ್ರಭಾವ ವಲಯದಲ್ಲಿ ರಾಜು ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿಯಾಗಿದ್ದರು. ನರಸಿಂಹಯ್ಯ ಅವರಿಗೆ ಎಷ್ಟು ಮುಖ್ಯವಾಗಿದ್ದರೋ ಬೇಂದ್ರೆ ಕೂಡ ಅಷ್ಟೇ ಮುಖ್ಯವಾಗಿದ್ದರು. ಇದಕ್ಕೊಂದು ಒಳ್ಳೆಯ ನಿದರ್ಶನವೆಂದರೆ ಶ್ರೀಯುತರು ಕಾಲೇಜು ವಿದಾರ್ಥಿಗಳಿಗೆ ಬೇಂದ್ರೆ ಹೆಸರಿನಲ್ಲಿ, ಕಾವ್ಯ ಸ್ಪರ್ಧೆ ಏರ್ಪಡಿಸುತ್ತಿದ್ದುದು. ವಿಕ್ರಮವಿಸಾಜಿ ಸೇರಿದಂತೆ ಈಗಿನ ಅನೇಕ ಮಹತ್ವದ ಕವಿಗಳು ಬೆಳಕಿಗೆ ಬಂದದ್ದು ಆ ಅಂಥ ಸ್ಪರ್ಧೆಯಿಂದ. ಬಹುಮಾನ ಏನಂತೀರಾ... ಮೌಲಿಕ ಪುಸ್ತಕಗಳ ರೂಪದಲ್ಲಿ ಬಹುಮಾನ ವಿರುತ್ತಿತ್ತು. ವಿಜೇತಕವಿಗಳನ್ನು ಅವರವರ ಖರ್ಚಿನಲ್ಲೇ ಕ್ರೈಸ್ಟ್ ಕಾಲೇಜಿಗೆ ಬರಮಾಡಿಕೊಂಡು ರಾಜು ಗೌರವಿಸುತ್ತಿದ್ದುದೂ ಬಹುಮಾನಿತ ಕವಿತೆಗಳನ್ನು ಸಂಕಲನದ ರೂಪದಲ್ಲಿ

ಪ್ರಕಟಿಸುತ್ತಿದ್ದುದೂ ಕಾವ್ಯ ಜನಪ್ರಿಯಗೊಳ್ಳಲು ಸೋಪಾನವಾಯಿತು. ಕಾಲೇಜು ವಿದ್ಯಾರ್ಥಿಗಳಾಗಿದ್ದಲ್ಲಿ ಪಾಡಿರುತ್ತಿತ್ತಲ್ಲಾ ಅಂತಾನೆ ನಾವು ಕಡಿಮೆ ಬೆಲೆಯ ಉತ್ತಮ ಗುಣಮಟ್ಟದ ಸಂಕಲನಗಳನ್ನು ಖರೀದಿಸಿ ಪಾರಾಯಣ ಮಾಡುತ್ತಿದ್ದೆವು. ಯಾವುದೇ ಒಂದು ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಇರುವಷ್ಟೆ ಬೆಲೆ ರಾಜು ಉಸ್ತುವಾರಿತ್ವದ ಕ್ರೈಸ್ಟ್ ಕಾಲೇಜಿನ ಗ್ರಂಥಮಾಲೆಗೂ ಇತ್ತು. ನಾಡಿನ ಅನೇಕ ಮಹತ್ವದ ಲೇಖಕರ ಕೃತಿಗಳನ್ನು ಪ್ರಕಟಿಸಿರುವ ಶ್ರೇಯಸ್ಸಿಗೆ ಕ್ರೈಸ್ಟ್ ಕಾಲೇಜಿನ ಗ್ರಂಥಮಾಲೆ ಭಾಜನವಾಗದಿರಲು ಸಾಧ್ಯವಿಲ್ಲ. ಮೌಲಿಕ ಮತ್ತು ಓದುಗನನ್ನು ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿ ಸುಸಂಪನ್ನಗೊಳಿಸುವ ಕೃತಿಗಳ ಪ್ರಕಟಣೆಯಿಂದಾಗಿ ಮತ್ತು ವಾಗ್ವಾದ ಮತ್ತು ಸಂವಾದಗಳನ್ನು ಸೃಷ್ಟಿಸುತ್ತಿದ್ದುದರಿಂದಾಗಿ ರಾಜು ನಾಡಿನ ಗಮನವನ್ನು ತಮ್ಮತ್ತ ಕೇಂದ್ರೀಕರಿಸಿಕೊಂಡಿದ್ದರು. ಆ ಜೋಗಿ ಜಂಗಮ ಜೋಳಿಗೆಯಲ್ಲಿ ಪೆಂಡೆಪೆಂಡೆ ಪುಸ್ತಕಗಳನ್ನಿಟ್ಟುಕೊಂಡು ಮಾರುವ ಕಡೆ ಮಾರುತ್ತ, ಉದ್ರಿ ಬಯಸಿದವರಿಗೆ ಉದ್ರಿ ಕೊಡುತ್ತ, ಹಲವರಿಗೆ ಉಚಿತವಾಗಿಯೂ ಕೊಡುತ್ತ ಪುಸ್ತಕ ಸಂಸ್ಕೃತಿಯ ಪರಿಚಾರಕರಾಗಿ ಕೆಲಸ ಮಾಡಿದರು. ನನಗಷ್ಟೆ ಮಾತ್ರ ಗೊತ್ತಿರುವ ಸಂಗತಿ ಎಂದರೆ ನಾನೂ ಕ್ರೈಸ್ಟ್ ಕಾಲೇಜಿನ ಗ್ರಂಥಮಾಲೆ ಋಣದಲ್ಲಿರುವಾತನೆ. 'ಮಿಲರೇಪ' ಮುದ್ರಿತಗೊಂಡು ಹಲವು ದಶಕಗಳು ಉರುಳಿದ್ದರೂ ಋಣಮುಕ್ತನಾಗಲು ಮನಸ್ಸುಮಾಡಿಲ್ಲ. ಕೆಲವೊಮ್ಮೆ ರಾಜುರವರೆ ಹಿಂದಲೆ ಕೆರೆಯುತ್ತಿದ್ದ ನನ್ನನ್ನುದ್ದೇಶಿಸಿ 'ಕೊಡುವಂತಿ ಬಿಡಿ.... ನನಗೆ ನಿಮ್ಮಂಥೋರು ಓದೋದು ಮುಖ್ಯ' ಎಂದು ಪ್ರಾಂಜಲ ಮನಸ್ಸಿನಿಂದ ಹೇಳಿದ್ದುಂಟು. ನನ್ನ ಹಾಗೆ ಎಷ್ಟು ಮಂದಿ ಉದ್ರಿ ತೆಗೆದುಕೊಂಡಿರುವರೇನೋ! ಆದರೂ ರಾಜು ತಮ್ಮ ಸರಳ ರೇಖೆಯಂಥ ಮಾತಿನ ಗತಿ ಬದಲಿಸಿದವರೇ ಅಲ್ಲ.

ರಾಜುರವರ ಪರಿಚಯ ನನಗೆ ನಿಕಟವಾಗಿ ಆದದ್ದು ಕನ್ನಡ ವಿಶ್ವವಿದ್ಯಾಲಯದಲ್ಲಿ. ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಹಲವು ಅರ್ಥಪೂರ್ಣ ಆಯಾಮಗಳನ್ನು ಮುಡಿಸಿದ ಶ್ರೇಯಸ್ಸು ಅವರಿಗೇ ಸಲ್ಲಬೇಕು. ದೂರದೂರ ಉಳಿದಿದ್ದ ಮುಖ್ಯ ಲೇಖಕರ ಪೈಕಿ ಪ್ರೊ. ಓ.ಎಲ್.ನಾಗಭೂಷಣಸ್ವಾಮಿ, ಡಾ. ಎಚ್.ಎಸ್. ರಾಘವೇಂದ್ರರಾವ್, ಡಾ. ಕೆ.ವಿ. ನಾರಾಯಣ, ಪ್ರೊ. ಕಿ.ರಂ. ನಾಗರಾಜರಂಥವರೊಂದಿಗೆ ಆರೇಳು ತಿಂಗಳುಗಳ ಕಾಲ ಒಡನಾಡುವ ಸೌಭಾಗ್ಯ ನನ್ನದಾಗಿತ್ತು. ಎಲ್ಲರೂ ಒಂದೇ ಕುಟುಂಬದಿಂದ ಒಡಮೂಡಿದವರಂತೆ ಅನ್ಯೋನ್ಯವಾಗಿದ್ದರಲ್ಲದೆ ಗಂಭೀರ ಕೃತಿಗಳ ಕುರಿತು ಚರ್ಚಿಸುತ್ತಿದ್ದರು. ರಾಜುರವರಂತೂ ಬಂಗಾರ ಸದೃಶ ಮೌನಕ್ಕೆ ಶರಣು ಹೋಗುತ್ತಿದ್ದರು. ಒಮ್ಮೆ ಮಾತಿಗೆ ಮಾತು ಬಂದು 'ಕುಂವೀ ನಮ್ ಕ್ರೈಸ್ಟ್ ಕಾಲೇಜಿನ ಗ್ರಂಥಮಾಲೆಗೆ ನಿಮ್ಮದೊಂದು ಕೃತೀನ ಕೊಡಬಹುದಲ್ಲ' ಎಂದು ಕೇಳಿದರು. ಅಥವಾ ನಾನೇ ಪ್ರಸ್ತಾಪಿಸಿದ್ದೆನೋ ತಿಳಿಯದು. ಅರೆ ಹೌದಲ್ಲ ಅಂತ 'ಕೊಟ್ರ ಹೈಸ್ಕೂಲಿಗೆ ಸೇರಿದ್ದು' ಎಂಬ ಕಾದಂಬರಿಯನ್ನು ನೆನಪುಮಾಡಿಕೊಂಡೆ. ಅದು ಪ್ರಕಟಣೆಗೆಂದು ಹೋಗಿ ಲಂಕೇಶ್‌ಪತ್ರಿಕೆಯ ಕಸದ ಬುಟ್ಟಿಯಲ್ಲಿ ವಿಶ್ರಾಂತಿ ಪಡೆಯತೊಡಗಿತ್ತು. ಹೋಗಿ ಅದನ್ನು ಆಯ್ದು ತಂದು ಮಯೂರಕ್ಕೆ ಕಳಿಸಿದೆ ಎರಡು ಕಂತುಗಳಲ್ಲಿ ಪ್ರಕಟಗೊಂಡು ಜನಪ್ರಿಯವಾಯಿತು. ಪ್ರಕಟಿಸುವ ಸಲುವಾಗಿ ತೆಗೆದುಕೊಳ್ಳುತ್ತ ಗೌರವಧನ ಕೊಡುವ ಸ್ಥಿತಿಯಲ್ಲಿ ಗ್ರಂಥಮಾಲೆ ಇಲ್ಲವೆಂತಲೂ ಐದೋ ಹತ್ತೋ ಪ್ರತಿಗಳನ್ನು ಹೆಚ್ಚಿಗೆ ಕೊಡುವುದಾಗಿಯೂ

ಖುಲ್ಲಂ ಖುಲ್ಲ ಹೇಳಿದರು. ಓ.ಎಸ್. ಎಂದೆ. ಅದು ಪ್ರಕಟವಾಗಿ ನನಗೆ ಆಶ್ಚರ್ಯ ತಂದಿತು. ಲೇಖಕನಿಗಿಂತ ಮುಖ್ಯವಾಗಿ ಪ್ರಕಾಶಕರೇ ಅದರ ಓದಿನ ಚಾರಣದ ಅನುಭವವನ್ನು ಸಂಗ್ರಹಿಸಿ ವಿವರಿಸುತ್ತಿದ್ದುದುಂಟು. ಕನ್ನಡದ ಕೆಲವು ಮುಖ್ಯ ಲೇಖಕರು ಅದನ್ನು ಗಂಭೀರವಾಗಿ ಓದಿದ್ದೂ ಅಲ್ಲದೆ ನನಗೆ ಪತ್ರಗಳನ್ನೂ ಬರೆದರು. ನನ್ನ ಬಾಲ್ಯದ ಅನುಭವದ ಹಿನ್ನೆಲೆಯಲ್ಲಿ ಬರೆದಿದ್ದ ಆ ಕಿರುಕಾದಂಬರಿ ನಿಸ್ಸಂದೇಹವಾಗಿ ಲೇಖಕನಿಗೆ ಸಾರ್ಥಕತೆಯನ್ನು ನೀಡಿದ ಕೃತಿ. ರಾಜುರವರ ದೊಡ್ಡ ಗುಣವೆಂದರೆ ಮುಂದೆ ಎಂದೋ ಒಂದು ದಿನ ನನ್ನನ್ನು ತಮ್ಮ ಕ್ರೈಸ್ಟ್ ಕಾಲೇಜಿಗೆ ಬರಮಾಡಿಕೊಂಡರು. ಮಕ್ಕಳಿಗೆ ಪರಿಚಯಿಸಿದರು. ಬರುವಾಗ್ಗೆ ನಿಮ್ಮ ಕಾದಂಬರಿಯಿಂದ ಲಾಭ ಬಂದಿರುವುದೆಂದೂ ಹೇಳುತ್ತ ಎರಡೂವರೆಸಾವಿರ ರೂಪಾಯಿಗಳನ್ನು ಕೊಟ್ಟರು. ಅವರ ಹಾಗೆ ನಗು ನಗುತ್ತ ಲೇಖಕರಿಗೆ ಗೌರವಧನ ಕೊಡುವ ಏಕೈಕ ಪ್ರಕಾಶಕರೆಂದರೆ ರಾಜು ಮಾತ್ರ. ಆಗ್ಗೆ ನನಗಿದ್ದ ಹಣದ ಅವಶ್ಯಕತೆಯನ್ನು ಅವರು ಸೂಕ್ಷ್ಮವಾಗಿ ಗ್ರಹಿಸಿ ಆರ್ಥಿಕವಾಗಿ ಸ್ಪಂದಿಸಬಹುದೆಂದು ನಾನು ನಿರೀಕ್ಷಿಸಿರಲಿಲ್ಲ. ಹಣವಿದ್ದ ಲಕೋಟೆಯನ್ನು ಜೇಬಿನಲ್ಲಿಟ್ಟುಕೊಳ್ಳುವಾಗ ನನ್ನ ಕಣ್ಣುಗಳು ಒದ್ದೆಯಾಗದೆ ಇರಲಿಲ್ಲ. ತುಂಬ ಪ್ರೀತಿಯಿಂದ ಅವರಿಂದ ಬೀಳ್ಕೊಂಡು ನಾನು ಮೆಜೆಸ್ಟಿಕ್‌ಗೆ ಹೊರಟಿದ್ದ ಬಸ್ ಹತ್ತಿದೆ.

ಅಂದಿನಿಂದ ಇಂದಿನವರೆಗೆ ಅವರನ್ನು ಮಾನಸಿಕವಾಗಿ ಭೆಟ್ಟಿಯಾಗುತ್ತಲೇ ಇರುವೆ. ಅದು ಬರಹಗಳ ಮೂಲಕ ನೆನಪುಗಳ ಮೂಲಕ, ತಾವು ನಗಿಸುವವರಲ್ಲವೇನೋ ಎಂಬಂತಿರುವ ರಾಜು ಅತ್ಯುತ್ತಮ ವಿಡಂಬನಕಾರರು, ಲಲಿತಪ್ರಬಂಧಕಾರರು. ತುಂಬ ಕಡಿಮೆ ಎಂಬಷ್ಟು ಅವರ ಆ ಜಾಯಮಾನದ ಲಘುಲೇಖನಗಳು ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಹೈ-ಟೆಕ್ ಟಾಯ್ಲೆಟ್ ವಿವರಗಳುಳ್ಳ ಲೇಖನ ಓದುವಾಗಂತೂ ನಾನು ನನ್ನ ಹೆಂಡತಿ ಬಿದ್ದೂ ಬಿದ್ದೂ ನಕ್ಕಿದ್ದೇವೆ. ಸುಖೀ ಕುಟುಂಬದ ಒಡೆಯರಾಗಿರುವ ರಾಜುರವರ ಅತ್ಯಾಧುನಿಕ ಮನೆಗೆ ಭೇಟಿ ನೀಡಿ ಹೈ-ಟೆಕ್ ಟಾಯ್ಲೆಟ್‌ನ ದರ್ಶನ ಪಡೆಯಬೇಕೆಂದು ಕಳೆದೊಂದು ವರ್ಷದಿಂದ ಅಂದುಕೊಳ್ಳುತ್ತಲೇ ಇರುವೆ. ಅದು ಎಂದು ಈಡೇರುವುದೋ ಎಂದು ಕಾಯುತ್ತಿರುವೆ.



# ಸಾಧು ಪ್ರಾಣಿ

● ಯು.ಎಸ್. ಶ್ರೀನಿವಾಸ್ (ಪುವ್ಯಾಶ್ರೀ)

ಶ್ರೀನಿವಾಸರಾಜು ಬಗ್ಗೆ ಏನು ಬರೆಯುವುದು? ಏನೂ ತೋಚುತ್ತಲೇ ಇಲ್ಲವಲ್ಲ, ಏನು ಮಾಡುವುದೀಗ....?

ಸುಮಾರು ವರುಷಗಳ ಕೆಳಗೆ, ಒಂದು ದಿವಸ ನಮ್ಮ ಕ.ವೆಂ. (ಕ.ವೆಂ. ರಾಜಗೋಪಾಲ), "ರಾಜು ಮನೆಗೆ ಹೋಗಿ ಬರೋಣ. ಬನ್ನಿ, 'ಪ್ರಜಾವಾಣಿ'ಗೆ ಒಂದು ಲೇಖನ ಕಳಿಸಬೇಕು, ಬರ್ತೀರಾ?" ಅಂದರು. ಸರಿ ಎಂದು ಜೊತೆಗೆ ಹೊರಟರೆ, ಕ.ವೆಂ. ಹೊರಟಿದ್ದು ಮಲ್ಲೇಶ್ವರಂ ಸಂಪಿಗೆ ರಸ್ತೆ ದಿಕ್ಕಿನಲ್ಲಿ. ಇದೇನು ರಾಜು ಇರುವುದು ನಾಗಪ್ಪ ಬ್ಲಾಕ್‌ನಲ್ಲಿ, ಆದರೆ ಹೊರಟಿದ್ದು ಆದರೆ ಹೊರಟಿರುವುದು ಇನ್ನೊಂದು ದಿಕ್ಕಿನಲ್ಲಿ ಎಂದು ವಿಚಾರಿಸಿದರೆ, "ಈಗ ನಾವು ಹೋಗುತ್ತಿರುವುದು ಶ್ರೀನಿವಾಸರಾಜು ಮನೆಗೆ, ವೈಕುಂಠರಾಜು ಮನೆಗಲ್ಲ"ವೆಂದು ತಿಳಿಸಿದರು. ಕ.ವೆಂ ಬರೆದ ಲೇಖನವನ್ನು 'ಪ್ರಜಾವಾಣಿ'ಗೆ ತಲುಪಿಸುತ್ತಿದ್ದುದು ಶ್ರೀನಿವಾಸರಾಜು. ನೇರವಾಗಿ ವೈಕುಂಠರಾಜುವಿನ ಕೈ ತಲುಪಿಸಬಾರದೇಕೆನ್ನುವ ಪ್ರಶ್ನೆಗೆ ಉತ್ತರ ವೇನು ಗೊತ್ತೇ? "ಶ್ರೀನಿವಾಸರಾಜುವಿಗೆ ಈ ರೀತಿಯ ಕೆಲಸ ಮಾಡುವುದು ಇಷ್ಟ. ನನಗೂ ಅಷ್ಟೆ" ಎಂದರು.

ಒಂದಾನೊಂದು ಕಾಲದಲ್ಲಿ ಮಲ್ಲೇಶ್ವರದಲ್ಲೊಂದು ಈಜುಗೊಳವಿತ್ತು. ಆ ಈಜುಗೊಳಕ್ಕೆ ಹೋಗುವ ದಾರಿ, ಈಗ ಹಳೇ ಈಜುಗೊಳದ ರಸ್ತೆ ಎಂದಾಗಿದೆ. ಆ ರಸ್ತೆಯಲ್ಲಿ 'ಚಿರಜೀವಿ' ಎಂದು ಹೆಸರಿರುವ ಮನೆ. ಅಲ್ಲಿಗೆ ಹೋದೆವು. ಮನೆಯ ಹೊರ ಬಾಗಿಲು ತಲುಪಬೇಕು, ಅಷ್ಟರಲ್ಲಿ 'ಬನ್ನಿ, ಬನ್ನಿ' ಎಂದು ಹಿರಿಯ ರೊಬ್ಬರು ಬರಮಾಡಿಕೊಂಡರು. "ಒಳಗೆ ಕುಳಿತುಕೊಳ್ಳಿ, ಸೀನು ಇದ್ದಾನೆ, ಬರ್ತಾನೆ" ಎಂದು ಹೇಳಿ, ಹತ್ತಿರದಲ್ಲೇ ಇದ್ದ ಕೊಟ್ಟಿಗೆಯಲ್ಲಿ ಹಸುವಿಗೆ ಮೈತೊಳೆಯಲು ಹೋದರು. ನಾವು ಒಳಗೆ ಹೋಗಿ ಕೂತುಕೊಂಡಾಗ ಕ.ವೆಂ. "ಅವರು ರಾಜು ತಂದೆ, ಪೊಲೀಸಿನವರು,



ಸಿಬಿಐನಲ್ಲಿ....." ಎಂದೇನೋ ಹೇಳಿದರು. ಈ ರೀತಿ ಕ.ವೆಂ. ಜೊತೆ ರಾಜು ಮನೆಗೆ ಹೋಗಿ ಬರುವುದು ನನಗೆ ಅಭ್ಯಾಸವಾಯಿತು. ಅಂದಿನಿಂದ 'ಚಿರಂಜೀವಿ' ನಂ. ೮, ಹಳೇ ಈಜುಗೊಳದ ರಸ್ತೆಗೆ ಹೋಗಿಬರುವುದು ಶುರುವಾಯಿತು. ಮರತೆ, ಅಂದು ಶ್ರೀನಿವಾಸರಾಜು ಮನೆಯಿಂದ ಹೊರಬರುವಾಗ ಹಸುಗಳು ಎದುರಾದವು. ನಾನು ಹಿಮ್ಮೆಟ್ಟಿದೆ. ಆಗ ರಾಜು ತಂದೆಯವರು – "ನಮ್ಮ ಹಸು ಬಹಳ ಸಾಧು, ಏನೂ ಮಾಡುವುದಿಲ್ಲ. ಧೈರ್ಯವಾಗಿ ಮುಂದೆ ಹೋಗಿ" ಎಂದರು. ಹಸು ಏನೂ ಮಾಡಲಿಲ್ಲ.

ಶ್ರೀನಿವಾಸರಾಜು ವಿಷಯ ಏನಾದರೂ ಹೇಳುವುದಕ್ಕೆ ಮುಂಚೆ, ನನ್ನದೊಂದು ದೂರು ಇದೆ. ದೂರನ್ನು ದಾಖಲಿಸದಿದ್ದರೆ ನಾನು ಮನಸ್ಸಿನಲ್ಲಿಯೇ ಕೊರಗಬೇಕಾಗುತ್ತೆ. ಚಿಕ್ಕವರಿಗೆ, ದೊಡ್ಡವರಿಗೆ ಬರಹಗಾರರು, ಲೇಖಕರು ಆಗಲು ಸಹಾಯ ಮಾಡಿದ ಈ ಮನುಷ್ಯ ನನಗೆ ಯಾವುದೇ ರೀತಿಯ ಉತ್ತೇಜನ ನೀಡಲಿಲ್ಲ, ನೀಡಿಲ್ಲ. ಅದಿರಲಿ ಕಡೆಯ ಪಕ್ಷ ಅಕ್ಷರಾಭ್ಯಾಸ ಆಗಿದೆಯಾ ಎಂದು ವಿಚಾರಿಸಲಿಲ್ಲ. ಹಾಗಾಗಿಯೇ ನಾನು ಏನನ್ನೂ ಬರೆದಿಲ್ಲ. ಈಗಲೂ ವಿಳಂಬವೇನೂ ಆಗಿಲ್ಲ. ಶ್ರೀನಿವಾಸರಾಜು ಈಗಲೂ ನನ್ನ ಕೈಯಲ್ಲಿ ಏನನ್ನಾದರೂ ಬರೆಸಬಹುದು, ಅದಕ್ಕೊಂದು ಸಮಸ್ಯೆ–ಕ್ರೈಸ್ಟ್ ಕಾಲೇಜು 'ಕನ್ನಡ ಸಂಘ'ದಲ್ಲಿ ಈಗ ಶ್ರೀನಿವಾಸರಾಜು ಇಲ್ಲವಲ್ಲ.

ಶ್ರೀನಿವಾಸರಾಜು ಅಂದರೆ ಕನ್ನಡದ ಕೆಲಸ. ಕನ್ನಡದ ಕೆಲಸ ಅನ್ನುವುದೇನು? ನಾ ವಿವರಣೆ ಕೊಡಲಾರೆ. ನಮ್ಮ ಭಾಷೆಯಲ್ಲಿ ನಾವು ಮಾತನಾಡುತ್ತೇವೆ. ನಮ್ಮ ಭಾಷೆಯಲ್ಲಿ ಓದುತ್ತೇವೆ. ನಮ್ಮ ಭಾಷೆಯಲ್ಲಿ ಬರೆಯುತ್ತೇವೆ. ಇದನ್ನೇ ತಮ್ಮ ತಮ್ಮ ಭಾಷೆಗಳಲ್ಲಿ ಮಾಡುವುದು. ಪ್ರಾಯಶಃ ನಮ್ಮದೂ ಒಂದು ಭಾಷೆ ಇದೆ ಎನ್ನುವುದನ್ನು ನೆನಪು ಮಾಡುವುದೇ ನನ್ನ ವಿಷಯದಲ್ಲಿ ಕನ್ನಡದ ಕೆಲಸ.

ಶ್ರೀನಿವಾಸರಾಜುವಿಗೆ ಪುಸ್ತಕಗಳ ಪ್ರಕಟಣೆಯಲ್ಲಿ, ಪರಚಾರಿಕೆಯಲ್ಲಿ ಜಿ.ಪಿ. ರಾಜರತ್ನಂ ಆದರ್ಶಪುರುಷರು. ಇಷ್ಟರಮಟ್ಟಿಗೆ ಸರಿ. ಜಿ.ಪಿ. ರಾಜರತ್ನಂ ಮತ್ತು ಶ್ರೀನಿವಾಸರಾಜು ಕೆಲವು ವಿಷಯಗಳಲ್ಲಿ ತೀರಾ ಭಿನ್ನವಾದವರು. ರಾಜರತ್ನಂ ಮತ್ತು ಶ್ರೀನಿವಾಸರಾಜು ಇಬ್ಬರೂ ಮಲ್ಲೇಶ್ವರದವರು. ನಾನು ಚಿಕ್ಕವನಾಗಿದ್ದಾಗಿನಿಂದಲೂ ಜಿ.ಪಿ.ಯವರನ್ನು ಬಲ್ಲೆ, ನೋಡಿದ್ದೆ, ಮಾತನಾಡಿದ್ದೆ. ಭಾಷಣಗಳನ್ನು ಕೇಳಿದ್ದೆ. ನಾನು ಏನೂ ಬರೆದಿರಲಿಲ್ಲ. ಆದ್ದರಿಂದ ಅವರಿಗೆ ಏನನ್ನೂ ತೋರಿಸಲಿಲ್ಲ. ಆದರೆ ಅವರ ಪ್ರಕಟಣೆಗಳನ್ನು ಮಾರಿದ್ದೆ. ಬಲು ಶಿಸ್ತು, ಬಲು ಅಚ್ಚುಕಟ್ಟು. ಅವರೆ ಹಾಕಿಕೊಂಡ ನೀತಿ ನಿಯಮಗಳನ್ನು ಪಾಲಿಸಿದವರು. ಹಾಗೆಯೇ ಜಿ.ಪಿ.ಯವರು ಅವರಲ್ಲಿಗೆ ಹೋದವರಿಗೆ ಸದಾಶಯದ ಕೆಲವು ಷರತ್ತುಗಳನ್ನು ಹಾಕುತ್ತಿದ್ದರು. ಸಮಾರಂಭಗಳಲ್ಲಿ ಭಾಷಣ ಮಾಡಬೇಕಾದರೆ 'ಈ ಒಂದು ಮೊತ್ತದ' ಪುಸ್ತಕಗಳನ್ನು ಗ್ರಂಥಾಲಯಕ್ಕೆ ಕೊಳ್ಳಬೇಕು. ಈ 'ಷರತ್ತು' ಇತರರಾರೂ ಪಾಲಿಸಿದಂತೆ ಕಾಣುವುದಿಲ್ಲ. ಶ್ರೀನಿವಾಸರಾಜುವಿದೂ ಷರತ್ತುಗಳಿವೆ. ರಾಜರತ್ನಂ ಷರತ್ತುಗಳನ್ನು ಹಾಕುತ್ತಿದ್ದರು. ಶ್ರೀನಿವಾಸ ರಾಜು ಬಂದವರ ಷರತ್ತುಗಳಿಗೆ ಬದ್ಧರಾಗುವುದೇ – ಭಿನ್ನತೆ.

ಶ್ರೀನಿವಾಸರಾಜುವಿನ ಕನ್ನಡದ ಕೆಲಸ ಎಂದು ಯೋಚಿಸಿದಾಗ ನನ್ನ ಮನಸ್ಸಿಗೆ ಬರುವುದು

ಟಿ. ಎಸ್. ವೆಂಕಣ್ಣಯ್ಯನವರು ಮತ್ತು ತೀ.ನಂ.ಶ್ರೀ ಅವರು. ವೆಂಕಣ್ಣಯ್ಯನವರು ಯಾರು? ಏನು? ಎಂದೆಲ್ಲಾ ತಿಳಿದದ್ದು ಅ.ನ.ಕೃ. ಪುಸ್ತಕಗಳಲ್ಲಿ, ಕುವೆಂಪು ರಾಮಾಯಣ ದರ್ಶನಂ – ಮತ್ತು ಇತರ ಲೇಖನಗಳಲ್ಲಿ, ತ.ಸು. ಶಾಮರಾಯರ ಕೃತಿಯಲ್ಲಿ ಮತ್ತು ಎ.ಎನ್. ಮೂರ್ತಿರಾಯರ ಲೇಖನಗಳಲ್ಲಿ ಮತ್ತು ಮೂರ್ತಿರಾಯರ ಮಾತಿನಲ್ಲಿ. ಇನ್ನು ತೀ.ನಂ.ಶ್ರೀ. – ಮಲ್ಲೇಶ್ವರ ಮಿಡಲ್ ಸ್ಕೂಲಿನಲ್ಲಿ ಕಲಿಯುತ್ತಿದ್ದಾಗ ಶ್ರೀ ಕೃಷ್ಣಶಾಸ್ತ್ರಿ ಮೇಷ್ಟರು ಕನ್ನಡ (ಮತ್ತು ಸಂಸ್ಕೃತ) ಪಾಠ ಮಾಡುತ್ತಿದ್ದರು. 'ಕನ್ನಡ ಮಾಧ್ಯಮ ವ್ಯಾಕರಣ' ಇರುವುದರಿಂದ, ವ್ಯಾಕರಣ ವಿದ್ಯಾರ್ಥಿಗಳಿಗೆ ಸುಲಭವಾಗಿ ಅರ್ಥವಾಗುತ್ತದೆಂದು ಹೇಳುತ್ತಿದ್ದರು. ಈ ಪುಸ್ತಕ ಬರೆದ ಶ್ರೀಕಂಠಯ್ಯ ಇನ್ನೂ ಬಹಳ ಚಿಕ್ಕವರು ಎಂದು ಹೇಳಿದ್ದೂ ನೆನಪಿದೆ. ಅನಂತರ ಬಸಪ್ಪ ಕಾಲೇಜಿನಲ್ಲಿ ರಸಾಯನ ಶಾಸ್ತ್ರ ಅಧ್ಯಾಪಕರು ಎಸ್. ರಾಘವೇಂದ್ರ ರಾವ್, "ಧ್ವನಿ ಅಂದರೆ ತೀ.ನಂ.ಶ್ರೀದು–ಎಲ್ಲರೂ ಕೇಳಬೇಕು" ಎಂದು ಪದೇ ಪದೇ ಹೇಳುತ್ತಿದ್ದರು. ನಮಗೆಲ್ಲರಿಗೂ ಆಶ್ಚರ್ಯದ ಸುದ್ದಿ ಎಂದು ಹೇಳಿ, ತೀ.ನಂ.ಶ್ರೀ. ಅವರ ಭಾಷಣ ಏರ್ಪಡಿಸಿರುವುದಾಗಿ ತಿಳಿಸಿದರು. ತೀ.ನಂ.ಶ್ರೀ. ಬಸಪ್ಪ ಕಾಲೇಜಿಗೆ ಬಂದಾಗ ಎಸ್. ರಾಘವೇಂದ್ರ ರಾವ್ ಪರಿಚಯ ಮಾಡಿಸಿದರು. ತೀ.ನಂ.ಶ್ರೀ. ಅವರು 'ಅಶ್ವತ್ಥಾಮ'ನ ಬಗ್ಗೆ ಸುಮಾರು ಎರಡು ಗಂಟೆ ಮಾತನಾಡಿದರು. ೫೦ ವರುಷ ಕಳೆದರೂ ತೀ.ನಂ.ಶ್ರೀ. ಧ್ವನಿ ನನ್ನಲ್ಲಿ ಉಳಿದಿದೆ. ಆ ಸಮಯದಲ್ಲಿ ನಾನು ನನ್ನಲ್ಲಿದ್ದ ಕನ್ನಡ ಮಾಧ್ಯಮ ವ್ಯಾಕರಣ ಪ್ರತಿಯಲ್ಲಿ ಹಸ್ತಾಕ್ಷರ ಪಡೆದೆ. ಅನಂತರ ಕಳೆದುಕೊಂಡೆ. ತೀ.ನಂ.ಶ್ರೀ. ಬಗ್ಗೆ ಇನ್ನಿಬ್ಬರು ಕ.ವೆಂ. ಮತ್ತು ಎ.ಎನ್. ಮೂರ್ತಿರಾಯರ ಲೇಖನಗಳಲ್ಲಿ, ಮಾತಿನಲ್ಲಿ ಕೇಳಿದ್ದೇನೆ. ವೆಂಕಣ್ಣಯ್ಯ ಮತ್ತು ತೀ.ನಂ.ಶ್ರೀ. ಈ ಇಬ್ಬರ ವಿಷಯದಲ್ಲಿ ಯಾರೊಬ್ಬರೂ ಚಕಾರವೆತ್ತಿಲ್ಲ. ಚಕಾರವೆತ್ತುವುದಾದರೂ ಹೇಗೆ ಅನ್ನುವುದು ಬೇರೆ ಮಾತು. ವೆಂಕಣ್ಣಯ್ಯ ಮತ್ತು ತೀ.ನಂ.ಶ್ರೀ ಎಂತಹ ಮನುಷ್ಯರು! ಅಂತವರು ಇರುತ್ತಾರೆಯೇ ಎಂದು ಅನುಮಾನಿಸಬಹುದು. ಆದರೆ ಅವರು ಇದ್ದೇ ಇದ್ದರಲ್ಲ. ದಶಕಗಳು ಹಲವಾರು ಕಳೆದರೂ ಅವರು ನಮ್ಮೆಲ್ಲರ ಮನಸ್ಸಿನಲ್ಲಿ ಜೀವಂತವಾಗಿದ್ದಾರೆ. ಮುಂದೆಯೂ ಅಷ್ಟೆ

ವೆಂಕಣ್ಣಯ್ಯನವರಾಗಲೀ, ತೀ.ನಂ.ಶ್ರೀ. ಆಗಲಿ ನೂರಾರು ಕೃತಿಗಳನ್ನು ರಚಿಸಲಿಲ್ಲ. ಆದರೆ ನೂರಾರು ಸಾವಿರಾರು ಕೃತಿಗಳು ಹೊರಬರುವಂತೆ ಕಿರಿಯರನ್ನು ಬೆಳೆಸಿದರು. ಹಿರಿಯರನ್ನು ಪ್ರೀತಿಯಿಂದ ಒತ್ತಾಯಿಸಿದರು. ಯಶಸ್ವಿಗಳಾದರು.

ಶ್ರೀನಿವಾಸರಾಜು ವಿಷಯದಲ್ಲಿ ಕ.ವೆಂ. ಮತ್ತು ಎ.ಎನ್. ಮೂರ್ತಿರಾಯರು ಮಾತನಾಡಿರುವುದರ ಜೊತೆಗೆ ನನ್ನ ಅನುಭವವೂ ಇದೆಯೆನ್ನಿ. ಎ.ಎನ್. ಮೂರ್ತಿರಾಯರು – ಶ್ರೀನಿವಾಸರಾಜುವನ್ನು ಕಪಟವರಿಯದವ. A Gentleman, a successful worker. ರಾಜು ಜೊತೆ ವ್ಯವಹಾರ ಸ್ಪಷ್ಟ ಮತ್ತು ನೇರ. A pleasant creature. ಆದ್ದರಿಂದ ನನಗನಿಸುತ್ತದೆ – ಜಿ.ಪಿ., – ರಾಜುಗೆ Role Model ಎಂದು ಎಲ್ಲರೂ ಗುರುತಿಸಿದರೂ – ರಾಜು, ವೆಂಕಣ್ಣಯ್ಯ – ತೀ.ನಂ.ಶ್ರೀ ಹಾದಿಯಲ್ಲಿ ನಡೆಯುತ್ತಿರುವುದು ಎಂದು ನನಗನ್ನಿಸುತ್ತದೆ.

ಒಬ್ಬ ನೀಚನನ್ನು ನೀಚ ಎಂದು ಕರೆಯಬಹುದು. ಒಬ್ಬ ಧೂರ್ತನನ್ನು ಧೂರ್ತ ಎನ್ನಬಹುದು. ಇದು ಸುಲಭದ ಕೆಲಸವಾಗುತ್ತದೇನೋ. ಆದರೆ ಒಬ್ಬ ಒಳ್ಳೆಯ ಮನುಷ್ಯನನ್ನು

ಒಳ್ಳೆಯವ, ಸಜ್ಜನ ಎಂದು ಕರೆದರೆ ಹೊಗಳುಭಟ್ಟತನದ ಭಾವನೆ ಬರಬಹುದು. ಜೊತೆಗೆ ಆ ಸಜ್ಜನನಿಗೆ ಇದೇನಪ್ಪ ಹೀಗೆಲ್ಲಾ ಹೇಳುತ್ತಾರೆ, ನಾನು ಎಲ್ಲಾದರೂ ಎಡವಿದ್ದೇನೆಯೇ ಎಂದು ಸಂದೇಹ ಬಂದು ಮುಜುಗರವೂ ಆಗಬಹುದು. ಶ್ರೀನಿವಾಸರಾಜು ಎರಡನೇ ಗುಂಪಿನಲ್ಲಿ ಮೊದಲಿಗ.

ಶ್ರೀನಿವಾಸರಾಜು ಮನೆಗೆ ಹೋಗಿಬರುವುದು ಶುರುವಾಯಿತು ಎಂದು ತಿಳಿಸಿದ್ದೇನೆ. ಸುಮ್ಮ ಸುಮ್ಮನೇ ಹೋಗಿಬರುವುದು ಮೊದಲಿಗೆ ಸಾಧ್ಯವಿರಲಿಲ್ಲ. ನಾನು ಪುಸ್ತಕಗಳನ್ನು ಮಾರುತ್ತಿದ್ದನೆಂದು ನಂಬಿದ ಸ್ನೇಹಿತರು ನನ್ನನ್ನು ಪುವ್ಯಾಶ್ರೀ (ಪುಸ್ತಕ ವ್ಯಾಪಾರಿ ಶ್ರೀನಿವಾಸ) ಎಂದು ಕರೆಯುವುದು ಉಂಟಲ್ಲ. ನಾನು ರಾಜುಗೆ – ಶ್ರೀನಿವಾಸರಾಜುಗೆ ಪುಸ್ತಕಗಳನ್ನು ಮಾರಲು ಹೋಗುವುದು, ಅನ್ನುವುದಕ್ಕಿಂತ ಹೊಸದಾಗಿ ಬಂದ ಪುಸ್ತಕಗಳನ್ನು ತೋರಿಸಲು ಹೋಗುತ್ತಿದ್ದೆನೆನ್ನಬೇಕು. ಪುಸ್ತಕಗಳನ್ನು ಶ್ರೀನಿವಾಸರಾಜು ಮತ್ತು ಎಚ್.ಎಸ್. ರಾಘವೇಂದ್ರರಾವ್ ಇಬ್ಬರಿಗೂ ಸೇರೆ ಕೊಂಡುಕೊಳ್ಳುತ್ತಿದ್ದರು. ಚಿತ್ರಕಲೆ, ಸಾಹಿತ್ಯ, ಕವನ, ನಾಟಕ, ಕನ್ನಡ ಇಂಗ್ಲೀಷಿನಲ್ಲಿ ಅವರಿಬ್ಬರ ಪುಸ್ತಕ ಸಂಗ್ರಹ ಆರಂಭವಾಯಿತು. ಪುಸ್ತಕ ವ್ಯಾಪಾರಿಯಾಗಿ ಮಾತ್ರವಲ್ಲ ಕೊಂಚ ಅದು ಇದು ಓದಿಕೊಂಡಿರುವವನಾಗಿಯೂ ಒಂದು ಮಾತು ಧೈರ್ಯವಾಗಿ ಹೇಳಬೇಕು. ರಾಜು ಮತ್ತು ರಾಘವೇಂದ್ರ ಅವರದು ಸದಭಿರುಚಿಯ ಓದು ಹಾಗೂ ಅಧ್ಯಯನ. ಇವರಲ್ಲಿ ಯಾವ ಪೂರ್ವಾಗ್ರಹ ಪೀಡೆಯೂ ಇಲ್ಲ. ರಾಜುವಿನ ತಂದೆಯವರು ಒಮ್ಮೆ ನನ್ನನ್ನು ವಿಚಾರಿಸಿದರು – "ನೀವು ಕೊಡೋ ಪುಸ್ತಕಗಳೆಲ್ಲಾ ರಷ್ಯಾದ್ದು, ಚೀನಾದ್ದು, ಪಿ.ಪಿ.ಎಚ್. ಪುಸ್ತಕಗಳೇನಾ?" ನಾನು "ಹಾಗೇನಿಲ್ಲ, ಆ ಪುಸ್ತಕಗಳು ಅಂಗಡಿಗಳಲ್ಲಿ ಹೆಚ್ಚಾಗಿ ಇರುವುದಿಲ್ಲ. ಆದ್ದರಿಂದ ನಾನು ತಂದು ತೋರಿಸ್ತೀನಿ. ನಾನು ನಿಮಗೆ ಬೇಕಾಗುವ ಪುಸ್ತಕಗಳನ್ನು ಖಂಡಿತ ತಂದು ತೋರಿಸುತ್ತೇನೆ. ಬೇಕಾದ್ದು ಇಟ್ಟುಕೊಳ್ಳಿ" ಎಂದು ತಿಳಿಸಿ, ಪೊಲೀಸಿನವರು ಅಪೇಕ್ಷಿಸಬಹುದಾದ ಪುಸ್ತಕಗಳಾವುವು ಎಂದು ಯೋಚಿಸತೊಡಗಿದೆ. ಒಂದೆರಡು ದಿವಸ ಕಳೆದ ನಂತರ ಸಿಕ್ಕಾಗ 'ಪಟ್ಟಿ ಮಾಡಿದ್ದೇನೆ' ತೆಗೆದುಕೊಳ್ಳಿ ಎಂದು ಕೊಟ್ಟರು. ಸರಿಯಾಯಿತು, ಪೊಲೀಸಿನವರಿಗೆ ಬೇಕಾಗುವ ಪುಸ್ತಕಗಳು ಎಂದು ಇಂಗ್ಲೆಂಡ್, ಅಮೇರಿಕಾ ಪ್ರಕಾಶಕರ ಕ್ಯಾಟಲಾಗುಗಳನ್ನು ತರಿಸಿ ನೋಡಬೇಕೆಂದುಕೊಂಡು ಮನೆಗೆ ಹಿಂದಿರುಗಿದೆ. ಪಟ್ಟಿ ತೆಗೆದು ನೋಡಿದಾಗ ನನಗೆ ಆಶ್ಚರ್ಯ ಕಾದಿತ್ತು. ಅವರು ಬೇಕೆಂದು ಮಾಡಿಕೊಟ್ಟಿದ್ದ ಪಟ್ಟಿಯಲ್ಲಿ ಎಲ್ಲವೂ ನಾವು ಸಾಮಾನ್ಯವಾಗಿ ಆಧ್ಯಾತ್ಮಿಕ ಎನ್ನುವ ಪುಸ್ತಕಗಳು.

ಶ್ರೀನಿವಾಸರಾಜು ಮನೆಗೆ ಹೋದಾಗಲೆಲ್ಲಾ ಮಾತನಾಡುತ್ತಿರುವಾಗ ಒಬ್ಬ ಪುಟ್ಟ ಹುಡುಗ ಚಡ್ಡಿ ಹಾಕುವ ವಯಸ್ಸಿನವ (ಈಗ ರಸ್ತೆಯಲ್ಲಿ ಹಾಕಿಕೊಂಡು ಓಡಾಡುವಂತಹ ತುಂಡು ಚಡ್ಡಿಯಲ್ಲ) ಸೊಂಟದ ಮೇಲೆ ಕೈಯಿಟ್ಟುಕೊಂಡು ನಿಂತು ಕೊಳ್ಳುತ್ತಿದ್ದ. ಆ ಹುಡುಗನಿಗೆ "ಮಕ್ಕಳ" ಪುಸ್ತಕಗಳನ್ನು ಕೊಡುವುದು ಮೊದಲು ಮಾಡಿದೆ. ಹುಡುಗ ಬೆಳೆಯುತ್ತ, ಬೆಳೆಯುತ್ತ, ದೊಡ್ಡವನಾದ, ಅಂದಿನಿಂದ ಇಂದಿನವರೆವಿಗೂ ನನ್ನಿಂದ ಪುಸ್ತಕಗಳನ್ನು ಪಡೆಯುತ್ತಿದ್ದಾನೆ. ದೊಡ್ಡವನಾಗಿ ಸುಗತನಾದ. ಒಳ್ಳೆಯ ಪುಸ್ತಕಗಳನ್ನು ಕೊಟ್ಟೆನೆಂದ ಸುಗತ ನನ್ನನ್ನು "ಮೇಷ್ಟ್ರೇ" ಎಂದು ಕರೆಯಲಾರಂಭಿಸಿದನು. ಈಗ ದೊಡ್ಡ ಪತ್ರಕರ್ತನಾದ ಆ ಚಿಕ್ಕಹುಡುಗ ಸುಗತ ರಾಜುವಿಗೆ ಹಿರಿಯ ಮಗ. ಶ್ರೀನಿವಾಸರಾಜು ಕಿರಿಯ ಮಗ ಋತ. ಋತ ಸುಗತನಷ್ಟೇ

ಚುರುಕಾದ ಹುಡುಗ. ಒಳ್ಳೆಯ ಕಲಾವಿದ. ಇಬ್ಬರೂ ಶ್ರೀನಿವಾಸರಾಜುವಿನಂತೆ ಸಂಭಾವಿತರು. ಆದರೆ ಶ್ರೀನಿವಾಸರಾಜುವಿಗಿಂತ ವ್ಯವಹಾರದಲ್ಲಿ ಹೆಚ್ಚಿನ ತಿಳುವಳಿಕೆಯುಳ್ಳವರು. ಅಷ್ಟಾದರೂ ಸುಧಾರಿಸದಿದ್ದರೆ, ಮಕ್ಕಳು ತಂದೆಯಿಂದ ಏನೂ ಪಾಠ ಕಲಿತಂತೆ ಆಗುವುದಿಲ್ಲ. ಸುಗತ ಮತ್ತು ಋತನ ಮಕ್ಕಳಿಗೆ ಪುಸ್ತಕಗಳನ್ನು ಮಕ್ಕಳು ಹುಟ್ಟುವುದಕ್ಕಿಂತ ಮುಂಚೆಯೇ ಕೊಟ್ಟಿದ್ದೇನೆ. "ಕೂಸು ಹುಟ್ಟುವ ಮುಂಚೆ ಕುಲಾವಿ" ಎಂದು ತಮಾಷೆ ಮಾಡುವುದುಂಟು. ಆದರೆ ಪುಸ್ತಕಗಳನ್ನು ಋತ ಮತ್ತು ಸುಗತ ಮಕ್ಕಳು ಹುಟ್ಟುವ ಮುಂಚೆಯೇ ತೆಗೆದುಕೊಂಡಿದ್ದಾರೆ. ಅಂದರೆ ಗೊತ್ತಾಯಿತಲ್ಲವೇ? ಶ್ರೀನಿವಾಸರಾಜು, ಅವರ ತಂದೆ, ಮಕ್ಕಳು ಸುಗತ ಮತ್ತು ಋತ, ಜೊತೆಗೆ ಶ್ರೀನಿವಾಸರಾಜು ಮೊಮ್ಮಕ್ಕಳು ಎಲ್ಲರೂ ನನ್ನ ಗಿರಾಕಿಗಳು. ಇನ್ನು ಶ್ರೀನಿವಾಸರಾಜು ಅವರ ಹೆಂಡತಿ ಸರಸ್ವತಿಯವರ ವಿಚಾರ. ಅವರ ಹೆಸರು ಸರಸ್ವತಿ, ಜೊತೆಗೆ ಅನ್ನಪೂರ್ಣೆ ಎಂದರೂ ಸರಿಯೇ.

ಈ ಸರಸ್ವತಿಯವರು ಪ್ರಾಯಶಃ ನನಗೆ ತಿಳಿದಿರುವಂತೆ ನಾನು ಹಿಂದೆ ಹೇಳಿರುವ ಕನ್ನಡ ಅಧ್ಯಾಪಕರ ಹೆಂಡತಿಯರಂತೆಯೇ ತೀ.ನಂ.ಶ್ರೀ. ಮನೆಯವರಿರಬಹುದು, ಇಲ್ಲ ಕ.ವೆಂ. ಮನೆಯವರಿರಬಹುದು. ಇವರು ಮನೆಗೆ ಬಂದವರಿಗೆ ಉಪಚಾರ ಮಾಡಿ ಏನಾನ್ನಾದರೂ ತಿನ್ನಿಸದೆ ಕಳುಹಿಸುವವರೇ ಅಲ್ಲ. ಈ ಪರಂಪರೆ ಮುಂದುವರಿದರೆ, ಮಳೆ, ಬೆಳೆ ಕಾಲ ಕಾಲಕ್ಕೆ ಆಗುತ್ತೆ ಅಲ್ಲವೇ? ಸರಸ್ವತಿ – ಶ್ರೀನಿವಾಸರಾಜು ಹೆಂಡತಿ – ಮೊನ್ನೆ ಮೊನ್ನೆ ಅಂದರೆ ಸೆಪ್ಟಂಬರ್ ೨೮, ಗುರುವಾರ ನಾವು ಮೊದಲಿನಿಂದಲೂ ಇದ್ದ ಹೆಚ್.ವಿ. ನಂಜುಂಡಯ್ಯ ರಸ್ತೆಯಲ್ಲಿನ ಮನೆಗೆ ಬಹಳ ಸಮಯದ ನಂತರ ವಾಪಸಾದೆವು. ಮಾರನೆಯ ದಿನ ಸರಸ್ವತಿ ಪೂಜೆ. ಹೇಗೋ ಏನೋ ಅವತ್ತು ಶ್ರೀನಿವಾಸರಾಜು ಮನೆಯಿಂದ ದೂರವಾಣಿ ಕರೆ ಬಂತು. ನಾನಾಗ ಹೇಳಿದೆ – "ಎಲ್ಲರೂ ಸರಸ್ವತಿ ಪೂಜೆ ಮಾಡುತ್ತಾರೆ. ಆದರೆ ರಾಜುವಿಗೋ ಸರಸ್ವತಿನೇ ಪೂಜೆ ಮಾಡುವುದು, ಸರಿಯಾಗಿ ಪೂಜೆ ಮಾಡುವುದಿಲ್ಲ."

ಎಲ್ಲಿಗೋ ಬಂದುಬಿಟ್ಟೆ, ಇರಲಿ ಈಗ ನೆನಪಾಯಿತು, ಮೈಸೂರು ಮಹಾರಾಜ ಕಾಲೇಜಿನಲ್ಲಿ ಓದಿದವರು, ಪಾಠ ಮಾಡಿದವರು ಮೂರ್ತಿರಾಯರಿರಲಿ, ಎಂ.ವಿ. ಕೃಷ್ಣಸ್ವಾಮಿಯವರಾಗಲಿ, ಎಲ್ಲರೂ ಮೈಸೂರು ಮಹಾರಾಜ ಕಾಲೇಜಿನ ಅಂದಿನ ವಾತಾವರಣವನ್ನು ಹೊಗಳುವವರೆ, ಹಳೆಯ ದಿನಗಳನ್ನು ನೆನೆದು ಇಂದಿನ ದಿನಗಳಿಗೆ ಹೋಲಿಸಿ ಮರುಗುವವರೆ. ಏನಿದು ಮೈಸೂರು ಮಹಾರಾಜ ಕಾಲೇಜಿನ ಮಹಿಮೆ? ಆ ಮಹಿಮೆ ಕಾಲೇಜಿನ ಕಟ್ಟಡವಲ್ಲ, ಅಲ್ಲಿ ಆಗ ಇದ್ದ ಅಧ್ಯಾಪಕರು ಮತ್ತು ಅವರು ನಡೆದುಕೊಂಡ ರೀತಿ. ಮೈಸೂರು ಮಹಾರಾಜ ಕಾಲೇಜಿನಷ್ಟೇ ಖ್ಯಾತಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿಗೂ ಇತ್ತು. ಆದರೆ ವ್ಯತ್ಯಾಸವಿದ್ದುದು ಏನು? ಮೈಸೂರಿನಲ್ಲಿ ಕಲೆ ಸಾಹಿತ್ಯಗಳಿದ್ದವು. ಬೆಂಗಳೂರಿನಲ್ಲಿ ವಿಜ್ಞಾನ ವಿಷಯಗಳಿದ್ದವು. ಸ್ವಾಭಾವಿಕವಾಗಿ ಕಲೆ ಸಾಹಿತ್ಯ ಅಭ್ಯಾಸಿಸಿದವರು ಸುಲಭವಾಗಿ ಮೈಸೂರು ಮಹಾರಾಜ ಕಾಲೇಜಿನ ವಿಷಯ ಬರೆದರು. ಸೆಂಟ್ರಲ್ ಕಾಲೇಜಿಗೆ ಆ ಅದೃಷ್ಟ ಇಲ್ಲದಾಯಿತು.

ಉತ್ತಮ ಅಧ್ಯಾಪಕರು, ಶಿಷ್ಯರು, ಆಡಳಿತಕಾರರು, ಪ್ರೀತಿ–ವಿಶ್ವಾಸ ಗೌರವಗಳಿಂದ ಇದ್ದರೆ, ಆ ಎಲ್ಲಾ ಕಾಲೇಜುಗಳು "ಮೈಸೂರು ಮಹಾರಾಜ ಕಾಲೇಜು" ಆಗುತ್ತದೆ. ಹಾಗಾಗಿಯೇ ನಮ್ಮ ಶ್ರೀನಿವಾಸರಾಜು ಇದ್ದಾಗ ಕ್ರೈಸ್ಟ್ ಕಾಲೇಜು ಮೈಸೂರು ಮಹಾರಾಜ ಕಾಲೇಜಾಗಿತ್ತು.

"ರಾಜು"ವಿಗೆ ಯಾವ ಸ್ಥಾನವೂ ಅರಸಿ ಬರಲಿಲ್ಲ. ಆಗೊಮ್ಮೆ ಈಗೊಮ್ಮೆ ರಾಜುಪಿಗೆ ಯಾವುದೋ ಅಧ್ಯಕ್ಷ ಪದವಿ ಎಂದು ಕೇಳಿಬಂದು, ಆ ಮೇಲೆ ಎಲ್ಲವೂ ತಣ್ಣಗಾಯಿತು. ನನ್ನ ಅನಿಸಿಕೆ ಏನೆಂದರೆ "ರಾಜು" ವಿಷಯ ಬಂದಾಗ ಆ ನಿರ್ಣಾಯಕ ಮತ (Casting Vote) ರಾಜು ಪರ ಎಂದೂ ಬೀಳಲಿಲ್ಲ. ಈಗ ರಾಜುವನ್ನು ಯಾರೂ ಯಾವ ಸ್ಥಾನಕ್ಕೂ ನೇಮಕ ಮಾಡುವಂತಿಲ್ಲ. ರಾಜು ಅರವತ್ತನ್ನು ದಾಟಿದ್ದಾರಲ್ಲ, ಎಲ್ಲ ಅಕಾಂಕ್ಷಿಗಳು ಹಾಯಾಗಿ ಉಸಿರಾಡಬಹುದು.

ಮತ್ತೆ ವೆಂಕಣ್ಣಯ್ಯ - ತೀ.ನಂ.ಶ್ರೀ. ಇವರಿಬ್ಬರಿಗೆ ಏನೇನು ಪ್ರಶಸ್ತಿಗಳು ಬಂದವು? ಗೌರವ ಡಾಕ್ಟರೇಟ್‌ಗಳು ಯಾವುವೂ ಇಲ್ಲವೆಂದು ಹೇಳಬಹುದು. ನನಗನಿಸುತ್ತೆ, ರಾಜುವಿಗೆ ಯಾಕೆ ಗೌರವ ಡಾಕ್ಟರೇಟ್ ಬರಬಾರದು. ಯಾವ ಪ್ರಶಸ್ತಿಯೂ ಬರಬಾರದು. ತಳುಕಿನ ವೆಂಕಣ್ಣಯ್ಯ, ತೀ.ನಂ.ಶ್ರೀ. ಹೆಸರುಗಳೇ ನಮಗೆಲ್ಲರಿಗೂ ಹೇಗೆ ನೆಮ್ಮದಿ ತಂದು ಕೊಡುತ್ತವೋ ಹಾಗೆಯೇ ಶ್ರೀನಿವಾಸರಾಜು. ಚಿ. ಶ್ರೀನಿವಾಸರಾಜು ಎಂದೇ ನೆಮ್ಮದಿ, ಸಂತೋಷ ಕೊಡಬೇಕು. ರಾಜು ಪ್ರಶಸ್ತಿಗಳಿಗೆ ಅಂಗಲಾಚುವ ವ್ಯಕ್ತಿಯಲ್ಲ. ಶ್ರೀನಿವಾಸರಾಜು ತಂದೆಯವರು ಹಸುಗಳನ್ನು ಪ್ರೀತಿಯಿಂದ ಸಾಕುತ್ತಿದ್ದರು. ಅವರು ಸಾಕಿದ ಹಸುಗಳೆಲ್ಲವೂ ಸಾಧುಪ್ರಾಣಿಗಳೇ ಆದುವು. ಅದಕ್ಕೂ ಮಿಗಿಲಾಗಿ ಶ್ರೀನಿವಾಸರಾಜು ಅವರ ತಂದೆ ಸರಳ ಹಾಗೂ ಸಜ್ಜನ ಮಗನನ್ನು ಬೆಳೆಸಿದರು.

ಶ್ರೀನಿವಾಸರಾಜು ವಿಷಯ ಇನ್ನೂ ಏನೇನೋ ಬರೆಯುವುದಿದೆ, ಆದರೀಗ ಏನು ಗೊತ್ತಾಗುತ್ತಲಿಲ್ಲ. ಏನು ಮಾಡುವುದು?

ನನ್ನ ತಂಗಿ ಪಾರ್ವತಿಯ ಶಿಷ್ಯೆ - ಸರಸ್ವತಿ ಎಂದು ಬರೆದೆನಲ್ಲವೇ. ನನ್ನ ತಂಗಿ ಯಾವಾಗಲೂ ಹೇಳುತ್ತಿದ್ದುದು "ನನ್ನ ಶಿಷ್ಯೆಯ ಗಂಡ ಕನ್ನಡ ಮೇಷ್ಟ್ರು ಬಹಳ ಒಳ್ಳೆಯವ" ಎಂದು. ಈಗಲ್ಲೂ ನನ್ನ ತಂಗಿ ಸರಸ್ವತಿರಾಜು ವಿನಯಶಾಲಿಗಳು ಎಂದು ಹೇಳುತ್ತಾಳೆ. ನನ್ನ ತಂಗಿಯ ಶಿಷ್ಯೆ ಸರಸ್ವತಿ ಮತ್ತು ರಾಜು ಹೆಂಡತಿ ಸರಸ್ವತಿ ಒಬ್ಬರೇ ಎಂದು ನನಗೆ/ನಮಗೆ ಗೊತ್ತಾಗಿದ್ದು ದಂಪತಿಗಳು ನಮ್ಮ ಮನೆಗೆ ಬಂದಾಗಲೇ.

ಸುಮಾರು ಒಂದು ದಶಕದ ಹಿಂದೆ ಸರಸ್ವತಿ ಮತ್ತು ರಾಜು ನಮ್ಮ ಮನೆಗೆ ಬಂದಿದ್ದರು. ನಮ್ಮ ತಾಯಿಯವರನ್ನು ನೋಡಲೆಂದು ಬಂದಿದ್ದರು. ಇವರಿಬ್ಬರು ನಮ್ಮಲ್ಲಿಗೆ ಬರುವ ಒಂದೆರಡು ದಿವಸಗಳು ಕೆಳಗೆ ಎ.ಎನ್. ಮೂರ್ತಿರಾಯರು ಬಂದಿದ್ದರು. ಆ ಸಮಯದಲ್ಲಿಯೇ ಭೀಷಮ್ ಸಾಹ್ನಿಯವರ ಪತ್ರಗಳು ಬಂದಿದ್ದವು. ಎಂ.ಎ. ಸೇತುರಾಯರು ಫೋನ್ ಮಾಡಿದ್ದರು. ಜಿ. ರಾಮಕೃಷ್ಣ ಅವರು ಹೇಗಿದ್ದೀರಿ? ಎಂದು ವಿಚಾರಿಸಿ ಕಾರ್ಡು ಬರೆದಿದ್ದರು. ಜೊತೆಗೆ ರಂಜಾನ್ ದರ್ಗಾ ಮತ್ತು ಉಷಾ ನರಸಿಂಹ ಫೋನ್ ಮಾಡುತ್ತಿದ್ದರು. ಹೀಗೆ ಆ ದಿನಗಳಲ್ಲಿಯೇ ಸರಸ್ವತಿ-ರಾಜು ಬಂದಿದ್ದರು. ರಾಜು-ಸರಸ್ವತಿ ಮತ್ತೆ ಬರುತ್ತೇವೆ ಎಂದು ಹೇಳಿ ಹೊರಟರು. ಮುಂಬಾಗಿಲು ಹಾಕಿಕೊಂಡು ಬಂದೆ. "ನಮ್ಮ ತಾಯಿ" ರಾಜು- ಸರಸ್ವತಿಗೆ ತಕ್ಕಗಂಡ ಒಳ್ಳೆ ಜೋಡಿ, ನೋಡಿ ಮಾತನಾಡಿದರೆ ಸಂತೋಷವಾಗುತ್ತೆ ಎಂದು ಹೇಳಿ ಮಾತು ಮುಂದುವರಿಸಿದರು - "ನಿನ್ನ ಸ್ನೇಹಿತರು, ದೊಡ್ಡವರು, ಚಿಕ್ಕವರು ಎಲ್ಲರೂ ಒಳ್ಳೆಯವರೆ

ಸಿಕ್ಕಿದ್ದಾರೆ, you are a lucky dog'' ಎಂದರು. ನಮ್ಮ ತಾಯಿಯವರು ಮಾತಿನ ಕೊನೆಯಲ್ಲಿ ಸೇರಿಸಿದ್ದೂ ಅವರೆಲ್ಲರೂ ಒಳ್ಳೆಯವರು. ಅವೆಲ್ಲವೂ ಅರ್ಥವಾಗುತ್ತೆ. ಈಗ ಬಂದು ಹೋದ ಸರಸ್ವತಿ – ರಾಜು ಅವರನ್ನು ನೋಡಿದರೆ ಸಾಕು. ಆದರೆ ನನಗೆ ಅರ್ಥವಾಗದ್ದು – ನಾನು ಇವರಿಗೆಲ್ಲ ಹೇಗೆ ಗಂಟುಬಿದ್ದೆ ಎನ್ನುವುದು.

ನಾನು ಶ್ರೀನಿವಾಸರಾಜು ವಿಷಯ ಏನೇನೋ ಗುರುತು ಮಾಡಿದ್ದೇನೆ. ನಾನು ಬರೆದಿರುವ ಸತ್ಯಾಸತ್ಯತೆಯನ್ನು ತಿಳಿಯಲು, ಈಗಿನ ರಾಜಕೀಯ ನಾಯಕರ ಮಾಮೂಲಿ Demandನಂತೆ CBIಗೆ ಒಪ್ಪಿಸಬಹುದು.



# ಅಲ್ಲಲ್ಲಿ ಬೆಳೆಯಬೇಕು

● ಕೆ.ವಿ. ತಿರುಮಲೇಶ್

ಬಹಳ ವರ್ಷಗಳ ಹಿಂದೆ ನಾನು "ಕ್ರೈಸ್ತನ ನಿಷ್ಕಮಣ" ಎಂಬೊಂದು ಕವಿತೆಯನ್ನು ಬರೆದೆ. ದೋಸ್ತೋವ್‌ಸ್ಕಿಯ 'ಕರೆಮ್ಜೋವ್ ಸಹೋದರರು' ಕಾದಂಬರಿಯಲ್ಲಿ ಬರುವ ಪ್ರಸಂಗವೊಂದರ ಸ್ಫೂರ್ತಿಯಿಂದ ಬರೆದ ಕವಿತೆ ಅದು. 'ಮುಖವಾಡಗಳು' ಎಂಬ ನನ್ನ ಮೊದಲ ಕವನ ಸಂಕಲನದಲ್ಲಿ ಈ ಕವಿತೆ ಸೇರಿದೆ. ಆಮೇಲೆ ಬೆಂಗಳೂರಿನ ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದಿಂದ ನನಗೊಂದು ಪತ್ರ ಬಂತು. ಕ್ರಿಸ್ತುವಿನ ಬಗ್ಗೆ ಬಂದು ಕವಿತೆಗಳನ್ನು ಸಂಗ್ರಹಿಸಿ ಪ್ರಕಟಿಸುವ ಯೋಜನೆಯಲ್ಲಿ ನನ್ನ ಕವಿತೆಯನ್ನು ಸೇರಿಸಿಕೊಳ್ಳಲು ಅವರು ಬಯಸಿದ್ದರು. ಆಗಲೇ ನನಗೆ ಈ ಸಂಸ್ಥೆಯ ಪರಿಚಯ ವಾದದ್ದು. ನಂತರ ಈಗೆರಡು ವರ್ಷಗಳ ಹಿಂದೆ "ಬೇಂದ್ರೆಯವರ ಕಾವ್ಯ ಶೈಲಿ" ಎಂಬ ವಿಷಯದ ಮೇಲೆ ನಾನು ಈ ಸಂಸ್ಥೆಯಲ್ಲಿ ಒಂದು ಉಪನ್ಯಾಸವನ್ನು ಕೊಡುವ ಅವಕಾಶವಾಯಿತು. ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಅವರು ಆಗಿಂದಾಗ್ಗೆ ಒಳ್ಳೆ ಪುಸ್ತಕಗಳನ್ನು ಪ್ರಕಟಿಸುತ್ತ ಬಂದಿದ್ದಾರೆ; ವಿದ್ಯಾರ್ಥಿಗಳಲ್ಲಿ ಆಸಕ್ತಿ ಕುದುರುವಂತೆ ಸ್ಪರ್ಧೆ ಇತ್ಯಾದಿ ಕಾರ್ಯಕ್ರಮಗಳನ್ನು ನಡೆಸುತ್ತಲೂ ಇದ್ದಾರೆ. ಸಾಹಿತ್ಯದ ಕೆಲಸವನ್ನು ಕೇವಲ ವಿಶ್ವವಿದ್ಯಾಲಯ, ಪರಿಷತ್ತು ಮತ್ತು ಅಕಾಡೆಮಿಗಳಿಗೆ ಸೀಮಿತಗೊಳಿಸದೆ, ಅದರ ವಿಕೇಂದ್ರೀಕರಣ ಆಗಬೇಕಾದರೆ ಇಂಥ ಸಂಸ್ಥೆಗಳು ಅಲ್ಲಲ್ಲಿ ಬೆಳೆಯಬೇಕು.

*ಕ್ರೈಸ್ಟ್ ಕಾಲೇಜು 'ಆನಂದ' ಸದಾಶಯ ಸಂಚಿಕೆ*

❑



# ಸಾಹಿತ್ಯ ಸೃಷ್ಟಿಗಿಂತ–ಸಾಂಸ್ಕೃತಿಕ ವಾತಾವರಣದ ಸೃಷ್ಟಿ ಬಲು ದೊಡ್ಡದು

● ಎಂ.ಡಿ. ವಕ್ಕುಂದ

**ನಾ**ವು ಪದವಿ ಓದುತ್ತಿದ್ದಾಗ ಅದೇತಾನೆ ಬರವಣಿಗೆಗೆ ತೊಡಗಿಸಿಕೊಳ್ಳುತ್ತಿದ್ದ ವಿದ್ಯಾರ್ಥಿ ಬರಹಗಾರರಿಗೆ ತುಂಬಾ ಪ್ರೀತಿಯ ಅಭಿಮಾನದ ಗೌರವದ ಹೆಸರೆಂದರೆ 'ಚಿ. ಶ್ರೀನಿವಾಸರಾಜು'. ೮೦ರ ದಶಕದಲ್ಲಿ ಕ್ರೈಸ್ತ ಕಾಲೇಜು ಕನ್ನಡ ಸಂಘದಿಂದ ಬೇಂದ್ರೆ ಸ್ಮೃತಿ ಕಾವ್ಯ ಸ್ಪರ್ಧೆ, ಅನಕೃ ಸ್ಮೃತಿ ಪ್ರಬಂಧ ಸ್ಪರ್ಧೆಗಳನ್ನು ಏರ್ಪಡಿಸುವುದರ ಮೂಲಕ ನಾಡಿನ ಪ್ರತಿಭಾವಂತ ವಿದ್ಯಾರ್ಥಿ ಸಮುದಾಯದಲ್ಲಿ ಅವರ ಹೆಸರು ಚಿರಪರಿಚಿತವಾಗಿತ್ತು. ಈ ಸ್ಪರ್ಧೆಯ ವಿವರಗಳು ಸೂಚನಾಫಲಕದ ಮೇಲೆ ಕಂಡೊಡನೆ ಈ ನಾಡಿನ ನೂರಾರು ಕಾಲೇಜುಗಳ ವಿಶ್ವವಿದ್ಯಾಲಯಗಳ ಸ್ನಾತಕೋತ್ತರ ಕೇಂದ್ರಗಳ ಸಾವಿರಾರು ವಿದ್ಯಾರ್ಥಿ ವಿದ್ಯಾರ್ಥಿನಿಯರು ಹೊಸ ಕವಿತೆ ಬರೆಯ ತೊಡಗುತ್ತಿದ್ದರು. ಲೇಖನ ಸ್ಪರ್ಧೆಯ ವಿಷಯಗಳನ್ನಾಧರಿಸಿ ಅಧ್ಯಯನಕ್ಕೆ ತೊಡಗುತ್ತಿದ್ದರು. ಕೆಲವರು ವರ್ಷಾನುಗಟ್ಟಲೆ ಧ್ಯಾನಿಸಿ ಒಂದೆರಡು ಒಳ್ಳೆಯ ಕವಿತೆಗಳನ್ನು ಬರೆದು ಈ ಸ್ಪರ್ಧೆಗೆ ಕಳಿಸಲು ಕಾಯುತ್ತಿದ್ದರು. ಪ್ರತಿವರ್ಷ ವಿದ್ಯಾರ್ಥಿ ಸಮುದಾಯದಲ್ಲಿ ನಡೆಯುವ ಈ ಸಾಂಸ್ಕೃತಿಕ ವೈಚಾರಿಕ ಪ್ರಕ್ರಿಯೆ ಒಂದು ಮೌನ ಕ್ರಾಂತಿಯೇ ಆಗಿತ್ತು. ಇದರ ಫಲವಾಗಿ ಕನ್ನಡದಲ್ಲಿ ಅಸಂಖ್ಯ ಹೊಸ ಬರಹಗಾರರು ಆತ್ಮವಿಶ್ವಾಸವನ್ನು ಪಡೆದುಕೊಂಡರು, ಬೆಳಕಿಗೆ ಬಂದರು. ವಿದ್ಯಾರ್ಥಿಲೋಕದಲ್ಲಿ ಇಂಥ ಸಾಂಸ್ಕೃತಿಕ ಸಂಚಲನೆಯನ್ನು ಸೃಷ್ಟಿಮಾಡಿದ 'ಚಿ. ಶ್ರೀನಿವಾಸರಾಜು' ನಮಗೆಲ್ಲ ಅಭಿಮಾನದ ಹೆಸರಾದದ್ದರಲ್ಲಿ ಆಶ್ಚರ್ಯವೇನಿಲ್ಲ. ಆಗ ನಾವು ಅವರನ್ನು ನೋಡುವ ಅವರೊಂದಿಗೆ ಮಾತನಾಡುವ ಕನಸು ಕಾಣುತ್ತಿದ್ದೆವು.



ಶ್ರೀನಿವಾಸರಾಜು ಅವರ 'ಬೇಂದ್ರೆ ಕಾವ್ಯ ಸ್ಪರ್ಧೆ' ಹಾಗೂ ಚಂಪಾ ಅವರ 'ಸಂಕ್ರಮಣ ಕಾವ್ಯ ಸ್ಪರ್ಧೆ'ಗಳಲ್ಲಿ ಬಹುಮಾನ

ಬರದೇ ಹೋದರೆ ನಾವಿನ್ನೂ ಕಪಿಗಳಾಗಿಲ್ಲ. ಕಾವ್ಯ ಪರೀಕ್ಷೆಯಲ್ಲಿ ಉತ್ತೀರ್ಣರಾಗಿಲ್ಲವೆಂದು ತೀರ್ಮಾನಿಸುತ್ತಿದ್ದೆವು. ನನಗೆ ಕ್ರೈಸ್ಟ್ ಕಾಲೇಜಿನ ಬೇಂದ್ರೆ ಕಾವ್ಯ ಸ್ಮೃತಿ ಬಹುಮಾನ ಬಂದಾಗಿನ ಖುಷಿ ಇದೆಯಲ್ಲ ಅದು ನನ್ನ ಬದುಕಿನ ಕೆಲವೇ ಸುಂದರ ಕ್ಷಣಗಳಲ್ಲಿ ಒಂದು. ಯಾಕೆಂದರೆ ನಾನೂ ಒಬ್ಬ ಕವಿ ಎಂಬ ನಂಬಿಕೆ ಮತ್ತು ಆತ್ಮಸ್ಥೈರ್ಯವನ್ನು ನೀಡಿದ್ದೇ ಈ ಬಹುಮಾನ ಅಥವಾ ಚಿ. ಶ್ರೀನಿವಾಸರಾಜು. ಇದು ನನ್ನೊಬ್ಬನ ಅಭಿಪ್ರಾಯವಲ್ಲ, ನನ್ನ ಹಲವಾರು ಗೆಳೆಯರ ಅನುಭವ. ನನಗೆ ಬಹುಮಾನ ಬಂದ ವರ್ಷ ಶ್ರೀನಿವಾಸರಾಜು ಅವರು ಕಾವ್ಯದ ಹುಚ್ಚು ಹಿಡಿಸಿದ್ದ ಮಾಂತ್ರಿಕ ಕವಿ ಬೇಂದ್ರೆಯವರ ಮನೆಯಲ್ಲಿ ಬಹುಮಾನಿತ ಕವಿಗಳ ಕಾವ್ಯವಾಚನವನ್ನು ಏರ್ಪಡಿಸಿದ್ದರು. ಬೇಂದ್ರೆಯವರಿಲ್ಲದ ಬೇಂದ್ರೆಯವರ ಮನೆಯಲ್ಲಿ ಕವಿತೆ ವಾಚನ ಮಾಡಿದ್ದು ಆಗ ನಮಗೆ ಸಾಮಾನ್ಯ ವಿಷಯವಾಗಿರಲಿಲ್ಲ. ಅದೊಂದು ಧನ್ಯತೆಯ ಕ್ಷಣ. ಹೀಗೆ ಶ್ರೀನಿವಾಸರಾಜು ನನ್ನ ನನ್ನಂಥವರ ಕಾವ್ಯ ಬದುಕಿನೊಂದಿಗೆ ಹಾಸುಹೊಕ್ಕಾದ ಚೇತನ.

ಹದಿನೈದು ವರ್ಷಗಳ ಹಿಂದಿನ ಮಾತು. ನಾನು ಮತ್ತು ವಿನಯ ಪ್ರೀತಿಸತೊಡಗಿದ್ದೆವು. ಅದು ನಮ್ಮ ಬದುಕಿನ ಭರ್ಜರಿ ಪ್ರೇಮದ ಕವಿತೆಗಳ ಕಾಲ. ಇನ್ನೊಂದೆಡೆ ಬದುಕಿನ ಅಭದ್ರತೆಯ ದುಗುಡ ಆವರಿಸಿದ ಸಮಯ. ಆಕಾಶವಾಣಿ ವರದಿಗಾರರ ಸಂದರ್ಶನಕ್ಕೆ ಬೆಂಗಳೂರಿಗೆ ಬಂದು ಅಣ್ಣನ ಮನೆಯಲ್ಲಿದ್ದೆವು. ಸುದ್ದಿ ತಿಳಿದಿದ್ದೇ ತಡ ನಮ್ಮಿಬ್ಬರನ್ನೂ ರಾಜು ಅವರು ಊಟಕ್ಕೆ ಆಹ್ವಾನಿಸಿದರು. ಜತೆಗೆ ನಾಡಿನ ಶ್ರೇಷ್ಠ ವಿಮರ್ಶಕರಾದ ಎಚ್.ಎಸ್. ರಾಘವೇಂದ್ರರಾವ್ ಅವರು, ಅವರ ಶ್ರೀಮತಿಯವರು ಭೂರಿ ಭೋಜನವನ್ನೇ ಬಡಿಸಿದ್ದರು ಮಾತ್ರವಲ್ಲ, ಮಕ್ಕಳಂತೆ ನೋಡಿಕೊಂಡಿದ್ದರು. ನಮ್ಮ ಬದುಕಿನ ತುಂಬ ಆತಂಕದ ಅಭದ್ರತೆಯ ದುಗುಡದ ಆ ದಿನಗಳಲ್ಲಿ ಕವಿತೆ ಬರೆಯುವವರೆಂಬ ಕಾರಣಕ್ಕೆ ಇಷ್ಟೊಂದು ಹಚ್ಚಿಕೊಳ್ಳುವ ಪ್ರೀತಿಸುವ ಅದ್ಭುತ ಜೀವಗಳು ಇದ್ದಾವಲ್ಲ ಅಂತ ಆಶ್ಚರ್ಯವಾಗಿತ್ತು. ಜತೆಗೆ ಬದುಕಿನ ಬಗ್ಗೆ ಪ್ರೀತಿ ವಿಶ್ವಾಸಗಳು ಹೆಚ್ಚಾದವು.

ಶ್ರೀನಿವಾಸರಾಜು ಮತ್ತು ಎಚ್.ಎಸ್.ಆರ್. ಎರಡು ಜೀವಗಳು ಅಂತ ಅನ್ನಿಸೋದೇ ಇಲ್ಲ. ಅವರು ಒಬ್ಬೊಬ್ಬರಾಗಿ ನೆನಪಾಗುವುದೂ ಇಲ್ಲ. ಇವರಿಬ್ಬರನ್ನೂ ಹೆಚ್ಚೆಂದರೆ ಐದಾರು ಬಾರಿ ಕಂಡು ಮಾತನಾಡಿರಬೇಕು. ಆದರೆ ಈ ಜೋಡಿ ಜೀವಗಳು ನಮಗೆ ಎಷ್ಟು ಆತ್ಮೀಯರಾಗಿದ್ದಾರೆಂದರೆ ಅವರು ಸದಾ ನಮ್ಮ ಜೊತೆಯಲ್ಲೇ ಇದ್ದಂತೆ ಭಾಸವಾಗುತ್ತದೆ. ಅವರ ಪ್ರೀತಿಯೇ ಅಂಥದ್ದು. ಅವರಿಗದು ಗೊತ್ತಿರಲಿಕ್ಕಿಲ್ಲ.

ವಿಭಾ ಎಂಬ ಅಪ್ಪಟ ಕವಯಿತ್ರಿಯನ್ನು ಕಾಲ ಬಹುಬೇಗ ಕರೆಸಿಕೊಂಡ. ಅದು ಕನ್ನಡ ಕಾವ್ಯಕ್ಕಾದ ದೊಡ್ಡಹಾನಿ. ಅವಳು ತೀರಿಹೋದಮೇಲೆ ನಾವೆಲ್ಲ ಸ್ನೇಹಿತರು ಅವಳ ಬರಹಗಳನ್ನು ಪ್ರಕಟಿಸುವ ಬಗ್ಗೆ ಯೋಚಿಸುತ್ತಿದ್ದೆವು. ಅಷ್ಟರಲ್ಲಿ ಶ್ರೀನಿವಾಸರಾಜು ಅವರು ಕವಿಮಿತ್ರ ವಿಕ್ರಮ ವಿಸಾಜಿಯವರಿಗೆ ಅವಳ ಕಾವ್ಯದ ಕಟ್ಟನ್ನು ಸಂಗ್ರಹಿಸಲು ಸೂಚಿಸಿ ಡಿ.ವಿ. ಪ್ರಹ್ಲಾದ ಅವರ ಸಂಚಯ ಪ್ರಕಾಶನದಿಂದ ಪ್ರಕಟಿಸಿಯೂ ಬಿಟ್ಟರು. ಇತ್ತೀಚೆಗೆ ವಿಭಾಳ 'ಜೀವ ಮಿಡಿತದ ಸದ್ದು' ಸಂಕಲನದ ಬಿಡುಗಡೆ ಸಮಾರಂಭಕ್ಕೆ ಗದಗಿಗೆ ಬಂದಿದ್ದರು. 'ವಿಭಾಳಿಗೆ ಅವಳ ಸಂಕಲನ ಪ್ರಕಟಿಸುತ್ತೇನೆಂದು ಹೇಳಿದ್ದೆ. ಈಗ ಅವಳಿಲ್ಲ. ಅವಳ ಕವನ ಸಂಗ್ರಹ

ಬಿಡುಗಡೆಯಾಯಿತು. ನನ್ನ ಮಾತನ್ನು ಉಳಿಸಿಕೊಂಡ ತೃಪ್ತಿ ನನ್ನದು' ಎಂದು ಭಾವುಕವಾಗಿ ಮಾತನಾಡಿದರು. ವಿಭಾಳ ಆತ್ಮಕ್ಕೆ ಶಾಂತಿ ಸಿಕ್ಕಿರಬೇಕು. ಆದರೆ ಕಾರ್ಯಕ್ರಮದ ಸಂಘಟನೆ ಓಡಾಟಗಳ ಮಧ್ಯೆ ಆ ಹಿರಿಯ ಜೀವದೊಂದಿಗೆ ಹೆಚ್ಚು ಹೊತ್ತು ಕಳೆಯಲಾಗಲಿಲ್ಲ. ಸುಖ ದುಃಖಗಳನ್ನು ಹಂಚಿಕೊಳ್ಳಲಾಗಲಿಲ್ಲವೆಂಬ ಕೊರಗು ಮಾತ್ರ ಹಾಗೇ ಉಳಿದಿದೆ.

ಬರಹಗಾರರಿಗೆ ಪೂರಕವಾದ ಸಾಂಸ್ಕೃತಿಕ ವಾತಾವರಣವನ್ನು ಸೃಷ್ಟಿಸುವುದಿದೆಯಲ್ಲ ಅದು ತಾವೇ ದೊಡ್ಡ ಬರಹಗಾರರಾಗುವದಕ್ಕಿಂತ ಮಹತ್ವದ ಸಾಧನೆ. ಶ್ರೀನಿವಾಸರಾಜು ಅವರು ಇಂಥ ಸಾಧನೆಯಿಂದಾಗಿ ನಮ್ಮ ಕಾಲದ ಬಹುದೊಡ್ಡ ಬರಹಗಾರರಿಗಿಂತ ಹೆಚ್ಚು ಜನಪ್ರಿಯರಾಗಿದ್ದಾರೆ. ಬಹುಜನರ ಪ್ರೀತಿಗೆ ಪಾತ್ರರಾಗಿದ್ದಾರೆ. 'ಅವರು ಬದುಕಿರುವಷ್ಟು ಕಾಲ ಕನ್ನಡ ಸಾಂಸ್ಕೃತಿಕ ಬದುಕು ಶ್ರೀಮಂತಗೊಳ್ಳುವದರಿಂದ ಸುದೀರ್ಘ ಆಯುಷ್ಯ ಅವರದಾಗಲಿ. ಅವರೊಳಗಿನ ಕವಿ ಮತ್ತು ನಾಟಕಕಾರರು ಇನ್ನಷ್ಟು ಸಮೃದ್ಧ ಕೃತಿಗಳನ್ನು ಕನ್ನಡಕ್ಕೆ ನೀಡಲಿ' ಎಂದು ಎದೆತುಂಬಿ ಹಾರೈಸುತ್ತೇನೆ.

❑

# ನನ್ನ ಡಿಸ್ಕವರಿ

● ಪ್ರತಿಭಾ ನಂದಕುಮಾರ್

**ಕ**ಳೆದ ವರ್ಷ ಶಾರುಖ್‌ಖಾನ್‌ಗೆ ಯೂತ್ ಐಕಾನ್ ಪ್ರಶಸ್ತಿ ಬಂತು. ಆ ಸಂದರ್ಭದಲ್ಲಿ ಯಾವುದೋ ಟಿ.ವಿ. ಚಾನಲ್‌ನವರು ಒಂದಷ್ಟು ಯುವಜನರ ಜೊತೆ ಅವನ ಸಂವಾದ ಏರ್ಪಡಿಸಿದ್ದರು. ಅಲ್ಲಿ ಅವರು ಅವನನ್ನು ಆರಾಧಿಸುತ್ತಿದ್ದ, ಸಂಭ್ರಮಪಡುತ್ತಿದ್ದ, ಪುಳಕ ಗೊಳ್ಳುತ್ತಿದ್ದ ಬಗೆ ನೋಡಿ ನಮ್ಮ ಕಾಲ ನೆನಪಾಯಿತು. ನಾವು ರಾಜೇಶ್ ಖನ್ನಾ ಯುಗದವರು. ಕ್ಲಾಸಿಗೆ ಚಕ್ಕರ್ ಹಾಕಿ ಅವನ ಚಿತ್ರ ನೋಡಲು ಹೋಗುತ್ತಿದ್ದೆವು. ಆದರೆ ಅವನನ್ನು ನಮ್ಮ ಐಕಾನ್ ಅಂತ ಒಪ್ಪಿಕೊಳ್ಳುತ್ತಿದ್ದೆವೇ ಅಂತ ಕೇಳಿದರೆ ಖಂಡಿತಾ ನಿರಾಕರಿಸು ತ್ತಿದ್ದೆವು. ಅವನು ನಮ್ಮ ನೆಚ್ಚಿನ ಹೀರೋ ಆಗಿದ್ದನೇ ಹೊರತು ಆದರ್ಶ ಆಗಿರಲಿಲ್ಲ. ನಮಗೆ ಆಗ ಆದರ್ಶ ಆಗಿದ್ದದ್ದು ನಮ್ಮ ಮೇಷ್ಟ್ರುಗಳು. ಎಚ್.ಎಸ್.ಆರ್. (ರಾಘವೇಂದ್ರ ರಾವ್), ಕೆ.ವಿ.ಜಿ. (ಘನಶ್ಯಾಂ), ಎಚ್.ಆರ್.ಕೆ. (ಕೃಷ್ಣಮೂರ್ತಿ), ಬಿ.ಎಸ್. (ಶಿವಶಂಕರ್) ಅವರೇ ನಮಗೆ ಅದ್ಭುತದಂತೆ ಕಾಣುತ್ತಿದ್ದರು. ಅದರಲ್ಲೂ ಇದ್ದಿಲನ್ನು ಕೆಂಡ ಮಾಡುವ ಕಾಯಕದಂತೆ ಎಚ್.ಎಸ್.ಆರ್. ನಮ್ಮನ್ನು ತಿದ್ದಿ ತೀಡಿ ಎಷ್ಟು ಪೋಷಿಸಿ ರೂಪು ಗೊಳಿಸಿದರೆಂದರೆ ಅವರು ಮುಟ್ಟಿದ್ದೆಲ್ಲ ಚಿನ್ನ, ಅವರ ಮಾತೆಲ್ಲ ವೇದ ವಾಕ್ಯ, ಅವರ ಬಳಗವೆಲ್ಲ ನಮಗೆ ಸಾಧ್ಯ.



ಅಂತಹ ಭಯ ಭಕ್ತಿಯ ಸಂದರ್ಭದಲ್ಲಿ ಶ್ರೀನಿವಾಸರಾಜು ಅವರು ನನಗೆ ಪರಿಚಯ ಆಗಿದ್ದು. ಅವರು ಮತ್ತು ಎಚ್.ಎಸ್.ಆರ್. ಸದಾ ಜೊತೆಗಿರುತ್ತಿದ್ದುದರಿಂದ ನಮ್ಮ ಮೇಷ್ಟರ ಗೆಳೆಯರು ಅನ್ನುವುದರಿಂದ ಪ್ರಾರಂಭವಾಗಿ ಕ್ರಮೇಣ ಅವರನ್ನೂ ಗುರುಗಳ ಸಾಲಿನಲ್ಲೇ ಪರಿಗಣಿಸುವ ಹಾಗಾಯಿತು. ಅವರೂ ಕೂಡಾ ಶಿಷ್ಯರಲ್ಲಿ ಭೇದ ಮಾಡದೇ ಇರುತ್ತಿದ್ದುದರಿಂದ ಎಚ್.ಎಸ್.ಆರ್. ಶಿಷ್ಯರನ್ನೂ ತಮ್ಮ ಶಿಷ್ಯರಂತೆಯೇ ನೋಡುತ್ತಿದ್ದರು.

ನಾನು ಒಂದಷ್ಟು ಕವನಗಳನ್ನು ಬರೆದು ಅಲ್ಲಲ್ಲಿ ಪತ್ರಿಕೆಗಳಲ್ಲಿ ಪ್ರಕಟಿಸಿ, ನಮ್ಮ ಮೇಷ್ಟ್ರುಗಳು ಶಭಾಶ್ ಅಂದಾಗ ಖುಷಿ ಪಡುತ್ತಿದ್ದೆ. ಒಂದು ದಿನ ಶ್ರೀನಿವಾಸರಾಜು ಅವರು ನನ್ನ ಕವನಗಳನ್ನೆಲ್ಲ ಒಟ್ಟು ಮಾಡಿ, ಆಗ ಬಹಳ ಜನಪ್ರಿಯವಾಗಿದ್ದ ನನ್ನ ಮೊದಲ ಕವನ "ನಾವು ಹುಡುಗಿಯರೇ ಹೀಗೆ" ಅನ್ನುವ ಶೀರ್ಷಿಕೆ ಕೊಟ್ಟು, ಅದನ್ನು ಮುದ್ದಣ ಕಾವ್ಯ ಪ್ರಶಸ್ತಿಗೆ ಕಾಂತಾವರ ಕನ್ನಡ ಸಂಘಕ್ಕೆ ಕಳಿಸಿ, ಅದಕ್ಕೆ ಪ್ರಶಸ್ತಿ ಬಂದಾಗ ತಮಗೇ ಬಂದಂತೆ ಸಂಭ್ರಮ ಪಟ್ಟಿದ್ದು ಇನ್ನೂ ಕಣ್ಣಿಗೆ ಕಟ್ಟಿದಂತಿದೆ. ಆಮೇಲೆ ಅದನ್ನು ಜಿ.ಎಸ್. ಶಿವರುದ್ರಪ್ಪ ಅವರಿಗೆ ಕೊಟ್ಟು ಮುನ್ನುಡಿ ಬರೆಸಿ ಕ್ರೈಸ್ಟ್ ಕಾಲೇಜಿನಿಂದಲೇ ಪ್ರಕಟ ಮಾಡಿದರು. ಅದಾದ ಮೇಲೆ ನಾಲ್ಕೂ ಕವನ ಸಂಕಲನಗಳನ್ನೂ ಪ್ರಕಟಿಸಿದರು. ಅವುಗಳಿಗೆ ಪ್ರಶಸ್ತಿ ಬಂದಾಗ ಹಿಗ್ಗಿದರು. ಹಾಗಾಗಿ ನಾನು ಅವರ ಡಿಸ್ಕವರಿ. ನನ್ನಂತಹ ಎಷ್ಟೋ ಸಾಹಿತಿಗಳೂ ಅವರ ಡಿಸ್ಕವರಿ. ಆಮೇಲೂ ನನ್ನ ಕಾವ್ಯ ರಚನೆ ಬಗ್ಗೆ ನಿಜವಾದ ಮನಸ್ಸಿನಿಂದ ಸಂತೋಷಪಟ್ಟವರು ಶ್ರೀನಿವಾಸರಾಜು ಮತ್ತು ಎಚ್.ಎಸ್.ಆರ್. ಹಾಗಾಗಿ ಬೇರೆ ಯಾರು ಏನೇ ಹೇಳಿದರೂ ಅವರಿಬ್ಬರೂ ಏನು ಹೇಳುತ್ತಾರೆ ಅನ್ನುವುದೇ ನನಗೆ ಮುಖ್ಯವಾಗಿತ್ತು, ಮುಖ್ಯವಾಗಿದೆ.

ಶ್ರೀನಿವಾಸರಾಜು ಬಗ್ಗೆ ಸುಲಭವಾಗಿ ಮಾತಾಡುವುದಕ್ಕಾಗುವುದಿಲ್ಲ ಅಥವಾ ಇನ್ನೊಂದು ರೀತಿಯಲ್ಲಿ ಹೇಳಬಹುದಾದರೆ ಬಹಳ ಸುಲಭ! ವಂಚನೆ, ಮೋಸ ತಿಳಿಯದ, ಯಾರಿಗೂ ಅನ್ಯಾಯ ಮಾಡದ, ಜ್ಞಾನ ಯಾರೊಬ್ಬರ ಸ್ವತ್ತೂ ಅಲ್ಲ ಎಂದು ನಂಬಿ ನಮಗೆ ತಿಳಿದಿದ್ದನ್ನೆಲ್ಲಾ ಧಾರಾಳವಾಗಿ ಧಾರೆ ಎರೆದು ಕೊಡುವ ಮುಗ್ಧ ಭಕ್ತಿಯ ಜೀವ, ಹರಿಹರನ ರಗಳೆ ಓದುವಾಗ, ಶಿವಶರಣರ ಜೀವನದ ಬಗ್ಗೆ ಓದುವಾಗ ನನಗೆ ನೆನಪಾಗುತ್ತಿದ್ದುದು ಶ್ರೀನಿವಾಸರಾಜು ಮತ್ತು ಎಚ್.ಎಸ್.ಆರ್. ಅದರಲ್ಲೂ ತಿರುಕುಳವಿನಾಚಿ ಬಗ್ಗೆ ಓದುವಾಗ ರಾಜು ಮತ್ತು ಸರಸ್ವತಿ ಅಂತ ಅನ್ನಿಸುತ್ತಿತ್ತು. ಬಹುಶಃ ಅವರಿಗೂ ಅಂತಹ ಸಂದರ್ಭ ಬಂದಿದ್ದರೆ ಹಾಗೇ ಇರುತ್ತಿದ್ದರೇನೋ ಅಂತ. 'ಸತಿಪತಿಗಳೊಂದಾದ ಭಕ್ತಿ' ಅಂತ ಅನ್ನಿಸುತ್ತಿತ್ತು. ಸರಸ್ವತಿ ಯಾವಾಗಲೂ ರಾಜು ಅವರನ್ನು ಮೂದಲಿಸುವ ಹಾಗೆ 'ಸರಿ ಇವರು ಬಿಡಿ, ಇವರು ಹಾಗೇ, ಕಾಲೇಜು, ಫ್ರೆಂಡ್ಸ್, ಫಂಕ್ಷನ್ ಇದ್ದರೆ ನಾವೆಲ್ಲ ಯಾಕೆ ಬೇಕು?' ಅಂತ ಹೇಳುತ್ತಿದ್ದರೂ ಅದು ಒಂಥರಾ ಪ್ರೀತಿಯಿಂದಲೇ ಹೇಳುತ್ತಿದ್ದುದು. ಹಾಗೆಯೇ ಅವರೂ ಆ ಕಾಲೇಜು, ಫ್ರೆಂಡ್ಸ್, ಫಂಕ್ಷನ್‌ಗಳಲ್ಲಿ ತಪ್ಪದೇ ಭಾಗವಹಿಸಿ ಅದರ ಒಂದು ಭಾಗವೇ ಆಗಿಹೋಗಿದ್ದಾರೆ. ಬಹುಶಃ ಅವರು ಹಾಗೇ ರಾಗ ಎಳೆಯುವುದೂ ಅವರ ಪ್ರೀತಿ ತೋರಿಸುವ ಒಂದು ರೀತಿ. ಅದನ್ನೂ ರಾಜು ಅವರೂ ಹಾಗೇ ತೆಗೆದುಕೊಂಡು ಎನ್‌ಜಾಯ್ ಮಾಡುತ್ತಾರೆ ಅನ್ನಿಸುತ್ತದೆ. ಅವರಿಬ್ಬರೂ ಜಗಳವನ್ನೇ ಆಡುತ್ತಿರಲಿಲ್ಲ ಅನ್ನುವುದೇ ನನಗೆ ಒಂದು ಆಶ್ಚರ್ಯ. ಅವರು ಜನರೆದುರು ಹಾಗಿರುತ್ತಾರಾ ಅನ್ನಿಸಿದರೆ ಇನ್ನೊಂದು ಸಲ ಅವರು ತಾವು ತಾವೇ ಇದ್ದಾಗಲೂ ಹಾಗೇ ಇರುತ್ತಾರೆ ಅನ್ನಿಸುತ್ತಿತ್ತು. ನಾವು ಈಗ ಪುಸ್ತಕದಲ್ಲಿ ಓದುವ, ಹಿರಿಯರ ಕಥೆ ಕೇಳುವ ಪ್ರಸಂಗಗಳನ್ನು ಅದು ನೆನಪಿಗೆ ತಂದುಕೊಡುತ್ತದೆ. ಯಾಕೆಂದರೆ ಅವರಿಬ್ಬರೂ ಯಾವತ್ತೂ ಬೇರೆಯವರ ಬದುಕಿನ ಬಗ್ಗೆ ತಮಗಿಂತ ಭಿನ್ನ ಅಂತ ಅಂದುಕೊಳ್ಳಲೇ ಇಲ್ಲ.

ಅವರಿಬ್ಬರ ಬದುಕು ನಡೆದಿದ್ದ ಸುಗಮವಾದ, ಭದ್ರವಾದ ದಾರಿಯನ್ನು ನೋಡಿದರೆ ಅದಕ್ಕೆ ತದ್ವಿರುದ್ಧವಾದ ನನ್ನ ಬದುಕಿನ ಬಗ್ಗೆಯೂ ಅವರು ವಕ್ರದೃಷ್ಟಿ ಇಟ್ಟುಕೊಳ್ಳಲೇ ಇಲ್ಲ

ಅನ್ನುವುದೇ ಅವರ ಸಜ್ಜನಿಕೆಯ ಗುರುತು. "ನಂದು ಹೇಗಿದ್ದಾರೆ?" ಅಂತ ಕೇಳದೇ ಸರಸ್ವತಿ ಎಂದಿಗೂ ಕಳಿಸಿಲ್ಲ. ಬೇರೆ ಯಾರೇ ಆದರೂ ಹಾಗೆ ಕೇಳಿದ್ದರೆ ಅದು ವ್ಯಂಗ್ಯವೇ ಅಂತ ಅನುಮಾನವಾಗುತ್ತಿತ್ತು. ಆದರೆ ರಾಜು ಮತ್ತು ಸರಸ್ವತಿ ಕೇಳುವಾಗ ಅದು ಒಂದು ಶುದ್ಧ ಮನಸ್ಸಿನ ಪ್ರಶ್ನೆಯಾಗಿರುತ್ತಿತ್ತೇ ಹೊರತು ಅದಕ್ಕೆ ಬೇರೆ ಅರ್ಥಗಳಿರುತ್ತಿರಲಿಲ್ಲ. ಹಾಗೆಯೇ ಅವರ ಮನೆಗೆ ಹೋದರೆ ದಿನಾ ಅಲ್ಲೇ ಊಟಕ್ಕೆ ಬರುತ್ತಿದ್ದೇನೇನೋ ಅನ್ನುವಂತೆ ತಟ್ಟೆ ಇಟ್ಟು ಬಿಸಿ ಬಿಸಿ ಊಟ ಬಡಿಸಿ ಧಾರಾಳವಾಗಿ ಉಪಚಾರ, ಮಾತು, ಹರಟೆಗಳ ನಡುವೆ ಹೊಟ್ಟೆ ಮನಸ್ಸು ತುಂಬಿಸಿ ಕಳಿಸುವುದು ವಾಡಿಕೆ. ಇವರು ಯಾಕೆ ಇಷ್ಟು ಒಳ್ಳೆಯವರು ಅಂತ ನನಗೆ ಎಷ್ಟೋ ಸಲ ಅನ್ನಿಸಿದೆ. ಯಾಕೆಂದರೆ ಅವರಿಗೆ ಅದರಿಂದ ಯಾವುದೇ ರೀತಿಯ ಪ್ರತಿಫಲ ಸಿಗುತ್ತಿರಲಿಲ್ಲ. ಆದರೂ ಅವರು ಬೇರೆಯವರ ಕಷ್ಟ ಸುಖಗಳಿಗೆ ಸ್ಪಂದಿಸುವ ಬಗೆ ನೋಡಿದರೆ, ನನಗೆ ಹಳ್ಳಿಯವರು ಹೇಳುವಂತೆ ಇಂತಹವರು ಇರುವುದರಿಂದಲೇ ಮಳೆಬೆಳೆ ಆಗ್ತಿದೆ ಅನ್ನಿಸುತ್ತದೆ.

ಶ್ರೀನಿವಾಸರಾಜು ಅವರಿಗೆ ಕೋಪ, ತಾಪ, ಬೈಗುಳ, ಸೇಡು ಏನೂ ಗೊತ್ತಿಲ್ಲ ಅನ್ನುವುದು ಅವರನ್ನು ಬಲ್ಲ ಎಲ್ಲರಿಗೂ ಗೊತ್ತು. ಯಾವುದಾದರೂ ವಿಷಯದ ಬಗ್ಗೆ ಅವರಿಗೆ ಅಸಮಾಧಾನ ಆಗಿದ್ದರೆ ಅವರು ಒಂಥರಾ ನಗುತ್ತಾರೆ. ನಗುವೂ ಅಲ್ಲಾ, ಒಂಥರಾ ಮುಖ ಮಾಡುತ್ತಾರೆ. ಆಗ ನಾವು ಅವರಿಗೇ ಅಸಮಾಧಾನ ಆಗಿದೆ ಅಂತ ತಿಳಿದುಕೊಳ್ಳಬೇಕು. ಆದರೆ ಅದು ಕ್ಷಣಿಕ. ತಕ್ಷಣ ಅದರಿಂದ ಹೊರಗೆ ಬರುತ್ತಾರೆ. ಅವರಿಗೆ ಯಾರಾದರೂ ಮೋಸ ಮಾಡಿದರೂ ಅದೇ ನಗು.

ನಮ್ಮಲ್ಲಿ, ಅಂದರೆ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ನಿಜವಾದ ಅರ್ಥದಲ್ಲಿ ಅಕ್ಷರ ಪ್ರೀತಿ ಇರುವುದು ರಾಜು ಅವರಿಗೆ ಮತ್ತು ಎಚ್.ಎಸ್.ಆರ್. ಅವರಿಗೆ. ಈಗಲೂ ಹೊಸಾ ಹುಡುಗರ ಬರಹ ಓದಿ ಅದನ್ನು ಪ್ರಕಟಿಸಿ, ಅವರಿಗೆ ಬಹುಮಾನ ಕೊಟ್ಟು ಅವರ ಬಗ್ಗೆ ಅನೇಕ ಕಡೆ ಮಾತನಾಡಿ... ಇವರಿಗೆ ಇದೆಲ್ಲಾ ಮಾಡುತ್ತಾ ಮಾಡುತ್ತಾ ಬೇಜಾರೇ ಆಗುವುದಿಲ್ಲವೇ ಅಂತ ಅನ್ನಿಸಿದೆ. ಯಾಕೆ ಮಾಡುತ್ತಾರೆ? ಜನಾಭಿಪ್ರಾಯ ಏನೇ ಇರಲಿ, ಅವರಿಗೆ ಹಿಡಿಸಿದರೆ ಅದನ್ನು ಹೇಳಿ, ನಾಲ್ಕು ಜನರ ಮುಂದೆ ಹೊಗಳಿ, ವಿಮರ್ಶೆ ಮಾಡಿ, ಬರೆದು, ಸೆಮಿನಾರ್ ಮಾಡಿ, ಪ್ರಕಟಿಸಿ, ಏನೇನೆಲ್ಲಾ ಮಾಡಿಬಿಡುತ್ತಾರೆ. ಯಾರೋ ಎಲ್ಲೋ ಏನ್ ಚೆನ್ನಾಗಿ ಬರೆದರೆ ಇವರು ಯಾಕೆ ಇಷ್ಟು ಸಂಭ್ರಮ ಪಡಬೇಕು? ಅದನ್ನೇ ಅಕ್ಷರ ಪ್ರೀತಿ ಅಂದೆ.

ಆಮೇಲೆ ಗೆಳೆಯರ ಬಗ್ಗೆ ನಂಬಿಕೆ ಅಂದರೆ ಅಷ್ಟು ನಂಬಿಕೆ. ಎಷ್ಟೋ ಸಲ ರಾಜು ಅವರಿಗೆ ಸಮಾಜದ ಕೆಟ್ಟ ಮುಖ ಗೊತ್ತೇ ಇಲ್ಲವಲ್ಲಾ ಅನ್ನಿಸುತ್ತದೆ. ಅವರಿಗೆ ವಿಲನ್‌ಗಳು ಗೊತ್ತೇ ಇಲ್ಲ. ಬದುಕು ಅವರು ಅಂದುಕೊಳ್ಳುವಷ್ಟು ಸುಂದರ ಸುಗಮ ಆಗಿಲ್ಲ. ಅವರ ಬದುಕಿನ ಇತರ ವಿವರಗಳು ನನಗೆ ಗೊತ್ತಿಲ್ಲದಿರುವುದರಿಂದ ಅವರ ಬಾಲ್ಯ, ಯೌವನ ಕಾಲಗಳಲ್ಲಿಯೂ ಅವರು ಹೀಗೇ ಇದ್ದರೇ ಅಂತಲೂ ಯೋಚನೆಯಾಗುತ್ತದೆ. ಇಲ್ಲದಿದ್ದರೆ ಅವರು ಮಗನಿಗೆ ಋತ ಅಂತ ಹೆಸರಿಡುತ್ತಿದ್ದರೇ? ಅಲ್ಲಾ ಸಾರ್ "ಅನೃತಂ ಲೋಭಂ ಭಯಂ ಎಂಬುದಿನಿತುಂ ಇಲ್ಲಾ" ಅಂತ ಯಾವುದೋ ಪದ್ಯ ಇದೆಯಲ್ಲಾ ಆ ಥರಾ ಮಗನಿಗೆ ಹೆಸರಿಟ್ರಾ ಅಂತ ಕೇಳಿದರೆ ಋತ ಅಂದರೆ ಸತ್ಯ ಅಂತ ನಮ್ಮ ಮಗನೇ ಸತ್ಯ

ಅಂತ ಭಾವಿಸುವ ಜನಪದ ಇವರು. ಒಂದು ಸಲ ಮದ್ರಾಸಿನಲ್ಲಿ ನಾವು, ಅಂದರೆ ಮದ್ರಾಸು ಯೂನಿವರ್ಸಿಟಿಯ ಕನ್ನಡ ವಿಭಾಗದವರು ಸೇರಿ, ಕನ್ನಡ ಬಳಗಕ್ಕೆ ಶ್ರೀನಿವಾಸರಾಜು ಅವರ ಮೂಕ ನಾಟಕ ಮಾಡಿದೆವು. ಅದು ಯುವಕನೊಬ್ಬನ ತಾಕಲಾಟದ ವಸ್ತು ಉಳ್ಳ ನಾಟಕ. ಜನರಿಗೆ ಹಾಕಲು ಬಟ್ಟೆಯಿಲ್ಲ ಅಂತ ಬ್ಯಾನರ್ ಕಳಚಿ ಹೊದ್ದುಕೊಳ್ಳುವ ದೃಶ್ಯ ಇರುವಂತಹ ನಾಟಕ. ನಾಟಕ ಚೆನ್ನಾಗಿ ಮಾಡಿದೆವು. ಎಲ್ಲರೂ ಇಷ್ಟಪಟ್ಟರು. ನಾನು, ಯಾಕೆ ಮೇಷ್ಟರು ಇದರ ಬಗ್ಗೆ ಬರೆದರು ಅಂತ ಯೋಚಿಸಿದೆ. ಅವರ ಜಗತ್ತು ಸುಭದ್ರ, ಆದರೂ ಈ ಅಭದ್ರ ಬದುಕಿನ ಬಗ್ಗೆ ಬರೆದರಲ್ಲಾ ಅನ್ನಿಸಿತ್ತು. ಇನ್ನೊಂದು ಸಲ ಒಂದು ಪದ್ಯ ಬರೆದರು. ಅದರಲ್ಲಿ ರೋಷ ಇತ್ತು. ಕೆಟ್ಟ ಬೈಗುಳದ ಮಾತು ಬಳಸಿದ್ದರು. ಅದು ಮೇಷ್ಟರಲ್ಲ ಅನ್ನಿಸಿತು. ಅವರಿಗೆ ಹಾಗೆ ಬೈದು ಗೊತ್ತಿಲ್ಲ. ನಾನು ಹೇಳೇ ಬಿಟ್ಟೆ "ಸಾರ್, ನೀವು ಈ ಥರ ಬರೀಬೇಡಿ" ಅಂತ. ಅವರು ಮತ್ತೆ ಆ ಥರಾ ನಕ್ಕರು.

ಶ್ರೀನಿವಾಸರಾಜು ಮತ್ತು ಎಚ್.ಎಸ್.ಆರ್. ನನಗೆ ರಿಯಾಲಿಟಿ ಚೆಕ್ ಇದ್ದಹಾಗೆ. ಅವರು ಒಪ್ಪಿದರೆ ಜಗತ್ತು ಒಪ್ಪಿದ ಹಾಗೆ. ನನ್ನ ಕವನಗಳು ಇಂಟರ್‌ನೆಟ್‌ನಲ್ಲಿ ಜಗತ್ತಿನ ಯಾವುದ್ಯಾವುದೋ ಮೂಲೆ ತಲುಪಿದಾಗ, ರಾಷ್ಟ್ರೀಯ ಮಟ್ಟದಲ್ಲಿ ಮೆಚ್ಚುಗೆ ಗಳಿಸಿದಾಗ, ಬೇರೆ ಬೇರೆ ಯುರೋಪಿಯನ್ ಭಾಷೆಗಳಿಗೆ ಅನುವಾದಗೊಂಡಾಗ, ವಿಶ್ವಕವಿಗಳ ಕವನ ಸಂಕಲನಗಳಲ್ಲಿ ಆಯ್ಕೆಗೊಂಡು ಪ್ರಕಟವಾದಾಗ ನನಗಿಂತ ಖುಷಿಪಡುವವರು ಇವರಿಬ್ಬರು. 'ನಮ್ಮ ಹುಡುಗಿ' ಅನ್ನುವ ಹೆಮ್ಮೆ. ನಿಜವಾಗಿ ನೋಡಿದರೆ ಅಂತಹ ಕ್ಷಣಗಳಲ್ಲಿ ನನಗೆ ಮನೆಯವರಿಗಿಂತ ರಾಜು ಮತ್ತು ಎಚ್.ಎಸ್.ಆರ್. ಅವರ ಪ್ರತಿಕ್ರಿಯೆಯೇ ಹೆಚ್ಚು ಮುಖ್ಯವಾಗುತ್ತದೆ. ನನ್ನ ಮೊದಲ ಸಂಕಲನ "ನಾವು ಹುಡುಗಿಯರೇ ಹೀಗೆ" ಪ್ರಕಟಗೊಂಡಾಗ ಅದನ್ನು ಯಾರಿಗೆ ಅರ್ಪಿಸಬೇಕು ಅಂತ ಚಿಂತಿಸುತ್ತಿದ್ದಾಗ ನಾನು ಆ ಕಾಲದ ನನ್ನ ಮನಸ್ಥಿತಿಗೆ ತಕ್ಕ ಹಾಗೆ ಎಚ್.ಎಸ್.ಆರ್. ಅವರಿಗೆ ಅರ್ಪಿಸುತ್ತೀನಿ ಸಾರ್ ಅಂದೆ. ಅದಕ್ಕೆ ರಾಜು "ಮೇಷ್ಟ್ರುಗಳಿಗಿಂತ ಮೊದಲು ತಂದೆತಾಯಿ. ಮೊದಲ ಪುಸ್ತಕ ಅವರಿಗೆ ಸಲ್ಲಬೇಕು" ಅಂತ ಬುದ್ಧಿ ಹೇಳಿ ನನ್ನ ತಂದೆತಾಯಿಗಳಿಗೆ ಮೊದಲ ಪುಸ್ತಕ ಅರ್ಪಿಸುವ ಹಾಗೆ ಮಾಡಿದರು. ನನಗೆ ಅದರ ಬಗ್ಗೆ ಸ್ವಲ್ಪ ಅನುಮಾನ ಇತ್ತು. ಆದರೆ ಪುಸ್ತಕ ನೋಡಿದಾಗ ನನ್ನ ತಂದೆತಾಯಿಗಳಿಗೆ ಹಾಗೂ ಮನೆಯವರಿಗೆ ಆದ ಸಂತೋಷ ನೋಡಿ ನನಗೇ ಆಶ್ಚರ್ಯವಾಗಿತ್ತು. ಆಮೇಲೆ ಎಷ್ಟೋ ದಿನಗಳ ನಂತರ ನಾನು ಶ್ರೀನಿವಾಸ ರಾಜು ಅವರಿಗೆ ಥ್ಯಾಂಕ್ಸ್ ಹೇಳಿದೆ. ಅವರು ನಕ್ಕರು.

ಅಲ್ಲಿಂದ ಮುಂದೆ ರಾಜು ಅವರು ನನಗೆ ಅಡ್ವೈಸರ್. ಒಂದು ಮಾತು ಅವರನ್ನು ಕೇಳಿದರೆ ಸಮಾಧಾನ.

ಆದರೆ ನನ್ನ ಬದುಕು ಇದೆಲ್ಲವನ್ನೂ ಮೀರಿ ಬೇರೆಯೇ ದಾರಿ ಹಿಡಿಯಿತು. ಬದುಕಿನ ಎಲ್ಲ ಅನುಭವಗಳನ್ನೂ ಬಾಚಿ ತೆಕ್ಕೆಯಲ್ಲಿ ಹಿಡಿದು, ಎಲ್ಲ ರಿಸ್ಕ್‌ಗಳನ್ನೂ ಆಹ್ವಾನಿಸುತ್ತಾ, ನಾನು ಹೆಚ್ಚೋ, ಕಷ್ಟಗಳ ಬಿರುಮಳೆ ಹೆಚ್ಚೋ ಅನ್ನುವಂತೆ ಬದುಕತೊಡಗಿದೆ. ಜೊತೆಗೇ ಅವರ ನಂಬಿಕೆಗಳಿಗೆ ತೀರಾ ವಿರುದ್ಧವಾದ ರೀತಿಯಲ್ಲಿ ನಡೆದುಕೊಂಡೆ. ಎಷ್ಟೋ ವಿಷಯಗಳು ಅವರಿಗೆ ಗೊತ್ತೇ ಆಗಲಿಲ್ಲ. ನಡುವೆ ಸ್ವಲ್ಪ ಕಾಲ ಇಬ್ಬರಿಂದಲೂ ದೂರವಾದೆ. ಯಾಕೆಂದರೆ

ನಾವು ಬೇರೆ ಬೇರೆ ಭಾಷೆಗಳನ್ನು ಮಾತಾಡುತ್ತಿದ್ದೆವು ಮತ್ತು ಬೇರೆ ಬೇರೆ ಕಾಲಗಳಲ್ಲಿ ಬದುಕುತ್ತಿದ್ದೆವು. ನನಗೆ ಕಷ್ಟ ಬಂದಾಗ ಇಬ್ಬರೂ ತಕ್ಷಣ ನೆರವಿಗೆ ಬಂದರು. ನನಗೆ ಬೆಂಕಿಯ ಅಪಘಾತ ಆಗಿ ಆಸ್ಪತ್ರೆಯಲ್ಲಿದ್ದಾಗ ನೋಡಲು ಬಂದರು. ಅವರಿಗೆ ಸಂಕಟವಾಗಿತ್ತು. ಆದರೂ ಮೇಷ್ಟ್ರುಗಳು ಇಬ್ಬರೂ ಅದನ್ನು ತೋರಿಸಿಕೊಳ್ಳದೇ ಬದುಕಿನ ಮಹತ್ವದ ಬಗ್ಗೆ ಮಾತಾಡಿದರು. 'ನೀವು ಚೆನ್ನಾಗಿ ಆಗಿ ಮೇಡಂ, ಇನ್ನೂ ಎಷ್ಟೊಂದು ಪದ್ಯ ಬರೀಬೇಕು' ಅಂತ ಜೋಕ್ ಮಾಡಿ ನಗಿಸಿದರು. ಎಷ್ಟೋ ಸಲ ನನಗೆ ಇವರು ಬದುಕಿನ ಕಾನ್ಸ್ಟೆಂಟ್ ಅನ್ನಿಸುತ್ತದೆ. ಯಾರು ಎಲ್ಲೇ ಎಷ್ಟೇ ಬದಲಾದರೂ ನಮ್ಮ ಮೇಷ್ಟ್ರುಗಳು ಬದಲಾಗುವುದಿಲ್ಲ. ಸೂರ್ಯ ಚಂದ್ರ ಆಕಾಶ ಇರುವ ಹಾಗೆ ಎಚ್.ಎಸ್.ಆರ್. ಮತ್ತು ಶ್ರೀನಿವಾಸರಾಜು ಮೇಷ್ಟ್ರು.

ನಾನು ಪದ್ಯ ಬರೆಯುತ್ತಲೇ ಹೋದೆ. ಅನೇಕ ಮಹಾನ್ ಸಾಹಿತಿಗಳ ಪರಿಚಯ ನನಗೆ ಆಗಿದ್ದು ಶ್ರೀನಿವಾಸರಾಜು ಮತ್ತು ಎಚ್.ಎಸ್.ಆರ್. ಅವರ ಕೃಪೆಯಿಂದ. ಮೊನ್ನೆ ದೆಹಲಿಯಲ್ಲಿ ಕವಿಸಮ್ಮೇಳನಕ್ಕೆ ಹೋಗಿದ್ದಾಗ ತಮಿಳಿನ ಪ್ರಸಿದ್ಧ ಹಿರಿಯ ಸಾಹಿತಿ ಅಶೋಕಮಿತ್ರನ್ ಬಂದಿದ್ದರು. ಮಾತಾಡುತ್ತಾ ಅವರು "ಈಗ ಇಪ್ಪತ್ತು ಇಪ್ಪತ್ತೈದು ವರ್ಷಗಳ ಮೊದಲು ನಾನು ಬೆಂಗಳೂರಿಗೆ ಬಂದಿದ್ದಾಗ ಒಬ್ಬಳು ಹುಡುಗಿ ಬಹಳ ಚೆನ್ನಾಗಿ ಕವನ ಬರೀತಾಳೆ ಅಂತ ಹೇಳಿದ್ದರು. ಆಗ ಒಂದು ಕ್ರಿಶ್ಚಿಯನ್ ಕಾಲೇಜಿನಲ್ಲಿ ಮೇಷ್ಟರಾಗಿದ್ದ ಒಬ್ಬರು ಕನ್ನಡ ಪುಸ್ತಕ ಪ್ರಕಟ ಮಾಡುತ್ತಿದ್ದರು. ಅವರು ಆ ಹುಡುಗಿಗೆ ಬಹಳ ಉಜ್ವಲ ಭವಿಷ್ಯ ಇದೆ ಅಂತ ಹೇಳಿದ್ದರು. ಅವಳೇನಾದಳು? ಆ ಮೇಷ್ಟರು ಹೇಗಿದ್ದಾರೆ?" ಅಂತ ಕೇಳಿದರು.

ಆ ಹುಡುಗಿ ನಾನೇ, ಅವರು ಈಗ ಇನ್ನೊಬ್ಬ ಹುಡುಗಿಯ ಭವಿಷ್ಯ ಬರೆಯುತ್ತಿದ್ದಾರೆ ಅಂತ ನಾನು ಹೆಮ್ಮೆಯಿಂದ ಹೇಳಿದೆ.



# ನಾಟಕದ ಮೇಸ್ಟ್ರು : ಪ್ರೊ. ಚಿ. ಶ್ರೀನಿವಾಸರಾಜು

● ಎಸ್. ಶಿವಣ್ಣ

ರಾಜು ಮೇಸ್ಟ್ರು ಎಂದೇ ಹೆಸರಾದ ಪ್ರೊ. ಚಿ. ಶ್ರೀನಿವಾಸರಾಜು ಅವರು ನಾಟಕಕಾರರಾಗಿ, ಲೇಖಕರಾಗಿ ಕನ್ನಡ ಸಾಹಿತ್ಯದಲ್ಲಿ ಹೇಗೆ ಚಿರಪರಿಚಿತರೋ, ಹಾಗೆ ನಾಟಕದ ಪಾಠ ಹೇಳುವ ಮೇಸ್ಟ್ರಾಗಿಯೂ ವಿದ್ಯಾರ್ಥಿಗಳಿಗೆ ಪ್ರಿಯವಾದವರು. ನಾಟಕ ಪ್ರಕಾರದಲ್ಲಿ ಮೂಕ ನಾಟಕಗಳನ್ನು ಬರೆಯುವವರಲ್ಲಿ ಪ್ರೊ. ಚಿ. ಶ್ರೀನಿವಾಸರಾಜು ಅವರು ಒಬ್ಬರು. ಮೂಕ ನಾಟಕಗಳಲ್ಲಿ ಮಾತು ಇರುವುದಿಲ್ಲ. ನಟರ ಚಲನವಲನ, ದೃಶ್ಯ ಕಲ್ಪನೆ, ರಂಗಾಲಂಕಾರ ಸಂಜ್ಞೆಗಳು -ಮುಂತಾದ ಭಾಷೆಯಲ್ಲದ ಮಾಧ್ಯಮಗಳನ್ನು ಬಳಸುವುದರ ಮೂಲಕವೇ ನಾಟಕದ ಕತೆಯನ್ನು, ವಸ್ತುವನ್ನು, ಉದ್ದೇಶವನ್ನು ಯೋಚಿಸಿಯೇ ಬರೆಯಬೇಕಾಗುತ್ತದೆ. ಅಭಿನಯದಲ್ಲಿ ಸ್ವಲ್ಪ ಎಡವಟ್ಟಾದರೂ ಅರ್ಥ ಕೆಟ್ಟುಹೋಗುತ್ತದೆ. ಕತೆಯಾಗಲಿ, ವಸ್ತುವಾಗಲಿ ತಿಳಿಯದಾಗ ಬಹುದು. ಮೂಕ ನಾಟಕಗಳನ್ನು ರಂಗದ ಮೇಲೆ ಯಶಸ್ವಿಗೊಳಿಸು ವುದು ಒಂದು ಕಲೆ. ಆ ಕಲೆಯನ್ನು ರಾಜುಮೇಸ್ಟ್ರು ಚೆನ್ನಾಗಿ ಬಲ್ಲರು. ಅವರ ಯಾವುದೇ ಮೂಕ ನಾಟಕ ನೋಡಿದರೂ ನಾಟಕದ ಕತೆ ತಕ್ಷಣಕ್ಕೆ ಅರ್ಥವಾಗುತ್ತದೆ. ಅಂಥ ಮಹತ್ವದ ಮೂಕ ನಾಟಕಗಳನ್ನು ಪ್ರೊ. ಚಿ. ಶ್ರೀನಿವಾಸರಾಜು ಅವರು ರಚಿಸಿದ್ದಾರೆ.

ಮೂಕ ನಾಟಕಗಳನ್ನು ರಂಗದ ಮೇಲೆ ಯಶಸ್ವಿಯಾಗುವಂತೆ ಹೇಗೆ ಬರೆಯಬಲ್ಲರೊ ಅದೇ ರೀತಿ ನಾಟಕಗಳನ್ನು ವಿದ್ಯಾರ್ಥಿಗಳಿಗೆ ಅರ್ಥವಾಗುವಂತೆ ಪಾಠ ಮಾಡಬಲ್ಲರೂ ಕೂಡ ಹೌದು. ರಾಜು ಮೇಸ್ಟ್ರು ಅವರು ಹೇಳುವ ನಾಟಕದ ಪಾಠ ತುಂಬ ವಿಶಿಷ್ಟ ರೀತಿ ಯದು. ಬಹುತೇಕವಾಗಿ ನಾಟಕ ಪಾಠ ಹೇಳುವ ಮೇಸ್ಟ್ರು ಡೈಲಾಗ್‌ಗಳನ್ನು ಪಾತ್ರದ ಸನ್ನಿವೇಶಕ್ಕೆ ಅನುಗುಣವಾಗಿ ಉಚ್ಚರಿಸುವು ದರ ಮುಖೇನವೇ ಅರ್ಥೈಸುವ ಕೆಲಸ ಮಾಡುತ್ತಾರೆ. ಆದರೆ

ರಾಜುಮೇಸ್ಟ್ರು ಡೈಲಾಗ್‌ಗಳನ್ನು ಪಾತ್ರದ ಸನ್ನಿವೇಶಕ್ಕೆ ತಕ್ಕನಾಗಿ ಬಳಸಿ ಹೇಳಿದರು. ಮುಖ್ಯವಾಗಿ ಇಡಿ ನಾಟಕದ ವಸ್ತುವನ್ನು ರೇಖಾಚಿತ್ರದ ಮೂಲಕ ಬೋರ್ಡ್ ಮೇಲೆ ಬರೆದು ಒಂದೊಂದು ಪಾತ್ರಗಳನ್ನು ಸನ್ನಿವೇಶ ಸಂದರ್ಭಕ್ಕೆ ಅನುಗುಣವಾಗಿ ಸಂಬಂಧ ಕಲ್ಪಿಸಿ ಚಿತ್ರಿಸುತ್ತಾರೆ. ನಾಟಕದಲ್ಲಿ ಮುಖ್ಯ ಪಾತ್ರದ ಸ್ಥಾನ ಎಂಥಹದ್ದು, ಉಳಿದ ಪಾತ್ರಗಳ ಸ್ಥಾನ ಎಂಥಹದ್ದು ಹಾಗೇ ಉಳಿದ ಪಾತ್ರಗಳು ಮುಖ್ಯ ಪಾತ್ರದೊಂದಿಗೆ ಯಾವ ರೀತಿಯ ಸಂಬಂಧ ಹೊಂದಿವೆ ಮತ್ತು ಹೇಗೆ ನಡೆದುಕೊಳ್ಳುತ್ತವೆ; ಮುಖ್ಯ ಪಾತ್ರ ಮತ್ತು ಉಳಿದ ಪಾತ್ರಗಳ ನಡೆನುಡಿ ಹೇಗೆ ಇರುತ್ತದೆ; ಈ ಎಲ್ಲಾ ಅಂಶಗಳನ್ನೊಳಗೊಂಡ ರೇಖಾಚಿತ್ರವನ್ನು ಬೋರ್ಡ್‌ಮೇಲೆ ಬರೆದರೆ ಸಾಕು, ಮೂಕ ನಾಟಕಗಳನ್ನು ನೋಡಿದರೆ ಹೇಗೆ ಅರ್ಥವಾಗುತ್ತದೆಯೋ ಅದೇ ರೀತಿ ಬೋರ್ಡ್ ಮೇಲೆ ಬರೆಯುವ ರೇಖಾಚಿತ್ರ ಇಡೀ ನಾಟಕದ ಕತೆಯನ್ನು, ವಸ್ತುವನ್ನು ಪಾತ್ರಗಳ ಚಿತ್ರಣವನ್ನು ತಿಳಿಸಿಬಿಡುತ್ತದೆ. ಕಿತ್ತಲೆ ಹಣ್ಣಿನ ಸಿಪ್ಪೆ ಸುಲಿದು ಅದರ ನಾರನ್ನು ತೆಗೆದು ತೊಳೆಗಳನ್ನು ಬಿಡಿಸಿಟ್ಟಂತೆ ಇಡಿ ನಾಟಕವನ್ನು ರೇಖಾಚಿತ್ರದ ಮೂಲಕ ಬಿಡಿಸಿ ವಿದ್ಯಾರ್ಥಿಗಳಿಗೆ ಮನಮುಟ್ಟುವಂತೆ ಪಾಠ ಹೇಳುವ ಕ್ರಮ ತುಂಬಾ ಅದ್ಭುತವಾದುದು. ಈ ಕ್ರಮದಿಂದಾಗಿಯೇ ನನ್ನಂಥ ಅನೇಕ ವಿದ್ಯಾರ್ಥಿಗಳ ಗಮನ ಸೆಳೆದ ಮೇಸ್ಟ್ರು ಪ್ರೊ. ಚಿ. ಶ್ರೀನಿವಾಸರಾಜು ಅವರು. ವಿದ್ಯಾರ್ಥಿಗಳಿಗೆ ಪರೀಕ್ಷೆಯಲ್ಲಿ ಎಂಥದ್ದೆ ಪ್ರಶ್ನೆ ಬಂದರೂ ಒಂದು ಸಾರಿ ರಾಜು ಮೇಸ್ಟ್ರ ರೇಖಾಚಿತ್ರ ನೆನಪು ಮಾಡಿಕೊಂಡರೆ ಸಾಕು ಉತ್ತರ ತಾನೇತಾನಾಗಿ ಹೊಳೆಯುತ್ತದೆ. ಅಂಥ ಒಂದು ವಿಶಿಷ್ಟತೆಯನ್ನು ಹೊಂದಿರುವ ಮಹತ್ವದ ನಾಟಕದ ಮೇಸ್ಟ್ರು ಪ್ರೊ. ಚಿ. ಶ್ರೀನಿವಾಸರಾಜು ಅವರು.



# ಬನ್ನಿ ಪ್ರತಿಭೆಗಳೇ ಬನ್ನಿ

● *ಬಿ.ಎಸ್. ಗಾಯತ್ರಿ*

ಇವತ್ತು ಯಾರಾದರೂ ಮೆಚ್ಚುಗೆಯಿಂದ ನನ್ನದೊಂದು ಪದ್ಯವನ್ನು "ಚನ್ನಾಗಿದೆ" ಎಂದರೆ, ನಾನು ಮೊದಲು ನೆನಪಿಸಿಕೊಳ್ಳುವುದು ಆ ಒಂದು ಸ್ಪರ್ಧೆ, ಅದೊಂದು ಅವಕಾಶ, ಅದೊಂದು ಸಂಘ-ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್.

ನನ್ನ ಮೊದಲ ಕವನ ಪ್ರಕಟವಾದದ್ದೇ ಕ್ರೈಸ್ಟ್ ಕಾಲೇಜ್ ಕನ್ನಡ ಸಂಘದ "ದ.ರಾ. ಬೇಂದ್ರೆ ಸ್ಮೃತಿ ಅಂತರ ಕಾಲೇಜು ವಿದ್ಯಾರ್ಥಿ ಕವನ ಸ್ಪರ್ಧೆ"ಯಲ್ಲಿ ಬಹುಮಾನ ಪಡೆದಾಗ. ಯಾವ ಹಿರಿಯ ಕವಿಯನ್ನೇ ಕೇಳಿ ಬೇಕಾದರೆ, ತಮ್ಮ ಕವನವನ್ನು ಮೊದಲು ಬೆಳಕಿಗೆ ತಂದ ಸಂಸ್ಥೆಗೆ ಅವರೆಂತಹ ಆತ್ಮೀಯ ಬಂಧವನ್ನು ಹೊಂದಿರುತ್ತಾರೆಂಬುದಾಗಿ ! ಮಾತಿನಾಚೆಗೂ, ಲೇಖನದಾಚೆಗೂ ಹೊಮ್ಮುವ ಆಪ್ಯಾಯಮಾನತೆಯನ್ನು 'ಅಭಿಪ್ರಾಯ'ವೆಂದಷ್ಟೇ ನಾನು ಕರೆಯುವುದಿಲ್ಲ.

ಬರೆಯುವವರು ಬಹಳಷ್ಟು ಮಂದಿ, ನನ್ನಂತೆ ಈ ಕೃಷಿಯಲ್ಲಿ ಕೈಹಾಕಿರುವವರಲ್ಲಿ ನಂಬಲಾರದಂತಹ ತೀಕ್ಷ್ಣ ಸ್ಪರ್ಧೆ ಇದೆ. ಸ್ಪರ್ಧೆ ಒಳ್ಳೆಯದು, ಅದು ಒಳ್ಳೆಯ ಸ್ಪರ್ಧೆಯಾಗಿದ್ದರೆ ಮಾತ್ರ, ಹೊಸದಾಗಿ ಬರೆಯುವವರನ್ನು ಕಂಡರೆ ಈಗಾಗಲೇ 'ನೆಲೆ' ನಿಂತಿರುವವರ ದೃಷ್ಟಿಯಲ್ಲಿ ತೀರಾ 'ಅಪಕ್ವ'ವೆಂದೆನಿಸುತ್ತದೆ. ಇದು ಬಹಳ ಸಹಜವಿರಬಹುದು. ಆದರೆ ಅವರ ಗಟ್ಟಿತನವನ್ನು ಹೊರತೆಗೆಯುವ ಒಂದೇ ಒಂದು ಪ್ರಾಮಾಣಿಕ ಪ್ರಯತ್ನ ಎಷ್ಟೊಂದು ಎಳೆ ಪ್ರತಿಭೆಗಳನ್ನು ಗುರುತಿಸಬಲ್ಲದು !

ಆ ನಂತರ ದಿನಗಳಲ್ಲಿ ನನ್ನ ಬಹಳಷ್ಟು ಕವನ, ಲೇಖನ, ಕತೆಗಳು ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿವೆ; ಹಲವಾರು ಸ್ಪರ್ಧೆಗಳಲ್ಲಿ ಬಹುಮಾನ ಪಡೆದಿವೆ. ಆದರೆ, ಪದವಿಯಲ್ಲಿದ್ದ ಮೂರು ವರ್ಷಗಳಲ್ಲೂ ಸತತವಾಗಿ ಪಡೆದ ಕ್ರೈಸ್ಟ್ ಕಾಲೇಜ್ ಬಹುಮಾನ ನನ್ನ

ಆಸಕ್ತಿಯನ್ನು, ನನ್ನ ಬದುಕಿನ 'ಕೆರಿಯರ್' ಅನ್ನೇ ಬದಲಿಸುವಷ್ಟರ ಮಟ್ಟಿಗೆ ಪ್ರಭಾವ ಬೀರಿದೆ ಎಂದರೆ ಆಶ್ಚರ್ಯವಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ನನಗೆ ಎಷ್ಟೊಂದು ನೋವು ನಲಿವುಗಳನ್ನು ತಂದುಕೊಟ್ಟ ಹಲವಾರು ಆತ್ಮೀಯ ಗೆಳೆಯ ಗೆಳತಿಯರನ್ನು ಪರಿಚಯಿಸಿರುವ ಈ ಸಂಘ ನನ್ನ ವೈಯಕ್ತಿಕ ಬದುಕಿನಲ್ಲೂ ತನ್ನದೇ ಆದ ಸ್ಥಾನವನ್ನು ಪಡೆದಿದೆ.

ಕ್ರೈಸ್ಟ್ ಕಾಲೇಜ್ ಕನ್ನಡ ಸಂಘ ಪ್ರಕಟಿಸಿರುವ ಅನೇಕ ಕವನ ಸಂಕಲನಗಳು, ವಿಮರ್ಶಾತ್ಮಕ ಪುಸ್ತಕಗಳು ಸಾಹಿತ್ಯದ ವಿದ್ಯಾರ್ಥಿಯಾದ ನನ್ನ ದೃಷ್ಟಿಯಲ್ಲಂತೂ ತೀರಾ ಉಪಯೋಗಿಯಾದವು. ಈ ಅನನ್ಯ ಸಂಘದ ಹಿಂದೆ ನಿಸ್ವಾರ್ಥದಿಂದ ದುಡಿಯುತ್ತಿರುವ ವ್ಯಕ್ತಿಗಳಿಗೆ ನನ್ನಂತೆಯೇ ಸಂಘದಿಂದ ಪರಿಚಿತರಾಗಿ ಇಂದು ಸ್ವತಂತ್ರ್ಯ ಬರಹಗಾರರಾಗಿರುವ ಎಲ್ಲ ಯುವ ಪ್ರತಿಭೆಗಳ ಅಭಿನಂದನೆಗಳು ಸಲ್ಲುತ್ತವೆ. ಹೀಗೆ ಬೆಳೆಯುತ್ತಿರಲೆಂಬ ಹಾರೈಕೆಯೂ ಸಹ.

ಯಾರದೋ ಕಚಡಾ ರಾಜಕೀಯದಿಂದ, ಸ್ವಾರ್ಥತೆಯಿಂದ ಕೊಳೆಯುತ್ತಿರುವ; ಸಾಹಿತ್ಯ ಕ್ಷೇತ್ರದಲ್ಲೂ ಸಲ್ಲದ ದಂಧೆ ನಡೆಸುವವರ ಮಧ್ಯೆಯೂ 'ಬನ್ನಿ ಪ್ರತಿಭೆಗಳೇ ಬನ್ನಿ' ಎಂದು ಕರೆಯುತ್ತಲೋ, ಸದ್ದು ಗದ್ದಲವಿಲ್ಲದೆ 'ಮಿಣಿಮಿಣಿ ಬೆಳಕು' ಹಿಡಿದು ದಾರಿ ತೋರುತ್ತಲೋ ಜೀವಂತವಾಗಿರುವ ಕ್ರೈಸ್ಟ್ ಕಾಲೇಜ್‌ನ ಕನ್ನಡ ಸಂಘ ನಾವಿನ್ನೂ ಜೀವಂತವಾಗಿರುವುದರ ಸಂಕೇತವೇ ಸರಿ.

*ಕ್ರೈಸ್ಟ್ ಕಾಲೇಜು 'ಆನಂದ' ಸದಾಶಯ ಸಂಚಿಕೆ*



# ದೃಶ್ಯಕಲೆಯೆಂಬ ಅ–ವಾಚ್ಯ ಕುಲ ಹಾಗೂ ಕ್ಲೀಷೆಗಳ ಗೆದ್ದ ಕನ್ನಡದ ಮೇಷ್ಟ್ರು

● ಎಚ್.ಎ. ಅನಿಲ್‌ಕುಮಾರ್

ಬಹಳಷ್ಟು ಮಂದಿ ಶಿಕ್ಷಕರನ್ನು ತುಂಬ ದಿನಗಳ ಕಾಲ 'ಮೇಷ್ಟ್ರು' ಎಂದು ಕರೆಯದವನು ನಾನು. ಸ್ವತಃ ಮೇಷ್ಟ್ರಾಗಿ ಮುಂದೆ ನನ್ನ ಶಿಷ್ಯರೊಂದಿಗಿನ ನನ್ನ ಪರಿಸ್ಥಿತಿ ಏನು ಎಂಬ ಗೊಂದಲವೂ ನನಗಿಲ್ಲದಿಲ್ಲ. ಆದರೆ ಚಿ. ಶ್ರೀನಿವಾಸರಾಜು ಮೇಷ್ಟ್ರು ಅಂತಹವರು ನಮ್ಮಂತಹವರಿಂದ ತಮ್ಮ ಜೀವನಪರ್ಯಂತ 'ಕನ್ನಡ ಮೇಷ್ಟ್ರು' ಅನ್ನಿಸಿಕೊಳ್ಳದೆ ವಿಧಿಯೇ ಇಲ್ಲ. ಅದಕ್ಕೆ ಕಾರಣ ಹಲವಾರಿದ್ದರೂ ಅವುಗಳಲ್ಲಿ ಕೆಲವನ್ನು ಮಾತ್ರ ಕೆಳಗೆ ಕಾಣಿಸಿದ್ದೇನೆ.

**ಇಪ್ಪತ್ತೆರಡು ವರ್ಷಗಳ ಮಾತಿದು, ೧೯೮೫ರ ಸುಮಾರು :**

ಚಿ. ಶ್ರೀನಿವಾಸರಾಜು ಮೇಷ್ಟ್ರು ದೃಶ್ಯಕಲಾ ಶಾಲೆಯಲ್ಲಿ ಕನ್ನಡ ಪಾಠ ಮಾಡುವ ಸಾಹಸದ ಆರಂಭಿಕ ದಿನಗಳಲ್ಲಿ ನನಗೆ ಗುರುಗಳಾಗಿ ಪರಿಚಯವಾದವರು. ಆಗ ನಾನು ಚಿತ್ರಕಲಾಪರಿಷತ್ತಿನ ಕಲಾಶಾಲೆಯಲ್ಲಿ ಕನ್ನಡವನ್ನು ಓದುವ, ಕಲೆಗೆ ಯಾವ ರೀತಿ ಸಂಬಂಧಿಸಿರದಿದ್ದರೂ ಕನ್ನಡ ಟೈಪಿಂಗ್ ಕಲಿಯುತ್ತಿದ್ದ ದಿನಗಳವು. ಕೇವಲ ಕನ್ನಡ ಕಲಿಸುತ್ತಿದ್ದರೂ, "ಸಂಬಂಧಿಸದೇ ಇರುವುದನ್ನೆಲ್ಲ ಕಲಿತರೆ ಅವು ಹೇಗೇಗೋ ನಮ್ಮ ವೃತ್ತಿಗೆ ಅವು ತಾಳೆಹಾಕಿಕೊಂಡುಬಿಡುತ್ತವೆ" ಎಂಬುದನ್ನವರು ಕಲಿಸುತ್ತಿದ್ದ ಕಾಲ. ಇಂದು ಅದು 'ಅಂತರಶಿಸ್ತೀಯ' ಎಂಬ ಹೊಸದೊಂದು ಶಿಸ್ತಿನಿಂದಲೇ ಗುರ್ತಿಸಲ್ಪಡುತ್ತಿದೆ. ಮುಂದೆ ನಾನು ಚಿತ್ರಕಲೆಯನ್ನು ಬದಿಗಿರಿಸಿ ಕಲಾ ಇತಿಹಾಸವನ್ನು ಕಲಿತದ್ದರಲ್ಲಿ ಅವರ ಕೈವಾಡವೂ ಇಲ್ಲದಿಲ್ಲ. ಹಾಗೆ ನಾನು ನನ್ನ ವೃತ್ತಿಯನ್ನು ಬದಲಾವಣೆ ಮಾಡಿದ ದಿನ, 'ನಾನು ಮಾಡಿದ್ದರಲ್ಲಿ ಅರ್ಥವಿದೆ' ಎಂದು ಅರ್ಥಗರ್ಭಿತವಾಗಿ ಬೆನ್ನುತಟ್ಟಿ ಗುರುಗಳಲ್ಲಿ ಅವರೇ ಮೊದಲಿಗರು ಹಾಗೂ ಅವರೇ ಕೊನೆಯವರೂ ಸಹ!



ಕನ್ನಡ ಮೇಷ್ಟ್ರು ಆಗಷ್ಟೇ ಶಾಂತಿನಿಕೇತನಕ್ಕೆ ಹೋಗಿಬಂದು

ಎಚ್.ಎಸ್. ರಾಘವೇಂದ್ರರಾವ್‌ರ ಪುಸ್ತಕ ಆತ್ಮಚರಿತ್ರಾತ್ಮಕ ದೃಶ್ಯಕಲೆ ಕೇಂದ್ರಿತ ಪ್ರವಾಸಕಥನ "ಜನಗಣನ"ದ ಮೂವರು ಅಧಿನಾಯಕರಲ್ಲಿ ಒಬ್ಬರಾಗಿದ್ದರು. ಆ ಗುಂಪಿನ ಮತ್ತೊಬ್ಬರೆಂದರೆ ಕಲಾ ವಿಮರ್ಶಕ ಕೆ.ಎಸ್. ಶ್ರೀನಿವಾಸಮೂರ್ತಿ. ಬೆಂಗಾಲಿಗಳ ಬುದ್ಧಿಮತ್ತೆಯ ಬಗ್ಗೆ ಹೇಳುತ್ತ ಎರಡು ಮುಖ್ಯ ಘಟನೆಗಳನ್ನು ಹೇಳಿದ್ದು ಇನ್ನೂ ನೆನಪಿದೆ. "ನಿಮ್ಮ ಸತ್ಯಜಿತ್ ರೇಯ ಎಲ್ಲ ಸಿನೆಮಗಳನ್ನೂ ನಾವು ನೋಡಿದ್ದೇವೆ. ನಮ್ಮ ಎಷ್ಟು ಕನ್ನಡ ಸಿನೆಮಗಳನ್ನು ನೀವುಗಳು ನೋಡಿದ್ದೀರ ಹೇಳಿ?" ಎಂದು ಒಬ್ಬ ಬೆಂಗಾಲಿ 'ಭದ್ರಲೋಕ'ನನ್ನು (ಬುದ್ಧಿವಾದಿ) ಕೇಳಿದ್ದರಂತೆ. 'ಬೆನೇಗಲ್' ಎಂಬ ಪದ 'ಬೆಂಗಾಲ್' ಎಂಬ ಪದಕ್ಕೆ ಹತ್ತಿರವಾಗಿರುವುದರಿಂದ ಶ್ಯಾಮ್ ಬೆನೆಗಲ್ ಬೆಂಗಾಲಿಯೇ ಎಂದು ವಾದಿಸುವ ಬೆಂಗಾಲಿಗಳ ಮನೋಭಾವವನ್ನು ನಂತರದಲ್ಲಿ ನಾನು ಕಂಡುಕೊಂಡ ಮೇಲೆ ಕನ್ನಡ ಮೇಸ್ಟ್ರ ಈ ಮಾತು ಹೆಚ್ಚು ಅರ್ಥವಾಯಿತು. ಮೇಸ್ಟ್ರ ಎರಡನೇ ಘಟನೆ ಕಲ್ಕತ್ತವನ್ನು ಕುರಿತದ್ದು. ಸೈಕಲ್ಲಿನ ಹಿಂದಿನ ಸೀಟಿನಲ್ಲಿ ಹೆಣವನ್ನು ಪ್ಯಾಸೆಂಜರ್‌ನಂತೆ ಕುಳ್ಳಿರಿಸಿಕೊಂಡು ಬಂದವನೊಬ್ಬ, ಹೆಣವನ್ನು ಮರದ ಬುಡದಲ್ಲಿ ಹೆಗಲಚೀಲವೋ ಎಂಬಂತೆ ಇರಿಸಿ, ಸೈಕಲ್ಲನ್ನು ಮರಕ್ಕೆ ಒರಗಿಸಿ, ಮಣ್ಣಿನ ಮಡಕೆಯಲ್ಲಿ ಟೀ ಕುಡಿಯತೊಡಗಿದನಂತೆ. ಆಗ ಮೇಸ್ಟ್ರೇ ಹೇಳಿದ್ದ, ತಡವಾಗಿ ನೆನಪಾದ ಮೂರನೇ ಘಟನೆಯೂ ಒಂದಿದೆ. ಕಲ್ಕತ್ತದಲ್ಲಿ ಸಂಜೆಯಾದರೆ ಸಮಾ ಮೇಕಪ್ ಮಾಡಿಕೊಂಡು, ಕವಳದಂತೆ ಲಿಪ್ಸ್-ಕಡ್ಡಿ (ಲಿಪ್‌ಸ್ಟಿಕ್) ಬಳಿದುಕೊಂಡ ಹೆಂಗಸರು ಬಗಲಲ್ಲಿ ಮರ್ಫಿ ರೇಡಿಯೋ ಇರಿಸಿಕೊಂಡು ಸಾಲಾಗಿ ನಿಂತಿರುತ್ತಿದ್ದರಂತೆ!

ಕನ್ನಡ ಮೇಸ್ಟ್ರು ಈ ಮೇಲಿನ ಮೂರು ಘಟನೆಗಳನ್ನು ಹೇಳಿದ ನಂತರ, ಹೇಳಿದ ಕಾರಣಕ್ಕೇ ಇರಬಹುದು, ನಾನು ಶಾಂತಿನಿಕೇತನದಲ್ಲಿ ಎರಡು ವರ್ಷ ಇದ್ದು ಇವನ್ನೆಲ್ಲ ಕಣ್ಣಾರೆ ಕಂಡದ್ದು. ಆದರೆ ನನಗೆ ಆಚ್ಚರಿಯಾದುದೇನೆಂದರೆ ಮೇಸ್ಟ್ರು,

(ಅ) ಒಂದು ಕುಲದ ಅಹಂಕಾರವೆನ್ನಿಸುವಷ್ಟು ಸ್ವಾಭಿಮಾನದ ಘಟನೆಯೊಂದನ್ನ,

(ಆ) ಸಾವನ್ನೇ ದೈನಂದಿನ ಕ್ರಿಯೆಯಾಗಿ ಪರಿವರ್ತಿಸಿದವನ ಕುರಿತು ಮತ್ತು ಆ ದೇಹವನ್ನು ಮಾರಾಟಕ್ಕಿಟ್ಟವರ ಬಗ್ಗೆ

-ವಿವರಿಸಿದ ನಿರ್ಭಾವುಕ ರೀತಿಯ ಕುರಿತು! "ಮೊದಲಿನಿಂದಲೂ ನನ್ನ ಒಂದು ನಿಯಮಾವಳಿ ಏನೆಂದರೆ, ನಾನು ಒಮ್ಮೆ ಒಬ್ಬರ ಬಳಿ ಮಾತು ಬಿಟ್ಟೆನೆಂದರೆ ಮತ್ತೆ ಅಂತಹವರೊಂದಿಗೆ ಮಾತನಾಡುವುದಿಲ್ಲ" ಎಂದಿದ್ದರು ಅವರೊಮ್ಮೆ. ಇಪ್ಪತ್ತು-ಇಪ್ಪತ್ತೈದು ವರ್ಷ ಚಿತ್ರಕಲಾ ಪರಿಷತ್ತಿನಲ್ಲಿ ಎಂ.ಎಸ್. ನಂಜುಂಡರಾಯರ ಪಾಳಯದಲ್ಲಿ ಯಾರೊಂದಿಗೂ ಮಾತು ಬಿಡದೆ ಪಾಠ ಹೇಳುವುದು ಅಸಾಧ್ಯ. ಕನ್ನಡ ಮೇಸ್ಟ್ರು ಇನ್ನೂ ಅದನ್ನು ಆ ಅಸಾಧ್ಯವನ್ನು ಮಾಡುತ್ತಿದ್ದಾರೆ. ಅದಕ್ಕೆ ಕಾರಣ ಅವರ ಕಲಾಸಕ್ತಿ, ತಾಳ್ಮೆ, ಕನ್ನಡ ಭಾಷೆಯ ಉಳಿವು ಅ-ವಾಚ್ಯ ರಂಗದಲ್ಲೂ (ಗೊಂಬೆಯಾಟ, ಚಿತ್ರಕಲೆ ಇತ್ಯಾದಿ) ಸಾಧ್ಯವೆಂಬ ಅನುಮಾನಗಳೇ ಇರಬೇಕು. ಅವರಿಗೆ ಬೇಸರವಾದಾಗ, ದುಃಖವಾದಾಗ--ಅಥವ ಹಾಗಾಗಿದೆ ಎಂದು ನಮಗನ್ನಿಸಿದಾಗ--ಅವರು ಅನುಸರಿಸುವ ಸುಲಭ ಮತ್ತು ಅರ್ಥಪೂರ್ಣ ವಿಧಾನವೊಂದಿದೆ. ಅದೇನೆಂದರೆ ಗಾಢವಾದ ಮೌನದ ಚಿಪ್ಪಿನೊಳಗೆ ಸೇರಿಕೊಂಡುಬಿಡುವುದು. ಕಾ.ಸು. ರಾಮಚಂದ್ರ ಎಂಬ ಯುವಕವಿ ತೀರಿಕೊಂಡಾಗ ಕೆಲ ದಿನ ಬಹಳ ಗಂಭೀರವಾಗಿಬಿಟ್ಟಿದ್ದರು ಮೇಸ್ಟ್ರು.

ಅಂದರೆ ಮೊದಲಿಗೆ ಕನ್ನಡ ಮೇಸ್ಟ್ರು ನನಗೆ ಪರಿಚಿತರಾಗಿದ್ದು ಅವರ "ಸಂಬಂಧಿಸಿರ ದುದನ್ನು ಕಲಿತರೆ, ನಮ್ಮ ವೃತ್ತಿಯೊಂದಿಗೆ ಅದು ಹೇಗೋ ಸಂಬಂಧ ಕುದುರಿಕೊಳ್ಳುತ್ತದೆ" ಎಂಬ ತತ್ವದ ಮೂಲಕವೇನಲ್ಲ. ಮೊದಲಿಗೆ ಸ್ವತಃ ಅವರೇ ನಮಗೆ ಒಂದು ಅಚ್ಚರಿಯ ವಿಷಯವಾಗಿದ್ದರು. ಗೆಳೆಯ ಕಲಾವಿದ, ನಟ ಮತ್ತು "ನೆಲಾಕೃತಿ"ಯನ್ನು ಭಾರತದಲ್ಲಿ ಮೊದಲಬಾರಿಗೆ (ಬೆಂಗಳೂರಿನ ಹೊರವಲಯದಲ್ಲಿ) ನಿರ್ಮಿಸಿದ ಎಂ.ಎಸ್. ಉಮೇಶ್ ಹಾಗೂ ನಾನು ಪರಿಷತ್ತಿನಲ್ಲಿ ಮೇಸ್ಟ್ರ ಶಿಷ್ಯರಾಗಿದ್ದಾಗ ಅವರ ಬಗ್ಗೆ ಮಾತನಾಡಿಕೊಳ್ಳುತ್ತಿದ್ದೆವು. "ಅವರು ದೇವರನ್ನು ನಂಬುವುದಿಲ್ಲ. ಆದರೆ ಮಾಡುವ ಪಾಠವಿಧಾನವನ್ನು ಗುರುತಿಸಿದರೆ ಅವರು (ಕನ್ನಡದ) ಒಬ್ಬ ಶಿಸ್ತುಬದ್ಧ ಭಕ್ತನಿದ್ದಂತೆ. ಅವರೊಬ್ಬ ಅಗ್ನೋಸ್ಟಿಕ್, ಅನಾಸ್ಥಿಕ" ಎಂದು ನಾನು ಹೇಳುತ್ತಿದ್ದೆ. "ಹಾಗಲ್ಲ, ಅವರ ಶಾಂತಸ್ವಭಾವದ ಹಿಂದೆ ಯಾವ ನಿಮಿಷದಲ್ಲೂ ಕೂಡ ಏಕವಚನದಲ್ಲಿ ಬೈಯ್ದುಬಿಡುಬಹುದಾದಂತಹ, ಎಲ್ಲರ, ಎಲ್ಲದರ ಮೇಲಿನ ಒಂದು ನೈತಿಕ ಸಿಟ್ಟು ಅದುಮಿಟ್ಟಂತಿದೆ. ಆದರೆ ಅದೆಂದಿಗೂ ಹೊರಬರದೆ, ನಾಲಗೆಯ ಅಂಚಿನಲ್ಲಿ ಫೈನ್ ಬ್ಯಾಲೆಂಸಾಗಿದೆ. ಅದನ್ನು ನುಂಗಿಕೊಳ್ಳದ, ಹೊರಗಾಕದ ಶುದ್ಧ ಮಾರ್ಕ್ಸಿಸ್ಟ್ ಧೋರಣೆ ಅವರದು" ಎಂದಿದ್ದ ಉಮೇಶ್. ಇತಿಹಾಸ, ಥಿಯರಿ, ಸಂಸ್ಕೃತಿ ಚಿಂತನೆ ಎಂಬ 'ಪದಗಳೂ' ನಮ್ಮ ನಾಲಗೆಯಲ್ಲಿ ಒಂದು ಹೊರಳು ಹಾಕಲಾಗದಿದ್ದ ದಿನಗಳವು. ಆದರೆ ಆಗ ನಾವು ಹೆಚ್ಚೂ ಕಡಿಮೆ ಹಾಗೆಯೇ ಮಾತನಾಡಿಕೊಂಡಿದ್ದೆವೆಂಬುದು ನನ್ನ ಇಂದಿನ ಭಾವನೆ.

ಓದುವ, ಬರೆಯುವ ಕ್ರಿಯೆಗಳಿಗೆ ಹೆದರಿಯೇ ಎಸ್.ಎಸ್.ಎಲ್.ಸಿಯೋ, ಪಿ.ಯು.ಸಿಯೋ ಫೇಲಾಗಿ ಕಲಾ ವಿದ್ಯಾರ್ಥಿಗಳಾದವರ ಸಂಖ್ಯೆಯೇ ನಮ್ಮಲ್ಲಿ ಹೆಚ್ಚು. ಈಗಲೂ, ದೃಶ್ಯಕಲೆಯ ಸ್ನಾತಕೋತ್ತರ ವ್ಯಾಸಂಗದಲ್ಲಿಯೂ ಇದು ದಿಟ. ಆದ್ದರಿಂದಲೇ ದೃಶ್ಯಕಲೆಯ ಪಿಎಚ್.ಡಿ.ಗಳು ಪ್ರಬಂಧಗಳು 'ಮಹಾನ್ ಕರ್ನಾಟಕ ನಗೆಹಬ್ಬ' ಎನಿಸುತ್ತಿರುವುದು. ಅಂತಹುದರಲ್ಲಿ ಕಳೆದ ಇಪ್ಪತ್ತೈದು ವರ್ಷದಿಂದಲೂ ಈ ಮೇಷ್ಟ್ರು "ಕಲಾವಿದ್ಯಾರ್ಥಿಗಳಿಗೆ ಕನ್ನಡ ಕಲಿಸುತ್ತಿದ್ದಾರೆ" ಎಂಬುದು ಆಶಾವಾದ, "ಕಲಿಸಲು ಪ್ರಯತ್ನಿಸುತ್ತಿದ್ದಾರೆ" ಎನ್ನುವುದು ಸಿನಿಕತನ. ಹಿಂದಿ, ಇಂಗ್ಲೀಷುಗಳಿಗೆ ಆರು ತಿಂಗಳಿಗೊಬ್ಬ ಟೀಚರ್ ಆಗಿಹೋಗಿದ್ದಾರೆ ಕಲಾಶಾಲೆಗಳಲ್ಲಿ. ಮೇಸ್ಟ್ರು ನಮಗೆ ಕನ್ನಡ ಕಲಿಸಿದರೋ, ಅಥವ ನಾವೇ ಅವರಿಗೆ ತಾಳ್ಮೆ ಕಲಿಸಿದೆವೋ ಎಂದು ವಿಂಗಡಿಸುವುದು ಆಗದ ಕೆಲಸ. ಎರಡಕ್ಕೂ ಒಂದು ತೆರನಾದ ಅವಿನಾಭಾವ ಸಂಬಂಧ.

'ಶ್ರೀನಿವಾಸರಾಜು ಅವರದು ಕನ್ನಡದ ಕಾಯಕ' ಅಂದರೆ ಅದೊಂದು ಸಾಹಿತ್ಯಕ ಕ್ಲೀಷೆ ಆಗಿಬಿಡುತ್ತದೆ. ಎ.ಎನ್. ಮೂರ್ತಿರಾಯರ "ಅಲೆಯುವ ಮನ" ವೆಂಬ ಪ್ರಬಂಧ ಸಂಕಲನಕ್ಕೆ ಮುಖಪುಟ ರಚಿಸುವಂತೆ ನನಗೊಮ್ಮೆ ಅವರು ಸೂಚಿಸಿದ್ದರು. ೧೯೮೦ರ ಕೊನೆಯ ವರ್ಷಗಳವು. ಅವರ ಭಾವಚಿತ್ರವನ್ನಾಧರಿಸಿದ ರೇಖಾಚಿತ್ರ, ಅವರ/ಅದರ ತಲೆಯ ಮೇಲಿನಿಂದ ಹಾರಿಹೋಗುತ್ತಿರುವ ಪಕ್ಷಿಗಳ ಸಾಲು. ಇದು ರಷ್ಯನ್ ಚಿತ್ರವೊಂದರಿಂದ ಪ್ರಭಾವಗೊಂಡು ಮೇಷ್ಟ್ರೇ ಸೂಚಿಸಿದ್ದ ವಿನ್ಯಾಸ ಕೂಡ. ಡೆಡ್‌ಲೈನ್ ಡೆಡ್ಲಿಲೈನ್ ಆದ ಮೇಲೆಯೇ ನಾನು ಅವರ ವಿಲ್ಸನ್ ಗಾರ್ಡನ್ ಮನೆಗೆ, ಅವರಿಗೆ ಮಧ್ಯರಾತ್ರಿ ಎನ್ನಿಸಬಹುದಾದಂತಹ ರಾತ್ರಿ

ಹತ್ತು ಗಂಟೆಗೆ ಸೈಕಲ್ಲಿನಲ್ಲಿ, ಬೆವರುತ್ತ ಹೋದೆ. ಅಲ್ಲಿಯೇ ಹತ್ತುನಿಮಿಷ ಮುದ್ರಾಂಕ್ಕೆ ಅವಶ್ಯವಾದ ಬಣ್ಣಗಳನ್ನು ವಿವರಿಸುತ್ತಿದ್ದೆ. ಒಳಗೆ ಹೋದ ಮೇಸ್ಟ್ರು ನನ್ನ ಅವಸ್ಥೆ ನೋಡಿಯೋ, ನೋಡ ಲಾಗದೆಯೋ ಒಂದು ಲೀಟರ್ ಬಿಸಿ ಹಾಲು ತಂದು ಕೊಟ್ಟು, ವಿದಾಯ ಹೇಳಿದ್ದರು.

ಇದಾದ ತಿಂಗಳೊಂದರಲ್ಲೆ ಸೆಕ್ರೆಟರಿ, ಪ್ರಿನ್ಸಿಪಲ್ ಮತ್ತು ಚಿತ್ರಕಲಾಪರಿಷತ್ತಿನ ಎಲ್ಲವೂ ಆಗಿದ್ದ ಎಂ.ಎಸ್. ನಂಜುಂಡರಾವ್‌ರಿಂದ ಬುಲಾವ್. ಹಬ್ಬ-ಹರಕೆಗಳಿಗೆ ಕರೆಯದೆ ನೆರೆ, ಪ್ರವಾಹ, ಭೂಕಂಪಗಳಾಗುವಾಗ ಅವರೊಂದಿಗೆ ಕನ್ನಡ ಮೇಸ್ಟ್ರಿದ್ದರು. ಒಂಥರಾ ಫೈನ್ ಸಮತೋಲನ ಕಾಪಾಡಿಕೊಳ್ಳುವಂತೆ. ನಾನು ಏನು ಎತ್ತ ಎಂದು ವಿಚಾರಿಸುವ ಮುನ್ನವೇ ಎಂ.ಎಸ್.ಎನ್.ರಿಂದ ನನಗೆ ಗಂಧದ ಮಾಲಾರ್ಪಣೆ. ಜೊತೆಗೆ ಕನ್ನಡ ಮೇಸ್ಟ್ರ ಪರವಾಗಿ ಅವರಿಂದ ಐವತ್ತು ರೂಪಾಯಿ ಕೊಡುಗೆ. ಮೂರ್ತಿರಾಯರ ಮುಖಪುಟಕ್ಕೆ ನಂಜುಂಡರಾಯ ರಿಂದ ಸನ್ಮಾನ ಮಾಡಿಸಿಕೊಳ್ಳಲು ಸಾಧ್ಯವಾದುದು ಕನ್ನಡದ ಮೇಸ್ಟರ ದಯದಿಂದ ಮಾತ್ರ ಸಾಧ್ಯವಾಗಿತ್ತು. ನೇರವಾಗಲ್ಲದಿದ್ದರೂ ದೃಶ್ಯಕಲೆಯ ಗುರುವಾಗಿ ಶ್ರೀನಿವಾಸರಾಜು ಅವರು ಇಂತಹ ಅನೇಕ ವೈವಿಧ್ಯಮಯ ಪ್ರಯೋಗಗಳನ್ನು ನಡೆಸಿದ್ದಿದೆ. ಕನ್ನಡ ಪಾಠ ಮಾಡುತ್ತಿದ್ದರೂ ಅಥವ ಮತ್ತೂ ಸ್ಪಷ್ಟವಾಗಿ ಹೇಳುವುದಾದರೆ, ಕಲಾ ಇತಿಹಾಸ ಪಾಠವನ್ನವರು ಮಾಡದಿದ್ದರೂ, ಕಲಾಪುಸ್ತಕಗಳಲ್ಲಿನ ಕಲಾವಿದರ ಚಿತ್ರಗಳನ್ನು ನಮ್ಮ ಕಣ್ಣೆದುರಿಗಿರಿಸಿ, ನಾವು ನಮ್ಮ ಕಣ್ಣಿಂದ ಏನನ್ನು ಆ ಚಿತ್ರಗಳೊಳಗೆ ನೋಡುತ್ತೇವೋ ಅದರ ಬಗ್ಗೆ ಮಾತ್ರ ಬರೆಯಲು ಹೇಳುತ್ತಿದ್ದರು, ಬರೆಸುತ್ತಿದ್ದರೂ ಸಹ. ಓದುವುದನ್ನು ಬಿಟ್ಟು ಪುಸ್ತಕವನ್ನು 'ನೋಡುವ' ಪ್ರಯೋಗಗಳವು. ಒಳ್ಳೆಯ ದೃಶ್ಯ ಶಿಕ್ಷಕರೇ ಹೇಳಿಕೊಡದ, ಕೆಟ್ಟ ದೃಶ್ಯಶಿಕ್ಷಕರು ಬೇಡವೆಂದು ಹೇಳುವ ಈ ಪುಸ್ತಕವನ್ನು "ನೋಡುವ" ಕ್ರಿಯೆಯನ್ನು ಕನ್ನಡ ಮೇಷ್ಟ್ರು ನನಗೆ ದಾನವಾಗಿ ನೀಡಿದರೆಂದರೆ ಅದರಲ್ಲಿ ವಿನಯವೆಂಬ ತೋರಿಕೆಯೇನಿಲ್ಲ ಬಿಡಿ. ಆಗ ನಮಗೆ ಇದೊಂದು ಹೊಸ ಪ್ರಯೋಗ. ಎರಡು ಪುಸ್ತಕಗಳಲ್ಲಿ ಇಬ್ಬರು ಬರಹಗಾರರು ಒಂದೇ ಚಿತ್ರದ ಬಗ್ಗೆ, ಏನೇನೆಲ್ಲ ಬರೆದಿರುತ್ತಿದ್ದರೋ ಅವುಗಳನ್ನೆಲ್ಲ--ವ್ಯತಿರಿಕ್ತವಾದುದನ್ನೂ ಕೂಡ--ಕೃತಿಚೌರ್ಯದ ಲವಲೇಶವೂ ಭಯವಿಲ್ಲದೆ ಹಾಗೆ, ಉರುಹೊಡೆದು ಬರೆದುಬಿಡುವುದು ಆಗ ನಮ್ಮ ಕಲಾ ಇತಿಹಾಸದ ಕಲಿಕಾ ವಿಧಾನವಾಗಿತ್ತು. ಚಿತ್ರಗಳನ್ನು ಸ್ವತಃ ನೋಡುವುದನ್ನು ನಮಗೆ ಕನ್ನಡದ ಮೇಷ್ಟ್ರರೊಬ್ಬರು ಹೇಳಿಕೊಟ್ಟಿದ್ದು ಒಂದೆಡೆ ನಾಚಿಕೆಯ ವಿಷಯ. ಮತ್ತೊಂದೆಡೆ, ತನ್ಮೂಲಕ, ಕನ್ನಡಕ್ಕೆ ದೃಶ್ಯವನ್ನು ಬಗ್ಗಿಸುವ ಅವರ ಪ್ರಯತ್ನವು ಕನ್ನಡದ ದೃಶ್ಯಕಲಾಭಾಷೆಗೆ ಅವರು ಸಲ್ಲಿಸುತ್ತಿರುವ ವಿಭಿನ್ನ ಕೊಡುಗೆ ಸಹ. ಹೀಗೆ, ರಾಜು ಮೇಷ್ಟ್ರು ಕನ್ನಡಕ್ಕೆ ಅವಾಚ್ಯ-ರಂಗಗಳ ವ್ಯಾಕರಣವೂ ದಕ್ಕುವಂತೆ ಮಾಡುತ್ತಿರುವುದು ಅವರ ಗೆಳೆಯರೇ ಆದ ಸಾಹಿತ್ಯ ದಿಗ್ಗಜರು ಅಷ್ಟೇನೂ ಕಣ್ಬಿಟ್ಟು ಗಮನಿಸಿದಂತೆ ಕಾಣದು.

ಮೇಷ್ಟ್ರ ಪಾಠ ನಮಗೆ ಆರಂಭವಾಗುವವರೆಗೆ ಕಲಾ ಇತಿಹಾಸವೆಂದರೆ, ಕಲಾ ವಿಮರ್ಶೆ ಯೆಂದರೆ, ಸೌಂದರ್ಯಶಾಸ್ತ್ರವೆಂದರೆ ಬೋರು, ಗಾಬರಿ, ಬಿಡದೆ ಬಿಟ್ಟು ಬಿಟ್ಟು ಬರುತ್ತಿದ್ದ ಮೈಗ್ರೇನ್ ತಲೆನೋವಾಗಿತ್ತು ನಮಗೆ. ಜಗತ್ಪ್ರಸಿದ್ಧ ಇ.ಎಚ್. ಗಾಂಬ್ರಿಚ್‌ನ ಎತ್ತಲಾರದ ತೂಕದ

ಪುಸ್ತಕವೊಂದನ್ನು ("ದ ಸ್ಟೋರಿ ಆಫ್ ಆರ್ಟ್") ಉಫ್ ಎಂದರೆ ಹಾರಿಹೋಗುವಂತಹ ಮೇಡಂ ಒಬ್ಬರು ಮೈಲು ದೂರದಿಂದಲೇ ಎರಡೂ ಕೈಯಲ್ಲಿ ಹರ್ಕ್ಯುಲೆಸ್‌ನಂತೆ ಎತ್ತಿ ತೋರಿಸಿ, ಅದರೊಳಗಿನ ಪುಟಾಣಿ ಕಪ್ಪುಬಿಳುಪಿನ ಚಿತ್ರಗಳ ಮೇಲೆ ಬೆರಳಿರಿಸಿ, ಅರ್ಥವಾಗದ ಇಂಗ್ಲಿಷಿನಲ್ಲಿ ಏನೋ ಒಂದಷ್ಟು, ವಾರಕ್ಕೊಮ್ಮೆ ಒದರುವುದು ಆಗ ನಮ್ಮ ಕಲಾ ಇತಿಹಾಸದ ಕಲಿಕೆಯಾಗಿತ್ತು. ಸಬ್ಮಿಷನ್ ಕಾಲಕ್ಕೆ ನಾವೇನೇ (ಅದರಲ್ಲೂ ಹುಡುಗರು) ಬರೆದರೂ ಅದೆಲ್ಲ 'ತಪ್ಪೆಂದು', 'ನಾಲಾಯಕ್ಕೆಂದು' ಉತ್ತರ ಪ್ರತಿಯನ್ನು ನಾವು ಸಲ್ಲಿಸುವ ಮುನ್ನವೇ ತಮ್ಮ ಆರನೇ ಇಂದ್ರಿಯದಿಂದ ನಮಗೆ ತಿಳಿಹೇಳಿ ನಮ್ಮಲ್ಲಿ ಕೀಳರಿಮೆಯ ನಡುಕ ಹುಟ್ಟಿಸುವ ಕ್ರಿಯೆಯನ್ನು 'ಕಲಾ ವಿಮರ್ಶೆ'ಯೆಂದು ಭಾವಿಸಿದ್ದೆವು. ಸಂಬಂಧವಿರದಿದ್ದರೂ ಈ ಇಂಗ್ಲಿಷ್ ಪ್ರಾಬ್ಲಂ ಅನ್ನು ಕನ್ನಡ ಮೇಸ್ಟ್ರು ಸರಾಗವಾಗಿ, ಮೂರ್ನಾಲ್ಕು ಕ್ಲಾಸಿನಲ್ಲೇ, ಒಮ್ಮೆಲೆ ಪರಿಹರಿಸಿದ್ದರು. ನಾನು ಸ್ನಾತಕಾಭ್ಯಾಸದಲ್ಲಿ ಚಿತ್ರಕಲೆ ಕಲಿತು, ಸ್ನಾತಕೋತ್ತರದಲ್ಲಿ, ಶಾಂತಿನಿಕೇತನದಲ್ಲಿ ಕಲಾ ಇತಿಹಾಸಕ್ಕೆ ನನ್ನ ಅಧ್ಯಯನದ ವಿಷಯವನ್ನು ಬದಲಾಯಿಸಿದುದಕ್ಕೆ ರಾಜು ಮೇಸ್ಟ್ರು ಎಂದು ಕರೆಯಲಾಗುವ ಕನ್ನಡ ಮೇಷ್ಟ್ರು, ಅವರು ಓದಲು ನೀಡಿ, ಮರೆತು ನಂನಮಗೇ ಕೊಟ್ಟುಬಿಡುತ್ತಿದ್ದ ಕನ್ನಡದ ಪುಸ್ತಕಗಳು ಹಾಗೂ ಅವರನ್ನು ಕುರಿತಾದ ಈ ಮೇಲಿನ ಘಟನೆಗಳು ಅಪ್ರಜ್ಞವಾಗಿ ಕಾರ್ಯನಿರ್ವಹಿಸಿದ್ದಿದೆ.

* * *

ಚಿ. ಶ್ರೀನಿವಾಸರಾಜು ಅಥವ ಕನ್ನಡ-ಮೇಸ್ಟ್ರ ಬಗ್ಗೆ ಬರೆವುದೆಂದರೆ "ಕ್ಲೀಷೆಗಳನ್ನು ಬದುಕಿನಿಂದ ದೂರ ಮಾಡುವ ಸಾಧ್ಯತೆ ಈಗಲೂ ಇದೆ" ಎಂಬುದನ್ನು ನಂಬಿದಂತೆ. ಎರಡೂ--ಅಂದರೆ ಕನ್ನಡ ಮೇಷ್ಟ್ರರೊಬ್ಬರು ಇಂಗ್ಲಿಷ್ ಮೂಲಕವೇ ದೃಶ್ಯ ಚಿಂತನೆಯಲ್ಲಿ ತೊಡಗಿಸಿಕೊಳ್ಳುವ ಕರ್ನಾಟಕದ ದೃಶ್ಯಕಲೆಯ ಸಂದರ್ಭದಲ್ಲಿ ಕಾರ್ಯನಿರ್ವಹಿಸಿದ ಬಗೆಯು ಒಂದು ಅದ್ಭುತ "ಕ್ಲೀಷೆಯ ಮರಣ" ಎಂದು ನನ್ನ ಭಾವನೆ. ಕನ್ನಡದಲ್ಲಿ ಚಿಂತಿಸಿ, ಕನ್ನಡದಲ್ಲೇ ದೃಶ್ಯಸಂಸ್ಕೃತಿಯ ಬಗ್ಗೆ ಬರೆವವರು ಇರಬಹುದು, ಇದ್ದಾರೆ ಕೂಡ. ಆದರೆ ಕನ್ನಡದ ಮೂಲಕವೆ ಶಿಕ್ಷಣದಲ್ಲಿ ದೃಶ್ಯ ಚಿಂತನೆಯ ಚಟುವಟಿಕೆಯನ್ನು ಇವರು ಯಾರೂ ಜೀವಂತವಾಗಿರಿಸಲು ಸಾಧ್ಯವಾಗದಿರುವುದು, ರಾಜು ಮೇಷ್ಟರ ಕೆಲಸವನ್ನು ದೃಶ್ಯ ಕಲಾರಂಗದಲ್ಲು ಮತ್ತಷ್ಟು ನಿಗೂಢವೂ, ಅನನ್ಯವೂ ಎನಿಸುವಂತೆ ಮಾಡಿದೆ. ಚಿತ್ರಕಲೆಯ ಮುಖೇನ ನನಗೆ ಪರಿಚಿತರಾದವರು, ಅಷ್ಟಕ್ಕೇ ನಿಲ್ಲದೆ ಗಾಢ ಪರಿಣಾಮ ನೀಡಿದವರು, ಅಷ್ಟಕ್ಕೂ ನಿಲ್ಲದೆ ಒಂದು ಹಂತದಲ್ಲಿ ನನ್ನ ಆತ್ಮಚರಿತ್ರೆಯ ಭಾಗವಾಗಿಬಿಟ್ಟವರಲ್ಲಿ ಕ್ರಮಬದ್ಧವಾಗಿ ಎರಡನೆಯವರು ಡಿ.ಆರ್. ನಾಗರಾಜ್. ಮೊದಲನೆಯವರು ಚಿ. ಶ್ರೀನಿವಾಸರಾಜು. ಕನ್ನಡದಲ್ಲಿ ದೃಶ್ಯಸಂಸ್ಕೃತಿಯ ಚಿಂತನೆಗೆ ಡಿ.ಆರ್. ನನಗೆ ಆಧಾರವಾದರೆ, ಅದರ ಆರಂಭಿಕ ವಿದ್ಯಾರ್ಥಿ ಜೀವನಕ್ಕೆ ಸೂಕ್ತ ಬುನಾದಿ ಹಾಕಿಕೊಟ್ಟವರು, ಕನ್ನಡದಲ್ಲಿ ದೃಶ್ಯಚಿಂತನೆ ಮಾಡಬಹುದು ಮತ್ತು ಹಾಗೆ ಮಾಡುವುದರಲ್ಲಿ ಯಾವುದೇ ಕೀಳರಿಮೆ ಇಲ್ಲವೆಂಬ ಅಮೂರ್ತ ಧೈರ್ಯ ನೀಡಿದವರು ಕನ್ನಡ ಮೇಷ್ಟ್ರು. ಇವರಿಬ್ಬರ ನಡುವಣ ಸಾಹಿತ್ಯಕ ವ್ಯತ್ಯಾಸ, ವೈಮನಸ್ಯವಿದ್ದಾಗ್ಯೂ ತಾತ್ವಿಕವಾಗಿ ಇವರಿಬ್ಬರೂ ಒಂದಾಗುವುದು ದೃಶ್ಯಕಲೆಯಲ್ಲೇ ಎಂಬುದೊಂದು ವಿಶೇಷ ಕೂಡ!

ಒಟ್ಟಾರೆಯಾಗಿ ಕನ್ನಡ ಮೇಷ್ಟ್ರು ('ಕನಡಾ ಮೇಸ್ಟ್ರು' ಎಂಬ ಪದಪ್ರಯೋಗ ವ್ಯಾಕರಣ ದೃಷ್ಟಿಯಿಂದ ತಪ್ಪು, ಬಳಕೆಯ ವಿಧಾನದಲ್ಲಿ ಸರಿ ಎಂಬ ನನ್ನ ಅಭಿಪ್ರಾಯದಲ್ಲಿ ಇದೇ ಮಾಸ್ತರರ ಪ್ರಭಾವ ಹಾಗೂ ಎಚ್ಚರ--ಎರಡೂ ಕಾರ್ಯನಿರ್ವಹಿಸುತ್ತಿವೆಯೆಂಬುದು ನನ್ನ ಬಲವಾದ ನಂಬಿಕೆ) ಚಿತ್ರಕಲಾಪರಿಷತ್ತಿನಲ್ಲಿ ವ್ಯಯಿಸಿದ ಕಾಲದ, ಶ್ರಮದ ಒಟ್ಟಾರೆ ಅರ್ಥ, ಉದ್ದೇಶ ನನಗೆ, ಈ ಕೆಳಕಂಡಂತಿದೆ:

ಅನಕ್ಷರ ಕುಕ್ಷಿಗಳಾದ ಕಲಾಶಾಲೆಯ ಮಂದಿ ದೃಶ್ಯದ ಬಗ್ಗೆ ಚಿಂತಿಸುವಂತೆ ಮಾಡಬೇಕು, ಚಿಂತಿಸಬೇಕಾದರೆ ಓದು ಬರಹದ ಅಗತ್ಯದ ಬಗ್ಗೆ ಒತ್ತಿಹೇಳಬೇಕು, ಓದುಬರಹ ಬರಬೇಕಾದರೆ ಒಂದು ಶಿಸ್ತುಬದ್ಧ ಅಧ್ಯಯನದ ಬಗೆಗಿನ ಸೂಚನೆಯ ಅಗತ್ಯವಿದೆ. ಅಂತಹ ಓದುಬರಹದ ಮುಖೇನ ದೃಶ್ಯವ್ಯಾಖ್ಯೆಗೆ ತೊಡಗುವುದೂ ಸಹ 'ದೃಶ್ಯವನ್ನು ಸಂಪೂರ್ಣವಾಗಿ ಅಕ್ಷರ ಹಿಡಿದಿರಿಸಲಾಗದೆಂಬ ಸತ್ಯವನ್ನು ಅಂತಿಮವಾಗಿ ಅರಿಯಲು ಮಾತ್ರವೇ' ಎಂಬ ಹಲವು ಸತ್ಯಗಳನ್ನು ಅರಿಯಲು ಮೇಸ್ಟ್ರಂತಹವರು ಹೆಚ್ಚು ಸದ್ದಿಲ್ಲದೆ, ರಿಟೈರಾದ ಮೇಲೂ ಕಾರ್ಯನಿರತರಾಗಿದ್ದಾರೆ ಎಂದರೆ ಅದು ಕ್ಲೀಷೆಯಾಗಬಹುದು. ಕ್ಲೀಷೆಯೇ ನಿಜವೂ ಆದ ಘಟನೆಯೇ ಅವರ ಮೂರು ದಶಕಗಳ ಕಾಲದ ದೃಶ್ಯರಂಗದೊಂದಿಗಿನ ಸಹವಾಸದ ಫಲ. ಸವಕಲನ್ನು ಹೇಗೆ ಕ್ಲೀಷೆ ಎಂದು ಕರೆಯುವುದೇ ಹೇಗೆ ಕ್ಲೀಷೆಯಾಗಿಬಿಟ್ಟಿದೆಯೋ, ಹಾಗೆ ಕ್ಲೀಷೆಯೆಂಬ ವಿಂಗಡನೆಯ ಒಳಗೇ ಅನೇಕ ಅನುದ್ದೇಶಿತ ಸಾಧ್ಯತೆಗಳಿರುತ್ತವೆ. ಇಲ್ಲದಿದ್ದರೆ ಎರಡು ಸಾವಿರ ವರ್ಷದ ಪಾಶ್ಚಾತ್ಯ ತತ್ವಶಾಸ್ತ್ರದಲ್ಲಿ ಕ್ಲೀಷೆಯಾಗಿ ಹೋಗಿದ್ದ ನಂಬಿಕೆ "ಪದ, ಉವಾಚ ಮೊದಲು, ಬರವಣಿಗೆ ನಂತರ" ಎಂಬುದನ್ನು ಡೆರಿಡ ತಲೆಕೆಳಗು ಮಾಡಿ, "ಉವಾಚ/ವಾಚ್ಯ ಉಂಟಾಗಬೇಕಾದರೆ ಮಾನಸಿಕವಾಗಿ ವ್ಯಕ್ತಿಯೊಬ್ಬನಲ್ಲಿ ಬರವಣಿಗೆ ಅದಾಗಲೇ ಹುಟ್ಟಿರಬೇಕಾಗುತ್ತದೆ" ಎಂಬುದನ್ನು ನಿರೂಪಿಸಲಿಲ್ಲವೆ? ಕನ್ನಡ ಮೇಷ್ಟ್ರ ಅ-ವಾಚ್ಯ ರಂಗದ ಸಹವಾಸದ ಫಲ ವಾಚ್ಯಕ್ಕೂ ಉಂಟು, ವಾಚ್ಯದ ಇತಿಮಿತಿಗೂ ಉಂಟು.

ಬರವಣಿಗೆಯ ಬೇರೊಂದು ಅನಕ್ಷರ ಶಿಸ್ತಿನ (ಅಂದರೆ ದೃಶ್ಯಕಲೆಯ) ವಿದ್ಯಾರ್ಥಿಯಾಗಿ ನನಗೆ ಅವರು ಆಗ ಹೇಗೆ ಕಂಡರು, ಈಗ ಒಬ್ಬ ಸಹಪಾಠಿಯಾಗಿ ನನಗೆ ಹೇಗೆ ಗೋಚರಿಸುತ್ತಾರೆ ಎಂಬ ವ್ಯತ್ಯಾಸದ ನಡುವಿನ ವ್ಯತ್ಯಾಸವನ್ನೂ ಗುರ್ತುಹಿಡಿಸುವುದರಲ್ಲಿಯೂ ಅವರ ಪಾತ್ರವಿದೆ. ಇವೆರಡೂ ಸ್ಥಿತಿಗಳ ಬಗೆಗಿನ ವ್ಯತ್ಯಾಸ ಸುಮಾರು ಇಪ್ಪತ್ತು ವರ್ಷವಷ್ಟೇ ಅಲ್ಲ, ಹೆಚ್ಚಿನದಿನ್ನೇನೋ ಇದೆ ಕೂಡ.

ಟೆಲಿವಿಷನ್ ಬಂದ ಸಂದರ್ಭದಲ್ಲಿ ಗುರುವಾಗಿ ಪರಿಚಯವಾದವರು ಡಿಜಿಟಲ್ ಬರುವ ಕಾಲಕ್ಕೆ ಕ್ರೈಸ್ತ ಸಂಸ್ಥೆಯಲ್ಲಿ ಕನ್ನಡ ಪುಸ್ತಕ ಪ್ರಕಟಣೆಯ ಕಿರುಕ್ರಾಂತಿಯನ್ನು ಮಾಡಿಮುಗಿಸಿದ್ದವರು, ಮೊಬೈಲು ಕಾಲಕ್ಕೆ ವೃತ್ತಿಯಲ್ಲಿ ನಿವೃತ್ತರಾಗಿದ್ದರೂ ಇನ್ನೂ ಕನ್ನಡದ ಕಾಯಕದಲ್ಲಿ ಪ್ರವೃತ್ತಿ-ನಿರತರಾಗಿರುವುದೂ ಒಂದು ರೀತಿಯಲ್ಲಿ ಕ್ಲೀಷೆಗಳ ಸರಣಿಯೊಂದರ ಸರಣಿ-ಕೊಲೆ ಮಾಡಿದಂತೆಯೇ. ಹೀಗೆಂದು ಬರೆಯುವುದು ಸ್ಮರಣಗ್ರಂಥಗಳಿಗೆ ಹೇಳಿ ಮಾಡಿಸಿದಂತಹ ಕ್ಲೀಷೆಯಾಗಿ ಬಿಡುವ ಭಯವೂ ಇದೆ.

ಕಾಲಕ್ಕೆ ಮುಂಚೆ, ವಿದ್ಯಾರ್ಥಿಗಳಿಗೆ ಮುಂಚೆ ಚಿತ್ರಕಲಾ ಪರಿಷತ್ತಿನಲ್ಲಿ ಮೇಷ್ಟ್ರು ಹಾಜರ್. ಹೇಳಿದ ದಿನ ತಪ್ಪದೆ ಹಾಜರಿ. ಬರಲಾಗದಿದ್ದರೆ ಸಾಕಷ್ಟು ಮುಂಚೆಯೇ ಅದನ್ನು ಕುರಿತ ಮುನ್ಸೂಚನೆ. ಎಷ್ಟು ಬೇಕೋ ಅಷ್ಟೇ ಆದರೂ ಶಿಸ್ತುಬದ್ಧವಾದ ಪಾಠ, ತರಗತಿಗಳಲ್ಲಿ ಕನ್ನಡದಲ್ಲಿ ಪಾಠ--ಇವೆಲ್ಲವೂ ಅವರಿವರಿಂದ ಅವರಿವರ ಬಗ್ಗೆ ಕೇಳಿದ್ದ ದಂತಕಥೆಗಳು.

ದಂತೆಕಥೆಗಳನ್ನು ವಾರಕ್ಕೆರೆಡು ಬಾರಿ ಸಾಕಾರಗೊಳಿಸುವಂತೆ ಭೌತಿಕವಾಗಿ ಚಿತ್ರಕಲಾ ಪರಿಷತ್ತಿನಲ್ಲಿ ಕನ್ನಡವೆಂಬ ವಾಹನದೊಂದಿಗೆ ಈಗಲೂ ಹಾಜರಾಗುತ್ತಿರುವವರು ಕನ್ನಡ ಮೇಷ್ಟ್ರು!



## ಅಂತಃಕರಣದ ಕೆಲಸ.....

● ವಿಕ್ರಮ ವಿಸಾಜಿ

**ನಾ**ನು ಪಿ.ಯು.ಸಿ. ವಿದ್ಯಾರ್ಥಿಯಾಗಿದ್ದೆ. ಅಂದಿನಿಂದಲೂ ಆರು ವರ್ಷಗಳ ಕಾಲ ಜನವರಿ ಮೂವತ್ತೊಂದರಂದು ಬೆಂಗಳೂರಿನಲ್ಲಿ ಇರುವುದು ಒಂದು ವಾಡಿಕೆಯಾಗಿತ್ತು. ಜನವರಿ ತಿಂಗಳು ಬಂತೆಂದರೆ ನನಗೆ ಬರೀ ಬೆಂಗಳೂರಿನದೇ ಧ್ಯಾನ. ನನ್ನೂರು ಭಾಲ್ಕಿಯಿಂದ ಬೆಂಗಳೂರಿಗೆ ಹೋಗಲು ಕೊಂಕಣ ಸುತ್ತಿ ಮೈಲಾರಕ್ಕೆ ಹೋಗುವಂತೆ ಒಂದು ರೈಲಿದೆ; ಅದು ಲಿಂಕ್ ಎಕ್ಸ್‌ಪ್ರೆಸ್. ಸರಿಯಾಗಿ ಭರ್ತಿ ಹದಿನೆಂಟು ತಾಸುಗಳ ನಂತರ ಬೆಂಗಳೂರು ತಲುಪುತ್ತಿದ್ದೆ. ಸಪ್ತಸಾಗರದಾಚೆಯ ಯಾವುದೊ ದೇಶದಲ್ಲಿ ಇಳಿದಂತಾಗುತಿತ್ತು. ಎಲ್ಲಾದರೂ ಒಂದು ಸ್ನಾನವಾದ ಮೇಲೆ ನೇರವಾಗಿ ಕ್ರೈಸ್ಟ್ ಕಾಲೇಜಿಗೆ. ಕಾಲೇಜುಗಳು ಇಷ್ಟು ಸುಂದರವಾಗಿರುತ್ತವೆಯೇ ಅಂತ ನನಗೆ ಬೆರಗಾಗುತಿತ್ತು... ಹಾಗೆಯೇ ಹುಡುಗಿಯರು ಕೂಡ. ಇವರು ಈ ಲೋಕದವರಲ್ಲ ಅನಿಸಿಬಿಟ್ಟಿತ್ತು. ಕಾಲೇಜಿನ ಮೊದಲನೆ ಮಹಡಿಯ ಕೊನೆಯ ಕೋಣೆಯಲ್ಲಿ ಕೂಡುತಿದ್ದ ರಾಜು ಮೇಷ್ಟರನ್ನು ಭೇಟಿಯಾಗಿ ಉಳಿದ ಗೆಳೆಯರನ್ನು ಕೂಡಿಕೊಂಡಾಗಲೇ ಒಂದು ಅಪೂರ್ವ ನೆಮ್ಮದಿ.

ನಂತರ ಹುಲ್ಲು ಹಾಸಿನ ಮೇಲೆ ಪುಟ್ಟ ಸಮಾರಂಭ. ಮೊದಲಿಗೆ ಅಲೆಅಲೆಯಾಗಿ ತೇಲಿಬರುತಿದ್ದ ಬೇಂದ್ರೆಯವರ ಹಾಡು. ಆಮೇಲೆ ಸೊಗಸಾದ ಕನ್ನಡದಲ್ಲಿ ಪ್ರಾಸ್ತಾವಿಕ ಮಾತು. ಒಮ್ಮೆ ಎಸ್.ಪಿ. ವಾಗೀಶ್ವರಿ ಎನ್ನುವವರು ಆಡಿದ್ದ ಪ್ರಾಸ್ತಾವಿಕ ನುಡಿ ಎಷ್ಟು ಅರ್ಥಪೂರ್ಣವಾಗಿತ್ತು. ಕೊನೆಯಲ್ಲಿ ಪಾದ್ರಿ ವೇಷ ಧರಿಸಿದ ಪ್ರಾಂಶುಪಾಲರಿಂದ ವಿಶೇಷ ಶೈಲಿಯ ಕನ್ನಡದಲ್ಲೊಂದು ಚಿಕ್ಕ ಭಾಷಣ. ಅದಕ್ಕೆ ಎಲ್ಲರಿಂದ ದೀರ್ಘ ಚಪ್ಪಾಳೆ. ಒಂಥರದ ನಿರ್ಲಿಪ್ತ ಸ್ಥಿತಿಯಲ್ಲಿ ಮೇಷ್ಟರು ಕಾರ್ಯಕ್ರಮದ ನಿರೂಪಣೆ ಮಾಡುತಿದ್ದರು. ಕಾರ್ಯಕ್ರಮವೆಲ್ಲ ಮುಗಿದಮೇಲೆ ಬಹುಮಾನಿತರ ಪರಸ್ಪರ



ಪರಿಚಯ, ಕವಿತಾ ವಾಚನ, ಹಿರಿಯರಾದ ಎಂ. ಚಿದಾನಂದಮೂರ್ತಿ, ಚನ್ನವೀರ ಕಣವಿ, ವ್ಯಾಸರಾಯ ಬಲ್ಲಾಳ, ರಾಮಚಂದ್ರ ಶರ್ಮಾ, ಬರಗೂರು ರಾಮಚಂದ್ರಪ್ಪ ಒಬ್ಬೊಬ್ಬರು ಒಂದೊಂದು ವರ್ಷ ಅತಿಥಿ. ಆದರೆ ಅತಿಥಿಯಾಗಿದ್ದ ಪಿ. ಲಂಕೇಶರು ಮಾತ್ರ ಕಾರ್ಯಕ್ರಮದ ಐದು ದಿನ ಮುಂಚೆ ತೀರಿಕೊಂಡರು. ಕೊನೆಗೂ ಆ ಉರಿಯುವ ಲೇಖಕನನ್ನು ನೋಡುವ ನನ್ನ ಕನಸು ಈಡೇರಲೇ ಇಲ್ಲ. ಒಮ್ಮೆಯಂತೂ ಮೇಷ್ಟರು ಪುತಿನ ಅವರ ಮನೆಗೊಯ್ದು ಅವರ ಕಿವಿಯಲ್ಲೆ ಕವಿತೆಯೋದಿಸಿದ್ದರು. ಬರುವಾಗ ಕೈತುಂಬ ಪುಸ್ತಕಗಳು. ಜೊತೆಗೆ ಟೊಪ್ಪಿಗೆಯಿಂದ ಕೂದಲುಗಳು ಹೊರಚಾಚಿದ್ದ ಬೇಂದ್ರೆಯವರ ಕಾರ್ಡುಸೈಜಿನ ಭಾವಚಿತ್ರ. ಪುಸ್ತಕಗಳು ಭಾರವಾಗಬಾರದೆಂದು ಪಾಲಿಥಿನ್ ಕವರ್ ಬೇರೆ ಕೊಡಲಾಗಿತ್ತು.

ಇದೆಲ್ಲ ನೆನಪಿಸಿಕೊಂಡರೆ ಅಚ್ಚರಿಯಾಗುತ್ತದೆ. ಕರ್ನಾಟಕದ ಮೂಲೆಯಲ್ಲಿರುವ ಒಂದು ಚಿಕ್ಕ ತಾಲ್ಲೂಕು ಭಾಲ್ಕಿ. ಆವಾಗ ಅಲ್ಲಿದ್ದುದು ಒಂದೇ ಒಂದು ಡಿಗ್ರಿ ಕಾಲೇಜು. ಆ ಕಾಲೇಜಿನ ನೋಟಿಸು ಬೋರ್ಡಿನ ಮೇಲೆ ಅಕ್ಟೋಬರ್ ತಿಂಗಳಲ್ಲಿ ತಪ್ಪದೇ ಕ್ರೈಸ್ಟ್ ಕಾಲೇಜಿನ ಕಾವ್ಯಸ್ಪರ್ಧೆಯ ಪತ್ರವೊಂದು ಬಂದುಕೂಡುತಿತ್ತು. ಈ ಗಡಿಭಾಗದ ಕಾಲೇಜಿನ ವಿಳಾಸ ಅವರಿಗೆ ಹೇಗೆ ದೊರಕಿತೊ?, ತಪ್ಪದೆ ಪ್ರತಿವರ್ಷ ಇಲ್ಲಿಗೆ ಆ ಪತ್ರವನ್ನು ಕಳಿಸಬೇಕೆಂಬ ಮನಸ್ಸು ಅವರಿಗೆ ಹೇಗೆ ಬಂತೊ?. ಇದು ಸ್ಪರ್ಧೆಯ ಕಾಟಾಚಾರದ ಮಾತಲ್ಲ. ಕರ್ನಾಟಕದ ಮೂಲೆಮೂಲೆಯಲ್ಲೂ ಇರಬಹುದಾದ ಕಾವ್ಯದ ಎಳೆಗಳ ಬಗ್ಗೆ ಇಟ್ಟ ನಂಬಿಕೆಯ ಮಾತಿದು. ಇಂಥ ನಂಬಿಕೆಯನ್ನು ತಾಳದಿದ್ದರೆ ಯಾವ ಸ್ಪರ್ಧೆಯೂ ಯಶಸ್ಸು ಕಾಣುವುದಿಲ್ಲ. ಯಾವ ಭಾಷೆಯ ಅಂತಸ್ಸತ್ವವೂ ಚೈತನ್ಯಪೂರ್ಣವಾಗಿ ತೆರೆದುಕೊಳ್ಳುವುದಿಲ್ಲ. ಭಾಲ್ಕಿ, ಸುರಪುರ, ನಂದಿಹಳ್ಳಿ, ಸಿರ್ಸಿ, ಸಿರಿವಾರ, ತಿಪಟೂರು, ಶಂಕರಘಟ್ಟ, ಮಹಾಲಿಂಗಪುರ, ಪುತ್ತೂರು, ಚಿಂತಾಮಣಿಯಂಥ ಊರುಗಳಲ್ಲಿರುವ ಸೃಜನಶೀಲ ಮನಸ್ಸಿನ ಎಳೆಯರನ್ನು ಗುರುತಿಸುವುದು ಮತ್ತು ಅವಕಾಶ ಕಲ್ಪಿಸುವುದು, ಕಾವ್ಯದ ಕನಸುಗಳನ್ನು ಕಟ್ಟಿಕೊಂಡು ಬಂದ ಹೊಸಬರಿಗೆ ಆತ್ಮವಿಶ್ವಾಸ ತುಂಬುವುದು, ಅವರು ಸರಿಯಾದ ದಿಕ್ಕಿನಲ್ಲಿ ಚಲಿಸಲು ಸಹಾಯಕವಾಗುವಂತೆ ಪುಸ್ತಕಗಳನ್ನು ಒದಗಿಸುವುದು ಸಣ್ಣ ಕೆಲಸವಲ್ಲ. ಸರಿಸುಮಾರು ಮೂರು ದಶಕಗಳ ಕಾಲ ಮೇಷ್ಟರು ಈ ಕೆಲಸ ಮಾಡಿದ್ದಾರೆ. ಅವರ ತಲೆಮಾರಿನ ಅನೇಕರು ಕವಿ, ವಿಮರ್ಶಕ, ಲೇಖಕರಾಗಿ ಹೆಸರು ಮಾಡಿದ್ದಾರೆ. ಆದರೆ ಮೇಷ್ಟರು ಹೊಸ ಬರವಣಿಗೆಯನ್ನು ಪೋಷಿಸುವ ಕೆಲಸ ಮಾಡಿದರು. ಅವರ ಆಯ್ಕೆಯ ಈ ಹಾದಿ ಕಠಿಣವಾದದ್ದು. ಹಾಗೂ ಅವರ ಸ್ವಂತದ ಸೃಜನಶೀಲತೆಯನ್ನೇ ಬಲಿ ಕೇಳುವಂಥದ್ದು ಕೂಡ. ಬರವಣಿಗೆಯೆಂದರೆ ಗುಂಪುಗಾರಿಕೆ, ಬರವಣಿಗೆಯೆಂದರೆ ತನಗಿಷ್ಟವಾದವರನ್ನು ಮಾತ್ರ ಬೆಳೆಸುವುದು ಎಂಬಂಥ ವಾತಾವರಣದಲ್ಲಿ ಬರವಣಿಗೆಯೆಂದರೆ ಸತ್ವಪೂರ್ಣವಾದ ಹೊಸನೀರನ್ನು ಸ್ವಾಗತಿಸುವ ಕೆಲಸವೆಂದು ಮೇಷ್ಟರು ನಂಬಿದರು.

ರಾಜುಮೇಷ್ಟರು ಕವಿತೆಗಳನ್ನು ಬರೆದಿದ್ದಾರೆ. ಮೂಕನಾಟಕ ಹಾಗೂ ಏಕಾಂಕಗಳನ್ನು ಕೂಡ. ಲೇಖನ ಮತ್ತು ಪ್ರಬಂಧಗಳನ್ನು ಪ್ರಕಟಿಸಿದ್ದಾರೆ. ಒಂದಿಬ್ಬರ ಗೆಳೆಯರ ಜೊತೆಗೂಡಿ ಸಾಹಿತ್ಯ ಪತ್ರಿಕೆ ನಡೆಸಿದರು. ಒಂದೆರಡು ಸಾಹಿತ್ಯ ಸಮಾವೇಶಗಳನ್ನು ಸಂಘಟಿಸಿದರು. ಆದರೆ ತಮ್ಮ ಬರವಣಿಗೆಯ ಬಗೆಗೆ ಅವರೆಂದೂ ಮಹತ್ವಾಕಾಂಕ್ಷಿಗಳಾಗಿರಲಿಲ್ಲ. ಸ್ವಂತದ್ದಾಗಿ

ಬರೆದದ್ದು ತೀರಾ ಕಡಿಮೆ. ಆಯ್ಕೆ ಮಾಡಿಕೊಂಡ ಸಾಹಿತ್ಯ ಪ್ರಕಾರ ಕೂಡ ನಿರ್ಲಕ್ಷ್ಯಕ್ಕೊಳಗಾದ ಪ್ರಕಾರವೆ; ಮೂಕ ನಾಟಕ ಹಾಗೂ ಏಕಾಂಕಗಳು. ಕೇವಲ ಕ್ರಿಯೆಯ ಮೂಲಕ ಅಭಿವ್ಯಕ್ತಗೊಳ್ಳುವ ಮೂಕನಾಟಕ ಮೇಷ್ಟರ ವ್ಯಕ್ತಿತ್ವವನ್ನು ಸೂಚಿಸುವ ಸಾಂಕೇತಿಕ ರೂಪ ಕೂಡ ಹೌದು. ಕ್ರಿಯೆಯಲ್ಲಿ ಮಾತ್ರ ನಂಬಿಕೆಯಿಟ್ಟ ನಡಿಗೆ ಅವರದು. ಆದರೆ ಅವರ ಮಹತ್ವದ ಸಾಧನೆಯೆಂದರೆ ಕಿರಿಯರನ್ನು ನಿಜವಾದ ಅರ್ಥದಲ್ಲಿ ಬೆಳೆಸಿದ್ದು. ಜೊತೆಗೆ ಕನ್ನಡದ ಮುಖ್ಯ ಕೃತಿಗಳನ್ನು ಬೆಳಕಿಗೆ ತಂದುದು. ಹಿರಿಯರಾದ ಜಿ.ಎಸ್. ಶಿವರುದ್ರಪ್ಪ, ಚನ್ನವೀರ ಕಣವಿ, ಗೋಪಾಲಕೃಷ್ಣ ಅಡಿಗ, ಕೆ.ಎಸ್. ನಿಸಾರ್ ಅಹಮದ್, ರಾಮಚಂದ್ರ ಶರ್ಮ, ಸು. ರಂ. ಎಕ್ಕುಂಡಿ, ಎಚ್.ಎಸ್. ರಾಘವೇಂದ್ರರಾವ್, ವೀಣಾ ಶಾಂತೇಶ್ವರ, ಎಚ್.ಎಸ್. ಶಿವಪ್ರಕಾಶ್, ಓ.ಎಲ್. ನಾಗಭೂಷಣ ಸ್ವಾಮಿ, ಬಸವರಾಜ ಕಲ್ಗುಡಿ, ಬಿದರಳ್ಳಿ ನರಸಿಂಹಮೂರ್ತಿ, ಎಸ್.ಜಿ. ಸಿದ್ಧರಾಮಯ್ಯ, ಆನಂದ ಝುಂಜರವಾಡ, ಕೆ. ಎಂ. ಮುನಿಕೃಷ್ಣಪ್ಪ, ಬಿ.ಆರ್. ಲಕ್ಷ್ಮಣರಾವ್, ಎಸ್. ಮಂಜುನಾಥ, ಕುಂವೀ, ರಹಮತ್ ತರೀಕೆರೆ, ಎಚ್.ಎಸ್. ಮುಕ್ತಾಯಕ್ಕ, ಪ್ರತಿಭಾ ನಂದಕುಮಾರ, ಜಯಂತ ಕಾಯ್ಕಿಣಿ, ಅಮರೇಶ ನುಗಡೋಣಿ, ಬಿ.ಎಂ. ಪುಟ್ಟಯ್ಯ ಇವರ ಜೊತೆ ಹೊಸಬರಾದ ಕೆ.ವೈ. ನಾರಾಯಣಸ್ವಾಮಿ, ವೆಂಕಟ್ರಮಣ ಗೌಡ, ಮಹಮ್ಮದ್ ಭಾಷಾ ಗೂಳ್ಯಂ, ಪಿ. ಚಂದ್ರಿಕಾ, ಎನ್.ಕೆ. ಹನುಮಂತಯ್ಯ, ಕವಿತಾ ರೈ, ಎಂ.ಆರ್.ಭಗವತಿ ಕೃತಿಗಳು ಕನ್ನಡಸಂಘದಿಂದ ಪ್ರಕಟಗೊಂಡಿವೆ. ಇವರಲ್ಲಿ ಅನೇಕರ ಮೊದಲ ಕೃತಿ ಹೊರಬಂದದ್ದು ಇಲ್ಲಿಂದಲೆ. ಕೆಲವರ ಕೃತಿಗಳಂತೂ ಕನ್ನಡ ಸಾಹಿತ್ಯದಲ್ಲಿ ಎಂಥ ಗಟ್ಟಿ ಪ್ರಭಾವ ಬೀರಿವೆ ಎಂಬುದನ್ನು ಬಿಡಿಸಿ ಹೇಳಬೇಕಾಗಿಲ್ಲ. ದಲಿತ–ಬಂಡಾಯ ನಂತರದ ಕವಿಗಳಿಗೆ ಮಾರ್ಗಪ್ರವರ್ತಕ ಕಾವ್ಯದ ಚಲನೆಗಳನ್ನು ತೋರಿಸಿಕೊಟ್ಟ ಎಚ್.ಎಸ್. ಶಿವಪ್ರಕಾಶ, ಬದಲಾಗಬೇಕಾದ ವಿಮರ್ಶೆಯ ನಡಿಗೆಯನ್ನು ಪ್ರಾಮಾಣಿಕವಾಗಿ ಹುಡುಕುತಿದ್ದ ರಹಮತ್ ತರೀಕೆರೆ, ಹೊಚ್ಚಹೊಸ ಅನುಭವಗಳೊಂದಿಗೆ ಕಾಣಿಸಿಕೊಂಡ ಪ್ರತಿಭಾ ನಂದಕುಮಾರ, ತನ್ನ ಕಾವ್ಯವನ್ನು ಜಾಗತೀಕರಣದ ಎದುರಿಗಿಟ್ಟು ಅದರ ತಾಳಿಕೆಯ ಗುಣವನ್ನು ಹೆಮ್ಮೆಯಿಂದ ಕಾಣಿಸಿದ ಎಸ್.ಜಿ. ಸಿದ್ಧರಾಮಯ್ಯ, ಹೊಸಲಯಗಳಲ್ಲಿ ಆರ್ತವಾದ ಅನುಭವಗಳನ್ನು ಸೃಷ್ಟಿಸಿದ ಆನಂದ ಝುಂಜರವಾಡ, ತನ್ನ ಪ್ರದೇಶದ ಪಾತ್ರಗಳನ್ನೂ, ಅವುಗಳ ಸಂಘರ್ಷದ ಬದುಕನ್ನೂ ಚೈತನ್ಯಪೂರ್ಣವಾಗಿ ಹಿಡಿದಿಟ್ಟ ಅಮರೇಶ ನುಗಡೋಣಿ, ನನ್ನ ತಲೆಮಾರಿನಲ್ಲಿ ಮರೆಯಲಾರದ ರೂಪಕಗಳನ್ನು ಸೃಷ್ಟಿಸಿದ ಎನ್.ಕೆ. ಹನುಮಂತಯ್ಯ..... ಇವರೆಲ್ಲರ ಕೃತಿಗಳನ್ನು ತೆರೆಗೆ ತಂದದ್ದು ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘ. ಇಷ್ಟು ವೈವಿಧ್ಯಮಯವಾಗಿ, ವಿಭಿನ್ನ ಸಾಹಿತ್ಯದ ನಂಬಿಕೆಗಳಿಗೆ ಅವಕಾಶ ಮಾಡಿಕೊಟ್ಟು ನಾಡಿನ ಎಲ್ಲ ಮೂಲೆಯ ಲೇಖಕರನ್ನು ಒಳಗೊಳ್ಳಲು ಯತ್ನಿಸಿದ ಪ್ರಕಾಶನ ಸಂಸ್ಥೆಗಳು ಅಪರೂಪ. ಇವುಗಳೊಂದಿಗೆ ಪ್ರತಿವರ್ಷ ತಪ್ಪದೆ ಬಹುಮಾನಿತರ ಕವಿತೆ, ಲೇಖನಗಳ ಸಂಗ್ರಹ ಪ್ರಕಟಗೊಳ್ಳುತ್ತಿದ್ದವು. ಈ ಎಲ್ಲ ಕೃತಿಗಳ ಪ್ರಕಾಶನದ ಹಿಂದೆ ಮೇಷ್ಟರ ಕಾಳಜಿ ಮತ್ತು ಶ್ರಮಬಿಟ್ಟರೆ ಇನ್ನೇನಿದೆ. ಇಂಥ ಕೆಲಸವೆ ಸಾಹಿತ್ಯದ ಅಂತಃಕರಣವನ್ನು ಕಾಯಬಲ್ಲದು. ಕನ್ನಡದಲ್ಲಿ ದಲಿತ ಬಂಡಾಯದ ನಂತರದ ಹೊಸತಲೆಮಾರನ್ನು ಗುರುತಿಸಿದುದರಲ್ಲಿ ರಾಜುಮೇಷ್ಟರ ಪಾಲು ದೊಡ್ಡದು. ಈಗ ಬರೆಯುತ್ತಿರುವ ಅನೇಕ ಪ್ರತಿಭಾವಂತರು ತಮ್ಮ 'ಮೊದಲ ಮಿಸುಕಾಟ'ಗಳನ್ನು ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದಲ್ಲಿ ಕಾಣಿಸಿದ್ದಾರೆ. ಹೀಗೆ ಸದ್ದಿಲ್ಲದೆ ಮೇಷ್ಟರ ಪೋಷಣೆಯಿಂದ ಹೊರಬಂದ ಹೊಸಸೆಲೆಗಳು

ಕನ್ನಡ ಸಾಹಿತ್ಯದಲ್ಲಿ ಮೈಪಡೆಯುತ್ತಿವೆ. ಅವರೆಲ್ಲ ಕೆಲಸಗಳಿಗೆ ನೆರವು ಒದಗಿಸಿದ ಕ್ರೈಸ್ಟ್ ಕಾಲೇಜಿನ ಉದಾರತೆಯನ್ನು ಕೂಡ ಮರೆಯುವಂತಿಲ್ಲ.

ರಾಜುಮೇಷ್ಟರ ಮನೋಭಾವ ನಮ್ಮ ನವೋದಯದ ಲೇಖಕರನ್ನು ನನಗೆ ನೆನಪಿಸುತ್ತಿದೆ. ಎಲ್ಲವನ್ನು ನಿರುದ್ವಿಗ್ನವಾಗಿ ಗ್ರಹಿಸುವುದು, ತಾಳ್ಮೆಯಿಂದ ಪರಿಶೀಲಿಸುವುದು, ಹೊಸಬರ ಬೆಳವಣಿಗೆಗೆ ಅನುಕೂಲಕರ ವಾತಾವರಣ ಕಲ್ಪಿಸುವುದು, ಯಾರ ಮೇಲೂ ಯಾವ ವಿಚಾರವನ್ನೂ ಹೇರದಿರುವುದು, ಸಿನಿಕರಾಗದೆ ಬರವಣಿಗೆಯ ಹಲವು ವಿಧಾನಗಳ ಬಗೆಗೆ ಪ್ರೀತಿಯಿಂದ ವರ್ತಿಸುವುದು ಮತ್ತು ಯಾರಿಂದಲೂ ಏನನ್ನೂ ಅಪೇಕ್ಷಿಸದಿರುವುದು– ಇವೆಲ್ಲ ಇತ್ತೀಚೆಗೆ ಎಷ್ಟೆಲ್ಲ ಅಪರೂಪದ ಗುಣಗಳಾಗಿಬಿಟ್ಟಿವೆ. ಇಂಥ ಗುಣಗಳೇ ಮೇಷ್ಟರ ಯಶಸ್ಸಿನ ಗುಟ್ಟುಗಳು. ಅವರು ಮಾಡಿರುವ ಕಾರ್ಯಕ್ಕೆ ಆಳವಾದ ಧೀಮಂತಿಕೆ ದೊರೆತದ್ದು ಇಂಥ ವ್ಯಕ್ತಿತ್ವದಿಂದಾಗಿ. ಕನ್ನಡ ಕಟ್ಟುವ ವಿಶಿಷ್ಟ ಮಾರ್ಗವೊಂದನ್ನು ಅವರು ತೋರಿಸಿಕೊಟ್ಟಿದ್ದಾರೆ. ಅವರ ವ್ಯಕ್ತಿತ್ವವನ್ನು ಪ್ರಭಾವಿಸಿದವರ ಪಟ್ಟಿ ಕೂಡ ಕುತೂಹಲಕರವಾಗಿದೆ; ಅನಕೃ, ಜಿ.ಪಿ. ರಾಜರತ್ನಂ ಮತ್ತು ಮಾರ್ಕ್ಸ್‌ವಾದಿ ಗೆಳೆಯರು. ಅನಕೃ ಅವರಿಂದ ಕನ್ನಡ ಚಳವಳಿಯ ಕ್ರಮವನ್ನು ಬೇರೊಂದು ರೀತಿಯಲ್ಲಿ ತಮ್ಮೊಳಗೆ ಕಟ್ಟಿಕೊಂಡರು. ಜಿ.ಪಿ. ರಾಜರತ್ನಂ ಅವರಿಂದ ಎಳೆಯರನ್ನು ಬೆಳೆಸುವ ಹಲವು ದಾರಿ ಕಂಡುಕೊಂಡರು. ಮಾರ್ಕ್ಸ್‌ವಾದಿ ಗೆಳೆಯರ ಒಡನಾಟದಿಂದ ತಾವು ಮಾಡುವ ಕೆಲಸಗಳಿಗೆ ಜಾತ್ಯಾತೀತ ಸ್ವರೂಪವನ್ನು ದಕ್ಕಿಸಿಕೊಂಡರು. ಇದೊಂದು ಅಪರೂಪದ ಮಿಲನ. ಈ ಮೂರು ದಾರಿಗಳು ಒಬ್ಬರೊಳಗೇ ಬೆರೆತ ನಿದರ್ಶನ ವಿರಳ.

ನಾನು ಚಂದ್ರಶೇಖರ ಕಂಬಾರರ ಕಾವ್ಯದ ಕುರಿತು ಅಧ್ಯಯನ ಮಾಡುವಾಗ ಮೇಷ್ಟರು ಕಂಬಾರರ ನಾಟಕಗಳ ಮೇಲೆ ನಡೆದ ವಿಚಾರಸಂಕಿರಣದ ಕ್ಯಾಸೆಟ್‌ಗಳನ್ನೊದಗಿಸಿ ಅಲ್ಲಿಯ ಲೇಖನಗಳನ್ನು ಪ್ರತಿಮಾಡಿ ಸಂಪಾದಿಸಿಕೊಡಲು ಹೇಳಿದ್ದರು. ನಂತರ ಅದು ಸಂಚಯದಿಂದ ಪ್ರಕಟವಾಯಿತು. ವಿಭಾನ ಕವಿತೆ ಪ್ರಕಟಗೊಳ್ಳಲು ಕೂಡ ಅವರೇ ಕಾರಣ. ಅದರ ಸಂಪಾದನೆಯ ಜವಾಬ್ದಾರಿ ನನಗೇ ವಹಿಸಿದ್ದರು. ಡಿ.ವಿ. ಪ್ರಹ್ಲಾದ್ ಈ ಸಂಕಲನವನ್ನು ಸೊಗಸಾಗಿ ಹೊರತಂದಿದ್ದಾರೆ. ನಾನು ಇವೆರಡು ಕೆಲಸ ಪ್ರೀತಿಯಿಂದ ಮಾಡಲು ಸಾಧ್ಯವಾದದ್ದು ಮೇಷ್ಟರ ಒಲವಿನಿಂದಾಗಿ. ಮೇಷ್ಟರ ಬಗ್ಗೆ ಬರೆಯುವಾಗ ನನಗೆ ಇಬ್ಬರು ನೆನಪಾಗುತ್ತಾರೆ; ಒಬ್ಬರು ನನ್ನ ತಂದೆ, ಇನ್ನೊಬ್ಬರು ಹಿರಿಯರಾದ ಪ್ರೊ.ಎಚ್.ಎಸ್. ರಾಘವೇಂದ್ರರಾವ್. ನನ್ನ ತಂದೆ ಭಾಲ್ಕಿಯಲ್ಲಿ ಮೂರುವರೆ ದಶಕಗಳಿಂದ ಕನ್ನಡವನ್ನು ಎದೆತುಂಬ ತುಂಬಿಕೊಂಡು ಅಲೆದಾಡುತ್ತಿದ್ದಾರೆ. ಇನ್ನು ಪ್ರೊ. ಎಚ್.ಎಸ್.ಆರ್ ಅವರನ್ನು ನಾನು ಮೊದಲಿಗೆ ಕಂಡಿದ್ದು ಕ್ರೈಸ್ಟ್ ಕಾಲೇಜಿನಲ್ಲೆ. ರಾಜುಮೇಷ್ಟರ ಬಗೆಗೆ ನಾನು ಹೇಳಿದ ಅನೇಕ ಮಾತುಗಳು ಪ್ರೊ. ಎಚ್.ಎಸ್.ಆರ್. ಅವರ ಕುರಿತು ಕೂಡ ನಿಜ. ಅವರಿಬ್ಬರು ಪರಸ್ಪರ ಚರ್ಚಿಸಿ ತೆಗೆದುಕೊಳ್ಳುತ್ತಿದ್ದ ನಿರ್ಧಾರಗಳು ಎಳೆಯರನ್ನು ಪೋಷಿಸಿವೆ. ಹೀಗಾಗಿ ನಾನು ಬೆಂಗಳೂರಿಗೆ ಹೋದಾಗ ಇವರಿಬ್ಬರನ್ನು ಭೇಟಿಯಾಗುವ ಅಥವಾ ಇಬ್ಬರಲ್ಲಿ ಒಬ್ಬರನ್ನಾದರೂ ಭೇಟಿಯಾಗುವ ಅವಕಾಶವನ್ನು ತಪ್ಪಿಸಿಕೊಳ್ಳುವುದಿಲ್ಲ. ಮಲ್ಲೇಶ್ವರಂನ ಸಂಪಿಗೆ ರಸ್ತೆಯ ಪಕ್ಕದಲ್ಲಿರುವ ಹಳೆ ಈಜುಕೊಳದ ರಸ್ತೆಯಲ್ಲಿನ ಚಿರಂಜೀವಿ ಮನೆ, ಮತ್ತು ಜೆ.ಪಿ. ನಗರದ ನೂರುಅಡಿ ರಸ್ತೆಯಲ್ಲಿರುವ

ಏಳನೇ ನಂಬರಿನ ಶ್ರೀಮಾತಾ ಮನೆ ನನ್ನನ್ನು ಅಪಾರ ಪ್ರೀತಿಯಿಂದ ಕಂಡಿವೆ. ಇದು ನನ್ನ ಅನುಭವವಷ್ಟೇ ಅಲ್ಲ, ನನ್ನಂತೆ ಅನೇಕರ ಅನುಭವ ಕೂಡ ಹೌದು. ಒಮ್ಮೆ ರಾಜುಮೇಷ್ಟರ ಹಿರಿಯ ಮಗ ಸುಗತ ಹೇಳಿದ್ದರು; 'ಅಪ್ಪನ ಒಳ್ಳೆಯತನವೆ ನನ್ನ ಕೈಹಿಡಿದು ನಡೆಸುತ್ತಿದೆ' ಅಂತ. ಸುಗತರನ್ನಷ್ಟೇ ಅಲ್ಲ. ನನ್ನ ವಾರಿಗೆಯ ಅನೇಕ ಲೇಖಕರನ್ನು ಕೈಹಿಡಿದು ನಡೆಸಿದ್ದು ಮೇಷ್ಟರ ಒಳ್ಳೆಯತನವೆ.

ಎರಡು ಸಾವಿರದ ಇಸ್ವಿಯಲ್ಲಿ ಕ್ರೈಸ್ಟ್ ಕಾಲೇಜಿನ ಬಹುಮಾನ ಪಡೆಯಲು ಹೋಗಿದ್ದೆ. ಅಂದು ನಡೆದ ಸಮಾರಂಭದೊಳಗೆ ಕೆಲವೇ ತಿಂಗಳಲ್ಲಿ ನಿವೃತ್ತರಾಗಲಿರುವ ಮೇಷ್ಟರಿಗೆ ಒಂದು ಪುಷ್ಪಗುಚ್ಛ ನೀಡಿ ಸತ್ಕರಿಸಲಾಯಿತು ಕೂಡ. ಅವರು ತಮ್ಮ ನಿವೃತ್ತಿ ಸಂದರ್ಭದ ಪುಟ್ಟ ಭಾಷಣವನ್ನೂ ಓದಿದರು. ತಮ್ಮ ಕೆಲಸದಲ್ಲಿ ಸಹಕರಿಸಿದ ಅನೇಕರಿಗೆ ಕೃತಜ್ಞತೆ ತಿಳಿಸುತ್ತಿದ್ದರು. ಕಣ್ಣೆದುರು ನಡೆಯುತಿದ್ದ ಇದೆಲ್ಲ ನನ್ನೊಳಗೆ ವಿಚಿತ್ರ ಕಸಿವಿಸಿ ಉಂಟುಮಾಡುತಿತ್ತು. ಅರೆ ಇಷ್ಟು ಬೇಗ ನಿವೃತ್ತರಾಗುತಿದ್ದಾರೆಯೆ? ಅಂತ. ಯಾಕೆಂದರೆ ಅಂಥವರ ನಿವೃತ್ತಿಯಿಂದ ಉಂಟಾಗುವ ರಿಕ್ತತೆ ತುಂಬುವುದು ಬಲು ಕಷ್ಟ. ಅವರ ನಿವೃತ್ತಿ ಸುದ್ದಿಯಾಗಲಿಲ್ಲ. ಅವರು ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಮೂಲಕ ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯ ಪುಟಗಳನ್ನು ಹೇಗೆ ತುಂಬಿದರೆಂಬ ಕುರಿತು ಸಣ್ಣ ಚರ್ಚೆಯೂ ಆಗಲಿಲ್ಲ. ಮೇಷ್ಟರಷ್ಟೇ ಅಲ್ಲ, ಅವರಂತೆ ಕೆಲಸ ಮಾಡಿದ ಅನೇಕರ ನಿವೃತ್ತಿಗಳೂ ಚರ್ಚೆಯಾಗುವುದಿಲ್ಲ. ಇತ್ತೀಚೆಗೆ ಇನ್ಫೋಸಿಸ್‌ನ ಹಿರಿಯರಾದ ನಾರಾಯಣಮೂರ್ತಿಯವರು ನಿವೃತ್ತರಾದಾಗ ನಾಡಿನ ಎಲ್ಲ ಪತ್ರಿಕೆಗಳು ಒಂದು ದೊಡ್ಡ ಸುದ್ದಿಯಾಗಿ ಪ್ರಕಟಿಸಿದವು. ನಮ್ಮ ಮಾಧ್ಯಮಗಳು ವಾರಗಟ್ಟಲೇ ಚರ್ಚಿಸಿದವು. ಕನ್ನಡ ಪತ್ರಿಕೆಗಳು ವಿಶೇಷ ಸಂದರ್ಶನದ ಜೊತೆ ವಿವರವಾಗಿ ಬರೆದವು. ಒಂದೆರಡು ವರ್ಷಗಳ ಹಿಂದೆಯಷ್ಟೆ ನಾರಾಯಣಮೂರ್ತಿಯವರು ಇಂಗ್ಲಿಷನ್ನು ಶಿಕ್ಷಣದ ಮಾಧ್ಯಮವಾಗಿ ಸ್ವೀಕರಿಸುವ ಕುರಿತು ಬಲವಾದ ಹೇಳಿಕೆ ನೀಡಿದ್ದರು. ಇತ್ತೀಚೆಗೆ ಅದನ್ನು ಪುನರುಚ್ಚರಿಸಿದ್ದಾರೆ. ಕನ್ನಡ ಪತ್ರಿಕೆಗಳು ತಮ್ಮ ಉದಾರತೆ ಮೆರೆದು ಅವರ ಕೊಡುಗೆಗಳನ್ನು ಬಿಂಬಿಸಿದವು. ಇದೆಲ್ಲ ಮಾಡಬಾರದೆಂದು ನಾನು ಹೇಳುತ್ತಿಲ್ಲ. ಇಂಥ ಚರ್ಚೆಗೆ ನಾರಾಯಣಮೂರ್ತಿಯವರು ಅರ್ಹರು. ಆದರೆ ನಮ್ಮ ಮಾಧ್ಯಮಗಳು ಆರ್ಥಿಕ ವಹಿವಾಟನ್ನು ಮಾತ್ರ ಮುಖ್ಯ ಸಂಗತಿಯೆಂದು ಭಾವಿಸುತ್ತಿವೆ. ಶತಕೋಟಿ ಆದಾಯದ ಮೇಲೆ ವ್ಯಕ್ತಿಯ, ಸಂಸ್ಥೆಯ ಪ್ರಾಮುಖ್ಯತೆ ಅಳೆಯುತ್ತಿವೆ. ನಮಗೆ ಬೇಕೊ-ಬೇಡವೋ ಜಗತ್ತಿನ ನೂರು ಶ್ರೀಮಂತರ ಪಟ್ಟಿ ಪ್ರತಿವರ್ಷ ಬಿಡುಗಡೆಯಾಗುತ್ತದೆ. ಇದು ಮಾಧ್ಯಮದ ಮನಸ್ಥಿತಿಯಷ್ಟೆ ಅಲ್ಲ. ನಾವು ಬದುಕುತ್ತಿರುವ ಸಮಾಜದ ಬಹುತೇಕ ಜನರ ಮನಸ್ಥಿತಿ ಕೂಡಾ ಹೌದು. ಆದರೆ ಒಂದು ಭಾಷೆಯ ಕ್ರಿಯಾಶೀಲತೆಗೆ ತಮ್ಮನ್ನು ಒಡ್ಡಿಕೊಂಡ ಮೇಷ್ಟರು ಮತ್ತು ಅವರ ತರಹದವರ ಸಾಧನೆ ಕಡಿಮೆಯೇನಲ್ಲ. ಕನ್ನಡದ ಅಗತ್ಯಗಳನ್ನು ಪೂರೈಸುವಲ್ಲಿ ಅವರು ಮಾಡಿದ ಕೆಲಸ ಬಹಳ ಮಹತ್ವದ್ದು. ಕನ್ನಡ ಕನ್ನಡತನ ಸೃಷ್ಟಿಸಬಹುದಾದ ವ್ಯಕ್ತಿತ್ವವನ್ನು ಕಳಚಿಕೊಳ್ಳಲು ಸ್ಪರ್ಧೆ ಏರ್ಪಟ್ಟಿರುವ ಈ ಹೊತ್ತಿನಲ್ಲಿ ಕನ್ನಡವನ್ನು ತನ್ನಾಳದ ನೈತಿಕತೆಯನ್ನಾಗಿಸಿಕೊಂಡ ಅಕ್ಷರಶಃ ಅದನ್ನು ಬಿತ್ತಿ ಬೆಳೆಯುತ್ತಿರುವ ರಾಜುಮೇಷ್ಟರನ್ನು ನೆನಪಿಸಿಕೊಂಡಾಗ ನಾನು ಕರಗಿಹೋಗುತ್ತೇನೆ.



# ಎಳೆಯ ಕವಿಗಳ ಗೂಡಿಗೊಂದು ಹಸಿರು ಮರ

● ರಶ್ಮಿ ಮ. ಹೆಗಡೆ

ಶ್ರೀನಿವಾಸರಾಜು ಸರ್ ನನಗೆ ಪರಿಚಯವಾಗಿದ್ದೇ ಬೇಂದ್ರೆ ಹುಟ್ಟುಹಬ್ಬದ ಅತ್ಯಂತ ಸಂಭ್ರಮದ ಘಳಿಗೆಯಲ್ಲಿ. ಆಗ ರಾಜ್ಯದ ವಿವಿಧ ಭಾಗಗಳಿಂದ, ವಿವಿಧ ನೆಲೆಗಳಿಂದ ಚಿಗುರುವ ಭರವಸೆಯ ಪುಟ್ಟ ಬರಹಗಾರರನ್ನು ಒಟ್ಟು ಸೇರಿಸಿದ ತಾಯಿಬೇರಿನಂಥ ಸಾರ್ಥಕ ಸಮಯದಲ್ಲಿದ್ದರು ಅವರು. ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಮುಖಾಂತರ ನನ್ನ ಅನುಭವದ ಅತ್ಯಂತ ಖುಷಿಯ ವೇದಿಕೆಯೊಂದು ರಾಜು ಸರ್ ಪ್ರಯತ್ನದಲ್ಲಿ ಸಜ್ಜುಗೊಂಡಿತ್ತು. ಅದು ರಾಜ್ಯಮಟ್ಟದ ಅಂತರಕಾಲೇಜು ಕವನಸ್ಪರ್ಧೆಯ ಬಹುಮಾನ ವಿತರಣಾ ಸಮಾರಂಭ. ಅಲ್ಲಿಯವರೆಗೆ ಸಾಹಿತ್ಯ ಜಗತ್ತಿಗೆ ಕಟಕಿಯಾಗಿದ್ದ ನನ್ನ ಕವಿತೆಗಳು ಅಂದು ಹೊಸ ಸಾಧ್ಯತೆಯ ಬಾಗಿಲನ್ನು ತೆರೆದಂಥ ಖುಷಿ ನನಗೆ. ಯಾಕೆಂದರೆ ಅಲ್ಲಿಯವರೆಗೂ ಪುಸ್ತಕಗಳು, ಭಾವಗೀತೆಗಳು ಮತ್ತು ಫೋಟೋಗಳಲ್ಲಿ ಗುರುತಾಗಿದ್ದ ಮೆಚ್ಚಿನ ಕವಿ ಚನ್ನವೀರಕಣವಿ ಅಂದು ರಾಶಿ ಪುಸ್ತಕಗಳನ್ನು ಕನ್ನಡ ಸಂಘದ ವೇದಿಕೆಯಲ್ಲಿ ತಮ್ಮ ಹಸ್ತಗಳಿಂದ ನನಗೆ ಬಹುಮಾನವಾಗಿ ನೀಡಿದ್ದರು! ಇಂಥದೊಂದು ಹೆಮ್ಮೆಯ ಗರಿಗೆ, ಸಂಭ್ರಮಕ್ಕೆ ವೇದಿಕೆ ಒದಗಿಸಿದ ರಾಜು ಸರ್‌ರನ್ನ ನನ್ನ ಖುಷಿಯ ಆಪ್ತ ಕ್ಷಣಗಳೊಂದಿಗೆ ನೆನೆಯುವುದೊಂದು ಸಾರ್ಥಕ ಭಾವನೆ.

ಆಡಿಕೊಂಡು ಓಡಿಕೊಂಡು, ನಾನು ನಿಜಕ್ಕೂ ಕವಿತೆ ಬರೆದಿದ್ದಾ? ಅಂತನ್ನುವ ಅಳುಕಿನೊಂದಿಗೆ 'ನೋಡಿಬಿಡುವ' ಎಂಬ ಧೈರ್ಯದಿಂದ ಕಳುಹಿಸಿದ ನಾಲ್ಕು ಗೀಚು ಸಾಲೆಂಬ ಕವಿತೆಗಳನ್ನು ಹುಡುಕಿ ತೆಗೆಸಿ ಆಯ್ದು ಆಸ್ಥೆಯಿಂದ 'ಇನ್ನೂ ಬರಿ ಮಗು' ಅಂತನ್ನುವ ಒಂದು ಹಿರಿಯ ವಾತ್ಸಲ್ಯಮಯ ವಿಧಾನವನ್ನು ರಾಜು ಸರ್ ಬಹುಮಾನ ವಿತರಣಾ ಸಮಾರಂಭ ಎಂದು

ಆಯೋಜಿಸಿದ್ದರು. ನಿಜಕ್ಕೂ ಈ ಸ್ಪರ್ಧೆಗೆ ಬಹುಮಾನ ತರಲು ಬೆಂಗಳೂರಿಗೆ ಓಡಿದ ಅನುಭವ. ಬೇಸಿಗೆ ರಜೆಯಲ್ಲಿ ಅಜ್ಜನ ಮನೆಗೆ ಹೋಗಿ ಬಂದಂಥ ಹುಮ್ಮಸ್ಸು, ಸ್ಫೂರ್ತಿಯನ್ನು ನನ್ನಲ್ಲಿ ವರ್ಷಪೂರ್ತಿ ತುಂಬುತ್ತಿತ್ತು. ಇಂಥ ಸಂದರ್ಭಗಳಲ್ಲೇ ನಾವು ಹಲವು ಕವಿಮಿತ್ರರನ್ನು ಪಡೆದದ್ದು.

ರಾಜು ಸಾರ್‌ರೊಂದಿಗಿನ ಒಡನಾಟವೆಂದರೆ ಅದು ಸರಳತೆ, ಸಜ್ಜನಿಕೆ ಮತ್ತು ವಿನಮ್ರತೆಗಳೆಂದರೇನೆಂದು ಕಾಣಿಸುವಂಥದ್ದು. ಸಮಾರಂಭದ ನೆನಪಿಗೊಂದು ಫೋಟೋಗಾಗಿ ಅವರನ್ನ ಕೇಳಿಕೊಂಡರೆ ತುಂಬ ಸಂಕೋಚ ಅವರಿಗೆ! ನಾನು ಯಾಕೆ?! ಅಂತಹ ಸಾಹಿತ್ಯ ಜೀವಿಗಳು. ಸಂಘಟಕರೆಂದರೆ ಮಹಾ ಬಿಗುಮಾನದ ಮೂಡಿಗಳು: ಹಣೆ ನಿರಿಗೆ ಮುಖ ಗಂಟು ಹಾಕಿರುವವರು ಎಂದೆಲ್ಲ ಅಂದುಕೊಂಡಿದ್ದ ನನಗೆ ಅಚ್ಚರಿ! ದೊಡ್ಡ ಜನರೂ ಇಷ್ಟು ದಾಕ್ಷಿಣ್ಯ ಪಡುತ್ತಾರೆಯೇ? ಅಂತ.

ಮೊನ್ನೆ ವಿಭಾಳ ಕವನ ಸಂಕಲನ ಬಿಡುಗಡೆಯಲ್ಲಿ ಕಂಡಾಗಲೂ ಅಷ್ಟೆ. ಅದೇ ಸರಳ, ಆತ್ಮೀಯ ಮಾತುಕತೆ. ನಿನ್ನೆಯಷ್ಟೇ ನಾವು ಸೇರಿ ಮಾತಾಡಿದ್ದೇವೇನೋ ಅನ್ನಿಸುವಷ್ಟು. ಅಷ್ಟರಲ್ಲಾಗಲೇ ಐದಾರುವರ್ಷ ಸರಿದುಹೋದದ್ದು ಅರಿವಿಗೇ ಬರದಂಥ ಆಪ್ತ ಮಾತುಗಳು. ವಿಭಾ ತಿರಕಪಾಡಿಯ ಅಕಾಲ ಮರಣಕ್ಕೆ ರೋಸಿಹೋಗಿದ್ದ ನಾನು, ನನ್ನ ಮಿತ್ರರು ರಾಜು ಸರ್ ಒಡನಾಟದಲ್ಲಿ ಸಾವು–ಜೀವನದ ಕ್ಷಣಿಕತೆಯ ಕುರಿತ ಅವರ ಅನುಭವದ ನುಡಿಗಳಲ್ಲಿ ಒಂದಿಷ್ಟು ಜೀವಜಲ ಪಡೆದೆವು. ಇರುವ ಬಾಂಧವ್ಯಗಳನ್ನು ಗಟ್ಟಿಗೊಳಿಸುವ ಮುಖಾಂತರ ಕಳಕೊಂಡ ವಿಷಾದವನ್ನು ಕಳೆಯಲೆತ್ನಿಸಿದೆವು. ಅವೊತ್ತು ಶ್ರೀನಿವಾಸರಾಜು ಸರ್‌ರನ್ನು ನೋಡಿದ್ದು, ಮಾತಾಡಿದ್ದು ನನಗಂತೂ ಐದಾರು ವರ್ಷಗಳಿಂದ ಕಳೆದುಹೋದ ಅಮೂಲ್ಯ ಬಾಂಧವ್ಯ ಮರಳಿ ದೊರೆತ ಸಮಾಧಾನ ತಂದಿತು.

ನಿಜ ರಾಜು ಸರ್‌ರಂಥವರು ತೀರ ವಿರಳ. ರಾಜರತ್ನಂರ ಒಡನಾಟವಿಲ್ಲದ ನನಗೆ, ನನ್ನ ಮಿತ್ರರಿಗೆ ಮಾತು ಮಾತಿಗೆ ಅವರನ್ನ ನೆನೆವ ರಾಜು ಸರ್ ಒಂದು ಆಸ್ತಿ. ಅವರ ಪ್ರತಿ ಮಾತಿನಲ್ಲಿರೋ ಪ್ರಾಮಾಣಿಕತೆ, ಸಜ್ಜನಿಕೆ, ಸಾಹಿತ್ಯಾಭಿಮಾನ ನನ್ನೊಳಗಿನ 'ಬಡಕವಿ' ಯನ್ನು ಕಾಲದಿಂದ ಕಾಲಕ್ಕೆ ಈ ಜಗದ ನೂರಾರು ಜಂಜಾಟಗಳ ನಡುವೆಯೂ ಜೀವಂತವಾಗುಳಿಸಲು ಸ್ಫೂರ್ತಿ ನೀಡಿದೆ; ನನ್ನೊಳಗಿನ ಬರೆವ ಹಂಬಲಕ್ಕೆ ತೈಲವಾಗಿ ಪೊರೆಯುತ್ತಿದೆ. ಈ ಸ್ಫೂರ್ತಿ ನಂಬುಗೆಯನ್ನು ನನ್ನಂಥ ನೂರಾರು ಬರೆವ ಓದುವ ಸಾಹಿತ್ಯಾಭಿಮಾನೀ ಜೀವಗಳು ಪಡಕೊಂಡಿವೆಯೆಂದೇ ನನ್ನ ವಿಶ್ವಾಸ.

ರಾಜು ಸರ್‌ರೊಂದಿಗೆ ಒಡನಾಡಿದ ಕ್ಷಣಗಳನ್ನು ಒಟ್ಟಾಗಿ ನೆನಪಿಸಿಕೊಂಡರೆ ಅನ್ನಿಸುವುದು: ಸದಾ ಅವರೊಂದು ಅಪ್ಪಟ ಓದುಗ ಎಂದು. ಒಬ್ಬ ವಾಗ್ಮಿ, ಪಂಡಿತ, ಪ್ರಕಾಶಕ ಸಂಪಾದಕ, ಅಥವಾ ವಿಮರ್ಶಕನಾಗಿರುವುದಕ್ಕಿಂತ ಅಚ್ಚ ಪ್ರಾಮಾಣಿಕ, ಸೂಕ್ಷ್ಮ ಸಂವೇದನೆಯ 'ಓದುಗ' ನಾಗಿಯೇ ಅವರು ನನ್ನಂಥ ತೀರ ಸಾಮಾನ್ಯ ಕವಯಿತ್ರಿಯೊಂದಿಗೆ ಒಡನಾಡಿದ್ದು ನನಗೆ ಅತ್ಯಂತ ವಿಸ್ಮಯದ ವಿಷಯ. ಅಂತೆಯೇ 'ಓದುಗ'ನ ಸ್ಥಾನಕ್ಕಿರುವ ಘನತೆಯ ಪ್ರತೀಕ ಅವರು.

ಯಾವ ವಿಷಯವನ್ನೂ ಹರಟೆಯಾಗಿಸದೇ ಎಲ್ಲೂ ಶಬ್ದಾಡಂಬರದ ಗೋಜಿಗೂ ಹೋಗದೇ ತಣ್ಣಗಿದ್ದುಕೊಂಡು ರಾಜು ಸರ್ ನಿರ್ವಹಿಸಿದ ಕನ್ನಡಸೇವೆ. 'ಕಗ್ಗಾಡಿನಲ್ಲಿ ಪಾದಯಾತ್ರಿಗಳಿಗೆ 'ದೀಪ' ಹಚ್ಚುವಂಥ ಕೆಲಸವಾಗಿದ್ದೊಂದು ನಮ್ಮೆಲ್ಲರ, ಕನ್ನಡದ ಹೆಮ್ಮೆ.

ಒಂದು ಏಕಾಂತ-ಭಯದ ವಿಚಿತ್ರ ಕ್ಷಣದಲ್ಲಿ, ತೀವ್ರ ಭಾವೋದ್ವೇಗದಲ್ಲಿ, ಎಳೆಯವಯಸ್ಸಿನಲ್ಲಿ ಅರೆಬರೆ ಜ್ಞಾನ-ಮುಗ್ಧತೆಗಳ ಮಿಶ್ರಣದಲ್ಲಿ ಬರೆದ ನನ್ನ ಒಂದೆರಡು ಕವಿತಗಳಿಗೆ ರಾಜು ಸರ್ ನಿರ್ಮಿಸಿ ನೀಡಿದ ಕ್ರೈಸ್ಟ್ ಕಾಲೇಜ್ ಕನ್ನಡ ಸಂಘದ ವೇದಿಕೆಯ ಬಹುಮಾನದ ಕಾಣಿಕೆಯು ನನ್ನೆಲ್ಲ ಸಾಹಿತ್ಯಿಕ ಒಡನಾಟಗಳಲ್ಲಿ ಅವಿಸ್ಮರಣೀಯವೂ ಅನನ್ಯವೂ ಆದದ್ದು. ರಾಜು ಸರ್ ತಮ್ಮ ಸೇವೆಯ ಅವಧಿಯಲ್ಲಿ ವರ್ಷಗಳುದ್ದಕ್ಕೂ ನಿರ್ವಹಿಸಿದ ಈ ಅವಿರತ ಸಾಹಿತ್ಯ ಪೋಷಣೆಯ ಹಾದಿಯಲ್ಲಿ ನನ್ನಂಥ ಎಷ್ಟು ಮನಸುಗಳು ತಮ್ಮ ನೆನಪಿನ ಆಲ್ಬಂನಲ್ಲಿ ಕಾದಿಟ್ಟುಕೊಂಡಿರಬಹುದೆಂದು ಯೋಚಿಸಿದರೆ ರಾಜು ಸರ್ ಜೀವನದ ಕುರಿತು ನನಗೆ ಅಭಿಮಾನ ಎನಿಸುತ್ತದೆ! ತಮ್ಮ ಕುರಿತು ಏನನ್ನೂ ಹೇಳಿಕೊಳ್ಳದ ಇತರರಿಂದ ಹೊಗಳಿಕೆ ಅಪೇಕ್ಷಿಸದ ಅವರ ಸರಳ ಸಜ್ಜನಿಕೆ ಕನ್ನಡ ಭಾಷೆ, ಸಾಹಿತ್ಯದ ಕುರಿತ ವಿಶಾಲ, ಸಮಗ್ರ ದೃಷ್ಟಿಯ ಜೊತೆ ಹೊಸಪೀಳಿಗೆಯ ಚಿಗುರು-ಬೇರುಗಳನ್ನು ಒಟ್ಟಾಗಿಸಿ. ಕಾಪಾಡುವ ಕ್ರಿಯಾಶೀಲತೆ ಇದೆಯಲ್ಲ ಅದು ನನಗೆ ನನ್ನ ಮಿತ್ರರಿಗೆ ಅತ್ಯಂತ ಅಮೂಲ್ಯವೆನ್ನಿಸುವ ಒಡನಾಟದ ಅನುಭವವಾಗಿದೆ. ಅದಕ್ಕೇ ನಾನಂದುಕೊಳ್ಳುವುದು ಶ್ರೀನಿವಾಸರಾಜು ಸರ್, ನಮ್ಮ ಕಾಲದ ಸಾಹಿತ್ಯಿಕ ಚಟುವಟಿಕೆಗಳ ಸಂಚಾಲನೆ, ಸಂವರ್ಧನೆಗಳನ್ನು ಅರಳಿಸಬಲ್ಲ ಒಂದು ಚೈತನ್ಯಯುತ ಆಸ್ತಿ. ಅವರದೇ ಶೈಲಿಯ ಪಾಲನೆ, ಪೋಷಣೆ ಕನ್ನಡ ಸಾಹಿತ್ಯಕ್ಕೆ ನಮ್ಮೆಲ್ಲರಿಗೆ ಬಹುಕಾಲವಿರಲಿ. ದೇವರು ಅವರಿಗೆ ದೀರ್ಘಾಯುಷ್ಯ ಆರೋಗ್ಯ, ಸಂಪತ್ತು ನೆಮ್ಮದಿ ನೀಡಿ ಕಾಪಾಡಲಿ ಎಂದು ದೇವರಲ್ಲಿ ನನ್ನ ಹಕ್ಕೊತ್ತಾಯದ ಬೇಡಿಕೆ.



## 'ಒದ್ದೆ ಕಣ್ಣುಗಳ' ಅಭಿವ್ಯಕ್ತಿ

● ಸುಧಾ ಶರ್ಮ

ಕ್ರೈಸ್ಟ್ ಕಾಲೇಜು ಕವನ ಸ್ಪರ್ಧೆಯಲ್ಲಿ ಬಹುಮಾನ ಸಿಕ್ಕಾಗೆಲ್ಲ ನಾನೂ ಕವಯತ್ರಿ ಎನ್ನುವ ಖುಷಿಯಲ್ಲಿ ಬಹಳ ಮುದ್ದಾದ ಹೆಸರಿನ ಕವನ ಸಂಕಲನವನ್ನು ಉಚಿತವಾಗಿ ಲೆಕ್ಚರರ್‌ಗಳಿಗೆ, ಸ್ನೇಹಿತರಿಗೆ ಸಾಹಿತ್ಯಾಸಕ್ತರಿಗೆ ನೀಡೋದು ಆ ದಿನಗಳಲ್ಲಿ ಅತ್ಯಂತ ಮುದ ಕೊಡ್ತಾ ಇತ್ತು. ಎಲ್ಲಕ್ಕಿಂತ ಹೆಚ್ಚಾಗಿ ನಾಲ್ಕೇ ನಾಲ್ಕು ಸಾಲಿನ ಪತ್ರ ಬರೆಯುವ ರಾಜು ಮೇಷ್ಟ್ರ ಪ್ರೀತಿ, ವಿಶ್ವಾಸ ಆತ್ಮೀಯತೆ ಮತ್ತು ನಮ್ಮೊಳಗೂ ಕವಿತೆ ಬರೆಯುವ ತಾಕತ್ತಿದೆ ಎಂದು ಹುರಿದುಂಬಿಸುವ ಭರವಸೆ.

ರಾಜುಮೇಷ್ಟ್ರನ್ನು ನಾನು ಮೊದಲು ನೋಡಿದ್ದು ಧಾರವಾಡದಲ್ಲಿ, ಬೇಂದ್ರೆಯವರ ಮನೆಯಲ್ಲಿ. ನಿರ್ಮಲ ಕಣ್ಣುಗಳ ಮೆಲ್ಲನೆ ಮಾತನಾಡುವ ರಾಜು ಮೇಷ್ಟ್ರು ಇಷ್ಟು ಸಿಂಪಲ್ಲಾ! ಅನ್ನಿಸಿತು. ಅಂದೇ ಸಂಜೆ ಧಾರವಾಡದ ಕಲಾಭವನದಲ್ಲಿ ಕವಿಗೋಷ್ಠಿ ಇತ್ತು. ರಾತ್ರಿ ೭ ಗಂಟೆಯ ನಂತರ ಹಾಸ್ಟೆಲ್‌ನಲ್ಲಿ ಪ್ರವೇಶವಿಲ್ಲ. ಅದಕ್ಕೂ. ಮೊದಲೇ ಹೋಗಿ ಸೇರ್ಕೋಬೇಕು. ಕವಿಗೋಷ್ಠಿ ಮುಗಿಯುವವರೆಗೂ ಕಾಯುವ ಹಾಗಿಲ್ಲ. ಅದಕ್ಕೇ ಅರ್ಧಕ್ಕೆ ಎದ್ದು ಬರುವವಳನ್ನ ನಿಲ್ಲಿಸಿ ಮೇಷ್ಟ್ರು ಕೇಳಿದ ಪ್ರಶ್ನೆ 'ಕವನ ಸಂಕಲನ ತರುವ ವಿಚಾರ ಇದ್ಯಾ?' ನಾನು ಬರೆದದ್ದು ಕವಿತೆ ಹೌದೋ ಅಲ್ಲವೋ ಏನನ್ನಿಸಿತೋ, ಅನುಭವಿಸಿದ್ದನ್ನೆಲ್ಲ ದಾಖಲಿಸಿದವಳೆದುರು ಇಂತಹ ಪ್ರಶ್ನೆ ನನಗೆ ನಂಬಲಾಗಲಿಲ್ಲ.

"ಹೌದು ಸರ್ ತರಬೇಕು ಆದರೆ". "ನಾನು ಕ್ರೈಸ್ಟ್ ಕಾಲೇಜಿನಿಂದ ತರ್ತೀನಿ ಯೋಚಿಸ್ಬೇಡಿ" ಆ ಮಾತನ್ನು ನಂಬಲು, ಅರಗಿಸಿಕೊಳ್ಳಲು ಎಷ್ಟೋ ದಿನಗಳೇ ಬೇಕಾಯ್ತು.

ಉತ್ಸಾಹ ತುಂಬಲು, ಧೈರ್ಯ ಹೇಳಲು ಹಾಗೆ ಅಂದಿರಬಹುದು. ಕ್ರೈಸ್ಟ್ ಕಾಲೇಜಿನವರು ನನ್ನ ಕವನಗಳನ್ನು ಪ್ರಕಟಿಸೋದು

ಖಂಡಿತ ಆಗದ ಹೋಗದ ಮಾತು. ಅಥವಾ ನನ್ನದೇ ಭ್ರಮೆ ಇರಬಹುದು. ಹೀಗೆ ಅಂದು ಕೊಂಡಿದ್ದೆ ಆದರೆ ಕೊಟ್ಟ ಮಾತನ್ನು ಇಷ್ಟು ಕರಾರುವಕ್ಕಾಗಿ ಮೇಷ್ಟ್ರು ನೆರವೇರಿಸಿ ಬಿಡುತ್ತಾರೆ.

ನಾನಾಗ ಹುಬ್ಬಳ್ಳಿಯಲ್ಲಿದ್ದೆ. ಕೇವಲ ಹಸ್ತ ಪ್ರತಿಯನ್ನು 'ಪೋಸ್ಟ್' ಮಾಡಿದೀನಿ ಅಷ್ಟೇ. ಆ ನಂತರದ ಎಲ್ಲ ಎಲ್ಲ ಜವಾಬ್ದಾರಿಗಳನ್ನು ಹೊತ್ತವರು ಮೇಷ್ಟ್ರು, ಕವನ ಸಂಕಲನದ ಬಿಡುಗಡೆಯವರೆಗೂ.....

ಉದ್ಯೋಗ, ಆಸಕ್ತಿ, ಮನೆ, ಮಕ್ಕಳು ಸಂಸಾರದ್ದ ನಡುವೆಯೂ ಮೇಷ್ಟ್ರು ಇಂತಹ ಎಲ್ಲ ತಾಪತ್ರಯಗಳನ್ನು ಸ್ವಂತದ್ದೆನ್ನುವ ಕಾಳಜಿಯಲ್ಲಿ ಹೇಗೆ ಹೊತ್ಕೊಂಡ್ರು ಅಂತಾ ನೆನಪಾದಾಗಲೆಲ್ಲ ನಾವು ತುಂಬ ಕುಬ್ಜರೆನ್ನಿಸಿಬಿಡ್ತೀವಿ.

ಬರೆಯಿರಿ ಎನ್ನುವ ನಿರಂತರ ಒತ್ತಾಸೆಯನ್ನು ತುಂಬುತ್ತ ಬರವಣಿಗೆಯ ಮೂಲಕ ನನ್ನಂತ ಸಾವಿರಾರು ಜನರೆದುರು ಬದುಕಿನ 'ಹೊಸ ಕನಸುಗಳನ್ನು ಕಟ್ಟಿಕೊಡುತ್ತ ಮೇಷ್ಟ್ರು ಕಾಲುದಾರಿಯಲ್ಲಿ ಹಾಗೂ ಹೀಗೂ ನಡೆಯುತ್ತಿದ್ದ ನಮ್ಮಂತವರನ್ನು ಕರೆತಂದು ವಿಸ್ತಾರ ದಾರಿಯ ನಡಿಗೆ ಕಲಿಸಿದ್ದಲ್ಲದೆ ತಮ್ಮ ಜೋಡಿ ಕಣ್ಣುಗಳ ಬ್ಯಾಟರಿ ಮಾಡಿ ದಿಕ್ಕು ತೋರಿಸಿದವರು.

ಈಗ ನಿವೃತ್ತಿಯ ನಂತರವೂ ಹೊಸಬರ ಸಂಕಲನ, ತರುವುದಕ್ಕಾಗಿ (ರಾಜರತ್ನಂ ವೇದಿಕೆ) ಅಖಾಡಕ್ಕೆ ಬಂದು; ಉತ್ಸಾಹ, ಪ್ರೀತಿ, ಬರೆಯುವ ಉತ್ಸಾಹ ಉಳಿಸುವುದಕ್ಕಾಗಿ; ಇನ್ನೊಬ್ಬರಿಗಾಗಿ ಇಷ್ಟು ನಿಸ್ವಾರ್ಥವಾಗಿ ಕೆಲಸ ಮಾಡುವ ಮೇಷ್ಟ್ರು. ನನ್ನ ಶಬ್ದಗಳಿಗೆ ಶಕ್ತಿ ಸಾಲದು. ಅಭಿವ್ಯಕ್ತಿಗಿದ್ದುದು 'ಒದ್ದೆ ಕಣ್ಣುಗಳು' ಮಾತ್ರ.

❑

# ತಾಯಿ ಬೇರಿಗೊಂದು ಒಸಗೆ

● ಸುನಂದಾ ಪ್ರಕಾಶ ಕಡಮೆ

ಆತ್ಮೀಯ ಶ್ರೀನಿವಾಸರಾಜು ಸರ್‌ರಿಗೆ
ಪ್ರೀತಿಯ ವಂದನೆ.

ತುಂಬ ದಿನಗಳಿಂದ ನಿಮಗೊಂದು ಪತ್ರ ಬರೆಯಬೇಕೂ ಅಂತಿದ್ದೆ. ಅದು ಈಗ ಈ ಮೂಲಕ ಸಾಧ್ಯವಾಗಿದ್ದಕ್ಕೆ ಧನ್ಯತೆ ಎನಿಸುತ್ತಿದೆ. ಹೀಗೆ ಕಾಗದದ ದೋಣಿಯ ಮೂಲಕ ಮನಸ್ಸನ್ನು ತೇಲಿಬಿಡುವುದು ಖುಷಿಯ ಸಂಗತಿ. ನಮ್ಮೆಲ್ಲ ಹೊಸಬರಹಗಾರರ ಜೊತೆ ಅಂಥ ಮೊಂದು ನವಿರಾದ ಹಾಗೂ ಅಷ್ಟೇ ಗಟ್ಟಿಯಾದ ಬಾಂಧವ್ಯವನ್ನು ನಿಮ್ಮ ವ್ಯಕ್ತಿತ್ವ ಗಳಿಸಿಕೊಂಡು ಬಿಟ್ಟಿದೆ ಸರ್.

ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘವೆಂದರೆ ನೀವೂ, ನೀವು ಅಂದರೆ ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘ, ಎರಡೂ ಒಂದೇ ಎಂಬ ಮಟ್ಟಿಗೆ ತಾದಾತ್ಮ್ಯ ಹೊಂದಿದ ದಿನಗಳವು. ನನಗೆ ತುಂಬ ಇಷ್ಟವಾಗುವ ಕೆಲ ಪುಸ್ತಕಗಳು ನಿಮ್ಮ ಕನ್ನಡ ಸಂಘದಿಂದ ಹೊರ ಬಂದಿದ್ದವು. ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಮಾತು ಬಂದಾಗೆಲ್ಲ ಪ್ರತಿ ಬಾರಿಯೂ ನಾನು 'ಕ್ರೈಸ್ಟ್ ಕಾಲೇಜ್ ಕ್ರಿಸ್ತ್ ಕಾಲೇಜ್' ಅಂತಿದ್ದೆ. 'ಕ್ರಿಸ್ತ್' ಅಲ್ಲಾ ಅದು 'ಕ್ರೈಸ್ಟ್' ಎಂದು ತಮಾಷೆಯಾಗಿಯೇ ತಿದ್ದುತ್ತಿದ್ದರು ಜಯಂತ್. ಆಗೆಲ್ಲ ನಿಮ್ಮ ಬಳಿ ನನ್ನದೂ ಒಂದು ಪುಸ್ತಕ ಮಾಡಬೇಕೂ ಎಂದು ಆಸೆಪಡುತ್ತಿದ್ದೆ. ಈಗ ನಿಮ್ಮ ಕನಸಿನ ಕೂಸಾದ ಅದೇ ಕನ್ನಡ ಸಂಘದಲ್ಲಿ ರವಿಕುಮಾರ್ ನೆರವಿನಿಂದ ಇದೇ ವರ್ಷ ನನ್ನದೊಂದು ಅಂಕಣ ಬರಹಗಳ ಸಂಕಲನ ಹೊರಬರುತ್ತಿರುವುದು ಸಂತೋಷವೆನ್ನಿಸುತ್ತಿದೆ ಸರ್.

ಕನ್ನಡ ಸಾಹಿತ್ಯದಲ್ಲಿ ನನ್ನ ಓದಿನ ಪ್ರಯಾಣ ಪ್ರಾರಂಭವಾದ ಇತ್ತೀಚಿನ ಹತ್ತು ಹದಿನೈದು ವರ್ಷಗಳಲ್ಲಿ ತುಂಬ ಸಲ ನಿಮ್ಮ ಹೆಸರನ್ನು ಆಸ್ವಾದಿಸಿದ್ದರೂ ನಿಮ್ಮನ್ನ ಮೊದಲ ಬಾರಿ ನೋಡಲು ಹಾಗೂ ಆಪ್ತವಾಗಿ ಮಾತಾಡಲು ಅನುವು ಮಾಡಿಕೊಟ್ಟದ್ದು ಡಿ.ವಿ.

ಪ್ರಹ್ಲಾದರ ಸಂಚಯ ಬಳಗದ ಆತ್ಮೀಯ ವಲಯ. ವಿಜಯಕರ್ನಾಟಕ – ಅಂಕಿತ ಪುಸ್ತಕ ನಡೆಸುತ್ತಿದ್ದ ಯುಗಾದಿ ಕಥಾಸ್ಪರ್ಧೆಯಲ್ಲಿ ನನ್ನದೊಂದು ಕಥೆಗೆ ಬಂದ ಬಹುಮಾನ ವಿತರಣೆಯ ದಿನ, ಪ್ರಹ್ಲಾದ್ ತಮ್ಮ ಮನೆಯಲ್ಲಿ ಬಹುಮಾನ ವಿಜೇತರಿಗಾಗಿ ಸಂತೋಷಕೂಟವೊಂದನ್ನು ಏರ್ಪಡಿಸಿದ್ದರು. ಅಲ್ಲಿ ತುಂಬ ಜನ ಸಮಾನ ಅಭಿರುಚಿಯ ಯುವ ಬರಹಗಾರರೇ ಸೇರಿದ್ದೆವು. ಸುದರ್ಶನ ಬೇಳೂರು, ಎಂ.ಆರ್. ಭಗವತಿ, ಆನಂದ ಋಗ್ವೇದಿ, ಎಲ್.ಜಿ.ಮೀರಾ, ಸಂದೀಪ ನಾಯಕ, ಜಿ.ಬಿ. ಹರೀಶ್, ಡಿ.ಎಸ್. ರಾಮಸ್ವಾಮಿ, ಸುಧಾ ಶರ್ಮ ಚವತ್ತಿ, ವಾಸುದೇವ್ ನಾಡಿಗ್ ಮತ್ತು ನಮ್ಮ ಪ್ರಕಾಶ್ ಇನ್ನೂ ಮುಂತಾದವರಿದ್ದೆವು. ಸ್ವಲ್ಪ ಹೊತ್ತು ನಿಮಗಾಗಿ ಕಾಯುತ್ತಿದ್ದೆವು.

ನೀವು ನಿಗದಿತ ವೇಳೆಗೆ ಹೆಗಲಿಗೊಂದು ಪುಸ್ತಕದ ಚೀಲ ಹಾಕಿಕೊಂಡು ಗೆರೆಗೆರೆ ಕುರ್ತಾ ಧರಿಸಿ ಬಂದಿರಿ. ಏನೋ ಪುಳಕ. ಗಗನದಲ್ಲಿರುವ ನಕ್ಷತ್ರವೊಂದು ಕೈಗೆಟುಕುವಷ್ಟು ಸನಿಹದಲ್ಲಿ ಕೂತಷ್ಟು ಅಚ್ಚರಿ. ನಿಮ್ಮ ಸುತ್ತು ಕೂತು ಮಾತು ಸಾಗಿತು. ನಿಮ್ಮ ಆ ಸರಳತೆ ಸಹಜತೆ ಯಾರನ್ನಾದರೂ ಹಿಡಿದಿಟ್ಟುಕೊಳ್ಳುವಂಥದ್ದು ಸರ್, ಅಂದು ಮೀರಾ ಅವರು 'ಬಾರೋ ಸಾಧನ ಕೇರಿಗೆ' ಬೇಂದ್ರೆ ಕವಿತೆ ಹಾಡಿದರು. ಕೆಲವರು ಕವಿತೆ ಓದಿದರು. ಸಂವಾದ ಚರ್ಚೆ ಕೌಟುಂಬಿಕವಾಗಿ ನಡೆದಂತಿತ್ತು. ಆ ಮೊದಲ ಸಹವಾಸ ಸಂಭ್ರಮ ಎಂದೂ ಮರೆಯುವಂಥದ್ದಲ್ಲ.

'ಮಲ್ಲೇಶ್ವರಂನಲ್ಲಿ ಮನೆ, ಬನ್ನಿ' ಎಂದು ಕರೆದಿರಿ, ಅಪರೂಪದ ಲೇಖಕ ದೇವನೂರು ಮಹಾದೇವರ ಸಮಗ್ರ ಸಂಕಲನವನ್ನು ಅಂದಿನ ಖುಷಿಯ ಕಾಣಿಕೆಯಾಗಿ ಓದಲು ಕೊಟ್ಟಿರಿ. ಆ ಸಂದರ್ಭದಲ್ಲಿ ನನ್ನದೊಂದು ಕವಿತೆಗೆ ಲೇಖಕಿಯರ ಸಂಘದ ಗುಡಿಬಂಡೆ ಪೂರ್ಣಿಮಾ ಬಹುಮಾನ ಬಂದಿತ್ತು. ಅದಕ್ಕೆ ನೀವೇ ತೀರ್ಪುಗಾರರಾಗಿದ್ದಿರಿ ಎಂದು ಪ್ರಹ್ಲಾದ್‌ರಿಂದ ತಿಳಿಯಿತು. ನನ್ನ ಕವಿತೆಗಳಿಗೆ 'ಚೆನ್ನಾಗಿವೆ, ಇಷ್ಟವಾಗುತ್ತವೆ' ಎಂಬ ಮಾತನ್ನು ಅತ್ಯಂತ ಧೈರ್ಯವಾಗಿ ಹೇಳಿದ ಒಬ್ಬನೇ ಒಬ್ಬ ಕನ್ನಡಿಗ ನೀವು ಸರ್! ಕಾವ್ಯ ರಚನೆಯ ಕುರಿತಾಗಿರುವ ಗೊಂದಲವನ್ನು ಹೇಳಿಕೊಂಡಾಗ 'ಬರಹವೊಂದು ಬದುಕಿಗೇನು ಕೊಡುತ್ತದೆ ಎಂಬುದೇ ಮುಖ್ಯ' ಅಂದಿದ್ದಿರಿ ನನಗೆ ಖುಷಿಯಾಗಿತ್ತು. ನನಗೆ ಬೇಕಾದ ಸಾಲು ಸಿಕ್ಕಿದಂತೆನಿಸಿತು.

ನಾನು ನನ್ನ ಮೂವತ್ತನೇ ವರ್ಷಕ್ಕೆ ಬರೆಯಲು ಪ್ರಾರಂಭಿಸಿದ್ದು ಸರ್. ಬರಹಗಾರ್ತಿ ಯಾಗಬೇಕು ಎಂಬ ಯಾವ ಮಹತ್ವಾಕಾಂಕ್ಷೆಯೂ ನನಗಿರಲಿಲ್ಲ. ವೈಯಕ್ತಿಕವಾಗಿ ಇದ್ದಕ್ಕಿದಂತೆ ಬರೆಯಲೇಬೇಕಾದ ಒಂದೆರಡು ಪ್ರಸಂಗಗಳು ಕಣ್ತೆರೆದಿದ್ದವು. ಈ ಬರವಣಿಗೆಯ ಆಸರೆಯಿಲ್ಲದಿದ್ದರೆ ನಾನು ಎಂಥ ಅಸಹನೆ ಅತೃಪ್ತಿ ಅಸಮಾಧಾನಗಳನ್ನು ಎದುರಿಸಬೇಕಾಗಿತ್ತೋ ಏನೋ. ಆ ಅನಿವಾರ್ಯತೆಗೆ ಒಳಒತ್ತಡಕ್ಕೆ ಸಿಲುಕಿ ಬರೆದದ್ದು ಆಗ. ಆದರೀಗ ಅದೇ ಉಸಿರಾಗಿ ಬಿಟ್ಟಂತಿದೆ. ಏನನ್ನೂ ಓದದೇ ಬರೆಯದೇ ಇದ್ದ ಸಮಯಗಳು ಎಂಥದೋ ಮಹತ್ವದ ಕಾಲಹರಣಗೈಯ್ಯುತ್ತಿದ್ದಂತೆ ಸಂಕಟವಾಗುತ್ತದೆ ಸರ್. ಗೃಹಿಣಿಯ ಕರ್ತವ್ಯಗಳು ಜೊತೆಯಲ್ಲಿರುವುದರಿಂದ ಈ ಬರಹಕಾಮೇಷ್ಟಿಯಾಗಕ್ಕೆ ನೆಲಕಚ್ಚಿ ಕೂಡಲು ಈ ಸ್ಪರ್ಧೆಗಳು ಹಾಗೂ ಅದರ ಕೊನೇ ತಾರೀಖುಗಳೆಲ್ಲ ಒಂದು ನೆಪ ಅಷ್ಟೇ.

ಒಮ್ಮೆ ಅದೃಷ್ಟವಶಾತ್ ನಿಮ್ಮ ನಾಟಕಗಳನ್ನು ಸಮಗ್ರವಾಗಿ ಓದುವ ಸಂದರ್ಭ ನನಗೆ

ಒದಗಿ ಬಂತು. ನಾಟಕಗಳು ಯಾಕೆ ನನ್ನನ್ನು ಕಲಕಿದವು ಎಂಬ ಕುರಿತು ನಾನು ನಿಮಗೊಂದು ದೀರ್ಘ ಪತ್ರ ಬರೆದಿದ್ದೆ. ಸ್ವಲ್ಪ ದಿನಗಳ ನಂತರ ನೀವು ಗಂಗಾಸ್ವಾಮಿಯವರ ಕವಿತೆಗಳ ಬಿಡುಗಡೆಗಾಗಿ ಧಾರವಾಡಕ್ಕೆ ಬಂದಾಗ ಭೇಟಿಯಾದೆ. ನನ್ನ ಪತ್ರಕ್ಕೆ ತಿರುಗಿ ಉತ್ತರಿಸಲಿಲ್ಲವೆಂಬ ಕಾರಣಕ್ಕೆ ನೀವು ತುಂಬ ಮುಜುಗರ ಪಟ್ಟುಕೊಂಡಿರಿ. ಅಂದಿನ ನಿಮ್ಮ ಮಗುಸದೃಶ ಪ್ರಾಮಾಣಿಕ ಮುಖಭಾವ, ನನಗೆ ನಿಮ್ಮ ಬಗ್ಗೆ ಅಪಾರಗೌರವವನ್ನೂ ಅಂತಃಕರಣವನ್ನೂ ಹಿಡಿದುಕೊಟ್ಟಿತು ಸರ್. ನಂತರ ಛಂದಪುಸ್ತಕ ಹಸ್ತಪ್ರತಿ ಬಹುಮಾನ ಪಡೆದ ನನ್ನ 'ಪುಟ್ಟ ಪಾದದ ಗುರುತು' ಕಥಾ ಸಂಕಲನದ ಪ್ರಕಾಶಕ, ಸದಾ ಹೊಸ ದೃಷ್ಟಿಕೋನದಿಂದಲೇ ಯೋಚಿಸುವ ವಸುಧೇಂದ್ರ, ಸಭಾರೂಢರಾದ ನಿಮಗೆ ಮೊದಲ ಪ್ರತಿಯನ್ನು ಅರ್ಪಿಸುವ ಮೂಲಕ ಬಿಡುಗಡೆಗೊಳಿಸಿದ್ದರು. ಅಂದು ನೀವು ಖುತನ ಅದ್ಭುತ ರೇಖಾಚಿತ್ರದ ಒಂದು ಸುಂದರ ಸ್ಟ್ಯಾಂಡ್ ಕ್ಯಾಲೆಂಡರ್ ಕಾಣಿಕೆಯಾಗಿ ಕೊಟ್ಟರಿ. ನಿಮ್ಮ ಅಭಿಮಾನದ ಕುರುಹಾಗಿ ಅದಿನ್ನೂ ನನ್ನ ಮೇಜಿನ ಮೇಲಿದೆ.

ಸಂಚಯ ಕಾವ್ಯಸ್ಪರ್ಧೆಯ ಬೆನ್ನೆಲುಬಿನಂತಿರುವ ನೀವು ಮೂರು ವರ್ಷಗಳ ಕಾಲ ನನ್ನ ಕವಿತೆಗಳಿಗೆ ಬಹುಮಾನ ನೀಡಲು ಕಾರಣರಾಗಿ ನನ್ನಲ್ಲಿ ಆತ್ಮವಿಶ್ವಾಸ ಕೊನರಿಸಿದ್ದೀರಿ. ಸ್ಪರ್ಧೆಯ ತೀರ್ಪುಗಾರಿಕೆಯ ಬಗ್ಗೆ ಮಾತಾಡಲೂ ಕೂಡ ನಿಮಗೆ ಸಂಕೋಚ. ಹೊಸತು 'ಪರಿಮಳದ ಸುಗ್ಗಿ'ಗೆ ನನ್ನದೊಂದು ಕವಿತೆ ಆಯ್ದು, ಮಹಾವೀರ ಜೈನ್ ಕಾಲೇಜಿನ 'ತೆರೆದ ಬಾಗಿಲು' ಸಂಕಲನಕ್ಕೆ ಕಥೆ ಆರಿಸಿ, ನನ್ನ ಕಥಾ ಸಂಕಲನವನ್ನು ಈ ವರ್ಷದ ಸಾವಿತ್ರಮ್ಮ ದತ್ತಿನಿಧಿ ಬಹುಮಾನಕ್ಕೆ ಆಯ್ಕೆ ಮಾಡುವ ಮೂಲಕ ನನ್ನೊಳಗಿನ ಅಭಿವ್ಯಕ್ತಿ ಸ್ಫೂರ್ತಿಯನ್ನು ಹುರುಪನ್ನೂ ಹೆಚ್ಚಿಸಿದ್ದೀರಿ. ನೀವು ನನ್ನಂಥಹ ಹಲವಾರು ಹೊಸ ಬರಹಗಾರರ ತಾಯಿಬೇರು ಹಾಗೂ ಗಾಡ್‌ಫಾದರ್. ನೀವು ಸಂಯಮ ಹಾಗೂ ಕಳಕಳಿಯಿಂದ ಹಚ್ಚಿದ ಹಣತೆಗಳು ನನ್ನನ್ನೂ ಒಳಗೊಂಡು ರಾಜ್ಯಾದ್ಯಂತ ಅಲ್ಲಲ್ಲಿ ತಮ್ಮದೇ ಆದ ಚೌಕಟ್ಟಿನಲ್ಲಿ ನೆಮ್ಮದಿಯನ್ನು ಕಾಣುತ್ತಿದೆ.

ನೀವು ಕಳೆದ ವರ್ಷ ಇದ್ದಕ್ಕಿದ್ದಂತೆ ಒಂದಿನ ಫೋನ್ ಮಾಡಿ, 'ಎಷ್ಟಿವೆ ನಿಮ್ಮ ಕವಿತೆಗಳು?' ಅಂತ ವಿಚಾರಿಸುತ್ತ 'ಮೂವತ್ತು ಕವಿತೆಗಳಾದ ನಂತರ ನನಗೆ ಕಳುಹಿಸಿ' ಅಂದಿರಿ. ನನಗೆ ಹೃದಯವೇ ಬಾಯಿಗೆ ಬಂದಷ್ಟು ಖುಷಿಯಾಯ್ತು ಸರ್. ಅಂದು ಏನು ಉತ್ತರಿಸಬೇಕೆಂದೇ ತಿಳಿಯದೇ ಪದಗಳೇ ಸಿಗದಂತಾಗಿ 'ಆಯ್ತುಸಾರ್' ಅಂತಷ್ಟೇ ಹೇಳಿ ಫೋನಿಟ್ಟುಬಿಟ್ಟೆ. ಇಂಥ ದೊಂದು ಋಣಾನುಬಂಧದ ಅಯಸ್ಕಾಂತ ನಿಮ್ಮೊಡನಿದೆ ಸರ್. ಸಧ್ಯದಲ್ಲೇ ಹಸ್ತಪ್ರತಿ ಕಳುಹಿಸಿ ಕೊಡುವೆ. ನಿಮ್ಮ ಪ್ರೀತಿ ಮತ್ತು ಕಾಳಜಿಗಳು ನಮ್ಮೆಲ್ಲರನ್ನು ಹೀಗೆಯೇ ಬಹುಕಾಲ ಪೊರೆಯುತ್ತ ಕಾಪಿಡಲಿ. ನಿಮ್ಮ ಹುಟ್ಟುಹಬ್ಬದ ಈ ಸಂಪ್ರೀತಿಯ ಗಳಿಗೆಯಲ್ಲಿ ನಿಮ್ಮಿಂದ ಇನ್ನೂ ಹೊಸ ಹೊಸ ನಾಟಕಗಳು ಹುಟ್ಟಿಬರಲಿ ಎಂದು ಈ ಪತ್ರದ ಮೂಲಕ ನಾನು ಆಶಿಸುತ್ತಿದ್ದೇನೆ.

ನಿಮಗೆ ನೆನಪಿದೆಯಾ ಸರ್? ಗದುಗಿನಲ್ಲಿ ವಿಭಾ ಪುಸ್ತಕ ಬಿಡುಗಡೆಯಲ್ಲಿ ಭೇಟಿಯಾದಾಗ 'ಹುಬ್ಬಳ್ಳಿಗೆ ಬರುವ ಕೆಲಸವಿದೆ, ನಾನು ಮತ್ತು ಪ್ರಹ್ಲಾದ್ ಒಂದಿನ ಬರುತ್ತೇವೆ' ಅಂದಿದ್ದಿರಿ, ಆ ದಿನ ಎಂದು ಬರುತ್ತದೆ ಸರ್? ಆದರ ಹಾಗೂ ಅಕ್ಕರೆಯೊಂದಿಗೆ.

ನಿಮ್ಮ

*ಸುನಂದಾ ಪ್ರಕಾಶ ಕಡಮೆ*



# ಸೃಜನಶೀಲ ಬದುಕು

● ಆನಂದ ಋಗ್ವೇದಿ

ವರ್ತಮಾನದ ಸಾಹಿತ್ಯ ವಲಯದಲ್ಲಿ ಒಂದು ರೀತಿಯ ಅನಾಥತೆ ತಲೆದೋರಿದೆ. ವಿದ್ವತ್ ವಲಯದಲ್ಲಿ ಈ ಅಭಾವ ಪ್ರಜ್ಞೆ ಅಷ್ಟಾಗಿ ಇಲ್ಲದಿದ್ದರೂ ಸೃಜನಶೀಲ ಬರಹದ ವಲಯದಲ್ಲಿ ಇದು ಢಾಳಾಗಿ ಗೋಚರವಾಗುತ್ತಿದೆ. ಲಲಿತಕಲೆಗಳಾದ ಸಂಗೀತ, ನೃತ್ಯ, ಚಿತ್ರ, ಶಿಲ್ಪ ಮೊದಲಾದ ಕಲೆಗಳ ವಲಯದಲ್ಲಿ ಇಂದಿಗೂ ಗುರು-ಶಿಷ್ಯ ಪರಂಪರೆ ಮುಂದುವರಿದು ಬಂದಿದೆ. ಆದರೆ ಸೃಜನಶೀಲ ಬರಹಗಾರರದು ಪ್ರದರ್ಶನ ಕಲೆಯ ರೀತಿಯದ್ದಲ್ಲವಾದುದರಿಂದ, ಅವರೆಲ್ಲಾ 'ಸ್ವಯಂ'ಗಳೆಂದು ಭಾವಿಸುವುದು, ವರ್ತಿಸುವುದು ಸಾಧ್ಯವಾಗಿಬಿಟ್ಟಿದೆ. ಅಹಂಕಾರ ನೀಗಬೇಕಾದ ಬರವಣಿಗೆಯೇ ಅಹಂಕಾರವನ್ನು ಕಟ್ಟಿಕೊಡುತ್ತಿದೆಯೇ? ಎಂದು ಭಾವಿಸುವಂತಾಗಿದೆ. ಹಾಗೆಂದೇ ಎಲ್ಲಿಲ್ಲದ ಗುಂಪುಗಾರಿಕೆ, ಜಾತೀಕರಣ, ಪರಸ್ಪರರ ಬಗೆಗೆ ಅಗೌರವ, ಕೆಸರೆರಚಾಟ ಕಂಡುಬರುತ್ತಿದೆ. ಹಿರಿಯ ಲೇಖಕರೊಬ್ಬರು ಖೇದದಿಂದ ಹೇಳಿದಂತೆ "ಈ ಹೊತ್ತು ಬರಹಗಾರರು ಒಂದೆಡೆ ಸೇರಿದರೆ ಪರಸ್ಪರ ಪೈಪೋಟಿ ಇರುವ ಎಲ್.ಐ.ಸಿ. ಏಜೆಂಟರಂತೆ ವರ್ತಿಸುತ್ತಾರೆ!" ಎಂಬುದು ನಿಜಕ್ಕೂ ವಿಷಾದದ ಸಂಗತಿ. ಆತಂಕಕಾರಿ ಬೆಳವಣಿಗೆಯೂ ಹೌದಲ್ಲವೇ? ಇಂತಹ ಪೈಪೋಟಿಯ ಅಸಾಹಿತ್ಯಿಕ ವಾತಾವರಣದಲ್ಲೇ ನನ್ನ ತಲೆಮಾರಿನ ಎಲ್ಲಾ ಬರಹಗಾರ ಮಿತ್ರರು ಬರೆಯಲು ಶುರುವಿಟ್ಟದ್ದು. ಕೇವಲ ಸಾಹಿತ್ಯದ ಅಧ್ಯಾಪಕ ವಿದ್ಯಾರ್ಥಿಗಳಲ್ಲದೇ ಇಂದು ಎಲ್ಲಾ ರಂಗದಲ್ಲಿ ಔದ್ಯೋಗಿಕವಾಗಿ ತೊಡಗಿಕೊಂಡಿರುವ ನನ್ನ ಪೀಳಿಗೆಯ ಬರಹಗಾರರು ಈ ವಾತಾವರಣದಲ್ಲಿ ಹೆಚ್ಚು ಮುಕ್ತರಾಗಿದ್ದಾರೆ. ಆರೋಗ್ಯಕರ ಸಾಹಿತ್ಯಿಕ ಸಂಬಂಧಗಳನ್ನು ಇರಿಸಿಕೊಂಡಿದ್ದಾರೆ. ಎಂದರೆ; ಅಂತಹ ಸಾಂಸ್ಕೃತಿಕ ವಾತಾವರಣದ ನಿರ್ಮಾಣದ ಹಿನ್ನೆಲೆಯಲ್ಲಿ ನಮಗೆಲ್ಲಾ ನೆನಪಾಗುವ ಹೆಸರು ಪ್ರೊ. ಚಿ. ಶ್ರೀನಿವಾಸ ರಾಜು ನಾವೆಲ್ಲಾ ಪ್ರೀತಿಯಿಂದ ಕರೆಯುವ ರಾಜು ಮೇಷ್ಟ್ರು –



ಅವರದು. ಗುರುಶಿಷ್ಯ ಪರಂಪರೆಯೇ ಮಾಯವಾಗುತ್ತಿರುವ ಈ ಆಧುನಿಕ ಕಾಲದಲ್ಲಿ ಅಪಾರ ಸಂಖ್ಯೆಯಲ್ಲಿ ಏಕಲವ್ಯರನ್ನು ಗುರುತಿಸಿ ಬೆಳೆಸಿದ ಆದರೆ ಎಂದೂ ಪ್ರತಿಯಾಗಿ ಏನನ್ನೂ ಬಯಸದ – ಗುರು ಅವರು.

೧೯೯೪ರ ನೆನಪು. ಆಗಿನ್ನೂ ದಾವಣಗೆರೆಯ ವಿಜ್ಞಾನ ಕಾಲೇಜಿನ ಪದವಿ ವಿದ್ಯಾರ್ಥಿ ನಾನು. ಬರಹಗಾರ್ತಿ ಅಮ್ಮನ ಪ್ರೇರಣೆ, ನೆಂಟರಲ್ಲಿ ಬಹಳಷ್ಟು ಬರಹಗಾರರಿದ್ದರಿಂದ ಸಹಜವಾಗಿ ಒದಗಿಬಂದ ಸಾಹಿತ್ಯಿಕ ವಾತಾವರಣದಲ್ಲಿ ಬೆಳೆದರೂ ವಿಜ್ಞಾನದ ಕಲಿಕೆಯಲ್ಲಿ ತೊಡಗಿ ಬರಹದ ಸಹಜ ತುಡಿತದಿಂದ ವಿಮುಖನಾಗುತ್ತಿದ್ದೇನೇನೋ ! ಅಂತಹ ಹೊತ್ತಿನಲ್ಲಿ 'ಸಂಚಯ' ಸಾಹಿತ್ಯಿಕ ಪತ್ರಿಕೆಯ ಕಥಾಸ್ಪರ್ಧೆಯಲ್ಲಿ ನನ್ನ ಕತೆಗೆ ಬಹುಮಾನ ಬಂದಿತ್ತು ಬೆಂಗಳೂರಿಂದ. ಅಲ್ಲಿನ ಸಾಹಿತ್ಯಿಕ ಒಡನಾಟಗಳಿಂದ ತುಸು ದೂರವೇ ಇದ್ದ ನನಗೆ ಅದೊಂದು ಸಂಭ್ರಮ. ಹಾಗೆ ಆ ಬಹುಮಾನ ಪಡೆಯಲು ಬೆಂಗಳೂರಿಂದ ಬಂದ ಸಂದರ್ಭದಲ್ಲೇ ನಾನು ರಾಜುಮೇಷ್ಟ್ರನ್ನು ಮೊದಲ ಬಾರಿಗೆ ಭೇಟಿಯಾದೆ. ರವೀಂದ್ರ ಕಲಾಕ್ಷೇತ್ರದ ಮೊಗಸಾಲೆಯಲ್ಲಿ ಮೊದಲ ಸಲ ಕಂಡಾಗಲೇ ಅವರ ಅಕ್ಕರೆಸೂಸುವ ನಗೆ ಮೊಗದಲ್ಲಿ ನನ್ನ ಬೆನ್ನುತಟ್ಟಿ "ಇನ್ನೂ ಚೆನ್ನಾಗಿ ಬರೆಯಿರಿ" ಎಂದು ಪ್ರೋತ್ಸಾಹಿಸಿದವರು ಅವರು. ಆವರೆಗೆ ಬರಿಯ ಹೆಸರಷ್ಟೇ ಕೇಳಿದ್ದ, ಬರಹಗಳಿಂದ ತಿಳಿದಿದ್ದ ರಾಜುಮೇಷ್ಟ್ರು ತಟ್ಟನೇ ಆಪ್ತರಾದರು ಹತ್ತಿರದ ಬಂಧುಗಳಂತೆ.

ಈ ಪರಿಚಯದ ನಂತರವೇ ೧೯೯೫ರಲ್ಲಿ ಅವರ ನೇತೃತ್ವದ ಕ್ರೈಸ್ಟ್ ಕಾಲೇಜ್ ಕನ್ನಡ ಸಂಘದ ವಾರ್ಷಿಕ ವಿದ್ಯಾರ್ಥಿ ಬರಹ ಸ್ಪರ್ಧೆಗೆ ಅಳುಕುತ್ತಲೇ ನನ್ನ ಕವಿತೆಗಳನ್ನು ಕಳಿಸಿದ್ದೆ. ಬಹುಮಾನ ಘೋಷಿಸಿದಾಗ ನನ್ನಲ್ಲಿ ಆತ್ಮವಿಶ್ವಾಸ ತುಂಬಿದ ಭಾವ. ಜನವರಿ ೩೧ಕ್ಕೆ ಯಾವ ಯಾವ ಚಾರಿತ್ರಿಕ ಮಹತ್ವವಿದೆ ಎಂದರೂ ನಮಗದು ಕ್ರೈಸ್ಟ್ ಕಾಲೇಜು ಕನ್ನಡ ಸಂಘದ ದಿನ! ಬೇಂದ್ರೆ ನೆನಪಿನಲ್ಲಿ ಕೊಡಲಾಗುವ ಕವಿತೆಯ ಬಹುಮಾನ. ಅನಕೃ ನೆನಪಿನ ಲೇಖನ ಬಹುಮಾನ ಪಡೆದ ಗೆಳೆಯರ ದಂಡೇ ಅಲ್ಲಿ ಸೇರುತ್ತಿತ್ತು. ಆ ದಿನಗಳಲ್ಲಿ ಪ್ರತಿ ವರ್ಷವೂ ಬಹುಮಾನ ಪಡೆಯುತ್ತಿದ್ದ ಟಿ. ಎಲ್ಲಪ್ಪ, ವೆಂಕಟ್ರಮಣ ಗೌಡರಂತಹ ಕೆಲವರಿದ್ದಾರೆ. ಬಹುಮಾನ ಪಡೆಯಲೆಂದೇ ಶ್ರದ್ಧೆಯಿಂದ ಕವಿತೆ ಕಟ್ಟುತ್ತಿದ್ದ ಸಂದೀಪ ನಾಯಕ, ಫಾಲ್ಗುಣಗೌಡ ಮುಂತಾದವರೊಂದಿಗೆ ನಾನೂ ಸೇರಿಕೊಳ್ಳುತ್ತಿದ್ದ ಸುಂದರ ಸಂಜೆಗಳು ಅವು. ಅಂತಹ ಸಂಜೆ, ರಾಜೂ ಮೇಷ್ಟ್ರಿಗೆ ಅವರ ನೀಡಿಕೆಯ ಈ ಬಹುಮಾನಕ್ಕಾಗಿ ಕೃತಜ್ಞತೆ ಹೇಳಿದರೆ ಅವರು ಅದನ್ನು ನಯವಾಗಿ ನಿರಾಕರಿಸಿ 'ಇದೆಲ್ಲಾ ನಿಮ್ಮ ಪ್ರತಿಭೆಯ ಫಲ' ಎಂದು ಬಿಟ್ಟಿದ್ದರು! ಈ ಮಾತು ನಮಗೆಲ್ಲಾ ಕಟ್ಟಿಕೊಟ್ಟ ಜವಾಬ್ದಾರಿ, ಬರಹದ ಹೊಣೆಗಾರಿಕೆ ನನಗಂತೂ ಬಹುಮಹತ್ವದ್ದು.

ಕ್ರೈಸ್ಟ್ ಕಾಲೇಜು ಕನ್ನಡ ಸಂಘದ ಬಹುಮಾನ ವಿತರಣೆಯೂ ವಿಶಿಷ್ಟವಾಗಿರುತ್ತಿತ್ತು. ಒಮ್ಮೆ ಕಾಲೇಜು ಆವರಣದಲ್ಲಿ ಹುಲ್ಲುಹಾಸಿನ ಮೇಲೆ ಅದ್ದೂರಿ ಕಾರ್ಯಕ್ರಮವಾದರೆ, ಮತ್ತೊಮ್ಮೆಯದು ಹಿರಿಯ ಲೇಖಕರ ಮನೆಗಳಿಗೆ ಬಹುಮಾನಿತರ ತಂಡದ ಭೇಟಿ! ಪುತಿನ ಮನೆಗೆ ಹೋಗಿ ಅವರ ಕಿವಿಯಲ್ಲಿ ಕವಿತೆಯನ್ನು ಉಸುರಿಬಂದಿದ್ದ ಮಿತ್ರ ವಾಸುದೇವ ನಾಡಿಗ್ ರೋಮಾಂಚಿತನಾಗಿದ್ದರೆ ಹುಲ್ಲು ಹಾಸಿನ ಮೇಲೆ ಹಬ್ಬಕ್ಕೆ ಬಂದವರಂತೆ ಸೇರಿ

ನಾವು ಪರಸ್ಪರ ಬೆಳೆಸಿಕೊಂಡ 'ನಂಟು' ಆಪ್ಯಾಯಮಾನ. ಈ ಬಿಡದ ನಂಟಿಗೆ 'ಅಂಟು' ಹಾಕಿದ್ದವರು – ರಾಜೂ ಮೇಷ್ಟ್ರು.

ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಬಹುಮಾನಿತರ ಪಡೆ ದೊಡ್ಡದೇ. ಈ ಹೊತ್ತು ಕನ್ನಡದಲ್ಲಿ ಬರೆಯುತ್ತಿರುವ ಪ್ರಮುಖ ಯುವ ಬರಹಗಾರರಲ್ಲಿ ಬಹುತೇಕರು ಕ್ರೈಸ್ಟ್ ಕಾಲೇಜಿನ ಬಹುಮಾನಿತರೇ. ನನ್ನ ತಲೆಮಾರಿನ ಹಿರಿಯ ಅಬ್ದುಲ್ ರಶೀದ್‌ರಿಂದ ವಿಕ್ರಮ ವಿಸಾಜಿ, ವಿಭಾ ತಿರಕಪಾಡಿಯಂತಹ ಪ್ರತಿಭಾನ್ವಿತರವರೆಗೆ ಈ ಬೃಹತ್ ಪಡೆಯನ್ನು ನನ್ನ ಕೆಲವು ಗೆಳೆಯರು ಕ್ರೈಸ್ಟ್ ಕಾಲೇಜ್ ಕನ್ನಡ ಸಂಘದ ಹುಲ್ಲು ಹಾಸಿನ ಹುಡುಗರು – ಎಂದೇ ಕರೆಯುವುದು. ಬಹುಮಾನವಾಗಿ ನಾನು ಪಡೆದು ಒಯ್ಯುತ್ತಿದ್ದ ಪುಸ್ತಕಗಳಿಂದ ತೆರೆದುಕೊಂಡ ಅಕ್ಷರ ಲೋಕದ ವಿಸ್ಮಯಗಳು ಹಿರಿಯರೊಂದಿಗೆ ಭೇಟಿ–ಆ ಮೂಲಕ ಒಂದು ದೊಡ್ಡ ಪರಂಪರೆಯೊಂದಿಗೆ ಏರ್ಪಟ್ಟ ಅನುಸಂಧಾನ ಅವುಗಳ ಮೂಲಕ ನಮಗೆಲ್ಲಾ ಗುರು–ಶಿಷ್ಯ ಪರಂಪರೆಯನ್ನು ಕಟ್ಟಿಕೊಟ್ಟದ್ದು ರಾಜೂಮೇಷ್ಟ್ರ ವಿಶಿಷ್ಟತೆ. ಅದಕ್ಕೆ ಅವರಿಗೆ ನಾವೆಲ್ಲಾ ಅದೆಷ್ಟೋಪಟ್ಟು ಆಭಾರಿಗಳು.

ನಮ್ಮ ವಿದ್ಯಾಭ್ಯಾಸ ಮೊಟಕುಗೊಂಡು, ಈ ಔದ್ಯೋಗಿಕ ಪರಿಸರದಲ್ಲಿ ನಮ್ಮ ನಮ್ಮ ಅಸ್ಮಿತೆಯ ಹುಡುಕಾಟದಲ್ಲಿ ತೊಡಗಿದ್ದರೂ 'ಜನವರಿ ೩೧' ನಮ್ಮನ್ನು ಮತ್ತೆ ಮತ್ತೆ ಸೆಳೆಯುತ್ತಿತ್ತು. ಅಂದು ಹೇಗಾದರೂ (ಬಹುಮಾನಿತರಲ್ಲದಿದ್ದರೂ) ಕ್ರೈಸ್ಟ್ ಕಾಲೇಜಿಗೆ ಹೋಗಿ, ಬಹುಮಾನಿತರಾಗಿರುತ್ತಿದ್ದ ಗೆಳೆಯ / ಗೆಳತಿಯರೊಂದಿಗೆ ಹರಡಿ ಸಂಭ್ರಮಿಸಿ ಬರುವಷ್ಟು ನಂಟು ನನ್ನ ಬಹುತೇಕ ಗೆಳೆಯರದ್ದೂ ಆಗಿತ್ತು. ಅಷ್ಟೆಲ್ಲಾ ಹುಡುಗರೊಂದಿಗೆ ಪ್ರೀತಿಯ ಸಂಪರ್ಕ ಇರಿಸಿಕೊಂಡು, ಅದರಲ್ಲಿ ಬಹುತೇಕ ಮೊದಲ ಸಂಕಲನಗಳಿಗೆ ಕಾರಣರಾಗಿ ಪ್ರೇರಕರಾಗಿ ನಿಂತಿರುವ ರಾಜೂ ಮೇಷ್ಟ್ರು ಬಗೆಗೆ ಹೆಚ್ಚು ಹೇಳಿದರೆ ಕೃತಕವಾದೀತು.

ಈವರೆಗೆ ಎಲ್ಲಾ ಬಹುಮಾನಿತರನ್ನು ಒಂದೆಡೆ ಸೇರಿಸಿ, ಒಂದು ವಿಸ್ಮಯಕರ ಅಭಿನಂದನೆ ಸಲ್ಲಿಸಲು ಕನಸಿದ್ದು ಗೆಳತಿ ವಿಭಾ ಇಂದು ಆಕೆ ನಮ್ಮ ನಡುವೆ ಇಲ್ಲ. ತಾವು ಕೈಹಿಡಿದು ಎತ್ತಿ, ಬೆರಳ ಹಿಡಿದು ಬರವಣಿಗೆಯ ದಾರಿಯಲ್ಲಿ ನಡೆಸಿದ್ದ ಅದೇ ಅಕ್ಕರೆ ಮತ್ತು ಪ್ರೀತಿಯಿಂದ ಅವಳ 'ಜೀವ ಮಿಡಿತದ ಸದ್ದು'ವಿಗೆ ಸಂಕಟದ 'ಧ್ವನಿ' ನೀಡಿದ ರಾಜೂಮೇಷ್ಟ್ರಿಗೆ ನಾವೆಲ್ಲಾ ಕೃತಜ್ಞರು ಎಂದರೆ, ಆ ಭಾವುಕತೆಯನ್ನು ಪದಗಳಲ್ಲಿ ಹೇಳಿದಂತೆ ಆದೀತೇ? ನಮ್ಮ ಬರವಣಿಗೆಯ ಹಾದಿಯಲ್ಲಿ ಎದುರಾಗುವ ಖುಷಿ, ಸಂಭ್ರಮದ, ಸಾರ್ಥಕತೆಯ ಎಲ್ಲಾ ಕ್ಷಣಗಳೇ ನಾವು ಅವರಿಗೆ ಸಲ್ಲಿಸುವ ಕೃತಜ್ಞತೆ ಎಂದು ನಾನು ಭಾವಿಸಿದ್ದೇನೆ.

❑

# ನಮ್ಮೊಳಗಿನ ರಾಜುಮೇಷ್ಟ್ರು

● *ಆರ್. ವಸಂತ ಕುಮಾರ್*

"ಕನ್ನಡಿಗರು ಪುಸ್ತಕಗಳನ್ನು ಕೊಂಡುಕೊಂಡು ಓದಬೇಕು; ಕೊಂಡು ಕೊಂಡಾಡಬೇಕು" ಎಂಬ ಜಿ.ಪಿ. ರಾಜರತ್ನಂ ಅವರ ಮಾತನ್ನೇ ತಮ್ಮ ಜೀವನದ ಪರಮಧ್ಯೇಯವನ್ನಾಗಿಸಿಕೊಂಡ ಅವರ ಪ್ರಿಯ ಶಿಷ್ಯವೃಂದದಲ್ಲಿ ರಾಜು ಮೇಷ್ಟ್ರು ಪ್ರಮುಖರು. ಪೂಜ್ಯಗುರು ಜಿ.ಪಿ. ರಾಜರತ್ನಂರವರಿಂದ ಪುಸ್ತಕ ದೀಕ್ಷೆ ಪಡೆದ ರಾಜು ಮೇಷ್ಟ್ರು ತನ್ನ ಬದುಕಿನುದ್ದಕ್ಕೂ ಪುಸ್ತಕ ಸಂಸ್ಕೃತಿಯನ್ನು ಪಸರಿಸಲು ಅವಿರತವಾಗಿ ಶ್ರಮಿಸಿದವರು.

ಕ್ರೈಸ್ಟ್ ಕಾಲೇಜು ಕನ್ನಡ ಸಂಘ ರಾಜುಮೇಷ್ಟ್ರ ಕನಸಿನಕೂಸು. ಆ ಸಂಘದ ಮೂಲಕ ಪ್ರಕಟವಾದ ನೂರ ಎಂಭತ್ತಕ್ಕೂ ಹೆಚ್ಚು ಅಮೂಲ್ಯ ಕೃತಿಗಳು ರಾಜು ಮೇಷ್ಟ್ರು ಪ್ರೀತಿಯಿಂದಲೇ ಬಿತ್ತಿ ನೀರೆರೆದು ಬೆಳೆಸಿದ ಮರಗಳು. ಅಂತಹ ಮರಗಳಡಿಯಲ್ಲೇ ಅರಳಿದ ನೂರಾರು ಸೃಜನಶೀಲ ಪ್ರತಿಭೆಗಳು ಇಂದು ನಾಡಿನಾದ್ಯಂತ ಕನ್ನಡ ಸಾಹಿತ್ಯ ಸಾಂಸ್ಕೃತಿಕ ಲೋಕದಲ್ಲಿ ಆಳವಾಗಿ ಬೇರೂರಿ ತಮ್ಮದೆ ಆದ ವಿಶಿಷ್ಟ ಛಾಪು ಮೂಡಿಸಿವೆ.



ಸದ್ಯಕ್ಕೆ ರಾಜು ಮೇಷ್ಟ್ರು ತಮ್ಮ ಅಧ್ಯಾಪಕ ವೃತ್ತಿ ಬದುಕಿನಿಂದ ನಿವೃತ್ತರಾಗಿ ವಿಶ್ರಾಂತ ಜೀವನ ನಡೆಸುತ್ತಿದ್ದಾರೆ ಎಂದು ಅವರನ್ನು ದೂರದಿಂದ ಬಲ್ಲ ಬಹುಪಾಲು ಜನ ಭಾವಿಸಿರಬಹುದು. ಆದರೆ ಅವರು ಮೊದಲಿಗಿಂತ ಇನ್ನೂ ಕ್ರಿಯಾಶೀಲವಾಗಿ ತಮ್ಮನ್ನು ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರದ ಪ್ರಸರಣಕ್ರಿಯೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಎಲ್ಲವನ್ನೂ ತಾನೇ ಮಾಡಿ ಎಲೆಮರೆಕಾಯಿಯಂತೆ ಇರಲು ಬಯಸುವ ರಾಜುಮೇಷ್ಟ್ರು ಯಾರ ಹೊಗಳಿಕೆ ತೆಗಳಿಕೆಗೂ ವಿಚಲಿತರಾಗದ ಸಮಚಿತ್ತರು. ಇಂದಿಗೂ ಸಹ ಹಲವಾರು ಶಿಕ್ಷಣ ಸಂಸ್ಥೆಗಳಲ್ಲಿ, ಸಂಶೋಧನಾ ಕೇಂದ್ರಗಳಲ್ಲಿ ಅತಿಥಿ ಉಪನ್ಯಾಸಕರಾಗಿ ತಮ್ಮ ಅಮೂಲ್ಯ ಸೇವೆ ಸಲ್ಲಿಸುತ್ತಿದ್ದಾರೆ. ಇವರ ಕಾರ್ಯ

ತತ್ಪರತೆಯಿಂದ ಪ್ರೇರಣೆಗೊಂಡ ಕೆಲವು ಖಾಸಗಿ ಶಿಕ್ಷಣ ಸಂಸ್ಥೆಗಳು ತಮ್ಮ ಕಾಲೇಜುಗಳಲ್ಲೂ ಕನ್ನಡ ವೇದಿಕೆಯನ್ನು ಆರಂಭಿಸಿ ರಾಜು ಮೇಷ್ಟ್ರ ಮಾರ್ಗದರ್ಶನದಡಿಯಲ್ಲಿ ಪ್ರತಿವರ್ಷವು ಪುಸ್ತಕಗಳನ್ನು ಪ್ರಕಟಿಸುತ್ತ ಬಂದಿವೆ.

ಒಮ್ಮೊಮ್ಮೆ ರಾಜು ಮೇಷ್ಟ್ರು ಅವರ ಸಲಹೆ-ಸಹಕಾರಗಳ ಮೇರೆಗೆ ನಾವು ಕೈಗೊಳ್ಳುವ ಕೆಲಸಗಳು ಯಾವುದೋ ಕಾರಣಕ್ಕೆ ತಡವಾದರೆ ಆ ಬಗ್ಗೆ ನಮಗೆ ಅವರ ಬಳಿ ಹೇಳಿಕೊಳ್ಳಲು ಹಿಂಜರಿಕೆಯಾದಂತಹ ಹಲವಾರು ಸಂದರ್ಭಗಳಲ್ಲಿ ಸ್ವತಃ ಗುರುಗಳೇ ನೇರವಾಗಿ ಭೇಟಿಯಾಗಿ ಇಲ್ಲವೇ ದೂರವಾಣಿ ಮೂಲಕ ಸಂಪರ್ಕಿಸಿ ಮತ್ತೆ ಆ ಕಾರ್ಯ ಚುರುಕುಗೊಳ್ಳುವಂತೆ ನೋಡಿಕೊಳ್ಳುತ್ತಾರೆ. ರಾಜು ಮೇಷ್ಟ್ರು ತಮ್ಮ ವಿಶ್ರಾಂತ ಜೀವನದ ಈ ಸಮಯದಲ್ಲೂ ತಮ್ಮ ಎಂದಿನ ಯುವಹುರುಪಿನಿಂದಲೇ ಓಡಾಡುತ್ತ, ಸದಾ ಹಸನ್ಮುಖಿಯಾಗಿ ಪಾದರಸದಂತೆ ಇರುವುದನ್ನು ಕಂಡರೆ ನಮ್ಮಂತಹ ಯುವಪೀಳಿಗೆಯವರು ನಾಚಿನೀರಾಗಬೇಕು.

ರಾಜುಮೇಷ್ಟ್ರು ಅವರಲ್ಲಿನ ಮತ್ತೊಂದು ವಿಶಿಷ್ಟ ಗುಣವೆಂದರೆ ಪ್ರತಿಭಾ ಪ್ರೋತ್ಸಾಹ. ಇದನ್ನು ಅವರನ್ನು ಹತ್ತಿರದಿಂದ ಬಲ್ಲವರೆಲ್ಲರೂ ಒಪ್ಪಲೇಬೇಕಾದ ಮಾತು. ತಮ್ಮ ವಿದ್ಯಾರ್ಥಿಗಳಿಗೆ ಪಾಠ ಮಾಡುತ್ತಲೇ ಪಠ್ಯ ಅಥವಾ ಪಠ್ಯೇತರ ವಿಷಯಕ್ಕೆ ಸಂಬಂಧಿಸಿದಂತೆ ಹಲವಾರು ಪ್ರಶ್ನೆಗಳನ್ನು ಕೇಳುತ್ತ ಸಮರ್ಪಕವಾಗಿ ಉತ್ತರಿಸಿದವರಿಗೆ ಬಳುವಳಿ ರೂಪದಲ್ಲಿ ಪುಸ್ತಕಗಳನ್ನು ನೀಡುತ್ತಾರೆ. ಆ ಮುಖೇನ ವಿದ್ಯಾರ್ಥಿಗಳಲ್ಲಿ ಪುಸ್ತಕ ಪ್ರೀತಿ ಹೆಚ್ಚಿಸುವಲ್ಲಿ ಯಶಸ್ವಿಯಾಗಿದ್ದಾರೆ. ಅದಷ್ಟೇ ಅಲ್ಲದೆ ತಮ್ಮ ವಿದ್ಯಾರ್ಥಿಗಳಲ್ಲಿ ಸುಪ್ತವಾಗಿರುವ ಪ್ರತಿಭೆಗಳನ್ನು ಗುರ್ತಿಸಿ ಅವರಿಗೆ ಹೆಚ್ಚಿನ ಮಾರ್ಗದರ್ಶನ ನೀಡಿ ಸೂಕ್ತವಾದಂತಹ ಅವಕಾಶಗಳನ್ನು ಕಲ್ಪಿಸಿಕೊಡುತ್ತಾರೆ. ಈ ನಿಟ್ಟಿನಲ್ಲಿ ರಾಜುಮೇಷ್ಟ್ರು ಅವರಿಂದ ಪ್ರತಿಫಲ ಪಡೆದ ಫಲಾನುಭವಿಗಳಲ್ಲಿ ನಾನೊಬ್ಬ ಎಂಬುದು ನನ್ನ ಪಾಲಿನ ಪುಣ್ಯ. ಪ್ರತಿಯೊಬ್ಬ ಮೇಷ್ಟ್ರಿಗೂ ತಾನು ಒಬ್ಬ ಆದರ್ಶ ಶಿಕ್ಷಕನಾಗಬೇಕೆಂಬ ಆಸೆ ಇದ್ದೇ ಇರುತ್ತದೆ. ಅಂತಹವರೆಲ್ಲರಿಗೆ ರಾಜು ಮೇಷ್ಟ್ರು ಮಾದರಿಯಾಗಬಲ್ಲರು ಎನ್ನಲಡ್ಡಿಯಿಲ್ಲ.

ಕೊನೆಗೆ ನನ್ನ ಅನುಭವವೊಂದನ್ನು ತಿಳಿಸಲು ಇಚ್ಛಿಸುತ್ತೇನೆ. ಪ್ರತಿಯೊಬ್ಬ ಮನುಷ್ಯನಿಗೂ ನಾನಾ ಚಟಗಳಿರುವಂತೆ ನನಗೊಂದು ಸದ್‌ಚಟ ಅಭ್ಯಾಸವಾಗಿತ್ತು. ಅದೆಂದರೆ ಯಾರೇ ಗುರುಹಿರಿಯರು ಸಿಕ್ಕರೂ 'ನಮಸ್ಕಾರ ಸಾರ್, ಚೆನ್ನಾಗಿದ್ದೀರಾ' ಎಂಬುದು. ಇದು ಅವರುಗಳ ಮೇಲಿನ ಅಪಾರ ಗೌರವಭಾವದಿಂದಲೋ ಏನೋ ಹಾಗೇ ಕೇಳುವುದು ರೂಢಿಯಾಗಿತ್ತು. ಒಮ್ಮೆ ರಾಜು ಮೇಷ್ಟ್ರಿಗೆ ಅಪಘಾತ ಸಂಭವಿಸಿತ್ತು. ಆ ವಿಷಯ ನನಗೆ ತೀರ ತಡವಾಗಿಯೇ ತಿಳಿದರೂ ಅವರನ್ನು ಕಂಡು ನೋಡುವ ತವಕದಿಂದ ಜಯಂತ್ ಕಾಯ್ಕಿಣಿಯವರೊಂದಿಗೆ ಅವರ ಮನೆಗೆ ಹೋದೆನು. ಮನೆಯ ಮುಖ್ಯದ್ವಾರಕ್ಕೆ ಒರಗಿದಂತೆಯೇ ಇರುವ ಪಕ್ಕದ ಕೋಣೆಯಲ್ಲಿ ಗುರುಗಳು ಮಂಚದ ಮೇಲೆ ಮಲಗಿಕೊಂಡೆ ಬಸವರಾಜ್ ಕಲ್ಗುಡಿಯವರೊಂದಿಗೆ ಮಾತನಾಡುತ್ತಿದ್ದರು. ಆಕಸ್ಮಿಕವಾಗಿ ಆಗಮಿಸಿದ ಜಯಂತ್ ಸಾರ್ ಮತ್ತು ನನ್ನನ್ನು ಸಹಜ ಪ್ರೀತಿಯಿಂದಲೇ ಆಹ್ವಾನಿಸಿದ ಗುರುಗಳು ಅಲ್ಲಿಯೇ ಇದ್ದ ಕುರ್ಚಿಗಳ ಮೇಲೆ ಕೂರಲು ಹೇಳಿದರು. ನಾನು ಮಾತ್ರ ಕೂರುವ ಮುಂಚೆಯೇ ನನ್ನ ಅಭ್ಯಾಸಬಲದಿಂದ 'ನಮಸ್ಕಾರ

ಸಾರ್, ಚೆನ್ನಾಗಿದ್ದೀರಾ?' ಎಂದೆ. ಅದಕ್ಕುತ್ತರವಾಗಿ ಮೇಷ್ಟ್ರು "ನೋಡಪ್ಪಾ, ಹೀಗಿದ್ದೀನಿ" ಎನ್ನುತ್ತ ತಾವು ಹೊದ್ದಿದ ಬೆಡ್‌ಷೀಟ್ ತೆಗೆದು ತಮ್ಮ ಕಾಲಿಗೆ ಸುತ್ತಿದ್ದ ಬ್ಯಾಂಡೇಜ್ ತೋರಿಸಿದರು. ಆ ಕ್ಷಣಕ್ಕೆ ನನಗೆ ನನ್ನ ತಪ್ಪಿನ ಅರಿವಾಯಿತು. ಗುರುಗಳಿಗೆ ಅಪಘಾತ ಸಂಭವಿಸಿದ್ದು ತಿಳಿದು ಅವರನ್ನು ನೋಡಲು ಹೋದ ನಾನು ಕೇಳಿದ ಯೋಗಕ್ಷೇಮದ ಪ್ರಶ್ನೆ ಸ್ವತಃ ನನಗೆ ಇರುಸು ಮುರುಸು ಉಂಟು ಮಾಡಿತ್ತು. ಅಂದಿನಿಂದಾಚೆಗೆ ಸಮಯಪ್ರಜ್ಞೆಯಿಂದ ಮಾತನಾಡಲು ನಿರ್ಧರಿಸಿದೆನು. ರಾಜುಮೇಷ್ಟ್ರು ತಮ್ಮ ಸಹಜ ವರ್ತನೆಯಿಂದ ನನ್ನಲ್ಲಿನ ಸಮಯ ಪ್ರಜ್ಞೆಯನ್ನು ಎಚ್ಚರಿಸಿದರು. ಹೀಗೆ ನನ್ನಂತಹ ಸಾವಿರಾರು ವಿದ್ಯಾರ್ಥಿಗಳ ಪಾಲಿಗೆ ದಾರಿದೀವಿಗೆಯಾಗಿರುವ, ಪ್ರೇರಕ ಶಕ್ತಿಯಾಗಿರುವ ರಾಜುಮೇಷ್ಟ್ರಿಗೆ ಈ ಮೂಲಕ ಅಭಿನಂದನೆ ಸಲ್ಲಿಸುತ್ತೇನೆ.





# ರಾಜು ಮೇಷ್ಟ್ರು ಅಂದರೆ ಜೀವವೃಕ್ಷ

● ಎಲ್ಸಿ. ನಾಗರಾಜ್

ಕಾಡು ಮಲ್ಲೇಶ್ವರದ ಗುಡಿಗೆ ಹೋಗಿ ಅಲ್ಲಿನ ಪ್ರಾಚೀನತೆಯನ್ನು ಸವಿಯುತ್ತ ಕುಂತಿದ್ದು, ಅಲ್ಲಿಂದ ಶ್ರೀನಿವಾಸರಾಜು ಮೇಷ್ಟ್ರ ಮನೆಗೆ ಹೋಗುವುದು ನನಗೆ ಆಗ ವಾಡಿಕೆಯಂತಾಗಿ ಹೋಗಿತ್ತು. ಒಂದು ದಿನ ಮೇಷ್ಟ್ರ ಮನೆಯಲ್ಲಿ ಕುಳಿತಿದ್ದಾಗ ಮಳೆ ಶುರುವಾಯ್ತು. ಎಂದಿನಂತೆ ಮೇಷ್ಟ್ರು ಹೊಸ ಪುಸ್ತಕಗಳನ್ನು ತೋರಿಸಿದರು, ಕೊಟ್ಟರು, ಕಾಫಿ ಆಯ್ತು; ಎಲ್ಲ ಆದ ಮೇಲೂ ಮಳೆ ಸುರಿಯುತ್ತಲೇ ಇತ್ತು. ಮೇಷ್ಟ್ರು ದೊಡ್ಡಾಲದ ಮರ ಕುರಿತಂತೆ ತಾವು ಬರೆಯಬೇಕೆಂದಿದ್ದ ಒಂದು ಕಥಾನಕವನ್ನು ಹೇಳುತ್ತಿದ್ದರು. ಈಗದು ಸರಿಯಾಗಿ ನೆನಪಾಗುತ್ತಿಲ್ಲ. ಆದರೆ ದೊಡ್ಡಾಲದ ಬಗ್ಗೆ ಕೆಲವು ಕತೆಗಳನ್ನು ಕೇಳಿದ್ದ ನಾನು ಹಿಂತಿರುಗುತ್ತಾ ಅವೆಲ್ಲವನ್ನೂ ಒಟ್ಟಿಗೆ ಕಟ್ಟಿಕೊಳ್ಳತೊಡಗಿದೆ.

ಒಬ್ಬ ರೈತ ತನ್ನ ಸುಗ್ಗಿ ಕಣದ ನಡುವೆ ಮೇಟಿ ನೆಡುತ್ತಾನೆ. ಚಿಗುರಿದ ಮೇಟಿಯನ್ನು ಕಿತ್ತುಹಾಕಲು ಒಲ್ಲದೆ ತನ್ನ ಸುಗ್ಗಿಯ ಸ್ಥಳವನ್ನೇ ಬದಲಾಯಿಸುತ್ತಾನೆ. ಕಾಲಕ್ರಮೇಣ ಆಲದ ಮರ ಬೆಳೆದು, ಬೀಳಲು ಬಿಡುತ್ತವೆ; ಗುರುತ್ವಾಕರ್ಷಣವನ್ನು ಧಿಕ್ಕರಿಸಿ ನಿಲ್ಲುವ ಕೆಲವೇ ಮರಗಳ ಪೈಕಿ ಆಲ ಕೂಡ ಒಂದು. ಈ ರೈತ ಜೀವನ ಚಿಗುರನ್ನು

ಗೌರವಿಸುವವನು, ಗಾಳಿ ನೋವಿಗೆದುರು ತಲೆ ಎತ್ತಿ ನಿಲ್ಲುವ ಮರವನ್ನೇ ಜೀವವೃಕ್ಷವಾಗಿ ಕಂಡವನು. ಈ ವೃಕ್ಷಕ್ಕೆ ಹಲವಾರು ಪಕ್ಷಿಗಳು ಬರುತ್ತವೆ. ಗೂಡು ಕಟ್ಟಿಕೊಳ್ಳುತ್ತವೆ.

ರಾಜು ಮೇಷ್ಟ್ರು ಮನಸಿಗೆ ಬಂದಾಗಲೆಲ್ಲ ನನಗೆ ಅನಿಸುತ್ತದೆ. ಅವರೊಂದು 'ಜೀವವೃಕ್ಷ' ಅಂತ. ಕಾವ್ಯ ಅವರ ಆಧ್ಯಾತ್ಮಿಕತೆ. ಜೀವವೃಕ್ಷ ಗುರುತ್ವಾಕರ್ಷಣವನ್ನು ಧಿಕ್ಕರಿಸಿ ಗಾಳಿನೋವಿಗೆದುರು ತಲೆಯೆತ್ತಿ ನಿಲ್ಲುತ್ತದೆ ಅಂದೆ; ಅವರು ಧಿಕ್ಕರಿಸಿ ನಿಂತದ್ದು ಈ ಕಾಲದ ಗುರುತ್ವಾಕರ್ಷವಾಗಿಬಿಟ್ಟಿರುವ ವ್ಯಾವಹಾರಿಕ ಬದುಕನ್ನ. ಮೊದಮೊದಲಿಗೆ ಕಾಡು ಮಲ್ಲೇಶ್ವರನ ಗುಡಿಯ ಪ್ರಾಚೀನತೆ ಸವಿಯಲು ಹೋಗುತ್ತಿದ್ದವನು, ನಂತರದ ದಿನಗಳಲ್ಲಿ ಮೊದಲು ರಾಜು ಮೇಷ್ಟ್ರ ಮನೆಗೆ ಹೋಗಿ ನಂತರ ಕಾಡು ಮಲ್ಲೇಶ್ವರನ ಗುಡಿ ಹತ್ತಿರ ಕುಳಿತು ಕತ್ತಲಾಗುವುದನ್ನ ನೋಡುತ್ತಿದ್ದೆ. ಮೊದಲು ರಾಜು ಮೇಷ್ಟ್ರ ಮನೆ, ಕಾವ್ಯದ ಹೊಸ ಪುಸ್ತಕಗಳು, ಕಾಫಿ ನಂತರ ಕಾಡು ಮಲ್ಲೇಶ್ವರನ ಗುಡಿಯ ಹತ್ತಿರ ಮಿಣಕುತ್ತಿದ್ದ ಹುಳುಗಳು. ರಾಜು ಮೇಷ್ಟ್ರ ಮನೆಯಿಂದ ಹಿಂತಿರುಗುವಾಗ್ಗೆ ಮನಸ್ಸು ಒಂದು ತರ ತುಂಬಿಬರುತ್ತಿತ್ತು. ಕಾಡು ಮಲ್ಲೇಶ್ವರನ ಗುಡಿ ಹತ್ತಿರ ಕತ್ತಲಾಗುತ್ತ ಅದು ಕಾವ್ಯಮಯವಾಗುತಿತ್ತು. ಹೀಗೆ ಒಂದು ದಿನ ರೂಮಿಗೆ ಹಿಂತಿರುಗಿದಾಗ ಚಿಲಕದಲ್ಲಿ ಒಂದು ಬರ್ಕ್‌ಲೀ ಸಿಗರೇಟ್ ಪ್ಯಾಕಿನ ಜಾಹಿರಾತಿನ ತುಂಡನ್ನ ಸಿಗಿಸಲಾಗಿತ್ತು. ತೆರೆದು ನೋಡಿದೆ, 'taste the spirit of freedom" ಅಂತಾ ಇತ್ತು. ಕಿ.ರಂ. ನಾಗರಾಜ್ ಮೇಷ್ಟ್ರು ಬಂದಿದಾರೆ, ಇಲ್ಲೇ ಎಲ್ಲೋ ೮ನೇ ಕ್ರಾಸಿನ ಹತ್ತಿರ ತಿರುಗಾಡುತ್ತ ಹುರಿಗಡಲೆಯ ವೈವಿಧ್ಯತೆ ಬಗ್ಗೆ ಅಧ್ಯಯನ ನಡೆಸುತ್ತಿದ್ದಾರೆ ಅಂದುಕೊಳ್ಳುತ್ತಾ ಅಲ್ಲಿಗೆ ಹೋದರೆ ಕಿ.ರಂ. ಅಲ್ಲಿ ಅದನ್ನೇ ಮಾಡುತ್ತಾ ಇದ್ದರು. ಮುಸ್ಸಂಜೆಗೆ ರಾಜುಮೇಷ್ಟ್ರಮನೆ. ಕತ್ತಲಾದ ನಂತರ ಕಿ.ರಂ. ನಾಗರಾಜ್ ಮೇಷ್ಟ್ರು ಜೊತೆ ಅನಾರ್ಕಿಕ್ ಜೀವನ ; ಲೀಲಾಜಾಲವಾಗಿ ಕಾವ್ಯವನ್ನು ಪುಸ್ತಕವಿಲ್ಲದೆ ಓದುತ್ತಾ ವಿವರಿಸುತ್ತಿದ್ದ ಬಗೆ ಹೊಸಲೋಕವೊಂದನ್ನ ತೋರಿದಂತಿರುತ್ತಿತ್ತು. ಜೀವನ ತುಂಬಾ ಸೊಗಸಾಗಿ ಕಾಣಿಸುತ್ತಿತ್ತು.

'ಹೇಯ್ ನಾನು hedonist ಕಣಯ್ಯ' ಅನ್ನುತ್ತಿದ್ದರು ಕಿ.ರಂ. ಈಗ ನನಗನ್ನಿಸುತ್ತದೆ ಕಿ.ರಂ ಒಂಥರಾ ethical hedonist. ರಾಜು ಮೇಷ್ಟ್ರರದು creative engagement ಮತ್ತು ಗುರುತ್ವಾಕರ್ಷವನ್ನ ಧಿಕ್ಕರಿಸಿ ನಿಲ್ಲುವ ಗುಣ. ವರ್ಷಕ್ಕೊಮ್ಮೆ ಸಾಂಕೇತಿಕ ರಾಜ್ಯೋತ್ಸವ ಮಾಡಿ ಬೆಳಕನ್ನ ಪೋಲು ಮಾಡುವ populist ಕನ್ನಡ ರಾಷ್ಟ್ರೀಯವಾದಿಗಳ ಪೊಳ್ಳುತನವನ್ನು ಕಾವ್ಯದ ಮನಸುಗಳನ್ನ ಕಟ್ಟುವ creative engagement ಮೂಲಕ ಧಿಕ್ಕರಿಸುವ ಗುಣ. ಕನ್ನಡ ನಾಡಿನ ಕಾವ್ಯದ ಜೀವಂತಿಕೆಯಿಂದ ಕಟ್ಟುವ ಜೀವವೃಕ್ಷ ಧರ್ಮ. ಕಾವ್ಯ ಕಟ್ಟುವ ಎಳೆ ಮನಸುಗಳನ್ನು ಉತ್ತೇಜಿಸುವ, ಸಲಹುವ, ನಗುಮುಖದಿಂದ ನೋವನ್ನು ಮರೆಸುವ ಜೀವಧರ್ಮವಿದೆ.

* * * *

ರಾಜು ಮೇಷ್ಟ್ರನ್ನ ನಾನು ಮೊದಲಿಗೆ ಕಂಡದ್ದು ಗವೀಪುರದಲ್ಲಿದ್ದ ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ. ಅಲ್ಲಿ ಆಗಾಗ ಕವಿಗಳ ಕಾವ್ಯಾಭಾರವಿರುತ್ತಿತ್ತು. ಹಿರಿಯ ಜೀವ ಎಂ.ವಿ. ಸೀತಾರಾಮಯ್ಯನವರು ಇದರ ರೂವಾರಿ. ಎಳೆಯರನ್ನ ಕರೆಸಿ ಪದ್ಯ ಓದಿಸಿ ಕೇಳಿಸಿಕೊಳ್ಳುತ್ತಾ ಕುಳಿತಿರುತ್ತಿದ್ದರು.

ಗೆಳೆಯ ಜಿ.ಎನ್. ಮೋಹನ್ ನನ್ನ ಅಲ್ಲಿಗೆ ಕರೆದುಕೊಂಡು ಹೋಗುತ್ತಿದ್ದ. ಆವತ್ತು ಮೇಷ್ಟ್ರನ್ನ ದೂರದಿಂದ ನೋಡಿದ ನೆನಪು ನನಗೆ. ನಾವು ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಕಾವ್ಯಸ್ಪರ್ಧೆಯ ಅಭ್ಯರ್ಥಿಗಳಾಗಿದ್ದರಿಂದ ಮಾತನಾಡಿಸಲು ಸಂಕೋಚಪಟ್ಟುಕೊಂಡೆ; Modesty ಅಡ್ಡಬಂದು ನಿಂತಿತ್ತು. ಕನ್ನಡ ಸಂಘದ ಕಾವ್ಯ ಸ್ಪರ್ಧೆಯಲ್ಲಿ ನನ್ನ ಪದ್ಯ ಆಯ್ಕೆಯಾಗುವ ಬಗ್ಗೆ ನನಗೆ ನಂಬಿಕೆಯಿರಲಿಲ್ಲ. ಆದರೆ ನನ್ನ ಪದ್ಯ, ಜಿ.ಎನ್. ಮೋಹನ್ ಪದ್ಯ ಆಯ್ಕೆಯಾಗಿದ್ದವು.

ಒಂದು ದಿನ ಏನಕ್ಕೋ ಸೆಂಟ್ರಲ್ ಕಾಲೇಜಿನ ಹತ್ತಿರ ಹೋಗಿದ್ದಾಗ ಡಾ. ಹೆಚ್. ಎಸ್. ರಾಘವೇಂದ್ರರಾವ್ ಸಿಕ್ಕರು. ನನಗೆ ಸಾಹಿತಿಗಳು, ವಿಮರ್ಶಕರು ಅಂದರೆ ಗೌರವಪೂರ್ವಕ ದಿಗಿಲು. ಗೆಳೆಯ ಮೋಹನ ನನ್ನ ಪರಿಚಯಮಾಡಿಕೊಟ್ಟ; ಹೆಚ್.ಎಸ್.ಆರ್. ಮೇಷ್ಟ್ರು ಪ್ರೀತಿಯಿಂದ ಮಾತನಾಡಿಸಿದರು. ಆಯ್ಕೆಯಾಗಿರುವ ನಮ್ಮ ಪದ್ಯಗಳ ಬಗ್ಗೆ ಹೇಳಿದರು. ಒಬ್ಬರು ಪ್ರೊಫೆಸರ್ ಸಾಹಿತ್ಯ ವಿಮರ್ಶಕರು ಅಷ್ಟು ಸಜ್ಜನಿಕೆ, ಪ್ರೀತಿಯಿಂದ ಮಾತನಾಡುತ್ತಾರೆ ಅಂತಾ ನಾನು ನಿರೀಕ್ಷಿಸಿರಲಿಲ್ಲ. ಮುಂದೆ ನಾನು ಸಾರಕ್ಕಿಯಲ್ಲಿದ್ದ ಹೆಚ್.ಎಸ್.ಆರ್. ಅವರ ಮನೆಗೆ ಹೋಗಲು ಪ್ರಾರಂಭಿಸಿದೆ. ಒಂದು ದಿನ ಅವರ ಮನೆಯ ಕಿಟಕಿಯಿಂದ ಹೊರಗೆ ನೋಡುತ್ತ 'ಸಾರ್ ಹೊಲ' ಅಂದೆ. ಬೆಂಗಳೂರಿನ ಒಂದು ಮನೆಯ ಕಿಟಕಿಯಿಂದ ಹೊಲ, ಹೊಲದಲ್ಲಿ ಕೆಲಸ ಮಾಡುತ್ತಿದ್ದ ರೈತರನ್ನು ಕಂಡದ್ದು ಅದೇ ಮೊದಲು, ಅದೇ ಕೊನೆ.

ನಿರೀಕ್ಷಿಸಿದ ಆ ದಿನ ಬಂತು. ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಕಾವ್ಯದ ಸ್ಪರ್ಧೆಯಲ್ಲಿ ಆಯ್ಕೆಯಾಗಿದ್ದ ವಿದ್ಯಾರ್ಥಿಗಳನ್ನು ಬರಮಾಡಿಕೊಳ್ಳಲು ರಾಜು ಮೇಷ್ಟ್ರು ತಮ್ಮ ವಿದ್ಯಾರ್ಥಿ ಎಂ.ಎಸ್. ಭರತೇಶ್‌ಗೆ ಜವಾಬ್ದಾರಿ ವಹಿಸಿದ್ದರು. ಭರತೇಶ್, ರಷೀದ್ ಆಗ ಗೆಳೆಯರಾದವರು. ರಷೀದ್, ಭರತ್ ಮತ್ತು ನನ್ನ ಗೆಳೆತನ ಗಾಢವಾಗುತ್ತಾ ಹೋಯ್ತು. ರಷೀದ್ ಜೊತೆ ಒಂದೆರಡು ದಿನ ಇದ್ದು ಮೈಸೂರು ಅಲೆದಾಡಿ ಬೆಂಗಳೂರಿನ ಬಸ್ಸು ಹತ್ತಿ ಕುಂತರೆ ರಷೀದನ ಕಣ್ಣಲ್ಲಿ, ನನ್ನ ಕಣ್ಣಲ್ಲಿ ನೀರು ತುಂಬಿಕೊಳ್ಳುತ್ತಿತ್ತು. ನನಗೆ ಹೇಳದೇ ಭರತ್ ಮೈಸೂರಿಗೆ ಹೋಗಿ ಬಂದರೆ ನನ್ನ ಬಿಟ್ಟು ಹೋದ ಬಗ್ಗೆ ನೊಂದುಕೊಳ್ಳುತ್ತಿದ್ದೆ ಅಥವಾ ಹೊಟ್ಟೆಕಿಚ್ಚು ಪಟ್ಟುಕೊಳ್ಳುತ್ತಿದ್ದೆ. ರಾಜು ಮೇಷ್ಟರು ಕಟ್ಟಿರುವ ಗಾಢವಾದ ಗೆಳೆತನದ ಇಂಥ ಸೇತುವೆಗಳು ನಾಡಿನಾದ್ಯಂತ ಬಹಳಷ್ಟಿವೆ.

ಆ ದಿನ ಕ್ರೈಸ್ಟ್ ಕಾಲೇಜಿನಲ್ಲಿ ಹಬ್ಬದ ಸಡಗರ – ಹೊಸ ಗೆಳೆತನಗಳ ಸಂಭ್ರಮ – ಅದು ಕಾವ್ಯದ, ಹೊಸ ಸೇತುವೆಗಳ ಸಂಭ್ರಮ. ಕೈತುಂಬಾ ಪುಸ್ತಕಗಳನ್ನು ಕೊಟ್ಟು, ಕಾಫಿ ತಿಂಡಿಕೊಟ್ಟು ಸತ್ಕರಿಸಿದರು. ರಾಜು ಮೇಷ್ಟ್ರು ಗಡಿಬಿಡಿನಡುವೆ ಕೂಡ ಪ್ರತಿಯೊಬ್ಬರನ್ನು ಮಾತನಾಡಿಸಿದರು. ನಾವು ಒಬ್ಬರಿಗೊಬ್ಬರು ಗೆಳೆಯರಾಗಿ ಅಲ್ಲಿಂದ ಹಿಂತಿರುಗುತ್ತಿದ್ದೆವು. ಇದಾದ ಮೇಲೆ ಮತ್ತೆ ಒಂದು ವರ್ಷ ನನ್ನ ಪದ್ಯಗಳು ಆಯ್ಕೆಯಾಗಿದ್ದವು. ಸತತವಾಗಿ ಆಯ್ಕೆಯಾಗಿ 'ಹ್ಯಾಟ್ರಿಕ್' ಎನಿಸಿಕೊಂಡವರಿದ್ದಾರೆ. ಅದರಲ್ಲಿ ಅಬ್ದುಲ್ ರಷೀದ್ ಕೂಡ ಒಬ್ಬರು. ಮುಂದೆ ನಾನು ಪದ್ಯಗಳನ್ನು ಕಳಿಸಲಿಲ್ಲ, ಆದರೆ ರಾಜು ಮೇಷ್ಟ್ರ ಮನೆಗೆ ಮತ್ತು ಕಾಡು ಮಲ್ಲೇಶ್ವರನ ಗುಡಿಗೆ ಎಡತಾಕಲು ಶುರುಮಾಡಿಕೊಂಡೆ. ಒಂದು NGO ನಲ್ಲಿ ಕೆಲಸಮಾಡುತ್ತಿದ್ದೆ. ರಾಜುಮೇಷ್ಟ್ರು ಕ್ರೈಸ್ಟ್ ಕಾಲೇಜಿನಲ್ಲಿ ಹಿರೋಷಿಮಾ ನಾಗಸಾಕಿ ಬಗ್ಗೆ

ಒಂದು documentary film ಪ್ರದರ್ಶಿಸಲು ಕರೆದಿದ್ದರು. ಆಗ ನನಗೆ ಪರಿಚಯವಾದ ಹೆಚ್.ಆರ್. ರಾಮಕೃಷ್ಣರಾವ್ ಭೌತಶಾಸ್ತ್ರದ ಮೇಷ್ಟ್ರು. ಕನ್ನಡ ಸಂಘದ ಕಛೇರಿಯಲ್ಲಿ ನಾನು ಅವರ ಮುಂದೆ ಕುಂತು Science is an evil ಅಂತಾ ಮಾತಾಡತೊಡಗಿದೆ. ನಾನು ಜಗ್ಗುತ್ತಿದ್ದದ್ದು applied Scienceನ. ಆದರೆ Pure science ಬಗ್ಗೆ ಖಚಿತ ಗೌರವವಿದ್ದ HRK ನನ್ನ ವಿರೋಧಗಳನ್ನ ಒಪ್ಪಲಿಲ್ಲ. ರಾಜುಮೇಷ್ಟ್ರು ಇಂತಹದೊಂದು ಚರ್ಚೆಗೆ ಅವಕಾಶ ಕಲ್ಪಿಸುತ್ತಿದ್ದಾರೆ ಅಂತಾ ಖುಷಿಯಾಗುತ್ತಿತ್ತು.

ಚಾರ್ಲ್ಸ್ ಡಿಕನ್‌ಸನ್‌ನ ಕತೆಗಳನ್ನು ಓದಿಕೊಂಡು ನನ್ನ ಮನಸ್ಸು ಒಂಥರಾ Romantic ecologyಯ ಗುಂಗಿನಲ್ಲಿ, ಕಾಡು ಮಲ್ಲೇಶ್ವರನ ಗುಡಿಯ ವ್ಯಾಮೋಹ ಕಾಡಿನ ಕಡೆಗೆ, ಕಾಡಿನಲ್ಲಿ ವಾಸಿಸುವ Goldy creatures ಕಡೆಗೆ ತಿರುಗಿತು. ಆದರೆ ಆಗ ರಾಜು ಮೇಷ್ಟ್ರ ಮನೆಗೆ ಹೋಗುತ್ತಿದ್ದೆ.

ಒಂದು ಯುಗಾದಿ ಕವಿಗೋಷ್ಠಿ ಅನ್ನಿಸುತ್ತೆ, ಅದು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿತ್ತು. ಆವತ್ತು ರಾಜುಮೇಷ್ಟ್ರು ನನ್ನ ಪರಿಚಯಿಸುತ್ತ ಸದಾ ಒಂದಲ್ಲ ಒಂದು ಗುಂಗಿನಲ್ಲಿರುತ್ತಾರೆ ಅಂದರು. ಅದು ಒಬ್ಬ ತುಂಟ ಕವಿಗೆ 'ಸದಾ ಒಂದಲ್ಲ ಒಂದು ಗುಂಡಿನಲ್ಲಿರುತ್ತಾನೆ' ಅಂತಾ ಕೇಳಿಸಿ ತುಂಬಾದಿನಗಳ ಕಾಲ ನನ್ನ ರೇಗಿಸುತ್ತಿದ್ದ. ಇದನ್ನ ಒಂದು ದಿನ ರಾಜು ಮೇಷ್ಟ್ರಿಗೆ ಹೇಳಿದೆ, ತುಂಬಾ ನಕ್ಕರು.

ರಾಜುಮೇಷ್ಟ್ರ ಮನೆ 'ಚಿರಂಜೀವಿ'ಯದು ಆಹ್ಲಾದಕರ ವಾತಾವರಣ. ಎಂತಹ ನರಕವನ್ನು Freeze ಮಾಡುವಂತ ಅವರ ಜೀವನ ಸಂಗಾತಿಯ ನಿಷ್ಕಲ್ಮಶ ನಗು, ಸುಗತ, ಋತ ಇಬ್ಬರು ಕ್ರಿಯಾಶೀಲ ಮಕ್ಕಳು. ಮನೆಯ ಮುಂದೆ ಹಬ್ಬಿದ ಹೂಬಳ್ಳಿಗಳು ಆ ಮನೆಯ ಮನಸ್ಸನ್ನ ತೋರುತ್ತಿದ್ದವು. ಆ ಮನೆಯ ಗೋಡೆಗೆ ನೇತುಹಾಕಿದ್ದ ಕ್ರೌಂಚವಧೆ-ವಿರಹದ ಪೇಂಟಿಂಗ್ ನನ್ನ ಈಗಲೂ ಕಾಡುತ್ತಿದೆ. ನಾನು ತೋಟಮಾಡುವ ಆಸೆ ಹೊತ್ತು ನನ್ನ ಕುಟುಂಬದ ಭೂಮಿಗೆ ಮರಳಿದೆ. ತುಂಬಾ ವರ್ಷಗಳ ಕಾಲ ರಾಜು ಮೇಷ್ಟ್ರನ್ನ ನೋಡಲಾಗಲಿಲ್ಲ. ಏನೋ ತಪ್ಪು ಮಾಡಿದಂತೆ ಅಳುಕಾಗುತ್ತವೆ. ಇಂತ ಎಷ್ಟು ಅಳುಕುಗಳನ್ನ ಹೊತ್ತುಕೊಂಡು ಈ ಜೀವನ ಅನಿಸುತ್ತದೆ. ಮೇಷ್ಟ್ರ ಆ ಪ್ರೀತಿಗೆ ನಾವೇನು ಬೆಲೆ ಕಟ್ಟಬಲ್ಲೆವು? ಈ ಜೀವಕ್ಕೆ ಆ ಕಾಡು ಮಲ್ಲಿಕಾರ್ಜುನ ತುಂಬು ಬಾಳು ಬದುಕುವ ಚೈತನ್ಯ ಕೊಡಲಿ. ಈ ನಗರದ ನರಕಗಳನ್ನು Freeze ಮಾಡುವ ಅವರ ನಗು ಎಂದೆಂದಿಗೂ ನಮ್ಮ ನಡುವೆ ಇರುವಂತಾಗಲಿ. ವಿವಿಧ ಭಾಗಗಳ ಕವಿಗಳ ಮೂಲಕ ಕನ್ನಡ ನಾಡನ್ನ ಭಾವಿಸಿದ ರಾಜು ಮೇಷ್ಟ್ರು ನಮಗೊಂದು ಪರಂಪರೆಯನ್ನ ಕಟ್ಟಿಕೊಟ್ಟಿದ್ದಾರೆ; ಕಾವ್ಯದಿಂದ ಅರಳುವ ಎಳೆ ಮನಸುಗಳನ್ನ ಆದರಿಸುವ ಪರಂಪರೆ. ಸೇತುವೆ ಕಟ್ಟಿದ್ದಾರೆ – ಅದು ಗೆಳೆತನದ, ಕಾವ್ಯ ಸಾಂಗತ್ಯದ ಸೇತುವೆ.

ಅಧ್ವಾನವೆದ್ದು ಹೋಗುತ್ತಿರುವ ಈ ಜಗತ್ತಿನ ಕಟು ವಾಸ್ತವಿಕತೆಗಳಿಗೆ ಮುಖಾಮುಖಿ ಯಾದಾಗ ನನಗೆ ತೋಟದ ಗೀಳು ಹತ್ತಿಕೊಂಡಿದೆ. ನಾನೊಂದು ತೋಟ ಮಾಡಬೇಕು, ನಶಿಸಿಹೋಗುತ್ತಿರುವ ಗಿಡಗಳು, ಪಕ್ಷಿಗಳೆಲ್ಲ ಆ ತೋಟದಲ್ಲಿರಬೇಕು. ತೋಟದಲ್ಲಿ ನಾಡಿನ ಎಲ್ಲ ಕವಿಗಳು ಸೇರಿ ಮಾತಾಡುವಂತಾಗಬೇಕು. ರಾಜು ಮೇಷ್ಟ್ರನ್ನ ಕೆಲವರು apolitical

ಅಂತಾ ಭಾವಿಸಿದ್ದಿದೆ, ಅದು ನನ್ನ ಕಿವಿಗೂ ಬಿದ್ದಿದೆ. ಆದರೆ ರಾಜು ಮೇಷ್ಟ್ರು ಮನೆಯಲ್ಲಿರುವ ಕ್ರೌಂಚವಧೆ ವಿರಹದ ಪೇಂಟಿಂಗ್ ನೋಡಿದಾಗ ಮೇಷ್ಟ್ರು ಮಾರ್ಮಿಕವಾದ ಏನನ್ನೋ ಸೂಚಿಸುತ್ತಿದ್ದಾರೆ ಅನಿಸುತ್ತದೆ. ಯಾಕೆ ಅಂದ್ರೆ ಒಂದು ಪಕ್ಷಿವಧೆ ಮಾಡಿದ ವಾಲ್ಮೀಕಿಗೆ ಅಷ್ಟು ಪಶ್ಚಾತ್ತಾಪ ಆಗಿದ್ದರೆ ಲಕ್ಷಾಂತರ ಪಕ್ಷಿಗಳು, ಸಸ್ಯ ಪ್ರಭೇದಗಳು ಕೊನೆಗೆ ಬಸುರನ್ನೂ ಬಿಡದೆ ಹುಡುಕಿ ಅಲ್ಲಿ ಹೆಣ್ಣು ಶಿಶುವಿದ್ದರೆ ಕೊಂದು ಹಾಕುವ ಘಾತುಕ ವರ್ತಮಾನದಲ್ಲಿ ಬದುಕುತ್ತಿರುವ ನಾವು ಎಷ್ಟೊಂದು ಪಶ್ಚಾತ್ತಾಪ ಪಡುವ ಕಾಲ ಬರುತ್ತದೋ?

ನಾವೀಗ ಭೂಮಿ ಮೇಲಿನ ಈ ನರಕವನ್ನು freeze ಮಾಡಬೇಕು ಅಂದ್ರೆ ನಾಡಿನ ಪ್ರತಿ ಕಾಲೇಜು ವಿಶ್ವವಿದ್ಯಾಲಯ ಮನುಷ್ಯನ ಆತ್ಮಸಾಕ್ಷಿಯನ್ನ ಎಚ್ಚರಿಸಬೇಕು. ಅಂದ್ರೆ ರಾಜು ಮೇಷ್ಟ್ರು ನಮಗೆ ಕಟ್ಟಿಕೊಟ್ಟಿರುವ ಕಾವ್ಯದ ಜೀವವೃಕ್ಷ ಪರಂಪರೆಯನ್ನ ಉಳಿಸಿಕೊಳ್ಳಬೇಕು. ರಾಜು ಮೇಷ್ಟ್ರ ಮನೆ ಗೋಡೆ ಮೇಲಿನ ಪೇಂಟಿಂಗ್ ಎಲ್ಲವನ್ನೂ ಹೇಳುತ್ತಿವೆ.



# ಅರಿವಿನ ಗುರು

● *ಸಂದೀಪ ನಾಯಕ*

ರಾಜು ಮಾಸ್ತರ ಹಾಗೂ ನನ್ನ ಪರಿಚಯ ಅನಾದಿಯದು. ಅನಾದಿಯದು ಏಕೆಂದರೆ ಅದು ಅವರ ವ್ಯಕ್ತಿತ್ವದಿಂದಾಗಿ. ಪರಿಚಯವಾಗುತ್ತಿದ್ದಂತೆ ಅವರು ಹಳೆಯ ಬಂಧುವಿನಂತೆ ಎಂದು ನನಗೆ ಭೇಟಿಯಾದ ಮೊದಲ ಬಾರಿಗೇ ಅನ್ನಿಸಿದ್ದರು.

ಅವರ ಕುರಿತಾದ ನೆನಪುಗಳನ್ನು ಕ್ರೈಸ್ಟ್ ಕಾಲೇಜು ಕನ್ನಡ ಸಂಘದಿಂದಲೇ ಶುರುಮಾಡಬೇಕಾಗುತ್ತದೆ; ನನ್ನ ಅನೇಕ ಗೆಳೆಯರಂತೆ. ಕವಿತೆಗಳನ್ನು ಬರೆಯುತ್ತಿದ್ದ ನನ್ನ ಕಾಲೇಜಿನ ದಿನಮಾನಗಳಲ್ಲಿ ಕನ್ನಡ ಸಂಘದ ಕವನ ಸ್ಪರ್ಧೆ, ಲೇಖನ ಸ್ಪರ್ಧೆಗಳು ಅದರಲ್ಲಿ ಬರುವ ಬಹುಮಾನಗಳು ನೊಬೆಲ್ ಬಹುಮಾನಕ್ಕೆ ಸಮನಾಗಿದ್ದವು. ಅಂಥ ಸಮಯದಲ್ಲಿ ನಾನು ಮೊದಲ ಬಾರಿಗೆ ಕವಿತೆಯನ್ನು ಸ್ಪರ್ಧೆಗೆ ಕಳಿಸಿದೆ. ಸದ್ಯ, ಪವಾಡವೇನೂ ಸಂಭವಿಸಲಿಲ್ಲ! ಮರುವರ್ಷ ಕಳಿಸಿದ ಕವನಕ್ಕೆ ಬಹುಮಾನ ಬಂದೇ ಬಿಟ್ಟಿತು. ಅಲ್ಲಲ್ಲಿ ಪತ್ರಿಕೆಗಳಲ್ಲಿ ಕವನ ಬರೆದುಕೊಂಡಿದ್ದ ನನಗೆ ಈ ಬಹುಮಾನ ತುಸು ರೋಮಾಂಚನವನ್ನು, ಚೂರು ಅಹಂಕಾರವನ್ನು ತಂತೆಂದರೆ ಸುಳ್ಳು ಹೇಳಿದಂತಾಗುತ್ತದೆ. ಸರಿ, ನಾನೂ ಒಬ್ಬ ಕವಿ ಎಂತಾದೆ. ಆದರೆ ಆ ಕವನಗಳನ್ನು ಈಗ ನೋಡುವಾಗ ಆ ಕವಿತೆಗಳಷ್ಟು ಕೆಟ್ಟದಾಗಿ ಯಾರೂ ಬರೆಯಲು ಸಾಧ್ಯವಿಲ್ಲವೆನಿಸುವಂತಿವೆ. ಆದರೆ ಅವುಗಳಿಗೆ ಬಂದ ಬಹುಮಾನದ ಖುಷಿ, ರೋಮಾಂಚನವನ್ನು ಮಾತ್ರ ಈವರೆಗೂ ಮರೆಯಲು ಸಾಧ್ಯವಿಲ್ಲ. ಆಗಿನ ನನ್ನಂಥ ಎಳೆಯ ಕವಿಗಳ ಇಂಥದ್ದೊಂದು ಹುಮ್ಮಸ್ಸಿಗೆ ಕಾರಣವಾದವರು ರಾಜು ಮಾಸ್ತರು. ಈ ಅನುಭವ ನನ್ನ ಅನೇಕ ಗೆಳೆಯರದಾಗುವುದೂ ಸಾಧ್ಯವಿದೆ.



ಇಲ್ಲಿನ ನೆನಪುಗಳು ರಾಜು ಮಾಸ್ತರರೊಂದಿಗಿನ ಒಡನಾಟದೊಂದಿಗೆ ತಳಕು ಹಾಕಿಕೊಂಡಿವೆ. ಬಹುಮಾನ ಬಂದಾಗಲೆಲ್ಲ

ನಾವು ಬೆಂಗಳೂರಿಗೆ ಬಹುಮಾನ ವಿತರಣಾ ಸಮಾರಂಭಕ್ಕೆ ಹೋಗುವುದು, ಅಲ್ಲವರು ಪುಸ್ತಕದ ಹೊರೆಯನ್ನು ಹೊರಿಸುವುದು ನಡೆಯುತ್ತಿತ್ತು. ಇದರೊಂದಿಗೆ ಅಲ್ಲಿ ಸಿಕ್ಕ ಗೆಳೆಯರ ಬಳಗ ದೊಡ್ಡದು. ಆನಂದ ಋಗ್ವೇದಿ, ರೋಸಿ ಡಿಸೋಜಾ, ವಾಸುದೇವ್ ನಾಡಿಗ್, ವಿಕ್ರಂ ವಿಸಾಜಿ.... ಹೀಗೆ ಸದ್ಯಕ್ಕೆ ನೆನಪಾಗುವ ಹೆಸರುಗಳು. ಇದೇ ಹೊತ್ತಲ್ಲಿ ನೆನಪಾಗುವ ಇನ್ನೊಂದು ಸಂಗತಿಯೆಂದರೆ ನಾವು ಮೂವರು ಅಂಕೋಲೆಯ ಗೆಳೆಯರಿಗೆ (ಇನ್ನಿಬ್ಬರು ಗೆಳೆಯರು, ಫಾಲ್ಗುಣ ಗೌಡ, ವೆಂಕಟ್ರಮಣ ಗೌಡ) ಒಂದೇ ವರ್ಷ ಕವನ ಸ್ಪರ್ಧೆಯಲ್ಲಿ ಬಹುಮಾನ ಬಂದದ್ದು.

ಸ್ಪರ್ಧೆ ಮಾತ್ರದಿಂದಲೇ ನನ್ನ ಹಾಗೂ ರಾಜು ಮಾಸ್ತರ ಸಂಬಂಧ ಮುಗಿದು ಹೋಗಲಿಲ್ಲ. ನಾನು ಬೆಂಗಳೂರಿಗೆ ಬಂದಾಗಲೆಲ್ಲ ಮಾಸ್ತರರನ್ನು ಭೇಟಿಯಾಗುತ್ತಿದ್ದೆ. ಅವರು ಕಾಲೇಜಿನಲ್ಲಿರುವಾಗ ಕಾಲೇಜಿನಲ್ಲಿ ಅಥವಾ ಮನೆಯಲ್ಲಿ. ಜೊತೆಗೆ ಆಗಾಗ ಅವರ ಪಟ್ಟ ಶಿಷ್ಯ ಡಿ.ವಿ. ಪ್ರಹ್ಲಾದ್ ಇರುತ್ತಿದ್ದರು. ಹೀಗೊಮ್ಮೆ ನಾನು ಅವರನ್ನು ನೋಡಲು ಹೋದಾಗ ಅಪಘಾತವೊಂದರಲ್ಲಿ ಕಾಲಿಗೆ ಪೆಟ್ಟಾಗಿ ಮನೆಯಲ್ಲಿದ್ದರು. ಅವರ ಕಾಲಿಗೆ ಹಾಕಿದ ಬಿಳಿ ಪ್ಲಾಸ್ಟರ್ ಮೇಲೆ ನನ್ನದೂ ಒಂದು ಇರಲಿ ಎಂದು ಅನೇಕ ಹೆಸರುಗಳ ನಡುವೆ ನನ್ನ ಹೆಸರು ಬರೆದು ಬಂದಿದ್ದೆ. ಇದೊಂದು ನೆನಪು ಯಾಕೊ ಮಾಸದೆ ನನ್ನಲ್ಲಿ ಉಳಿದುಕೊಂಡಿದೆ. ನಾನು ಸಿಕ್ಕಾಗಲೆಲ್ಲ ಅವರು ಪುಸ್ತಕವೊಂದನ್ನು ಕೊಡದೆ ಬರಿಗೈಯಲ್ಲಿ ಕಳಿಸಿದ್ದಿಲ್ಲ. ಈಗ ನನ್ನಲ್ಲಿರುವ ಪ್ರಮುಖ ಪುಸ್ತಕಗಳು ಕ್ರೈಸ್ಟ್ ಕಾಲೇಜಿನ ಪ್ರಕಟಣೆಗಳೇ.

ಅದು ನನ್ನ ನಿರುದ್ಯೋಗ ಪರ್ವದ ದಿನಗಳು. ಕನ್ನಡ ಸಂಘದ ಪ್ರಕಟಣೆಯೊಂದು ನಮ್ಮ ಊರಾದ ಅಂಕೋಲೆಯಲ್ಲಿ ಬಿಡುಗಡೆಯಾಗಬೇಕೆಂಬುದು ನನ್ನ ಆಶೆಯಾಗಿತ್ತು. ಅದನ್ನು ರಾಜು ಮಾಸ್ತರಲ್ಲಿ ನಿವೇದಿಸಿಕೊಂಡೆ. ಅವರು ಒಪ್ಪಿಕೊಂಡರು. ಅದರಂತೆ ರಾಜು ಮಾಸ್ತರು ಕನ್ನಡ ಸಂಘದ ತಮ್ಮ ಕಾಲಾವಧಿಯಲ್ಲಿ ಕೊನೆಯಬಾರಿಗೆ ಪ್ರಕಟಿಸಿದ, ಅವರೇ ಸಂಪಾದಿಸಿದ 'ಬೇಂದ್ರೆ ಕಾವ್ಯ: ಒಂದು ಅಧ್ಯಯನ' ಪುಸ್ತಕ ಅಂಕೋಲೆಯಲ್ಲಿ ನಮ್ಮ ಕರ್ನಾಟಕ ಸಂಘದ ಆಶ್ರಯದಲ್ಲಿ ಬಿಡುಗಡೆಯಾಯಿತು. ಅದನ್ನು ಬಿಡುಗಡೆ ಮಾಡಿದವರು ಜಯಂತ ಕಾಯ್ಕಿಣಿ, ಕಾರ್ಯಕ್ರಮದ ಅಧ್ಯಕ್ಷತೆ ಕವಿ ವಿಷ್ಣು ನಾಯ್ಕರದಾಗಿತ್ತು. ಕಾರ್ಯಕ್ರಮದ ಮರುದಿನ ರಾಜು ಮಾಸ್ತರು 'ನೀವು ನಿಮ್ಮ ಕೈಯಿಂದ ಖರ್ಚು ಮಾಡಬಾರದು' ಎಂದು ಕಾರ್ಯಕ್ರಮದ ವೆಚ್ಚವನ್ನು ನನ್ನ ವಿರೋಧದ ನಡುವೆಯೂ ಕಿಸೆಯಲ್ಲಿ ಹಾಕಿ ಬಸ್ಸು ಹತ್ತಿದ್ದರು. ಅದಕ್ಕೆ ಅವರ ಶಿಷ್ಯ ಪ್ರಹ್ಲಾದ್ ಕುಮ್ಮಕ್ಕು ಇತ್ತೆಂಬುದು ಬೇರೆ ಮಾತು. ಇದು ನಾನು ಎಂದಿಗೂ ಮರೆಯದಂಥ ಸಂಗತಿ.

ಆಮೇಲೆ ನನಗೆ 'ಪ್ರಜಾವಾಣಿ'ಯಲ್ಲಿ ಕೆಲಸ ಸಿಕ್ಕಮೇಲೆ ಅವರನ್ನು ಕಂಡು ಬರಲು ಅವರ ಮನೆಗೆ ಹೋಗಿದ್ದೆ. 'ಪತ್ರಿಕೆಗಳಿಗೆ ಸೇರಿದ ಮೇಲೆ ಬರೆಯುವುದನ್ನು ನಿಲ್ಲಿಸಿದ ಅನೇಕರ ಉದಾಹರಣೆಗಳು ನಿಮ್ಮ ಕಣ್ಣ ಮುಂದೆಯೇ ಇದೆ' ಎಂದು ನನ್ನ ಬರಹದ ಕುರಿತಾಗಿ ಎಚ್ಚರಿಕೆಯ ಮಾತನ್ನೂ ಅವರು ಆಡಿದ್ದರು. ಪತ್ರಿಕೆಗಳಲ್ಲಿ ಕೆಲಸ ಮಾಡುವ ನಮ್ಮಂಥವರು ನಮ್ಮ ಬರಹವನ್ನು ಕಾಯ್ದುಕೊಳ್ಳುವ ಹಾಗೂ ಅದರ ಕುರಿತಾಗಿ ವಹಿಸಬೇಕಾದ ಎಚ್ಚರ, ಕಾಳಜಿಗಳೂ ಅವರಿಗಿದ್ದವು.

ನಾನಿಲ್ಲಿ ನನ್ನ ನೆನಪುಗಳನ್ನು ಬರೆಯುತ್ತಿದ್ದೇನೊ, ರಾಜು ಮಾಸ್ತರ ಕುರಿತಾಗಿ ಹೇಳಲು ಹೊರಟ್ಟಿದ್ದೇನೂ ಗೊತ್ತಾಗುತ್ತಿಲ್ಲ. ಅವರು ಪುಸ್ತಕ ಲೋಕದಲ್ಲಿ ಮಾಡಿದ ಅಸಾಧ್ಯ ಕೆಲಸವನ್ನು ನಾನಿಲ್ಲಿ  ಹೇಳಹೋಗುವುದಿಲ್ಲ. ಅದನ್ನು ತಿಳಿದು ವಿವರಿಸುವ ಪ್ರಾಜ್ಞರು ಅನೇಕರಿದ್ದಾರೆ. ಅವರ ವ್ಯಕ್ತಿತ್ವದ ಕುರಿತಾಗಿ ಒಂದು ಮಾತನ್ನಿಲ್ಲಿ ಹೇಳಬಹುದು. ರಾಜು ಮಾಸ್ತರರು ಝೆನ್ ಗುರುವಿನಂತೆ ಎಂದು ನನಗೆ ಯಾವಾಗಲೂ ಅನ್ನಿಸಿದ್ದಿದೆ. ಅವರ ವ್ಯಕ್ತಿತ್ವವೆಂದರೆ ತಮ್ಮ ಮೌನದ ಮೂಲಕವೇ, ತಮ್ಮ ಕೆಲಸ, ವಿನಯದ ಮೂಲಕವೇ ಎಲ್ಲವನ್ನೂ ಕಲಿಸುವಂಥದ್ದು. ಈ ಝೆನ್ ಗುರು ಮಾತಾಡುವುದು ಕಡಿಮೆ. ಮತ್ತು ಕ್ರಿಯಾಶೀಲತೆಯಿಂದಲೇ ರಾಜು ಮಾಸ್ತರರು ಇತರರನ್ನೂ ಕ್ರಿಯಾಶೀಲರನ್ನಾಗಿ ಮಾಡುತ್ತಿದ್ದರು. ಹಾಗಾಗಿ ಅವರಿಗೆ ಕರ್ನಾಟಕದ ಎಲ್ಲೆಡೆ ನೇರ ಶಿಷ್ಯರಿಗಿಂತ ಅಪ್ರತ್ಯಕ್ಷ ಶಿಷ್ಯರೇ ಬಹಳಷ್ಟಿದ್ದಾರೆ. ಅವರಂತೆ ಪಾಠ ಹೇಳದೆಯೇ ಶಿಷ್ಯ ಗಣವನ್ನು ಹೊಂದಿರುವವರು  ಕಡಿಮೆಯೇ.

ಅವರೊಂದು ಅರಿವಿನ ದಾರಿ. ಆ ಸವೆಸಿ ಮುಗಿಯದ ದಾರಿ ದೊಡ್ಡದಾಗಿದೆ. ಅದನ್ನು ಅರಿವ ಗುಣ, ಅವರಲ್ಲಿರುವ ವಿನಯ ನಮ್ಮಲ್ಲಿರಬೇಕಷ್ಟೇ.



# ಗುರುವಿನ ಪರಿಚಾರಿಕೆಯ ಪರಿ

● ಕವಿತಾ ರೈ

ಒಬ್ಬ ಭಿಕ್ಷು, ಅದೇ ಮೊದಲು ಆ ವಿಹಾರಕ್ಕೆ ಬಂದಿದ್ದ. ಗುರು ಜೊಶು ಆತನನ್ನು ಕರೆದು, 'ಅಯ್ಯಾ, ಹಿಂದೆ ಯಾವಾಗಲಾದರೂ ನಾನು ನಿನ್ನನ್ನು ಇಲ್ಲಿ ಕಂಡಿದ್ದುಂಟಾ?' ಅಂತ ಕೇಳಿದ.

'ಇಲ್ಲ ಸ್ವಾಮಿ, ತಾವು ಈ ಮೊದಲು ನನ್ನನ್ನು ಇಲ್ಲಿ ಕಂಡಿದ್ದಿಲ್ಲ' ಎಂದ ಆ ಭಿಕ್ಷು.

ಹಾಗಾದರೆ, 'ಒಂದು ಲೋಟ ಚಾ ತೆಗೆದುಕೊ' ಅಂದ ಜೊಶು. ಅನಂತರ ಜೊಶು, ಇನ್ನೊಬ್ಬ ಭಿಕ್ಷುವಿನ ಕಡೆ ತಿರುಗಿ, 'ಅಯ್ಯಾ ಹಿಂದೆ ಯಾವಾಗಲಾದಗೂ ನಾನು ಇಲ್ಲಿ ನಿನ್ನನ್ನು ಕಂಡದ್ದುಂಟೊ?' ಎಂದು ಪ್ರಶ್ನಿಸಿದ.

'ಹೌದು ಸ್ವಾಮಿ ಕಂಡಿದ್ದೀರಲ್ಲ' ಎಂದ ಆತ.

ಹಾಗಾದರೆ, 'ಒಂದು ಲೋಟ ಚಾ ತೆಗೆದುಕೊ' ಎಂದ ಜೊಶು.

ಇದನ್ನೆಲ್ಲ ನೋಡುತ್ತ ನಿಂತಿದ್ದ ವಿಹಾರದ ಪಾರುಪತ್ಯದಾರ ಅರ್ಥವಾಗದೆ ಚಕಿತನಾಗಿ ಜೊಶುವನ್ನು ಕೇಳಿದ. 'ನಿಮ್ಮ ಪ್ರಶ್ನೆಗೆ ಇಲ್ಲ ಅಂತ ಉತ್ತರಿಸಿದವನಿಗೂ, ಚಾ ತೆಗೆದುಕೊ ಎಂದಿರಿ. ಹೌದು ಎಂದವನಿಗೂ ಚಾ ತೆಗೆದುಕೊ ಎಂದಿರಿ – ಯಾಕೆ? ನನಗೆ ಅರ್ಥವಾಗಲಿಲ್ಲ' ಅಂದ.



ಅದಕ್ಕೆ ಜೊಶು, 'ಪಾರುಪತ್ಯದಾರ, ನೀನು ಇಲ್ಲೇ ಇದ್ದೀಯಾ?'

'ಹೌದಲ್ಲ ಸ್ವಾಮಿ' ಎಂದ ಆತ.

ಹಾಗಾದರೆ, 'ಒಂದು ಲೋಟ ಚಾ ತೆಗೆದುಕೊ'

ಈ ಝೆನ್ ಕತೆ ರಾಜು ಮೇಷ್ಟ್ರ ನೆನಪಾದಾಗಲೆಲ್ಲ ಮಂಗಳೂರಿನಲ್ಲಿ ಇರುವ ನನಗೆ ತಪ್ಪದೆ ಮನಸ್ಸಿನ ಎದುರು ಬರುತ್ತದೆ. ಹೀಗಾಗಿಯೇ ಅವರ ಬಗ್ಗೆ ಬರೆಯುವ ನನ್ನ ಮಾತುಗಳಿಗೆ

'ಗುರುವಿನ ಪರಿಚಾರಿಕೆಯ ಪರಿ' ಎಂದು ಹೆಸರು ಕೊಟ್ಟಿದ್ದೇನೆ. 'ಕನ್ನಡ ಪುಸ್ತಕ'ಗಳನ್ನು, 'ಕನ್ನಡ ಪ್ರೀತಿ'ಯನ್ನು ಝುನ್ ಗುರುವಿನಂತೆ ಹಂಚುವ ಮೇಷ್ಟ್ರು ಎಲ್ಲರಿಗೂ ಬೇಕಾದವರು. ಕನ್ನಡ ಅಧ್ಯಾಪನದ ಜೊತೆಗೆ ಕ್ರೈಸ್ಟ್ ಕಾಲೇಜ್‌ನ ಕನ್ನಡ ಸಂಘದ ಭೂಮಿಕೆಯಲ್ಲಿ ಡಾ॥ ದ.ರಾ. ಬೇಂದ್ರೆ ಸ್ಮೃತಿ ಅಂತರ ಕಾಲೇಜು ಕವನ ಸ್ಪರ್ಧೆಯನ್ನು ಏರ್ಪಡಿಸುವುದರ ಮೂಲಕ ಪ್ರತೀವರ್ಷ ಬಿಡದೆ ಅವರ ಸರ್ವಿಸ್ಸಿನ ಉದ್ದಕ್ಕೂ ಇಪ್ಪತ್ತು ಜನ ಉದಯೋನ್ಮುಖ ಬರಹಗಾರರನ್ನು ಕನ್ನಡ ಕಾವ್ಯ ಜಗತ್ತಿಗೆ ಭರವಸೆಯಿಂದ ಪರಿಚಯಿಸುತ್ತ ಬಂದವರು ರಾಜು ಸರ್. ಅವರನ್ನು ಕಾವ್ಯ ಜಗತ್ತಿನಲ್ಲಿ ಬೆಳೆಯುವಷ್ಟರಮಟ್ಟಿಗೆ ಕರೆತಂದು ಬಿಟ್ಟವರು. ಅತ್ಯಂತ ಭರವಸೆಯೇ ಇಲ್ಲದ ಕಾವ್ಯ ಸಂದರ್ಭದ ಘಟ್ಟವೊಂದರಲ್ಲಿ, ಯುವ ಬರಹಗಾರರನ್ನು ಆಪ್ಯಾಯಮಾನವಾಗಿ ಬರೆಯಲು ಪ್ರಚೋದನೆ ಇತ್ತು ಬೆಳೆಯುವ ಅವಕಾಶ ಕಲ್ಪಿಸಿದವರು. ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಜೊತೆ ಅವರ ಅವಿರತವಾದ ಪ್ರಾಮಾಣಿಕ ಕ್ರಿಯಾಶೀಲತೆ ಇದ್ದ ಪರಿಣಾಮವಾಗಿ ಇಂದು ಕನ್ನಡ ಕಾವ್ಯ ಭರವಸೆಯ ಹಾದಿ ತುಳಿದಿದೆ. ಎಂ.ಆರ್. ಭಗವತಿ, ಪಿ. ಚಂದ್ರಿಕಾ, ವಿಭಾ, ವೀಣಾ ತಿರಕಪಡಿ, ಕವಿತಾ ರೈ, ವಿಕ್ರಮ ವಿಸಾಜಿ, ಅಂಕುರ್ ಬೆಟಗೇರಿ, ಸುದೇಶ್ ಮಹಾನ್, ಹನುಮಂತಯ್ಯ ಎನ್.ಕೆ., ಎಂ. ಮೊಹ್ಮದ್ ಭಾಷಾ ಗೂಳ್ಯಂ, ವೆಂಕಟೇಶ್ ಪ್ರಸಾದ್ ಬಿ.ಎಸ್. – ಹೀಗೆ ಇನ್ನೂ ಹಲವರು ಇಂದು ಬರೆಯುತ್ತ ಬಂದವರಾಗಿದ್ದರೆ. ಅದಕ್ಕೆ ರಾಜು ಮೇಷ್ಟ್ರು, ಅವರ ಕನಸು ಕಾರಣ. ಎಂದೂ ಬತ್ತದ ಕಾವ್ಯದ ಆಕರ್ಷಣೆಗೆ ಒಳಗಾದವರನ್ನು ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಮೂಲಕ ಪ್ರೇರೇಪಣೆ ನೀಡಿದ ಅವರ ಪ್ರಾಮಾಣಿಕ ಯತ್ನ ಈಗ ನಮಗೆ ನಿಚ್ಚಳವಾಗಿ ತೋರುತ್ತದೆ. ಇದು ಕನ್ನಡದ ಕಾವ್ಯ ಸಂದರ್ಭ ಮತ್ತು ದ.ರಾ. ಬೇಂದ್ರೆ ಸ್ಮೃತಿ ಅಂತರ ಕಾಲೇಜು ಕವನ ಸ್ಪರ್ಧೆಗಳನ್ನು ರಾಜು ಮೇಷ್ಟ್ರು ಸಂಯೋಜಿಸುತ್ತಿದ್ದ ವಿನ್ಯಾಸವನ್ನು ಅವರನ್ನು ಅದರಿಂದ ಹೊರಗಿಟ್ಟು ನೋಡಿದರೆ ವ್ಯಕ್ತವಾಗುತ್ತದೆ. ವಾಸ್ತವವಾಗಿ ಕನ್ನಡದ ಬಗ್ಗೆ, ಸಾಹಿತ್ಯದ ಬಗ್ಗೆ ಅವರು ಹೊಂದಿದ್ದ ದೃಷ್ಟಿಕೋನ ವಸ್ತುನಿಷ್ಠವೂ ಉದಾತ್ತವೂ ತಾರತಮ್ಯ ರಹಿತವೂ ಆಗಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಕನ್ನಡ ಕಾವ್ಯ ಸಂದರ್ಭ ಹೊಸ ಅರಿವು ಮತ್ತು ಹೊಸ ದೃಷ್ಟಿಕೋನ ತರುವ ಉದ್ದೇಶದಿಂದಲೇ ಅವರು ಹಿರಿಯ ಮತ್ತು ಕಿರಿಯ ಬರಹಗಾರರ ಬರಹಗಳನ್ನು ತುಂಬು ಭರವಸೆಯಿಂದಲೇ ಕನ್ನಡ ಸಂಘದ ಮೂಲಕ ಅಚ್ಚು ಹಾಕಿಸಿ ಅದು ಮನೆ, ಮನಕ್ಕೂ ತಲುಪುವಂತೆ ಮಾಡಿದ್ದರು. ಇದಕ್ಕೆ ಅಂತಃಕರಣ ಪೂರ್ವಕವಾಗಿ ತುಡಿದು, ದುಡಿದ ಅವರ ಸಾಹಿತ್ಯ ಪರಿಚಾರಿಕೆಯನ್ನು ಮನಗಂಡು ಎಸ್.ವಿ.ಪಿ. ಅವರ ವಿದ್ಯಾರ್ಥಿಗಳು, ಅಭಿಮಾನಿಗಳು ಸ್ಥಾಪಿಸಿ ನೀಡುವ 'ಎಸ್.ವಿ. ಪರಮೇಶ್ವರ ಭಟ್ಟ ಪ್ರಶಸ್ತಿ' ೨೦೦೨ರಲ್ಲಿ ರಾಜು ಮೇಷ್ಟ್ರಿಗೆ ಸಂದಾಯವಾಗಿದೆ. ಇದು ಆ ಪ್ರಶಸ್ತಿಗೆ ಸಂದ ಗೌರವವೂ ಆಗಿದೆ.

ಕ್ರೈಸ್ಟ್ ಕಾಲೇಜಿನಿಂದ ಮರಳಿದ ನಂತರದಲ್ಲಿ ಪ್ರಾಧಿಕಾರದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಅವರು ತೊಡಗಿಕೊಂಡ ಕಾರ್ಯಗಳು ಅಲ್ಲದೆ 'ಪಿ.ಪಿ. ಗೆಳೆಯರ ಅಂಕಣ ಬಳಗ ಮಾಲೆ'ಯ ಮುಖೇನ ಸಾಹಿತ್ಯ ಪರಿಚಾರಿಕೆಯನ್ನು ಮುಂದುವರಿಸಿಕೊಂಡು ಬರುತ್ತಿರುವುದು. ಅವರ ಒಳಗೆ ಅಭೀಪ್ಸಿತ ಗುರಿಯೊಂದು ಇದ್ದೇ ಇದೆ ಎಂಬುದನ್ನು ಬಯಲು ಮಾಡಿದೆ. ಮಾತ್ರವಲ್ಲದೆ ಸಾಹಿತ್ಯ ಪರಿಚಾರಿಕೆಯಲ್ಲಿ ಅವರ ಕೊಡುಗೆ ಏನೆಂಬುದು

ಕಾಲಾಂತರದಲ್ಲಿ ಸಾಮಾಜಿಕ-ಐತಿಹಾಸಿಕ ಗತಿಯಲ್ಲಿ ನಿರ್ಧಾರಗೊಳ್ಳಲಿದೆ. ಆದರೆ ಕನ್ನಡ ಸಾಹಿತ್ಯದ ಸಮಕಾಲೀನ ಸಂದರ್ಭದ ಸಾಕಷ್ಟು ದೊಡ್ಡ ಸಂಖ್ಯೆಯ ಬರಹಗಾರರಿಗೆ ಅವರು ಕ್ರಮಿಸಿ ಬಂದ ಹಾದಿಯ ಅರಿವಿದೆ. ಹೀಗಾಗಿ ಸಾಹಿತ್ಯಾಸಕ್ತ ಹಿರಿಯ ಮತ್ತು ಕಿರಿಯ ವರ್ಗಗಳೆರಡೂ ಸಮಾನವಾಗಿಯೇ ಸಾಕಷ್ಟು ಅಧಿಕ ಸಂಖ್ಯೆಯಲ್ಲಿ ಶ್ರೀನಿವಾಸರಾಜು ಅವರತ್ತ ತಿರುಗಿದೆ.

ಇದೆಲ್ಲದರ ಹೊರತಾಗಿಯೂ ನನ್ನಂಥ ಹಲ ನೂರು ವಿದ್ಯಾರ್ಥಿಗಳಿಗೆ ಅವರನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗಿದೆ. ನಮಗೆಂದೂ ರಾಜು ಮೇಷ್ಟ್ರು ತರಗತಿಯಲ್ಲಿ ಪಾಠ ಮಾಡಿದ, ನೇರವಾಗಿ ಕಲಿಸಿದ ಗುರುಗಳಲ್ಲ.

ಆದರೂ ನನಗೆ, ಅರ್ಥಾತ್ ನಮ್ಮೆಲ್ಲರಿಗೆ ಗುರುವಾಗಿದ್ದಾರೆ. ಸಾಹಿತ್ಯಾಸಕ್ತ ವಿದ್ಯಾರ್ಥಿಗಳು ಅವರಿಂದ ಬಹಳಷ್ಟನ್ನು ಕಲಿತಿದ್ದಾರೆ. 'ಪುಸ್ತಕ ಪ್ರೀತಿಯ ಹಂಬಲವನ್ನು ಹುಟ್ಟುಹಾಕಿದ, ಇದ್ದಕಡೆ, ಹೋದಕಡೆ ಪುಸ್ತಕ ಪ್ರೀತಿಯನ್ನು ಹಂಚಿದ ವಿದ್ಯಾರ್ಥಿ ಮಿತ್ರರಿಗೆಲ್ಲ ಸದಾ ನೆನಪಿನಲ್ಲಿ ಉಳಿಯಬಹುದಾದ ಪುಸ್ತಕಗಳನ್ನೇ ನೆನಪಿನ ಕಾಣಿಕೆಯಾಗಿ ಇತ್ತ ಮೇಷ್ಟ್ರು ಅವರ ಮನಸ್ಸಿನೊಳಗೆ ಇಳಿದವರಿಗೆಲ್ಲ ಕನ್ನಡ ಸಾಹಿತ್ಯ ಸಂಚಿಕೆಗಳು ನಿಯಮಿತವಾಗಿ ತಲುಪುವಂತೆ ತಮ್ಮ ಹಣವನ್ನೇ ಚಂದಾಕ್ಕೆ ನೀಡಿ ಕನ್ನಡದ ಹಿರಿಮೆಯನ್ನು ಮೆರೆದವರು. ಆ ಮೂಲಕ ವಿದ್ಯಾರ್ಥಿಗಳು ಆಪ್ಯಾಯಮಾನವಾಗಿ ಗೌರವಿಸುವಂತೆ, ಗುರುಗಳಾಗಿ ಅನುಭವಿಸುವಂತೆ ಮಾಡಿದವರು. [ನನಗೆ ರಾಜು ಮೇಷ್ಟ್ರು ತಮ್ಮ ಕೈಯಿಂದ ಚಂದಾ ಹಣ ತೆತ್ತು ನೋಂದಾಯಿಸಿದ 'ಸಂಚಯ' ಮತ್ತು ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟವಾಗುವ 'ನಮ್ಮ ಕನ್ನಡ' ಸಂಚಿಕೆಗಳು ಕಳೆದ ಐದು ವರ್ಷಗಳಿಂದ ಬರುತ್ತಲಿವೆ]. ತನ್ನ ಶಿಲುಬೆಯನ್ನು ಸದಾ ತಾನೆ ಹೊತ್ತು ಸಾಹಿತ್ಯ ಪರಿಚಾರಿಕೆಯಲ್ಲಿ ಸಂಭ್ರಮಿಸುತ್ತಾ ತಿರುಗುತ್ತಿರುವ ರಾಜು ಮೇಷ್ಟ್ರು ಅವರ ಜೀವನವನ್ನು ಸಂಪೂರ್ಣವಾಗಿ ಮತ್ತು ಸಮಗ್ರವಾಗಿ ವಿದ್ಯಾರ್ಥಿಗಳ ಜೊತೆ, ಸಾಹಿತ್ಯ ಮಿತ್ರರ ಜೊತೆ, ಸಹೃದಯ ವಾಚಕರ ಜೊತೆ ಪಾರದರ್ಶಕವಾಗಿ ಹಂಚಿಕೊಂಡವರು. ಅವರ ಪ್ರಯತ್ನ ಪ್ರಾಮಾಣಿಕವಾಗಿದ್ದ ಕಾರಣ ನನ್ನಂಥ ಹಲ ನೂರು ವಿದ್ಯಾರ್ಥಿಗಳ ಮನಸ್ಸಿನಲ್ಲಿ ಗುರುವಾಗಿ ಕಾಣಿಸುತ್ತಾರೆ. ನಾವು ಅವರಿಂದ ಪಡೆದ ಕಾಣ್ಕೆ ದೊಡ್ಡದು.

ಝೆನ್ ಕತೆಯಿಂದ ಹೇಳತೊಡಗಿದ 'ನನ್ನ ಗುರುವಿನ ಪರಿಚಾರಿಕೆಯ ಪರಿ'ಯನ್ನು ಮತ್ತೆ ಝೆನ್ ಕಥೆಯೊಂದರಿಂದಲೇ ಮುಕ್ತಾಯಗೊಳಿಸಬೇಕೆಂದಿದ್ದೇನೆ. 'ಗುರು ಫುಕೆತ್ಸು'ವಿನ ಬೋಧನೆ ಕೇಳಿ ಮನಸ್ಸು ಗೊಂದಲಗೊಂಡ ಒಬ್ಬ ಭಿಕ್ಷು ಪುನಃ ಆತನ ಬಳಿಗೆ ಹೋಗಿ ಕೇಳಿದ– "ಸತ್ಯ ಹೇಳಬೇಕೆಂದರೆ ಮಾತಿಲ್ಲದೆ ಹೇಳಬೇಕು ಎಂದಿರಿ, ಮೌನವಿಲ್ಲದೆ ಹೇಳಬೇಕು ಎಂದಿರಿ. ಅದು ಹೇಗೆ ಸಾಧ್ಯ?" ಗುರು ಫುಕುತ್ಸೆ ಅದಕ್ಕೆ ಕೊಟ್ಟ ಉತ್ತರ ಇದು. 'ದಕ್ಷಿಣ ಚೀನಾದಲ್ಲಿ ವಸಂತಕಾಲ ಪ್ರಾಪ್ತವಾದಾಗ ಆಗಿನ್ನೂ ನಾನು ಚಿಕ್ಕ ಹುಡುಗ, ನೆನೆಮೊಗ್ಗೆಗಳಲ್ಲಿ ಅಡಗಿ ಕೂತ ಪಕ್ಷಿಗಳು ಎಷ್ಟು ಚಂದ ಹಾಡುತ್ತಿದ್ದವು."



# ನನ್ನ ಪ್ರೀತಿಯ ಮೇಷ್ಟ್ರು

● *ಛಾಯಾ ಭಗವತಿ*

ಅಪರಿಮಿತ ಆಪ್ತತೆಯ ಸಿಹಿ ಸಜ್ಜಿಗೆಯನ್ನು ಸದಾ ಉಣಬಡಿಸುವ ರಾಜು ಮೇಷ್ಟ್ರಿಗೆ ಹೃದಯ ತುಂಬಿದ ಅಭಿನಂದನೆಗಳು ಮತ್ತು ಗೌರವ ಪೂರ್ಣ ನಮಸ್ಕಾರಗಳು. ಅನೇಕ ಕವಿಮಿತ್ರರಿಗೆ ಪರಿಚಯ ವಾಗಿರುವಂತೆ, ನನಗೂ ಮೇಷ್ಟ್ರು ಪರಿಚಯವಾದದ್ದು ಕ್ರೈಸ್ಟ್ ಕಾಲೇಜಿಗೆ ನಾನು ಬಹುಮಾನ ಪಡೆದುಕೊಳ್ಳಲು ಹೋದಾಗ. ಮೇಷ್ಟ್ರು ಕೈಯ್ಯಲ್ಲೊಂದು ಪುಸ್ತಕ ಹಿಡಿದು, 'ಯಯಾತಿ' ನಾಟಕ ಮತ್ತು ನಮ್ಮ ಬಹುಮಾನ ವಿತರಣಾ ಸಮಾರಂಭಗಳೆರಡೂ ಯೋಜಿತವಾಗಿದ್ದ ಕ್ಲಾಸು ರೂಮಿನೆದಿರು ಓಡಾಡುತ್ತಿದ್ದರು. ಯಾವ ಹೆಸರಿನ ಕವಿ ಯಾವೂರಿಂದ ಬಂದಿದ್ದಾರೆನ್ನುವುದು ಅವರಿಗೆ ನಿಚ್ಚಳ ನೆನಪಿತ್ತು. ನಾನು ನನ್ನ ಹೆಸರು ಹೇಳಿ ಪರಿಚಯಿಸಿಕೊಂಡೊಡನೆ, 'ತುಂಬ ಸಂತೋಷ ಕಣಮ್ಮಾ, ಗುಲ್ಬರ್ಗಾದಿಂದ ಎಷ್ಟೊತ್ತಿಗೆ ಹೊರಟ್ರಿ?' ಅಂತ ಕೇಳಿದ್ದರು.

ಎಂ.ಎ. ಫಲಿತಾಂಶವನ್ನು ಕೈಲಿ ಹಿಡಿದು ಬೆಂಗಳೂರಿಗೆ ಹೊರಟು ಬಂದಾಗ ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ಆಗಷ್ಟೇ ತೆರವಾಗಿದ್ದ ಇಂಗ್ಲಿಷ್ ಅಧ್ಯಾಪಕಿ ಹುದ್ದೆಗೆ ಸೇರುವಂತೆ ಸಲಹೆ ನೀಡಿದ್ದ ಮೇಷ್ಟ್ರು ಆ ಮೂಲಕ ಶಿಕ್ಷಕ ವೃತ್ತಿಯ ಅತ್ಯಂತ ತೃಪ್ತಿಕರವಾದ ಮೂರುವರ್ಷಗಳನ್ನು ನಾನು ಅನುಭವಿಸುವುದಕ್ಕೆ, ಅದರ ನೆನಪುಗಳನ್ನು ಇಂದಿಗೂ ಸವಿಯುವುದಕ್ಕೆ ಕಾರಣರು.



ಮಲ್ಲೇಶ್ವರಂನ ಮಹಿಳಾ ಹಾಸ್ಟೆಲ್‌ವೊಂದಕ್ಕೆ ಸೇರಿಕೊಂಡ ಮೇಲೆ ನೆಪಮಾತ್ರಕ್ಕೆ ಆ ಹಾಸ್ಟೆಲ್ ನನ್ನ ನಿವಾಸವಾಗಿತ್ತು. ದಿನದ ಪಾಠ, ಪಠ್ಯೇತರ ಚಟುವಟಿಕೆಗಳೆಲ್ಲ ಮುಗಿದ ನಂತರ, ಮೇಷ್ಟ್ರು ಮನೆಗೆ ಹೋಗಿ ವರದಿ ಒಪ್ಪಿಸಿ, ಅವರ ಮನೆಯವರೆಲ್ಲರೊಂದಿಗಿಷ್ಟು ಮಾತಾಡಿ ಹಾಸ್ಟೆಲಿಗೆ ವಾಪಸ್ಸಾಗುವುದು ನನ್ನ ದಿನಚರಿ. ಮೊದ ಮೊದಲು ಅವರ ಮನೆಗೆ ಸಂಕೋಚದಿಂದ ಮುದುಡಿಕೊಂಡು

ಹೋಗುತ್ತಿದ್ದ ನನಗೆ ಕೆಲವೇ ದಿನಗಳಲ್ಲಿ ಅವರ ಮನೆಯವರೆಲ್ಲರ ಪರಿಚಯದ ಸವಿಯೂ ದೊರಕಿತು. ಸರಸ್ವತಿ ಅಮ್ಮನ ಸರಳ, ಸೌಜನ್ಯಪೂರ್ಣ ಪ್ರೀತಿ, ಕಾಳಜಿ, ಸುಗತ, ಸೌಜನ್ಯ ದಂಪತಿಗಳ ಮತ್ತು ಋತ, ಶ್ವೇತರ ಸ್ನೇಹದ ಆಪ್ತಕ್ಷಣಗಳು ಯಾವತ್ತಿಗೂ ಹಸಿರು. ಎಲ್ಲರೂ ಒಟ್ಟಿಗೇ ಕೂತು, 'ಕರಿಯರನ್ನು ಜೀತಕ್ಕೊಯ್ಯುತ್ತಿದ್ದ ಬಿಳಿಯರ ವಿರುದ್ಧ, ಬಿಳಿಯನೇ ಆದ ನ್ಯಾಯವಾದಿಯೊಬ್ಬ 'ಹೋರಾಟ ನಡೆಸುವುದನ್ನು' ತುಂಬ ಹೃದಯಂಗಮವಾಗಿ ನಿರೂಪಿಸುವ ಇಂಗ್ಲಿಷ್ ಸಿನಿಮಾವೊಂದನ್ನು ನೋಡಿದ್ದು ಇನ್ನೂ ನೆನಪಿನಲ್ಲುಳಿದಿದೆ.

ಆಗ ನನ್ನದು ಪಾರ್ಟ್‌ಟೈಂ ವೃತ್ತಿಯಾಗಿದ್ದರಿಂದ ಮೇಷ್ಟ್ರು ನನ್ನ ಖಾಲಿ ಸಮಯ ಉಪಯುಕ್ತವಾಗಿ ಕಳೆಯುವಂತೆ ತುಂಬ ಒಳ್ಳೊಳ್ಳೆಯ ಅನುವಾದದ ಕೆಲಸಗಳನ್ನು ಕೊಟ್ಟು, ನನ್ನ ಅನುವಾದದ ಕೆಲಸ ಚುರುಕಾಗುವಂತೆ ಮಾಡಿದ್ದಾರೆ.

ಈ ಕಾರಣಕ್ಕೆ ಮತ್ತು ಅವರೆಲ್ಲರ ಆತ್ಮೀಯತೆಯನ್ನು ಸವಿಯುವುದಕ್ಕೆ ಸದಾ ಅಲ್ಲಿರುತ್ತಿದ್ದ ನನಗೆ HRS ಸರ್ ಆಗಾಗ Non-residertial Chiranjeevi (NRC) ಅಂತ ಆತ್ಮೀಯವಾಗಿ ತಮಾಷೆ ಮಾಡುವುದೂ ಇತ್ತು. ದೂರದೂರುಗಳಿಂದ ಪದವಿ ಮುಗಿಸಿ, ಕೆಲಸ ಹುಡುಕಿ ಬರುವ ಎಲ್ಲ ಹುಡುಗಿಯರಿಗೂ ಈ ನಮೂನೆಯ ಆತ್ಮೀಯ ನಂಟು ಒದಗುವುದೋ ಇಲ್ಲವೋ ಗೊತ್ತಿಲ್ಲ. ಒಂದಿಷ್ಟು ಕೂಡ ಆತಂಕ, ಅಳುಕುಗಳಿಲ್ಲದೇ ಬೆಂಗಳೂರಿನಲ್ಲಿ ಇದ್ದುಕೊಂಡು ಹೋಗಲು, ನನಗೆ ಸಾಧ್ಯವಾದದ್ದು ಮೇಷ್ಟ್ರ ಮತ್ತು ಕುಟುಂಬದವರ ಒಡನಾಟದಿಂದ.

ನನಗೆ ಸದಾ ಅಚ್ಚರಿ ಮೂಡಿಸುವುದು ಮೇಷ್ಟ್ರ ಮೃದು, ಮಿತ ನುಡಿಗಳು. ಯಾವತ್ತೂ ಆಕ್ಷಣಕ್ಕೆ ಸಹ್ಯವೆನಿಸುವಷ್ಟನ್ನೇ ಮನದುಂಬಿ ಮಾತಾನಾಡುವುದು ಅವರಿಗಷ್ಟೇ ಸಾಧ್ಯವೇನೋ. 'ಏನಮ್ಮಾ ಏನ್ ಬರೆದ್ರಿ? ಇತ್ತೀಚೆಗೆ ಏನನ್ನ ಓದಿದ್ರಿ?' ಎನ್ನುವ ಎರಡು ಪ್ರಶ್ನೆಗಳ ಮೂಲಕ ಸದಾ ನನಗೆ 'ಬರೆಯುತ್ತಲೇ ಇರು' ಎನ್ನುವ ಪ್ರೀತಿಯ ಎಚ್ಚರಿಕೆಯನ್ನು ಕೊಡುತ್ತಲೇ ಬಂದಿದ್ದಾರೆ. ಅವರ ಮೌನದ ಬಗ್ಗೆ ಅಚ್ಚರಿ ಪಡುತ್ತಲೇ ಒಮ್ಮೆ ಸರಸ್ವತಿ ಅಮ್ಮನ ಹತ್ತಿರ 'ಏನಮ್ಮಾ ಮೇಷ್ಟ್ರು ಹೆಚ್ಚು ಮಾತಾಡೋದೇ ಇಲ್ಲ' ಅಂದಾಗ, ಅವರು 'ಛಾಯಾ, ಅವರು ಒಂಥರಾ ನಲ್ಲಿ ಇದ್ದಾಗೆ. ನೀನಾಗೇ ನೀನು ತಿರುವಿದಾಗಷ್ಟೇ ನೀರು ಬರೋ ಹಾಗೆ. ನೀನು ಮಾತಾಡ್ತಾ ಕೂತರಷ್ಟೇ ಅವರು ಮಾತಾಡ್ತಾರೆ, ಚರ್ಚೆ ಮಾಡ್ತಾರೆ. ನೀನೂ ಸುಮ್ನಿದ್ರೆ ಅವರೂ ದಿವ್ಯಮೌನಿಯಾಗ್ಬಿಡ್ತಾರೆ. ನಿಮ್ಮ ಮೇಷ್ಟ್ರು ನನ್ನ ಹತ್ತಿರ ಮಾತಾಡಿದ್ದೇ ಕಮ್ಮಿ' ಅಂದು ನಕ್ಕಿದ್ದರು. ಒಮ್ಮೆ ವಿಪರೀತ ಜ್ವರ, ತಲೆನೋವೆಂದು ಸರಸ್ವತಿಯವರ ಹತ್ತಿರ ಕೇಳಿ ಕಾಫಿ ಮಾಡಿಸಿಕೊಂಡು ಕುಡಿದಾಗ, ಮೇಷ್ಟ್ರು 'ಓಹೋ, ಅಂತೂ ಛಾಯಾಗೆ ಇದೂ ಒಂದು ಮನೆ, ಏನಾದರೂ ಕೇಳಬೇಕು, ಇವರೂ ನಮ್ಮವರೆ ಅಂತ ಅನ್ನಿಸ್ತಲ್ಲ!' ಅಂತ ಹಿರಿಹಿರಿ ಹಿಗ್ಗಿದ್ದರು.

ಋತನ ಮದುವೆಗೆ ಸ್ವಲ್ಪ ದಿನಗಳ ಮೊದಲು ಮೇಷ್ಟ್ರಿಗೆ ಸ್ಕೂಟರ್ ಅಪಘಾತದಲ್ಲಿ ಕಾಲಿಗೆ ಪೆಟ್ಟಾಗಿ ಅವರು ವಿಶ್ರಾಂತಿಯಲ್ಲಿ ತುಂಬ ದಿನ ಉಳಿದದ್ದೊಂದು ಬೇಸರದ ನೆನಪು.

ಮೇಷ್ಟ್ರು, ಸರಸ್ವತಿ ಅಮ್ಮ ಸದಾ ನನ್ನನ್ನು ಅವರ ಮನೆ ಮಗಳಂತೆಯೇ ಕಂಡಿದ್ದಾರೆ. ನನಗೆ ಒಳ್ಳೆಯ ಕೆಲಸ ಸಿಕ್ಕಾಗ, ನನ್ನ ಲಗ್ನ ಗಟ್ಟಿಯಾದಾಗ ಮನದುಂಬಿ ಸಂಭ್ರಮಿಸಿದ್ದಾರೆ.

ನಾನು ನನ್ನ ಲಗ್ನಪತ್ರಿಕೆ ಕೊಡಲು ಹೋಗಿದ್ದಾಗ ಅಮ್ಮ ಕಣ್ತುಂಬಿಕೊಂಡು, 'ಸದಾ ಸುಖವಾಗಿರು, ಪ್ರೀತಿಯಿಂದ ಇರು, ಹಿರಿಯರನ್ನು ಗೌರವದಿಂದ, ಕಾಳಜಿಯಿಂದ ನೋಡಿಕೋ' ಎಂದು ಆಶೀರ್ವದಿಸಿ ಬೀಳ್ಕೊಟ್ಟಿದ್ದು ಈಗಷ್ಟೇ ನಡೆದಂತೆ ಕಣ್ತುಂಬಿದೆ.

ಪ್ರತಿಸಲ ಅವರ ಮನೆಯಿಂದ ಹೊರಟು ಬರುವಾಗಲೂ ನನಗೊಂದು ಪುಸ್ತಕ ಸಿಕ್ಕೇ ಸಿಗುತ್ತದೆ. ಶಾಲೆಯಲ್ಲಿ ಹಾಡು ಹೇಳಿ, ಭಾಷಣ ಮಾಡಿ ಸ್ಪರ್ಧೆಯಲ್ಲಷ್ಟೇ ಪುಸ್ತಕ ಬಹುಮಾನ ಪಡೆದು ಅತೀವ ಪುಳಕಗೊಳ್ಳುತ್ತಿದ್ದ ನನಗೆ, ಮೇಷ್ಟ್ರು ಕೈಗೊಂದು ಪುಸ್ತಕವನ್ನು ಪ್ರತಿಸಲ ಕೊಟ್ಟಾಗಲೂ ಅದೇ ಪುಳಕ, ರೋಮಾಂಚನ ಉಂಟಾಗುತ್ತದೆ. ಅವರಿಂದ ಹಾಗೆ ಪುಸ್ತಕ ಪ್ರೀತಿಯನ್ನು ಪಡೆಯದೇ ನಾನು ಬರಿಗೈಲಿ ಯಾವತ್ತೂ ವಾಪಸಾದದ್ದಿಲ್ಲ. ಅವರ ಮನೆತುಂಬ ಓಡಾಡಿ, ಬೇಕಾದ ಪುಸ್ತಕವನ್ನು ಪಡೆದು ಓದಿಕೊಳ್ಳುವುದಕ್ಕೆ, ಮೇಷ್ಟ್ರು ತೋರಿಸುವ ಸೌಜನ್ಯಕ್ಕೆ, ಅವರ ದೊಡ್ಡ ಮನಸ್ಸಿಗೆ ನಾನು ಸದಾ ಋಣಿ. ಅವರ ಸಹನಶೀಲತೆ, ಪ್ರೀತಿ ತುಂಬಿತ ಆತ್ಮೀಯತೆ, ನಾವೂ ಅವರಂತಿರಬೇಕು ಎನ್ನುವ ಹುಮ್ಮಸ್ಸು ತರಿಸುತ್ತದೆ. ಅವರನ್ನು ಭೇಟಿ ಮಾಡಿ ಬಂದಾಗಲೆಲ್ಲ ಒಂದು ಹುರುಪು ಬರುತ್ತದೆ.

ಇದು, ಈಗಷ್ಟೇ ಶುರುವಾಗಿರುವ ಆತ್ಮೀಯ ಪಯಣ, ಇನ್ನೂ ದೂರ ಸಾಗುವುದಿದೆ. ಮೇಷ್ಟ್ರ ಈ ಒಡನಾಟದಲ್ಲಿ ಎಷ್ಟೆಲ್ಲ ಜನರ ಸ್ನೇಹ, ಪ್ರೀತಿಗಳು ದೊರಕಿವೆ. ಡಿ.ವಿ. ಪ್ರಹ್ಲಾದ್, ಅಭಿನವ ರವಿ, ಚಂದ್ರಿಕಾ, ಭಗವತಿ, ಗೀತಾ, ಎನ್.ಎಸ್. ಶ್ರೀಧರಮೂರ್ತಿ, ಇನ್ನೂ ಅನೇಕರು.

ಇವತ್ತು ನನ್ನ ಬದುಕಿಗೆ ಪುಟಾಣಿ ನಿಜಗುಣನ ಆಗಮನವಾಗಿದೆ. ನನ್ನೊಂದಿಗೆ, ಅವನಿಗೂ ಇದೆಲ್ಲದರ ಸವಿ ಸಿಗುವ ಹಾಗೆ ಅವನ ಬದುಕನ್ನು ನಾನು ರೂಪಿಸಬೇಕು.

'ಬರೆಯುತ್ತಲೇ ಇರು', 'ಏನನ್ನಾದರೂ ಬರಿಯಮ್ಮ' ಎನ್ನುವ ಮೇಷ್ಟ್ರ ದನಿ ಸದಾ ಕೇಳಿಸಿದಂತೆ, ಬೆರಳುಗಳಗೆ ಒಂದಷ್ಟು ಚೇತನ ತುಂಬಿಕೊಳ್ಳಬೇಕಾಗಿದೆ, ಏನನ್ನಾದರೂ ಬರೆಯಬೇಕಾಗಿದೆ.

ಈ ಅಕ್ಷರಗಳ ಹಬ್ಬದಲ್ಲಿ ರಾಜು ಮೇಷ್ಟ್ರ ಪಾತ್ರ ತುಂಬ ಹಿರಿದು. ಅವರ ಕಾರ್ಯಶಕ್ತಿಗೆ, ಮೌನದ ಹಿಂದಿನ ಮಾತಿನ ಶಕ್ತಿಗೆ ನೂರು ಶರಣು. ಮತ್ತೊಮ್ಮೆ ಮೇಷ್ಟ್ರಿಗೆ ಹೃದಯ ತುಂಬಿದ ಅಭಿನಂದನೆಗಳು ಮತ್ತು ಗೌರವಪೂರ್ಣ ನಮಸ್ಕಾರಗಳು.



# ಜೀವಂತಿಕೆ

● ಎ.ಜಿ. ವಿಜಯರಾಘವನ್

ಯಾವುದೇ ಒಂದು ಸಂಘಸಂಸ್ಥೆಯಾಗಲಿ ಅದು ಜೀವಂತವಾಗಿದೆ ಎನ್ನುವುದಕ್ಕೆ ಅದರ ಚಟುವಟಿಕೆಗಳೇ ಸಾಕ್ಷಿ. ಈ ದೃಷ್ಟಿಯಿಂದ ಕ್ರೈಸ್ಟ್ ಕಾಲೇಜು ಕನ್ನಡ ಸಂಘ ಜೀವಂತಿಕೆಯನ್ನು ಉಳಿಸಿಕೊಂಡು ಬಂದಿರುವಂತಾದ್ದು. ಪ್ರತಿವರ್ಷವೂ ಪ್ರಾರಂಭ ಮತ್ತು ಮುಕ್ತಾಯ ಸಮಾರಂಭ ಎಂದು ಎರಡೇ ಕಾರ್ಯಕ್ರಮಗಳನ್ನು ನಡೆಸುತ್ತಿರುವ ಅನೇಕ ಕಾಲೇಜು ಕನ್ನಡ ಸಂಘಗಳಿವೆ. ಆದರೆ ಕ್ರೈಸ್ಟ್ ಕಾಲೇಜು ಕನ್ನಡ ಸಂಘ ಪ್ರತಿವರ್ಷ ಇವೆರಡೂ ಸಮಾರಂಭಗಳನ್ನು ಯಾಂತ್ರಿಕವಾಗಿ ನಡೆಸದೆ, ಕಾಲೇಜಿನಲ್ಲಿ ಕನ್ನಡ ಸಂಘ ಸ್ಥಾಪನೆಯಾದಾಗ ಪ್ರಾರಂಭೋತ್ಸವವನ್ನು ನಡೆಸಿ, ತನ್ನ ಚಟುವಟಿಕೆಗಳನ್ನು ಅತ್ಯಂತ ಉತ್ಸಾಹದಿಂದ ಕ್ರಿಯಾತ್ಮಕವಾಗಿ ನಡೆಸುತ್ತಾ ಬಂದಿದೆ. ಈ ಸಂಘ ಮುಕ್ತಾಯ ಸಮಾರಂಭವನ್ನೇ ಆಚರಿಸದೆ ಚಿರಕಾಲವೂ ಜೀವಂತವಾಗಿರಲೆಂದು ಆಶಿಸುತ್ತೇನೆ.

ಕ್ರೈಸ್ಟ್ ಕಾಲೇಜು ನಾನು ಓದಿದ ಕಾಲೇಜು. ಆದ್ದರಿಂದ ನನಗೆ ಹೆಚ್ಚಿನ ಸಂತೋಷ. ಇವೆಲ್ಲಕ್ಕಿಂತಲೂ ಹೆಚ್ಚಾಗಿ ಕನ್ನಡವೇ ಬದುಕು, ಬದುಕೇ ಕನ್ನಡ ಎಂದು ಸದಾಕಾಲ ಕನ್ನಡ ಸಂಘಕ್ಕೋಸ್ಕರ ದುಡಿಯುತ್ತಿರುವ ವ್ಯಕ್ತಿ, ನನ್ನ ಗುರುಗಳಾದ ಶ್ರೀ ಜಿ. ಶ್ರೀನಿವಾಸರಾಜು ಅವರು. ನಾನು ಕಂಡಂತೆ ಕ್ರೈಸ್ಟ್ ಕಾಲೇಜಿನಲ್ಲಿ ಕನ್ನಡ ಸಂಘ ಎಂದರೆ ರಾಜು; ರಾಜು ಎಂದರೆ ಕನ್ನಡ ಸಂಘ. ಸಂಘವು ಆರ್ಥಿಕ ಮುಗ್ಗಟ್ಟನ್ನು ಎದುರಿಸುತ್ತಿದ್ದರೂ ತಮ್ಮ ಯೋಚನೆ ಮತ್ತು ಯೋಜನೆಗಳ ಮೂಲಕ ಹಾಗೂ ಹೀಗೂ ಪ್ರಕಟಣೆಯ ಕಾರ್ಯವನ್ನು ನಿಲ್ಲಿಸದೇ ಪ್ರಕಟಿಸುತ್ತಾ ಬಂದು ೫೦ನೇ ಪುಸ್ತಕವನ್ನು ಪ್ರಕಟಿಸುತ್ತಿರುವುದು ಅತ್ಯಂತ ಹೆಮ್ಮೆಯ ವಿಚಾರ. ಕನ್ನಡದ ಉದಯೋನ್ಮುಖ ಬರಹಗಾರರು ಇಂದು ಪ್ರಕಾಶಕರು ಸಿಗದೆ ತಮ್ಮ ಸೃಜನಶೀಲತೆ ಬೆಳಕು ಕಾಣದೆ ತತ್ತರಿಸುತ್ತಿರುವಾಗ ಈ ಕನ್ನಡ ಸಂಘ ಅತ್ಯಂತ ಪ್ರಯೋಜನಕಾರಿಯಾಗಿ ಇಂತಹ ಬರಹಗಾರರಿಗೆ ಸಹಾಯ ಮಾಡುವುದರಲ್ಲಿ ತನ್ನ ಕನ್ನಡದ ಪರಿಚಾರಿಕೆಯನ್ನು ನಿರ್ವಹಿಸುತ್ತಿದೆ. ❑



# ಮನ-ರೆಕ್ಕೆ ಬಿಚ್ಚಿದ ಹಕ್ಕಿ

● ಜಿ.ಎನ್. ಮೋಹನ್

ಕ್ರೈಸ್ಟ್ ಕಾಲೇಜ್ ಕನ್ನಡ ಸಂಘ ಐವತ್ತನೆಯ ಪುಸ್ತಕಕ್ಕೆ ಸಜ್ಜಾಗುತ್ತಿದೆ ಎಂದು ಗೊತ್ತಾದಾಗ ಎಲ್ಲೋ ಮನ ರೆಕ್ಕೆ ಬಿಚ್ಚಿದ ಹಕ್ಕಿಯಾಗುತ್ತದೆ. ಕ್ರೈಸ್ಟ್ ಕಾಲೇಜ್‌ನ ಆ ಪುಸ್ತಕ ಪುಟಗಳಲ್ಲೂ ನಾವು ನಮ್ಮನ್ನು ಎಲ್ಲಿಯೋ ತೊಡಗಿಸಿಕೊಂಡಿದ್ದೇವೆ ಎನ್ನುವಷ್ಟು ಇಂದಿನವರೆಗೂ ಕ್ರೈಸ್ಟ್ ಕಾಲೇಜ್‌ನ ಕನ್ನಡ ಸಂಘದೊಡನೆ ನಾವು ಬೆಸೆದು ಹೋಗಿದ್ದೇವೆ.

ನನಗಿನ್ನೂ ನೆನಪಿದೆ. ಆಗತಾನೆ ನಿಜಲಿಂಗಪ್ಪ ಕಾಲೇಜಿನಲ್ಲಿ ಪಿ.ಯು.ಸಿ. ಓದುತ್ತಿದ್ದೆ. ಒಂದು ದಿನ ನನ್ನ ಅಣ್ಣ ನನ್ನ ಕೈಗೆ ಒಂದು ಪುಸ್ತಕ ತಂದಿತ್ತ. ನಾನು ಕಾಣರಿಯದ ಗೆಳೆಯ ಸಿ.ಪಿ. ರವಿಕುಮಾರ್ 'ಅವರು ಬೆಳೆಸಿದ ಗಿಡಗಳು' ಕವನ ಸಂಕಲನವನ್ನು ನನಗಾಗಿ ಕಳುಹಿಸಿದ್ದ. ಕವನಗಳನ್ನು ಓದುತ್ತಾ ಹೋದೆ. ಅವು ಅರೆಬರೆಯ ಕವನಗಳಲ್ಲ. ಎಲ್ಲೋ ಒಂದೆಡೆ ಸಾಣೆ ಹಿಡಿದು ನೀಟಾದ ಚಿತ್ರಗಳನ್ನು ಮೂಡಿಸಿದಂತಿತ್ತು. ಕ್ರೈಸ್ಟ್ ಕಾಲೇಜ್ ಆ ಕವಿ ಗೆಳೆಯರೆಲ್ಲರನ್ನೂ ಒಂದೆಡೆ ಸೇರಿಸಿ ಸಾಣೆ ಹಿಡಿದಿತ್ತು.

ಪಿ.ಯು.ಸಿ. ಮುಗಿಸಿ ಪದವಿಗಾಗಿ ನಾಟಕವನ್ನು ಆಯ್ದುಕೊಂಡಿದ್ದೆ. ಕ್ರೈಸ್ಟ್ ಕಾಲೇಜ್ ಪ್ರತಿ ಜನವರಿ ೩೧ ರಂದು ಕವನ ಸಂಕಲನ ಬಿಡುಗಡೆ ಇಟ್ಟುಕೊಳ್ಳುತ್ತಾರೆ ಎಂದು ಗೊತ್ತಿತ್ತು. ಲೆಕ್ಕ ಹಾಕಿದೆ. ಸ್ಪರ್ಧೆಯ ಪೂರ್ವ ತಯಾರಿಗೆ ಎಷ್ಟು ದಿನ ಬೇಕು. ಎರಡು ತಿಂಗಳು. ನವೆಂಬರ್‌ನಿಂದಲೇ ನಮ್ಮ ಕಾಲೇಜಿನ ನೋಟಿಸ್ ಬೋರ್ಡ್ ನೋಡುವ ಕೆಲಸ ನನ್ನದಾಯಿತು. ಕೊನೆಗೂ ಅಲ್ಲಿ ಅದು ಕಾಣಸಿಗಲೇ ಇಲ್ಲ. ಆಗಾಗ ಕಬ್ಬನ್‌ಪಾರ್ಕಿನ ಜೊತೆಗೆ ಅಲ್ಲಿನ ಲೈಬ್ರರಿಗೂ ಭೇಟಿ ಕೊಡುವ ಹವ್ಯಾಸ ಇತ್ತು. ಆ ದಿನ ಲೈಬ್ರರಿಗೆ ಯಾವುದೋ ರಜೆ. ಗೊತ್ತಿಲ್ಲದೇ ಹೋಗಿದ್ದೆ. ರಜ ಏಕಿರಬಹುದು ಎಂಬ ಕುತೂಹಲದಿಂದ ನೋಟಿಸ್‌ಬೋರ್ಡ್ ನೋಡಿದೆ. ಅಲ್ಲಿ ಅಂತು ನನಗೆ ಬೇಕಿದ್ದ ಪ್ರವೇಶ ಸಿಕ್ಕಿಬಿಟ್ಟಿತು.

ಜನವರಿ ೩೧.

ನಾನೂ ಆಯ್ಕೆಯಾಗಿಬಿಟ್ಟಿದ್ದೆ. ಬೆಂಗಳೂರು ಎಂಬ ನಗರಿಯಲ್ಲಿ ಅದು ನನಗೆ ಮೊದಲು ಸಿಕ್ಕ ಪದಕ. 'ಮಗ್ಗುಲಾಗದ ಮೌನಕ್ಕೆ ಒಂದಿಷ್ಟು ಪ್ರಶ್ನೆಗಳು' ನನ್ನ ನೋವಿನ ಹಲವು ಸಾಲುಗಳು ನನಗೇ ಗಂಭೀರವಾಗಿ ಕಾಡತೊಡಗಿತ್ತು. ಅಂದಿನಿಂದ ನಾನು ಎಲ್ಲಾ ಜನವರಿ ೩೧ನ್ನು ಕ್ರೈಸ್ಟ್ ಕಾಲೇಜಿನಲ್ಲಿಯೇ ಕಳೆದಿದ್ದೇನೆ ಎಂಬುದು ಚೆನ್ನಾಗಿ ನೆನಪಿದೆ. ಕ್ರೈಸ್ಟ್ ಕಾಲೇಜ್ ಒಂದು ರೀತಿಯಲ್ಲಿ ಹಲವು ರೆಕ್ಕೆಯ ಹಕ್ಕಿ. (ನನ್ನ ಕವನದ ಹೆಸರೂ ಅದೇ) ಮೇಷ್ಟ್ರು ಶ್ರೀನಿವಾಸರಾಜುರವರು ಏನೆಲ್ಲಾ ಮಾಡಬಲ್ಲರು ಎಂಬುದು ಎಲ್ಲರಿಗೂ ಗೊತ್ತಿದೆ. ಸ್ಕೂಟರ್ ಹತ್ತಿ ಚಾಮರಾಜಪೇಟೆಯ ಬೆಂಗಳೂರು ಹೈಸ್ಕೂಲ್‌ನ ಹಿಂದೆ ಇರುವ ಪುಟ್ಟ ಹೋಟೆಲ್‌ನಲ್ಲಿ ಇಡ್ಲಿ ತಿಂದು ಇಳಾಗೆ, ಮುನಿಧರ್ಮಯ್ಯನವರ ಪ್ರೆಸ್ಸಿಗೆ ಭೇಟಿ ನೀಡಿ ಕವನಗಳ ತಪ್ಪುಗಳಿಗೆ ಕಾಟು ಹೊಡೆದು ನೀಟು ಗೀಟು ಹಾಕಿದ್ದಾರೆ. ಅವರ ಈ ಕಾಟುಗಳ ಮೂಸೆಯಲ್ಲಿ ನನ್ನ 'ಮಗ್ಗುಲಾಗದ ಮೌನ..., 'ವಿದಾಯ', 'ನೂಪುರ', 'ಸೋನೆ ಮಳೆಯ ಸಂಜೆ', 'ಓಲಗದ ಮರೆಯಲ್ಲಿ' ಕವನಗಳು ಸಿಕ್ಕಿವೆ.

ಕ್ರೈಸ್ಟ್ ಕಾಲೇಜಿನಲ್ಲಿ ನಾನು ಹಲವು ಗೆಳೆಯರನ್ನು ಕೂಡಿ ಕಳೆದಿದ್ದೇನೆ. ಹಲವು ಗೆಳೆಯರು ಸಿಕ್ಕಿದ್ದಾರೆ. ರಾಜು ನಮ್ಮ ಗೆಳೆಯರ ತೆಕ್ಕೆಗೆ ಧಾರವಾಡದ ವಕ್ಕುಂದರರನ್ನು, ತುಮಕೂರಿನ ಗುರುದತ್, ಬೆಂಗಳೂರಿನ ಬಿ.ಎಸ್. ಗಾಯತ್ರಿ, ಶಿವಮೊಗ್ಗದ ಹೇಮಾ ಶಿರವಂತೆ ಅವರುಗಳನ್ನು ಸೇರಿಸಿದ್ದಾರೆ.

ಕನ್ನಡ ಸಂಘದೊಡನೆ ಕೆಲಸ ಮಾಡುವುದು ನಮಗೆ ಹೆಮ್ಮೆಯ ವಿಷಯ. ಗೆಳೆಯ ಎಲ್ಸಿ ತನ್ನ ವಿದ್ಯಾರ್ಥಿ ಜೀವನ ಮುಗಿಸಿದಾಗ 'ಇಳಾ'ದಲ್ಲಿ ಕನ್ನಡ ಸಂಘದ ನಮ್ಮ ಕವನಗಳಿಗೆ ಕರಡು ತಿದ್ದಿದ್ದಾನೆ. ಬುರ್ಖಾ ಬಗ್ಗೆ ಹೆಚ್ಚು ಬರೆಯುತ್ತಿದ್ದ ನಟರಾಜ್ ಹುಳಿಯಾರ್, ಮಾದಾಪುರದ ಅಬ್ದುಲ್ ರಷೀದ್ ಪ್ರಜಾವಾಣಿಯಲ್ಲಿ ಕಥೆಗಾಗಿ ಪ್ರಥಮ ಬಹುಮಾನಗಳನ್ನು ಗಿಟ್ಟಿಸಿದ್ದಾರೆ. ಇವರ್‍ಯಾರೂ ಕನ್ನಡ ಸಂಘದಿಂದ ಆಚೆ ಹೋದ ನೆನಪಿಲ್ಲ.

'ಮಗ್ಗುಲಾಗದ ಮೌನ... ದಿಂದ ಪಲ್ಲಕ್ಕಿ ಹೊರಿರೋ ಪಾಣಿಗ್ರಹಣಕ್ಕೆ' ಎಂಬ ದೀರ್ಘ ಕವನದವರೆಗೆ ಕ್ರೈಸ್ಟ್ ಕಾಲೇಜ್ ನನ್ನಲ್ಲಿ ಹುಮ್ಮಸ್ಸು ಹುಟ್ಟು ಹಾಕಿದೆ.

ಹಾಂ ಪಾಣಿಗ್ರಹಣದವರೆಗೂ...

ಯಾಕೆಂದರೆ ನನ್ನ ಪಾಣಿಗ್ರಹಣಕ್ಕೆ ಹುಡುಗಿ ಸಿಕ್ಕಿದ್ದೂ ಕ್ರೈಸ್ಟ್ ಕಾಲೇಜಿನಲ್ಲಿಯೇ. ಅ.ನ.ಕೃ. ಪ್ರಬಂಧ ಸ್ಪರ್ಧೆಯಲ್ಲಿ ಬಹುಮಾನ ಪಡೆಯಲು ತುಮಕೂರಿನಿಂದ ಬಂದ ಹುಡುಗಿಯನ್ನು ಕಂಗ್ರಾಜುಲೇಟ್ ಮಾಡುವ ನೆವದಲ್ಲಿ ಹೋಗಿ ಬಲೆಗೆ ಬಿದ್ದೆ. ನಂತರ ಈ ಸಂಬಂಧ ಜನ ನನಗೇ ಕಂಗ್ರಾಜುಲೇಷನ್ಸ್ ಹೇಳಿದ್ದಾರೆ.

ಹೀಗೆ.... ಮೌನದಿಂದ ನಿನಾದದವರೆಗೂ, ಕವನದಿಂದ ಪಾಣಿಗ್ರಹಣದವರೆಗೂ ಹತ್ತು ಹಲವು ರೀತಿಯಲ್ಲಿ ಕ್ರೈಸ್ಟ್ ಕಾಲೇಜ್ ಕನ್ನಡ ಸಂಘ, ಶ್ರೀನಿವಾಸರಾಜು ಹಾಗೆಯೇ ಆಗಸ್ಟಿನ್ ಜೋಸೆಫ್ ಹಚ್ಚ ಹಸುರಾಗಿದ್ದಾರೆ.

*ಕ್ರೈಸ್ಟ್ ಕಾಲೇಜ್ 'ಆನಂದ' ಸದಾಶಯ ಸಂಚಿಕೆ*



# ಕನ್ನಡ ಸಂಘದ ಸಾಧನೆ

● *ನಟರಾಜ್ ಹುಳಿಯಾರ್*

ನನಗಿನ್ನೂ ಚೆನ್ನಾಗಿ ನೆನಪಿದೆ. ನಾಲ್ಕೈದು ವರ್ಷದ ಹಿಂದಿನ ಮಾತು. ತಿಪಟೂರಿನಲ್ಲಿ ಬಿ.ಎ. ಓದುತ್ತಿದ್ದೆ. ನಿಮ್ಮ ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಲೇಖನ ಸ್ಪರ್ಧೆಯಲ್ಲಿ ನನಗೊಂದು ಬಹುಮಾನ ಬಂದಿತ್ತು. ಆ ದಿವಸಗಳಲ್ಲಿ ನಾನು ಬಹುವಾಗಿ ಹಚ್ಚಿಕೊಂಡಿದ್ದ ಮತಾಂತರ ಕುರಿತ ಲೇಖನ ಅದು. ಹಳ್ಳಿಗಾಡಿನ ಕಾಲೇಜುಗಳಲ್ಲಿ ಅದೇ ಆಗ ಬರೆಯುವುದನ್ನು ಕುದುರಿಸಿಕೊಳ್ಳಹೊರಡುತ್ತಿರುವ ಹುಡುಗರಿಗಾಗಲೀ, ಹುಡುಗಿಯರಿಗಾಗಲೀ ಇಂಥ ಸ್ಪರ್ಧೆಗಳು, ಇವುಗಳ ಬಹುಮಾನಗಳು ತರುವಂಥ ಸಡಗರ. ಆತ್ಮವಿಶ್ವಾಸ ವಾಗಲೀ, ಇಂಥ ತಮ್ಮ ಬರಹಗಳು ಪ್ರಿಂಟಿನಲ್ಲಿ ಕಂಡು ಉಕ್ಕುವ ಬರವಣಿಗೆಯ ಮೊದಲ ದಿನಗಳ ಸಂಭ್ರಮವಾಗಲೀ ಎಷ್ಟೊಂದು ಅಲ್ಲವ ! ಯಾವುದೇ ಬರೆಯ ಹೊರಡುವವನ ಬದುಕಲ್ಲಿ ಇವು ಕೂಡ ಮುಖ್ಯವಾದ ಗಳಿಗೆಗಳು ಅಂತ ನನಗನಿಸುತ್ತದೆ.... ಆಮೇಲೆ ನನ್ನ ಪದ್ಯಗಳೂ ಕೂಡ ಈ ಕನ್ನಡ ಸಂಘದಿಂದಲೇ ಪ್ರತಿವರ್ಷ ಅಚ್ಚಾಗತೊಡಗಿದವು.... ನಾನೊಬ್ಬ ಕವಿಯೆಂಬ ಭ್ರಮೆಯೂ ವಿಶ್ವಾಸವೂ ನನ್ನೊಳಗೆ ಹರಡಿಕೊಳ್ಳತೊಡಗಿದವು.

ಹಾಗೆ ನೋಡಿದರೆ ಈ ನನ್ನ ಪೀಳಿಗೆಯಲ್ಲಿ ಕಣ್ಣಿಟ್ಟು ನೋಡ ಬೇಕಾದಂಥ ಕವಿಗಳೆಲ್ಲ ಈ ಕನ್ನಡ ಸಂಘದ ಆಂಥಾಲಜಿಗಳಲ್ಲೆ ಸಿಕ್ಕಿದ್ದು. ರಶೀದ, ಎಲ್ಸಿ ನಾಗರಾಜು, ಮೋಹನ, ಗುರುದತ್, ಮಮ್ತಾ ಸಾಗರ, ಗಾಯತ್ರಿ... ಇನ್ನೂ ಹೀಗೆ ಎಷ್ಟೊಂದು ಎಳೆಯ ದನಿಗಳು, 'ಫ್ರೆಶ್' ಅನಿಸುವಂಥ ಕೊರಳುಗಳು! ಈ ಹೊತ್ತಿನ ಮುಖ್ಯ ಕವಿಗಳಾದ ಶಿವಪ್ರಕಾಶ್, ಮಂಜುನಾಥ ಮೊದಲಾದವರ ಸಂಕಲಗಳನ್ನೂ ನಿಮ್ಮ ಸಂಘದ ಪ್ರಕಾಶನದಲ್ಲೇ ಓದುತ್ತೇನೆ. ಎಷ್ಟೋ ಸಲ ಅನಿಸುತ್ತೆ—ನೀವು ಪ್ರತಿವರ್ಷ ತರುವ ಕವನಗಳ ಅಂಥಾಲಜಿಗಳನ್ನು ತಿರುವಿಹಾಕಿದರೆ ಸಾಕು ಈ ದಶಕದ ಹುಡುಗ, ಹುಡುಗಿಯರ ಕನಸು, ತಲ್ಲಣ, ಯಾತನೆ, ಖುಷಿಗಳ ಹಲವಾರು



ಮುಖಗಳು ಮತ್ತು ನವ್ಯೋತ್ತರ ಕನ್ನಡ ಕಾವ್ಯ ಹಿಡಿದಂಥ ದಿಕ್ಕುಗಳು ಕೂಡ ರಾಜು ಅವರಿಗೆ ಹೊಳೆಯುವ ತಕ್ಷಣದ ಯೋಜನೆ ಮತ್ತೊಂದು ಪುಸ್ತಕ ಪ್ರಕಟಿಸುವುದು. ಪುಸ್ತಕದ ಸಂಖ್ಯೆಯ ದಾಖಲೆಯಂತೆ ಆರ್ಥಿಕವಾಗಿ ನಷ್ಟ ಹೊಂದಿರುವ ಸಂಘವಾಗಿಯೂ ಕ್ರೈಸ್ಟ್ ಕಾಲೇಜ್ ಕನ್ನಡ ಸಂಘವಾಗಿಯೂ ಕ್ರೈಸ್ಟ್ ಕಾಲೇಜ್ ಕನ್ನಡ ಸಂಘ ದಾಖಲೆ ಸ್ಥಾಪಿಸಿದೆ - ಅದು ಬಹಿರಂಗವಾಗದಿದ್ದರೂ ಹಲವಾರು ವರ್ಷಗಳಿಂದ ತಪ್ಪದೆ ನಡೆಸಿಕೊಂಡು ಬರುತ್ತಿರುವ ವಿದ್ಯಾರ್ಥಿ ವಿಕಾಸ ಪ್ರತಿಭೆಯ ಸ್ಪರ್ಧೆಯು ಸಾಕಷ್ಟು ವಿದ್ಯಾರ್ಥಿಗಳಿಗೆ ಸಂತೋಷ - ಪ್ರೋತ್ಸಾಹ ಕೊಟ್ಟಿದೆ. ಬೇಂದ್ರೆಯವರ ಜನ್ಮದಿನವನ್ನು ಕನ್ನಡ ಸಂಘ ಅರ್ಥಪೂರ್ಣವಾಗಿ ನಡೆಸಿಕೊಂಡು ಬಂದಿದೆ. ಅನ್ಯಭಾಷಾ ಕೃತಿಗಳ ಪ್ರಕಟಣೆ ಸಹ ಕನ್ನಡ ಸಂಘ ನಡೆಸಿಬಹುದಾದ ಅಪರೂಪದ ಕೆಲಸ. ಎಲ್ಲವನ್ನು ಅಪನಂಬಿಕೆಯಿಂದ, ಸಿನಿಕತೆಯಿಂದ ನೋಡುವುದೆ ಸಹಜವೋ ಎನ್ನಿಸುವಂತಹ ಇಂತಹ ವಾತಾವರಣದಲ್ಲಿ ಕನ್ನಡ ಸಂಘದ ಸಾಧನೆ ಗಮನಾರ್ಹ.

*ಕ್ರೈಸ್ಟ್ ಕಾಲೇಜು 'ಆನಂದ' ಸದಾಶಯ ಸಂಚಿಕೆ*



# ಹೇರಳವಾಗಲಿ

● *ಬಿ.ಎಸ್. ರಘುನಾಥ್*

ಶ್ರೇಷ್ಠ ವ್ಯಕ್ತಿಗಳು ಅದರಲ್ಲೂ ಸಮಾಜೋಪಯೋಗಿ ವ್ಯಕ್ತಿಗಳು ಪರರ ಹಿತಕ್ಕಾಗಿ ನಿಸ್ವಾರ್ಥವಾಗಿ ದುಡಿಯುತ್ತಾರೆ. ಹೀಗೆ ದುಡಿಯುವಾಗ ಉದ್ದೇಶವು ಎಷ್ಟು ಮುಖ್ಯವೋ ಅದನ್ನು ಅರ್ಥಮಾಡಿಕೊಂಡು ಅದಕ್ಕೆ ಪ್ರತ್ಯಕ್ಷ-ಪರೋಕ್ಷವಾಗಿ ಬೆಂಬಲ ನೀಡುವವರೂ ಮುಖ್ಯ. ಆಗ ಉದ್ದೇಶ ಸಫಲವಾಗುತ್ತದೆ. ಬೇಂದ್ರೆಯವರು ಒಂದು ಕಡೆ ಹೇಳುತ್ತಾರೆ. ನಾವು ಕನ್ನಡದಲ್ಲಿ ನವೋದಯ ಕಾವ್ಯ ಪ್ರಾರಂಭ ಮಾಡಿದಾಗ ಪರಿಸ್ಥಿತಿಯ ಅನುಕೂಲವಿತ್ತು. ಅದು ಕಾವ್ಯ ಜನಪ್ರಿಯವಾಗುವ ಹಾಗೆ ಮಾಡಿತು ಎಂಬ ಅರ್ಥದಲ್ಲಿ. ಇದರ ಅರ್ಥ ಸಹೃದಯರು, ರಸಿಕರು ಹೇರಳವಾಗಿದ್ದು ಕಾವ್ಯವನ್ನು ಸ್ವಾಗತಿಸುತ್ತಿದ್ದರು ಎಂದು. ಈ ದಿನಗಳಲ್ಲಿ ಸಾಹಿತ್ಯ ಆ ದಿನಗಳಷ್ಟು ಜನಪ್ರಿಯವಲ್ಲ. ನಿಜಕ್ಕೂ ಇಂದಿನ ಸಮಾಜದಲ್ಲಿ ಸಾಹಿತ್ಯಕ್ಕೆ ಸಿಕ್ಕುತ್ತಿರುವ ಪ್ರತಿಕ್ರಿಯೆ ತೀರಾ ಕಡಿಮೆ. ಇಂತಹ ಸನ್ನಿವೇಶದಲ್ಲಿ ಜನಪ್ರಿಯತೆ ನಿರೀಕ್ಷಿಸದೆ, ಎಲ್ಲಾ ತಮ್ಮ ವೇಳೆಯನ್ನು ಸಾಹಿತ್ಯಿಕವಾಗಿ ಬೆಳವಣಿಗೆಗೆ ಮೀಸಲಾಗಿಡುವವರನ್ನು, ಹಾಗೆಯೇ ಅಂಥವರನ್ನು ಪ್ರೋತ್ಸಾಹಿಸುವವರನ್ನು ಸ್ತುತಿಸಬೇಕಾದುದು ಕರ್ತವ್ಯ. ಇಷ್ಟೆಲ್ಲಾ ಮಾತುಗಳು 'ಕ್ರೈಸ್ಟ್ ಕಾಲೇಜ್ ಕನ್ನಡ ಸಂಘ' ತರುತ್ತಿರುವ ಐವತ್ತನೇ ಪುಸ್ತಕದಂತಹ ಸಾಧನೆಯ ಹಿನ್ನೆಲೆಗೆ ಅನ್ವಯಿಸುವ ಮಾತುಗಳು. ಭರವಸೆ ಹುಟ್ಟಿಸುವ ಲೇಖಕರು, ಈಗಾಗಲೇ ಸಾಕಷ್ಟು ಹೆಸರಾಗಿರುವ ಲೇಖಕರು ವಿದ್ಯಾರ್ಥಿ ವಿದ್ಯಾರ್ಥಿನಿಯರು ಇವರುಗಳನ್ನು ತಮ್ಮ ಉದ್ದೇಶಕ್ಕೆ ಸೆಳೆದು ಪ್ರೋತ್ಸಾಹದ ನೀರೆರೆಯುತ್ತಿರುವ ಶ್ರೀ ಶ್ರೀನಿವಾಸರಾಜು ಅವರು ಇಷ್ಟಾದರೂ 'Miles to go before I sleep' ಎನ್ನುವ ಸಜ್ಜನರು. ಹಾಗೇ ಸಂದರ್ಭ ಬಂದರೆ ಒಬ್ಬಂಟಿಯಾಗಿಯೇ ಸದುದ್ದೇಶಕ್ಕೆ ಹೋರಾಡುವ ಹಟ ಉಳ್ಳವರು. ನಾನು ಕನ್ನಡ ಅಧ್ಯಾಪಕನಾಗಿ ಕ್ರೈಸ್ಟ್ ಕಾಲೇಜಿನಲ್ಲಿ ಎರಡು ಮೂರು ವರ್ಷಗಳು ಕೆಲಸ ಮಾಡಿದ್ದೇನೆ. 'ಕನ್ನಡ ಸಂಘ' ಚಟುವಟಿಕೆಗಳಲ್ಲಿ ಪಾಲುಗೊಂಡಿದ್ದೇನೆ ಎಂಬ ಸಂತೋಷ ನನ್ನದಾಗಿದೆ. ಅಂಥವರಿಗೆ ಬೆಂಬಲವಾಗಿರುವ ಕ್ರೈಸ್ಟ್ ಕಾಲೇಜ್ ಆಡಳಿತ ಮಂಡಳಿ ಇಂದು ಹೆಮ್ಮೆ ಪಡುವ ಮಟ್ಟಕ್ಕೆ ಕನ್ನಡ ಸಂಘ ಬೆಳೆದಿದೆ. ಇದರ ಉದ್ದೇಶ ಸಫಲವಾಗಲಿ, ಇದಕ್ಕೆ ನೀರೆರೆದು ಪೋಷಿಸುವವರ ಸಂಖ್ಯೆ ಹೇರಳವಾಗಲಿ ಎಂದು ಹಾರೈಸುತ್ತೇನೆ.

*ಕ್ರೈಸ್ಟ್ ಕಾಲೇಜು 'ಆನಂದ' ಸದಾಶಯ ಸಂಚಿಕೆ*



## ಬರಹಗಾರರನ್ನು ಸೃಷ್ಟಿಸುವ ಚಿರಂಜೀವಿ

● *ಎನ್. ಸುರೇಶ್ ನಾಗಲಮಡಿಕೆ*

**ಪ್ರೊ.** ಜಿ. ಶ್ರೀನಿವಾಸರಾಜು ಅವರು ಕನ್ನಡ ಸಾಂಸ್ಕೃತಿಕ ವಲಯ ಕಂಡ ಅಪರೂಪದ ವ್ಯಕ್ತಿಗಳಲ್ಲಿ ಒಬ್ಬರು. ಶಿಸ್ತು, ಸಂಯಮ, ಸಮಯಪಾಲನೆ, ಶ್ರದ್ಧೆ ಇವೆಲ್ಲವನ್ನು ತಮ್ಮ ಬದುಕಿನಲ್ಲಿ ಅಳವಡಿಸಿ ಕೊಂಡವರು. ಸಮಕಾಲೀನ ಕನ್ನಡ ಸಾಹಿತ್ಯದ ಬೆಳವಣಿಗೆಯನ್ನು ಅವಲೋಕಿಸಿದಾಗ ಅದರಲ್ಲಿ ಸಾಂಸ್ಕೃತಿಕ ಪತ್ರಿಕೆಗಳ ಹಾಗೂ ಪ್ರಕಾಶನಗಳ ಪಾತ್ರ ಮಹತ್ವದ್ದು. ಸರಿಸುಮಾರು ಕರ್ನಾಟಕದ ಎಲ್ಲಾ ಸಾಂಸ್ಕೃತಿಕ ಪತ್ರಿಕೆಗಳ, ಪ್ರಕಾಶನಗಳಿಗೆ ಶ್ರೀನಿವಾಸ ರಾಜು ಅವರ ಪ್ರೋತ್ಸಾಹ ಪ್ರಾಮಾಣಿಕ ಬೆಂಬಲ ಎದ್ದುಕಾಣುತ್ತದೆ. ಉದಾ: ಅಭಿನವ, ಸಂಚಯ, ಮುಂತಾದ ಹಲವಾರು ಪತ್ರಿಕೆಗಳಿಗೆ ಸಲಹೆ ಯನ್ನು ನೀಡುತ್ತಿದ್ದಾರೆ. ಇತ್ತೀಚಿನ ಸಂದರ್ಭದಲ್ಲಂತೂ ಹೊಸದಾಗಿ ಪ್ರಾರಂಭವಾಗುವ ಪ್ರಕಾಶನಗಳೂ, ಕಾಲೇಜು ಮಟ್ಟದಲ್ಲಿ ನಡೆಯುವ ವಿಚಾರಸಂಕಿರಣ, ಪುಸ್ತಕ ಪ್ರಕಟನೆಗಳಲ್ಲಿ ಶ್ರೀನಿವಾಸರಾಜು ಸರ್ ಹಾಗು ಡಾ. ಎಚ್.ಎಸ್.ಆರ್. ಅವರ ಹೆಸರುಗಳು ಇದ್ದೇ ಇರುತ್ತವೆ. ಈಗಲೂ ತಮ್ಮ ಮಹತ್ವಾಕಾಂಕ್ಷೆಯ ಸಂಸ್ಥೆಯಾದ ಕ್ರೈಸ್ಟ್‌ಕಾಲೇಜು ಕನ್ನಡ ಸಂಘದ ಮುಖಾಂತರ ಹಾಗೂ ಅಂಕಣದ ಮುಖೇನ ಪ್ರತಿವರ್ಷ ಯುವ ಪೀಳಿಗೆಯ ಬರಹಗಾರರನ್ನು ಸೃಷ್ಟಿಸುತ್ತಿದ್ದಾರೆ. ಇದರಲ್ಲಿ ಯಾವುದೇ ರೀತಿಯ ಭೇದಭಾವವಿಲ್ಲ. ಪ್ರಸ್ತುತ ಕನ್ನಡ ಸಂದರ್ಭ ಯಾವ ಪರಿಸ್ಥಿತಿಗೆ ಬಂದಿದೆ ಎಂದರೆ ಬೆಂಗಳೂರಿನ ಬಿಜ಼ಿ ಜೀವನ ನಮ್ಮ ಸಾಹಿತಿಗಳಿಗೆ ಬಲವಾಗಿ ತಟ್ಟಿದೆ ಎಂದರೆ ತಪ್ಪಾಗಲಾರದು. ಯುವ ಬರಹಗಾರ ಕವಿತೆಯನ್ನು ನೋಡುವುದಕ್ಕೆ ಅವರಿಗೆ ಸಮಯವಿಲ್ಲದಂತಾಗಿದೆ. ಇಂಥ ಸಂದರ್ಭದಲ್ಲಿ ಬೆಂಗಳೂರಿನಲ್ಲಿದ್ದುಕೊಂಡೇ ಕರ್ನಾಟಕದ ಮೂಲೆ ಮೂಲೆಯ ಯುವ ಬರೆಹಗಾರರ ಕವಿತೆಗಳನ್ನು, ಕತೆಯನ್ನೂ, ವಿಮರ್ಶೆಯನ್ನೂ 'ಓದುತ್ತಾರೆ'. ಅವುಗಳನ್ನು ಪ್ರಕಟಿಸುವುದಕ್ಕೆ ರಾಜು ಸಾರ್ ಪ್ರಯತ್ನಿಸುತ್ತಾರೆ. ಇಂತಹ ಕಾಯಕಗಳಿಗೆ ಸಾವು ಇಲ್ಲ. ಕನ್ನಡ ಹಿರಿಯ ಜೀವಗಳಾದ ಜಿ.ಪಿ ರಾಜರತ್ನಂ, ಎಸ್.ಪಿ. ಪರಮೇಶ್ವರಭಟ್ಟ ಅವರ ಹಾದಿಯಲ್ಲಿ ನಡೆಯುತ್ತಿರುವ ಶ್ರೀನಿವಾಸರಾಜು ಅವರು



ಸ್ವತಃ ಸೃಜನಶೀಲ ಲೇಖಕರು ಹೌದು. ನನ್ನಂತಹ ಅನೇಕ ಯುವ ಬರೆವಗಾರರನ್ನು ಬೆಳೆಸಿ, ಲೇಖನಗಳನ್ನು ತಿದ್ದಿದ್ದಾರೆ. ಅವರ ಜೀವನವು ಒಂದು ಮಾದರಿ.

ನ್ಯಾಷನಲ್ ಕಾಲೇಜಿನಲ್ಲಿ ಎಚ್.ಎಸ್.ಆರ್., ಎಚ್ಚೆಸ್ ಅವರ ಪ್ರಭಾವಕ್ಕೆ ಒಳಗಾಗಿದ್ದ ನನಗೆ ರಾಜುಮೇಷ್ಟ್ರು ಶೇಷಾದ್ರಿಪುರಂ ಸ್ನಾತಕೋತ್ತರ ಕೇಂದ್ರದಲ್ಲಿ ಗುರುವಾಗಿ ಪರಿಚಯವಾದರು. ನನ್ನ ಆಲೋಚನೆಗಳು ಆಗಾಗಲೇ ಎಚ್.ಎಸ್.ಆರ್. ಅವರ ಪಾಠ ಪ್ರವಚನಗಳಿಂದ ಸ್ವಲ್ಪ ಮಟ್ಟಿಗೆ ವಿಸ್ತಾರವಾಗುತ್ತಿದ್ದವು. ಆದರೆ ರಾಯಲಸೀಮೆಯ ತೆಲುಗು ಪ್ರಾಂತ್ಯದಿಂದ ಬಂದ ನನಗೆ ಬರೆಯುವ ಗೀಳು ಇರಲಿಲ್ಲ. ರವೀಂದ್ರ ಕಲಾಕ್ಷೇತ್ರದಲ್ಲಿ ಪಿ. ಲಂಕೇಶ್ ಅವರ 'ಗುಣಮುಖ' ಒಂದು ರಾತ್ರಿ ಪ್ರದರ್ಶಿತವಾಯಿತು. ಮರುದಿನ ಅವರು ಕ್ಲಾಸಿನಲ್ಲಿ ನಮಗೊಂದು ಪರೀಕ್ಷೆ ಮಾಡಿದರು. ಆ ನಾಟಕವನ್ನು ನೋಡಿದವರು ಲೇಖನ ರೂಪದಲ್ಲಿ ಬರೆದುಕೊಡ ಬೇಕೆಂದು ಹೇಳಿದರು. ಒಂದು ತಿಂಗಳ ನಂತರ ನಾನು ಬರೆದ 'ಭಿನ್ನ ಶೈಲಿಯ ಗುಣಮುಖ' ಎಂಬ ಪುಟ್ಟ ಲೇಖನ ನಾಟಕ ಅಕಾಡೆಮಿಯಿಂದ ಪ್ರಕಟವಾಗುವ 'ಈ ಮಾಸ' ಪತ್ರಿಕೆಯಲ್ಲಿ ಪ್ರಕಟವಾಯಿತು. ಈ ಸಂತೋಷದ ಸುದ್ದಿಯನ್ನು ಮೊದಲು ನನ್ನ ಆತ್ಮೀಯ ಗುರುಗಳಾದ ಎಚ್.ಎಸ್.ಆರ್. ತಿಳಿಸಿದಾಗ ಬಹಳ ಸಂತೋಷವಾಯಿತು. ಪತ್ರಿಕೆಯಲ್ಲಿ ನನ್ನ ಊರಿನ ಹೆಸರು ಪ್ರಕಟಗೊಂಡಿದ್ದು ಮತ್ತಷ್ಟು ಖುಷಿಯಾಯಿತು. ಮುಂದೆ ನನ್ನನ್ನು ಬರೆವಣಿಗೆಯ ಬೆಳಕಿಗೆ ತಳ್ಳಿದರು. ಈಗಲೂ ನನ್ನ ಲೇಖನಗಳನ್ನು ಪ್ರಕಟಿಸುವಾಗ ಎಲ್ಲಾ ರೀತಿಯ ಸಲಹೆಗಳನ್ನು ನೀಡುತ್ತಾರೆ. ನನ್ನಂತಹ ಅನೇಕ ಬರೆಹಗಾರರನ್ನು ಬೆಳೆಸಿದ್ದಾರೆ. ಇವತ್ತಿನ ಸಂದರ್ಭದಲ್ಲಿ ಯುವ ಪೀಳಿಗೆಯ ಬರಹಗಾರರು ಮುಂದುವರೆಯಬೇಕಾದರೆ ಶ್ರೀನಿವಾಸರಾಜು ಅವರಂತಹ ನಿಸ್ವಾರ್ಥ ಜೀವಿಗಳು ಅನಿವಾರ್ಯ.

ಇನ್ನು ಪಾಠ ಪ್ರವಚನಗಳಿಗೆ ಬಂದರೆ ರಾಜುಮೇಷ್ಟ್ರು ನಾಟಕವನ್ನು ಅದ್ಭುತವಾಗಿ ಮಾಡುತ್ತಾರೆ. ನಾಟಕದ ಪರಂಪರೆಯನ್ನು ಎಂ.ಎ. ತರಗತಿಗಳಲ್ಲಿ ಮೊದಲು ಪರಿಚಯಿಸಿದವರು ರಾಜುಸಾರ್. ನಾಟಕಕಾರರೆಂದರೆ ಕೇವಲ ಸಂಸ, ಕಾರ್ನಾಡ್, ಲಂಕೇಶ್, ಕಂಬಾರ, ಎಂದು ತಿಳಿದಿದ್ದ ನಮಗೆ ಮೇಷ್ಟ್ರು ಶ್ರೀರಂಗ, ಜಿ.ಬಿ. ಜೋಷಿ, ಶಿವಪ್ರಕಾಶ್, ಪರ್ವತವಾಣಿ ಮುಂತಾದವರನ್ನು ಸಂತೋಷವಾಗಿ ಪರಿಚಯಿಸಿದರು.

ಪಿ. ಲಂಕೇಶ್ ಅವರ 'ಗುಣಮುಖ' ನಾಟಕವನ್ನು ಎಷ್ಟು ಪರಿಣಾಮಕಾರಿಯಾಗಿ ಪಾಠ ಮಾಡಿದ್ದರೆಂದರೆ ನಾದಿರ್‌ಷಾ ಈಗಲೂ ನಮ್ಮನ್ನು ಕಾಡುತ್ತಾನೆ. ನಾಟಕ ನೋಡುವ ಹುಚ್ಚು ಅವರಿಂದಲೇ ಪ್ರಾರಂಭವಾಗಿದ್ದು.

ಒಟ್ಟಿನಲ್ಲಿ ಯುವ ಪೀಳಿಗೆಯ ಲೇಖಕರು ಪಕ್ವವಾಗಬೇಕಾದರೆ ರಾಜು ಸಾರ್ ಅತ್ಯಗತ್ಯ. ಹೀಗೆಯೇ ಅವರು ಎಲ್ಲ ಕಾರ್ಯಗಳಲ್ಲಿ ಚಿರಂಜೀವಿಯಾಗಿ ಮುಂದುವರೆಯಲಿ. ಈ ಸಂದರ್ಭದಲ್ಲಿ ನಮ್ಮೆಲ್ಲರನ್ನೂ ಮಕ್ಕಳಂತೆ ನೋಡಿಕೊಳ್ಳುವ ಶ್ರೀಮತಿ ಸರಸ್ವತಿ ಶ್ರೀನಿವಾಸ ರಾಜು ಅವರನ್ನು ನೆನಪಿಸಿಕೊಳ್ಳುತ್ತಾ CSR-HSR ಜೋಡಿಗೆ ನಮಸ್ಕಾರಗಳು.

❑

## ರಾಜು ಮೇಷ್ಟ್ರು : ಕೆಲವು ಸಿಹಿ ಟಿಪ್ಪಣಿಗಳು

● *ಚ.ಹ. ರಘುನಾಥ*

**ಟಿ.** ಶ್ರೀನಿವಾಸರಾಜು ಅವರೊಂದಿಗಿನ ಒಡನಾಟದ ಕೆಲವು ಸಿಹಿ ನೆನಪುಗಳನ್ನು ಟಿಪ್ಪಣಿ ಮಾಡಹೊರಟಿರುವ ನನಗೆ ತಕ್ಷಣಕ್ಕೆ ನನ್ನ ಓರಗೆಯ ಬರಹಗಾರರೊಬ್ಬರು ನೆನಪಾಗುತ್ತಿದ್ದಾರೆ. ಬೆಂಗಳೂರಿನ ಪ್ರತಿಷ್ಠಿತ ಕಾಲೇಜೊಂದರಲ್ಲಿ ಕನ್ನಡ ಮೇಷ್ಟ್ರಾಗಿದ್ದ ಅವರು ಇತ್ತೀಚೆಗಷ್ಟೇ ತಮ್ಮ ಕೆಲಸ ಬದಲಿಸಿದರು. ಚೆನ್ನಾಗಿ ಓದಿಕೊಂಡಿದ್ದ, ಚುರುಕಾಗಿ ಬರೆಯುತ್ತಿದ್ದ, ಶಿಷ್ಯರ ಪ್ರೀತಿಯನ್ನು ಗಳಿಸಿದ್ದ ಅವರು ಮೇಷ್ಟ್ರು ವೃತ್ತಿಗೆ ನಮಸ್ಕಾರ ಹೇಳಲು ಇದ್ದುದು ಒಂದೇ ಕಾರಣ: ಆ ವೃತ್ತಿ ತಂದುಕೊಡುತ್ತಿದ್ದ ಕಡಿಮೆ ಸಂಬಳ. ಕಡಿಮೆ ಎಂದರೆ ಜೀವನ ಸಾಗಿಸಲಿಕ್ಕೆ ಕಷ್ಟವಾಗುವಷ್ಟು ಎಂದಲ್ಲ; ಐದಂಕಿಗಳ ಸಂಬಳ ಅವರದು. ಆದರೆ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ತಮ್ಮ ಓರಗೆಯ ಇಂಗ್ಲಿಷ್ ಜೀನ್ಸ್‌ನ ಜಾಣಜಾಣೆಯರು ಗಳಿಸುತ್ತಿರುವ ದೊಡ್ಡ ಮೊತ್ತದ ಸಂಬಳದೆದುರು ಮೇಷ್ಟ್ರು ಕೆಲಸಕ್ಕೆ ದೊರೆಯುವ ಸಂಬಳ ಅವರಿಗೆ ಸಣ್ಣದಾಗಿ ಕಂಡಿತ್ತು. ಸಹಜವೇ, ಹಾಲು ಕರೆಯುವ ನಿಟ್ಟಿನಲ್ಲಿ ಕನ್ನಡ ದೇಸಿ ಹಸು; ಇಂಗ್ಲಿಷ್ ಹಿನ್ನೆಲೆಯ ಐ.ಟಿ. ಸೀಮೆಹಸು. ಎರಡಕ್ಕೂ ಅಜಗಜ ವ್ಯತ್ಯಾಸ. ಪಾಠ ಹೇಳುವ ಕೆಲಸ ಬಿಟ್ಟ ಗೆಳೆಯ, ಕಂಪ್ಯೂಟರ್ ಶಾಲೆಗೆ ಸೇರಿ, ಇ–ಸಾಕ್ಷರತೆ ಗಳಿಸಿ, ಈಗ ಐ.ಟಿ. ಕಂಪನಿಯೊಂದರಲ್ಲಿ ಉದ್ಯೋಗ ಗಿಟ್ಟಿಸಿದ್ದಾರೆ. ಹುದ್ದೆಯ ಹೆಸರು: ವೆಬ್ ರೈಟರ್. ಕನ್ನಡ ಸಾಹಿತ್ಯದ ಕುರಿತು ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಿದ್ದ ಮೇಷ್ಟ್ರು, ಸಾಹಿತ್ಯದ ವಿಮರ್ಶೆ ಮಾತುಕೃತಿಗಳಲ್ಲಿ ತೊಡಗಿದ್ದ ಬರಹಗಾರ–ಈಗ ಐ.ಟಿ. ಕಂಪನಿಯಲ್ಲಿ ಉದ್ಯೋಗಿ! ಹುದ್ದೆಯಲ್ಲಿನ ರೈಟರ್ ಎನ್ನುವ ಶಬ್ದ ಹೊರತುಪಡಿಸಿದರೆ ಸಾಹಿತ್ಯಕ್ಕೂ ಅವರು ಮಾಡುತ್ತಿರುವ ಕೆಲಸಕ್ಕೂ ಕಿಂಚಿತ್ತೂ ಸಂಬಂಧ ವಿಲ್ಲ. ಆ ಮೇಷ್ಟ್ರ ನಿರ್ಧಾರವನ್ನು ಪ್ರಶ್ನಿಸುವುದು ಅಥವಾ ಅವರ ಬಗ್ಗೆ ಅಸಹನೆ ತೋಡಿಕೊಳ್ಳುವುದು ನನ್ನ ಉದ್ದೇಶವಲ್ಲ. ಈ ಪ್ರಸಂಗ ಕನ್ನಡದ ಜಾಣಜಾಣೆಯರ ಸೃಜನಶೀಲ ಶಕ್ತಿಯನ್ನು ಕೊಳ್ಳುಬಾಕ

ಸಂಸ್ಕೃತಿ ನುಂಗಿನೊಣೆಯುತ್ತಿರುವ ಉದಾಹರಣೆಯಾಗಿ, ಆತಂಕವಾಗಿ ನನ್ನನ್ನು ಕಾಡುತ್ತದೆ. ಆಧುನಿಕ ಸಂದರ್ಭದ ಒಂದು ತುದಿಯಲ್ಲಿ ವೆಬ್ 'ರೈಟರ್' ಇದ್ದರೆ, ಇನ್ನೊಂದು ತುದಿಯಲ್ಲಿ ಶ್ರೀನಿವಾಸರಾಜು ಅವರನ್ನು ಕಾಣುತ್ತಿದ್ದೇನೆ.

ಶ್ರೀನಿವಾಸರಾಜು ಅವರು ಕೂಡ ಕ್ರೈಸ್ಟ್ ಕಾಲೇಜಿನಂಥ ಪ್ರತಿಷ್ಠಿತ ಕಾಲೇಜಿನಲ್ಲಿ ಕನ್ನಡ ಮೇಷ್ಟ್ರಾಗಿ ಪಾಠ ಹೇಳಿದವರು. ನಿವೃತ್ತಿಯ ನಂತರವೂ ಪಾಠ ಹೇಳುವುದರಲ್ಲಿ ಸುಖ ಕಾಣುತ್ತಿರುವವರು. ಈ ಮೇಷ್ಟ್ರನ್ನು ಕನ್ನಡದ ಹೊರತಾದ ಆಮಿಷದ ಜಗತ್ತು ಎಂದೂ ಆಕರ್ಷಿಸಲಿಲ್ಲವೇ? ಇಲ್ಲ ಎನ್ನುವುದು ಕಷ್ಟ. ಕಾಲೇಜು ದಿನಗಳಲ್ಲಿ ಇಂಜಿನಿಯರಿಂಗ್ ಓದುವ ಅವಕಾಶ ಅವರಿಗೆ ದೊರೆತಿತ್ತು. ದಾವಣಗೆರೆಯಲ್ಲಿ ಸೀಟೂ ಸಿಕ್ಕಿತ್ತು. ಆದರೆ ಮಗ ಕಣ್ಮುಂದೆಯೇ ಇರಲೆಂದು ಅವರ ಹೆತ್ತವರು ಬಯಸಿದ್ದರು. ಹಾಗಾಗಿ ಇಂಜಿನಿಯರಿಂಗ್ ಕಲಿಯಬೇಕಿದ್ದ ಶ್ರೀನಿವಾಸರಾಜು ಬಿ.ಎಸ್ಸಿ. ಸೇರಿದರು. 'ಲೋಹ ಅಭಿವೃದ್ಧಿ ಮಂಡಳಿ'ಯಲ್ಲಿ ಸಾರಿಗೆ ಅಧಿಕಾರಿಯಾಗಿ ನೌಕರಿ ಆರಂಭಿಸಿ, ಎರಡು ವರ್ಷ ದುಡಿಯುವಷ್ಟರಲ್ಲಿ ಸಾಂಸ್ಕೃತಿಕ ಲೋಕದ ಸೆಳೆತಕ್ಕೆ ಒಳಗಾದರು. ವೃತ್ತಿ ಬೇಸರ ಅನ್ನಿಸಿದಾಗ ಬಿ.ಎ. ಕ್ಲಾಸಿಗೆ ಸೇರಿಕೊಳ್ಳುವ ಮೂಲಕ ಓದು ಮುಂದುವರಿಸಿದರು. ನಂತರದಲ್ಲಿ ಎಂ.ಎ. ಕಲಿಕೆ. ಆ ದಿನಗಳಲ್ಲಿ ಕೆ.ವಿ. ನಾರಾಯಣ, ಎಚ್.ಎಸ್. ರಾಘವೇಂದ್ರ ರಾವ್, ಕಿ.ರಂ. ನಾಗರಾಜ ಮುಂತಾದ ಗೆಳೆಯರ ಒಡನಾಟದಿಂದಾಗಿ ಕನ್ನಡದ ಬಗೆಗಿನ ಆಸಕ್ತಿ ಹದಗೊಂಡಿತು. 'ಕನ್ನಡ ಮೇಷ್ಟ್ರು' ಪರಂಪರೆಗೆ ಗೌರವ ತಂದ ಜಿ.ಪಿ. ರಾಜರತ್ನಂ, ಎಂ.ವಿ. ಸೀತಾರಾಮಯ್ಯ, ರಂ.ಶ್ರೀ. ಮುಗಳಿ, ಜಿ.ಎಸ್. ಶಿವರುದ್ರಪ್ಪನವರಿಂದ ಪಾಠ ಕೇಳುವ ಯೋಗ ಕನ್ನಡದ ಬಗೆಗಿನ ಪ್ರೀತಿ ಬೆಳೆಸಿತು. ನಂತರದ್ದು ಇತಿಹಾಸ.

ಕಾಲಗತಿಯ ಪಲ್ಲಟಗಳನ್ನು ನೋಡಿ. 'ಲೋಹ ಅಭಿವೃದ್ಧಿ ಮಂಡಳಿ' ನೌಕರಿಯಲ್ಲಿದ್ದ ವ್ಯಕ್ತಿ ಲಾಭದಾಯಕ ಹುದ್ದೆ ಬಿಟ್ಟು ಬಯಸಿ ಮೇಷ್ಟ್ರಾದ ಕಾಲ ಒಂದು. (ತೀ.ನಂ.ಶ್ರೀಕಂಠಯ್ಯನವರು ಕೂಡ ಅಮಲ್ದಾರರ ಹುದ್ದೆ ನಿರಾಕರಿಸಿ ಪಾಠ ಹೇಳುವ ಮೇಷ್ಟ್ರು ಕೆಲಸಕ್ಕೆ ಸೇರಿಕೊಂಡಿದ್ದರು). ಮೇಷ್ಟ್ರಾಗಿದ್ದವರು ಬೇರೆ ಕೆಲಸ ಹುಡುಕಿಕೊಳ್ಳುವ ಸಂದರ್ಭ ಇಂದಿನದು. ಆದರೆ ಸಾಹಿತ್ಯ ಹಾಗೂ ಪಾಠ ಹೇಳುವ ಸುಖ ಯಾತನಗೆ ಒಳಗಾದವರು ಅದರಿಂದ ಹೊರಬರುವುದನ್ನು ಕಲ್ಪಿಸಿಕೊಳ್ಳುವುದು ನನಗಿನ್ನೂ ಕಷ್ಟವಾಗುತ್ತಿದೆ. ವ್ಯಕ್ತಿಗತ ಬದುಕು ಎಲ್ಲ ಆದರ್ಶಗಳಿಗೂ ಮೀರಿದ್ದು ಎನ್ನುವ ತಿಳಿವಳಿಕೆಯ ನಡುವೆಯೂ ಆಮಿಷದ ಜಗತ್ತಿನ ಚುಂಬಕತೆ ಬಗೆಹರಿಯದ ಒಗಟೆನ್ನಿಸುತ್ತಿದೆ. ಇಷ್ಟು ಮಾತ್ರ ನಿಜ, ನನ್ನ ಪರಿಚಿತ ವೆಬ್ 'ರೈಟರ್' ಪ್ರಸಂಗ ಶ್ರೀನಿವಾಸರಾಜು ಅವರ ಬಗೆಗಿನ ನನ್ನ ಗೌರವವನ್ನು ಇನ್ನಷ್ಟು ಹೆಚ್ಚಿಸಿದೆ.

ಕ್ರೈಸ್ಟ್ ಕಾಲೇಜಿನಂಥ ಹೈಟೆಕ್ ಪರಿಸರದಲ್ಲಿ ಕನ್ನಡದ ಬೀಜರೂಪವಾಗಿ ಕೆಲಸ ಮಾಡಿದವರು ಶ್ರೀನಿವಾಸರಾಜು. ಅವರು ಕ್ರೈಸ್ಟ್ ಕಾಲೇಜು ಸೇರಿದ್ದು ೧೯೬೯ರಲ್ಲಿ. ಅಪ್ಪಟ ಇಂಗ್ಲಿಷ್ ಸಂಸ್ಕೃತಿಯ ಪರಿಸರದಲ್ಲಿ ಕನ್ನಡದ ಬೀಜ ಊರುವ ಸವಾಲಿನೊಂದಿಗೇ ಕೆಲಸ ಆರಂಭಿಸಿದ ಅವರು ೧೯೭೩ರಲ್ಲಿ ಕನ್ನಡ ಸಂಘ ಆರಂಭಿಸಿದರು. ಸಂಘದ ಮೂಲಕ ಅವರು ಮಾಡಿದ ಕೆಲಸ ಎರಡು ರೀತಿಯದು: ಒಂದು ಪುಸ್ತಕ ಪ್ರಕಟಣೆ, ಇನ್ನೊಂದು

ಕೇಳುವವರು ಗತಿಯಿಲ್ಲದ ಯುವ ಲೇಖಕರ ಬರಹಗಳಿಗೆ ವೇದಿಕೆ– ಮಾನ್ಯತೆ ಒದಗಿಸಿದ್ದು. ಫುಟ್ಬಾಲ್ ಆಟದಲ್ಲಿ ಚೆಂಡು ಹಿಡಿಯುವ ಗೋಲ್‌ಕೀಪರ್ ಪಾತ್ರವನ್ನು ತುಂಬಾ ಇಷ್ಟಪಡುವ ಶ್ರೀನಿವಾಸರಾಜು ಸಾಂಸ್ಕೃತಿಕ ಲೋಕದಲ್ಲಿ ಮಾಡಿದ್ದೂ ಅದೇ ರೀತಿಯ ಕೆಲಸವನ್ನೇ; ಸೃಜನಶೀಲ ಯುವ ಮನಸ್ಸುಗಳನ್ನು ಒಟ್ಟುಗೂಡಿಸುವುದು, ತನ್ನ ಸಂಪರ್ಕಕ್ಕೆ ಬಂದ ಪ್ರತಿಭೆಗಳ ಬೆನ್ನು ತಟ್ಟಿ ಅಂಗಳಕ್ಕೆ ಬಿಡುವುದು.

ಕನ್ನಡ ಸಂಘ ಹಾಗೂ ಶ್ರೀನಿವಾಸರಾಜು ಅವರನ್ನು ಪ್ರತ್ಯೇಕವಾಗಿ ನೆನೆಯುವುದು ಸಾಧ್ಯವೇ ಇಲ್ಲ. ಬಯಸಿದ್ದರೆ ವಿಶ್ವವಿದ್ಯಾಲಯವೊಂದರ ಪ್ರಮುಖ ಸ್ಥಾನವನ್ನು ಅಲಂಕರಿಸಬಹುದಿತ್ತಾದರೂ, ನಿವೃತ್ತಿ ದಿನದವರೆಗೂ ಶ್ರೀನಿವಾಸರಾಜು ಕ್ರೈಸ್ಟ್ ಕಾಲೇಜಿನಲ್ಲೇ ಉಳಿದರು. ಕ್ರೈಸ್ಟ್ ಕಾಲೇಜಿನ ಹೆಸರನ್ನು ಕನ್ನಡ ಸಂಘದ ಮೂಲಕ ನಾಡಿನುದ್ದಕ್ಕೂ ಮುಟ್ಟಿಸಿದರು. ಬರೆಯುವ ಶಕ್ತಿಯಿದ್ದರೂ ಇತರರಿಂದ ಬರೆಸುವುದರಲ್ಲೇ ಸುಖ ಕಂಡರು.

ನಾನೂ ಸೇರಿದಂತೆ ಕ್ರೈಸ್ಟ್ ಕಾಲೇಜು ಕವನಸ್ಪರ್ಧೆಯ ಬಹುಪಾಲು ಬಹುಮಾನಿತರು ಶ್ರೀನಿವಾಸರಾಜು ಅವರನ್ನು ಗುರ್ತಿಸುವುದು 'ರಾಜುಮೇಷ್ಟ್ರು' ಎಂದೇ. ಈ ಮೇಷ್ಟ್ರ ಶಿಷ್ಯ ಬಳಗ ದೊಡ್ಡದು. ಈ ಬಳಗದಲ್ಲಿ ಪಾಠ ಹೇಳಿದ ಶಿಷ್ಯರಿಗಿಂತ ಪಾಠ ಕೇಳದ ಶಿಷ್ಯರೇ ಹೆಚ್ಚಿರುವುದು ವಿಶೇಷ. ರಾಜುಮೇಷ್ಟ್ರ ಪರಿಚಯ ಸ್ಪರ್ಧೆಯ ಮೂಲಕ ಆದದ್ದದರೂ ನಂತರದ ಸಂಬಂಧ–ಸಂಪರ್ಕಕ್ಕೆ ಕಾರಣ ಕಿರಿಯರ ಬಗೆಗಿನ ಅವರ ಅಂತಃಕರಣ. ನಾನು ಬಲ್ಲಂತೆ ಸ್ಪರ್ಧೆಯ ನಂತರವೂ ಅನೇಕ ಯುವ ಬರಹಗಾರರು ರಾಜುಮೇಷ್ಟ್ರೊಂದಿಗೆ ಸಂಪರ್ಕ ಉಳಿಸಿಕೊಂಡು ಬಂದಿದ್ದಾರೆ. ಈ ಸಂಪರ್ಕ ಅಪ್ಪಟ ಗುರುಶಿಷ್ಯ ವಾತ್ಸಲ್ಲದ್ದು.

ಪಾವಲಿ ಎಂಟಾಣೆ ಬಿಲ್ಲೆಗಳೊಂದಿಗೆ ಕಲ್ಲುಸಕ್ಕರೆ, ಪೆಪ್ಪರುಮಿಂಟುಗಳನ್ನು ಜೇಬಿನಲ್ಲಿಯೊ ಅಥವಾ ಎಲೆಯಡಿಕೆ ಚೀಲದಲ್ಲಿಯೋ ಇಟ್ಟುಕೊಳ್ಳುವ ಅಜ್ಜ ಅಜ್ಜಿಯರು ಗ್ರಾಮೀಣ ಪ್ರದೇಶಗಳಲ್ಲಿ ಇನ್ನೂ ಇದ್ದಾರೆ. ಮೊಮ್ಮಕ್ಕಳೇ ಆಗಬೇಕೆಂದಿಲ್ಲ; ಯಾರ ಮಕ್ಕಳಾದರೂ ಸರಿ, ಅಜ್ಜ/ಅಜ್ಜಿಯ ಖಜಾನೆಯಿಂದ ಪೆಪ್ಪರಮಿಂಟೊ ಎಂಟಾಣೆಯೊ ಪಾವತಿಯಾಗುತ್ತದೆ. ಅಂಥ ಸಂದರ್ಭಗಳಲ್ಲಿ ಮಕ್ಕಳ ಮೊಗದಲ್ಲಿ ಮಿನುಗುವ ಖುಷಿಯನ್ನು ಹಾಗೂ ಆ ಖುಷಿ ಪ್ರತಿಫಲಿಸುವ ಅಜ್ಜ/ಅಜ್ಜಿಯ ಕಣ್ಣಲ್ಲಿನ ಮಿಂಚನ್ನು ನೋಡಬೇಕು. ರಾಜು ಮೇಷ್ಟ್ರನ್ನ ನೋಡಿದಾಗಲೆಲ್ಲ ನನಗೆ ಅಂಥ ಅಜ್ಜನ ನೆನಪಾಗುತ್ತದೆ. ಅವರು ನನಗೆ ಯಾವತ್ತೂ ಪೆಪ್ಪರಮಿಂಟು ಕೊಟ್ಟವರಲ್ಲ. ಆದರೆ ಅವರೊಂದಿಗಿನ ಬಹುತೇಕ ಭೇಟಿಗಳಲ್ಲಿ ಹೊಸ ಪುಸ್ತಕವಿಲ್ಲದೆ ನಾನು ವಾಪಸ್ಸಾದದ್ದಿಲ್ಲ. ಮೇಷ್ಟ್ರು ಈ ಬಾರಿ ಯಾವ ಪುಸ್ತಕ ಕೊಡುತ್ತಾರೆ ಎಂದು ಅವರನ್ನು ಭೇಟಿಯಾದ ಪ್ರತಿ ಸಂದರ್ಭದಲ್ಲಿಯೂ ಅಜ್ಜ ಕೊಡುವ ಪೆಪ್ಪರಮೆಂಟಿಗೆ ಕಾತರಿಸುವ ಮಕ್ಕಳಂತೆ ಕಾತರಿಸಿದ್ದೇನೆ. ಅವರು ನಿರಾಸೆ ಮಾಡಿದ್ದು ಕಡಿಮೆ. ಅವರ ಮನೆಗೆ ಹೋದರಂತೂ ಮೇಷ್ಟ್ರ ಕಡೆಯಿಂದ ಪುಸ್ತಕ ಹಾಗೂ ಸರಸ್ವತಿ ಮೇಡಂ ಅವರಿಂದ ತಿಂಡಿಗೆ ಮೋಸವಿಲ್ಲ! ಶ್ರೀನಿವಾಸರಾಜು ಅಂದಕೂಡಲೇ ನನ್ನ ಕಣ್ಣೆದುರು ಬರುವುದು–ಕೈಯಲ್ಲಿ ಪುಸ್ತಕ ಹಿಡಿದ ಕಿಂದರಜೋಗಿಯಂಥ ಮನುಷ್ಯ ಹಾಗೂ ಸದಾ ಪ್ರೀತಿಯನ್ನೇ ಸುರಿಸುವ ಜೋಡಿ ಕಣ್ಣುಗಳು.

ರಾಜು ಮೇಷ್ಟ್ರ ಪರಿಚಯವಾದದ್ದು ಪುಸ್ತಕಗಳ ಮೂಲಕವೇ. ನಾನಾಗ ಪಾಲಿಟೆಕ್ನಿಕ್

ವಿದ್ಯಾರ್ಥಿ. ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘ ನಡೆಸುವ ಬೇಂದ್ರೆ ಸ್ಮೃತಿ ಕವನ ಸ್ಪರ್ಧೆ ಹಾಗೂ ಪುಸ್ತಕ ಪ್ರಕಟಣೆಯ ಬಗ್ಗೆ ಎಲ್ಲೋ ಓದಿದ್ದೆ. ಬಹುಮಾನಿತ ಕವಿತೆಗಳ ಪುಸ್ತಕ ಓದುವ ಕುತೂಹಲ. ಶ್ರೀನಿವಾಸರಾಜು ಮಾತ್ರವಲ್ಲ, ಕ್ರೈಸ್ಟ್ ಕಾಲೇಜ್ ಯಾವ ದಿಕ್ಕಿಗಿದೆ ಎನ್ನುವುದೂ ಗೊತ್ತಿಲ್ಲದ ಸಂದರ್ಭ. ಪತ್ರಿಕೆಯಲ್ಲಿ ಕನ್ನಡ ಸಂಘದ ವಿಳಾಸ ಸಿಕ್ಕಿತು. ಆ ವಿಳಾಸಕ್ಕೆ ೧೦ ರೂಪಾಯಿ ಮನಿಯಾರ್ಡರ್ ಮಾಡಿ ಪುಸ್ತಕ ಕಳಿಸುವಂತೆ ಪತ್ರ ಬರೆದೆ. ಮರೆತೆ. ಒಂದು ದಿನ ಇದ್ದಕ್ಕಿದ್ದಂತೆಯೇ ಬರಬೇಕೆ ಪುಸ್ತಕಗಳು! ನಾನು ಕೇಳಿದ್ದು ಒಂದು ಪುಸ್ತಕ, ಬಂದದ್ದು ನಾಲ್ಕು. ನೀವು ಓದಿ, ಗೆಳೆಯರಿಗೂ ಓದಲು ಕೊಡಿ ಎಂದು ಚಿಕ್ಕದೊಂದು ಒಕ್ಕಣೆ. ಕೆಳಗೆ ಸಹಿ. ಅದು ಶ್ರೀನಿವಾಸರಾಜು ಅವರ ಸಹಿ ಅನ್ನುವುದು ಗೊತ್ತಾದದ್ದು ಅವರು ಪರಿಚಯವಾದ ನಂತರವೇ ಹೀಗೆ ಪ್ರಾರಂಭವಾದ ಪುಸ್ತಕ ನಂಟು–ನಂತರದ ವರ್ಷಗಳಲ್ಲಿ ಕನ್ನಡ ಸಂಘದ ಕವನ ಸ್ಪರ್ಧೆಯಲ್ಲಿ ಬಹುಮಾನ ಪಡೆಯುವುದರೊಂದಿಗೆ, ಆಗಾಗ ಸಿಕ್ಕ ಭೇಟಿಯ ಅವಕಾಶಗಳಲ್ಲಿ ಮುಂದುವರಿದಿದೆ. ರಾಜು ಮೇಷ್ಟ್ರಿಂದ ಪುಸ್ತಕ ಪಡೆಯುವುದು ನನ್ನ ಹಕ್ಕು ಎಂದೇ ಭಾವಿಸಿಬಿಟ್ಟಿದ್ದೇನೆ. ಅವರ ಪ್ರೀತಿ, ಕಾಳಜಿ, ಸಹನೆ ಎದುರು ಅನೇಕ ಬಾರಿ ನಾನು ಬೆಚ್ಚಿ ಬಿದ್ದದ್ದೂ ಇದೆ.

ಚರಿತ್ರೆಯ ಇಸವಿಗಳನ್ನು ಕಂಡು ಭಯಬೀಳುವ ಮನಸ್ಸಿಗೆ ಜನವರಿ ೩೧ ಬೇಂದ್ರೆ ಹುಟ್ಟುಹಬ್ಬದ ದಿನ ಎನ್ನುವ ವಿಷಯವನ್ನು ಮನಸ್ಸಿನಲ್ಲಿ ಅಚ್ಚು ಹಾಕಿದ್ದು ಬೆಂಗಳೂರಿನ ಕ್ರೈಸ್ಟ್ ಕಾಲೇಜು ಕನ್ನಡ ಸಂಘ ಹಾಗೂ ಕನ್ನಡ ಸಂಘದ ಚಿ. ಶ್ರೀನಿವಾಸರಾಜು. ಕನ್ನಡ ಸಂಘದ ಬೇಂದ್ರೆಸ್ಮೃತಿ ಕಾವ್ಯಸ್ಪರ್ಧೆಯ ಬಹುಮಾನ ವಿತರಣೆ ಸಮಾರಂಭ ನಡೆಯುವುದು ಪ್ರತಿವರ್ಷದ ಜನವರಿ ೩೧ರಂದು. ಆ ದಿನವನ್ನು ಕನ್ನಡ ಸಂಘ 'ಕವಿದಿನ'ವನ್ನಾಗಿ ಆಚರಿಸುತ್ತದೆ. ಕನ್ನಡ ಸಂಘದ ಬೇಂದ್ರೆ ಸ್ಮೃತಿ ಕಾವ್ಯ ಸ್ಪರ್ಧೆಗೆ ಕವಿತೆ ಕಳುಹಿಸಿಕೊಟ್ಟು, ಜನವರಿ ೩೧ಕ್ಕಾಗಿ ಕಾಯುವುದು ಕಾಲೇಜು ದಿನಗಳ ಪ್ರತಿವರ್ಷದ ರೂಢಿಯಾಗಿತ್ತು. ಅನೇಕ ಕಥೆಗಾರರು ಪ್ರಜಾವಾಣಿ ದೀಪಾವಳಿ ಕಥಾಸ್ಪರ್ಧೆಗೆಂದೇ ಕಥೆ ಬರೆದಂತೆ, ಕನ್ನಡ ಸಂಘದ ಸ್ಪರ್ಧೆಗೆಂದೇ ನಾನೂ ಗೆಳೆಯರು ಪದ್ಯ ಬರೆಯುತ್ತಿದ್ದೆವು. ಕ್ರೈಸ್ಟ್ ಕಾಲೇಜಿನ ಕನ್ನಡ ಬಳಗದೊಂದಿಗೆ ಕಳೆದ ನೆನಪುಗಳು, ಆ ಸಂದರ್ಭದಲ್ಲಿ ಸಾಧ್ಯವಾಗುತ್ತಿದ್ದ ರಾಜ್ಯದ ನಾನಾ ಊರುಗಳ ಯುವಬರಹಗಾರರ ನಂಟು, ಬಹುಮಾನ ರೂಪದಲ್ಲಿ ದೊರೆಯುತ್ತಿದ್ದ ಪುಸ್ತಕಗಳ ಪುಟ್ಟ ಗಂಟು–ಇವೆಲ್ಲವೂ ಜನವರಿ ೩೧ರೊಂದಿಗೆ ಥಳುಕು ಹಾಕಿಕೊಂಡಿವೆ. ಬೇಂದ್ರೆ ಮನಸ್ಸಿಗೆ ಹೆಚ್ಚು ಹತ್ತಿರವಾದದ್ದು, ಅವರ ಜನ್ಮದಿನ ನೆನಪಿನಲ್ಲುಳಿದದ್ದು ಹೀಗೆ. ಆ ದಿನಗಳಲ್ಲಿ ಕ್ರೈಸ್ಟ್ ಕಾಲೇಜಿನೊಂದಿಗೆ ನಂಟು ಹೇಗೆ ಬೆಳೆದಿತ್ತೆಂದರೆ, ವರ್ಷಕ್ಕೊಂದಾವರ್ತಿ ಬಂದರೂ ಆ ಕಾಲೇಜು ನಮ್ಮದೇ ಅನ್ನಿಸಿಬಿಡುತ್ತಿತ್ತು. ಈಗಲೂ ಕ್ರೈಸ್ಟ್ ಕಾಲೇಜಿನ ಮುಂದೆ ಹಾದು ಹೋಗುವಾಗಲೆಲ್ಲ ಶ್ರೀನಿವಾಸರಾಜು ನೆನಪಾಗುತ್ತಾರೆ; ಮಧುರ ಸ್ಮೃತಿಯೊಂದು ಕ್ಷಣಕಾಲ ಎದೆದುಂಬುತ್ತದೆ.

ಶ್ರೀನಿವಾಸರಾಜು ಅವರ ಜೊತೆಗಿನ ನನ್ನ ಈ ಅನುಭವಗಳು ನನ್ನವು ಮಾತ್ರ ಎಂದು ನಾನು ಭಾವಿಸಿಲ್ಲ. ಅವರ ಪರಿಚಯದ ವ್ಯಾಪ್ತಿಗೆ ಬಂದ ಎಲ್ಲರೂ ಇಂಥ ಅನುಭವವನ್ನು

ಆಗಾಗ ಬಯಸಿ ಹೊಂದುತ್ತಲೇ ಇರುತ್ತಾರೆ. ನನ್ನ ಜಮಾನದ ಅನೇಕರಿಗೆ ಪಾಠ ಹೇಳದಿದ್ದರೂ ಶ್ರೀನಿವಾಸರಾಜು 'ಮೇಷ್ಟ್ರು'. ನಾಡಿನುದ್ದಕ್ಕೂ ಅವರ ವಿದ್ಯಾರ್ಥಿಗಳು ಇದ್ದಾರೆ.

'ಶ್ರೀನಿವಾಸರಾಜು ಒಂದು ವಿಶ್ವವಿದ್ಯಾಲಯ' ಎಂದು ಅವರ ಬಗ್ಗೆ ಮಾತನಾಡುವವರೆಲ್ಲ ಹೇಳುವುದು ಸಂಪ್ರದಾಯವೇ ಆಗಿಹೋಗಿದೆ. ಆದರೆ ನಮ್ಮ ನಡುವಿನ ಯಾವುದೇ ವಿಶ್ವವಿದ್ಯಾಲಯ ಮುಟ್ಟಲು ಸಾಧ್ಯವಾಗದ ಮೈಲುಗಲ್ಲನ್ನು ಅವರು ಮುಟ್ಟಿದ್ದಾರೆ. ಅದೆಂದರೆ, ಪುಸ್ತಕ ಪ್ರಕಟಣೆಯ ಜೊತೆಜೊತೆಗೇ ಓದುಗ/ಲೇಖಕರ ಬಳಗವನ್ನು ಸೃಷ್ಟಿಸಲು ಪ್ರಯತ್ನಿಸಿದ್ದು. ಕನ್ನಡ ಸಂಘದ ಮೂಲಕ ಒಂದುನೂರ ಎಪ್ಪತ್ತಕ್ಕೂ ಹೆಚ್ಚು ಪುಸ್ತಕಗಳನ್ನು ಶ್ರೀನಿವಾಸರಾಜು ಪ್ರಕಟಿಸಿದ್ದಾರೆ. ಇದು ಲೆಕ್ಕದ ಮಾತು. ಆದರೆ, ಈ ಪುಸ್ತಕಗಳ ಮೂಲಕ ಅವರು ಬೆಸೆದ ಲೇಖಕರ-ಓದುಗರ ಬಳಗ ಲೆಕ್ಕಕ್ಕೆ ಸಿಗದು. ಇವತ್ತಿನ ಕನ್ನಡ ಸಂದರ್ಭದ ಅನೇಕ ಮಹತ್ವದ ಬರಹಗಾರರ ಮೊದಲ ಪುಸ್ತಕಗಳು ಕನ್ನಡ ಸಂಘದ ಮೂಲಕ ಪ್ರಕಟವಾಗಿವೆ. ಬೇಂದ್ರೆ ಸ್ಮೃತಿ ಅಂತರಕಾಲೇಜು ಕವನ ಸ್ಪರ್ಧೆಯ ಮೂಲಕ, ಅನಕೃ ಸ್ಮಾರಕ ಲೇಖನ ಸ್ಪರ್ಧೆಯ ಮೂಲಕ ಅನೇಕ ಯುವ ಬರಹಗಾರರು ಬೆಳಕಿಗೆ ಬಂದಿದ್ದಾರೆ. ಈ ಸ್ಪರ್ಧೆಗಳ ಮೂಲಕವೇ ನಾಡಿನ ವಿವಿಧ ಭಾಗಗಳಲ್ಲಿ ನೆಲೆಸಿರುವ ಯುವ ಬರಹಗಾರರ ನಡುವೆ ಬೆಸುಗೆ ಸಾಧ್ಯವಾಗಿದೆ. ಕೆಲವೊಮ್ಮೆ ಮುಖ ನೋಡದಿದ್ದರೂ ಅಕ್ಷರಮೈತ್ರಿ ಸಾಧ್ಯವಾಗಿದೆ. ಇದು ಕನ್ನಡದ ಮೇಷ್ಟ್ರೊಬ್ಬರು ಮಾಡಬಹುದಾದ ಅತ್ಯಂತ ಶ್ರೇಷ್ಠ ಸಾಧನೆ.

ಬೇರೆಯವರ ಪುಸ್ತಕ ಪ್ರಕಟಿಸುವುದರಲ್ಲಿ, ಆ ಪುಸ್ತಕಗಳನ್ನು ಸಹೃದಯರಿಗೆ ಮುಟ್ಟಿಸುವುದರಲ್ಲೇ ಸಾರ್ಥಕತೆಗೆ ಕಂಡ ಶ್ರೀನಿವಾಸರಾಜು ತಾವು ಬರೆದದ್ದು ಕಡಿಮೆ. ನಾಟಕ, ಕಥೆ, ಕವಿತೆ, ವಿಮರ್ಶೆ ಕ್ಷೇತ್ರಗಳಲ್ಲಿ ಆಗಾಗ ತೊಡಗಿಸಿಕೊಂಡ ಅವರಿಗೆ ಪೂರ್ಣ ಪ್ರಮಾಣದಲ್ಲಿ ಬರಹಗಾರರಾಗಲು ಬಿಡುವಾಗಲೇ ಇಲ್ಲ. (ಕನ್ನಡ ಪರಿಚಾರಿಕೆಯಲ್ಲಿ ತೊಡಗಿದವರಿಗೆ ಬಿಡುವಾಗುವುದಾದರೂ ಹೇಗೆ!).

ಕ್ರೈಸ್ಟ್ ಕಾಲೇಜಿನ ಕನ್ನಡ ಮೇಷ್ಟ್ರು ಕರ್ತವ್ಯದಿಂದ ನಿವೃತ್ತರಾಗಿ ವಿಶ್ರಾಂತ ಜೀವನ ಸಾಗಿಸುತ್ತಿದ್ದರೂ ರಾಜು ಮೇಷ್ಟ್ರ ಕನ್ನಡ ಪರಿಚಾರಿಕೆಗೆ ವಿಶ್ರಾಂತಿ ಎಂಬುದಿಲ್ಲ. 'ಮೇಷ್ಟ್ರೇ, ಇನ್ನು ಮುಂದಾದರೂ ನಿಮ್ಮ ಬರವಣಿಗೆಗೆ ಗಮನ ಕೊಡಿ' ಎಂದರೆ ನಗುತ್ತಾರೆ. ಇನ್ನೂ ಏನೇನು ಕೆಲಸ ಬಾಕಿಯಿದೆ ಎಂದು ಪಟ್ಟಿ ನೀಡುತ್ತಾರೆ. ಕನ್ನಡದ ಬಗ್ಗೆ, ಕಾಲೇಜುಗಳಲ್ಲಿ ಕನ್ನಡದ ವಿದ್ಯಾರ್ಥಿಗಳು ಕಡಿಮೆಯಾಗುತ್ತಿರುವ ಬಗ್ಗೆ, ಕನ್ನಡದಂಥ ಪ್ರಾದೇಶಿಕ ಭಾಷೆಗಳ ಸ್ಥಿತಿಗಳ ಬಗ್ಗೆ, ಜಾಗತೀಕರಣದ ಬಗ್ಗೆ ಆತಂಕದ ದನಿಯಲ್ಲಿ ಮಾತಾಡುತ್ತಾರೆ. ಆ ಆತಂಕದ ನಡುವೆಯೂ ಸಣ್ಣ ಸಣ್ಣ ದೀಪ ಹಚ್ಚುವ ಸಂದರ್ಭಗಳನ್ನು ನಾವು ಕಳೆದುಕೊಳ್ಳಬಾರದು ಎಂದು ಭರವಸೆಯ ಬೀಜ ಬಿತ್ತುತ್ತಾರೆ. ಅವರ ಜೀವನ ಪ್ರೇಮ ಹಾಗೂ ಪುಸ್ತಕಪ್ರೇಮ ಬೆಂಗಳೂರಿನ ಮಾಲಿನ್ಯದ ಮಸಿಗೂ ಮಾಸದಷ್ಟು ತಾಜಾ ಆಗಿವೆ. ಯಾವುದೇ ಕಾರ್ಯಕ್ರಮ ಇರಲಿ, ಗಾಂಧಿರಸ್ತೆಯ ಜನಜಂಗುಳಿ ಇರಲಿ-ಮೇಷ್ಟ್ರನ್ನು ನೋಡಿದಾಗ ಮನಸ್ಸು ಮುದಗೊಳ್ಳುತ್ತದೆ. ಒಂದೆರಡು ಮಾತು ಅಥವಾ ಕಿರುನಗೆಯಲ್ಲೇ ಕೆಲವು ಭೇಟಿಗಳು ಮುಗಿದುಹೋಗುತ್ತವೆ. ಆದರೆ ಮಾತನ್ನು ಮೀರಿದ ಪ್ರಸನ್ನತೆ ಅವರ ಹಾಜರಿಯಲ್ಲಿ ನನಗೆ ದೊರೆತಿದೆ.

ರಾಜುಮೇಷ್ಟ್ರನ್ನು ಹಳ್ಳಿಯ ಅಜ್ಜನೊಂದಿಗೆ ನೆನೆದದ್ದು ಆ ಕಾರಣದಿಂದಲೇ. ಮೊಮ್ಮಗುವಿಗೆ ಪೆಪ್ಪರುಮೆಂಟು ಕೊಟ್ಟು, ಕಂದನ ನಗೆಯನ್ನು ತನ್ನ ಕಣ್ಣಲ್ಲಿ ತುಂಬಿಕೊಳ್ಳುವ ಅಜ್ಜನಿಗೂ ಮೇಷ್ಟ್ರಿಗೂ ಹೆಚ್ಚಿನ ವ್ಯತ್ಯಾಸಗಳಿಲ್ಲ. ಮೊಗೆದಷ್ಟು ಉಕ್ಕುವ ಜೀವನಪ್ರೇಮ ಇಬ್ಬರಲ್ಲೂ ಇದೆ.

ತುಂಬಾ ಇಷ್ಟವಾದ ಹಿರಿಯರನ್ನು ಮೇಷ್ಟ್ರು ಎಂದು ಗೌರವಿಸುವುದು ನನ್ನ ರೂಢಿ. ಪಾಠ ಹೇಳಿದ ಮೇಷ್ಟ್ರುಗಳಿಗಿಂತಲೂ ಪಾಠ ಹೇಳದ ಮೇಷ್ಟ್ರಗಳೇ ನನ್ನ ನೆನಪಿನಲ್ಲಿ ಹೆಚ್ಚಾಗಿದ್ದಾರೆ. ನನ್ನ ಅಪ್ಪ ಕೂಡ ಮೇಷ್ಟ್ರಾಗಿದ್ದರು. ಅವರು ಶಾಲೆ ಹಾಗೂ ಬದುಕಿನಲ್ಲಿ ಪಾಠ ಹೇಳಿದ ಮೇಷ್ಟ್ರು. ಪಾಠ ಹೇಳದೆಯೂ ನೆನಪಿನಲ್ಲಿ ಉಳಿದ ಮೇಷ್ಟ್ರುಗಳಲ್ಲಿ ಶ್ರೀನಿವಾಸರಾಜು ಥಟ್ಟನೆ ನೆನಪಿಗೆ ಬರುತ್ತಾರೆ.



# ಸಾಲಿಗ್ರಾಮದಲ್ಲಿ 'ಕವಿದಿನ' ಸಮಾರಂಭ

● ಎಸ್. ಬಾಗೇಶ್ರೀ

**ಹೊಸ ಸ್ನೇಹಿತರನ್ನು ಪಡೆದ ಖುಷಿ**

'ಸ್ವಲ್ಪ flippant ಆಯಿತೇನೋ' ಅಂತ ಅನುಮಾನದಿಂದಲೇ ಕಳಿಸಿದ ಲೇಖನಕ್ಕೆ ಬಹುಮಾನ ಬಂದಿದೆಯೆಂದು ಪತ್ರ ಬಂದಾಗ, ಖುಷಿ, ಆಶ್ಚರ್ಯ ಆಯಿತು. 'ಪರವಾಗಿಲ್ಲ ಹುಡುಗಿ, not bad!' ಅಂತ ಲೇಖಕಿಯ ಹೊಸ status ಪಡೆದ ಭ್ರಮೆಯಲ್ಲಿ ಸ್ವಲ್ಪ ಜಂಭದಿಂದಲೇ ಅಂದುಕೊಂಡೆ. ಬಹುಮಾನ ವಿತರಣೆ ಸಾಲಿಗ್ರಾಮ ದಲ್ಲಿರುವ ಕಾರಂತರ ಮನೆಯಲ್ಲಿ ಅಂತ ಗೊತ್ತಾದಾಗ 'ವಾವ್' ಎನ್ನಿಸಿದರೂ, ಅಷ್ಟು ದೂರ ಹೋಗೋದು ದೊಡ್ಡ ತಲೆನೋವು ಅಂತಲೂ ಅನ್ನಿಸಿತು. ಆದರೂ ಕಾರಂತರ ಜೊತೆ ಸ್ವಲ್ಪ ಹೊತ್ತು ಕಳೆಯುವ ಅವಕಾಶ ಕಳೆದುಕೊಳ್ಳುವುದು ಮೂರ್ಖತನ ಅನ್ನಿಸಿ, ಏನಾದರಾಗಲಿ ಹೋಗಲೇಬೇಕು ಅಂತ ನಿರ್ಧರಿಸಿದೆ. ಜೊತೆಗೆ ನನ್ನ ತಮ್ಮ ಬರುವುದೆಂದು ನಿರ್ಧಾರವಾಯಿತು. (ನನ್ನ ಲೇಖನವನ್ನು ಸಾಬೀತು ಮಾಡಲಿಕ್ಕಾದರೂ ಬರಬೇಕಲ್ಲವೇ?!)

ಹಿಂದಿನ ರಾತ್ರಿ ೯-೩೦ರ ಬಸ್ಸಿಗೆ ಹೊರಟೆವು - ನಾನು, ನನ್ನ ತಮ್ಮ, ಕ್ರೈಸ್ಟ್ ಕಾಲೇಜಿನ ಲೆಕ್ಚರರ್‌ಗಳು ಹಾಗೂ ಅವರ ಕೆಲವು ಗೆಳೆಯರು ಒಂಭತ್ತು ಜನ ಗಂಡಸರ ಮಧ್ಯೆ ನಾನೊಬ್ಬಳೇ ಹುಡುಗಿ! ಒಂದಿಬ್ಬರನ್ನು ಬಿಟ್ಟರೆ ಇನ್ಯಾರ ಪರಿಚಯ ಕೂಡ ಇಲ್ಲ. ಉಳಿದವರೆಲ್ಲ ನಗುತ್ತಾ ಮಾತಾಡುತ್ತಿದ್ದರೆ ನನಗೇನೋ ಕಸಿವಿಸಿ. 'ಇದ್ಯಾವ ಗಂಡಸರ ಸಾಮ್ರಾಜ್ಯದಲ್ಲಿ ಸಿಕ್ಕಿಹಾಕಿಕೊಂಡೆನಪ್ಪಾ!' ಅನ್ನಿಸುತ್ತಿತ್ತು. ಅರ್ಧಂಬರ್ಧ ನಿದ್ದೆ ಮಾಡುತ್ತಾ ೬-೩೦ಕ್ಕೆ ಉಡುಪಿ ತಲುಪಿ, ಹೋಟೆಲೊಂದರಲ್ಲಿ ರೂಂ ಮಾಡಿದೆವು. ಸ್ನಾನಗೀನ ಮುಗಿಸಿ, ನಾನು, ರಾಮಕೃಷ್ಣರಾವ್, ಶ್ರೀನಿವಾಸರಾಜು ಮತ್ತು ರಾಘವೇಂದ್ರರಾವ್ ಅದೂ ಇದೂ ಮಾತಾಡುತ್ತಾ ಕುಳಿತೆವು. ಸ್ವಲ್ಪ ವಾತಾವರಣ ಸಡಿಲ ಆದಂತೆ ಅನ್ನಿಸಿತು - ಒಂಥರಾ 'breaking the ice'. ನಂತರ ಬೊಳುವಾರು



ಮೊಹಮ್ಮದ್ ಕುಂಞಿ ಹಾಗೂ ಅವರ ಪತ್ನಿ ಬಂದರು. ಒಟ್ಟಿಗೆ ತಿಂಡಿ ಮುಗಿಸಿ ಹತ್ತರ ಹೊತ್ತಿಗೆ ಸಾಲಿಗ್ರಾಮಕ್ಕೆ ಹೊರಟೆವು. ಅರ್ಧ ಮುಕ್ಕಾಲು ಗಂಟೆಯ ಪ್ರಯಾಣ.

ಕಾರಂತರದು ವಿಶಾಲವಾದ ಮನೆ - 'ಸುಹಾಸ'. ಮನೆಯ ಮುಂದೆ ಪುಟ್ಟ ಕೆರೆಯಷ್ಟು ದೊಡ್ಡ ಬಾವಿ. ತುಂಬ ತೆಂಗಿನ ಮರಗಳು. ಹೋಗುವಷ್ಟರಲ್ಲಿ ಕಾರಂತರು 'ಸೂಪರ್ ರಿನ್' ಬಿಳುಪಿನ ಪಂಚೆ ಉಟ್ಟು 'tip-top' ಆಗಿ ತಯಾರಾಗಿದ್ದರು. ಉಳಿದ ಬಹುಮಾನಿತರೂ ಬಂದಿದ್ದರು. (ಕೆಲವು ಹುಡುಗಿಯರ ಮುಖಗಳನ್ನು ನೋಡಿ 'ಉಸ್ಸಪ್ಪಾ' ಅನ್ನಿಸಿತು) ರಾಮಕೃಷ್ಣರಾವ್ ಅವರು ಪುಟ್ಟದಾಗಿ 'ಕನ್ನಡ ಸಂಘ'ದ ಕಾರ್ಯಚಟುವಟಿಕೆಗಳ ಬಗ್ಗೆ ಹೇಳಿದ ನಂತರ, ಕಾರಂತರು ಕೆಲವು ಪುಸ್ತಕಗಳನ್ನು ಬಿಡುಗಡೆ ಮಾಡಿದರು - ಬಹುಮಾನಿತ ಲೇಖನ, ಕವಿತೆಗಳ ಪುಸ್ತಕಗಳು; ಸು.ರಂ. ಎಕ್ಕುಂಡಿ ಅವರ ಹಾಗೂ ಅಬ್ದುಲ್ ರಷೀದ್ ಅವರ ಕನಲ ಸಂಕಲಗಳು; ಟಿ.ಎನ್. ಸೀತಾರಾಮ್‌ರವರ ನಾಟಕ. ಆಮೇಲೆ ಬಹುಮಾನ ವಿತರಣೆ. ನಂತರ ಒಂದು ಗಂಟೆ ಕಾರಂತರೊಡನೆ ಮಾತುಕತೆ. ಕಾರಂತರು ಒಳ್ಳೆಯ ಮೂಡಿನಲ್ಲಿ ಇದ್ದ ಹಾಗಿತ್ತು. 'ಬತ್ತಳಿಕೆಯಲ್ಲಿನ ಅಸ್ತ್ರಗಳನ್ನು ಒಂದೊಂದಾಗಿ ತೆಗೆಯಿರಿ' ಅಂದರು. ತೀರ general ಆದ 'interview ಪ್ರಶ್ನೆಗಳು' ಅವರನ್ನು ಸ್ವಲ್ಪ irritate ಮಾಡಿದರೂ, ಒಟ್ಟಿನಲ್ಲಿ ಲವಲವಿಕೆಯಿಂದ, ತಮಾಷೆಯಾಗಿ ಪ್ರಶ್ನೆಗಳಿಗೆ ಉತ್ತರಿಸಿದರು. 'ಉದಯೋನ್ಮುಖ ಕಲಾವಿದರಿಗೆ ನಿಮ್ಮ ಸಲಹೆ ಏನು?' ಎಂದು ಯಾರೋ ಕೇಳಿದ್ದಕ್ಕೆ, 'ಉದಯೋನ್ಮುಖ ಅಂದರೇನು? ನಾವೆಲ್ಲ ಅಸ್ತೋನ್ಮುಖರು ಅಂತಲೋ? ಹುಟ್ಟಿನಿಂದ ಸಾಯುವವರೆಗೆ ಎಲ್ಲರೂ ಉದಯೋನ್ಮುಖರೆ?' ಅಂದಾಗ ಎಲ್ಲರಿಗೂ ನಗು. ಒಬ್ಬ ಬರಹಗಾರ ತನ್ನ ಅನುಭವಕ್ಕೆ ಪ್ರಾಮಾಣಿಕನಾಗಿರಬೇಕಾಗುವ ಅವಶ್ಯಕತೆ, ಫ್ಯಾಶನ್‌ಗಾಗಿ ಲೇಖಕನಾಗುವುದರ ಅಪಾಯಗಳ ಬಗ್ಗೆ ಅವರು ಹೇಳಿದ ಮಾತುಗಳು ತುಂಬ ಅರ್ಥಪೂರ್ಣ ಅನ್ನಿಸಿತು. ಅವರು ಕಾವ್ಯದಲ್ಲಿ ಡಯಲೆಕ್ಟ್‌ನ ಬಳಕೆ, ತಂತ್ರದ ಬಳಕೆಯ ಅವಶ್ಯಕತೆಯ ಬಗ್ಗೆ ಹೇಳಿದ ಮಾತುಗಳು ಸ್ವಲ್ಪ ಇರುಸುಮುರುಸು ಅನ್ನಿಸಿದರೂ, 'Questionable character' ಆಗುವಷ್ಟು ಧೈರ್ಯ ನನಗಂತೂ ಬರಲಿಲ್ಲ. (ಯಾರೋ ಒಬ್ಬ ಅಪ್ಪ, ಬಹಳ ಪ್ರಶ್ನೆಗಳನ್ನು ಕೇಳುತ್ತಿದ್ದ ಮಗನ ಬಗ್ಗೆ ಟೀಚರ್‌ರ ಬಳಿ 'My son is a questionable character' ಅಂತ ದೂರಿದನಂತೆ ! - ಕಾರಂತರೇ ಹೇಳಿದ್ದು.) ಪ್ರಶ್ನೆ ಉತ್ತರಗಳೆಲ್ಲ ಮುಗಿದ ಮೇಲೆ, ಬಾಯಿ ಬಿಡದೆ ಕೂತಿದ್ದ ನನ್ನಂಥವರ ಕಡೆ ನೋಡಿ ನಗುತ್ತಾ ನೀವೆಲ್ಲ ನಮ್ಮ ಮಾತಿಗೆ ಸಹಿ ಹಾಕಿದ್ದೊ?' ಅಂದರು. ನಂತರ autographಗಾಗಿ ಎಲ್ಲರೂ ಕಾರಂತರನ್ನು ಸುತ್ತು ಹಾಕಿಕೊಂಡರು. ನನ್ನ ಗೆಳೆಯನೊಬ್ಬ ಅವನೇ ಬರೆದ ಕಾರಂತರ ಚಿತ್ರವನ್ನು, ಸಹಿ ಹಾಕಿಸಿ ಕೊಂಡು ಬಾ ಅಂತ ಕೊಟ್ಟು ಕಳಿಸಿದ್ದ. ಕಷ್ಟಪಟ್ಟು, ಜೋಪಾನವಾಗಿ ತೆಗೆದುಕೊಂಡು ಹೋಗಿದ್ದೆ. ಮಾತಾಡುವಾಗ ಕಾರಂತರು 'ನಿಮ್ಮ ಚಿತ್ರ ಬರೆದಿದ್ದೇನೆ ಅಂತ ತರ್ತಾರೆ. ಏನು ಹೇಳೋದು? ಅದರ ಹಾಗೆ ಆಗ್ಲಿಕ್ಕೆ ಪ್ರಯತ್ನಿಸ್ತೇನೆ ಅಂತ ಹೇಳ್ತೇನೆ' ಅಂದದ್ದರಿಂದ, ಈ ಚಿತ್ರವನ್ನು ಅವರಿಗೆ ತೋರಿಸಲು ಅಸಾಧ್ಯವಾದ ಅಳುಕು. ಶ್ರೀನಿವಾಸರಾಜು ಅವರು 'ತೋರಿಸು ಪರವಾಗಿಲ್ಲ' ಅಂತ ಹೇಳಿದ ಮೇಲೆ, 'ಬೈದರೆ ಬೈಸಿಕೊಳ್ಳೋದು ಅಷ್ಟೆ' ಅಂತ ಭಂಡ ಧೈರ್ಯಮಾಡಿ ತೋರಿಸಿಯೇ ಬಿಟ್ಟೆ. protrait ಬರೆಯುವುದು ಹೇಗೆ ಅಂತ ಸ್ವಲ್ಪ ಹೇಳಿ,

'20 ಪೈಸೆಯ stamp ಬೇಕಲ್ಲ. ನಮ್ಮ ದೇಶದಲ್ಲಿ revenue stampನ ಮೇಲೆ ಮಾಡಿದ ಸಹಿಗೆ ಮಾತ್ರ ಬೆಲೆ' ಅನ್ನುತ್ತಲೇ ಸಹಿ ಹಾಕಿಕೊಟ್ಟರು. ನನಗೆ ಏನೋ ಮಹತ್ಕಾರ್ಯ ಸಾಧಿಸಿದಷ್ಟು ಸಂತೋಷ! ನಂತರ ನಮಗೆ ಕಾರಂತರ ಮನೆಯಲ್ಲೇ, ಕೇಸರಿಬಾತ್, ಕೊಟ್ಟೆಕಡುಬು (ದಕ್ಷಿಣ ಕನ್ನಡದ ವಿಶೇಷ), ಉದ್ದಿನವಡೆ, ಕಾಫಿ, ಉಪಹಾರ.

ಆಮೇಲೆ ಕಾರಂತರ ಮನೆಯ ಎದುರಿನ ಹುಣಸೇ ಮರದಡಿಯಲ್ಲಿ ಪುಟ್ಟ ಕವಿಗೋಷ್ಠಿ ನಡೆಯಿತು. ಬಸ್ಸು, ಲಾರಿಗಳ ಶಬ್ದದ ಹಿಮ್ಮೇಳದ ಜೊತೆ (ಹೈವೇ ಪಕ್ಕ) ನಡೆದ ಗೋಷ್ಠಿ ತುಂಬ 'ಆಪ್ತ' ಅನ್ನಿಸಿತು. ಬಹುಮಾನಿತರು ಕವನಗಳನ್ನು ಓದಿದ ನಂತರ ವಕ್ಕುಂದ ಅವರು 'ಸಾನೆಟ್' ಒಂದನ್ನು ಓದಿದರು. ನಂತರ ತುಂಬ 'smart' ಆಗಿ ಕಾಣುತ್ತಿದ್ದ ಅಬ್ದುಲ್ ರಷೀದ್ ಅವರು ತಮ್ಮ '- ಗೆ' ಎಂಬ ಪದ್ಯವನ್ನು ನಾಚುತ್ತಲೇ ಓದಿದರು. ಗ್ರೂಪ್‌ಫೋಟೋ, ವಿಳಾಸಗಳ ವಿನಿಮಯ ಇತ್ಯಾದಿಗಳ ನಂತರ ಉಡುಪಿಗೆ ಹಿಂದಿರುಗಿದೆವು.

ಸ್ವಲ್ಪ ವಿರಮಿಸಿ ನಮ್ಮಲ್ಲಿ ಕೆಲವರು ಮಲ್ಪೆ ಬೀಚಿಗೆ ಹೊರೆಟೆವು. ಬೆಂಗಳೂರಿನಲ್ಲಿದ್ದು ನೀರಿನ ಮುಖ ನೋಡುವುದೇ ಆಗೊಮ್ಮೆ ಈಗೊಮ್ಮೆ ಆಗಿರುವ ನಮಗೆ, ಅಷ್ಟೊಂದು ಅಗಾಧ ಜಲರಾಶಿಯನ್ನು ನೋಡುವುದೇ ಖುಷಿ. ಅಲೆಗಳ ಜೊತೆ ಆಡುತ್ತಾ, ಕಪ್ಪೆಚಿಪ್ಪು ಆರಿಸುತ್ತಾ, ಕಂಡಕಂಡ ವಿಷಯಗಳ ಬಗ್ಗೆ ಹರಟುತ್ತಾ ತುಂಬ ಹೊತ್ತು ಕಳೆದೆವು. ವಾಪಾಸು ಹೋಗಬೇಕಲ್ಲ ಅಂತ ಬೇಸರದಿಂದಲೇ ಹೊರಟಾಗ, ಬಹಳ ವರ್ಷದ ಪರಿಚಯದವರಂತೆ ಆಗಿಹೋಗಿದ್ದೆವು.

ಹೊಟೇಲಿನಲ್ಲಿ ಊಟ ಮುಗಿಸಿ ಆವತ್ತು ರಾತ್ರಿ ಬೆಂಗಳೂರಿಗೆ ಹೊರಟೆವು. 'ಬರುವಾಗ ಇವರೆಲ್ಲರ ಹತ್ತಿರ ಯಾಕೆ ಅಷ್ಟು ಮುಜುಗರ ಪಟ್ಟುಕೊಂಡೆ?!' ಅನ್ನಿಸುತ್ತಿತ್ತು. ತೀರ uncomfortable ಆದ ಸೀಟನ್ನು 'ಹಾಳಾದ್ದು ಪುಶ್‌ಬ್ಯಾಕ್ ಮಾಡಲು ಬರುತ್ತಿಲ್ಲವಲ್ಲ' ಅಂತ ಬೈದುಕೊಂಡರೂ, ಹಿರಿಯರೊಬ್ಬರ ಜೊತೆ ಕೆಲ ಹೊತ್ತು ಕಳೆದ, ಹೊಸ ಸ್ನೇಹಿತರನ್ನು ಪಡೆದ ಖುಷಿಗೆ ಬಂದಿತ್ತು -ಗಡದ್ದು ನಿದ್ದೆ, ಲಾಯ್ಕು ಕನಸು.

*(ಕ್ರೈಸ್ಟ್ ಕಾಲೇಜು 'ಆನಂದ' ಸದಾಶಯ ಸಂಚಿಕೆ)*



## ರಾಜು

● ಬಸವರಾಜ ವಕ್ಕುಂದ

ರಾಜು ಪಾರದರ್ಶಕ ಗಾಜು
ಕನ್ನಡದ ಹೆಸರಿನಲ್ಲಿ ಕನ್ನ ಕೊರೆಯುವ
ಗೋಜು ಗದ್ದಲಗಳ ನಡುವೆ
ದೃಷ್ಟಿ ದೋಷಗಳಿರದ ಕಪಟ ವೇಷಗಳಿರದ
ಕನ್ನಡಕಧಾರಿ ಕನ್ನಡಿಗ
ಸ್ವೈರ ವೈರಗಳ ಹಳವಂಡವಿರದ
ಗೆಳೆತನದ ತಿಳಿಹೊಂಡ
ಮಾತು ಕೃತಿಗಳ ನಡುವಿನ ಸರಳ ಸೇತುವೆ
ಪಂಗಡಗಳ ನಡುವೆ ಪಿಂಗಡಗೊಳ್ಳದ
ಹಳಿತಪ್ಪದ ಮೌನ ನಡಿಗೆ
ಸದಾ ಶ್ರದ್ಧೆ ಶುದ್ಧಿಗಳ ಸೀಟಿ ಹೊಡೆಯುವ
ಹಳಿಯ ಮೇಲಿನ ಸದ್ದು
ಮೂವತ್ತು ವರುಷ ಕನ್ನಡದ ಬೆಳಕ
ಹೊತ್ತು ನಡೆದ ಅಪರೂಪದ ಬಂಡಿ
ನಾಳೆಗಳ ನೆಲದಲ್ಲಿ ಕನಸುಗಳ ಬಿತ್ತಿದ
ಇಂದು ನಿನ್ನೆಗಳ ಕಂದೀಲು ಸದಾ ಕನ್ನಡದ ಬೆಳಕಿಂಡಿ.

*('ಆಳು ಹೂಗಿನ ಹಕ್ಕಿ" ೨೦೦೫)*





## ಚಿ. ಶ್ರೀನಿವಾಸರಾಜು ಅವರಿಗೆ

● ಎಂ. ರವಿಕುಮಾರ್

**ಭೂ**ಮಿಯದೆ ಮೂರ್ತಪೂಜೆ ಈ ರಂಗಭೂಮಿ
ಹುಡಿಗಾಪು, ಹೂನುಣುಪು, ಹದಗೊಂಡ ಮಣ್ಣಸಾರ

ಮುಳ್ಳು ಪೊದೆಯೆಲ್ಲ ಕಿತ್ತು ನೆಲ ಸಪಾಟುಗೊಳಿಸಿ
ಬಿಗಿಗೊಳ್ಳಲೆಂದು ಹಿರಿಗೆಜ್ಜೆಗಳ ಕೂಡಿ ಕುಣಿದು
ಬೆಳಗಿದಿರಿ ತೆರೆಮರೆಯಲ್ಲಿ ಬಣ್ಣದ ಬೆಳಕಾಗಿ
ಪ್ರತಿ ಪ್ರಯೋಗಕ್ಕೂ ಶೃತಿಯಾದ ವಿನಯಯೋಗಿ.
ಮಣ್ಣು ಹೊತ್ತು ಬೆಳಸಿದ ತುಳಸಿಗದೆಷ್ಟು ಕಂಪು!

ಪ್ರಿಂಟು ಮುಗಿದಿದ್ದೆ ತಡ ಗರಿ ಹರಡಿ ಜಾರಿದುವು
ಹಾರಿಹೋದ ಪಾರಿವಾಳಗಳಿಗೆ ಕೈಬೀಸಿ ಹರಸಿ
ಎದೆಗೊತ್ತಿ ಬಯಲ ಸುತ್ತಿಬರಲು ಅಟ್ಟಿದಿರಿ.
ನಿಮ್ಮ ಪಾರಿಜಾತದ ತೋಟಕ್ಕೇ ಮರಳಿರುವ
ಹಕ್ಕಿಗಳೆಲ್ಲ ಹಾಡಿ ಪ್ರಿಂಟು ಪೂರ್ಣವಾಗಿದೆ.
ನಿಮ್ಮನೆಲ, ಹಕ್ಕಿ, ಗುಣ, ಮಾತಿರದ ಮೂಕ ಮಮತೆ
ಮುದ್ರಿಸಿದ ಭುಮಿಯಬುಕ್ಕು ನಿಮಗೇ ಅರ್ಪಣೆ

*(೯-೧-೨೦೦೨, 'ನಾನು ಮತ್ತು ಕೋಗಿಲೆ')*

❑



# ತಲಪರಿಗೆ

● ಗೀತಾ ಡಿ.ಸಿ.

ನನ್ನ ಕಾಲದ ಸಾಹಿತ್ಯ ಪರಿಚಾರಿಕೆಗೊಂದು ಕುರುಹು
ಈ ಆನೆಗೊಂದಿಯ ರಾಜವಂಶದ ಶ್ರೀನಿವಾಸ
ಹೆಸರಿಗೆ ರಾಜ. ಉಳಿದ ಪಳೆಯುಳಿಕೆ ಮಾತ್ರ
ರೂಪಾಂತರಗೊಂಡ ಬೇಟೆಯದ್ದು.

ಎಲ್ಲೋ ಯಾವುದೋ ಹೇಳ ಹೆಸರಿಲ್ಲದ
ಹೈಕಳು ಬರೆಯುವ ಸುಳಿವು ಸಿಕ್ಕುವುದೇ ತಡ
ಇವರು ಬೀಸಿದ ಬಲೆಗೆ ಆ ಕವಿಮಿಕ ಬಿತ್ತೆಂದೇ ಅರ್ಥ!

ಬೇಟೆಯ ವೈಖರಿಯೋ.......!
ಬೊಗಸೆಯೊಡ್ಡಿ, ಕವಿತೆಗಳ ಭಿಕ್ಷೆ ಬೇಡಿ
ಹಾದಿಬೀದಿಯೆನ್ನದೆ ಸಿಕ್ಕಲ್ಲೆಲ್ಲಾ ಕಾಡಿ
ಸಂಕಲನ ತರುವವರೆಗೂ ಎಡೆಬಿಡದ ನಕ್ಷತ್ರಿಕ!
ಆದರೇನು?
ಕವಿಮಿಕಗಳ ಬೇಟೆಯಲಿ ಸದಾ ಅತೃಪ್ತ.

ಯಾವ ಹಮ್ಮುಬಿಮ್ಮಿರದ ಮೌನದ ಸರದಾರ
ಪಾಠ ಹೇಳದವರಿಗೆಲ್ಲಾ ಮೇಷ್ಟ್ರು.
ರಾಜತ್ವದ ಯಾವ ಗತ್ತುಗಳಿಲ್ಲದಿದ್ದರೂ
ದೂರದಲ್ಲುಳಿದವರಿಗೆ ರಾಜಗಂಭೀರ
ಕೊಂಚ ಬೆಚ್ಚಿಸಬಹುದೆಂಬ ಭ್ರಮೆ;
ಕೆಲವರಿಗೆ ಅವ್ಯಕ್ತ ಭಯ.
ಬಿಂಕ ಬದಿಗಿಟ್ಟು ಒಮ್ಮೆ ನಗು ಕುಲುಕಿಸಿದರೆ ಸಾಕು
'ಚಿರಂಜೀವಿ'ಯಲಿ ಸದಾ ಪ್ರೀತಿಯ ಒರತೆ.
ಅನ್ವರ್ಥದಂತೆ ರಾಜಮರ್ಯಾದೆ ಗ್ಯಾರೆಂಟಿ!
ಧೇನಿಸುವವರಿಗೆ ತವರೇ ತಾನಾಗಿ
ಕದ ತೆರೆದು ಕೈಬೀಸಿ ಕರೆವ ತಲಪರಿಗೆ!



❑

## ನಮ್ಮ ಭಸನಾಲ ಬಂಧು

● ಚಲಪತಿ. ಆರ್

೧

ಗಾಂಧಿಯೆಂದರೆ
ಎದೆಯೊಳಗೆ ತಣ್ಣಗೆ
ಕೊರೆಯುತ್ತಾ ಹರಿವ ನದಿ

ಬಸವನೆಂದರೆ
ಬಿಜ್ಜಳನ ಎದುರಲ್ಲಿ
ಕೈಕಟ್ಟಿ ನಿಲ್ಲದ ಹಠವಾದಿ

ಸ್ವಜನ, ಗೆಳೆತನ
ಸ್ವಾತಂತ್ರ್ಯ ತಂದೊಡ್ಡುವ
ಉರಿಯನು ಮೀರಬೇಕೆನ್ನುವ ವಿಧಿ

೨

ಹೆಗಲ ಬ್ಯಾಗೊಳಗೆ
ಎದೆಯ ಜೇಬೊಳಗೆ
ಏಳು ಬೆಟ್ಟದಷ್ಟು ತೂಕದ ನಿಧಿ



ಸೇವೆಗೆ ಸಹೃದಯತೆಗೆ
ಒಂದಿಷ್ಟು ಸೃಜನಶೀಲಕೆಂದು
ತಾನೇ ಕಟ್ಟಿಕೊಂಡ 'ಅಂಕಣ'ದ ಪರಿಧಿ

ಸ್ಕೂಟರಿನ ಡಿಕ್ಕಿಯೊಳಗೆ
ತುಂಬಿಕೊಂಡ ಸಂಘದಿಂದ
ಕನ್ನಡದ ಸಾಲ ತೀರಿಸುವ ಸರದಿ

೩

ಈತ
ಬಸವ, ಬಿ.ಎಂ. ಶ್ರೀಯಲ್ಲ
ತನ್ನಿಂ ತಾನೇ ರಾಜಠೀವಿಯಿಂದ
ಭಂಡಾರಿಗಳ ಶೋಧಿಸುತ್ತಾ ಹೊರಟ ಸಾಧು

ಕಂಡ ಕುಬೇರರನ್ನು ಕಾಡಿ
ಒಳಗಿರುವುದೆಲ್ಲ ತಡಕಾಡಿ
ಗಂಟುಮಾಡಿ ಎದುರಿಗಿಡುವ ಕನ್ನಡದ ಜಾದು

ಹಳಿಯ ಮೇಲಿನ ಸದ್ದಾಲಿಸುತ್ತಾ
ಮಾತೇ ಇಲ್ಲದ ನಾಟಕವಾಡಿ
ನುಡಿಯನ್ನು ಅಪ್ಪಿಕೊಂಡ 'ಭಸನಾಲ ಬಂಧು'



# ರಾಜದೀಪ

● ಕಾ.ಸು. ರಾಮಚಂದ್ರ

ಕಾಳಿದಾಸನು ಪರಿಚಯ ಮಾಡಿಸಿದ್ದ ವ್ಯಕ್ತಿ
ಕಾವ್ಯ ಕೈಹಿಡಿಸಿದ ವಾಗಾರ್ಥ ಶಕ್ತಿ

ಬರಿ ಜೇನುಗೂಡಿಗೆ ಕಾವ್ಯ ಮಕರಂದ
ಕುರುಡುಲೋಕಕೆ ರಾಜದೀಪ
ಬೀಸುವ ಬಿರುಗಾಳಿಯ ನೀರದನೀರು
ಕಿತ್ತು ಬಿಸಾಡಿದ ಹೂವಿಗೆ, ಹೂದಾನಿಯ ಅಂದ

ಬಂದು ನಿಂತರೆ ಸಾಕು ಎದ್ದು ನಿಲ್ಲುವ ಘನತೆ
ಬಾಯಿ ಬಿಟ್ಟರೆ ಸಾಕು ಸರಸತಿಯ ಮುಖವೀಣೆ
ಕಣ್ಣು ಬಿಟ್ಟರೆ ಸಾಕು ತಪ್ಪೊಪ್ಪಿಗೆಯ 'ವಾಮನ'
ಕನಲಿ ಕೂಗಿದರೆ ಸಾಕು ಗಾಳಿ ಕೇಳುವುದು ಅಪ್ಪಣೆ

ಹರಿದ ಬದುಕಿಗೆ ತಂಪು ನೀಡಿದಿರಿ
ಒಡೆದ ಹೃದಯಕ್ಕೆ ಲಯಗತಿ ತಂದಿರಿ
ಜೋಕಾಲಿ ಬದುಕಿಗೆ ಅರ್ಥ ಹೆಚ್ಚಿಸಿದಿರಿ
ಮುರಿದ ಕನಸುಗಳ ಕವನವಾಗಿಸಿದಿರಿ



ಇನ್ನೇಕೆ ಸುತ್ತು ಬಳಸಿನ ಮಾತು
ನೀವೇ ನನ್ನ ಕವನವಾಗಿದ್ದೀರಿ.





# ಮಣ್ಣ ತೇವ

● ಕೆ.ವೈ. ನಾರಾಯಣಸ್ವಾಮಿ

ಕವಿ ನಾನು
ಅದು ನೀವಿಟ್ಟ ಹೆಸರು
ನಿಮ್ಮ ಅಭಿನಂದನೆಯ ಮಾಲೆಗೆ
ತಂದಿದ್ದೇನೆ ತುಂಬೆ ಹೂ

ನೀವೊಬ್ಬ ಹೊಲದ ರೈತ
ಮೊಗೆದು ಚೆಲ್ಲುತ್ತಿದ್ದಿರಿ
ಮಿಣುಕು ಹುಳಗಳನ್ನ ಅಖಂಡ ಕತ್ತಲಿಗೆ
ಹತ್ತು ದಿಕ್ಕುಗಳಿಗೂ ಹಂಬರಿದು ಮಿಂಚುಬಳ್ಳಿ
ಮಿನುಗಿ ನಕ್ಷತ್ರ ಲೋಕಕ್ಕೂ
ಬೆಳಕು ದಾರಿಯಾಗಲೆಂದು
ಕಾಯುತ್ತಿದ್ದಿರಿ

ಹೊತ್ತಿನ ಜೋಳಿಗೆ ಹೊತ್ತಿರಿ
ನಿತ್ಯವು ಹೊಸ ಬೀಜ ಹುಡುಕಿ
ಹಿಚುಕಿ ನೋಡಲಿಲ್ಲ ಜೊಳ್ಳೆಂದು ತಿಳಿದೂ
ಹದಗೊಂಡ ನೆಲಕ್ಕೆ ಗಟ್ಟಿ ಕಾಳುಗಳ ಜೊತೆ
ಬಿತ್ತಿದ್ದಿರಿ
ಚಿಗುರಿಸಬಹುದೆಂಬ ಆಸೆ ನಿಮಗೆ
ನಿಂದ ನೆಲ ಸಂದ ಕಾಲದ ಕರುಣೆ



ಇಷ್ಟ ದೇವತೆಗಾಗಿ
ಅಸಲು ಕಸುಬಿನ ಗುತ್ತಿಗೆ ಹಿಡಿದವರು
ಗುದ್ದಲಿ ಹಿಡಿದು ನೆಲಕಡಿದು ದಣಿದಾಗ
ಗುಟುಕು ನೀರು ಕೊಟ್ಟಿರಿ
ಅಗೆದವರು ಆಳ ಕಂಡು ಸಂಭ್ರಮಿಸುವಾಗ
ಅವರ ರೆಟ್ಟೆಯ ಮೇಲಿನ ಬೆವರ ಹನಿಗೆ
ಬೆರಗುಗೊಂಡಿತ್ತು ಕಣ್ಣು

ದೊಡ್ಡ ವಿಚಾರವನೆಂದೂ ಹೇಳಲೇ ಇಲ್ಲ
ನೀವು ದೊಡ್ಡದಾಗಿ ಬದುಕಿದ್ದೀರಿ
ಸಿಹಿ ಸಕ್ಕರೆ ಉಣಿಸಿ ಅವರಿವರಿಗೆ

ಬೇವನುಂಡೂ ಮೆಟ್ಟಿಲಾಗಿಯೂ ಹಿಗ್ಗಿದಿರಿ
ಯಾವ ಪ್ರತಿಮೆಗೂ ಒಗ್ಗದ
ಯಾವ ರೂಪಕಕ್ಕೂ ಬಗ್ಗದ ನೀವು
ಬಣ್ಣದ ಹಂಗಿಲ್ಲದ ಮಣ್ಣಬೊಂಬೆ
ನಿಮ್ಮ ಒಡನಾಟ
ಹುಲ್ಲು ಗರಿಕೆಯ ಸಂಕೋಚ
ಇಬ್ಬನಿಯ ಸಹವಾಸ
ಕಣ್ಣೊಳಗೆ ಮಣ್ಣ ತೇವ
ಇದೋ ನಿಮಗೆ ನಮಸ್ಕಾರ



## ಬರೆವ ದಾರಿಗೆ ಹರಕೆ ನೆರಳು

● ವಾಸುದೇವ ನಾಡಿಗ್

ನಿಮ್ಮನ್ನು ನೆನೆದಾಗಲೆಲ್ಲಾ
ಕಣ್ಣಮುಂದೆ ಬರುವುದು
ಅದು ಮುಖವಲ್ಲ!
ಬೆಳಕನ್ನು ಮೊಗೆದು
ತುಂಬಿನಿಲ್ಲುವ ಪುಟಗಳು
ತುಂಬಿಕೊಟ್ಟು,
ಕೊಟ್ಟು ತುಂಬಿಕೊಳ್ಳುವ
ಬರೆದು ಬರಿದಾಗದ
ಮನಸುಗಳು

ನೀವು ಬರೆಸಲಿಲ್ಲ ನಮ್ಮಿಂದ
ಹೊರಿಸಿದಿರಿ!
ಬಾಳತಿರುವುಗಳ
ಹೊಳೆಸಿದಿರಿ!
ಮೈತಡವಿ ಹುರ್.....
ಎಂದು ಓಡಬಿಟ್ಟ ಕುದುರೆಗಳು
ಕಾವ್ಯ ಗಗನದಿ
ರೆಕ್ಕೆಗಳ ತೆರೆದುಕೊಂಡವು!



ಬರಿ ಬರೆಸಿದ್ದರೆ ಸಾಕಿತ್ತು
ಬದುಕಿನ ಬತ್ತಳಿಕೆಯಲಿ
ಹಸಿದ ಬಾಣಗಳ ತುಂಬಿ
ಕಳಿಸಿದಿರಿ.
ಎದೆಯಲಿ ಕಲ್ಪನೆಗಳ
ಇರುಕಿ ಕಾದು ನಿಂತು ಬಿಟ್ಟಿರಿ!
"ಏನು ಬರೆದಿರಿ? ಹದುಳವಿಹುದೇ"

ಎಂಬ ಪ್ರಶ್ನೆ ಅದು ಪ್ರಶ್ನೆಯಲ್ಲ
ಕಾದ ಹೆಂಚಿನ ಮೇಲೆ
ಹಿಟ್ಟು ಹೊಯ್ಯುವ ಸರದಿ

ಎಷ್ಟೋ ರೈಲುಗಳು
ಹರಿಹಾಯ್ದರು
ಹಾದು ಹೋದವು
ಹಳಿಗಳು ಶಬ್ದ ಮಾಡಲಿಲ್ಲ
ಹೆಗಲ ಮೇಲೆ ಕೂರಿಸಿ
ಕನಸ ತೋರಿಸಿದ
ಕಣ್ಣುಗಳು ಕಿಡಿಕಾರುವುದಿಲ್ಲ
ಸಂಕೋಚದಲ್ಲದ್ದಿದ ಕುಂಚ
ಚಿತ್ರಿಸುವುದಾದರೂ ಏನು
ವಿನೀತಕ್ಕೊಗ್ಗಿದ ಎದೆಯು
ಮಾತಾಡುವುದಾದರೂ ಹೇಗೆ

ನೀವು
ಮುಗುಳ್ನಗುವಿನ ಚಿತ್ರಕೆ
ಮೌನ ಚೌಕಟ್ಟು!
ಪದ್ಯ ಕಾಗದಕ್ಕಿಳಿಯುವ ಮುನ್ನದ ಬಿಕ್ಕಟ್ಟು!
ಬರೆಯುತ್ತಾ ಬದುಕಿದ್ದೇವೆ
ಕಣ್ಣೊರೆಸಿಕೊಂಡರೂ ಮಸುಕು
ಹಾಗೇ ಬಿಟ್ಟರೂ ಮಸುಕು!
ತುಸು ವಿಚಾರಿಸುತ್ತಿರಿ ಈ ಕಡೆ
ತಿರುವುಗಳಲಿ ಕಂಡಾಗ
ನುಡಿ ಕೊನರಲಿ
ಹಾಡೇ ಹಾದಿಯ ತೋರಲಿ





# ಶ್ರೀನಿವಾಸರಾಜು ಮೇಷ್ಟರಿಗೆ ನಮಸ್ಕಾರ

● ಅಬ್ದುಲ್ ರಷೀದ್

ಬಹುಶಃ ಈಗಿನ ಹುಡುಗರಿಗೆ ಶ್ರೀನಿವಾಸರಾಜು ಮೇಷ್ಟ್ರು ಸಿಗಲಿಕ್ಕಿಲ್ಲ
ಮೇಷ್ಟರಿಗೆ ಹುಡುಗರೂ ಇರಲಿಕ್ಕಿಲ್ಲ
ಇದು ಹಳಹಳಿಕೆಯೆಂದೇನೂ ಅನಿಸಬೇಕಾಗಿಲ್ಲ
ಏಕೆಂದರೆ ಕವಿತೆ ಹುಚ್ಚು ಹಾದರಗಿತ್ತಿಯಂತಹ ಹೆಂಗಸು
ವಿಟನಂತಹ ಬೇಜವಾಬ್ದಾರಿಯ ಗಂಡಸು ಹಾಗೆಲ್ಲಾ
ಮೇಷ್ಟರ ಪಾಲಾಗುವುದಿಲ್ಲ ಅಂತ ನಾವೆಲ್ಲ ಸಜ್ಜನರ ಕಾಲೆಳೆಯಬೇಕಾಗಿಲ್ಲ.
ಏಕೆಂದರೆ ಸಜ್ಜನರು ಈಗಲೂ ಕಾಲವಾಗಿಲ್ಲ.
ಬಹುಶಃ ಇದನ್ನು ಸಮೀಕರಣದ ಮೂಲಕ ಹೀಗೂ ಹೇಳಬಹುದು
ಅಂತೆಲ್ಲ ಬಗೆಹರಿಸುತ್ತಿರಬೇಕಾದರೆ ನನಗೆ ನನ್ನನ್ನೇ ಒದೆಯಬೇಕೆನ್ನಿಸುತ್ತದೆ.
'ಸುಮ್ಮನೇ ಮೇಷ್ಟರ ಕಾಲಬಳಿ ಕುಳಿತು ಅಥವಾ ಅವರ ಕೈ ತುತ್ತಿನಂತಹ
ವಾತ್ಸಲ್ಯ ಉಂಡು ಯಾಕೆ ಬೆನ್ನು ತಡವಿಸಿಕೊಂಡು ಬರಲಾಗುತ್ತಿಲ್ಲ'
ಮೇಷ್ಟ್ರು ನಮ್ಮನ್ನು ಬೈಯ್ಯಬಹುದಿತ್ತು, ಕಿಚಾಯಿಸಬಹುದಿತ್ತು,
ವಿಮರ್ಶಿಸಬಹುದಿತ್ತು – ಹಾಗೇನೂ ಮಾಡಲಿಲ್ಲ
ಸುಮ್ಮನೇ ಸದ್ದು ಮಾಡದೇ ಸಪಾಟು ದಾರಿಯಲ್ಲಿ ನಡೆವಂತೆ ನಡೆದು ಟೀ ಲೋಟ
ಕೈಯಲ್ಲಿರುವಂತೆ ನಡೆದು
ಕವಿತೆ ಎದೆಯೊಳಗಿರುವಂತೆ ನಡೆದು
ಎಲ್ಲಿ ಹೆಜ್ಜೆ ಊರುವುದೋ ಎಂಬಂತೆ ನಡೆದು
ಪುಸ್ತಕಗಳ ಪ್ರಕಾಶಿಸಿದರು
ನನ್ನಂತಹ ಅರಿವುಗೆಟ್ಟವನ ಕವಿಯನ್ನಾಗಿಸಿದರು

ಒಮ್ಮೆ ಮೇಷ್ಟರಿಗೆ ನಮಸ್ಕಾರ ಮಾಡಲು ಮರೆತು ನನಗೆ ನನ್ನನ್ನೇ ಒದೆಯಬೇಕೆನ್ನಿಸಿತ್ತು
ಆಮೇಲೆ ಎಲ್ಲೋ ಹೊಳೆಯ ಬದಿಯಲ್ಲಿ ನನಗೆ ಅವಳು ಸಿಲುಕಿ ನನ್ನ ನಾಲಗೆಯಲ್ಲಿ ನೆತ್ತರು
ಜಿನುಗಿ ಅವಳ ಎದೆ ಹೊಟ್ಟೆ ಬೆನ್ನು ಕುಂಡೆಯಲ್ಲೆಲ್ಲಾ ಉಣ್ಣೆಹುಳುಗಳು ಕಚ್ಚಿ ರಂಪಾಟವಾಡಿ
ಆಮೇಲೆ ಅದೇ ಸಖತ್ತಾಗಿ ಕವಿತೆಯಾಗಿ ಅದಕ್ಕೆ ಮೇಷ್ಟರು ಬಹುಮಾನವೂ ಕೊಟ್ಟು ಅದು
ಹಾಗಲ್ಲ ಹಾಗಲ್ಲ ಎಂದು ಹಲ್ಲು ಕಚ್ಚಿಕೊಂಡಿದ್ದೆ

ಆಗಲೂ ಶ್ರೀನಿವಾಸರಾಜು ಮೇಷ್ಟರು ಮಗುವಿನ ಹಾಗೆ ನಗುತ್ತಿದ್ದರು
ಈಗಲೂ ನಗುತ್ತಿರುತ್ತಾರೆ.
ಅವರ ಮನೆಯೆದುರಿನ ಮಲ್ಲಿಗೆ ಬಳ್ಳಿ
ಕಾಮಧೇನುವಿನ ಪರಿಮಳ!
ಅವಳ ಕೆಚ್ಚಲಿನಿಂದ ಮುಖವ ಬಿಡಿಸಿಕೊಂಡು ಬೆಂಗಳೂರಿನ ಬಸ್ಸು ಹತ್ತಿ
ಕ್ರೈಸ್ಟ್ ಕಾಲೇಜಿನಿಂದ ಕವಿತೆಗೆ ಬಹುಮಾನ ಇಸಕೊಂಡು ಬರುವುದಿದೆಯಲ್ಲ
ಮೇಷ್ಟ್ರೆ ನೀವಿದ್ದರೆ ಹುಡುಗರಿಗೆ ಹೀಗೆಲ್ಲ ಕಾವ್ಯದ ಹಾಗೆ
ಗಿರಕಿ ಹೊಡೆಯಲು ಆಗುತ್ತದೆ
ನಿಮಗೆ ನಮಸ್ಕಾರ.



## ಚಿ. ಶ್ರೀನಿವಾಸರಾಜು

● ಅಂಕುರ್ ಬೆಟಗೇರಿ

ಕ-
ವನದಲ್ಲಿ ಕಳೆದು ಹೋಗಿರುವ
ನಾಡ ನೈದಿಲೆಗಳ
ಅರಳಿಸುವ ಚಂದ್ರ





## ರಾಜನಲ್ಲದ ರಾಜ ಶ್ರೀನಿವಾಸರಾಜ

● *ಟಿ. ಯಲ್ಲಪ್ಪ*

ಹೆಸರಿಗಷ್ಟೇ ರಾಜ
ರಾಜಾಧಿಕಾರಗಳನೊಲ್ಲ
ವಾಸಕ್ಕೊಂದು ನಿವಾಸವಿರಲು
'ಶ್ರೀ'ವನಿತೆಯ ಧಿಕ್ಕರಿಸಿದ ಸದ್ಗೃಹಸ್ಥ, ಶ್ರೀನಿವಾಸ!

ಅಪ್ಪಟ ದೇಸೀ ನಗೆಯ
ಈ ಹಳ್ಳಿಯ ಹೃದನೆದೆಯಿಂದ
ಆಗೊಮ್ಮೆ-ಈಗೊಮ್ಮೆ ಜಿನುಗುವ
ಆ ಮಂದಹಾಸವನೆಂದೂ
ಚುಚ್ಚಿ ಘಾಸಿಗೊಳಿಸದಿರಲೆಂದೇ
ಮೀಸೆ-ಮೋಸುಗಳ ಕೆತ್ತಿ
ಹಸನಾಗಿಸಿದ ನುಣುಪು ಗಲ್ಲದಲಿ
ಇಣುಕಿ ನೋಡುವ ಬೆಳ್ನಗೆ

ಮಾರ್ಗದ ಮಾರ್ಮರೆತದ
ಆ ಗುಲಾಬಿ ತೋಟದಲಿ
ಗುದ್ದಲಿ ಹಿಡಿದು ನಿಂತ ವನಮಾಲಿ !
ಈ ನೆಲದ, ತುಂಬೆ, ತುಳಸಿ,
ಚೆಂಡು, ಮಲ್ಲಿಗೆ, ಕನಕಾಂಬರಗಳ ನೆಟ್ಟು
ದೇಸೀ ಗಮಲುಗಳ ದೇಶಾಂತರ ಸೂಸಿದ ಹರಿಕಾರ



ತನ್ನ ನಗೆಯಂತೆ
ನಗೆಯ ಬಗೆಯಂತೆ
ಹಗೆಯೂ ಕೈ ಮುಗಿವಂತೆ
ಬದುಕಿಬಿಟ್ಟ ಆ ಗಾಂಧೀ ಮಹಾತ್ಮನಂತೆ

ಅಪ್ಪಟ ಬಿಳಿಯ ಖಾದಿಯಲಿ
ಸುತ್ತಿಟ್ಟ ಪುಸ್ತಕದಂತ ದೃಢಕಾಯ -
ನಿಕಾಯದಲಿ ಸದಾ ಹೆಗಲೇರಿದ್ದ ಹಸುವೆ
ಅದರೊಳಗೆಲ್ಲಾ ಬರೆದ, ಅರೆ ಬರೆದ
ಕತೆ, ಕವನ, ಹೂ, ಅವನ
ಬಿಡಿಸಿ, ಕಟ್ಟಿ, ಮಾಲೆಯನೇ ಪೋಣಿಸಿದ
ಹೂವಾಡಿಗನ ಕೈ ಕುಶಲದಿಂದ
ಕಟ್ಟಿಯೂ ಹೊಸ ಮಾಲೆಯನ್ನು
ಮುಡಿವ ಭೋಗಿಗಲ್ಲದೆ
ಬಾಡಿಹುದೆಂದು ಮರುಗಿ
ಸಾರಸಿಕ ತಾಣಗಳಿಗೆ ಹೊತ್ತು
ತಿರುಗಿದ ರಸ ಪರಿಚಾರಕ

ಹೊತ್ತು ತೀರುವ ಮುನ್ನ
ನೀವು, ಹೊತ್ತು ಮಾರಿದ ಹೂವು
ಬಾಡಿ ಹೋಗದಿರಲೆಂದು

ನೀವು ನೆಟ್ಟಿ ಬೆಳೆಸಿದ ಗಿಡಗಳೆಲ್ಲಾ
ಹೂ ಸುರಿದು ನಿಂತಿಹವು
ನಿಮ್ಮ ಪದ ತಲದಲ್ಲಿ

ನಿಮ್ಮ ಮುಸ್ಸಂಜೆ ಹಾದಿಯಲಿ
ಬಾಳ ಪಯಣದ ದಣಿವು
ಸುಳಿಯದಿರಲೆಂದು
ನೀವು ತಿದ್ದಿ ಬರೆಸಿದ ಕವಿತೆ
ಲಾಲಿ ಹಾಡಿಹವು

ಆ ಸಗ್ಗದಿಂದ್ರನಿಗೊಂದು
ಓಲೆಯನು ಬರೆವೆ
ಅವನಾಸ್ಥಾನದಲಿ ಮುಂ
ಪವಡಿಸಿಹ ಈ ನಾಡ
ಪಿರಿಯ ಓವಜರ ತೊಡೆಯ ಮೇಲೆಮ್ಮ
ರಾಜು ಮಾಸ್ತರರ ಪುಸ್ತಕವೇ
ರಾರಾಜಿಸುತಿರಲೆಂದು

ಆ ಗೊಟ್ಟಿಯ ಅಲಂಪಿನಿಂಪುಗಳು
ಈ ಮಣ್ಣಿನೆದೆಗಳನಿಂತೆ
ಸೋಕುತಿರಲೆಂದು
ಹೇ, ಗುರುದೇವ
ಜನುಮ ಜನುಮದಲೂ
ನೀನೇ, ನಮ್ಮ ಜನುಮದುನ್ನತಿಕೆಯ
ಬೆಳಗಲು ಬಹ ಬೆಳಕಾಗಿರೆಂದು
ಕೈ ಮುಗಿವೆನಿದೋ
ನಿಮಗೀ ನನ್ನ ನುಡಿ ನಮನ ಸಿಂಧು 

## ಆಪತ್‌ಬಾಂಧವ

● ದೊಡ್ಡರಂಗೇಗೌಡ

**ಘೋ**ರ ಕತ್ತಲಲಿ ದಾರಿ ತಪ್ಪಿರಲು
ನೇರ ನೆರವಾದ ಧೀರ ಗೆಳೆಯನೆ
ತೀರಿಸಲಿ ಋಣವನೆಂತು
ನಿನ್ನ ನೆನೆವೆ ತಂಪು ಹೊತ್ತು

ಯಾರೂ ಆಸರೆಗೆ ಬರದ ಸಮಯದಲಿ
ತೋರಿ ಸ್ನೇಹವನು ಸಾರಿ ಪ್ರೀತಿಯನು
ಹತ್ತಿರಾದ ನಿನ್ನ ಇರವ
ನಾನಿಂದು ಮರೆಯಲೆಂದು

ನೂರು ಜ್ಞಾನಸುಮ ಪರಿಪರಿ ಬೆಳೆಸಿದ
ಅರಿವೆ ಗುರುವಾದ ತೆರೆದ ಮನದ
ನಿನ್ನ ನಲ್ಮೆ ಮರೆಯಲೆಂತು
ಅನುದಿನವು ನೆನವೆ ಕುರಿತು



ನಾಡು ನುಡಿಗಾಗಿ ಗಂಧ ನೀನಾಗಿ
ಜೀವ ಸವೆಸಿದ ಕನ್ನಡ ಕಿಂಕರನೆ
ನಿನ್ನ ಗುಣವ ಬಣ್ಣಿಸಲೆಂತು
ಬರೆದನಿತೂ ಅದುವೆ ಕಿಂಚಿತ್ತು



# ಹಾರೈಕೆ

● ಶ್ರೀಕೃಷ್ಣ ಆಲನಹಳ್ಳಿ

ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಚಟುವಟಿಕೆಗಳನ್ನು ನಾನು ಅದು ಶುರುದಾಗಿವಾಗಿನಿಂದಲೂ ಆಸಕ್ತಿಯಿಂದ ಗಮನಿಸುತ್ತಾ ಬಂದಿದ್ದೇನೆ. ನಿಜ ವಾಗಿಯೂ ಈ ಸಂಘದ ಪ್ರಕಟಣೆಗಳಲ್ಲಿ ಕೆಲವಂತೂ ಅಪೂರ್ವ ವಾದವಾಗಿವೆ. ಶಿವಪ್ರಕಾಶನಂಥ ಮಹತ್ವದ ಕವಿಯೊಬ್ಬನನ್ನು ಅನಾವರಣ ಗೊಳಿಸಿದ ಕೀರ್ತಿ ಈ ಸಂಘದ್ದು. ಹಾಗೇ ಕ.ವೆಂ., ನರಹಳ್ಳಿ, ರಾಘವೇಂದ್ರ ರಾವ್, ಲಕ್ಷ್ಮಣರಾವ್ ಮುಂತಾದವರ ಜೊತೆಗೆ ಇದೇ ಮೊದಲಿಗೆ ಕೆಲವೊಂದು ಅಪರೂಪದ ಹೊಸ ದನಿಗಳನ್ನೂ ಈ ಸಂಘ ನಮಗೆ ಕೇಳಿಸುತ್ತಲೇ ಬಂದಿದೆ. ಬೇಂದ್ರೆಯ ಬಗ್ಗೆ ಸದ್ದಿಲ್ಲದೆ ನೀವು ನಡೆಸಿರುವ ಕೆಲಸ ಯಾವತ್ತೂ ಉಳಿಯುವಂಥದು.

ನಾನು ಬೆಂಗಳೂರಲ್ಲಿ ನಡೆಯುವ ಯಾವುದೇ ಸಾಹಿತ್ಯ ಸಮಾರಂಭಕ್ಕೆ ಹೋಗಲಿ ಈ ಸಂಘದ ಪ್ರಕಟಣೆಗಳ ಪ್ರದರ್ಶನವನ್ನು ಕಾಣದೆ ಇದ್ದ ಪ್ರಸಂಗವೇ ಇಲ್ಲವೇನೋ? 'ಅಂಕಣ' ಪತ್ರಿಕೆ ಜೊತೆ ತಮ್ಮ ಸಂಘದ ಪ್ರಕಟಣೆಗಳು ಹಾಗೂ ಬೇರೆ ಅಪರೂಪದ ಪುಸ್ತಕಗಳ ಪ್ರದರ್ಶನದ ನಡುವೆ ಸದಾ ಉತ್ಸಾಹದ ಚಿಲುಮೆಯಾಗಿ ಚಿ. ಶ್ರೀನಿವಾಸರಾಜು ಇದ್ದೇ ಇರುತ್ತಿದ್ದರು. ಕರ್ನಾಟಕದ ಪ್ರತಿ ಕಾಲೇಜಿನ ಕನ್ನಡ ಸಂಘದಲ್ಲೂ ಒಬ್ಬೊಬ್ಬ ಶ್ರೀನಿವಾಸ ರಾಜು ಇದ್ದೇ ಬಿಟ್ಟಿದ್ದರೆ? ಕರ್ನಾಟಕದ ಪ್ರಕಟನಾಲೋಕ ಇನ್ನಷ್ಟು ಶ್ರೀಮಂತ ವಾಗುತ್ತಿತ್ತು. ಹಾಗೇ ಓದುಗರ ಬಳಗ ಕೂಡ ಅದ್ಭುತವಾಗಿ ಬೆಳೆದು ಯಾವ ಪ್ರಕಾಶಕನೂ ಸರ್ಕಾರದ ಸಗಟು ಖರೀದಿಯ ರಾಡಿಯಲ್ಲಿ ತಮ್ಮ ಕೈಯನ್ನು ಗಲೀಜು ಮಾಡಿಕೊಳ್ಳಬೇಕಾದ ಅಗತ್ಯ ಇರುತ್ತಿರಲಿಲ್ಲ.

ಉತ್ತಮವಾದುದನ್ನೇ ಹೊರತರಬೇಕೆನ್ನುವ ಈ ಸಂಘದ ನಿಲುವು ಕನ್ನಡ ಜನಮನದಲ್ಲಿ ಉತ್ತಮೋತ್ತಮವಾದ ಅಭಿರುಚಿಯನ್ನು ಬೆಳೆಸಲು ಸಾಕಷ್ಟು ಸಫಲಗೊಂಡಿದೆ. ಇದು ಹೀಗೇ ಮುಂದೆಯೂ ವಿಶಿಷ್ಟವಾದುದನ್ನೇ ಕೈಗೊಳ್ಳುತ್ತದೆ ಅನ್ನುವುದಕ್ಕೆ ಸಾಕ್ಷಿ : ಪ್ರಕಟವಾಗಲಿರುವ ಎ.ಎನ್. ಮೂರ್ತಿ ರಾಯರ ಪ್ರಬಂಧಗಳ ಸಮಗ್ರ ಸಂಪುಟ. ಇಂಥ ದೊಡ್ಡ ಸಾಹಸವನ್ನು ಮಾಡುತ್ತಿರುವ ಈ ಕನ್ನಡ ಸಂಘ ಇನ್ನೂ ಇನ್ನೂ ಉತ್ಕೃಷ್ಟ ಕೃತಿಗಳನ್ನು ಹೊರತರಲೆಂದು ಹಾರೈಸುತ್ತೇನೆ.



*(ಕ್ರೈಸ್ಟ್ ಕಾಲೇಜು 'ಆನಂದ' ಸದಾಶಯ ಸಂಚಿಕೆ)*



## ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಪ್ರಕಟಣೆಗಳ ವೈಶಿಷ್ಟ್ಯ

● *ಮೋಹನ ಕುಂಟಾರ್*

೨೦ನೇ ಶತಮಾನದ ಕೊನೆಯ ಮೂರು ದಶಕಗಳಲ್ಲಿ ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘವು ಸಾಹಿತ್ಯಪ್ರಿಯರ ಮನೆಮಾತಾಗಿತ್ತು. ಇದಕ್ಕೆ ಮುಖ್ಯ ಕಾರಣ ಕನ್ನಡ ಸಂಘವು ಹಮ್ಮಿಕೊಂಡ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳು. ಅವುಗಳಲ್ಲೂ ಮುಖ್ಯವಾಗಿ ಕನ್ನಡ ಸಂಘದ ಪುಸ್ತಕ ಪ್ರಕಟಣೆ ಕೈಂಕರ್ಯ ಕನ್ನಡ ನಾಡಿನಲ್ಲಿಯೇ ಒಂದು ಅದ್ವಿತೀಯ ಸಾಧನೆ. ಇದರ ಬೆನ್ನೆಲುಬಾಗಿದ್ದ ಜಿ. ಶ್ರೀನಿವಾಸ ರಾಜು ಅವರ ಹೆಸರು ಜೊತೆ ಜೊತೆಗೆ ನೆನಪಿಸಿಕೊಳ್ಳಬೇಕಾದುದೇ ಹೌದು. ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘ ಬೇರೆಯಲ್ಲ, ಜಿ. ಶ್ರೀನಿವಾಸ ರಾಜು ಬೇರೆಯಲ್ಲ. ಒಂದಕ್ಕೊಂದು ಅವಿನಾದ್ವೈತ ಸಂಬಂಧ. ಕನ್ನಡ ಸಂಘದ ಪ್ರಕಟಣೆಗಳ ಮೂಲಕವೇ ಜಿ. ಶ್ರೀನಿವಾಸರಾಜು ಚಿರಂಜೀವಿ ಶ್ರೀನಿವಾಸರಾಜು ಆಗಿ ಕನ್ನಡದ ಭಾಗವಾಗಿದ್ದಾರೆ.

ಅನಕೃ ಅವರ ಕನ್ನಡ ಹೋರಾಟದ ಜೊತೆಗೆ ಗುರುತಿಸಿ ಕೊಂಡವರು, ಶ್ರೀನಿವಾಸರಾಜು ಅವರು. ಕನ್ನಡ ಸಾಹಿತ್ಯ ಸಂಘಟನೆಯ ಕಾರ್ಯದರ್ಶಿಯಾಗಿ ದುಡಿದ ಶ್ರೀನಿವಾಸರಾಜು ಅವರು ಅನಕೃ ಅವರ ಸಾಹಿತ್ಯ ಸಂಘಟನೆಗಳ ಸ್ವಭಾವವನ್ನು, ಸ್ವರೂಪವನ್ನು ಸಮೀಪದಿಂದ ಬಲ್ಲವರು. ಅನಕೃ ನಿಧನರಾದಾಗ ಅವರ ಸವಿನೆನಪಿನಲ್ಲಿ (೧೯೭೩) ತಾನು ಸೇವೆಸಲ್ಲಿಸುತ್ತಿದ್ದ ಕಾಲೇಜಿನಲ್ಲಿ ಕನ್ನಡ ಸಂಘ ಸ್ಥಾಪಿಸಿ ಅದರ ಮೂಲಕ ಕರ್ನಾಟಕದ ಕಾಲೇಜು ವಿದ್ಯಾರ್ಥಿಗಳಿಗಾಗಿ ಅನಕೃ ಕುರಿತ ಲೇಖನ ಸ್ಪರ್ಧೆಗಳನ್ನು ಏರ್ಪಡಿಸಿ ಬಹುಮಾನಿತ ಲೇಖನ ಪ್ರಕಟಿಸಿ ವಿಜೇತ ಲೇಖಕರಿಗೆ ಪುಸ್ತಕ ರೂಪದಲ್ಲಿ ಬಹುಮಾನಗಳನ್ನು ನೀಡಿ ಪ್ರೋತ್ಸಾಹಿಸಿದರು.



೧೯೭೩ ಡಿಸೆಂಬರ್ ೧೨ರಂದು ಆರಂಭವಾದ ಕನ್ನಡ

ಸಂಘವು ನಾಡಿನ ವಿದ್ಯಾರ್ಥಿಗಳಿಗಾಗಿ ಅ.ನ.ಕೃ. ಸ್ಮಾರಕ ಸ್ಪರ್ಧೆಯನ್ನು ನಡೆಸಿಕೊಂಡು ಬಂದಿದೆ. ಆರಂಭದ ಒಂದೆರಡು ವರ್ಷಗಳು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಮಾತ್ರ ಸೀಮಿತವಾಗಿದ್ದ ಸ್ಪರ್ಧೆ ನಂತರದಲ್ಲಿ ಅಖಿಲ ಕರ್ನಾಟಕ ಮಟ್ಟದ ಸ್ಪರ್ಧೆಯಾಯಿತು. ದ.ರಾ. ಬೇಂದ್ರೆಯವರು ನಿಧನರಾದ ವರ್ಷದಿಂದ (೧೯೮೧) ಕನ್ನಡ ಸಂಘವು ವಿದ್ಯಾರ್ಥಿಗಳಿಗೆ ಬೇಂದ್ರೆ ಸ್ಮೃತಿ ಕವನ ಸ್ಪರ್ಧೆಯನ್ನು ಏರ್ಪಡಿಸಿಕೊಂಡು ಬಂದಿದೆ. ಇದು ಆರಂಭಗೊಂಡ ಮೊದಲ ವರ್ಷದಿಂದಲೇ ಅಖಿಲ ಕರ್ನಾಟಕ ಮಟ್ಟದ ಸ್ಪರ್ಧೆಯಾಗಿತ್ತು. ಹೊರನಾಡಿನ ವಿದ್ಯಾರ್ಥಿಗಳು ಈ ಸ್ಪರ್ಧೆಗಳಲ್ಲಿ ಭಾಗವಹಿಸಿದ್ದಾರೆ. ಈ ಎರಡೂ ಸ್ಪರ್ಧೆಗಳ ಮೂಲಕ ಅನೇಕ ಬರಹಗಾರರನ್ನು ಬೆಳಕಿಗೆ ತಂದಿದೆ.

'ಕನ್ನಡ ಸಂಘ'ವು ಪುಸ್ತಕಗಳ ಮೊದಲ ಮಾಲೆಯಾಗಿ ೧೯೭೩ರಲ್ಲಿ ಸಿ.ಕೆ. ಲಕ್ಷ್ಮಣಗೌಡ ಸ್ಮಾರಕ ಗ್ರಂಥಮಾಲೆಯನ್ನು ಆರಂಭಿಸಿತು. ಕಾಲೇಜಿನ ವಿದ್ಯಾರ್ಥಿಯಾದ ಸಿ.ಕೆ. ಲಕ್ಷ್ಮಣಗೌಡ ಆಕಸ್ಮಿಕವಾಗಿ ನಿಧನರಾದಾಗ ಆತನ ತಾಯಿ ಶ್ರೀಮತಿ ರುಕ್ಮಿಣಮ್ಮ ಅವರು ಮಗನ ನೆನಪಿಗಾಗಿ ಐದು ನೂರು ರೂಪಾಯಿಗಳನ್ನು ನೀಡಿದರು. ಇದುವೇ ಕನ್ನಡ ಸಂಘದ ಪ್ರಕಟಣೆಯ ಮೊದಲ ಬಂಡವಾಳ. ಇದರೊಡನೆ ಮುಂಗಡ ಕೂಪನ್ ಮಾರಾಟದಿಂದ ಪ್ರೊ. ಕ.ವೆಂ. ರಾಜಗೋಪಾಲ ಅವರ ಕವನ ಸಂಕಲನ 'ನದಿಯ ಮೇಲಿನ ಗಾಳಿ'ಯನ್ನು ಮೊದಲ ಪುಸ್ತಕವಾಗಿ ಪ್ರಕಟಿಸಿತು. ನಂತರ 'ಕ್ರಿಸ್ತಾಂಜಲಿ' ಎಂಬ ಕವನ ಸಂಕಲವನ್ನು ಸಂಘವು ಪ್ರಕಟಿಸಿತು. 'ಕ್ರಿಸ್ತಾಂಜಲಿ'ಯು ಮೂಲಭೂತವಾದಿಗಳ ಕಾರಣದಿಂದ ಕ್ರಿಶ್ಚಿಯನ್ ಆಡಳಿತದ ಕಾಲೇಜಿನಲ್ಲಿ ನಿಷೇಧಕ್ಕೆ ಒಳಗಾಯಿತು ಎನ್ನುವುದು ಖೇದದ ಸಂಗತಿ. ಇದರಿಂದ ಪ್ರಕಾಶಕರ ಉತ್ಸಾಹಕ್ಕೂ ತಣ್ಣೀರು ಎರಚಿದಂತಾಗಿರಬಹುದು. ಪರಿಣಾಮವಾಗಿ ಆರ್ಥಿಕವಾಗಿಯೂ ಸಂಘ ನಷ್ಟವನ್ನು ಅನುಭವಿಸಬೇಕಾಯಿತು. ಈ ಪ್ರಕಟಣೆಯಿಂದಾದ ಆರ್ಥಿಕ ನಷ್ಟವನ್ನು ತುಂಬಲು ಕಾಲೇಜಿನ ಸ್ಥಾಪಕ ಪ್ರಿನ್ಸಿಪಾಲರಾದ ರೆ. ಫಾ ಮಾಣಿಜ್ಯೆಲ್ಸ್ ಐದುನೂರು ರೂಪಾಯಿಗಳನ್ನು ನೀಡಿ ಪ್ರಕಟಣೆಯ ಕೆಲಸ ಮುಂದುವರಿಯುವಂತೆ ಪ್ರೋತ್ಸಾಹಿಸಿದರು. ೧೯೭೮ರಲ್ಲಿ ಬೆಂಗಳೂರು ಫೋರಂ ಬುಕ್ ಹೌಸ್ ಗ್ರಂಥಮಾಲೆಯನ್ನು ಆರಂಭಿಸಲಾಯಿತು. ಜಿ.ಪಿ. ರಾಜರತ್ನಂ ಅವರು ದೆಹಲಿಯಲ್ಲಿ ನಡೆದ ಅಖಿಲ ಭಾರತ ಐವತ್ತನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದಾಗ 'ರತ್ನನ ಪದ'ಗಳು ಕವನ ಸಂಕಲನದ ಪ್ರಾಯೋಗಿಕ ವಿಮರ್ಶೆಯ ಪುಸ್ತಕವನ್ನು ಪ್ರಕಟಿಸಲಾಯಿತು. ಈ ಪ್ರಕಟಣೆಗೆ ಉದಾರವಾಗಿ ಆರ್ಥಿಕ ನೆರವು ನೀಡಿದ ಶ್ರೀಮತಿ ಮತ್ತು ಶ್ರೀ ಹನುಮಂತರಾಜು ಅವರ ಸೂಚನೆಯಂತೆ ಅವರ ಪುಸ್ತಕದ ಅಂಗಡಿಯ ಹೆಸರಿನಲ್ಲಿಯೇ ಮಾಲೆಯನ್ನು ಆರಂಭಿಸಲಾಯಿತು. ಈ ಮಾಲೆಯು ವಿಮರ್ಶಾ ಬರಹಗಳ ಪ್ರಕಟಣೆಗಾಗಿಯೇ ಮೀಸಲಾಗಿತ್ತು. ೧೯೮೮ರ ಬಹುಮಾನಿತ ಲೇಖನಗಳನ್ನು ಪ್ರಕಟಿಸುವ ಮತ್ತು ಆ ವರ್ಷದ ಬಹುಮಾನಗಳನ್ನು ನೀಡಲು ಶ್ರೀ ಪಿ.ಎನ್.ಎಸ್. ಮೂರ್ತಿಯವರು ತಮ್ಮ ತಾಯಿ ತಂದೆಯರಾದ ಶ್ರೀಮತಿ ಲಕ್ಷ್ಮೀದೇವಮ್ಮ ಮತ್ತು ಶ್ರೀ ಪಿ. ನರಸಪ್ಪನವರ ಹೆಸರಿನಲ್ಲಿ ಐದು ಸಾವಿರ ರೂಪಾಯಿಗಳ ಕೊಡುಗೆ ಕೊಟ್ಟರು.

ವಿದ್ಯಾರ್ಥಿಗಳ ಬರವಣಿಗೆಗಳಿಗಾಗಿಯೇ ಎರಡು ಮಾಲೆಗಳನ್ನು ಪ್ರಾರಂಭಿಸಲಾಗಿದೆ. ಡಾ॥ ಅ.ನ.ಕೃ. ಸ್ಮಾರಕ ಲೇಖನ ಸ್ಪರ್ಧೆಯ ಬರಹಗಳನ್ನು ಡಾ॥ ಜಿ.ಪಿ. ರಾಜರತ್ನಂ ವಿದ್ಯಾರ್ಥಿ

ವಿಕಾಸಮಾಲೆ ಎಂದೂ ಡಾ॥ ದ.ರಾ. ಬೇಂದ್ರೆ ಸ್ಮೃತಿ ಕವನ ಸ್ಪರ್ಧೆಯ ಕವನಗಳನ್ನು 'ಗೆಳೆಯರ ಬಳಗ' ವಿದ್ಯಾರ್ಥಿ ವಿಕಾಸಮಾಲೆ ಎಂದೂ ಹೆಸರಿಸಲಾಗಿದೆ. ಡಾ॥ ಜಿ.ಪಿ. ರಾಜರತ್ನಂ ಬೆಂಗಳೂರು ಸೆಂಟ್ರಲ್ ಕಾಲೇಜಿನ 'ಕರ್ನಾಟಕ ಸಂಘ'ದ ಮೂಲಕ ಮಾಡಿದ ಸಾಹಿತ್ಯ ಸೇವೆಯು ಕನ್ನಡ ಸಂಘಕ್ಕೆ ಮಾದರಿಯಾದ ಕಾರಣ ಅವರ ಹೆಸರನ್ನು ಈ ಮಾಲೆಗೆ ಇರಿಸಲಾಗಿದೆ. ಸಂಘದ ಸಂಪರ್ಕಕ್ಕೆ ಬಂದ ವಿದ್ಯಾರ್ಥಿಗಳೆಲ್ಲ ಒಂದು ಬಳಗ ಎಂಬ ಆಶಯ ದಿಂದ ಉತ್ತರ ಕರ್ನಾಟಕದ ನವೋದಯ ಸಾಹಿತ್ಯದ ಉತ್ಕರ್ಷಕ್ಕೆ ಕಾರಣವಾದ 'ಗೆಳೆಯರ ಬಳಗ'ದ ಹೆಸರನ್ನೂ ಇನ್ನೊಂದು ಮಾಲೆಗೆ ಇಡಲಾಗಿದೆ. ೧೯೯೧ರಲ್ಲಿ ಚಿತ್ತೂರಿನ ನ್ಯೂಟ್ರಿನ್ ಕನ್‌ಟೆಕ್ಷನರೀಸ್ ಅವರು ನೀಡಿದ ಹತ್ತು ಸಾವಿರ ರೂಪಾಯಿಗಳ ಕೊಡುಗೆಯಿಂದ ಜ್ಞಾನಪೀಠ ಪ್ರಶಸ್ತಿ ವಿಜೇತರ ಮಾಲೆಯನ್ನು ಆರಂಭಿಸಲಾಯಿತು. ಜೊತೆಗೆ ಶ್ರೀಮತಿ ಸುಧಾ ಆರ್.ರಾವ್ ಮತ್ತು ಡಾ. ಎ.ಎಚ್.ರಾಮದಾಸ್ ಗ್ರಂಥಮಾಲೆಯನ್ನು ಆರಂಭಿಸಲಾಗಿದೆ. ಈ ಮಾಲೆಯನ್ನು ಜ್ಞಾನಸಾಹಿತ್ಯದ ಬರಹಗಳಿಗೆ ಮಾತ್ರ ಮೀಸಲಿರಿಸಲಾಗಿದೆ. ಸ್ಪಂದನ ಹೆಸರಿನಲ್ಲಿ ಜನಪ್ರಿಯ ಮಾಲೆಯೊಂದನ್ನು ಪ್ರಾರಂಭಿಸಲಾಗಿತ್ತು. ಆರ್ಥಿಕ ತೊಂದರೆಯ ಕಾರಣ ಈ ಮಾಲೆಯು ಮುಂದುವರಿಯಲಿಲ್ಲ. ಹಿರಿಯ ಲೇಖಕರ ಪುಸ್ತಕಗಳಿಂದ ಬಂದ ಹಣವನ್ನು ವಿದ್ಯಾರ್ಥಿಗಳ ಪುಸ್ತಕಗಳ ಪ್ರಕಟಣೆಗೆ ಬಳಸಿಕೊಳ್ಳುವುದು ಹಾಗೂ ಸಂಘದ ಅಭಿಮಾನಿಗಳು ಉದಾರವಾಗಿ ನೀಡಿದ ಹಣದ ನೆರವಿನಿಂದ ಸಂಘವು ಪ್ರಕಟಣೆಯ ಕೆಲಸವನ್ನು ನಿರ್ವಹಿಸುತ್ತಾ ಬಂದಿದೆ.

ಲೇಖನ ಹಾಗೂ ಕವನ ಸ್ಪರ್ಧೆಗಳ ಮೂಲಕ ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘವು ಕರ್ನಾಟಕದ ಹಾಗೂ ಹೊರನಾಡ ಕನ್ನಡ ಕಾಲೇಜು ವಿದ್ಯಾರ್ಥಿಗಳ ಪ್ರೀತಿಯ ಸಂಸ್ಥೆಯಾಯಿತು. ವಿದ್ಯಾರ್ಥಿಗಳ ಬರವಣಿಗೆಗಾಗಿ ಉತ್ತೇಜಿಸುವ ಕನ್ನಡ ಸಂಘದ ಈ ಸಾಧನೆಯ ಮೂಲಕ ಅನೇಕ ಕನ್ನಡ ಬರಹಗಾರರು ಸಾಹಿತ್ಯ ಲೋಕದಲ್ಲಿ ಇಂದಿಗೂ ಗಮನಾರ್ಹರಾಗಿದ್ದಾರೆ. ಕನ್ನಡ ಸಂಘದ ಸ್ಪರ್ಧೆಗಳಿಗಾಗಿ ಲೇಖನ ಬರೆದು ಲೇಖಕರಾದವರು, ಕವನ ಬರೆದು ಕವಿಗಳಾದವರು ಕನ್ನಡ ಸಂಘದ ಸಾಹಿತ್ಯ ಜನಾಂಗದ ಭಾಗವಾಗಿದ್ದಾರೆ. ಕನ್ನಡದ ಗಮನಾರ್ಹ ಬರಹಗಾರರಾದ ಬಿ.ಎಂ. ಅಬ್ದುಲ್ ರಶೀದ್, ಎನ್.ಕೆ. ಹನುಮಂತಯ್ಯ, ಚಿಂತಾಮಣಿ ಕೊಡ್ಲೆಕೆರೆ, ನಟರಾಜ್ ಹುಳಿಯಾರ್, ಜಿ.ಎನ್. ಮೋಹನ್, ವಿಕ್ರಮ ವಿಸಾಜಿ ಹೀಗೆ ಪಟ್ಟಿಯನ್ನು ವಿಸ್ತರಿಬಹುದು.*

ಕೇವಲ ವಿದ್ಯಾರ್ಥಿ ಲೇಖನ ಸ್ಪರ್ಧೆಯಿಂದ ಆರಂಭವಾದ ಪ್ರಕಟಣೆಯ ಕೆಲಸ ನಾಡಿನ ಗಣ್ಯಾತಿಗಣ್ಯರ ಪುಸ್ತಕಗಳನ್ನು ಬೆಳಕಿಗೆ ತರುವುದರ ಮೂಲಕ ಸಾಧನೆಯ ಉತ್ತುಂಗವನ್ನೇರಿತು. ಶ್ರೀರಂಗ, ಮುಗಳಿ, ಮಾಸ್ತಿ, ಅಡಿಗ, ರಾಮಚಂದ್ರಶರ್ಮ ಮೊದಲಾದ ಹಿರಿಯರ ಕೃತಿಗಳು ಸಂಘದ ಪ್ರಕಟಣೆಯಲ್ಲಿ ಸೇರಿವೆ. ಸುಮಾರು ೧೫೦ರಷ್ಟು ವೈವಿಧ್ಯಮಯವಾದ ಪುಸ್ತಕಗಳನ್ನು ಕನ್ನಡ ಸಂಘ ಪ್ರಕಟಿಸಿದೆ. ಹೊಸತಾಗಿ ಬರೆಯ ಹೊರಟವರು ಅವರ ಚೊಚ್ಚಲ ಕೃತಿಗಳಿಂದ

---

* ನಾನೂ ಕ್ರೈಸ್ಟ್ ಕಾಲೇಜಿನ ಸ್ಪರ್ಧೆಗಾಗಿ ಕವನ ಬರೆದು ಕವಿಯಾದೆ. ನನ್ನ ಮೊದಲ ಪ್ರಕಟಣೆಯೂ ಕನ್ನಡ ಸಂಘದ ಮೂಲಕವೇ ಆಯಿತು. 'ಮಿಣಿ ಬೆಳಕು' ಕವನ ಸಂಕಲನದಲ್ಲಿ ಹಾಸಿಗೆ ಎಂಬ ಬಹುಮಾನಿತ ಕವನ ಪ್ರಕಟವಾಗಿವೆ. – ಮೋಹನ್ ಕುಂಟಾರ್

ಹಿಡಿದು ಸಾಹಿತ್ಯ ಕ್ಷೇತ್ರದಲ್ಲಿ ಗಣ್ಯರೆನಿಸಿದವರ ಕೃತಿಗಳನ್ನು ಯಾವುದೇ ತರತಮ ಭಾವವಿಲ್ಲದೆ ಪ್ರಕಟಿಸಿತು. ಹೀಗೆ ಪ್ರಕಟಿಸಿದ ಕೃತಿಗಳಲ್ಲಿ ವೈವಿಧ್ಯಮಯವಾದ ಸಾಹಿತ್ಯವಿದೆ. ಯಾವುದೇ ಏಕತಾನತೆಗೆ ಕಟ್ಟು ಬೀಳದೆ ಸಾಹಿತ್ಯಕ್ಷೇತ್ರದ ಪ್ರಮುಖ ಕತೆ, ಕಾದಂಬರಿ, ಕಾವ್ಯ, ನಾಟಕ, ಅನುವಾದಗಳನ್ನು ಪ್ರಕಟಿಸಿ ಸಾಹಿತ್ಯ ಕ್ಷೇತ್ರದಲ್ಲಿ ಹೊಸ ಮೈಲಿಗಲ್ಲನ್ನೇ ನಿರ್ಮಿಸಿತು.

ಯಾವುದೇ ನಿರ್ದಿಷ್ಟ ಮೊತ್ತದ ಹಣ ಹೂಡಿಕೆಯಿಲ್ಲದೆ ಪುಸ್ತಕ ಪ್ರಕಟಣೆಯಂತಹ ಕೆಲಸಕ್ಕೆ ಕೈಯಿಕ್ಕಿ ಉತ್ತಮ ಪುಸ್ತಕಗಳನ್ನು ಓದುಗರ ಕೈಗೆ ನೀಡಿದ ಕನ್ನಡ ನಾಡಿನ ಏಕೈಕ ಸಂಸ್ಥೆಯಿದು. ಯಾವುದೇ ವ್ಯಾಪಾರ ಮನೋಭಾವವಿಲ್ಲದೆ ಓದುಗರಿಗೆ ಸಾಕಷ್ಟು ಕಡಿಮೆ ದರದಲ್ಲಿ ಪುಸ್ತಕಗಳನ್ನು ಒದಗಿಸುವತ್ತ ಮನಮಾಡಿ ಪುಸ್ತಕ ಮಾರಾಟಮಾಡಿದ ಕನ್ನಡ ಸಂಘ ಸಾಹಿತ್ಯವನ್ನು ಸಾಮಾನ್ಯ ಓದುಗರತ್ತ ಕೊಂಡೊಯ್ಯುವಲ್ಲಿ ಪ್ರಮುಖಪಾತ್ರ ವಹಿಸಿದೆ. ಯಾವುದೇ ವೈಯಕ್ತಿಕ ಹಿತಾಸಕ್ತಿಗಳಿಗೆ ಬಲಿಬೀಳದೆ ಸಾಹಿತ್ಯ ಕ್ಷೇತ್ರದಲ್ಲಿ ಸಮಕಾಲೀನ ಉದ್ಯಮಗಳಿಗೆ ಪ್ರತಿಸ್ಪಂದಿಸಿದ ಸಂಘವಿದು. ಸಾಹಿತ್ಯ ಕ್ಷೇತ್ರದ ಆಗುಹೋಗುಗಳನ್ನು ಸದಾ ಎಚ್ಚರದ ಕಣ್ಣುಗಳ ಕಾವಲಿರಿಸಿ ಸಂಘವು ಅನೇಕ ಚಟುವಟಿಕೆಗಳನ್ನು ಆಯೋಜಿಸಿದೆ. ಕುವೆಂಪು ಅವರ ನಿಧನದಿಂದಾಗಿ ಅವರ ಹೆಸರಿನಲ್ಲಿ ವಿನೂತನ ಕೃತಿ ಮಾಲೆಯನ್ನು ರೂಪಿಸಿ ಸಾಹಿತ್ಯಾಸಕ್ತರ ಗಮನ ಸೆಳೆಯುವಲ್ಲಿ ಯಶಸ್ವಿಯಾಯಿತು. ಸಾಹಿತ್ಯದ ಕಾಳಜಿಗಳಿಗೆ ಅನುಗುಣ ವಾಗಿ ಪ್ರಕಟಣೆಗಳನ್ನು ರೂಪಿಸಿ ಒದಗಿಸುವಲ್ಲಿ ನಿರಂತರವಾಗಿ ಶ್ರಮಿಸಿದ ಪುಸ್ತಕ ಪ್ರಕಾಶನ ಸಂಸ್ಥೆ ನಾಡಿನಲ್ಲಿ ಇನ್ನೊಂದಿಲ್ಲ. ಸಂಸ್ಥೆಯ ಪ್ರತಿಯೊಂದು ಪ್ರಕಟಣೆಯೂ ಸಾಹಿತ್ಯ ಕ್ಷೇತ್ರದಲ್ಲಿ ಗಮನ ಸೆಳೆಯುವ ಪ್ರಮುಖ ಕೃತಿಗಳೆನಿಸಿವೆ. ಈ ನೆಲೆಯಲ್ಲಿ ಕನ್ನಡ ಸಂಘದ ಪ್ರಕಟಣೆಗಳೆಂಬ ಒಂದು ಪ್ರಮಾಣಬದ್ಧ ಗುಣಮಟ್ಟವನ್ನು ಕಾಯ್ದುಕೊಂಡಿದೆ. ಇಲ್ಲಿನ ಅನೇಕ ಪ್ರಕಟಣೆಗಳು ನಾಡಿನ ಪ್ರತಿಷ್ಠಿತ ಸಂಘ, ಸಂಸ್ಥೆಗಳಿಂದ ಬಹುಮಾನ, ಪ್ರಶಸ್ತಿಗಳಿಗೆ ಪಾತ್ರವಾಗಿದೆ.

ಎಚ್.ಎಸ್. ರಾಘವೇಂದ್ರರಾವ್ ಅವರ ವಿಶ್ಲೇಷಣೆ (ವಿಮರ್ಶೆ, ೧೯೮೧), ನಿಲುವು (ವಿಮರ್ಶೆ, ೧೯೮೯), ಎಚ್.ಎಸ್. ಶಿವಪ್ರಕಾಶ್ ಅವರ 'ಮಳೆಬಿದ್ದ ನೆಲದಲ್ಲಿ' (ಕವನಗಳು, ೧೯೮೩) ಬಸವರಾಜ ಕಲ್ಗುಡಿ ಅವರ ವಿಮರ್ಶಾಕೃತಿ 'ನಕ್ಷೆ ನಕ್ಷತ್ರ' (೨೦೦೦) ಮೊದಲಾದ ಕೃತಿಗಳಿಗೆ ಕರ್ನಾಟಕದ ಸಾಹಿತ್ಯ ಅಕಾಡೆಮಿಯ ಪುಸ್ತಕ ಬಹುಮಾನಗಳು ಬಂದಿವೆ. ಅಲ್ಲದೆ ಕೆ. ಸತ್ಯನಾರಾಯಣ ಅವರ 'ನಮ್ಮ ಪ್ರೀತಿಯ ಕ್ರಿಕೆಟ್' (ಲಲಿತ ಪ್ರಬಂಧಗಳು) ಎಂಬ ಕೃತಿಗೆ ವಿ.ಎಂ. ಇನಾಂದಾರ್ ಪ್ರಶಸ್ತಿ ಲಭಿಸಿದೆ. ಹೀಗೆ ಅನೇಕ ಕೃತಿಗಳಿಗೆ ಪ್ರಶಸ್ತಿ ಗೌರವ ಸಂದಿದೆ.

ಕನ್ನಡ ಸಂಘವು ಪುಸ್ತಕ ಪ್ರಕಟಣೆಗಾಗಿ ಕೆಲವೊಂದು ದತ್ತಿನಿಧಿಗಳನ್ನು ಸ್ಥಾಪಿಸಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಕೆಲವೇ ದತ್ತಿನಿಧಿಗಳಲ್ಲಿ ಪ್ರಕಟಣೆಗಾಗಿ ದಾನಿಗಳ ಹಣದ ನೆರವಿನಿಂದಲೇ ಕನ್ನಡ ಸಂಘ ಸಾಧನೆಯ ತುತ್ತತುದಿಗೇರಿದೆ.

ಜಿ.ಪಿ. ರಾಜರತ್ನಂ ಅವರು ಸೆಂಟ್ರಲ್ ಕಾಲೇಜಿನಲ್ಲಿ ಸ್ಥಾಪಿಸಿದ ಕನ್ನಡ ಸಂಘದ ಚಟುವಟಿಕೆಗಳ ಮಾದರಿಯನ್ನು ಚಿ. ಶ್ರೀನಿವಾಸರಾಜು ಅವರು ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಮೂಲಕ ವಿಸ್ತರಿಸಿದರು. ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಕಾರ್ಯ ಚಟುವಟಿಕೆಗಳನ್ನು

ಆದರ್ಶವಾಗಿ ಸ್ವೀಕರಿಸಿದ ಅನೇಕ ಕಾಲೇಜುಗಳಲ್ಲೂ ಕನ್ನಡ ಸಂಘಗಳು ರೂಪು ಪಡೆದುವು. ಕವನ, ಲೇಖನ ಸ್ಪರ್ಧೆಗಳನ್ನು ಏರ್ಪಡಿಸತೊಡಗಿದವು. ಪ್ರಕಟಣೆಯ ಕೆಲಸವನ್ನು ನಿರ್ವಹಿಸಿದವು. ಆದರೆ ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಮೇಲ್ಪಂಕ್ತಿ ಅವುಗಳಿಗೆ ಸಾಧ್ಯವಾಗಲಿಲ್ಲ ಎಂಬುದು ಬೇರೆ ಮಾತು. ಆದರೆ ಕನ್ನಡ ಸಂಘವು ಸಾಹಿತ್ಯಪ್ರಿಯರ ಅಭಿರುಚಿಯನ್ನು ಕೆರಳಿಸುವಲ್ಲಿ ಶಕ್ತವಾಯಿತು ಎಂಬುದನ್ನು ಮರೆಯುವಂತಿಲ್ಲ.

ಶ್ರೀನಿವಾಸರಾಜು ಅವರು ಸರಕಾರೀ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗ ಜಿ.ಪಿ.ರಾಜರತ್ನಂ ಅವರು ಸ್ಥಾಪನೆ ಮಾಡಿದ ಕರ್ನಾಟಕ ಸಂಘದಿಂದ ಸ್ಫೂರ್ತಿ ಪಡೆದು, ಸೆಂಟ್ರಲ್ ಕಾಲೇಜಿನಲ್ಲಿ ಎಂ.ಎ. ವಿದ್ಯಾರ್ಥಿಯಾಗಿದ್ದಾಗ ರಾಜರತ್ನಂ ಅವರ 'ಸಾಹಿತ್ಯ ಪರಿಚಾರಿಕೆ'ಯ ಪ್ರತ್ಯಕ್ಷಾನುಭವ ವನ್ನು ಪಡೆದುಕೊಂಡು ಕ್ರೈಸ್ಟ್ ಕಾಲೇಜಿನಲ್ಲಿ ಕನ್ನಡ ಸಂಘವನ್ನು ಹುಟ್ಟು ಹಾಕಿದರು. ಕನ್ನಡದ ಕೆಲಸಕ್ಕೆ ವಿದ್ಯಾರ್ಥಿಗಳನ್ನು ಆಕರ್ಷಿಸಿ, ಯೋಜನಾಬದ್ಧವಾಗಿ ಒಂದೇ ಸಮನೆ ಎಡೆಬಿಡದೆ ಉಪನ್ಯಾಸ ಮತ್ತು ಪ್ರಕಟಣೆಯ ಕಾರ್ಯದಲ್ಲಿ ಸಂಘವು ನಿರಂತರವಾಗಿ ವಿದ್ಯಾರ್ಥಿಗಳ ಬರವಣಿಗೆಗೂ ಯುವ ಬರಹಗಾರರಿಗೂ ಆದ್ಯ ಗಮನ ಕೊಟ್ಟಿರುವುದು ಪ್ರಶಂಸನೀಯ. ಇದರಿಂದ ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘವು ಆರಂಭ ಮಾಡಿದ ವಿದ್ಯಾರ್ಥಿ ವಿಕಾಸ ಕಾರ್ಯಕ್ರಮದ ಪರಂಪರೆಯನ್ನು ಯಶಸ್ವಿಯಾಗಿ ಮುಂದುವರಿಸಿಕೊಂಡು ಬಂದಂತಾಗಿದೆ. 'ವಿದ್ಯಾರ್ಥಿ ವಿಕಾಸ ಮಾಲೆ' ಯ ಪ್ರಕಟಣೆಗಳು ಈ ಯೋಜನೆಯ ಸತ್ಫಲ ಗಳಾಗಿವೆ.

ಈ ಮಾಲೆಯ ಜೊತೆ ಜೊತೆಗೆ ಪ್ರಕಟವಾಗುತ್ತಿರುವ ವಿದ್ಯಾರ್ಥಿ ಬರಹಗಾರರ ಕೃತಿಗಳು ಇಂದಿನ ಮುಂದಿನ ಎಲ್ಲಾ ವಿದ್ಯಾರ್ಥಿಗಳಿಗೆ ಸಾಹಿತ್ಯ ಪ್ರಕಾರಗಳ ಉತ್ತಮ ಮಾದರಿಗಳಾಗಿವೆ.

ಶೈಕ್ಷಣಿಕ ಸಂಸ್ಥೆಗಳು ಪಠ್ಯೇತರ ಚಟುವಟಿಕೆಗಳನ್ನು ನಡೆಸುವುದು ಮಹತ್ವದ್ದೇನಲ್ಲ. ಆದರೆ ವಿದ್ಯಾರ್ಥಿಗಳ ಸಾಹಿತ್ಯಾಭಿರುಚಿಯನ್ನು ಪೋಷಿಸುವ, ಸೃಜನಶೀಲತೆಯನ್ನು ಗುರುತಿಸುವ ಚಟುವಟಿಕೆಗಳಲ್ಲಿ ತೊಡಗುವುದು ವಿರಳ. ಕನ್ನಡ ಸಂಘವು ತನ್ನ ಸಾಹಿತ್ಯ ಚಟುವಟಿಕೆಗಳಿಂದ ಗ್ರಂಥ ಪ್ರಕಟಣೆಯ ಕಾರ್ಯಕ್ರಮಗಳಿಂದ ಕಾಲೇಜಿನ ಆವರಣದಲ್ಲಿ ನಿರ್ಮಿಸಿಕೊಂಡಿರುವ ಸಾಂಸ್ಕೃತಿಕ ವಾತಾವರಣವು ಇಂದಿನ ಸಾಮಾಜಿಕ ಸಂದರ್ಭದಲ್ಲಂತೂ ತುಂಬಾ ಆರೋಗ್ಯಕರ ಬೆಳವಣಿಗೆ. ಕಾಲೇಜಿನ ವಾತಾವರಣದಲ್ಲಿ ಸೃಜನಶೀಲ ಪ್ರಕ್ರಿಯೆಗಳನ್ನು ಬೆಳೆಸುವ ಸಾಹಿತ್ಯದ ಮೂಲಕ ತಿಳುವಳಿಕೆಯನ್ನು ಹರಡಲು ಮಾಡುತ್ತಿರುವ ಕೆಲಸ ಅತ್ಯಂತ ಪ್ರಶಂಸನೀಯ. ಸಂಘದ ಪ್ರಕಟಣೆಗಳು ಗುಣಮಟ್ಟದಿಂದ ಗಮನಾರ್ಹ ಗ್ರಂಥಗಳೆನಿಸಿವೆ. ಕೆಲವೊಂದು ಆಕರ ಗ್ರಂಥಗಳೆನಿಸುವಷ್ಟು ಯೋಗ್ಯತೆಯನ್ನು ಗಳಿಸಿವೆ. ಕನ್ನಡ ಸಂಘವು ಕ್ರೈಸ್ಟ್ ಕಾಲೇಜನ್ನು ಒಂದು ವೇದಿಕೆಯಾಗಿಸಿ ಕರ್ನಾಟಕದ ಮೂಲ ಪ್ರತಿಭೆಗಳನ್ನು ತನ್ನ ವ್ಯಾಪ್ತಿಗೆ ತಂದುಕೊಂಡಿದೆ.

ಇಂದಿನ ಕನ್ನಡ ಕಾವ್ಯ, ಸಾಹಿತ್ಯ ಹಾಗೂ ವಿಮರ್ಶಾ ಪ್ರಪಂಚದಲ್ಲಿ ಹೆಸರುಗಳಿಸಿದ ಬರಹಗಾರರೆಲ್ಲ ಈ ಸಂಘದ ದೀಪೋತ್ಸವದಲ್ಲಿ ತಮ್ಮ ಒಂದೊಂದು ದೀಪವನ್ನು ಬೆಳಗಿಸಿದ್ದಾರೆ. ವಿದ್ಯಾರ್ಥಿ ವಿಕಾಸ ಕೃತಿಗಳು ಇಂಥ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸಿ ಅವರ ಕೃತಿಗಳನ್ನು ಪ್ರಕಟಿಸಿ, ಈ ಕಾಲೇಜು, ಕರ್ನಾಟಕದಲ್ಲೇ, ಒಂದು ಮಾದರಿಯನ್ನು ಹಾಕಿ ಕೊಟ್ಟಿದೆ.

ಸೃಜನ ಸಾಹಿತ್ಯ, ವಿಜ್ಞಾನ ಸಾಹಿತ್ಯ, ಅನುವಾದ ಎಲ್ಲಕ್ಕೂ ಸಂಘದ ನೆರವು ಸಿಕ್ಕಿದೆ. ಎಂದೋ ಕನ್ನಡದಲ್ಲಿ ಬರಬೇಕಾದ ಥಾಮಸ್ ಎ. ಕೆಂಪಿಸನ 'ಇಮಿಟೇಷನ್ ಆಫ್ ಕ್ರೈಸ್ಟ್' ತಂದು ಕೊಟ್ಟದ್ದು ಈ ಸಂಘದ ದೊಡ್ಡ ಸಾಧನೆ. ಈ ಸಂಘವು ಬೇಂದ್ರೆ, ಶ್ರೀರಂಗ ಇಂಥವರ ಕೃತಿ ಸಮೀಕ್ಷೆಗಳನ್ನು ಕಾಲಕಾಲಕ್ಕೆ ಮಾಡುತ್ತಾ ಬಂದಿದೆ.

ಸಂಘವು ಪ್ರಕಟಿಸಿದ ಅನೇಕರ ಮೊದಲ ಕೃತಿಗಳೂ ಆ ಲೇಖಕರನ್ನು ಸಾಹಿತ್ಯ ಪ್ರಪಂಚದಲ್ಲಿ ಬೆಳಕಿಗೆ ತಂದಿದೆ. ಎಚ್.ಎಸ್. ಶಿವಪ್ರಕಾಶ್, ಪ್ರತಿಭಾ ನಂದಕುಮಾರ್ ಮುಂತಾದವರ ಕೃತಿಗಳು ಈ ಸಾಲಿನಲ್ಲಿ ಬರುತ್ತವೆ.

ಕನ್ನಡ ಸಂಘದ ಪ್ರಕಟಣೆಗಳಲ್ಲಿ ವಿಷಯ ವೈವಿಧ್ಯವಿದೆ. ಬರಹಗಾರರಾಗಿ ರೂಪುಗೊಳ್ಳುತ್ತಿರುವ ಎಳೆಯರಿಂದ ಪ್ರಬುದ್ಧ ಸಾಹಿತಿಗಳವರೆಗಿನ ಎಲ್ಲಾ ಕಿರಿಯ ಲೇಖಕರ ಕೃತಿಗಳನ್ನು ಕನ್ನಡ ಸಂಘ ಪ್ರಕಟಿಸಿದೆ. ವ್ಯಾವಹಾರಿಕ ದೃಷ್ಟಿಯಿಂದ ಪುಸ್ತಕಗಳನ್ನು ನೋಡದೆ ಪ್ರತಿಭೆ ಹಾಗೂ ಸಾಹಿತ್ಯದ ಮೌಲ್ಯಗಳನ್ನು ಮುಖ್ಯವಾಗಿ ಪರಿಭಾವಿಸಿದ್ದು ಇಲ್ಲಿನ ಪ್ರಕಟಣೆಗಳನ್ನು ನೋಡಿದರೆ ತಿಳಿಯುತ್ತದೆ. ನಾಡಿನ ಯುವ ಪ್ರತಿಭಾವಂತರನ್ನು ಲೇಖಕರಾಗಿ ಬೆಳೆಸುವಲ್ಲಿ ಸಂಘದ ಚಟುವಟಿಕೆ ಮಹತ್ವದ್ದೆನಿಸಿದೆ. ಕೇವಲ ಪ್ರಕಟಣೆಯೊಂದೇ ಮುಖ್ಯ ಗುರಿಯಾಗಿರಿಸದೇ ಸಾಹಿತ್ಯ ಚಟುವಟಿಕೆಗಳನ್ನು, ಸ್ಪರ್ಧೆಗಳನ್ನು ನಡೆಸುವುದರ ಮೂಲಕ ಸಂಘವು ಬರೆಯುವವರನ್ನು ಆಕರ್ಷಿಸುತ್ತಿತ್ತು. ಹಾಗೆ ದುಡಿದವರನ್ನು ಅದರಲ್ಲೂ ನಾಡಿನ ಕನ್ನಡ ವಿದ್ಯಾರ್ಥಿ ಸಮುದಾಯದಲ್ಲಿ ಬರೆಯುವ ಅಭಿರುಚಿಯನ್ನು ಕೆರಳಿಸುತ್ತಿತ್ತು.

ಸಂಘದ ಪುಸ್ತಕ ಬಿಡುಗಡೆ, ಸ್ಪರ್ಧೆಗಳ ಬಹುಮಾನ ವಿತರಣೆ ಕಾರ್ಯಕ್ರಮಗಳನ್ನು ನಾಡಿನ ಹಿರಿಯ ಲೇಖಕರ ಮನೆಗಳಿಗೆ ತೆರಳಿ ಏರ್ಪಡಿಸಿದೆ. ಕುವೆಂಪು, ಮಾಸ್ತಿ, ಕಾರಂತ, ಅಡಿಗ ಮುಂತಾದ ಹಿರಿಯರ ಮನೆಗಳಲ್ಲಿ ನಡೆದ ಇಂತಹ ಕಾರ್ಯಕ್ರಮಗಳಲ್ಲಿ ಎಳೆಯರು ಹಿರಿಯರ ಭೇಟಿಯ ಸೌಭಾಗ್ಯವನ್ನು ಪಡೆಯಲು ಸಂಘವು ಅವಕಾಶ ಕಲ್ಪಿಸಿದೆ. ಬೇಂದ್ರೆಯವರ ಸ್ಮೃತಿ ಕವನ ಸ್ಪರ್ಧೆಗಳ ಬಹುಮಾನ ವಿತರಣೆ ಕಾರ್ಯಕ್ರಮವನ್ನು ಧಾರವಾಡದಲ್ಲಿ ಬೇಂದ್ರೆಯವರ ಮನೆ ಶ್ರೀಮಾತಾದಲ್ಲಿ ನಡೆಸಿದ ಸಾಧನೆಯು ಸಂಘಕ್ಕಿದೆ.

ಮಾಸ್ತಿವೆಂಕಟೇಶ ಅಯ್ಯಂಗಾರ್, ಜಿ.ಪಿ. ರಾಜರತ್ನಂ, ಪು.ತಿ.ನರಸಿಂಹಾಚಾರ್, ಎ.ಎನ್. ಮೂರ್ತಿರಾವ್, ಎಂ. ಗೋಪಾಲಕೃಷ್ಣ ಅಡಿಗ, ಬಿ.ಜಿ.ಎಲ್. ಸ್ವಾಮಿ, ವಿ. ಸೀತಾರಾಮಯ್ಯ, ಎಂ.ವಿ. ಸೀತಾರಾಮಯ್ಯ, ರಂ.ಶ್ರೀ. ಮುಗಳಿ, ವಿ.ಕೃ.ಗೋಕಾಕ್, ಜಿ. ವೆಂಕಟಸುಬ್ಬಯ್ಯ, ಕುವೆಂಪು, ಶ್ರೀರಂಗರಂತಹ ಹಿರಿಯ ಲೇಖಕರು ಸಂಘದ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದಾರೆನ್ನುವುದು ಗಮನಾರ್ಹ ಸಂಗತಿ.

ಅ.ನ.ಕೃ. ಸ್ಮಾರಕ ಅಂತರ ಕಾಲೇಜು ಲೇಖನ ಸ್ಪರ್ಧೆಯನ್ನು ೧೯೭೩ರಿಂದ ನಡೆಸಿಕೊಂಡು ಬಂದಿದೆ. ಲೇಖನ ಸ್ಪರ್ಧೆಗಳಿಗೆ ಸಮಕಾಲೀನ ಭಾರತೀಯ ಸಮಾಜಕ್ಕೆ ಬೇಕಾದ ಸಾಹಿತ್ಯ, ಮದುವೆ ಒಂದು ಮನಃಶಾಸ್ತ್ರೀಯ ಅಧ್ಯಯನ, ಜನತಾ ಪಕ್ಷದ ವಿಜಯ-ಒಂದು ವಿಶ್ಲೇಷಣೆ, ಹಾವನೂರು ವರದಿ ಒಂದು ಪ್ರತಿಕ್ರಿಯೆ, ಮತಾಂತರ ಒಂದು ವಿಶ್ಲೇಷಣೆ, ಕರ್ನಾಟಕ ಏಕೀಕರಣ ಸಫಲವೆ? ವಿಫಲವೇ?, ಜಾತ್ಯಾತೀತ ರಾಷ್ಟ್ರದಲ್ಲಿ ಧರ್ಮದ ಸ್ಥಾನಮಾನ, ಕರ್ನಾಟಕದ

ಜನತಾ ಪಕ್ಷ ಒಂದು ಮೌಲ್ಯಮಾಪನ ಮೊದಲಾದ ಸಮಕಾಲೀನ ರಾಜಕೀಯ, ಸಾಮಾಜಿಕ ವಿಷಯಗಳಲ್ಲಿ ಲೇಖನಸ್ಪರ್ಧೆ ಏರ್ಪಡಿಸಿ ಯುವ ಬರಹಗಾರರನ್ನು ಚಿಂತನೆಗೆ ಹಚ್ಚಿದೆ. ಇವುಗಳಲ್ಲದೆ ಸಾಹಿತಿಗಳ, ಸಾಹಿತ್ಯ ಕೃತಿಗಳ ಹಾಗೂ ವಿಜ್ಞಾನ ವಿಷಯಗಳ ಕುರಿತು ಲೇಖನ ಸ್ಪರ್ಧೆಗಳನ್ನು ನಡೆಸಿದೆ. ಹೀಗೆ ಪ್ರತೀ ವರ್ಷವೂ ಸಾಹಿತ್ಯ, ಸಮಾಜ, ರಾಜಕೀಯ, ವಿಜ್ಞಾನ, ವಿಷಯಗಳನ್ನು : ಆಸಕ್ತಿ, ಸಂಬಂಧಗಳನ್ನು ಬರೆಯುವಂತೆ ಉತ್ತೇಜಿಸುವಲ್ಲಿ ಕನ್ನಡ ಸಂಘದ ಕೊಡುಗೆ ಅಪೂರ್ವವಾಗಿದೆ. ಹೀಗೆ ಬಹುಮಾನಿತ ಲೇಖನಗಳ ಸಂಕಲನಗಳು, ವಿದ್ಯಾರ್ಥಿ ವಿಕಾಸ ಮಾಲೆಗಳು ಸುಮಾರು ಹದಿನೆಂಟು(?) ಸಂಪುಟಗಳು ಪ್ರಕಟವಾಗಿವೆ. ಇವುಗಳಲ್ಲಿ ನಾಡಿನ ಯುವ ಬರಹಗಾರರು ಸಮಕಾಲೀನ ವಿದ್ಯಮಾನಗಳಿಗೆ ತೆರೆದುಕೊಂಡ ಬಗೆಯನ್ನು ಕಾಣಬಹುದಾಗಿದೆ.

೧೯೮೩ರಿಂದ ಈಚೆಗೆ ಡಾ. ದ.ರಾ. ಬೇಂದ್ರೆ ಸ್ಮೃತಿ ಅಂತರ ಕಾಲೇಜು ಕವನ ಸ್ಪರ್ಧೆಯನ್ನು ಏರ್ಪಡಿಸುತ್ತಾ ಬಂದಿದೆ. ಇದರಲ್ಲಿ ಬಹುಮಾನಿತ ಕವನಗಳನ್ನು ಸಂಕಲನ ಮಾಸದಲ್ಲಿ 'ಗೆಳೆಯರ ಗುಂಪು' ವಿದ್ಯಾರ್ಥಿ ವಿಕಾಸಮಾಲೆಯಲ್ಲಿ ಇದುವರೆಗೆ ಸುಮಾರು ಹನ್ನೆರಡು ಕೃತಿಗಳನ್ನು ಪ್ರಕಟಿಸಿದೆ.

ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು ಸಂಪಾದಿಸಿದ ಮೊದಲ ಕೃತಿ 'ಕ್ರಿಸ್ತಾಂಜಲಿ' (೧೯೭೩), ಎಚ್.ಎಸ್. ಶಿವಪ್ರಕಾಶ್ ಅವರ ಮೊದಲ ಕವನ ಸಂಕಲನ 'ಮಿಲರೇಪ' (೧೯೭೭), ಬಿ.ಆರ್. ಲಕ್ಷ್ಣರಾವ್ ಅವರ ಮೊದಲ ಕೃತಿ 'ಟುವಟಾರ' (೧೯೭೭) ಕವನ ಸಂಕಲನ, ಎಚ್.ಎಸ್. ರಾಘವೇಂದ್ರರಾವ್ ಅವರ ವಿಮರ್ಶೆ 'ವಿಶ್ಲೇಷಣೆ' (೧೯೮೧), ಪ್ರತಿಭಾ ನಂದಕುಮಾರ್ ಅವರ ನಾವು ಹುಡುಗಿಯರೇ ಹೀಗೆ (೧೯೮೩) ಮೊದಲ ಕೃತಿಗಳನ್ನು ಪ್ರಕಟಿಸಿದ ಹಿರಿಮೆ ಕನ್ನಡ ಸಂಘದ ಪಾಲಿಗೆ ಬಂದಿದೆ.

ರಂ.ಶ್ರೀ.ಮುಗಳಿಯವರ 'ಬೇಂದ್ರೆ ಕಾವ್ಯ' (೧೯೮೬), ಕೆ.ವಿ. ನಾರಾಯಣ ಅವರ ಸಾಹಿತ್ಯ ತತ್ವ ಬೇಂದ್ರೆ ದೃಷ್ಟಿ(೧೯೮೮), ಕವಿ ಬೇಂದ್ರೆಯವರ ಕಾವ್ಯಶೈಲಿ(೧೯೮೭), ರಾಜೇಂದ್ರ ಚೆನ್ನಿಯವರ ಬೇಂದ್ರೆ ಕಾವ್ಯ ಸಂಪ್ರದಾಯ ಮತ್ತು ಸ್ವಂತಿಕೆ(೧೯೮೮) ಎಚ್.ಎಸ್. ವೆಂಕಟೇಶಮೂರ್ತಿಯವರ ಮೇಘದೂತ, ಕಾಳಿದಾಸ ಮತ್ತು ಬೇಂದ್ರೆ(೧೯೮೮), ಗೋಪಾಲಕೃಷ್ಣ ಅಡಿಗರ ಬೇಂದ್ರೆಯವರ ಕಾವ್ಯ(೧೯೯೧), ಬಸವರಾಜ ಕಲ್ಗುಡಿಯವರ ಬೇಂದ್ರೆ ಕಾವ್ಯದಲ್ಲಿ ಪ್ರೇಮದ ಆವಿಷ್ಕಾರ ಸ್ವರೂಪಗಳು(೧೯೮೬), ವಿಜಯಾದಬ್ಬೆಯವರ ಬೇಂದ್ರೆ ಕಾವ್ಯದಲ್ಲಿ ಅನುಭವದ ಒಂದು ನಿಚ್ಚಣಿಕೆ(೧೯೮೬) ಹೀಗೆ ಬೇಂದ್ರೆಯವರ ಕಾವ್ಯದ ಬಗೆಗೆ ವಿವಿಧ ವಿದ್ವಾಂಸರಿಂದ ವಿಭಿನ್ನ ಉಪನ್ಯಾಸಗಳನ್ನು ಏರ್ಪಡಿಸುವುದಲ್ಲದೆ ಅವರಿಂದ ಗ್ರಂಥಗಳನ್ನು ಬರೆಸಿ ಕನ್ನಡ ಸಂಘವು ಪ್ರಕಟಿಸಿದೆ. ಬೇಂದ್ರೆ ಕಾವ್ಯದ ಕುರಿತ ಈ ವಿಮರ್ಶಾ ಸಾಹಿತ್ಯ, ಅಧ್ಯಯನಾಸಕ್ತರಿಗೆ ಉತ್ತಮ ಆಕರಗಳೇ ಆಗಿವೆ.

ಜ್ಞಾನಪೀಠ ಪ್ರಶಸ್ತಿ ವಿಜೇತರ ಮಾಲೆಯಲ್ಲಿ ಅನೇಕ ಉತ್ತಮ ಕೃತಿಗಳನ್ನು ಸಂಘ ಪ್ರಕಟಿಸಿದೆ. ಅವುಗಳಲ್ಲಿ ಮಲಯಾಳಂನ ತಕಳಿ ಶಿವಶಂಕರಪಿಳ್ಳೆಯವರ ತೋಟಿಯ ಮಗ,

ಒರಿಯಾ ಭಾಷೆಯಿಂದ ಗೋಪಿನಾಥ ಮೊಹಂತಿ ಅವರ ಕೃತಿಯ ಅನುವಾದ (ಅನು: ಎಚ್.ಎಸ್. ರಾಘವೇಂದ್ರರಾವ್) ಇರುವೆ ಮತ್ತು ಇತರ ಕತೆಗಳು, ಹಿಂದಿಯ ಅಜ್ಞೇಯ ಅವರ ನದೀ ದ್ವೀಪಗಳು (ಅನು: ವೀಣಾ ಶಾಂತೇಶ್ವರ) ಮೊದಲಾದವುಗಳು ಗಮನಾರ್ಹ.

ಟಿ.ಎನ್. ಸೀತಾರಾಮ್ ಅವರ ಆಸ್ಫೋಟ(೧೯೮೧), ಶ್ರೀರಂಗರ ಅಗ್ನಿಸಾಕ್ಷಿ(೧೯೮೫) ಮೊದಲಾದ ನಾಟಕಗಳು ಅರವಿಂದ ಮಾಲಗತ್ತಿಯವರು ಸಂಪಾದಿಸಿದ ನಾಲ್ಕು ದಲಿತೀಯ ಕಾದಂಬರಿಗಳು(೧೯೯೧) ವಿವಿಧ ಲೇಖಕರು ಬರೆದ 'ರತ್ನನ ಪದಗಳು' ಕುರಿತು(೧೯೭೯) ಕೀ.ರಂ. ನಾಗರಾಜ ಅವರ ಪ್ರತಿಷ್ಠಿತ ಶಕ್ತಿ ಮತ್ತು ಕನ್ನಡ ಸಾಹಿತ್ಯ(೧೯೭೫), ಪ್ರಶಾಂತ್ ವಲೇರಿಯಸ್ ಮಾಡ್ತ ಅವರು ಅನುವಾದಿಸಿದ ಥಾಮಸ್ ಎ.ಕೆಂಪಿಸ್ ಅವರ ಕ್ರಿಸ್ತನ ಅನುಕರಣೆ(೧೯೭೯) ಮೊದಲಾದ ಕೃತಿಗಳು ಕನ್ನಡ ಸಂಘದ ಪ್ರಕಟಣೆಯ ವೈವಿಧ್ಯಗಳಿಗೆ ದೃಷ್ಟಾಂತಗಳು. ಸುಬ್ರಹ್ಮಣ್ಯ ಭಾರತಿ, ಲಿಕ್ವಿಡ್ ಸಾಫ್ಫೈರ್ ಮೊದಲಾದ ಇಂಗ್ಲಿಷ್ ಕೃತಿಗಳನ್ನು ಸಂಘ ಪ್ರಕಟಿಸಿದೆ.

ಗಲಾಟೆ ಗದ್ದಲಗಳನ್ನು ಮಾಡದೆ ಮೌನವಾಗಿ ಕನ್ನಡದ ಕಂಪನ್ನು ಹರಡಿದ ಸಂಘವು ಎಲ್ಲರ ಪ್ರೀತಿಗೆ ಪಾತ್ರವಾಗಿದೆ. ವಿದ್ಯಾರ್ಥಿಗಳಲ್ಲಿ ಭಾಷೆಯ ಬಗೆಗೆ ಸಂಕುಚಿತ ಭಾವನೆಗಳನ್ನು ಇಲ್ಲವಾಗುವಂತೆ ಮಾಡಿ ಕನ್ನಡದ ಬಗೆಗೆ ಪ್ರೀತಿ, ಗೌರವಗಳು ಉಂಟಾಗುವಂತೆ ಮಾಡಿದೆ. ಕನ್ನಡಾಭಿಮಾನಿಗಳ ಪ್ರೀತಿಯ ನೆರವನ್ನು ಪಡೆಯುತ್ತಾ ಯಾರ ಹಂಗಿಗೂ ಒಳಗಾಗದೆ ನಿಜವಾದ ಬರಹಗಾರರನ್ನು ಬೆಳಕಿಗೆ ತಂದಿದೆ. ಸಂಘವು ಅವಿರತವಾದ ಪ್ರಕಾಶನ ಕೆಲಸದಲ್ಲಿ ಹೊಸ ಹೊಸ ಲೇಖಕರನ್ನು ರೂಪಿಸಿದೆ. ಗ್ರಂಥ ಪ್ರಕಟಣೆ ಕೇವಲ ವೃತ್ತಿ, ವ್ಯವಹಾರವಾಗದೆ ಮೌಲಿಕ ಸಾಹಿತ್ಯದ ಬೆಳವಣಿಗೆಗೆ ಪೂರಕವಾಗಬೇಕು ಎಂಬ ಉದ್ದೇಶವನ್ನು ಇರಿಸಿಕೊಂಡು ಕನ್ನಡ ಸಂಘ ಕೆಲಸ ಮಾಡಿದೆ. ಈ ದಿಸೆಯಲ್ಲಿ ಸಂಘದ ಪ್ರತಿಯೊಂದು ಪ್ರಕಟಣೆಗಳೂ ಒಂದೊಂದು ಹೆಜ್ಜೆ ಗುರುತುಗಳಾಗಿವೆ.

ಬೇಂದ್ರೆಯವರ ಭಾವಚಿತ್ರವನ್ನು ಸಂಘವು ಪ್ರಕಟಿಸಿ ಎರಡು ರೂಪಾಯಿಗೆ ಮಾರಾಟ ಮಾಡಲು ಉದ್ದೇಶಿಸಿತ್ತು. ಪ್ರಕಟಣೆಯನ್ನೇನೋ ಮಾಡಿತು. ಆದರೆ ಅನಿವಾರ್ಯ ಕಾರಣ ಗಳಿಗಾಗಿ ಅದನ್ನು ಸ್ಥಗಿತಗೊಳಿಸಬೇಕಾಯಿತು. ಸಂಘವು ಪ್ರಕಟಿಸಿದ ಬೇಂದ್ರೆಯವರ ಅದೇ ಭಾವಚಿತ್ರ ಕರ್ನಾಟಕದಲ್ಲಿ ಮತ್ತೆ ಅತ್ಯಂತ ಜನಪ್ರಿಯವಾಯಿತು ಎಂಬುದನ್ನು ಇಲ್ಲಿ ನೆನಪಿಸಿ ಕೊಳ್ಳಬಹುದು.

ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಪ್ರಕಟಣೆಗಳು ಯಾವತ್ತೂ ಕನ್ನಡ ಸಾಹಿತ್ಯದ ಗಮನಾರ್ಹ ಕೃತಿಗಳಾಗಿವೆ. ಇವುಗಳು ಮೌಖಿಕತೆಯ ಹಾಗೂ ವೈವಿಧ್ಯದ ಕಾರಣಕ್ಕೆ ಮುಖ್ಯವಾಗಿರುವುದು ಒಂದು ಸಂಗತಿ. ಹಾಗೆಯೇ ಈ ಕೃತಿಗಳು ಸಮಕಾಲೀನ ಸಾಹಿತ್ಯ ವಲಯದಲ್ಲಿ ಹುಟ್ಟುಹಾಕಿದ ಆಸಕ್ತಿ, ಅಭಿರುಚಿಗಳ ದೃಷ್ಟಿಯಿಂದಲೂ ಮುಖ್ಯವಾಗುತ್ತವೆ. ಯಾವುದೇ ಪ್ರಕಾಶನ ಸಂಸ್ಥೆಗಳಿಗಿಲ್ಲದ ಸಾಮಾಜಿಕ ಕಾಳಜಿ, ಸಾಹಿತ್ಯ ಪೋಷಣೆಯ ಉನ್ನತ

ಆದರ್ಶ, ಎಳೆಯರನ್ನು ಉತ್ತೇಜಿಸುವಲ್ಲಿನ ಉತ್ಸಾಹ ಇವೆಲ್ಲವೂ ಮುಪ್ಪುರಿಗೊಂಡ ಮನಸ್ಸಿನ ಪ್ರತೀಕಗಳಾಗಿ ಈ ಪ್ರಕಟಣೆಗಳು ಕನ್ನಡಿಗರ ಮುಂದಿವೆ. ಎಂದೆಂದೂ ವ್ಯಾಪಾರಿ, ಮನೋಧರ್ಮವು ತಲೆಹಾಕದೆ ಶುದ್ಧ ಸಾಹಿತ್ಯಕಾರ್ಯದಲ್ಲಿ ನಿರತವಾದ ಮನಸ್ಸಿನ ಇಚ್ಛಾ ಶಕ್ತಿಯನ್ನು ಇಲ್ಲಿನ ಕನ್ನಡ ಸಂಘವು ವಿವಿಧ ಮಾಲೆಗಳಲ್ಲಿ ಕೊಟ್ಟಿದೆ. ಇದರಿಂದ ಪ್ರಚೋದನೆಗೊಂಡವರು, ಪ್ರಯೋಜನ ಪಡೆದವರು ಅನೇಕರು. ಹಾಗಾಗಿ ಕನ್ನಡ ಸಂಘ ಪ್ರಕಾಶನದ ಹೆಸರಿನಲ್ಲಿ ಸಾರ್ಥಕವಾದ ಕೆಲಸವನ್ನು ನಿರ್ವಹಿಸಿದೆ. ಕನ್ನಡ ಸಂಘ ಒಂದು ವೃತ್ತಿಪರ ಸಂಸ್ಥೆಯಾಗದೆ ಹವ್ಯಾಸದ ವ್ಯಾಪ್ತಿಯಲ್ಲಿ ಉಳಿದ ಕಾರಣಕ್ಕಾಗಿ ಗುಣಾತ್ಮಕ ನೆಲೆಯನ್ನು ಮಾತ್ರ ಸ್ಪರ್ಶಿಸಿದೆ ಎಂದು ಸಾಹಿತ್ಯ ಪ್ರೇಮಿಗಳು ಹೆಮ್ಮೆಯಿಂದ ಹೇಳಿಕೊಳ್ಳಬಹುದು.

❑

# ಕ್ರೈಸ್ಟ್ ಕಾಲೇಜ್ ಕನ್ನಡ ಸಂಘಕ್ಕೆ 'ರಾಜು ಮೇಷ್ಟ್ರ' ವಿದಾಯ

● *ಕರಿಸ್ವಾಮಿ ಕೆ., ಸತೀಶ ಡಿ.ಪಿ.*

**ರಾ**ಜು ಮೇಷ್ಟ್ರ ಎಂದೇ ಕರೆಸಿಕೊಳ್ಳುವ ಚಿ. ಶ್ರೀನಿವಾಸರಾಜು ಇದೇ ಮಾರ್ಚ್ ೩೧ಕ್ಕೆ ನಿವೃತ್ತರಾಗುತ್ತಿದ್ದಾರೆ.

ಬೆಂಗಳೂರಿನ ಕ್ರೈಸ್ಟ್ ಕಾಲೇಜಿನ ಕನ್ನಡ ಪ್ರಾಧ್ಯಾಪಕ, ಅಲ್ಲಿನ ಕನ್ನಡ ಸಂಘದ ಚಾಲನಾಶಕ್ತಿ ರಾಜು ಮೇಷ್ಟ್ರ, ಸಾಮಾನ್ಯ ಅಧ್ಯಾಪಕರಾಗಿದ್ದರೆ ಅವರ ನಿವೃತ್ತಿ ಸುದ್ದಿಯೇ ಆಗುತ್ತಿರಲಿಲ್ಲ. ಆದರೆ ಅವರು ಹಾಗಲ್ಲ. ಕಳೆದ ೩೦ ವರ್ಷಗಳಿಂದ 'ಕ್ರೈಸ್ಟ್ ಕಾಲೇಜ್ ಕನ್ನಡ ಸಂಘ' ಮೂಲಕ ನಾಡಿನ ಸಾವಿರಾರು ಎಳೆಯ ಪ್ರತಿಭೆಗಳಿಗೆ ಸಾಹಿತ್ಯ ಲೋಕದಲ್ಲಿ ಜಾಗ ದೊರಕಿಸಿಕೊಟ್ಟವರು. ಅವರ ಪ್ರತಿಭೆ ಪ್ರದರ್ಶನಕ್ಕೆ ವೇದಿಕೆ ರೂಪಿಸಿದವರು.

ಹೀಗಾಗಿ ರಾಜು ಮೇಷ್ಟ್ರ ನಿವೃತ್ತಿ, ಸಹಜವಾಗಿ ಸಾಹಿತ್ಯಾಭಿಮಾನಿಗಳಲ್ಲಿ ದಿಗಿಲು, ನೋವು ಹುಟ್ಟಿಸಿದೆ. ಏನನ್ನೋ ಕಳೆದುಕೊಂಡ ತಳಮಳ. ಅನಾಥ ಪ್ರಜ್ಞೆ. ಆದ್ದರಿಂದ ರಾಜು ನಿವೃತ್ತಿ ಎಲ್ಲ ಸಾಹಿತ್ಯಾಭಿಮಾನಿಗಳಿಗೂ ಮಹತ್ವದ ವಿಷಯ. ರಾಜು ಎಂದರೆ ಕನ್ನಡ ಸಂಘ ಕನ್ನಡ ಸಂಘ ಎಂದರೆ ರಾಜು ಎನ್ನುವಷ್ಟು ಅವಿನಾಭಾವ ಸಂಬಂಧ ಅವರದು.



ಬೆಂಗಳೂರಿನಲ್ಲಿ ಕ್ರೈಸ್ಟ್ ಕಾಲೇಜು ಎಂಬುದಿದೆ ಎಂದು ಅನೇಕರಿಗೆ ಗೊತ್ತಾಗಿದ್ದು ಅಲ್ಲಿನ ಕನ್ನಡ ಸಂಘದಿಂದ. ಲಂಕೇಶ್ ಅವರು ಹೇಳುವಂತೆ ಕನ್ನಡ ಪ್ರಾಧ್ಯಾಪಕ ಶ್ರೀನಿವಾಸರಾಜು ಎಂಥವ ರೆಂದು ಅವರ ಸ್ನೇಹಿತರಿಗೆ ಮಾತ್ರ ಗೊತ್ತು. ಸಂಕೋಚ ಸ್ವಭಾವದ, ಧ್ವನಿಯೆತ್ತಿ ಮಾತನಾಡಲೂ ಹಿಂಜರಿಯುವ, ಮಾಡಿದ ಕೆಲಸವನ್ನು ಅಚ್ಚುಕಟ್ಟಾಗಿ ಮಾಡುವ, ಕನ್ನಡಾಭಿಮಾನದ ಸೊಕ್ಕು ಕಿಂಚಿತ್ತೂ ಇಲ್ಲದ ಸಜ್ಜನ.

ಎಂದೂ ಕ್ರಾಂತಿಯ ಕಹಳೆ ಊದದ ಶ್ರೀನಿವಾಸರಾಜು ಕ್ರೈಸ್ಟ್ ಕಾಲೇಜಿನಲ್ಲಿ ನಡೆಸಿರುವುದು ನಿಜವಾದ ಕ್ರಾಂತಿ. ಉತ್ತಮ ಅಧ್ಯಾಪಕರೇ ವಿರಳವಾಗುತ್ತಿರುವ ಈ ಕಾಲದಲ್ಲಿ ಸಾಹಿತ್ಯ, ಸಂಸ್ಕೃತಿಯ ಬಗ್ಗೆ ಎಳೆಯ ಜೀವಗಳಲ್ಲಿ ಹುಮ್ಮಸ್ಸು ಹುಟ್ಟಿಸುವ ಶ್ರೀನಿವಾಸರಾಜು ತರಹದವರು ಬಿಎಂಶ್ರೀ, ಕುವೆಂಪು, ರಾಜರತ್ನಂ, ಎ.ಆರ್.ಕೃಷ್ಣಶಾಸ್ತ್ರಿ, ಶಿವರುದ್ರಪ್ಪ, ಮುಂತಾದವರ ಪರಂಪರೆಗೆ ಸೇರಿದವರು.

ಬೆಂಗಳೂರೆಂಬ ಮರಳುಗಾಡಿನಲ್ಲಿ ಕನ್ನಡವೆಂಬ ಓಯಸಿಸ್‌ನ ಕನಸು ಕಾಣುವುದು ಮೂರ್ಖತನ ಎನ್ನುವ ಕಟು ಸತ್ಯದೊಳಗೆ, ಕನ್ನಡದ ವಿದ್ಯಾರ್ಥಿಗಳು ಕಡಿಮೆ ಇರುವ, ಕನ್ನಡಿಗರಲ್ಲದವರ ಆಡಳಿತ ವರ್ಗವಿರುವ ಕ್ರೈಸ್ಟ್ ಕಾಲೇಜಿನಲ್ಲಿ ಕನ್ನಡ ಸಂಘ ಕಟ್ಟಿದ್ದು ಕಡಿಮೆ ಸಾಧನೆಯೇನಲ್ಲ.

೧೯೭೨ ಡಿಸೆಂಬರ್ ೨೧ರಂದು ಪ್ರಾರಂಭವಾದ ಕನ್ನಡ ಸಂಘಕ್ಕೆ, 'ನರಕಕ್ಕಿಳ್ಸಿ ನಾಲ್ಗೆ ಸೀಳ್ಸಿದ್ರೂನೂ ಮೂಗ್ನಲ್ ಕನ್ನಡ ಪದವಾಡ್ತೀನಿ' ಎಂದು ಜಿ.ಪಿ. ರಾಜರತ್ನಂ ಸೇರಿದಂತೆ ಹಲವರ ಸ್ಫೂರ್ತಿದಾಯಕ ಕನ್ನಡ ಪ್ರೇಮ ರಾಜು ಅವರಿಗೆ ಪ್ರೇರಣೆ ತಂದಿತು.

ಸಮಗ್ರ ಬೆಂಗಳೂರಿನಲ್ಲಿ ಕನ್ನಡ ಕಂಪು ಯಾವತ್ತೋ ಕಾಣೆಯಾಗಿದೆ. ಹಾಗಾಗಿ ಕನ್ನಡ ದ್ವೀಪಗಳು ಮಾತ್ರ ಇವೆ. ಅಂಥ ದ್ವೀಪಗಳಲ್ಲಿ ಕನ್ನಡ ಸಂಘ ಪ್ರಮುಖವಾದುದು. ಇಂಥ ಸಂಘದಿಂದ ಇದುವರೆಗೆ ೧೭೨ ಕೃತಿಗಳನ್ನು ಪ್ರಕಟಿಸಲಾಗಿದೆ.

ಸಂಘ ಪ್ರಾರಂಭವಾದಂದಿನಿಂದಲೂ ಅನಕೃ ಅಂತರ ಕಾಲೇಜು ಲೇಖನ ಸ್ಪರ್ಧೆ ಹಾಗೂ ಬೇಂದ್ರೆ ತೀರಿಕೊಂಡ ೧೯೮೧ರ ನಂತರದಿಂದ ಬೇಂದ್ರೆ ಕೃತಿ ಅಂತರ ಕಾಲೇಜು ಕವನ ಸ್ಪರ್ಧೆಯನ್ನು ಸಂಘ ನಡೆಸಿಕೊಂಡು ಬರುತ್ತಿದೆ. ಇದೆಲ್ಲಾ ಪರಿಕಲ್ಪನೆಯ ಹಿಂದಿನ ಪ್ರೇರಣ ಶಕ್ತಿ ಶ್ರೀನಿವಾಸರಾಜು. ೧೯೪೧ರಲ್ಲಿ ಚಿಕ್ಕಬಳ್ಳಾಪುರದಲ್ಲಿ ಹುಟ್ಟಿದ ಶ್ರೀನಿವಾಸರಾಜು ಮೊದಲು ಓದಿದ್ದು ಬಿ.ಎಸ್ಸಿ. ಮಾಡಿದ್ದು ಗಣಿ ಉಸ್ತುವಾರಿ ಕೆಲಸ. ಸಾಹಿತ್ಯದ ಸೆಳೆತದಿಂದ ಅಧ್ಯಾಪಕ ವೃತ್ತಿಗೆ ಬಂದವರು.

ಬೆಂಗಳೂರಿನ GAS ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗಲೇ ಪ್ರೊ. ಎಂ.ವಿ. ಸೀತಾರಾಮಯ್ಯ ಅವರ ಜತೆ ಅಲ್ಲಿನ ಕನ್ನಡ ಸಂಘದಲ್ಲಿ ರಾಜು ಕೆಲಸ ಮಾಡಿದ್ದರು. ಅದರ ಅನುಭವದ ಹಿನ್ನೆಲೆಯಲ್ಲಿ ಕ್ರೈಸ್ಟ್ ಕಾಲೇಜಿನಲ್ಲಿ ಕನ್ನಡ ಸಂಘ ಕಟ್ಟಲು ರಾಜು ಮೇಷ್ಟ್ರಿಗೆ ಹೆಗಲು ಕೊಟ್ಟವರಲ್ಲಿ ಆಗ ಕ್ರೈಸ್ಟ್ ಕಾಲೇಜಿನಲ್ಲಿ ಭೌತಶಾಸ್ತ್ರ ಅಧ್ಯಾಪಕರಾಗಿದ್ದ, ಎಚ್.ಆರ್. ರಾಮಕೃಷ್ಣರಾವ್ ಮತ್ತು ಗಣಿತಶಾಸ್ತ್ರದ ಅಧ್ಯಾಪಕರಾಗಿದ್ದ ಸನತ್‌ಕುಮಾರ್ ಶಾಸ್ತ್ರಿ ಸೇರಿದ್ದಾರೆ.

ಇವರೆಲ್ಲರ ಹಿಂದೆ ಬೆನ್ನೆಲುಬಾಗಿ ನಿಂತ ಕಾಲೇಜಿನ ಆಡಳಿತ ವರ್ಗ ಹಾಗೂ ಆಗಿನ ಪ್ರಾಂಶುಪಾಲರಾದ ರೆ.ಫಾ. ಮಾಣಿ ಗೈಲ್ಸ್ ಅವರ ಅಪಾರ ಬೆಂಬಲ ಸಂಘದ ಹುಟ್ಟಿಗೆ ಕಾರಣವಾಯಿತೆನ್ನುವುದನ್ನು ಶ್ರೀನಿವಾಸರಾಜು ಈಗಲೂ ನೆನಪಿಸಿಕೊಳ್ಳುತ್ತಾರೆ.

ಕನ್ನಡ ಸಂಘದ ಹುಟ್ಟು ಮತ್ತು ಚಟುವಟಿಕೆ ಪ್ರಾರಂಭಿಸಲು ಕಾರಣವಾದ ಇನ್ನೊಂದು ಘಟನೆ ಇದು.

ತಂದೆಯ ಅಪರ ಕರ್ಮಗಳನ್ನು ತೀರಿಸಲು ತನ್ನ ತಲೆಕೂದಲನ್ನು ತೆಗೆಸಲಾರೆ ಎನ್ನುವ ಹಂತದಲ್ಲಿ ಆತ್ಮಹತ್ಯೆ ಮಾಡಿಕೊಂಡ ಸಿ.ಕೆ. ಲಕ್ಷ್ಮಣಗೌಡ ಎಂಬ ವಿದ್ಯಾರ್ಥಿಯ ಕುಟುಂಬದವರು ಅಂದು ಕಾಲೇಜಿಗೆ ನೀಡಿದ ೨೫೦೦ ರೂಪಾಯಿಗಳಲ್ಲಿ ಕನ್ನಡ ಸಂಘಕ್ಕೆ ಬಂದ ೫೦೦ ರೂಪಾಯಿ ಸಂಘದ ಮೂಲ ಧನವಾಯಿತು. ಕನ್ನಡ ಸಂಘದ ಮೊದಲ ಪ್ರಕಟಣೆ, ೬ ರೂಪಾಯಿ ಮುಖ ಬೆಲೆಯ ಕ.ವೆಂ. ರಾಜಗೋಪಾಲ ಅವರ 'ನದಿಯ ಮೇಲಿನ ಗಾಳಿ' ಕವನ ಸಂಕಲನ. ಸಂಘಕ್ಕೆ ಹಣ ಸಂಗ್ರಹಿಸಲು ಕನ್ನಡ ಬಳಗ ಅನುಸರಿಸಿದ ದಾರಿ ಇನ್ನೂ ವಿಶಿಷ್ಟ.

ಪ್ರಾರಂಭದಲ್ಲಿ ಸಭೆ ಸಮಾರಂಭಗಳಿಗೆ ಜೋಳಿಗೆಯಲ್ಲಿ ಕನ್ನಡ ಪುಸ್ತಕಗಳನ್ನು ಹಾಕಿಕೊಂಡು ಮಾರಾಟ ಮಾಡಲಾಯಿತು. ಹಾಗೆಯೇ ಇವತ್ತು ಕನ್ನಡ ಸಂಘದ ಪ್ರತಿ ವರ್ಷದ ಎಲ್ಲ ಪ್ರಕಟಣೆಗಳನ್ನು ಕೊಂಡುಕೊಳ್ಳುವ ೨೦೦ರಷ್ಟು ಕಾಯಂ ಓದುಗ ಬಳಗವಿದೆ.

ಕನ್ನಡ ಸಾಹಿತ್ಯ ಮತ್ತು ತರುಣ ವಿದ್ಯಾರ್ಥಿಗಳ ನಡುವೆ ಸೇತುವೆಯಂತೆ ಕೆಲಸ ಮಾಡಿದ ಕನ್ನಡ ಸಂಘ, ಸ್ಪರ್ಧೆಯ ಮೂಲಕ ನಾಡಿನ ಮೂಲೆ ಮೂಲೆಗಳಲ್ಲಿದ್ದ ಬರಹಗಾರರನ್ನು ಗುರುತಿಸಿ ಪ್ರೋತ್ಸಾಹಿಸಿದ ರೀತಿಯಂತೂ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ದಾಖಲಾರ್ಹ ಸಂಗತಿಯಾಗಿದೆ.

ಸಂಘ ಪ್ರಕಟಿಸಿದ ಸಾಹಿತ್ಯ ಕೃತಿಗಳ ಪೈಕಿ ಬಿ.ಸಿ. ರಾಮಚಂದ್ರಶರ್ಮ ಅವರ 'ಸಪ್ತಪದಿ' ಕವನ ಸಂಕಲನ ಮತ್ತು ಸುಬ್ಬಣ್ಣ ರಂಗನಾಥ ಎಕ್ಕುಂಡಿ ಅವರ 'ಬಕುಳದ ಹೂಗಳು' ಕೃತಿಗಳಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿವೆ.

ಸುಮಾರು ೫೦ ಕೃತಿಗಳಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪುರಸ್ಕಾರ ಸಿಕ್ಕಿದೆ. ಸ್ಪರ್ಧೆಯ ಮೂಲಕ ಮೊದಲ ಬಾರಿಗೆ ಬೆಳಕಿಗೆ ಬಂದ ಯುವ ಲೇಖಕರಲ್ಲಿ ನಟರಾಜ್ ಹುಳಿಯಾರ್, ಮೊಗಳ್ಳಿ ಗಣೇಶ್, ಅಮರೇಶ್ ನುಗಡೋಣಿ, ತೇಜಸ್ವಿನಿ ನಿರಂಜನ, ಚಿಂತಾಮಣಿ ಕೊಡ್ಲೆಕೆರೆ, ಅಬ್ದುಲ್ ರಷೀದ್, ವೆಂಕಟರಮಣಗೌಡ ಸಿಕ್ಕಿದ್ದಾರೆ.

ಕೆ.ವಿ. ನಾರಾಯಣ, ಎಚ್.ಎಸ್. ರಾಘವೇಂದ್ರರಾವ್, ಬಸವರಾಜ ಕಲ್ಗುಡಿ, ಟಿ.ಎನ್. ಸೀತಾರಾಂ ಅವರ ಉತ್ತಮ ಎಂದು ಹೆಸರಾಗಿರುವ ಕೆಲವು ಕೃತಿಗಳನ್ನು ಸಂಘ ಪ್ರಕಟಿಸಿದ್ದು, ಕಿ.ರಂ. ನಾಗರಾಜ ಅವರು ಬರೆದಿರುವ ಏಕೈಕ ಕೃತಿ 'ಪ್ರತಿಷ್ಠಿತ ಶಕ್ತಿ ಮತ್ತು ಕನ್ನಡ ಸಾಹಿತ್ಯ' ಎಂಬ ಕೃತಿಯನ್ನು ಪ್ರಕಟಿಸಿದ ಹೆಗ್ಗಳಿಕೆ ಹೊಂದಿದೆ.

ಬೇರೆ ಭಾಷೆಗಳ ಜ್ಞಾನಪೀಠ ಪ್ರಶಸ್ತಿ ವಿಜೇತ ಕೃತಿಗಳನ್ನು ಅನುವಾದಿಸಿ ಹೊರತರುವ ಯೋಜನೆಯನ್ನು ಹಮ್ಮಿಕೊಂಡಿದ್ದು, ಡಿ.ಎನ್. ಶಂಕರಭಟ್ ಅವರ 'ಕನ್ನಡ ಶಬ್ದ ರಚನೆ' ಎಂಬ ಅಪರೂಪದ ಕೃತಿಯನ್ನೂ ಈ ಬಾರಿ ಪ್ರಕಟಿಸಿದೆ.

ಈ ಎಲ್ಲಾ ಹಿನ್ನೆಲೆಗಳಿರುವ ಸಂಘಕ್ಕೆ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಸ್ಥಾಪಿಸಿರುವ 'ಅತ್ಯುತ್ತಮ ಪ್ರಕಾಶನ ಸಂಸ್ಥೆ' ಪ್ರಶಸ್ತಿ ಈ ಬಾರಿ ಸಿಕ್ಕಿರುವ ಸುದ್ದಿಯಿದೆ. ಸಂಘದ ಆರ್ಥಿಕ

ಮುಗ್ಗಟ್ಟಿನ ಕಾಲದಲ್ಲಿ ಸ್ಥಾಪಕ ಪ್ರಾಂಶುಪಾಲರಾದ ರೆ.ಫಾ. ಮಾಣಿಗೈಲ್ಸ್ ಅವರು ತಮ್ಮ ಜೇಬಿನಿಂದ ೫೦೦ ರೂಪಾಯಿ ಕೊಟ್ಟಿದ್ದಲ್ಲದೆ ಕೆಲಸ ಮುಂದುವರಿಸಿಕೊಂಡು ಹೋಗಬೇಕೆಂದು ಪ್ರೋತ್ಸಾಹ ನೀಡಿದ್ದೂ ಇದೆ.

ಹಾಗೆಯೇ ಇನ್ನೊಂದು ಸಂದರ್ಭದಲ್ಲಿ ಡಿ.ಆರ್. ನಾಗರಾಜ್ ಕೂಡಾ ಸಂಘಕ್ಕೆ ೨೫೦ ರೂಪಾಯಿ ಹಣ ಕಳಿಸಿದ್ದನ್ನು 'ಮೇಷ್ಟ್ರು' ನೆನಪಿಸಿಕೊಳ್ಳುತ್ತಾರೆ.

ಸರಕಾರದಿಂದ, ಆಡಳಿತ ವರ್ಗದಿಂದ ಒಂದು ಪೈಸೆ ತೆಗೆದುಕೊಳ್ಳದೆ ಆದರ್ಶ ಸಂಘವನ್ನಾಗಿ ರೂಪಿಸಿದ ರಾಜು ಮೇಷ್ಟ್ರು ಹಾಗೂ ಸದಸ್ಯರು, ಸಂಘದ ಕೆಲಸಕ್ಕಾಗಿ ಎಲ್ಲಿಗೆ ಹೋದರೂ ಯಾವುದೇ ರೀತಿಯ ಭತ್ಯೆ (ಟಿಎ, ಡಿಎ)ಗಳನ್ನು ತೆಗೆದುಕೊಂಡಿರುವ ಉದಾಹರಣೆಯೇ ಇಲ್ಲ. ಇಷ್ಟಾಗಿಯೂ ಆಡಳಿತ ವರ್ಗ ಹಣ ನೀಡುತ್ತೇನೆ ಎಂದಾಗ ವಿನಯವಾಗಿ ತಿರಸ್ಕರಿಸಿ, ಹಣವನ್ನು ಎರಡು ಬಾರಿ ಬಡ್ಡಿಗೆ ಪಡೆದಿದ್ದೂ ಇದೆ.

ಕನ್ನಡ ಸಂಘ ಪುಸ್ತಕ ಪ್ರಕಟಣೆ, ಸಾಹಿತ್ಯ ಸ್ಪರ್ಧೆಗೆ ಮಾತ್ರ ತೃಪ್ತಿಪಟ್ಟುಕೊಂಡಿಲ್ಲ. ಕಾಲೇಜಿನಲ್ಲಿ 'ನಾಟಕ ಅಭಿರುಚಿ ಕೇಂದ್ರ'ವನ್ನೂ ತೆರೆಯಲಾಗಿದೆ. ಅಲ್ಲಿ ಪ್ರತಿ ವರ್ಷ ರಂಗ ಕಮ್ಮಟ ಮತ್ತು ನಾಟಕ ಪ್ರದರ್ಶನಗಳ ಕೆಲಸಗಳನ್ನು ಮಾಡಿಕೊಂಡು ಬರಲಾಗುತ್ತಿದೆ. 'ಅಂಕಣ' ದ್ವೈಮಾಸಿಕದ ಸಂಪಾದಕರೂ ಆಗಿರುವ ರಾಜು ನಾಟಕಕಾರರೂ ಹೌದು. ಐದು ನಾಟಕಗಳನ್ನು ಬರೆದಿರುವ ರಾಜುಮೇಷ್ಟ್ರು ಭಾರತದಲ್ಲಿ ಮೂಕ ನಾಟಕ ಬರೆದವರಲ್ಲಿ ಮೊದಲಿಗರು.

'ಡಾ. ಜಿ.ಪಿ. ರಾಜರತ್ನಂ ಮತ್ತು ಕರ್ನಾಟಕ ಸಂಘ', 'ಮೂರು ಏಕಾಂತ ನಾಟಕಗಳು', 'ಭಸನಾಲ ಬಂಧು' (ಕವನ ಸಂಕಲನ) 'ಹಳಿಯ ಮೇಲಿನ ಸದ್ದು', 'ನಾಳೆ ಯಾರಿಗೂ ಇಲ್ಲ ಮತ್ತು ಇತರ ನಾಟಕಗಳು', 'ಬಾವಿಕಟ್ಟೆಯ ಬಳಿ', 'ಎಲ್ಲೋ ಒಂದು ಕಡೆ' ಮುಂತಾದವು ರಾಜು ಅವರ ಪ್ರಮುಖ ಕೃತಿಗಳು. ಕರ್ನಾಟಕ ಸಾಹಿತ್ಯ ಅಕಾಡೆಮಿ, ಸಂಸ ಪ್ರಶಸ್ತಿ, ಸಂದೇಶ ಪ್ರಶಸ್ತಿ, ಮಾನು ಪ್ರಶಸ್ತಿ ಮುಂತಾದವುಗಳಿಗೆ ರಾಜು ಪಾತ್ರರಾಗಿದ್ದಾರೆ.

ಇವತ್ತಿನ ಆಧುನಿಕ ಸ್ಪರ್ಧಾ ಜಗತ್ತಿನಲ್ಲಿ ಭಾಷೆಯ ಆಯ್ಕೆಯ ಬಗೆಗೆ ಯುವಕರಲ್ಲೂ ತಂಬಾ ಜಿಜ್ಞಾಸೆ ಇದೆ. ಆದ್ದರಿಂದ ವಸಾಹತುಶಾಹಿ, ಬಂಡವಾಳಶಾಹಿ ಜಗತ್ತಿನ ಇಂಗ್ಲಿಷ್ ಮೋಹದಲ್ಲಿ ಕನ್ನಡವನ್ನು ಹೇಗೆ ಉಳಿಸಿಕೊಳ್ಳಬೇಕೆಂಬುದು ಪ್ರಮುಖ ಸವಾಲು. ಇಂಥ ಸಂದರ್ಭದಲ್ಲಿ ರಾಜಕೀಯ ಇಚ್ಛಾಶಕ್ತಿಯ ಕೊರತೆ ಕೂಡ ಕನ್ನಡವನ್ನು ಮೂಲೆಗುಂಪಾಗಿಸುವಲ್ಲಿ ಪಾಲು ಪಡೆದಿದೆ ಎನ್ನುತ್ತಾರೆ ಶ್ರೀನಿವಾಸರಾಜು.

ರಾಜ್ಯೋತ್ಸವದ ಹೆಸರಿನಲ್ಲಿ ನಡೆಯುವ ವಸೂಲಿ, ಆರ್ಕೆಸ್ಟ್ರಾ, ದೀಪಾಲಂಕಾರಗಳಿಂದ ಮೆರವಣಿಗೆ, ಭಾಷಣಗಳಿಂದ ಮತ್ತು ಸಮ್ಮೇಳನಗಳಿಂದ ಕನ್ನಡವನ್ನು ಬೆಳೆಸಲು ಉಳಿಸಿಕೊಳ್ಳಲು ಸಾಧ್ಯವಿಲ್ಲ. ನಾವು ಸಕಾಲದಲ್ಲೇ ಎಚ್ಚರಗೊಳ್ಳದಿದ್ದರೆ ಇನ್ನು ಕೆಲವೇ ವರ್ಷಗಳಲ್ಲಿ ದಕ್ಷಿಣ ಆಫ್ರಿಕದ ಭಾಷೆಗಳಿಗೆ ಆದಂತೆ ಕನ್ನಡ ಭಾಷೆ ಇತಿಹಾಸದ ಪಳೆಯುಳಿಕೆ ಮಾತ್ರ ಆಗುತ್ತದೆ.

'ಕನ್ನಡವನ್ನು ಆ ಮೂಲಕ ಕನ್ನಡ ಸಾಹಿತ್ಯವನ್ನು ಓದುವ ವ್ಯವಧಾನ ಈಗ ಯಾರಿಗೂ

ಇಲ್ಲ. ಯಾವುದೇ ಕ್ಷಣದಲ್ಲಾದರೂ ಇಂಗ್ಲಿಷ್‌ನ ಮಹಾಪ್ರವಾಹದಲ್ಲಿ ಅಳಿದುಳಿದಿರುವ ಕನ್ನಡದ ದ್ವೀಪಗಳು ಕೊಚ್ಚಿಹೋಗಬಹುದು. ಆದ್ದರಿಂದ ಸಂಸ್ಕೃತವನ್ನು ಕನ್ನಡದ ಜಾಯಮಾನಕ್ಕೆ ಬೇಕಾದಂತೆ ಬಗ್ಗಿಸಿಕೊಂಡ ಹಾಗೆ ಇಂಗ್ಲಿಷ್ ಭಾಷೆಯನ್ನು ಬಗ್ಗಿಸಿಕೊಳ್ಳಬೇಕಾದ ಅಗತ್ಯವಿದೆ. ಆ ಮೂಲಕ ಯುವಕರನ್ನು ಹೊಸ ಪೀಳಿಗೆಯನ್ನು ಕನ್ನಡ ಭಾಷೆ ವಿಷಯದಲ್ಲಿ ಹಿಡಿದಿಟ್ಟು ಕೊಳ್ಳಬೇಕಾದ ತುರ್ತು ನಿರ್ಮಾಣವಾಗಿದೆ. ಇಲ್ಲದಿದ್ದರೆ ಕನ್ನಡ ಉಳಿಯುವುದು ಕಷ್ಟ ಎನ್ನುತ್ತಾರೆ ಶ್ರೀನಿವಾಸರಾಜು.

ಸಾಂಪ್ರದಾಯಿಕ ಆಚರಣೆಯಂತಾಗಿರುವ ಸಾಹಿತ್ಯ ಸಮ್ಮೇಳನಗಳನ್ನು ವಿರೋಧಿಸಿ ಈ ಹಿಂದೆ ಬೆಂಗಳೂರಿನಲ್ಲಿ ಗೋಪಾಕೃಷ್ಣ ಅಡಿಗರ ನೇತೃತ್ವದಲ್ಲಿ ಪರ್ಯಾಯ ಸಾಹಿತ್ಯ ಸಮ್ಮೇಳನ ನಡೆಸಿದವರಲ್ಲಿ ಒಬ್ಬರಾಗಿದ್ದ ರಾಜು, ತಮ್ಮ ವೇಳೆ ಮುಗಿದ ತಕ್ಷಣ ಎಲ್ಲೂ ನಿಲ್ಲುವವರಲ್ಲ. ಆದ್ದರಿಂದ ಹುದ್ದೆಯಲ್ಲಿ ಮುಂದುವರಿಯುವಂತೆ ಆಡಳಿತ ಮಂಡಳಿ ಕೇಳಿಕೊಂಡರೂ ಇತರರಿಗೆ ಅವಕಾಶವಾಗಲಿ ಎಂಬ ದೃಷ್ಟಿಯಿಂದ ತಾವು ರೂಪಿಸಿದ್ದ ಯಾವುದೇ ಯೋಜನೆಗಳನ್ನು ಮುಂದೆ ಕನ್ನಡ ಸಂಘಕ್ಕೆ ಬರುವವರ ಮೇಲೆ ಹೇರದೆ ನಿರ್ಗಮಿಸುತ್ತಿದ್ದಾರೆ.

*(ವಿಜಯ ಕರ್ನಾಟಕ, ೨೬ ಮಾರ್ಚ್ ೨೦೦೦)*



## ಕ್ರೈಸ್ಟ್ ಕಾಲೇಜು ಮತ್ತು ಶ್ರೀನಿವಾಸರಾಜು

● ಪಿ. ಲಂಕೇಶ್

ಕ್ರೈಸ್ಟ್ ಕಾಲೇಜಿನ ಇನ್ನೊಂದು ಪುಸ್ತಕ ಹೊರಬಂದಿದೆ. ಇದು ಹೆಣ್ಣು ಮಗಳೊಬ್ಬಳ ಕವನ ಸಂಕಲನ. ಕ್ರೈಸ್ಟ್ ಕಾಲೇಜ್ ಮತ್ತು ಕನ್ನಡ ಪುಸ್ತಕ..... ಓದುಗರು ಹೆಮ್ಮೆಪಡಬೇಕಾದ ವಿಚಿತ್ರ ಇದು. ಕ್ರಿಶ್ಚಿಯನ್ನರ – ಬಹುಪಾಲು ಅಲ್ಪ ಸಂಖ್ಯಾತರ ಈ ಕಾಲೇಜಿನಿಂದ ೨೫ ಕವನ ಸಂಕಲನಗಳೇ ಬಂದಿವೆ : ವಿದ್ಯಾರ್ಥಿಗಳು, ಹಿರಿಯರು, ಮಹತ್ವದ ಸಾಹಿತಿಗಳು ಬರೆದ ಅನೇಕ ಕನ್ನಡ ಪುಸ್ತಕಗಳು ಈ ಕಾಲೇಜಿನಿಂದ ಪ್ರಕಟವಾಗಿವೆ.

ಇದಕ್ಕೆಲ್ಲ ಕಾರಣ ಚಿ. ಶ್ರೀನಿವಾಸರಾಜು. ಇಲ್ಲಿ ಕನ್ನಡ ಪ್ರಾಧ್ಯಾಪಕರಾದ ಶ್ರೀನಿವಾಸರಾಜು ಎಂಥವರೆಂದು ಅವರ ಸ್ನೇಹಿತರಿಗೆ ಮಾತ್ರ ಗೊತ್ತು. ಸಂಕೋಚ ಸ್ವಭಾವದ, ಧ್ವನಿಯೆತ್ತಿ ಮಾತನಾಡಲೂ ಹಿಂಜರಿಯುವ, ಮಾಡಿದ ಕೆಲಸವನ್ನು ಅಚ್ಚುಕಟ್ಟಾಗಿ ಮಾಡುವ, ಕನ್ನಡಾಭಿಮಾನದ ಸೊಕ್ಕು ಕಿಂಚಿತ್ತೂ ಇಲ್ಲದ ಸಜ್ಜನ ಈ ಶ್ರೀನಿವಾಸರಾಜು. ಎಂದೂ ಕ್ರಾಂತಿಯ ಕಹಳೆ ಊದದ ಶ್ರೀನಿವಾಸರಾಜು ಕ್ರೈಸ್ಟ್ ಕಾಲೇಜಿನಲ್ಲಿ ನಡೆಸಿರುವುದು ನಿಜವಾದ ಕ್ರಾಂತಿ. ಉತ್ತಮ ಅಧ್ಯಾಪಕರೇ ವಿರಳವಾಗುತ್ತಿರುವ ಈ ಕಾಲದಲ್ಲಿ ಸಾಹಿತ್ಯ, ಸಂಸ್ಕೃತಿಯ ಬಗ್ಗೆ ಎಳೆಯ ಜೀವಗಳಲ್ಲಿ ಹುಮ್ಮಸ್ಸು ಹುಟ್ಟಿಸುವ ಶ್ರೀನಿವಾಸರಾಜು ತರಹದವರು ರಾಜರತ್ನಂ, ಎ.ಆರ್. ಕೃಷ್ಣಶಾಸ್ತ್ರಿ, ಶಿವರುದ್ರಪ್ಪ, ಕುವೆಂಪು ಮುಂತಾದವರ ಪರಂಪರೆಗೆ ಸೇರಿದವರು; ಹಾಗೆಯೇ ಈಚಿನ ಕಿ. ರಂ. ನಾಗರಾಜ, ಎಚ್.ಎಸ್. ರಾಘವೇಂದ್ರ ರಾವ್, ಸಿದ್ಧಲಿಂಗಯ್ಯ, ರಾಮದಾಸ್ ಮುಂತಾದವರು ಶ್ರೀನಿವಾಸರಾಜು ಅವರ ಅರ್ಥಪೂರ್ಣ ಸಮಕಾಲೀನರು.



*(ಲಂಕೇಶ್ ಪತ್ರಿಕೆ, ೨೧ ಜುಲೈ ೧೯೯೧)*



# ಯಾರು ಬೇಕಾದರೂ ಅನುಸರಿಸಿ...

*ಚಿರಂಜೀವಿ*

**ಕ**ನ್ನಡ ಸಂಘ ಸ್ಥಾಪಿಸಿ ಬೆಳೆಸುವುದು, ಅದರಿಂದ ವಿದ್ಯಾರ್ಥಿಗಳ ಸಾಹಿತ್ಯಿಕ ಬೆಳವಣಿಗೆಗೆ ದಾರಿ ಮಾಡಿಕೊಡುವುದು, ಕಾಲೇಜ್‌ನಿಂದ ಹೊರಗೆ ಹೆಜ್ಜೆಯಿಡುತ್ತಿದ್ದಂತೆಯೇ ಕೆಲವರಾದರೂ ಸಾಹಿತ್ಯ ಲೋಕದವರಾಗುವಂತೆ ಆಗುವುದು–ಇವೆಲ್ಲ ಮೂರು–ನಾಲ್ಕು ದಶಕಗಳಿಗೆ ಹಿಂದೆ ಡಾ॥ ಜಿ. ಪಿ. ರಾಜರತ್ನಂ ಅವರು ಮಾಡಿದ ಕೆಲಸ. ಕನ್ನಡ ಸಾಹಿತ್ಯದ ಭವಿಷ್ಯದ ಆಲೋಚನೆಯಿಂದ ಅವರು ಮಾಡಿದ 'ಸಾಹಿತ್ಯ ಪರಿಚಾರಿಕೆ' ಕೆಲಸದಿಂದ ಇಂದು ಅವರಂಥವರು ಅನೇಕರು ರೂಪುಗೊಂಡಿದ್ದಾರೆ. ಬೆಂಗಳೂರು ಸೆಂಟ್ರಲ್ ಕಾಲೇಜ್ ಕರ್ನಾಟಕ ಸಂಘದ ಚಟುವಟಿಕೆಗಳಿಂದ ಲೇಖಕರು, ಕವಿಗಳು, ಕನ್ನಡ ಸಂಘ ಕಟ್ಟುವವರು 'ರಾಜರತ್ನಂ ಗರಡಿ'ಯಲ್ಲಿ ಪೈಲ್ವಾನರಾದಂತೆ, ಇದೀಗ ರಾಜರತ್ನಂ ಶಿಷ್ಯ ಪ್ರೊ॥ ಚಿ. ಶ್ರೀನಿವಾಸರಾಜು ಅವರ 'ಕ್ರೈಸ್ಟ್ ಕಾಲೇಜ್' ಕನ್ನಡ ಸಂಘದ ಗರಡಿಯಿಂದ ಭಾವೀ ಕನ್ನಡ ಲೇಖಕರು ರೂಪುಗೊಳ್ಳುತ್ತಿದ್ದಾರೆ.

ಇದೀಗ ಬೆಳ್ಳಿ ಹಬ್ಬ ಆಚರಿಸುತ್ತಿರುವ ಕ್ರೈಸ್ಟ್ ಕಾಲೇಜ್‌ನ 'ಕನ್ನಡ ಸಂಘ' ಸದ್ದಿಲ್ಲದೆ ಎಂಥ ಸಾಧನೆ ಮಾಡಿದೆ ಎಂದು ಗಮನಿಸಿದಾಗ ಸಂತೋಷ, ಆಶ್ಚರ್ಯಗಳಾಗುತ್ತವೆ. ೨೧ ಡಿಸೆಂಬರ್ ೧೯೭೨ರಂದು ಈ ಕನ್ನಡ ಸಂಘ ಸ್ಥಾಪನೆಯಾಯಿತು. ಸಂಘದ ಸ್ಥಾಪಕ ಸಂಚಾಲಕರಾದ ಪ್ರೊ॥ ಚಿ. ಶ್ರೀನಿವಾಸರಾಜು ತಮ್ಮ ಗುರುಗಳಾಗಿದ್ದ ಡಾ॥ ಜಿ.ಪಿ. ರಾಜರತ್ನಂ ಮಾಡಿದ ಎಲ್ಲ ಕನ್ನಡ ಚಟುವಟಿಕೆಗಳನ್ನೂ 'ಕ್ರೈಸ್ಟ್ ಕಾಲೇಜ್'ನಲ್ಲಿ ಮಾಡುತ್ತ ಬಂದಿದ್ದಾರೆ: ವಿದ್ಯಾರ್ಥಿಗಳಿಂದ ಲೇಖನಗಳನ್ನು ಬರೆಸುವುದು, ಅವರಿಗೆ ಬರಹ ಸ್ಪರ್ಧೆಗಳನ್ನೇರ್ಪಡಿಸುವುದು, ವಿದ್ಯಾರ್ಥಿ ಬರೆಹಗಳನ್ನು ಪುಸ್ತಕ ರೂಪದಲ್ಲಿ ತರುವುದು, ವಿವಿಧ ಸಾಹಿತ್ಯ–ಸಂಸ್ಕೃತಿ ಕಾರ್ಯಕ್ರಮಗಳನ್ನೇರ್ಪಡಿಸುವುದು, ಕ್ರೈಸ್ಟ್ ಕಾಲೇಜ್ ಕನ್ನಡ ಸಂಘ ಬೆಳ್ಳಿ ಹಬ್ಬದವರೆಗೆ ನೂರ ಹತ್ತು ಕನ್ನಡ ಕೃತಿಗಳನ್ನು ಪ್ರಕಟಿಸಿದೆ. ಅನೇಕ



ಪ್ರಸಿದ್ಧರ ಕೃತಿಗಳೂ ಈ ಪಟ್ಟಿಯಲ್ಲಿದೆ. ಇದರಲ್ಲಿ ಅನೇಕ ಕೃತಿಗಳಿಗೆ ಕೇಂದ್ರ ಮತ್ತು ರಾಜ್ಯ ಸಾಹಿತ್ಯ, ನಾಟಕ ಅಕಾಡೆಮಿಗಳ ಪ್ರಶಸ್ತಿಗಳು ದೊರಕಿವೆ. ಪಠ್ಯ ಪುಸ್ತಕಗಳಾಗಿವೆ, ಕನ್ನಡ ಚಲನಚಿತ್ರವೂ ಆಗಿದೆ. 'ವಿದ್ಯಾರ್ಥಿ ವಿಕಾಸ ಗ್ರಂಥಮಾಲೆ' ವಿದ್ಯಾರ್ಥಿ ಬರೆಹಗಳಿಗಾಗಿಯೇ ಮೀಸಲಾದ ಗ್ರಂಥ ಮಾಲೆ, ನಾಟಕ, ಗಾಯನ, ಕಾವ್ಯ ವಾಚನ, ಗಮಕ, ಉಪನ್ಯಾಸ, ಚರ್ಚಾ ಸ್ಪರ್ಧೆ, ಮುಖಾಮುಖಿ, ಲೇಖನ ಕಲೆ-- ಮೊದಲಾದ ಅನೇಕ ಕಾರ್ಯಕ್ರಮಗಳಾಗುತ್ತವೆ.

ಕ್ರೈಸ್ಟ್ ಕಾಲೇಜ್‌ನ ಆಡಳಿತ ವರ್ಗದ ಹಿರಿಯರು ಮತ್ತು ಲೇಖಕ, ಪ್ರಾಧ್ಯಾಪಕ ಚಿ. ಶ್ರೀನಿವಾಸರಾಜು ಈ ಬೆಳ್ಳಿ ಕನ್ನಡ ಸಾಧನೆಗೆ ಅಭಿನಂದನಾರ್ಹರು. ಕನ್ನಡ ಭಾಷಾ ಶಿಕ್ಷಣ ಮತ್ತು ಸಾಹಿತ್ಯ ವಾತಾವರಣ ದೊಡ್ಡದಾಗಿ ಬೆಳೆಯಲು 'ಕ್ರೈಸ್ಟ್ ಕಾಲೇಜ್' ಆಶ್ಚರ್ಯವಾಗುವಷ್ಟು ಸೊಗಸಾಗಿ ಸೇವೆ ಸಲ್ಲಿಸುತ್ತಿರುವುದು ಎಲ್ಲರೂ ಮೆಚ್ಚುವಂಥ ಸಾಧನೆ. ಯಾರು ಬೇಕಾದರೂ ಅನುಸರಿಸುವಂಥದು.

*(ಕೃಪೆ : ತರಂಗ, 'ಅಕ್ಷತೆ' ಅಂಕಣ, ೨೨-೬-೧೯೭೭)*



# ಪರಂಪರೆಯ ಸಮರ್ಥ ಪ್ರತಿನಿಧಿ 'ಚಿನ್ನದ ಗೆರೆ'

● ಎನ್. ಉದಯಕುಮಾರ್

ಕನ್ನಡ ಸಾಹಿತ್ಯ – ಸಾಂಸ್ಕೃತಿಕ ಪರಂಪರೆಯ ಬೆಳವಣಿಗೆಯಲ್ಲಿ ಸೆಂಟ್ರಲ್ ಕಾಲೇಜು 'ಕರ್ಣಾಟಕ ಸಂಘ'ವು ಒಂದು ಮಹತ್ವದ ಹೆಜ್ಜೆ ಗುರುತು. ಸೃಜನಶೀಲ ಸಾಹಿತ್ಯ ಚಟುವಟಿಕೆಗಳಿಗೆ ಒತ್ತಾಸೆಯಾಗಿ ನಿಂತು ಕಾಲೇಜಿನ ಸಂಘವೊಂದು ಸಾಧಿಸಬಹುದಾದ ಎಲ್ಲ ಸಾಧ್ಯತೆಗಳನ್ನು ತೋರಿಸಿ, ಅರ್ಥಪೂರ್ಣ ಪರಂಪರೆಯನ್ನು ಹುಟ್ಟು ಹಾಕಿದ ಕೀರ್ತಿ ಅದರದು.

ಈ ಪರಂಪರೆಯನ್ನು ಆರಂಭಿಸಿದವರು ಡಾ. ಎ.ಆರ್. ಕೃಷ್ಣಶಾಸ್ತ್ರಿಗಳಾದರೂ, ಎಳವೆಯಲ್ಲೇ ಪ್ರತಿಭಾನ್ವಿತರನ್ನು ಗುರ್ತಿಸಿ, ಅವರ ವ್ಯಕ್ತಿತ್ವವು ಸೃಜನಶೀಲತೆಯ ಮೆರುಗು ಪಡೆಯುವಂತೆ ತಿದ್ದಿ–ತೀಡಿ ಒಂದು ಆಕೃತಿಗೆ ತರುವ ಕಲೆಗಾರಿಕೆಯನ್ನು ರೂಢಿಸಿದವರು ಡಾ. ಜಿ.ಪಿ. ರಾಜರತ್ನಂ.

ರಾಜರತ್ನಂರ ಗರಡಿಯಲ್ಲಿ ಪಳಗಿದ ಅನೇಕರು ಇಂದು ಕನ್ನಡ ಸಾಹಿತ್ಯದ ಪ್ರತಿಷ್ಠಿತ ಲೇಖಕರು. ಈ ಇತಿಹಾಸ ಪ್ರಸಿದ್ಧ ಕರ್ಣಾಟಕ ಸಂಘದ ಚಟುವಟಿಕೆಗಳು 'ಚಿನ್ನದ ಗೆರೆ' ಕವನ ಸಂಕಲನದ ಪ್ರಕಟಣೆಯೊಂದಿಗೆ ೧೯೬೭ರಲ್ಲಿ ಸ್ಥಗಿತಗೊಂಡವು. ಆದರೆ ಆ ಪರಂಪರೆಯ ಸಮರ್ಥ ಪ್ರತಿನಿಧಿಯಾಗಿ ಬೆಳಗುತ್ತಿರುವ 'ಚಿನ್ನದ ಗೆರೆ', ಬೆಂಗಳೂರಿನ 'ಕ್ರೈಸ್ಟ್ ಕಾಲೇಜ್ ಕನ್ನಡ ಸಂಘ'.



ಸಾಹಿತ್ಯಾಭಿರುಚಿ ಬೆಳೆಸುವ, ಉದಯೋನ್ಮುಖ ಬರಹಗಾರರಲ್ಲಿ ಉತ್ಸಾಹ ತುಂಬಿ, ಕಥೆ–ಕವನ ಬರೆಯಿಸುವ – ಪ್ರಕಟಿಸುವ ಹಾಗೂ ಅವರನ್ನು ಚಿಂತನೆಗೆ ಹಚ್ಚುವ ಕಾಯಕದಲ್ಲಿ ಕ್ರೈಸ್ಟ್ ಕಾಲೇಜ್ ಕನ್ನಡ ಸಂಘದ ಸಾಧನೆಯು ಸ್ಫೂರ್ತಿ ನೀಡಿದ ಕರ್ಣಾಟಕ ಸಂಘದ ಹಿರಿಮೆಗಿಂತ ಕಡಿಮೆಯೇನೂ ಅಲ್ಲ.

**ಯಾತ್ರೆ** : ಮೊಗಳ್ಳಿ ಗಣೇಶ್, ಅಬ್ದುಲ್ ರಷೀದ್, ನಟರಾಜ

ಹುಳಿಯಾರ್, ಪ್ರತಿಭಾ ನಂದಕುಮಾರ್, ತೇಜಸ್ವಿನಿ ನಿರಂಜನರಂಥ ತರುಣ ಲೇಖಕ – ಲೇಖಕಿಯರ ಸಾಹಿತ್ಯ ಯಾತ್ರೆ ಇಲ್ಲಿಂದಲೇ ಆರಂಭವಾದದ್ದು. ಪ್ರೊ. ಎ.ಎನ್. ಮೂರ್ತಿ ರಾಯರ 'ಸಮಗ್ರ ಲಲಿತ ಪ್ರಬಂಧಗಳು', ಡಾ. ಎಚ್. ನರಸಿಂಹಯ್ಯನವರ 'ತೆರೆದ ಮನ' ಸೇರಿದಂತೆ ಹಿರಿಯ – ಕಿರಿಯ ತಲೆಮಾರಿನ ಅನೇಕರ, ಸಾಹಿತ್ಯದ ಎಲ್ಲ ಪ್ರಕಾರಗಳನ್ನು ಪ್ರತಿನಿಧಿಸುವ ಮೌಲಿಕ ಕೃತಿಗಳನ್ನು ಪ್ರಕಟಿಸಿದೆ. ಇದರಲ್ಲಿ ಹಲವು ವಿವಿಧ ಪ್ರಶಸ್ತಿ – ಪುರಸ್ಕಾರಗಳಿಗೂ ಪಾತ್ರವಾಗಿವೆ.

ಕರ್ಣಾಟಕ ಸಂಘ ಎಂದೊಡನೆ ಅದಕ್ಕೆ ಜೀವಕಳೆ ತಂದ ರಾಜರತ್ನಂರ ನೆನಪಿನ ಸುರುಳಿ ಬಿಚ್ಚಿಕೊಳ್ಳುವಂತೆ ಕ್ರೈಸ್ಟ್ ಕಾಲೇಜ್ ಕನ್ನಡ ಸಂಘ ಎಂದಾಕ್ಷಣ ಅದರ ಜೀವಾಳವಾಗಿರುವ ಪ್ರೊ. ಚಿ. ಶ್ರೀನಿವಾಸರಾಜು ಅವರ ಚಿತ್ರ ಕಣ್ಣ ಮುಂದೆ ಸುಳಿಯುತ್ತದೆ. ಸ್ವತಃ ಕವಿಯೂ ನಾಟಕಕಾರರೂ ಆಗಿರುವ, ವೈಯಕ್ತಿಕವಾಗಿ ತಮ್ಮನ್ನು ಅಥವಾ ತಮ್ಮ ಕೃತಿಗಳನ್ನು ಎಂದೂ ಮುಂದುಮಾಡಿಕೊಳ್ಳದೆ, ವಾದ–ಪಂಥಗಳ ಗೊಡವೆಗೆ ಹೋಗದೆ ಹಿಂದೆ ನಿಂತು ಸಂಘವನ್ನು ಹೆಮ್ಮರವಾಗಿ ಬೆಳೆಸಿದ್ದಾರೆ ಶ್ರೀನಿವಾಸರಾಜು.

'ಈಗ ವಾಮನನಾಗಿರುವ ಕ್ರೈಸ್ಟ್ ಕಾಲೇಜ್ ಕನ್ನಡ ಸಂಘವು ಕಾಲಕ್ರಮದಲ್ಲಿ ತ್ರಿವಿಕ್ರಮನಾಗುವ ಬಗ್ಗೆ ಸಂದೇಹವಿಲ್ಲ' ಎಂಬ ರಾಜರತ್ನಂರ ಖಚಿತ ಭರವಸೆಯನ್ನು ಪ್ರೊ. ರಾಜು ಅತಿ ಕಡಿಮೆ ಕಾಲದಲ್ಲೇ ಈಡೇರಿಸಿದ್ದಾರೆ. ಕಾಲೇಜಿಗೇ ಸೀಮಿತವಾಗದೆ ಇಡೀ ಕರ್ನಾಟಕವನ್ನು ಸಂಘದ ಕರ್ಮಭೂಮಿಯನ್ನಾಗಿ ಸ್ವೀಕರಿಸಿ ಸದ್ದು–ಗದ್ದಲವಿಲ್ಲದೆ ಸಾಹಿತ್ಯ ಪರಿಚಾರಿಕೆಯ ಕೆಲಸವನ್ನು ಸಾರೋದ್ಧಾರವಾಗಿ ನಡೆಸಿಕೊಂಡು ಹೋಗುತ್ತಿದ್ದಾರೆ.

**ಮತ್ತೊಂದು ಗರಿ** : ಸಂಘದ ಹಿರಿಮೆಗೆ ವರಕವಿ ದ.ರಾ.ಬೇಂದ್ರೆ ಹುಟ್ಟಿದ ದಿನವಾದ ಜನವರಿ ೩೧ ರಂದು ಮತ್ತೊಂದು ಗರಿಮೂಡಲಿದೆ. ಕಾರಣ– ಅಂದು ಸಂಘದ ನೂರನೇ ಪುಸ್ತಕ ಬಿಡುಗಡೆ. ಇಲ್ಲಿ ಮೊದಲ ಪುಸ್ತಕ ಪ್ರಕಟಿಸಿದ ಅನೇಕರು ಇಂದು ಪ್ರಸಿದ್ಧರು. ಅವರಲ್ಲಿ ಖ್ಯಾತ ವಿಮರ್ಶಕ ಡಾ. ಎಚ್.ಎಸ್. ರಾಘವೇಂದ್ರರಾವ್ ಅವರೂ ಒಬ್ಬರು. ಕಾಕತಾಳೀಯ ಎಂಬಂತೆ ಎಚ್ಚೆಸ್ಸಾರ್ ಅವರ ಪಿಎಚ್.ಡಿ. ಪ್ರಬಂಧ 'ಹಾಡೆ ಹಾದಿಯ ತೋರಿತು' ಈಗ ನೂರನೇ ಪುಸ್ತಕವಾಗಿ ಬಿಡುಗಡೆ ಆಗುತ್ತಿದೆ.

ಸಂಘದ ಮೊದಲ ಕೃತಿ ಬಿಡುಗಡೆ ಮಾಡಿದ ಹಿರಿಯ ಕವಿ ಪ್ರೊ. ಜಿ.ಎಸ್. ಶಿವರುದ್ರಪ್ಪ ಅವರು ನೂರನೇ ಪುಸ್ತಕವನ್ನೂ ಬಿಡುಗಡೆ ಮಾಡುತ್ತಿದ್ದಾರೆ. ಅಂದು ಅಧ್ಯಕ್ಷತೆ ವಹಿಸಿದ್ದ ವಿಚಾರವಾದಿ ಡಾ.ಎಚ್. ನರಸಿಂಹಯ್ಯ ಅವರದೇ ಈಗಲೂ ಅಧ್ಯಕ್ಷತೆ.

ಬರೀ ಐನೂರು ರೂಪಾಯಿ ಬಂಡವಾಳದಿಂದ ಇಪ್ಪತ್ತೆರಡು ವರ್ಷಗಳ ಹಿಂದೆ ಸಂಘ ಆರಂಭವಾಯಿತು. ಅದೂ ಅಕಾಲ ಮರಣಕ್ಕೆ ತುತ್ತಾದ ಸಿ.ಕೆ ಲಕ್ಷ್ಮಣಗೌಡ ಎಂಬ ವಿದ್ಯಾರ್ಥಿಯ ನೆನಪಿನಲ್ಲಿ ಅವರ ಮನೆಯವರು ನೀಡಿದ ಕೊಡುಗೆ. ಆಗ ಪುಸ್ತಕ ಪ್ರಕಟಿಸಲು ಪ್ರಮುಖ ಲೇಖಕರು ಹಸ್ತಪ್ರತಿ ಕೊಡಲು ಹಿಂದು – ಮುಂದು ನೋಡಿದರು. ಕೊನೆಗೆ 'ಹಾಳಾಗಿ ಹೋಗಲಿ' ಎಂದು ಹಸ್ತಪ್ರತಿ ಕೊಟ್ಟವರು ಕ.ವೆಂ. ರಾಜಗೋಪಾಲರು. ಅವರ 'ನದಿಯ

ಮೇಲಿನ ಗಾಳಿ' ನಮ್ಮ ಮೊದಲ ಪ್ರಕಟಣೆ ಎಂದು ಶುರುವಿನ ದಿನಗಳನ್ನು ನೆನಯುತ್ತಾರೆ ಪ್ರೊ. ರಾಜು. ಈಗ ಕ್ರೈಸ್ಟ್ ಕಾಲೇಜು ಕನ್ನಡ ಸಂಘದಲ್ಲಿ ಕೃತಿ ಪ್ರಕಟಿಸುವುದು ಹೆಮ್ಮೆಯ ಸಂಗತಿ. ಎಷ್ಟೊಂದು ಅಂತರ.!

**ನೆನಪು :** 'ಓದುಗರನ್ನು ಸೃಷ್ಟಿಸಬೇಕು. ಪುಸ್ತಕಗಳೇ ಅವರ ಬಳಿ ಹೋಗಬೇಕು. ಹೊಸ ಬರಹಗಾರರನ್ನು ಹುಟ್ಟು ಹಾಕಬೇಕು" ಎಂಬ ಆಸೆಯಿಂದ ಸಂಘ ಸ್ಥಾಪನೆ ಆಯಿತು. ದುಡ್ಡು ರಕ್ತ ನಿಂತಲ್ಲೇ ನಿಂತರೆ ಆರೋಗ್ಯಕ್ಕೆ ಒಳ್ಳೆಯದಲ್ಲ ಎಂಬ ರಾಜರತ್ನಂರ ಮಾತಿನಂತೆ "ಬಂದ ಹಣವನ್ನೆಲ್ಲಾ ಪ್ರಕಟಣೆಯಲ್ಲಿ ತೊಡಗಿಸುತ್ತಿದ್ದೇವೆ. ಒಳ್ಳೆಯ ಕೆಲಸವನ್ನು ಮಾಡುತ್ತಿದ್ದರೆ ದುಡ್ಡು ತಾನಾಗಿಯೇ ಬರುತ್ತದೆ. ಪ್ರಾಮಾಣಿಕತೆ ಉಳಿಸಿಕೊಳ್ಳಬೇಕು ಅಷ್ಟೆ' ಎಂದು ಈ ಬಗ್ಗೆ ವಿನಮ್ರವಾಗಿ ನುಡಿಯುವ ಅವರು, ಕಾಲೇಜಿನ ಹಳೇ ವಿದ್ಯಾರ್ಥಿಗಳು, ಪ್ರಾಂಶುಪಾಲರ ತುಂಬು ಸಹಕಾರವನ್ನು ಸ್ಮರಿಸಲು ಮರೆಯುವುದಿಲ್ಲ.

ಕ್ರೈಸ್ಟ್ ಕಾಲೇಜ್ ಕನ್ನಡ ಸಂಘವು ಕರ್ನಾಟಕ ಸಂಘದ ನೆರಳಿನಂತೆ ಕಂಡರೂ ಇನ್ನೂ ವ್ಯಾಪಕ – ವಿಸ್ತೃತ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಅ.ನ.ಕೃ ನೆನಪಿನಲ್ಲಿ ೨೨ ವರ್ಷದಿಂದ ಅಂತರ್ ಕಾಲೇಜು ಲೇಖನ ಸ್ಪರ್ಧೆ, ಬೇಂದ್ರೆ ಸ್ಮರಣಾರ್ಥ ೧೩ ವರ್ಷಗಳಿಂದ ರಾಷ್ಟ್ರಮಟ್ಟದ ಕನ್ನಡ ಕವನ ಸ್ಪರ್ಧೆಯನ್ನು ಸತತವಾಗಿ ನಡೆಸಿಕೊಂಡು ಬರುತ್ತಿದೆ. ಸ್ಪರ್ಧೆಗಳಲ್ಲಿ ಆಯ್ಕೆಯಾದ ಲೇಖನ – ಕವನಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುತ್ತಿದೆ. ಕಾವ್ಯದ ಹುಚ್ಚು ಹತ್ತಿಸಿಕೊಂಡ ನಮ್ಮ ಬಹುತೇಕ ಯುವ ಜನರಿಗೆ ಕ್ರೈಸ್ಟ್ ಕಾಲೇಜು ಕನ್ನಡ ಸಂಘದ ಬಹುಮಾನ ಬಹು ಪ್ರತಿಷ್ಠಿತ !

ಬಹುಮಾನ ವಿತರಣಾ ಸಮಾರಂಭ ಪ್ರತಿ ವರ್ಷ ಬೇಂದ್ರೆ ಹುಟ್ಟು ಹಬ್ಬದಂದು ನಾಡಿನ ಹಿರಿಯ ಬರಹಗಾರರೊಬ್ಬರ ಮನೆಯಲ್ಲಿ ನಡೆಯುವುದು ವಾಡಿಕೆ. ಕುವೆಂಪು, ಬೇಂದ್ರೆ, ಮಾಸ್ತಿ, ಅಡಿಗ, ಕಾರಂತ, ಗೋಕಾಕ್ ಮೊದಲಾದವರ ಮನೆಗಳಲ್ಲಿ ಇಂಥ ಸಮಾರಂಭಗಳು ನಡೆದು ಹಳೆಯ – ಹೊಸ ತಲೆಮಾರಿನ ಬರಹಗಾರರ ಸಮಾಗಮಕ್ಕೆ ವೇದಿಕೆಯನ್ನು ಒದಗಿಸಿವೆ.

ಬೇಂದ್ರೆಯವರ ನಿಧನದ ನಂತರ ಅವರ ನೆನಪಿಗಾಗಿ **'ಬೇಂದ್ರೆ ನಮನ'** ವಿಶೇಷ ಉಪನ್ಯಾಸ ಮಾಲೆ ಏರ್ಪಡಿಸಿ ಈ ಉಪನ್ಯಾಸಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದೆ. ಹಾಗೆಯೇ ಪ್ರತಿ ತಿಂಗಳ ಹತ್ತರಂದು ನಗರದ ವಿವಿಧ ಕಾಲೇಜುಗಳಲ್ಲಿ **'ಕುವೆಂಪು ನಮನ'** ಎಂಬ ವಿಶೇಷ ಉಪನ್ಯಾಸ ಮಾಲೆಯನ್ನೂ ಈಗಾಗಲೇ ಆರಂಭಿಸಿದೆ.

ಕಾಲೇಜು ವಿದ್ಯಾರ್ಥಿಗಳಿಗಾಗಿ **'ನಾಟಕ ಅಭಿರುಚಿ ಕೇಂದ್ರ'**ವನ್ನು ತೆರೆದಿದ್ದು, ರಾಷ್ಟ್ರೀಯ ನಾಟಕ ಶಾಲೆ ಮತ್ತು ರಂಗಾಯಣದಲ್ಲಿ ತರಬೇತಿ ಪಡೆದ ತಜ್ಞರಿಂದ ತರಬೇತಿ ಕೊಡಿಸುತ್ತಿದೆ. ವರ್ಷದ ಕೊನೆಗೆ ನಾಟಕಗಳ ಪ್ರದರ್ಶನವೂ ಇರುವುದು. ಅಂತರ್ ಕಾಲೇಜು ನಾಟಕ ಸ್ಪರ್ಧೆಗಳಲ್ಲಿ ಕಳೆದ ಮೂರು ವರ್ಷಗಳಿಂದ ಸತತ ಪ್ರಶಸ್ತಿ ಗಳಿಸಿ ಕಾಲೇಜಿನ ತಂಡ ಹ್ಯಾಟ್ರಿಕ್ ಸಾಧಿಸಿದೆ.

ಗಮಕ, ಭಾವಗೀತೆ, ಸಮೂಹಗಾನ ತರಬೇತಿಗಾಗಿ **'ನಾದಲೀಲೆ ವೇದಿಕೆ'**, ವಿಚಾರ ಸಂಕಿರಣ, ಚರ್ಚೆ, ಲೇಖನ ಕಲೆ ರೂಢಿಸಿಕೊಳ್ಳಲು **'ಅನಿಕೇತನ ವೇದಿಕೆ'** ಹೀಗೆ ವೈವಿಧ್ಯಮಯ ಕಾರ್ಯಕ್ರಮಗಳು ಅದರವು.

**ಹೊಸ ಯೋಜನೆ** : 'ಜನಸಾಮಾನ್ಯರೂ ಕಲೆಯ ಬಗ್ಗೆ ತಿಳಿಯಲು ಅನುವಾಗುವಂತೆ ವರ್ಷಕ್ಕೆ ಐದರಂತೆ ಕಲೆಗೆ ಸಂಬಂಧಿಸಿದ ೧೦ ಪುಸ್ತಕಗಳನ್ನು ತರಲು ಯೋಜಿಸಿದ್ದೇವೆ. ಇದಕ್ಕೆ ಹಸ್ತ ಪ್ರತಿಗಳೂ ಸಿದ್ಧವಾಗುತ್ತಿವೆ. ಜೊತೆಗೆ ಜ್ಞಾನಪೀಠ ಪ್ರಶಸ್ತಿ ಗ್ರಂಥ ಮಾಲೆ ಆರಂಭವಾಗುವ ಸಿದ್ಧತೆಯಲ್ಲಿದೆ.

'ಅಲ್ಲದೇ ಕನ್ನಡದ ಕಣ್ವ ಬಿ.ಎಂ.ಶ್ರೀ. ಅವರಿಂದ ಓಡಿದು ಈ ಶತಮಾನದ ಕೊನೆಯವರೆಗಿನ ಕನ್ನಡ ಕವಿಗಳ ಸಾವಿರ ಅತ್ಯುತ್ತಮ ಕವನಗಳನ್ನು ಸಂಗ್ರಹಿಸಿ ೨೦೦೦ ಇಸವಿಗೆ ಪ್ರಕಟಿಸಬೇಕೆಂಬ ಉದ್ದೇಶವೂ ಇದೆ' ಎಂದು ಮಹಾತ್ವಾಕಾಂಕ್ಷೆಗಳನ್ನು ಮುಂದಿಡುತ್ತಾರೆ ರಾಜು ಅವರು.

ಹೊರಗಿನ ನೆರವಿಲ್ಲದೆ ತನ್ನಷ್ಟಕ್ಕೆ ತಾನೇ ಸಂಪನ್ಮೂಲಗಳನ್ನು ರೂಢಿಸಿಕೊಂಡು ಒಂದು ಅಕಾಡೆಮಿ ಮಾಡಬಹುದಾದ ಕೆಲಸಗಳನ್ನು ಖಾಸಗಿ ಕಾಲೇಜಿನ ಭಾಷಾ ಸಂಘವೊಂದು ಮಾಡಿ ತೋರಿಸಿರುವುದು ಹೆಗ್ಗಳಿಕೆಯೇ ಸರಿ.

ಮೇಷ್ಟ್ರುಗಳು ಸಮಯಕ್ಕೆ ಸರಿಯಾಗಿ ತರಗತಿಗಳಿಗೆ ಬಂದು ಶ್ರದ್ಧೆಯಿಂದ ಪಾಠ ಹೇಳಿದರೆ ಸಾಕು. ಅದೇ ಮಹಾ ಭಾಗ್ಯ ಅನ್ನುವ ಈಗಿನ ಸಂದರ್ಭದಲ್ಲಿ, ವೈಯಕ್ತಿಕ ಬದುಕು-ಬರಹ ಗಳನ್ನು ಬದಿಗೊತ್ತಿ ಇಷ್ಟೊಂದು ಚಟುವಟಿಕೆಗಳಿಗೆ ಹೆಗಲುಕೊಟ್ಟಿರುವ ಶ್ರೀನಿವಾಸರಾಜು ಅಂಥವರು ಬಹಳ ವಿರಳ. ರಾಜ್ಯದ ಪ್ರತಿ ಕಾಲೇಜಿನಲ್ಲೂ ಇಂಥ ಮೇಷ್ಟ್ರು ಹಾಗೂ ಸಂಘವೊಂದು ಇದ್ದಿದ್ದರೆ ಕನ್ನಡ ಸಾಹಿತ್ಯ-ಪ್ರಕಟಣಾ ಲೋಕ ಇನ್ನೆಷ್ಟು ಶ್ರೀಮಂತವಾಗುತ್ತಿತ್ತು?

*(ಪ್ರಜಾವಾಣಿ, ೩೦ ಜನವರಿ ೧೯೯೫)*



# ಮೆಚ್ಚುಗೆಯ ಹೂಮಳೆ

● ಹಾ.ಮಾ. ನಾಯಕ

ಈ ಶತಮಾನದ ಕನ್ನಡ ಭಾಷೆ ಸಾಹಿತ್ಯಗಳು ಕಂಡ ನವೋದಯ ದಲ್ಲಿ ಕರ್ನಾಟಕ ಸಂಘಗಳ ಪಾತ್ರ ಮಹತ್ವದ್ದು. ಈ ಸಂಘಗಳ ಕಲ್ಪನೆಗೆ ಕಾರಣರಾದವರು ಕನ್ನಡ ನವೋದಯದ ಹರಿಕಾರರಾದ ಬೆಳ್ಳಾವೆ ವೆಂಕಟನಾರಣಪ್ಪ, ಬಿ.ಎಂ. ಶ್ರೀಕಂಠಯ್ಯ, ಟಿ.ಎಸ್. ವೆಂಕಣ್ಣಯ್ಯ, ಎ.ಆರ್. ಕೃಷ್ಣಶಾಸ್ತ್ರಿ ಮೊದಲಾದವರು. ಆದರೆ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಒಂದು ಕರ್ನಾಟಕ ಸಂಘ ವನ್ನು ಸ್ಥಾಪಿಸಿ ಅದಕ್ಕೊಂದು ಸ್ವರೂಪವನ್ನು ಕೊಟ್ಟು ಚಟುವಟಿಕೆ ಗಳನ್ನು ಆರಂಭಿಸಿದ ಕೀರ್ತಿ ಎ.ಆರ್. ಕೃಷ್ಣಶಾಸ್ತ್ರಿಗಳಿಗೇ ಸಲ್ಲುತ್ತದೆ. ಆ ಸಂಘ, ಮೊತ್ತಮೊದಲನೆಯ ಕರ್ನಾಟಕ ಸಂಘ, ೧೯೧೮ರಲ್ಲಿ ಆರಂಭವಾಯಿತು. ಎಂಟು ವರ್ಷಗಳ ನಂತರ ೧೯೨೬ರಲ್ಲಿ ಮೈಸೂರು ಮಹಾರಾಜರವರ ಕಾಲೇಜಿನ ಕರ್ನಾಟಕ ಸಂಘ ಅಸ್ತಿತ್ವಕ್ಕೆ ಬಂತು. ಸಾರ್ವಜನಿಕ ಕ್ಷೇತ್ರದಲ್ಲಿ ರೂಪುಗೊಂಡ ಮೊದಲನೆಯ ಕರ್ನಾಟಕ ಸಂಘಗಳೆಂದರೆ ಒಂದು ರಾಯಚೂರಿನದು. ಇನ್ನೊಂದು ಶಿವಮೊಗ್ಗೆಯುದು. ಇವೆರಡೂ ಕ್ರಮವಾಗಿ ೧೯೨೮ ಮತ್ತು ೧೯೩೦ರಲ್ಲಿ ಅಸ್ತಿತ್ವಕ್ಕೆ ಬಂದವು; ಸ್ವಂತ ಕಟ್ಟಡಗಳನ್ನೂ ಹೊಂದಿ ಆ ಬಗೆಯ ಇತರ ಸಂಘಗಳಿಗೆ ಮಾದರಿ ಎನ್ನಿಸಿದವು: ಕನ್ನಡ ಚಟುವಟಿಕೆಗಳಿಗೆ ಸ್ಫೂರ್ತಿ ಎನ್ನಿಸಿದವು; ಪುಸ್ತಕ ಪ್ರಕಾಶನವೂ ಸೇರಿದಂತೆ ನಾನಾ ಬಗೆಯ ಕನ್ನಡ ಕೆಲಸಗಳನ್ನು ಹಮ್ಮಿಕೊಂಡವು. ಒಟ್ಟಿನಲ್ಲಿ ಕರ್ನಾಟಕ ಸಂಘ ಕೇವಲ ಒಂದು ಸಂಘವಾಗಿ ನಿಲ್ಲದೆ ಒಂದು ಭಾಷಿಕ ಹಾಗೂ ಸಾಂಸ್ಕೃತಿಕ ಚಳವಳಿಗೆ ಸಂಕೇತ ಎನ್ನಿಸಿತು!

ಪ್ರತಿಯೊಂದು ಊರಿನಲ್ಲಿ ಶಾಲೆ ಕಾಲೇಜುಗಳಲ್ಲಿ ಕರ್ನಾಟಕ ಸಂಘಗಳು ಸ್ಥಾಪನೆಗೊಳ್ಳುವುದು ಆ ದಿನಗಳ ಒಂದು ಅಗತ್ಯವೆನ್ನಿಸು ವಂತಾಯಿತು. ಅವೆಲ್ಲಕ್ಕೂ ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘವೇ ಮೇಲುಪಂಕ್ತಿಯಾಗಿತ್ತು. ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘ ಈಗ ಇತಿಹಾಸದ ಭಾಗವಾಗಿ ಹೋಗಿದ್ದರೂ, ಅದರ ಪ್ರೇರಣೆ

ಇನ್ನೂ ಅಲ್ಲಿ ಇಲ್ಲಿ ಕಾಣಿಸಿಕೊಂಡು, ಒಂದಲ್ಲ ಒಂದು ರೀತಿಯಿಂದ ಕುಡಿಯೊಡೆಯುತ್ತಿರುವುದು ಕುತೂಹಲದ, ಸಂತೋಷದ, ಸಮಾಧಾನದ ಸಂಗತಿ. ತಾಯಿಬೇರು ಎಷ್ಟು ಗಟ್ಟಿಯಾದುದು ಎಂಬುದನ್ನು ಇದು ತೋರಿಸುತ್ತದೆ. ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘ ಆರಂಭದಿಂದಲೇ ಪುಸ್ತಕ ಪ್ರಕಟಣೆಯನ್ನು ಕೈಗೆತ್ತಿಕೊಂಡಿತ್ತು; ಹಲವಾರು ಲೇಖಕರನ್ನು ಬೆಳಕಿಗೆ ತಂದಿತು. ಬೆಳಕಿಗೆ ಬರುತ್ತಿದ್ದವರನ್ನು ಗಟ್ಟಿಯಾಗಿ ಸ್ಥಾಪಿಸಿತು. ಆಧುನಿಕ ಕನ್ನಡದ ಚಿರಕೃತಿಗಳ ಪಟ್ಟಿಗೆ ಸೇರುವಂಥ ಕೆಲವು ಕೃತಿಗಳನ್ನು ಪ್ರಕಟಿಸಿದ್ದು ಆ ಕರ್ಣಾಟಕ ಸಂಘ ಮಾಡಿದ ಒಂದು ದೊಡ್ಡ ಕೆಲಸ. ಅದೇ ಬಗೆಯ ಕೆಲಸವನ್ನು ಮೈಸೂರಿನ ಮಹಾರಾಜ ಕಾಲೇಜಿನ ಕರ್ನಾಟಕ ಸಂಘ ಆರಂಭಿಸಿದರೂ, ಬೆಂಗಳೂರು ಸಂಘ ಮಾಡುತ್ತಿದ್ದ ಪ್ರಮಾಣದಲ್ಲಿ ಮಾಡಲಾಗಲಿಲ್ಲ. ಕೆಲವೇ ವರ್ಷಗಳಲ್ಲಿ ಸೆಂಟ್ರಲ್ ಕಾಲೇಜ್ ಕರ್ಣಾಟಕ ಸಂಘದ ಚಟುವಟಿಕೆಗಳೂ ತಣ್ಣಗಾದವು!

ಬಹುಮುಖ ಪ್ರತಿಭೆಯ ಜಿ.ಪಿ. ರಾಜರತ್ನಂ ಅವರು ೧೯೬೨ರಲ್ಲಿ ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಚಟುವಟಿಕೆಗಳಿಗೆ, ಮುಖ್ಯವಾಗಿ ಪುಸ್ತಕ ಪ್ರಕಾಶನಕ್ಕೆ, ಮರುಹುಟ್ಟು ಕೊಟ್ಟರೆಂದರೆ ಉತ್ಪ್ರೇಕ್ಷೆಯಾಗುವುದಿಲ್ಲ. ವಿದ್ಯಾರ್ಥಿಗಳನ್ನು ಬರೆವಣಿಗೆಗೆ ಪ್ರೋತ್ಸಾಹಿಸಿ, ಅವರಿಂದ ಬರೆಸಿ, ತಿದ್ದಿ, ಬೆಳಕಿಗೆ ತರುವುದರ ಜೊತೆಗೇ ಬಗೆಬಗೆಯ ಪುಸ್ತಕಗಳನ್ನೂ ಪ್ರಕಟಿಸಿ ಸಂಘದ ಹೆಸರನ್ನು ಕರ್ನಾಟಕದ ಮೂಲೆಮೂಲೆಗಳಿಗೂ ಪರಿಚಯಿಸಿದರು. ಹೊಸ ಪ್ರತಿಭೆಗಳಿಗೆ ರಾಜರತ್ನಂ ಶಕ್ತಿಯೂ, ಸ್ಫೂರ್ತಿಯೂ ಆದರು. ವಿಶ್ವವಿದ್ಯಾಲಯದ ಒಳಗಿನ ಮತ್ತು ಹೊರಗಿನ ಅನೇಕ ಸಂಘ ಸಂಸ್ಥೆಗಳಿಗೆ ಒಂದು ಮಾದರಿಯನ್ನು ಒದಗಿಸಿದರು. ಬೆಂಗಳೂರು, ಮೈಸೂರು ವಿಶ್ವವಿದ್ಯಾಲಯಗಳಲ್ಲಿ ಮಾತ್ರವಲ್ಲದೆ ಕರ್ನಾಟಕ, ಮಂಗಳೂರು ವಿಶ್ವವಿದ್ಯಾಲಯಗಳಲ್ಲಿಯೂ ಈ ಮಾದರಿ ಸ್ವೀಕೃತವಾಯಿತು. ಅನೇಕ ಕಾಲೇಜುಗಳ ಕರ್ನಾಟಕ ಸಂಘಗಳು ಅಥವಾ ಕನ್ನಡ ಸಂಘಗಳು ಗ್ರಂಥ ಪ್ರಕಾಶನವನ್ನು ಪ್ರಾರಂಭಿಸಿದ್ದವು. ಬೆಂಗಳೂರಿನ ಕ್ರೈಸ್ಟ್ ಕಾಲೇಜು, ಪುತ್ತೂರಿನ ಸೇಂಟ್‌ಫಿಲೋಮಿನ ಕಾಲೇಜು, ಉಡುಪಿಯ ಎಂ.ಜಿ.ಎಂ. ಕಾಲೇಜು, ಶೇಷಾದ್ರಿಪುರ ಕಾಲೇಜು ಮೊದಲಾದ ಸಂಸ್ಥೆಗಳು ಕೈಗೊಂಡ ಪ್ರಕಾಶನ ಕಾಯಕ ವಿಶೇಷ ಉಲ್ಲೇಖನಕ್ಕೆ ಅರ್ಹವಾದದ್ದು. ಇದರ ಫಲವಾಗಿ ಕನ್ನಡ ಪುಸ್ತಕೋದ್ಯಮದಲ್ಲಿ ಒಂದು ಹೊಸ ಅಧ್ಯಾಯವೇ ಆರಂಭವಾಯಿತೆಂದು ಹೇಳಬಹುದು. ವ್ಯಾಪಾರೀ ದೃಷ್ಟಿಯಿಂದ ಭಿನ್ನವಾದ ಹೊಸ ಮಾದರಿ ಯೊಂದು ಕಾಣಿಸಿಕೊಂಡಿತು. ಈ ಸಂಘಗಳು ಪ್ರಕಾಶನವನ್ನು ಆರಂಭಿಸಿದ ಮೇಲೆ ಸಾಹಿತ್ಯ ಮಹತ್ವದ, ಗಂಭೀರವಾದ ನಾನಾಕೃತಿಗಳು ಪ್ರಕಟವಾಗಲು ಅವಕಾಶ ತೆರೆಯಿತು. ವಾಣಿಜ್ಯ ದೃಷ್ಟಿಯ ಪ್ರಕಾಶಕರು ಮುಟ್ಟಲೂ ಹಿಂಜರಿಯುತ್ತಿದ್ದ ಎಷ್ಟೋ ಪುಸ್ತಕಗಳು ಬೆಳಕು ಕಾಣುವುದು ಸಾಧ್ಯವಾಯಿತು.

ಈ ಹೊತ್ತು ನಾನು ಇಲ್ಲಿ ಪ್ರಧಾನವಾಗಿ ಪ್ರಸ್ತಾಪಿಸಬೇಕಾದ ಇಂಥ ಒಂದು ಸಂಘವೆಂದರೆ ಬೆಂಗಳೂರಿನ ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘ. ಅದಕ್ಕೆ ನೆಪವಾಗಿರುವುದು, ಆ ಕಾಲೇಜಿನ ವಿದ್ಯಾರ್ಥಿ ಸಂಘ, ಈ ಕನ್ನಡ ಸಂಘದ ಗೌರವಾರ್ಥ ಪ್ರಕಟಿಸಿರುವ ಸದಾಶಯ ಸಂಚಿಕೆ 'ಆನಂದ' (ಸಂಪಾದಕರು : ಪ್ರೊಫೆಸರ್ ಎಚ್.ಆರ್. ರಾಮಕೃಷ್ಣರಾವ್; ಡೆಮ್ಮಿ ಆಕಾರದ ಪುಟಗಳು IV+133; 1991; ಬೆಲೆ–ಹದಿನೈದು ರೂಪಾಯಿ). ಇದೊಂದು ಹೊಸ ಬಗೆಯ ಪ್ರಯತ್ನ. ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘ ತನ್ನ ಐವತ್ತನೆಯ ಪ್ರಕಟಣೆಯಾದ ಪ್ರೊಫೆಸರ್

ಎ.ಎನ್. ಮೂರ್ತಿರಾಯರ 'ಸಮಗ್ರ ಲಲಿತ ಪ್ರಬಂಧಗಳು' ಪುಸ್ತಕವನ್ನು ಪ್ರಕಟಿಸಿದ ಸಂದರ್ಭದಲ್ಲಿ (೧೯೮೮), ಆ ಸವಿನೆನಪಿಗಾಗಿ ಹೊರ ತರಲು ಯೋಜಿಸಿದ್ದ ಗ್ರಂಥ. ಕಾರಣಾಂತರಗಳಿಂದ ಅದು ಆಗಲೇ ಪ್ರಕಟವಾಗಲಿಲ್ಲ. ಈಗ ಸಂಘದ ಎಪ್ಪತ್ತನೆಯ ಪುಸ್ತಕ ಪ್ರಕಟಗೊಳ್ಳುತ್ತಿರುವಾಗ ಓದುಗರ ಕೈಸೇರುತ್ತಿದೆ ! ಆನಂದವಾಗುವುದು ಮುಖ್ಯ. ಅದಕ್ಕೆ ಸಮಯದ ಕಟ್ಟು ಹಾಕುವ ಅಗತ್ಯವೇ ಇಲ್ಲ.

ಸಂಘದ ಐವತ್ತನೆಯ ಪುಸ್ತಕ ಪ್ರಕಟವಾದಾಗ ಅದರಲ್ಲಿ ಕಾಲೇಜಿನ ಪ್ರಾಂಶುಪಾಲರು ಬರೆದಿದ್ದರು; "ಕೇವಲ ಹದಿನೈದು ವರ್ಷಗಳಲ್ಲಿ ಐವತ್ತು ಪುಸ್ತಕಗಳನ್ನು ಪ್ರಕಟಿಸಿರುವುದು ಅಪೂರ್ವ ದುಡಿಮೆಯ ಸಾಧನೆ. ಆರ್ಥಿಕ ಸಹಾಯವನ್ನು ಸರ್ಕಾರದಿಂದಾಗಲಿ, ಅಕಾದೆಮಿಗಳಿಂದಾಗಲಿ, ಆಡಳಿತ ಮಂಡಳಿಯಿಂದಾಗಲಿ ಪಡೆಯದೆ ಸ್ವಂತ ಪರಿಶ್ರಮದಿಂದ 'ಕನ್ನಡ ಸಂಘ' ವಿಕಾಸಗೊಂಡಿರುವುದು ಇನ್ನೂ ದೊಡ್ಡ ಸಾಹಸ. ಬಹುಶಃ ಇಡೀ ದಕ್ಷಿಣ ಭಾರತದಲ್ಲೇ ಈಗ, ಒಂದು ಕಾಲೇಜಿನ ಭಾಷಾಸಂಘ – ಬೆಂಗಳೂರು ಸೆಂಟ್ರಲ್ ಕಾಲೇಜ್ ಕರ್ನಾಟಕ ಸಂಘವನ್ನು ಬಿಟ್ಟರೆ – ಐವತ್ತು ಪುಸ್ತಕಗಳನ್ನು ಪ್ರಕಟಿಸಿರುವುದು, ಪ್ರಕಟಣಾ ಪ್ರಪಂಚದಲ್ಲಿ ಅಪರೂಪದ ದಾಖಲೆ. ಇದು ಕಾಲೇಜಿಗೆ ಹೆಮ್ಮೆಯ ವಿಷಯ."

ಇದು ಕಾಲೇಜಿಗೆ ಮಾತ್ರವಲ್ಲ, ಕನ್ನಡಿಗರಿಗೇ ಹೆಮ್ಮೆಯ, ಅಭಿಮಾನದ ವಿಷಯ ಎಂದರೆ ತಪ್ಪಾಗುವುದಿಲ್ಲ. ಈ ಸಂದರ್ಭದ ನೆನಪಿಗೆ 'ಆನಂದ' ಪ್ರಕಟವಾಗಿರುವುದು ತುಂಬ ಉಚಿತವಾಗಿದೆ. ಈ ಮೂರು ನಾಲ್ಕು ವರ್ಷಗಳಲ್ಲಿ ಸಂಘ ಮತ್ತೆ ಇಪ್ಪತ್ತು ಪುಸ್ತಕಗಳನ್ನು ಪ್ರಕಟಿಸಿದೆ ಎನ್ನುವುದೂ ಸಂತೋಷದ ಸಂಗತಿಯೆ. ಒಂದು ಕಾಲೇಜು ಶೈಕ್ಷಣಿಕವಾಗಿ ಎಷ್ಟೇ ಒಳ್ಳೆಯ ಕೆಲಸ ಮಾಡುತ್ತಿದ್ದರೂ, ಅದರ ಪ್ರಸಿದ್ಧಿಗೆ ಅದರ ಪಠ್ಯೇತರ ಚಟುವಟಿಕೆಗಳೇ ಕಾರಣ ಎಂಬುದನ್ನು ಮರೆಯುವಂತಿಲ್ಲ. ಕ್ರೈಸ್ಟ್ ಕಾಲೇಜಿನ ಪ್ರಸಿದ್ಧಿಯಾದರೂ ಹೀಗೆ ಅದರ ವಿದ್ಯಾರ್ಥಿ ಸಂಘದ, ಕನ್ನಡ ಸಂಘದ, ಚಟುವಟಿಕೆಗಳನ್ನು ಆಧರಿಸಿದ್ದು. ಅದು ವರ್ಷವರ್ಷಕ್ಕೂ ಏರುಮುಖವಾಗಿರುವುದು ಗಮನಿಸಬೇಕಾದದ್ದು.

ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘ ಪ್ರಾರಂಭವಾಗಿ ಹತ್ತಿರ ಹತ್ತಿರ ಎರಡು ದಶಕಗಳು ಕಳೆದಿವೆ (ಡಿಸೆಂಬರ್ ೨೧, ೧೯೭೨). ಸಂಘ ತನ್ನ ಆರಂಭದಿಂದಲೇ, ವಿದ್ಯಾರ್ಥಿಗಳಿಗಾಗಿ, ದಿವಂಗತ ಅ.ನ. ಕೃಷ್ಣರಾಯರ ನೆನಪಿನಲ್ಲಿ ವಾರ್ಷಿಕ ಲೇಖನ ಸ್ಪರ್ಧೆಯೊಂದನ್ನು ಏರ್ಪಡಿಸಿಕೊಂಡು ಬಂದಿದೆ. ಮೊದಲು ಅದು ಬೆಂಗಳೂರು ವಿಶ್ವವಿದ್ಯಾಲಯದ ವ್ಯಾಪ್ತಿಗೇ ಸೀಮಿತವಾಗಿದ್ದರೂ ಈಗ ಅಖಿಲ ಕರ್ನಾಟಕದ ವ್ಯಾಪ್ತಿಗೆ ಬಂದಿದೆ. ಕವಿವರ ಬೇಂದ್ರೆಯವರು ಕೀರ್ತಿಶೇಷರಾದ ಮೇಲೆ (೧೯೮೧) ಸಂಘ ಅವರ ನೆನಪಿನಲ್ಲಿ ಕವಿತೆಗಳ ವಾರ್ಷಿಕ ಸ್ಪರ್ಧೆಯೊಂದನ್ನು ವ್ಯವಸ್ಥೆ ಮಾಡಿದೆ. ಇದರಿಂದ ಅನೇಕ ಯುವ ಲೇಖಕರು ಬೆಳಕಿಗೆ ಬಂದಿದ್ದಾರೆ; ಪ್ರೋತ್ಸಾಹ ಪಡೆದಿದ್ದಾರೆ; ಹೆಸರು ಗಳಿಸಿದ್ದಾರೆ. ಚಿಂತಾಮಣಿ ಕೊಡ್ಲೆಕೆರೆ, ನಟರಾಜ್ ಹುಳಿಯಾರ್, ಬಿ.ಎಸ್. ಗಾಯತ್ರಿ–ಮೊದಲಾದವರು ಈ ಸ್ಪರ್ಧೆಗಳಲ್ಲಿ ಪುರಸ್ಕೃತರಾದವರು. ಅಬ್ದುಲ್ ರಶೀದ್ ಎಂಬ ಪುರಸ್ಕೃತರೊಬ್ಬರು ಹೇಳುತ್ತಾರೆ, "ನನಗೆ ಕ್ರೈಸ್ಟ್ ಕಾಲೇಜ್ ಕನ್ನಡ ಸಂಘ ಅಂದರೆ ತುಂಬ ಇಷ್ಟ. ನಾಲ್ಕೈದು ವರ್ಷಗಳಿಂದ ಪ್ರತಿವರ್ಷ

ಬೇಂದ್ರೆ ಹುಟ್ಟಿದ ದಿನದಂದು ನಾವೆಲ್ಲ ಗಂಟುಮೂಟೆ, ಜೊತೆಗೆ ಕಪಿತೆ ಹೊತ್ತುಕೊಂಡು ಬೆಂಗಳೂರಿಗೆ ಹೋಗಿ ಬಹುಮಾನ ಪಡೆದು ಬರುತ್ತೇವೆ. ಒಂದು ರೀತಿಯ ರಾಜಾಶ್ರಯದ ಹಾಗೆ, ತಂದೆಯ ಪ್ರೀತಿಯ ಹಾಗೆ, ಆ ದಿನ ನಮ್ಮನ್ನು ಲಾಲಿಸಿ ಕಳಿಸುತ್ತದೆ. ಅಲ್ಲಿಂದ ಬರುವಾಗ ಜೊತೆಗೆ ಬಹುಮಾನ ಪಡೆದಿರುವ ಕವನಗಳ ಪುಸ್ತಕವನ್ನೂ ಊರಿಗೆ ತರುತ್ತೇವೆ. ನಮ್ಮ ಗೆಳೆಯರಿಗೆ, ಮನೆಗೆ, ಗುರುಗಳಿಗೆ ಹೆಮ್ಮೆಯಿಂದ ಅದನ್ನು ಹಂಚುತ್ತೇವೆ. ಇದು ಪ್ರತಿವರ್ಷ ಜನವರಿಯ ಕೊನೆಯಲ್ಲಿ ನಡೆಯುವ ಒಂದು ರೀತಿಯ ದೊಡ್ಡ ಹಬ್ಬದ ದಿವಸ. ನಾನಂತೂ ಆ ದಿನವನ್ನು ಕಾಯುತ್ತಿರುತ್ತೇನೆ." ಎಷ್ಟೊಂದು ಎಳೆಯ ಮನಸ್ಸುಗಳಲ್ಲಿ ಈ ಹಬ್ಬದ, ಸಂತೋಷದ, ಉತ್ಸವದ, ಉಲ್ಲಾಸದ ಸಡಗರ! ಇನ್ನೇನು ಬೇಕು?

ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘ ಅನೇಕ ಆದರ್ಶಗಳನ್ನು ಸ್ಥಾಪಿಸಿರುವ ಸಂಘ. ಈ ಸಂಘದ ಪದಾಧಿಕಾರಿಗಳನ್ನು ಚುನಾವಣೆಗಳ ಮೂಲಕ ಆರಿಸುವುದಿಲ್ಲ. ಆದ್ದರಿಂದ ಯಾವುದೇ ಮನಸ್ತಾಪಕ್ಕೂ ಅವಕಾಶವಿರುವುದಿಲ್ಲ. ಆಯಾ ವರ್ಷ, ಆಯಾ ತರಗತಿಗಳಲ್ಲಿ ಕನ್ನಡದಲ್ಲಿ ಹೆಚ್ಚು ಅಂಕಗಳನ್ನು ಪಡೆದವರು ಕನ್ನಡ ಸಂಘದ ಪ್ರತಿನಿಧಿಗಳಾಗುತ್ತಾರೆ. ಇದು ಎರಡು ದಶಕಗಳಿಂದಲೂ ಸುಗಮವಾಗಿ ನಡೆದುಕೊಂಡು ಬಂದಿರುವ ಆಯ್ಕೆಯ ವಿಧಾನ ! ಈ ಕಾಲೇಜಿನ ವಿದ್ಯಾರ್ಥಿಗಳು ನಡೆಸಿಕೊಂಡು ಬಂದಿರುವ 'ಸರಸ್ವತೀ ಪೂಜೆ'ಯಾದರೂ ವಿಶಿಷ್ಟವಾದದ್ದು. ಎರಡನೆಯ ವರ್ಷದ ಪಿಯುಸಿ ಹಾಗೂ ಪದವಿ ತರಗತಿ ವಿದ್ಯಾರ್ಥಿಗಳು ಯಾವ ಬಗೆಯ ಒತ್ತಾಯವೂ ಇಲ್ಲದೆ ತಮಗೆ ಸಾಧ್ಯವಾದಷ್ಟು ಹಣವನ್ನು ತಮ್ಮ ತರಗತಿಯ ಕನ್ನಡ ಪ್ರತಿನಿಧಿಗಳ ಕಡೆ ಕೊಡುತ್ತಾರೆ. ಹೀಗೆ ಸಂಗ್ರಹವಾಗುವ ಹಣದಿಂದ ಕಾಲೇಜಿನ ಪುಸ್ತಕಭಂಡಾರಕ್ಕೆ ಅಗತ್ಯವಾದ ಪುಸ್ತಕಗಳನ್ನು ಕೊಳ್ಳಲಾಗುತ್ತದೆ. ಈವರೆಗೆ ಹೀಗೆ ಹತ್ತು ಸಾವಿರ ರೂಪಾಯಿಗಳಿಗೂ ಹೆಚ್ಚಿನ ಮೌಲ್ಯದ ಪುಸ್ತಕಗಳನ್ನು ಕೊಳ್ಳಲಾಗಿದೆಯಂತೆ. ಈ ಹಣ ಯಾವುದೇ ಓಡಾಟ, ತಿಂಡಿ ತೀರ್ಥಗಳ ಕಾರಣಕ್ಕೆ ಖರ್ಚಾಗಿಲ್ಲ!

ಕನ್ನಡ ಸಂಘ ಅನೇಕ ಮೂಲಗಳ ನೆರವಿನಿಂದ ವಿವಿಧ ಮಾಲೆಗಳನ್ನು ತನ್ನ ಪ್ರಕಟಣೆಗಳನ್ನು ಹೊರತರುತ್ತಿದೆ. ಸಿ.ಕೆ. ಲಕ್ಷ್ಮಣಗೌಡ ಎಂಬೊಬ್ಬ ವಿದ್ಯಾರ್ಥಿ ತೀರಿಕೊಂಡಾಗ (೧೯೭೩), ಅವನ ತಾಯಿ ರುಕ್ಮಿಣಿಯಮ್ಮ ಎನ್ನುವವರು ಮಗನ ಹೆಸರಿನಲ್ಲಿ ಐನೂರು ರೂಪಾಯಿಗಳನ್ನು ಕೊಟ್ಟರು. ಅದೇ ಕನ್ನಡ ಸಂಘದ ಪ್ರಕಟಣೆಗಳಿಗೆ ಮೂಲಬಂಡವಾಳ ಆಯಿತು ! ಕ.ವೆಂ. ರಾಜಗೋಪಾಲ ಅವರ 'ನದಿಯ ಮೇಲಿನ ಗಾಳಿ' ಎಂಬ ಕವನಸಂಕಲನ ಮೊದಲನೆಯ ಪ್ರಕಟಣೆಯಾಗಿ ಸಿ.ಕೆ. ಲಕ್ಷ್ಮಣಗೌಡ ಸ್ಮಾರಕ ಗ್ರಂಥಮಾಲೆಯಲ್ಲಿ ಹೊರಬಂತು (೧೯೭೭). ಒಂದು ಪುಸ್ತಕದ ಪ್ರಕಟಣೆಯಿಂದಾದ ನಷ್ಟವನ್ನು ತುಂಬಿಕೊಳ್ಳಲು ಕಾಲೇಜಿನ ಪ್ರಿನ್ಸಿಪಾಲರೇ ಐನೂರು ರೂಪಾಯಿ ಸಹಾಯ ಮಾಡಿದ್ದುಂಟು ! ಆನಕೃ ಸ್ಮಾರಕ ಲೇಖನ ಸ್ಪರ್ಧೆಯ ಬರಹಗಳು 'ಡಾ॥ ಜಿ.ಪಿ. ರಾಜರತ್ನಂ ವಿದ್ಯಾರ್ಥಿ ವಿಕಾಸಮಾಲೆ'ಯ ಹೆಸರಿನಲ್ಲಿಯೂ, ಬೇಂದ್ರೆ ಸ್ಮೃತಿ ಕವನ ಸ್ಪರ್ಧೆಯ ಕವನಗಳು 'ಗೆಳೆಯರ ಬಳಗ ವಿದ್ಯಾರ್ಥಿ ವಿಕಾಸಮಾಲೆ'ಯ ಹೆಸರಿನಲ್ಲಿಯೂ ಸಂಗ್ರಹಗೊಂಡು ಪ್ರಕಟಗೊಳ್ಳುತ್ತವೆ. ಈ ಮಾಲೆಗಳಲ್ಲಿ ಇದುವರೆಗೆ ಕ್ರಮವಾಗಿ ೧೯ ಹಾಗೂ ೧೦ ಪುಸ್ತಕಗಳು ಪ್ರಕಟಗೊಂಡಿವೆ. 'ಗೆಳೆಯರ ಬಳಗ' ಎನ್ನುವುದು ನವೋದಯ ಸಾಹಿತ್ಯದ ಉತ್ಕರ್ಷಕ್ಕೆ ಕಾರಣವಾದ ಉತ್ತರ ಕರ್ನಾಟಕದ ಒಂದು ಸಾಹಿತ್ಯಕ ಬಳಗ!

ಹೀಗೆ ಇನ್ನೆಷ್ಟೋ ಬಗೆಯಿಂದ ಈ ಸಂಘ ಸಾಹಿತ್ಯಕ ಚಟುವಟಿಕೆಗಳಲ್ಲಿ ತೊಡಗಿದೆ. ನಾಡವರ ಮೆಚ್ಚುಗೆ, ಕೃತಜ್ಞತೆ ಗಳಿಸಿದೆ. ಇದಕ್ಕೆಲ್ಲ ಗೆಳೆಯರೂ, ತತ್ವಶಾಸ್ತ್ರಜ್ಞರೂ, ಮಾರ್ಗದರ್ಶಕರೂ ಆಗಿರುವವರು ಆ ಕಾಲೇಜಿನ ಕನ್ನಡ ವಿಭಾಗದ ಮುಖ್ಯ ಅಧ್ಯಾಪಕರಾಗಿರುವ ಚಿ.ಶ್ರೀನಿವಾಸರಾಜು. ಮಾತನಾಡದೆ ಕೆಲಸಮಾಡುವವರ ವಿರಳವರ್ಗಕ್ಕೆ ಸೇರಿದವರು ಅವರು. ಸಾಂಘಿಕ ಸಾಹಿತ್ಯ ಪರಿಚಾರಿಕೆಯಲ್ಲಿ ಅವರೀಗ ರಾಜರತ್ನಂ ಅವರ ನಿಜವಾದ ಉತ್ತರಾಧಿಕಾರಿಯಾಗಿದ್ದಾರೆ. ಅವರ ಪ್ರೀತಿಯ ಕನ್ನಡ ಸಂಘ ಐವತ್ತನೆಯ ಪುಸ್ತಕ ಪ್ರಕಟಿಸಿದಾಗ, ಆ ನೆನಪಿಗೆ ಸದಾಶಯ ಸಂಚಿಕೆಯೊಂದು ಪ್ರಕಟವಾಗಿರುವುದು ಅರ್ಥವತ್ತಾಗಿದೆ; ಸ್ತುತ್ಯರ್ಹ ವಾಗಿದೆ. ಅದು, ಅದರ ಸಂಪಾದಕರೇ ಹೇಳುವಂತೆ, ಮೆಚ್ಚುಗೆಯ ಹೂಮಳೆಯ ದಾಖಲೆ.

*(ತರಂಗ, 'ಸ್ವಗತ' ಅಂಕಣ, ೨೯ ಮಾರ್ಚ್ ೧೯೯೨)*



# ರಾಜು ಮೇಷ್ಟ್ರಿಗೆ, ಪ್ರೀತಿಯಿಂದ...

● ಎ.ಆರ್. ಮಣಿಕಾಂತ್

**ಈ**ವತ್ತಿಗೂ ಚಿತ್ರಗಳ ಮೂಲಕ, ಪತ್ರಗಳ ಮೂಲಕ, ವಾರಿಗೆಯ ಗೆಳೆಯ-ಗೆಳತಿಯರ ಪುಸ್ತಕಗಳ, ಮೆಚ್ಚು ಮಾತುಗಳ ಮೂಲಕವಷ್ಟೇ ಪರಿಚಯವಾಗಿರುವ 'ರಾಜು' ಮೇಷ್ಟ್ರಿಗೆ ನೂರು ನೆನಪು, ಸಾವಿರ ನಮಸ್ಕಾರ.

ಸರ್, ಮೊದಲೇ ಹೇಳಿದ ಹಾಗೆ-ಕಳೆದ ಎಂಟು ವರ್ಷಗಳಿಂದ ಇದೇ ಬೆಂಗಳೂರಲ್ಲಿ ನಾನಿದ್ದರೂ ತಿಂಗಳು ತಿಂಗಳೂ ಮಲ್ಲೇಶ್ವರ ೮ನೇ ಕ್ರಾಸ್‌ನ ಆ ತುದಿಯಿಂದ ಈ ತುದಿಯವರೆಗೆ ಅಡ್ಡಾಡುವುದು ನಿಜವೇ ಆಗಿದ್ದರೂ-ಅದೇ ಮಲ್ಲೇಶ್ವರದ ೧೧ನೇ ಕ್ರಾಸಿನಲ್ಲಿರೋ ನಿಮ್ಮನ್ನ ಈವತ್ತಿನವರೆಗೂ ನೋಡೋಕೆ ಸಾಧ್ಯವಾಗಲೇ ಇಲ್ಲ. ನಿಮ್ಮನ್ನ ಮುಖಾಮುಖಿ ನೋಡಿಲ್ಲ ಎಂಬ ಒಂದು ನೆಪ, ನಿಮ್ಮ ಮನೆಯ ಹೆಸರು, ಅದರ ಡೋರ್ ನಂಬರ್ರು, ಹನ್ನೊಂದನೆ ಕ್ರಾಸಿನೊಳಗೊಂದು ಕ್ರಾಸು, ಯಾವುದೋ ಮೈನು... ಇತ್ಯಾದಿ ಇತ್ಯಾದಿ ಕೂಡ ಗೊತ್ತಿಲ್ಲ ಅಂದುಕೊಂಡೇ ನಿಮಗೆ ಪತ್ರ ಬರೆದಿರಲಿಲ್ಲ. ಮೊನ್ನೆ ಈಟೀವಿಯ ಸುಧಾಶರ್ಮ, ಮಧ್ಯಪ್ರದೇಶದ ಊರೊಂದರಲ್ಲಿ ಮೇಷ್ಟ್ರಾಗಿರೋ ಮಿತ್ರ ವಾಸುದೇವ ನಾಡಿಗ್; ಮೆಜೆಸ್ಟಿಕ್ಕಿನ ಗದ್ದಲದಲ್ಲೇ ನುಸುಳಿ ಬಂದು 'ಹಾಯ್' ಎಂದು ಅಬ್ಬರಿಸುವ ವೆಂಕಟ್ರಮಣ.... ಈ ಮೂವರೂ ನಿಮ್ಮನ್ನು ಬಿಡದೆ ನೆನಪು ಮಾಡಿದರಲ್ಲ-ಅದೇ ನೆನಪಲ್ಲಿ ನಿಮಗೆ ಈ ಪತ್ರ...

ಸರ್, ಜನ ನಿಮ್ಮನ್ನ ಸಾಹಿತ್ಯ ಪರಿಚಾರಕ ಅಂತ ಕರೀತಾರೆ.... 'ಕನ್ನಡ ಸಂಘ'ದ ಶ್ರೀನಿವಾಸರಾಜು ಅಂತಾರೆ. ಕನ್ನಡ ಸಂಘದ ಪ್ರಬಂಧ ಸ್ಪರ್ಧೆ / ಕಾವ್ಯ ಸ್ಪರ್ಧೇಲಿ ಪಾಲ್ಗೊಂಡಿದ್ದ ನನ್ನವಾರಿಗೆ ಯವರು 'ನಮ್ ರಾಜು ಮೇಸ್ಟ್ರು' ಎಂದು ಇನ್ನಿಲ್ಲದ ಪ್ರೀತಿಯಿಂದ ಹೇಳಿ ನಿಂತಲ್ಲೇ ಒಂದು ಚೆಂದದ ಸಲಾಂ ಹೊಡೀತಾರೆ. ನನ್ನ ಥರಾನೇ ನಿಮ್ಮ ಕುರಿತು ಅರ್ಧಂಬರ್ಧ ತಿಳಿದಿರೋ ಮಂದಿ

ನಿಮ್ಮ ಹೆಸರ ಹಿಂದಿದೆಯಲ್ಲ– 'ಚಿ' ಎಂಬ ಇನೀಷಿಯಲ್ – ಅದನ್ನ ಚಿರಂಜೀವಿ ಅಂತಲೋ; ಚಿರಂತನ ಅಂತಲೋ; ಅದು ನಿಮ್ಮ ತಂದೆ ಹೆಸರು ಅಂತಲೋ; ನಿಮ್ಮೂರು ಚಿಕ್ಕಬಳ್ಳಾಪುರವನ್ನು ಸಂಕೇತಿಸುತ್ತೆ ಅಂತಲೋ ಅರ್ಥೈಸಿಕೊಳ್ತೀವಿ. ಹಿಂದೆಯೇ 'ರಾಜುಮೇಷ್ಟು' ನಮ್ಗೆ ಪರಿಚಯಾನೇ ಆಗ್ಲಿಲ್ಲವಲ್ಲ ಅಂತ ಯೋಚಿಸಿ ಯೋಚಿಸಿ ಒದ್ದಾಡ್ತೀವಿ. ಹೌದಲ್ವಾ ಸಾರ್? ಕ್ರೈಸ್ಟ್ ಕಾಲೇಜಿನಲ್ಲಿ ೧೯೭೭ರಿಂದ 'ಮೇಷ್ಟ್ರ' ಕೆಲಸ ಆರಂಭಿಸಿದ ನೀವು ಅಲ್ಲಿ ಕನ್ನಡ ಬೆಳೆಸಬೇಕು ಅಂದ್ಕೊಂಡು ಕನ್ನಡ ಸಂಘ ಆರಂಭಿಸಿದಿರಿ. ರಾಜ್ಯಮಟ್ಟದ ಅಂತರ ಕಾಲೇಜು ಪ್ರಬಂಧ ಸ್ಪರ್ಧೆ, ಕಾವ್ಯ ಸ್ಪರ್ಧೆಗಳನ್ನು ಏರ್ಪಡಿಸಿದಿರಿ. ಆ ದಿನಗಳಲ್ಲಿ ಒಬ್ಬರ ಹಿಂದೊಬ್ಬರು ಎಂಬಂತೆ ಎಚ್.ಎಸ್. ಶಿವಪ್ರಕಾಶ್, ಪ್ರತಿಭಾ ನಂದಕುಮಾರ್, ಎಸ್. ಮಂಜುನಾಥ್, ಟಿ.ಎನ್. ಸೀತಾರಾಂ, ಅಮರೇಶ ನುಗಡೋಣಿ, ಎಚ್.ಎಸ್. ರಾಘವೇಂದ್ರರಾವ್....ಮುಂತಾದವರು ಬರೀತಾ ಹೋದರೆ, ಅವರೆಲ್ಲ ಬರೆದದ್ದು ಕಾವ್ಯ / ವಿಮರ್ಶೆ ಎಂದು ಗೊತ್ತಿದ್ದರೂ ; ಉಳಿದೆಲ್ಲ ಪ್ರಕಾಶಕರೂ ಅವುಗಳನ್ನು ಮುಟ್ಟೋದಿಲ್ಲ ಅಂತ ತಿಳಿದಿದ್ರೂ ನೀವು ಅದೇ ಕನ್ನಡಸಂಘದ ವತಿಯಿಂದ ಅವುಗಳನ್ನು ಪ್ರಕಟಿಸಿದಿರಿ. ಪ್ರಕಟಿಸಿದ ಪುಸ್ತಕಗಳನ್ನ ಶ್ರದ್ಧೆಯಿಂದ ಮಾರಾಟ ಮಾಡಿದ್ರಿ, ಸ್ವತಃ ನೀವೇ ಲೇಖಕರಾಗಿದ್ರೂ ಬರೆಯೋದನ್ನ ಅಷ್ಟಕ್ಕೆ ನಿಲ್ಲಿಸಿ ಬೆಳಕಿಗೆ ಬಾರದೇ ಇದ್ದವರನ್ನ ಪರಿಚಯಿಸಲು ನಿಂತಿರಿ ನೋಡಿ – ನಿಮ್ಮನ್ನ ಕಂಡೊಡನೆಯೇ ಕೈಮುಗೀಬೇಕು ಅನ್ನಿಸೋದು ಅದೇ ಕಾರಣಕ್ಕೆ.

ಸರ್, ಹೊಗಳಿಕೆ ಅತಿಯಾಯ್ತು ಅಂತ ನೀವು ಕಂಪ್ಲೇಂಟು ಮಾಡೋದಕ್ಕಿಂತ ಮುಂಚೆ ನಾನೇ, ನನಗನ್ನಿಸಿದ್ದು ಹೇಳಿಬಿಡ್ತೀನಿ ಕೇಳಿ. ಇವತ್ತು 'ಹೊಗಳಿಕೆ' ಎಂಬ ನಾಲ್ಕಕ್ಷರದ ಪದ ಲಾಬಿ, ಗುಂಪುಗಾರಿಕೆ, ಚೇಲಾ, ಬಾಲಬಡುಕ ಎಂಬ ಹತ್ತಾರು ಅಪಾಯಕರ ಪರಿಕಲ್ಪನೆಗಳನ್ನು ಹುಟ್ಟು ಹಾಕ್ತಾ ಇದೆ. ಆದರೆ ಕೆಲವೊಮ್ಮೆ, ಕೆಲವು ವ್ಯಕ್ತಿಗಳನ್ನು ಕುರಿತು 'ಪ್ರಶಂಸಿಸುವುದು' ವ್ಯಕ್ತಿಗೇ ಸಲ್ಲಿಸುವ ನ್ಯಾಯ, ಜತೆಗೆ 'ಪ್ರಶಂಸಿಸದೇ ಸುಮ್ಮನಿರುವುದು' ಮನುಷ್ಯ ಸಂಸ್ಕೃತಿಗೆ ಮಾಡುವ ಅನ್ಯಾಯ ಎಂಬ ಮಾತಲ್ಲಿ ನನಗೆ ಗಟ್ಟಿ ನಂಬಿಕೆ. ಹಾಗಾಗಿಯೇ ಹೇಳಬೇಕು ಅನಿಸಿದ ಅಷ್ಟನ್ನೂ ಬಡಬಡಬಡ ಹೇಳಿಬಿಟ್ಟಿದೀನಿ.

* * * *

ಸಾರ್, ಕ್ರೈಸ್ಟ್ ಕಾಲೇಜಿನ ಅಂಗಳವನ್ನೇ ತಪೋ ಭೂಮಿಯನ್ನಾಗಿ ಮಾಡಿಕೊಂಡು ನೀವು ಪುಸ್ತಕ ಪ್ರಕಟಣೆಗೆ ನಿಂತಿರಲ್ಲ, ಆಗೊಮ್ಮೆ ಹಣದ ಮುಂಗಟ್ಟು ಎದುರಾಗಿ ನಿಮ್ಮ ಮನೆಯಾಕೆಯ ಒಡವೆಗಳನ್ನು ಬ್ಯಾಂಕಲ್ಲಿ ಇಟ್ಟಿರಂತೆ. ಕಾಲೇಜು, ಕಾವ್ಯ, ಪುಸ್ತಕಗಳ ಮಧ್ಯೆಯೇ ಕಳೆದಹೋಗ್ತಿದ್ದ ನಿಮಗೆ ಎಷ್ಟೋ ಬಾರಿ ಮಕ್ಕಳನ್ನ ಮುದ್ದು ಮಾಡೋಕೆ ಕೂಡ ಆಗ್ತಿರಲಿಲ್ಲವಂತೆ! ಚೆಂದದ್ದೊಂದು ಯಶಸ್ಸು ಪಡೀಬೇಕು ಅಂದುಕೊಂಡವರೆಲ್ಲ ಇಂಥ ತ್ಯಾಗ ಮಾಡಲೇಬೇಕಾಗ್ತದಾ ಸಾರ್? ಎಲ್ರೂ ಹೇಳ್ತೋದಿದೆ–ರಾಜು ಮೇಷ್ಟ್ರು ಈಗ ವಿಶ್ರಾಂತ ಜೀವನ ನಡೆಸ್ತಿದಾರೆ ಅಂತ. ದಿನೇ ದಿನೇ ವ್ಯಾವಹಾರಿಕದ ಚಿಪ್ಪೊಳಕ್ಕೆ ಸೇರಿ ಹೋಗ್ತಿರೋ ಬೆಂಗಳೂರನ್ನ ನೋಡಿದ ತಕ್ಷಣ ಛೇ, ನಮ್ಮ 'ರಾಜು' ಮೇಷ್ಟ್ರು ಒಂದು ಪ್ರಕಟಣೆ ಕೊಟ್ಟು ಯಾವುದೋ ನೆಪದಲ್ಲಿ ಒಂದು ಸಂವಾದ ಗೋಷ್ಠಿ ನಡೆಸಿದ್ದಿದ್ರೆ ಎಷ್ಟೊಂದು ಚೆನ್ನಾಗಿತ್ತಲ್ವ ಅನಿಸುತ್ತೆ. ಅದರ ಹಿಂದೆಯೇ ಚಿಕ್ಕಬಳ್ಳಾಪುರದಂಥ ಪುಟ್ಟ ಊರಲ್ಲಿ ಹುಟ್ಟಿ ಮೊದಲಿಗೆ ಬಿಎಸ್ಸಿ ಓದಿದ್ದರೂ, ಕಡೆಗೆ ಕನ್ನಡದ

ಮೇಲಿನ ಪ್ರೀತಿಯಿಂದ ಕನ್ನಡ ಸಾಹಿತ್ಯದಲ್ಲೇ ಎಂ.ಎ. ಮಾಡಿ ಕ್ರೈಸ್ಟ್ ಕಾಲೇಜಿನಲ್ಲಿ ಕೂತೇ ಇಡಿಯ ಕರ್ನಾಟಕದ ವಿದ್ಯಾರ್ಥಿಗಳಿಂದ 'ರಾಜು ಮೇಷ್ಟ್ರು' ಅಂತ ಕರೆಸಿಕೊಂಡ ನಿಮ್ಮ ಬಗ್ಗೆ ತುಂಬ ಪ್ರೀತಿಯೂ, ಗೌರವವೂ ಏಕಕಾಲಕ್ಕೆ ಉಂಟಾಗುತ್ತೆ.

ನಿಮಗೆ ಪತ್ರ ಬರೆಯೋಕೆ, ಶುರುವಿಡೋಕ್ಕಿಂತ ಮುಂಚೆ ಹೇಳಬೇಕು ಅಂದುಕೊಂಡಿದ್ದೇ ಬೇರೆ, ಬರೀತಾ ಬರೀತಾ ಹೇಳಿಬಿಟ್ಟದ್ದೇ ಬೇರೆ–ಅಷ್ಟಾದರೂ ನನಗೆ ಯಾವುದೋ ಸಮಾರಂಭ ದಲ್ಲಿ ಕೇಳಿದ್ದ ನಿಮ್ಮ ಮೆಲು ಮಾತು ನೆನಪಾಗಿ ಅದರ ಹಿಂದೆಯೇ ನನ್ನ ವಾರಿಗೆಯ ಎಲ್ಲರಿಗೂ ನೀವು ಕಾವ್ಯಗುರುವಾಗಿ ಬೆನ್ನ ತಟ್ಟಿದ ಸಂದರ್ಭ ಬಿಟ್ಟೂ ಬಿಡದೆ ನೆನಪಾಗುತ್ತದೆ. ಅದನ್ನೆಲ್ಲ ಪದೇ ಪದೆ ನೆನೆಯುತ್ತ ಸಾರ್ ನೀವು ಗ್ರೇಟ್, ಗ್ರೇಟ್, ಗ್ರೇಟ್ ಎಂದಷ್ಟೇ ಹೇಳಿ ಪತ್ರ ಮುಗಿಸ್ತೀನಿ.

ನಮಸ್ಕಾರ

*(ವಿಜಯಕರ್ನಾಟಕ, ಅಂಕಣ ಬರಹ)*



# ಮೌನದಲಿ ಮಾತ ಹುಡುಕಿದವರು

● ಎಸ್.ಎಸ್. ಶ್ರೀಧರಮೂರ್ತಿ

ಪುಸ್ತಕ ಪ್ರಕಾಶಕರಿಗೆ ಹೆಸರಿರುವ ಲೇಖಕರು ಬೇಕು, ಪತ್ರಿಕೆಗಳಿಗೆ ಪ್ರಸಾರ ಸಂಖ್ಯೆ ಹೆಚ್ಚಿಸಲು ಬೇಕಾದ ಸುದ್ದಿ ಬೇಕು. ಸಿನಿಮಾಕ್ಕೆ ಗೆಲ್ಲಿಸಿಕೊಡುವ ನಾಯಕ ಬೇಕು... ಹೀಗೆ ಎಲ್ಲೆಡೆ ಗೆಲ್ಲುವ ಕುದುರೆಗಳನ್ನು ಹುಡುಕುವವರೇ, ಅದರಿಂದಲೇ ಗೆಲುವು... ಮನ್ನಣೆ. ಆದರೆ ಮಾತಿಲ್ಲದಡೆ ಮಾತನ್ನು ಹುಡುಕಿ ಅದನ್ನು ಕಾವ್ಯವಾಗಿ ಕಟ್ಟಿದ ಅಪರೂಪದ ಮೇಷ್ಟ್ರು ಜಿ.ಶ್ರೀನಿವಾಸರಾಜು, ಅವರನ್ನು ಮೇಷ್ಟ್ರು ಎಂದು ಕರೆಯುವ ಶೇ.೯೦ರಷ್ಟು ಮಂದಿಗೆ ಅವರು ನೇರವಾಗಿ ಮೇಷ್ಟ್ರು ಆದವರೂ ಅಲ್ಲ. ಆದರೆ ಆ ಶಬ್ದದ ನೈಜತೆಯನ್ನು ಮನನ ಮಾಡಿ ಕೊಟ್ಟವರು...

* * * *

೨೧ ಡಿಸೆಂಬರ್ ೧೯೭೩ರಂದು ಕ್ರೈಸ್ಟ್ ಕಾಲೇಜ್ ಕನ್ನಡ ಸಂಘ ಪ್ರಾರಂಭವಾಯಿತು. ಆ ಹೊತ್ತಿಗೆ ಕನ್ನಡ ಸಾಹಿತ್ಯ ಸಂಕ್ರಮಣ ಸ್ಥಿತಿಯಲ್ಲಿತ್ತು. ಕೆಲವರ ಬಗ್ಗೆ ಕೆಲವರೇ ಬರೆದದ್ದನ್ನು ಹಲವರು ಓದುವ ಯುಗವೆಂದು ಆರಂಭವಾಗಿ ಶ್ರೇಷ್ಠತೆಯ ವ್ಯಸನ ಎಲ್ಲಾ ಕ್ಷೇತ್ರಗಳನ್ನು ಆಕ್ರಮಿಸಿತ್ತು. ಶ್ರೀನಿವಾಸರಾಜು ಅವರಿಗೆ ಇದ್ದದ್ದು ರಾಜರತ್ನಂ ಪ್ರೇರಣೆ. ೧೯೬೯ರಲ್ಲಿ ಸೆಂಟ್ರಲ್ ಕಾಲೇಜಿನ "ಕನ್ನಡ ಸಂಘ" ಚಿನ್ನದಗೆರೆ ಎಂಬ ಕವನ ಸಂಕಲನದ ಪ್ರಕಟಣೆಯೊಂದಿಗೆ ಸ್ಥಗಿತವಾಗಿತ್ತು. ನಾಡಿನ ಬಹುತೇಕ ಕನ್ನಡ ಸಂಘಗಳು ಆಗ ಮೌನವೇ ಲೇಸು ಎನ್ನುವಂತಿದ್ದವು. ವಿಶ್ರಾಂತರಾಗಿದ್ದ ರಾಜರತ್ನಂ ನಿಲ್ಲಿಸಿದ್ದ ಬಿಂದುವಿನಿಂದಲೇ ಆರಂಭಿಸಿದ ಶ್ರೀನಿವಾಸರಾಜು ಅವರು ಯುವ ಬರಹಗಾರರ ಸಾಹಿತ್ಯ ಸೃಷ್ಟಿಗೆ ಒತ್ತಾಸೆಯಾಗಿ ನಿಲ್ಲುವುದು, ಉತ್ತಮ ಅಭಿರುಚಿ ನಿರ್ಮಾಣ ಮಾಡುವುದು ಜೊತೆಗೆ ಕನ್ನಡ ಸಾಂಸ್ಕೃತಿಕ ಕ್ಷೇತ್ರವನ್ನು ಉತ್ತಮಗೊಳಿಸುವುದು ಮುಂತಾದ ಉದಾತ್ತ ಧ್ಯೇಯಗಳೊಂದಿಗೆ ಕನ್ನಡ ಸಂಘ ಪ್ರಾರಂಭಿಸಿದರು.



ಕ.ವೆಂ.ರಾಜಗೋಪಾಲ್ ಅವರ "ನದಿಯ ಮೇಲಿನ ಗಾಳಿ" ಸಂಘದಿಂದ ಪ್ರಕಟವಾದ ಮೊದಲ ಪುಸ್ತಕ. ಗಾಳಿ ಚೆನ್ನಾಗಿ ಬೀಸಿದ್ದರಿಂದ ಚಿಗುರೊಡೆದು ಹೆಮ್ಮರವಾಗಿ ಕನ್ನಡ ಸಾಹಿತ್ಯ ನಳನಳಿಸುವಂತಾಯಿತು. ಆರಂಭದಲ್ಲಿ ಸೃಜನಶೀಲ ಸಾಹಿತ್ಯಕ್ಕೆ ಒತ್ತು ನೀಡುತ್ತಿದ್ದ ಸಂಘದ ಪ್ರಕಟಣೆಯ ಹರಹು ದಿನ ಕಳೆದಂತೆ ವಿಸ್ತರಿಸುತ್ತಾ ಹೋಯಿತು. ವೈಚಾರಿಕ ಸಾಹಿತ್ಯ, ಅನುವಾದ ಸಾಹಿತ್ಯವಲ್ಲದೆ ಅನ್ಯಭಾಷೆಯ ಕೃತಿಗಳೂ ಸಂಘದ ಪ್ರಕಟಣೆಗಳಲ್ಲಿ ಸೇರಿದವು. ಸದಾ ಪ್ರಯೋಗಶೀಲರಾದ ರಾಜು ಅನ್ಯಭಾಷೆಯ ಕೃತಿಗಳು ಕನ್ನಡಕ್ಕೆ ಲಭ್ಯವಾಗಬೇಕೆಂಬ ಸದಾಶಯದಿಂದ ರೂಪಿಸಿದ "ಜ್ಞಾನಪೀಠ ಪ್ರಶಸ್ತಿ ಗ್ರಂಥಮಾಲೆ" ಬಹುಮುಖ್ಯ ಪುಸ್ತಕಗಳನ್ನು ಕನ್ನಡಕ್ಕೆ ಕೊಟ್ಟಿತ್ತು. ನಿವೃತ್ತರಾಗುವ ವರ್ಷ ಅವರು ರೂಪಿಸಿದ ವಿದ್ಯಾರ್ಥಿಗಳ ಪುಸ್ತಕ ವಿದ್ಯಾರ್ಥಿಗಳೇ ಸಂಪಾದಿಸುವ ಪ್ರಯೋಗ ಅವರ ವಿಭಿನ್ನ ಅಭಿರುಚಿಗೆ ಸಾಕ್ಷಿಯಾಗಿತ್ತು.

ಶ್ರೀನಿವಾಸರಾಜು ಅವರ ಹೆಗ್ಗಳಿಕೆ ಇರುವುದು ಹಾಗೆ ನೋಡಿದರೆ ಇನ್ನೂರಕ್ಕೂ ಹೆಚ್ಚು ಪುಸ್ತಕಗಳನ್ನು ಪ್ರಕಟಿಸುವುದರಲ್ಲಿ ಅಲ್ಲ; ಪುಸ್ತಕ ಪ್ರಕಟಣೆ ಜೊತೆಗೆ ಎಳೆ ಪ್ರತಿಭೆಗಳನ್ನು ಅವರು ಪೋಷಿಸಿದರು. ಇಂದಿನ ಬಹುತೇಕ ಯುವ ಪ್ರತಿಭಾವಂತರು ಒಂದಲ್ಲ ಒಂದು ರೀತಿ ಶ್ರೀನಿವಾಸರಾಜು ಅವರ ಮಾರ್ಗದರ್ಶನಕ್ಕೆ ಒಳಗಾದವರೇ. ೧೯೭೩ ರಿಂದ ಅ.ನ.ಕೃ ನೆನಪಿನಲ್ಲಿ ಲೇಖನ ಸ್ಪರ್ಧೆಯನ್ನು ೧೯೮೧ರಲ್ಲಿ ಬೇಂದ್ರೆ ನೆನಪಿನಲ್ಲಿ ಕವನ ಸ್ಪರ್ಧೆಯನ್ನು ಆರಂಭಿಸಿದ್ದು ಮಾತ್ರವಲ್ಲ ಅದನ್ನು ನಿರಂತರವಾಗಿ ನಡೆಸಿಕೊಂಡು ಬಂದರು. ಅವನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುವುದರ ಮೂಲಕ "ಗ್ರಂಥದಾನ"ಕ್ಕೆ ಹೊಸ ರೂಪ ನೀಡಿದರು. ಇಷ್ಟೇ ಅಲ್ಲ ಬಹುಮಾನ ವಿತರಣಾ ಕಾರ್ಯಕ್ರಮವನ್ನು ಶಿವರಾಮ ಕಾರಂತ, ಕುವೆಂಪು, ಬೇಂದ್ರೆ, ಮಾಸ್ತಿ, ಗೋಕಾಕ್, ಅಡಿಗ, ಪು.ತಿ.ನ, ರಾಶಿ ಮುಂತಾದವರ ಮನೆಯಲ್ಲೇ ನಡೆಸಿ ಹೊಸ ಚಿಗುರುಗಳು ಹಳೇ ಬೇರಿನ ಸಂಪರ್ಕ ಪಡೆಯುವಂತೆ ಮಾಡಿದರು. ಈ ಕಾರ್ಯ ಎಳೆ ಪ್ರತಿಭೆಗಳಲ್ಲಿ ಭಾವನಾತ್ಮಕ ಧನ್ಯತೆ ಹುಟ್ಟಿಸಿದ್ದಲ್ಲದೆ, ಹಿರಿಯ ಬರಹಗಾರರ ಕುರಿತು ಅಂತರ ಕಡಿಮೆ ಮಾಡಿಕೊಳ್ಳುವಂತೆ ಮಾಡಿತು. ಇದು ಅವರಲ್ಲಿ ಮುಖ್ಯವಾಗಿ ಗ್ರಾಮಾಂತರ ಪ್ರದೇಶದಿಂದ ಬಂದ ಪ್ರತಿಭಾವಂತರಲ್ಲಿ 'ಕೀಳರಿಮೆ' ದೂರವಾಗಿ ಅವರು ಸಾಹಿತ್ಯ ಕ್ಷೇತ್ರದಲ್ಲಿ ದಿಟ್ಟತನದಿಂದ ಹೆಜ್ಜೆ ಇಡುವಂತಾಯಿತು. ಇಂದು ನಾವು ಕಾವ್ಯ ಕ್ಷೇತ್ರದಲ್ಲಿ ಮುಖ್ಯರಾದವರೆಂದು ಗುರುತಿಸಬಹುದಾದ 'ಅಬ್ದುಲ್ ರಶೀದ್, ಮಮತಾ ಜಿ. ಸಾಗರ, ಚಿಂತಾಮಣಿ ಕೊಡ್ಲೆಕೆರೆ, ರಾಮಲಿಂಗಪ್ಪ ಟಿ. ಬೇಗೂರು, ವಿಕ್ರಮ ವಿಸಾಜಿ, ಉಗಮ ಶ್ರೀನಿವಾಸ್, ಟಿ.ಯಲ್ಲಪ್ಪ, ಎಂ.ಆರ್.ಭಗವತಿ, ಸುಧಾಶರ್ಮ, ವೆಂಕಟರಮಣ ಗೌಡ, ಕವಿತಾರೈ, ಭಾಷ್ಯಗೂಳ್ಳಂ, ಆನಂದ ಋಗ್ವೇದಿ, ಎನ್.ಕೆ ಹನುಮಂತಯ್ಯ ಮುಂತಾದ ಅನೇಕರು ಬೆಳಕಿಗೆ ಬಂದಿದ್ದೇ ಕ್ರೈಸ್ಟ್ ಕಾಲೇಜ್ ಸ್ಪರ್ಧೆಗಳಿಂದ. ಗಮನಿಸಬೇಕಾದ ಅಂಶಗಳೆಂದರೆ, ಒಂದು ಸ್ಪರ್ಧಾತ್ಮಕ ಚೌಕಟ್ಟಿನಿಂದ ದೂರ ಬಂದವರೆಲ್ಲ ಸಾಹಿತ್ಯಿಕವಾಗಿ ಒಂದೇ ನೆಲೆಯಲ್ಲಿರುವುದು ಸಾಮಾನ್ಯ ಸಂಗತಿ. ಸೈದ್ಧಾಂತಿಕವಾಗಿಯೂ ಅವರಲ್ಲಿ ಏಕರೂಪತೆ ಇರುವುದು ಹೆಚ್ಚು. ಆದರೆ ಈ ಕವಿಗಳ ಪಟ್ಟಿ ಗಮನಿಸಿದರೆ, ಇವರೆಲ್ಲ ವಿಭಿನ್ನ ನೆಲೆಗಳಲ್ಲಿ ಚಿಮ್ಮಿರುವುದು ಗೊತ್ತಾಗುತ್ತದೆ. ಮತ್ತು ಆತ್ಮವಿಶ್ವಾಸದಿಂದಲೂ, ಬಹುಮುಖಿ ದಿಕ್ಕಿಗೆ ನಡೆದಿರುವುದು ತಿಳಿಯುತ್ತದೆ. ಎಷ್ಟೋ ಜನ ಬರಹದ ಬೇರೆ ನೆಲೆಗಳಿಗೆ ಚಲಿಸಿ ಗೆದ್ದಾಗಲೂ ಅವರಿಗೆ ಆತ್ಮವಿಶ್ವಾಸ ತಂದುಕೊಟ್ಟದ್ದು

ಈ ಸ್ಪರ್ಧೆಗಳು ಮೂಡಿಸಿದ ಆತ್ಮವಿಶ್ವಾಸ. ಇಂತಹದರ ಕೊರತೆ ಕಾಣಿಸಿದಾಗ ಸ್ವತಃ ಮೇಷ್ಟ್ರು ಅವರ ಸಂಕಲನವನ್ನು ಕ್ರೈಸ್ಟ್ ಕಾಲೇಜಿನಿಂದ ತಂದು ಬೆನ್ನು ತಟ್ಟಿದ್ದಾರೆ. ಇಂತಹ ಉದಾಹರಣೆ ಬಹುಶಃ ಕನ್ನಡ ಸಾಹಿತ್ಯದಲ್ಲಿ ಇನ್ನೊಂದು ಸಿಗಲಾರದು.

ಕ್ರೈಸ್ಟ್ ಕಾಲೇಜು ನಡೆಸುವ ಲೇಖನ ಸ್ಪರ್ಧೆ ಕೇವಲ ವಿಮರ್ಶಕರನ್ನು ಮಾತ್ರವಲ್ಲದೇ ಕಥೆಗಾರರನ್ನು ನಾಡಿಗೆ ನೀಡಿದ್ದಲ್ಲದೆ ಬೇರೆ ಕ್ಷೇತ್ರಕ್ಕೂ ಸಾಧಕರನ್ನು ನೀಡಿದೆ. ಇದಕ್ಕೆ ಆ ಸ್ಪರ್ಧೆಯ ಮುಕ್ತತೆಯೇ ಮುಖ್ಯವಾದ ಕಾರಣ. ಅಮರೇಶ್ ನುಗಡೋಣಿ, ಮೊಗಳ್ಳಿ ಗಣೇಶ್ ನಾಡಿನ ಬಹಳ ಮುಖ್ಯವಾದ ಕಥೆಗಾರರಾಗಿ ಬೆಳೆದಿದ್ದಾರೆ. ರವಿಕುಮಾರ್ ಕಾಶಿ ನಾಡಿನ ಪ್ರಮುಖ ಕಲಾವಿದರಾಗಿದ್ದಾರೆ. ಸಿ.ಪಿ.ರವಿಕುಮಾರ್ ಸಂಪೂರ್ಣ ವಿಭಿನ್ನ ಮಾದರಿಗೆ ಹೆಸರಾಗಿದ್ದಾರೆ. ಚ.ಹ.ರಘುನಾಥ್, ಎಸ್. ಬಾಗೇಶ್ರೀ, ಉಗಮ ಶ್ರೀನಿವಾಸ್, ಮಹೇಶ್ ದೇವಶೆಟ್ಟಿ, ವೆಂಕಟ್ರಮಣ ಗೌಡ ಮುಂತಾದವರು ಯಶಸ್ವಿ ಪತ್ರಕರ್ತರಾಗಿದ್ದಾರೆ. ಸುನೀತಾ ಎಚ್.ಡಿ ಅಂಕಣಗಾರ್ತಿಯಾಗಿ ಕೆಲಸ ಮಾಡಿದರೆ, ಪಿ.ಚಂದ್ರಿಕಾ ಕಿರುತೆರೆ ಬರವಣಿಗೆಯಲ್ಲಿ ಗೆದ್ದಿದ್ದಾರೆ. ಆನಂದ ಋಗ್ವೇದಿ ನಾಟಕಕ್ಕಾಗಿ ಅಕಾಡಮಿ ಬಹುಮಾನ ಪಡೆದಿದ್ದಾರೆ. ಹೀಗೆ ಗಮನಿಸಿದರೆ ವ್ಯಾಪ್ತಿ ಅತ್ಯಂತ ವಿಶಾಲವಾಗಿರುವುದು ಗೋಚರವಾಗುತ್ತದೆ. ಇದೆಲ್ಲದರ ಯಶಸ್ಸು ಶ್ರೀನಿವಾಸರಾಜು ಅವರಿಗೇ ಸಲ್ಲುತ್ತದೆ ಎನ್ನುವಲ್ಲಿ ಯಾವ ಅತಿಶಯೋಕ್ತಿಯು ಇಲ್ಲ. ಅವರ ಯಶಸ್ಸು ಇರುವುದು ಕೇವಲ ಸ್ಪರ್ಧೆನಡೆಸುವುದರಲ್ಲಿ ಅಲ್ಲ... ಅದರ ಮೂಲಕ ಪ್ರತಿಭಾವಂತರನ್ನು ಹುಡುಕಿ ವಿಸ್ತಾರವಾದ ಸ್ಪರ್ಧಾತ್ಮಕ ಯುಗಕ್ಕೆ ಕೆಚ್ಚೆದೆಯಿಂದ ತೆರಳುವಂತೆ ಮಾಡುವುದರಲ್ಲಿ. ಕ್ರೈಸ್ಟ್ ಕಾಲೇಜು ಸ್ಪರ್ಧೆಗಳು ಈ ಅರ್ಥದಲ್ಲಿ ಟೇಕ್ ಆಫ್ ಪಾಯಿಂಟ್‌ಗಳಾಗಿ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಚಾರಿತ್ರಿಕ ಮಹತ್ವ ಪಡೆದಿವೆ. ಸ್ಪರ್ಧೆಯಲ್ಲಿ ಗೆದ್ದವರ ಪಟ್ಟಿ ಎಷ್ಟು ದೊಡ್ಡದಿದೆ ಎಂದರೆ, ಬರೆಯುತ್ತಾ ಹೋದರೆ ಅದೇ ಒಂದು ಲೇಖನವಾಗಿ ಬಿಡುತ್ತದೆ. ಇಲ್ಲಿ ಮುಖ್ಯವಾದುದು ಹೆಸರುಗಳಲ್ಲ... ಅದರ ಹಿಂದಿನ ಭೂಮಿಕೆ ಮತ್ತು ಕತೃತ್ವ ಶಕ್ತಿ. ಅದನ್ನು ಹಿಡಿಯುವ ಕೆಲಸವಷ್ಟನ್ನೇ ನಾನಿಲ್ಲಿ ಮಾಡಿದ್ದೇನೆ. ಎಲ್ಲವೂ ಪ್ರಾದೇಶಿಕತೆ, ಜಾತಿ, ಪಂಗಡ ಮುಂತಾದ ಹಿನ್ನೆಲೆಯಲ್ಲೇ ನಿರ್ಧಾರವಾಗುವ ದಿನಗಳಲ್ಲಿ ಈ ಸ್ಪರ್ಧೆಗಳ ಪಾರದರ್ಶಕತೆ ಮತ್ತು ಮೌಲ್ಯನಿಷ್ಠತೆ ಎಲ್ಲರ ಮೆಚ್ಚಿಗೆಗೂ ಪಾತ್ರವಾಗಿದೆ. ಇದು ಲಕ್ಷಗಟ್ಟಲೆ ಬಹುಮಾನ ಇರುವ ಸ್ಪರ್ಧೆಯಾಗಿರಲಿಲ್ಲ. ಬಹುಮಾನ ವಿತರಣೆಗೆ ವಿಜೇತರು ತಾವೇ ದುಡ್ಡು ಹೊಂದಿಸಿಕೊಂಡು ಬರಬೇಕಿತ್ತು. ಆದರೂ ಅಬ್ಬರದ ಪ್ರಚಾರ ಪಡೆದ ಸ್ಪರ್ಧೆಗಳಿಗಿಂತ ಹೆಚ್ಚಾಗಿ ಪ್ರತಿಭಾವಂತರು ಇಲ್ಲಿಂದ ಬಂದಿದ್ದಾರೆ. ಇದು 'ರೆಲವೆನ್ಸಿ' ಎಲ್ಲಿಂದ ಬರುತ್ತದೆ ಎಂಬುದಕ್ಕೆ ಸೂಚಕವಾಗಿದೆ. ಸ್ಪರ್ಧೆಯಲ್ಲಿ ಗೆದ್ದವರು ಎಂದ ಕೂಡಲೇ ಅವರು ಶ್ರೀನಿವಾಸರಾಜು ಅವರ ವಿಶ್ವ ಕುಟುಂಬಕ್ಕೆ ಸೇರುತ್ತಾರೆ. ಸ್ಪರ್ಧೆ ಮುಗಿಯಿತು ಎಂದ ಕೂಡಲೇ ಸಂಬಂಧ ಕಳಚಿಕೊಳ್ಳುವವರಲ್ಲ ಮೇಷ್ಟ್ರು. ಏಕೆಂದರೆ ಅವರಿಗೆ ಸ್ಪರ್ಧೆ ವ್ಯವಹಾರವಲ್ಲ, ಕೌಟುಂಬಿಕ ಸಂಗತಿಯೇ ಪ್ರತಿಯೊಬ್ಬರ ಜೊತೆಗೂ ಇಟ್ಟುಕೊಳ್ಳುವ ಆತ್ಮೀಯ ಸಂಬಂಧದಿಂದಲೇ ಬೆಳವಣಿಗೆ ಸಾಧ್ಯವಾಗುತ್ತದೆ. ಯಾವ ವಿಷಯಕ್ಕೆ ಎಷ್ಟು ಹೊತ್ತಿಗೂ ಮೇಷ್ಟ್ರ ಸಹಾಯಹಸ್ತ ಸಿದ್ಧವಾಗಿರುತ್ತದೆ. ಇಡೀ ಪ್ರಕ್ರಿಯೆಯ ಶಕ್ತಿಯುತವಾದ ಅಂಶವೆಂದರೆ ಇದೇ!

ಕ್ರೈಸ್ಟ್ ಕಾಲೇಜ್ ಪ್ರಕಟಿಸುವ ಪುಸ್ತಕದಲ್ಲೂ ಕವನ ಸಂಕಲನಗಳದ್ದೇ ಮೇಲುಗೈ. ಇದು

ವ್ಯಾಪಾರಿ ನೆಲೆ ಬದಲು, ಮೌಲ್ಯದ ನೆಲೆಯಲ್ಲಿ ನೋಡಿದ್ದರ ಫಲ. ಬಿ.ಆರ್.ಲಕ್ಷ್ಮಣರಾವ್, ಪ್ರತಿಭಾ ನಂದಕುಮಾರ್, ಎಚ್.ಎಸ್.ಶಿವಪ್ರಕಾಶ್, ಸುಧಾಶರ್ಮ, ಎಂ.ಆರ್ ಭಗವತಿ, ಕವಿತಾರೈ ಮುಂತಾದವರ ಕವನ ಸಂಕಲನಗಳು ಅವರ ಬರವಣಿಗೆಯ ಬದುಕಿಗೆ ಮುಖ್ಯ ತಿರುವನ್ನು ನೀಡಿದೆ ಎಂದರೆ ತಪ್ಪಾಗಲಾರದು. ಡಾ.ಎಚ್.ಎಸ್.ರಾಘವೇಂದ್ರ ರಾಯರನ್ನು ಬರೆಯಲು ಹಚ್ಚಿ ಅವರ ಆರಂಭಿಕ ಸಂಕಲನಗಳನ್ನೆಲ್ಲ ಪ್ರಕಟಿಸಿ ಮೇಷ್ಟ್ರು ಸಾಂಸ್ಕೃತಿಕ ಲೋಕಕ್ಕೆ ಬಹುದೊಡ್ಡ ಕೊಡುಗೆಯನ್ನೇ ಕೊಟ್ಟಿದ್ದಾರೆ. ಎಚ್.ಎಸ್.ಆರ್, ಶ್ರೀನಿವಾಸರಾಜು ಅವರ ಸಾಹಸದ ಹಿಂದಿನ ಜ್ಞಾನಶಕ್ತಿ, ಕ್ರೈಸ್ಟ್ ಕಾಲೇಜ್ ಪ್ರಕಟಣೆಗಳಲ್ಲಿ ಟಿ.ಎನ್.ಸೀತಾರಾಮರ 'ಆಸ್ಫೋಟ', ಶ್ರೀರಂಗರ 'ಅಗ್ನಿಸಾಕ್ಷಿ'ಯಂತಹ ನಾಟಕಗಳು, ಕೆ.ಸತ್ಯನಾರಾಯಣರ 'ನನ್ನ ಪ್ರೀತಿಯ ಕ್ರಿಕೆಟ್'ನಂತಹ ಲಲಿತ ಪ್ರಬಂಧ ಸಂಕಲನ ಸೇರಿವೆ. ಇವೆಲ್ಲ ಸ್ಪರ್ಧೆಯ ಜೊತೆಗೆ ಗಮನಿಸಬೇಕಾದ ಸಂಗತಿಗಳು. ಏಕೆಂದರೆ ಮೇಷ್ಟ್ರಿಗೆ ಹೊಸಬರನ್ನು ಪ್ರೋತ್ಸಾಹಿಸುವಷ್ಟೇ ಹೊಸತನ್ನು ಪ್ರೋತ್ಸಾಹಿಸುವುದು ಮುಖ್ಯವಾಗಿತ್ತು ಎಂಬುದಕ್ಕೆ ಇವೆಲ್ಲ ನಿದರ್ಶನಗಳು. ಕನ್ನಡ ಕಾವ್ಯದಲ್ಲಿ ಬಹಳ ಮುಖ್ಯ ಕೆಲಸವನ್ನೇ ಮಾಡುತ್ತ ಬಂದಿದ್ದರೂ, ಅವಗಣನೆಗೆ ಒಳಗಾದ ಸು.ರಂ. ಎಕ್ಕುಂಡಿಯವರ 'ಬಕುಲದ ಹೂವುಗಳು' ಸಂಕಲನ ಕ್ರೈಸ್ಟ್ ಕಾಲೇಜ್‌ನಿಂದಲೇ ಬಂದಿತು. ಅದು ಅವರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಗೌರವದ ಮನ್ನಣೆಯನ್ನು ತಂದುಕೊಟ್ಟಿತು. ಮೇಷ್ಟ್ರು ತಪಸ್ಸಿನ ನಿಜವಾದ ಸಾಕ್ಷಾತ್ಕಾರಗಳು ಸಿಗುವುದು ಇಂತಹ ಕಡೆಯಲ್ಲೇ. ಇಂತಹ ನಿದರ್ಶನಗಳು ಹಲವಾರು.

* * * * * * *

ನಾನು ಶ್ರೀನಿವಾಸರಾಜು ಅವರ ಸಂಪರ್ಕಕ್ಕೆ ಬಂದದ್ದು ಬೆಂಗಳೂರಿಗೆ ಬಂದ ಮೇಲೆಯೇ. ಅಷ್ಟು ಹೊತ್ತಿಗೆ ಅವರು ಹಂಪಿ ಕನ್ನಡದ ವಿಶ್ವವಿದ್ಯಾಲಯಕ್ಕೆ ಹೋಗಿದ್ದರು. ಆರಂಭದಲ್ಲಿ 'ನಮಸ್ಕಾರ'ದ ಪರಿಚಯ, ಅವರು ಮರಳಿ ಗೂಡಿಗೆ ಬಂದಮೇಲೆ ನಿಕಟವಾದ ಸಂಪರ್ಕ ಬೆಳೆಯಿತು. ನಾನು ಒಡನಾಟದಲ್ಲಿದ್ದ 'ಸಂಚಯ' ಬಳಗಕ್ಕೆ ಅವರದೇ ಪ್ರೇರಣೆ ಮತ್ತು ಮಾರ್ಗದರ್ಶನ ಅಂದಿನ ಒಡನಾಡಿಯಾಗಿದ್ದ ಪ್ರಹ್ಲಾದ್ ಮೇಷ್ಟ್ರು ಖಾಸಾ ಶಿಷ್ಯ. ಇನ್ನು ಅಂತರಂಗ ಪ್ರವೇಶಿಸುವುದಕ್ಕೆ ಎಷ್ಟು ತಡ! ಎಂದಿಗೂ ಯಾವುದೇ ಯೋಜನೆ ಕೈಗೆತ್ತಿಕೊಳ್ಳುವ ಮೊದಲು ಶ್ರೀನಿವಾಸರಾಜು ಮತ್ತು ಹೆಚ್.ಎಸ್.ಆರ್ ಅವರ ಮಾರ್ಗದರ್ಶನವಿಲ್ಲದೆ ಮುಂದೆ ಹೋದದ್ದೇ ಇಲ್ಲ. ನಾನು 'ಮಲ್ಲಿಗೆ ಪತ್ರಿಕೆ' ಸಾರಥ್ಯ ವಹಿಸಿದ ಮೇಲೆ ಪ್ರತಿ ಸಂಚಿಕೆ ರೂಪಿಸುವಾಗಲೂ ಇವರಿಬ್ಬರ ಮಾರ್ಗದರ್ಶನ ಸಿಕ್ಕೇ ಸಿಗುತ್ತದೆ. ವಿಶೇಷಾಂಕಗಳನ್ನು ರೂಪಿಸುವಾಗಲೂ ತಿಂಗಳಷ್ಟು ಮುಂಚೆಯೇ ಚರ್ಚೆಗಳು, ಹೆಸರುಗಳ ತಡಕಾಟ, ಪುಸ್ತಕಗಳ ಹುಡುಕಾಟ ಆರಂಭವಾಗುತ್ತದೆ. ದಾಂಪತ್ಯ ವಿಶೇಷಾಂಕ ರೂಪಿಸುವಾಗ, ಮೇಷ್ಟ್ರಿಗೆ ದಾಂಪತ್ಯದ ಕುರಿತ ಕನ್ನಡ ಕಾವ್ಯದ ಸಾರವತ್ತಾದ ಭಾಗಗಳನ್ನು ಹುಡುಕಿಕೊಡಲು ತಿಳಿಸಿದ್ದೆ. ಅವರು ಅದೆಷ್ಟು ಶ್ರದ್ಧೆಯಿಂದ ಈ ಕೆಲಸ ಮಾಡಿದ್ದರು ಎಂದರೆ, ಅದನ್ನೆಲ್ಲ ಯಾರಾದರೂ ಸರಿಯಾಗಿ ಬಳಸಿಕೊಂಡಿದ್ದರೆ ನಿರಾಯಸವಾಗಿ ಪಿಎಚ್.ಡಿ. ಪದವಿ ಪಡೆಯುತ್ತಿದ್ದರು. (ಸ್ವತಃ ಮೇಷ್ಟ್ರೆ ಪಿಎಚ್.ಡಿ.ಯ ಮೋಹಕ್ಕೆ ಒಳಗಾಗಲಿಲ್ಲ !) 'ಮಲ್ಲಿಗೆ ದರ್ಶಿನಿಮಾಲೆ' ಅದರಲ್ಲೂ 'ಕನ್ನಡ ಸಾಹಿತ್ಯ ದರ್ಶಿನಿ'ಯನ್ನು ನಾನು ರೂಪಿಸಲು ಶ್ರೀನಿವಾಸರಾಜು ಅವರದ್ದೇ ಪ್ರೇರಣೆ. ಪ್ರತಿ

ಹಂತದಲ್ಲೂ ಅವರು ಮಾರ್ಗದರ್ಶಕರಾಗಿದ್ದರೂ, ಅದಕ್ಕಾಗಿ ಗೌರವಧನ ಪಡೆಯಲಿಲ್ಲ ಮಾತ್ರವಲ್ಲ ತಮ್ಮ ಹೆಸರನ್ನು ಎಲ್ಲೂ ಬಳಸಬಾರದು ಎಂಬ ನಿಬಂಧನೆ ಹಾಕಿದ್ದರು (ನನ್ನ ಜಾಣ್ಮೆ ಉಪಯೋಗಿಸಿ ಬೇರೆ ಕಾರಣ ಹುಡುಕಿ ಸುವರ್ಣಕರ್ನಾಟಕ ಸಂಚಿಕೆಯಲ್ಲಿ ಅವರ ಹೆಸರು-ಭಾವಚಿತ್ರ ಬಳಸಿದ್ದೆ ಎಂಬುದು ಬೇರೆ ಮಾತು).

"ಬೆಳಕಿನ ಬೆರಗು" ಎಂಬ ಮಾಲಿಕೆಯಲ್ಲಿ ಕನ್ನಡದ ಮುಖ್ಯ ಬಹರಗಾರರ ಸಾಹಿತ್ಯದ ಮರುವಿಮರ್ಶೆ ಮಾಡುವ ಯೋಜನೆ ಸಿದ್ಧಗೊಳಿಸಿದ್ದೇ ಮೇಷ್ಟ್ರು ಬೆಂಬಲವಾಗಿದ್ದಾರೆ ಎಂಬ ವಿಶ್ವಾಸದ ಮೇಲೆ. ಇಂತಹವರ ಈ ಎಲ್ಲಾ ಪುಸ್ತಕಗಳು ಬೇಕು ಎಂದರು ಯಾವ ಮೂಲದಿಂದಲಾದರೂ ಒದಗಿಸುತ್ತಿದ್ದರು. ಒಮ್ಮೆ ಹೀಗಾಯಿತು, ತೇಜಸ್ವಿಯವರ ಸಮಗ್ರ ಕಥೆಗಳು ಪುಸ್ತಕ ನನಗೆ ಬೇಕಿತ್ತು. ಅದು ಮೇಷ್ಟ್ರ ಬಳಿ ಇದೆ ಎಂಬ ವಿಶ್ವಾಸದಲ್ಲಿ ವಿನಂತಿಸಿಕೊಂಡಿದ್ದೆ. ಆದರೆ ಅದನ್ನು ಹೆಚ್.ಎಸ್.ಆರ್. ಕೊಂಡೊಯ್ದಿದ್ದರಂತೆ. ಮರುದಿನ ಶ್ರೀನಿವಾಸರಾಜು ಉತ್ತರ ಭಾರತದ ಪ್ರವಾಸ ಹೊರಟಿದ್ದರಂತೆ. ಈ ಯಾವ ವಿಷಯಗಳೂ ನನಗೆ ಗೊತ್ತಿರಲಿಲ್ಲ. ಅದನ್ನು ಅವರು ಹೇಳಲೇ ಇಲ್ಲ. ಮರುದಿನ ಮಲ್ಲೇಶ್ವರಂನ ತಮ್ಮ ಮನೆಯಿಂದ ಜೆ.ಪಿ.ನಗರದ ಎಚ್.ಎಸ್.ಆರ್ ಮನೆಗೆ ಆಟೋದಲ್ಲಿ ಹೋಗಿ ಪುಸ್ತಕ ಪಡೆದು ಅಲ್ಲಿಂದ ಎನ್.ಆರ್. ಕಾಲೋನಿಯ ನನ್ನ ಮನೆಗೆ ಆಟೋದಲ್ಲಿ ಬಂದು ಪುಸ್ತಕ ಕೊಟ್ಟು ಮಲ್ಲೇಶ್ವರಂನ ತಮ್ಮ ಮನೆಗೆ ಉತ್ತರ ಭಾರತದ ಪ್ರವಾಸಕ್ಕೆ ಸಿದ್ದರಾಗಿದ್ದ ಕುಟುಂಬ ವರ್ಗವನ್ನು ಸೇರಲು ಧಾವಿಸಿದ್ದರು... ಇಂತಹ ಉದಾಹರಣೆ ಇನ್ನೊಂದು ಸಿಕ್ಕುವುದು ಬಹುಶಃ ಕಷ್ಟ ಅಥವಾ ಅಸಾಧ್ಯ.

ಅ.ನ.ಕೃ ಅವರನ್ನು ಕನ್ನಡದ ದೀಪಕ್ಕೆ ತೈಲವಾದ ಬಾಳು ಎಂದು ವರ್ಣಿಸುತ್ತಾರೆ... ಹಾಗೇ ಶ್ರೀನಿವಾಸರಾಜು ಅವರದು ಎಳೆ ಪ್ರತಿಭೆಗಳಿಗಾಗಿ ಸುಡುಬತ್ತಿಯಾದ ಬದುಕು... 'ತಾನುರಿದು ಜಗಕೆಲ್ಲ ಜ್ಯೋತಿಯನು ನೀಡುವ ಸಾರ್ಥಕ ಬದುಕು... ಅವರು ಬರೆದಿದ್ದು ಕಡಿಮೆ.. ಹಾಗೇ ಬರೆದಾಗಲೂ... ಮೂಕ ನಾಟಕ, ಏಕಾಂಕಗಳನ್ನು ಬರೆದರು. ಇದು ಬಹಳ ಅರ್ಥಪೂರ್ಣ ಎಂದು ನನ್ನ ಗ್ರಹಿಕೆ... ಏಕೆಂದರೆ ಮೌನದ ನಡುವೆ ಮಾತನ್ನು ಮಾತಿನ ನಡುವೆ ಮೌನವನ್ನು ಹುಡುಕಿದ್ದೇ ಅವರ ಹೆಗ್ಗಳಿಕೆ... ಸ್ವರ್ಗದಲ್ಲೂ ಇಂತಹ ಸಾರ್ಥಕ ಜೀವಿಗಳು ಸಿಕ್ಕುವುದು ಅನುಮಾನ. ಹೀಗಾಗಿ ಜನ್ಮಾಂತರದ ಕಲ್ಪನೆಯ ಭಾರತದಲ್ಲಿ ಅವರು 'ಅವತಾರ' ಎತ್ತುತ್ತಲೇ ಇರಲಿ ಎಂದು ಆಶಿಸುತ್ತೇನೆ.

❑

# ಭಸನಾಲ ಬಂಧು

● ಕಿ. ರಂ. ನಾಗರಾಜ

ಗೆಳೆಯ ಚಿ. ಶ್ರೀನಿವಾಸರಾಜು ಕಳೆದ ಇಪ್ಪತ್ತು ವರ್ಷಗಳಲ್ಲಿ ತುಂಬ ಕಡಿಮೆ ಸಂಖ್ಯೆಯಲ್ಲಿ ಕವಿತೆಗಳನ್ನು ಬರೆದಿದ್ದಾರೆ. ಸಾಹಿತ್ಯಕ ಪತ್ರಿಕೆಗಳಲ್ಲಿ, ದಿನಪತ್ರಿಕೆಗಳಲ್ಲಿ ತುಂಬ ಅಕಸ್ಮಾತ್ ಆಗಿ ಇವರ ಕವಿತೆಗಳು ಕಾಣಿಸಿಕೊಳ್ಳುತ್ತವೆ. ಕವಿತೆ ಬರೆಯುವುದು ಇವರಿಗೆ ತುಂಬ ಸಲೀಸು ಆಗಿಲ್ಲ ಎಂಬುದು ಇವರ ಕವಿತೆಗಳ ಪ್ರಮಾಣದಿಂದಲೇ ಹೇಳಬಹುದು. ಯುವ ಪೀಳಿಗೆಯ ಕಾವ್ಯ ಪ್ರಕಾಶಕ್ಕೆ ಇವರಂತೆ ದುಡಿದಿರುವವರು ಈ ಕಾಲದಲ್ಲಿ ತುಂಬ ಕಡಿಮೆ. ಕಾವ್ಯ ಪ್ರಪಂಚದಲ್ಲಿ ನಿಚ್ಚಳವಾದ ಪ್ರತಿಭೆಯ ಅನೇಕ ಕವಿಗಳು ಕ್ರೈಸ್ಟ್ ಕಾಲೇಜು ಕನ್ನಡ ಸಂಘದ ಮೂಲಕ ನಾಡಿನಲ್ಲಿ ಪ್ರಸಾರಕ್ಕೆ ಬಂದಿದ್ದಾರೆ. ಕವಿತೆಯ ಪ್ರಸಾರ, ಪ್ರಚಾರಗಳಿಗೆ ತಮ್ಮನ್ನು ಗಂಭೀರವಾಗಿ ತೊಡಗಿಸಿಕೊಂಡ ರಾಜು ಅವರ ಕವನ ಸಂಕಲನಕ್ಕೆ ನಾನು ಪೀಠಿಕೆಯ ರೂಪದಲ್ಲಿ ಕೆಲವು ಮಾತುಗಳನ್ನು ಬರೆಯುವುದು ಕೇವಲ ಔಪಚಾರಿಕ. ನಾನು ಅನೇಕ ವರ್ಷಗಳಿಂದ ಅವರ ಕವಿತೆಗಳನ್ನು ಓದುತ್ತ ಬಂದಿದ್ದೇನಾದ್ದರಿಂದ ಅವರ ಸಂಕಲನವನ್ನು ನೆಪ ಮಾಡಿಕೊಂಡು ಕೆಲವು ಮಾತುಗಳನ್ನು ಬರೆಯುವ ಧೈರ್ಯ ಮಾಡುತ್ತಿದ್ದೇನೆ.

ಶ್ರೀನಿವಾಸರಾಜು ಸಾಹಿತ್ಯದ ಗಂಭೀರ ವಿದ್ಯಾರ್ಥಿ ಆಗಿರುವುದರಿಂದ ಅವರು ವಿನೂತನ ಪ್ರಯೋಗಗಳ ಬಗೆಗೆ ಯಾವಾಗಲೂ ಆಸಕ್ತರು. ಅವರ 'ಐದು ಮೂಕ ನಾಟಕಗಳು' ಅಂಥ ಆಸಕ್ತಿಯನ್ನು ಸಮರ್ಥವಾಗಿ ಪ್ರತಿನಿಧಿಸಿದೆ. ಏಕಾಂಕ ನಾಟಕಗಳು, ಸಾಹಿತ್ಯ ವಿಮರ್ಶೆ, ರಂಗ ವಿಮರ್ಶೆಗಳನ್ನು ಬರೆದು ತಮ್ಮ ಔಚಿತ್ಯ ಜೀವಂತವಾಗಿ ಉಳಿಸಿಕೊಂಡಿದ್ದಾರೆ.



ಕವಿತೆಯನ್ನು ತಮ್ಮ ಅಭಿವ್ಯಕ್ತಿಯ ಆಸಕ್ತಿಯನ್ನಾಗಿ ಮಾಡಿಕೊಂಡಿರುವುದು ಅನೇಕ ದೃಷ್ಟಿಯಿಂದ ಕುತೂಹಲಕಾರಿಯಾದದ್ದಾಗಿದೆ. ಏಕೆಂದರೆ ಶ್ರೀನಿವಾಸರಾಜು ಅವರ ಬರೆಹ

ಯಾವಾಗಲೂ ಸಂಕ್ಷಿಪ್ತವಾದದ್ದು, ಸೂಚ್ಯವಾದದ್ದು. ಈ ಸಂಕ್ಷಿಪ್ತತೆ ಮತ್ತು ಸೂಚ್ಯದ ಗುಣಗಳು ಅವರ ಯಶಸ್ವಿಯಾದ ಕವನಗಳ ಮುಖ್ಯ ಅಂಶ. ಕೆಲವೊಮ್ಮೆ ಭಾಷೆಯ ಹದವನ್ನು, ಎಚ್ಚರವನ್ನು ಗುರುತಿಸಿಕೊಳ್ಳುವ ಪ್ರಯೋಗಕ್ಕಾಗಿಯೇ ಅವರು ಕವಿತೆಗಳನ್ನು ಬರೆಯುತ್ತಾರೆ ಎಂದು ನನಗೆ ಅನ್ನಿಸಿದೆ.

ಸಾಮಾನ್ಯವಾಗಿ ಕವಿಯೊಬ್ಬನಿಗೆ ಪ್ರಾಥಮಿಕ ಯಶಸ್ಸು ದೊರೆತ ಕೂಡಲೇ ನಿರರ್ಗಳವಾಗಿ ಬರೆಯುವುದು ಅವನಿಗೆ ಸುಲಭವಾಗಿ ಬಿಡುತ್ತದೆ. ಅವನು ಒಂದು ನಿರ್ದಿಷ್ಟ ಬಂಧದಲ್ಲಿ ಪಯಣಿಸುತ್ತ ಹೋಗುವ ಅಪಾಯಕ್ಕೆ ಗುರಿಯಾಗುತ್ತಾನೆ. ಚೆಂದಕ್ಕಾಗಿ ಬರೆಯುವ ಗೀಳಿಗೆ ಬಲಿಯಾಗುತ್ತಾನೆ. ಇಂಥ ಅಪಾಯದ ತಿಳಿವಳಿಕೆ ರಾಜು ಅವರಿಗೆ ಇರುವುದರಿಂದ ಅವರ ಕವಿತೆಗಳು–ಕವಿಯೊಬ್ಬನಿಗೆ ತನ್ನ ಮಾಧ್ಯಮದ ಬಗ್ಗೆ ಇರಬೇಕಾದ ಸಂಯಮವನ್ನು, ಮನವರಿಕೆ ಮಾಡಿಕೊಡುತ್ತವೆ.

ಹೀಗೆ ಹೇಳುವಾಗ ಅವರ ಎಲ್ಲ ಕವನಗಳು ಒಂದೇ ಸಮನಾದ ಎಚ್ಚರವನ್ನು ತೋರಿವೆ ಎಂದು ನಾನು ತಿಳಿದಿಲ್ಲ. ಅವರ ಅರುವತ್ತರ ದಶಕದಲ್ಲಿ ಬರೆದ ಕವಿತೆಗಳು ಒಂದು ರೀತಿಯಲ್ಲಿ ಸಮಾನಾಂತರ ಶಾಬ್ದಿಕ ಜೋಡಣೆಯ ಆಧಾರದ ಮೇಲೆ ನಿರ್ಮಾಣಗೊಂಡವುಗಳು. ಪರಿಚಿತ ಲಯ, ಪರಿಚಿತ ಪ್ರಾಸಗಳ ಮೂಲಕ ಅಚ್ಚುಕಟ್ಟುತನವನ್ನು ತೋರುವಂಥವುಗಳು. ವಸ್ತುವಿಗೆ ತಕ್ಕ ಭಾಷಾ ಆಕಾರ ಅಲ್ಲಿ ಮೈತಳೆಯುವುದಕ್ಕಿಂತ ಭಾಷಿಕ ಮಿತಿಗಳಲ್ಲಿ ವಸ್ತುವೊಂದಕ್ಕೆ ರೂಪವನ್ನು ಕೊಡುವ ಪ್ರಯತ್ನ ಅಲ್ಲಿದೆ.

ನೋಡು ನನ್ನನ್ನು
ನಿನ್ನ ಹೊಟ್ಟೆಗೆ ಅನ್ನವಾಗುತ್ತೇನೆ
ನಿನ್ನ ಬಟ್ಟೆಗೆ ನೂಲಾಗುತ್ತೇನೆ
ನಿನ್ನ ಭಾರಕ್ಕೆ ಹೆಗಲಾಗುತ್ತೇನೆ
ಮೊದಲು ನನ್ನನ್ನು ಕಲಿ
ಆಮೇಲೆ ಕಲಿಸು *(ಕಲಿಯದವನ ಕಾಗದ)*

* * * *

ನೀನು ಬಿಟ್ಟ ಗಾಳಿಯನ್ನೇ ನಾನು ಎಳೆಯುತ್ತಿರುವಾಗ
ನೀನು ಬಿತ್ತಿದ ಕಾಳನ್ನೇ ನಾನು ತಿನ್ನುತ್ತಿರುವಾಗ
ನೀನು ನೆಯ್ದ ಬಟ್ಟೆಯನ್ನೇ ನಾನು ಧರಿಸುತ್ತಿರುವಾಗ
ನೀನು ಮೆಟ್ಟಿದ ಮಣ್ಣನ್ನೇ ನಾನು ತುಳಿಯುತ್ತಿರುವಾಗ

*(ಆತ್ಮಕಥೆ)*

* * * *

ಇಂಥ 'ಸಮಾನಾಂತರತೆ'ಯ ಮೇಲೆ ಅವಲಂಬಿಸಿದ ರಚನೆಗಳು ಓದುಗನನ್ನು ಅನಿರೀಕ್ಷಿತ ಹಾಗೂ ವೈವಿಧ್ಯಮಯ ಪ್ರಾಸ, ಲಯಗಳ ವಲಯದಲ್ಲಿ ಮಗ್ನವಾಗಿಸುವುದಿಲ್ಲ. ಏಕತಾನತೆಗೆ ಅರ್ಥಾತ್ ಯಾಂತ್ರಿಕತೆಗೆ ಪಕ್ಕಾಗುತ್ತದೆ. ಸಮಾನಾಂತರತೆಯ ಅಭಿವ್ಯಕ್ತಿ ಕ್ರಮ ಕವಿತೆಯಲ್ಲಿ

ಎಷ್ಟೊಂದು ವೈವಿಧ್ಯಮಯವಾಗಬಲ್ಲುದೆಂಬುದಕ್ಕೆ ವಚನಕಾರರು, ಹರಿಹರನ ರಗಳೆಗಳು ಶ್ರೇಷ್ಠ ಉದಾಹರಣೆಗಳಾಗಿರುವುದನ್ನು ಇಲ್ಲಿ ಗಮನಿಸಬಹುದು. ಸಮಾನಾಂತರತೆಯ ತಂತ್ರದ ಯಶಸ್ಸು ಅವಲಂಬಿಸಿರುವುದು ಭಾಷೆಯನ್ನು ಅನೇಕ ಮಟ್ಟಗಳಲ್ಲಿ ಒಡೆದು ಪುನರ್ ವಿನ್ಯಾಸಗೊಳಿಸುವುದರಲ್ಲಿ ಅಡಗಿದೆ.

ಈ ಹಂತದಿಂದ ರಾಜು ಅವರ ಕವಿತೆ ಬೇರೆ ಸಾಧ್ಯತೆಗಳತ್ತ, ಪ್ರಯೋಗಗಳತ್ತ ಹೊರಡುತ್ತದೆ ಎನ್ನುವುದು ಒಂದು ಗುಣಾತ್ಮಕ ಬದಲಾವಣೆ. 'ಮುಸ್ಸಂಜೆ ಮುಡಿಪು', 'ಕರಿಮನೆಯ ಶ್ವೇತಪತ್ರ', 'ವಿಶ್ವರೂಪ', 'ಕಪ್ಪು ನೆರಳು', 'ಇನ್ನೆಂದಿಗಿಂದ ಚರಣ', 'ರುದ್ರವೀಣೆ' ಈ ಕವಿತೆಗಳಲ್ಲಿ ಸಾಂಕೇತಿಕತೆ, ಪ್ರತಿಮೆಗಳ ಹೊಂದಾಣಿಕೆ ಒಂದು ನಿರ್ದಿಷ್ಟ ಆವರಣವನ್ನು ಕಟ್ಟುತ್ತದೆ.

ಈ ಕವಿತೆಗಳು ಆಧುನಿಕ ಪ್ರಜಾತಂತ್ರದಲ್ಲಿ ಹಬ್ಬಿರುವ ಸಾವು-ಸ್ಥಗಿತತೆಗಳನ್ನು ವಿಡಂಬಿಸುತ್ತವೆ. ಮಾನವೀಯ ಸತ್ವದ ತಪ್ತ ಧ್ವನಿ ಉಸಿರುಕಟ್ಟುವ ಇಲ್ಲವೇ ಸಾವಿನ 'ಕಲ್ಲಿದ್ದಲಾಗುವ' ಅವಸ್ಥೆಯನ್ನು ಸಾಂಕೇತಿಕವಾಗಿ ಹೇಳುತ್ತವೆ. ಮಾತಿನ ಹಿನ್ನೆಲೆಗೆ ಇರುವ 'ಮೌನ'ವನ್ನು, ಮೌನದ ವಿಭಿನ್ನ ಛಾಯೆಗಳನ್ನು ಪ್ರತೀತಗೊಳಿಸುತ್ತವೆ.

ಹಾಳು ಬಾವಿ ಪಾಚಿಯಲ್ಲಿ ಬಿದ್ದ ಒಂದು ಕಲ್ಲು
ಜೋತಾಡುವ ಕನಸಿನಲ್ಲಿ ಮಗ್ಗುಲಾದ ಉಸಿರು
ಹರಿದಾಡುವ ನಾಣ್ಯದಲ್ಲಿ ಒಡಲಾಟದ ಧೂಳು
ಪರಿತಪಿಸುವ ಕಡಲಿನಲ್ಲಿ ಕೊಳೆತ ಹಳೆಯ ನೆನಪು

*(ನಗಲಾರದ ಮಕ್ಕಳು)*

* * * *

ಈ ಕವನಗಳು ಕೆಲವು ವ್ಯಕ್ತಿ ವಿಶಿಷ್ಟ ಅನುಭವಗಳನ್ನು ಕುರಿತದ್ದಾಗಿರುವುದಾದರೂ ಹೆಚ್ಚಿನ ಕವಿತೆಗಳು ಸಾಮುದಾಯಿಕ ಆಶಯಗಳ-ಅಭಿವ್ಯಕ್ತಿಯನ್ನು ಪ್ರಧಾನವಾಗಿ ಮಾಡುತ್ತವೆ. ವ್ಯಕ್ತಿ ಮತ್ತು ಚರಿತ್ರೆ, ವ್ಯಕ್ತಿ ಮತ್ತು ಅವನ ನಿರಂತರ ಹೋರಾಟ-ಅದರಲ್ಲಿ ಪ್ರತಿಕ್ಷಣ ಎದುರಾಗುವ ಸಾವು-ಹೊಸ ಹುಟ್ಟುಗಳು ಶ್ರೀನಿವಾಸರಾಜು ಅವರ ಆಸಕ್ತಿಯಾಗಿದೆ.

ಅಯೋನಿಜರ ಹೊತ್ತವಗೆ ಹಿಂದೇನು? ಮುಂದೇನು?
ಕುಡಿಕೆ ಕಣ್ಣಲ್ಲಿ ಇಳೆಯ ಕಳೆ;
ಸಾವ-ಸುಗ್ಗಿಯ ತನಕ ಬದುಕಬೇಕೆ?
ನೆರೆಮನೆಯ ನೆಂಟ ಹಾದು ಹೋಗಿಲ್ಲವೇನು?

*(ಕ್ರಾಸಿನ ನಿವೇದನೆ)*

ಸಾವು, ಮೌನ ಇವುಗಳು ಸಂಕೇತದ ಮೂಲಕ ಪ್ರಕಟಗೊಳ್ಳುವುದಕ್ಕೂ, ಕೇವಲ ಹೇಳಿಕೆಗಳ ಮೂಲಕ ಜಾಹೀರುಗೊಳ್ಳುವುದಕ್ಕೂ ತುಂಬ ಅಂತರವಿದೆ. ಹೇಳಿಕೆಗಳನ್ನು ಅವರು ಎಚ್ಚರದಿಂದ ಅನುಮಾನಿಸಿದಂತೆಲ್ಲಾ ಕವಿತೆಗಳ ವಿಶಿಷ್ಟ ಚಲನೆ ಒದಗಿ ಬಂದಿದೆ. ಉಳಿದಂತೆ-ಒಪ್ಪ-ಓರಣ ಪ್ರದಾನವಾಗಿದೆ.

'ಇನ್ನೆಂದಿಗಿಂಥ ಚರಣ' ಎಂಬ ಸಾನೆಟ್‌ನ ಕೊನೆಯ ಎರಡು ಸಾಲುಗಳು-

ಕಾದ ಮರಳಲ್ಲಿ ಕಾಗುಣಿತ ತಿದ್ದುವುದಾಗಿತ್ತು ನಿನ್ನ ಕೆಲಸ
ಇರುಳ ಕನ್ನಡಿಯಲ್ಲಿ ಪ್ರತಿಮೆ ಹುಡುಕುವುದೊಂದೆ ನನ್ನ ಕೆಲಸ

ಈ ಚಿತ್ರಗಳಲ್ಲಿ, ಪ್ರಧಾನವಾಗಿ ಕೊನೆಯ ಚಿತ್ರದಲ್ಲಿ ಈ ಸಂಕಲನದಲ್ಲಿ ಅಂತರ್ಗತವಾಗಿರುವ ಕವನದ ನಾಯಕನ ತುಡಿತಗಳು, ಅವನ ನಿಗೂಢ ಪ್ರಶ್ನೆಗಳು ಕಂಡುಕೊಂಡ ಹೊಳಹುಗಳು ಆಪ್ತವಾದದ್ದು ಹಾಗೂ ಗಾಢ ಅನುಭೂತಿಯಿಂದ ಕೂಡಿದ್ದೂ ಆಗಿದೆ.

ರಾಜು ಅವರ ಕವಿತೆಯ ಪ್ರಯೋಗ, ಸೃಷ್ಟಿಶೀಲತೆ ಇನ್ನೂ ಹೆಚ್ಚಿನದನ್ನು ಸಾಧಿಸಲೆಂದು ನಾನು ನಿರೀಕ್ಷಿಸುತ್ತೇನೆ.

*('ಭಸನಾಲ ಬಂಧು' ಕೃತಿಯ ಮುನ್ನುಡಿ)*



# ಸ್ನೇಹದೊಂದಿಗೆ ಎರಡು ಮಾತುಗಳು

● ಎಚ್.ಎಸ್. ರಾಘವೇಂದ್ರರಾವ್

ನನ್ನ ಪ್ರೀತಿಯ ಸ್ನೇಹಿತರಾದ ಶ್ರೀ ಶ್ರೀನಿವಾಸರಾಜುರವರ ಏಕಾಂಕ ನಾಟಕಗಳ ಈ ಸಂಕಲನಕ್ಕೆ ಮುನ್ನುಡಿ ಬರೆಯುವುದು ಏಕಕಾಲದಲ್ಲಿ ಒಂದು ಸವಾಲು ಮತ್ತು ಪ್ರೀತಿಯ ಕೆಲಸ. ಏಕೆಂದರೆ ನನಗೆ ರಾಜು ಅವರು ಎಷ್ಟು ಪರಿಚಿತರೋ, ನಾಟಕ"ರಂಗ" ಅಷ್ಟೇ ಅಪರಿಚಿತ. ಆದರೆ ನಾಟಕ ಸಾಹಿತ್ಯದ ಆಸಕ್ತ ಓದುಗನಾಗಿ ಈ ನಾಟಕಗಳಿಗೆ ಸಂಬಂಧಪಟ್ಟ ಹಾಗೆ ಕೆಲವು ಅನಿಸಿಕೆಗಳನ್ನು ನಿಮ್ಮ ಮುಂದಿಡುವುದು ಮಾತ್ರ ನನ್ನ ಉದ್ದೇಶ. ಇದು ವಿಮರ್ಶೆಯಾಗಲೀ, ಅಭ್ಯಾಸಪೂರ್ಣ ಅಧ್ಯಯನವಾಗಲೀ ಅಲ್ಲ.

ಸಮಕಾಲೀನ ಘಟನೆಗಳು ಮತ್ತು ಸನ್ನಿವೇಶಕ್ಕೆ, ಸಂವೇದನಾ ಶೀಲನಾದ, ಮಾನವೀಯ ಧೋರಣೆಗಳನ್ನು ಹೊಂದಿರುವ ಲೇಖಕ ನೊಬ್ಬ ಹೇಗೆ ಸ್ಪಂದಿಸಬೇಕೆನ್ನುವುದು ಹಳೆಯ ಪ್ರಶ್ನೆ. ಇಲ್ಲಿ ಎರಡು ಬಗೆಗಳಿವೆಯೆಂದು ನನಗೆ ತೋರುತ್ತದೆ. ಕೆಲವು ವ್ಯಕ್ತಿಗಳನ್ನು ಮಾತ್ರ ಆರಿಸಿಕೊಂಡು ಅವರ ಅಂತರಂಗದ ಎಲ್ಲ ಆಳಗಳನ್ನೂ ಶೋಧಿಸುವುದರ ಮೂಲಕವೇ ಅವರನ್ನು ರೂಪಿಸಿದ ಸನ್ನಿವೇಶವನ್ನು ಓದುಗರ ಗಮನಕ್ಕೆ ತರುವುದು ಮೊದಲ ಬಗೆ. ವ್ಯಕ್ತಿಗಳನ್ನು, ಸನ್ನಿವೇಶದ ವಿವಿಧ ಒಲವುಗಳನ್ನು ಪ್ರತಿನಿಧಿಸುವ ಸ್ಥೂಲ ರೇಖೆಗಳಲ್ಲಿ ಮಾತ್ರ ಚಿತ್ರಿಸಿ, ಅವರ 'ಬಾಹ್ಯವರ್ತನೆ'ಯ ಮೂಲಕವೇ ಒಟ್ಟು ಸಾಮಾಜಿಕ ಸನ್ನಿವೇಶವನ್ನು ಕಟ್ಟಿಕೊಡುವುದು ಎರಡನೆಯ ಬಗೆ. ರಾಜು ಅವರು ಎರಡನೆಯ ವಿಧಾನವನ್ನು ಅದರ ಎಲ್ಲ ಇತಿಮಿತಿ ಗಳೊಂದಿಗೆ ಆರಿಸಿಕೊಂಡಿದ್ದಾರೆ. ಅವರ ನಾಟಕಗಳಲ್ಲಿ ಬರುವ ವರ್ತಕ, ನಾವಿಕ, ಮೋಸಗಾರ, ನಿರುದ್ಯೋಗಿ, ಶೋಷಿತ ಮಹಿಳೆ ಮುಂತಾದವರು ಇತರ ಯಾವುದೇ ವರ್ತಕ, ನಾವಿಕ, ಮೋಸಗಾರ ಇತ್ಯಾದಿಗಳ ಹಾಗೆಯೇ ನಡೆದುಕೊಳ್ಳುತ್ತಾರೆ. ಅಂದರೆ ಅವರಿಗೆ ತಾವು ಪ್ರತಿನಿಧಿಸುವ ವರ್ಗಕ್ಕಿಂತ ಭಿನ್ನವಾದ, ವೈಯಕ್ತಿಕ ಅಸ್ತಿತ್ವವಿಲ್ಲ.



ಅವರು 'ಗಟ್ಟಿಯಾಗಿ' ಯೋಚಿಸುವಾಗಲೂ ಕೂಡ, ತಮ್ಮಂತಹ ಅನೇಕರ ಹಾಗೆ ಯೋಚಿಸುವರೇ ವಿನಾ ವಿಶಿಷ್ಟವಾಗಿ ಅಲ್ಲ. ಈ ರೀತಿಯ ಪಾತ್ರಗಳು ನಾಟಕಕ್ಕೆ ಒಂದು ಬಗೆಯ ಸಾರ್ವತ್ರಿಕತೆಯನ್ನು ತಂದುಕೊಡುತ್ತವೆ. ನಾಟಕದ ಸಂವಹನ ಸುಲಭವಾಗುತ್ತದೆ. ಆದರೆ ಇವು ಸಾಹಿತಿಯೊಬ್ಬನ ಶೋಧನೆಗಳಿಗೆ ಕೆಲವು ಮಿತಿಗಳನ್ನು ತರುತ್ತವೆಂದು ನನ್ನ ತಿಳಿವಳಿಕೆ. ರಾಜುರವರ ನಾಟಕಗಳು ಗಾತ್ರದಲ್ಲಿ ಚಿಕ್ಕವಾಗಿರುವುದು ಈ ರೀತಿಯ ಶೋಧನೆಗೆ ಒಂದು ಪರಿಮಿತಿಯೆಂದು ನನ್ನ ಅನುಮಾನ. ಸನ್ನಿವೇಶಗಳ ಬಹಿರಂಗವನ್ನು ಚಿತ್ರಿಸುತ್ತಲೇ, ಮನುಷ್ಯರ ಒಳಲೋಕವನ್ನೂ ಅನಾವರಣ ಮಾಡತೊಡಗಿದಾಗ ಅವರ ನಾಟಕಗಳು ಇನ್ನಷ್ಟು ಮಹತ್ವಪೂಣವಾಗುತ್ತವೆಂದು ನಾನು ತಿಳಿಯುತ್ತೇನೆ.

ಈ ನಾಟಕಗಳ ಹಿಂದೆ ಕೆಲವು ಖಚಿತವಾದ ತಾತ್ವಿಕ ಕಾಳಜಿಗಳು ಕೆಲಸ ಮಾಡುತ್ತವೆ. ಉದಾಹರಣೆಗೆ ಸಾವಿನ ಅನಿವಾರ್ಯತೆಯ ಬಗೆಗೆ ಲೇಖಕರಿಗಿರುವ ಹಳವಂಡದಂತಹ ಆಸಕ್ತಿ. ಇಲ್ಲಿರುವ ಮೂರು ನಾಟಕಗಳು ಸಾವಿನಲ್ಲಿ ಮುಕ್ತಾಯವಾಗುವುದು ಆಕಸ್ಮಿಕವಲ್ಲ. ಮೊದಲ ಮತ್ತು ಕೊನೆಯ ನಾಟಕಗಳಲ್ಲಂತೂ ಎಲ್ಲ ಪಾತ್ರಗಳೂ ಸಾಯುತ್ತವೆ. ಮೂರನೆಯ ನಾಟಕದ ಒಂದು ಪಾತ್ರವು ಪ್ರಮಾಣವಚನವನ್ನು ಸ್ವೀಕರಿಸಬೇಕಾಗಿ ಬಂದಾಗ, ಸಾವೊಂದೇ ಸತ್ಯವೆಂದು ಹೇಳಿ ಅದರ ಸಾಕ್ಷಿಯಾಗಿ ಪ್ರಮಾಣ ಮಾಡುತ್ತದೆ. ಈ ಲೇಖಕರ ಮಹತ್ವದ ಕವಿತೆಗಳೆಲ್ಲಕ್ಕೂ ಒಂದಲ್ಲ ಒಂದು ಸಾವು ಪ್ರಚೋದನೆಯಾಗಿರುವುದನ್ನು ಬಲ್ಲ ನನಗೆ, ಇವರ ಜೀವನದ ಸಮಸ್ತ ಮೌಲ್ಯಗಳನ್ನು ರೂಪಿಸಿರುವುದು, ಸಾವಿಗೆ ಪೂರ್ವಭಾವಿಯಾಗಿ ಬದುಕನ್ನು ಹಸನು ಮಾಡಿಕೊಳ್ಳಬೇಕೆಂಬ ಹಂಬಲವೆಂದು ತೋರುತ್ತದೆ. ಸಾವಿನ ಅರಿವು ಮನುಷ್ಯನ ಮೌಲ್ಯವ್ಯವಸ್ಥೆಯನ್ನು ಖಚಿತಪಡಿಸಿ, ಯಾವ ಸಂಗತಿ ನಿಜವಾಗಿಯೂ ಮುಖ್ಯ, ಯಾವುದು ಅಲ್ಲ ಎಂಬ ತಿಳಿವಳಿಕೆಯನ್ನು ಕೊಡುತ್ತದೆ. ಅದರ ಗಂಭೀರತೆಯ ಎದುರು, ನಾವು ಹಪಹಪಿಸುವ ಅನೇಕ ಸಂಗತಿಗಳು ಬಹಳ ಸಣ್ಣದಾಗಿ ತೋರುತ್ತವೆ. ಬದುಕಿನ ಪಾಠಗಳನ್ನು ಸಾವು ಕಲಿಸುತ್ತದೆ. ಆದರೆ ಬೇರೆಯವರ ಚಿತೆಯ ಬೆಳಕಿನಲ್ಲಿ ನಮಗೆ ಉಚಿತವಾದ ದಾರಿಯನ್ನು ಕಂಡುಕೊಳ್ಳುವ ವಿವೇಕ ನಮಗಿರಬೇಕು. ಆದ್ದರಿಂದಲೇ ಈ ನಾಟಕಕಾರರಿಗೆ ಸಾವು ಸ್ನೇಹಿತ, ಮಾರ್ಗದರ್ಶಿ ಮತ್ತು ಗುರು. ಇಂದು ಇರುವ ಯಾರಿಗೂ ನಾಳೆ ಇಲ್ಲ ನಿಜ. ಆದರೆ ಬೀಜದ ಬಸಿರನ್ನು ಸೀಳಿ ಬರುವ ಮೊಳಕೆಯು ಸಾವು, ಬದುಕಿನ ಸಾತತ್ಯವನ್ನು ಪೋಷಿಸುವುದೆಂಬ ಸತ್ಯವನ್ನೇ ಹೇಳುತ್ತದೆ. ರಾಜುರವರೂ ಈ ಗುಟ್ಟನ್ನು ಬಲ್ಲವರೇ.

ನಿಜಜೀವನದಲ್ಲಿ ಅತ್ಯಂತ ಶಾಂತರಾದ, 'ಒಂದು ನೊಣವನ್ನು ಕೂಡ ಕೊಲ್ಲಲಾರರು' ಎನ್ನುವಂತೆ ಬದುಕುವ ರಾಜು ಅವರು ಅಂತರಂಗದಲ್ಲಿ ಎಲ್ಲ ಸಮಸ್ಯೆಗಳಿಗೂ, ಹಿಂಸಾಮೂಲದ (violent) ಪರಿಹಾರಗಳನ್ನು ಹೊಂದಿರುವುದು ನನಗೆ ಸೋಜಿಗದ ಸಂಗತಿ. ಅವರ 'ಐದು ಮೂಕ ನಾಟಕಗಳು' ಹಲವು ಬಾರಿ ಹೀಗೆ ಆಗುತ್ತದೆ. ಕ್ರಾಂತಿಕಾರಕ ಎನ್ನಬಹುದಾದ ವ್ಯಕ್ತಿಗಳೋ, ಗುಂಪುಗಳೋ ಶೋಷಕ ಶಕ್ತಿಗಳನ್ನು ನಾಶ ಮಾಡಿ, ಸುಧಾರಣೆಯ ಪಾಠಗಳನ್ನು ತಿಳಿಸುತ್ತಾರೆ. ಇದು ವರ್ಗಸಮರದ ಅನಿವಾರ್ಯತೆಯನ್ನು ಮನಗಂಡ ವಾಮವಾದಿಯೊಬ್ಬನ ಖಚಿತವಾದ ನಿಲುವು ಆಗಿರಬಹುದು. ಸ್ವಾತಂತ್ರ್ಯ ಬರುವುದು ಕೋವಿಯ ಕೊಳವೆಯ ಮೂಲಕವೇ ಎಂಬ ವಿಚಾರಧಾರೆ ಹೊಸದೇನೂ ಅಲ್ಲವಲ್ಲ. ಆದರೆ ಮೂಕ ನಾಟಕಗಳ

ಪರಿಮಿತ ಗಾತ್ರದಲ್ಲಿ, ಕ್ರಾಂತಿಕಾರಕ ಪರಿವರ್ತನೆಗೆ ಅಗತ್ಯವಾದ ಸಿದ್ಧತೆಗೆ ಅಥವಾ ಅಂತಹ ಪಾತ್ರಗಳ ವಿಕಾಸಕ್ಕೆ ಅವಕಾಶವಿರುತ್ತಿರಲಿಲ್ಲ. ಆದ್ದರಿಂದಲೇ 'ಸರಿ'ಯಾದ ಪರಿಹಾರಗಳೂ ಕೂಡ ಸ್ವಲ್ಪ ರೊಮ್ಯಾಂಟಿಕ್ ಆದ ರೀತಿಯಲ್ಲಿ ಮಂಡಿತವಾಗುತ್ತಿದ್ದವು. ಪ್ರಸ್ತುತ ನಾಟಕಗಳಿಗೆ ಹೊಸದೊಂದು ಆಯಾಮ ಸೇರಿಕೊಂಡಿದೆ. ಲೇಖಕರು ಹೆಚ್ಚು ಪ್ರಬುದ್ಧರಾಗಿದ್ದಾರೆ. ದಿಢೀರ್ ಪರಿಹಾರಗಳನ್ನು ಸೂಚಿಸುವ ಪ್ರಯತ್ನ ಇಲ್ಲಿ ಇಲ್ಲ. ಬದಲಾಗಿ ಸಮಸ್ಯೆ, ಸುಧಾರಣೆ ಮತ್ತು ಪರಿಹಾರಗಳ ಸಾತತ್ಯ (continuity) ವನ್ನು ಕಂಡುಕೊಂಡ ಮನಸ್ಸೊಂದು ಅದನ್ನು ನಾಟಕರೂಪದಲ್ಲಿ ಮುಂದಿಡುವ ಪ್ರಯತ್ನ ಇಲ್ಲಿದೆ. ಸಾವು ವಿರಾಮ ಚಿಹ್ನೆಯಾಗಿ ಬರುವುದರಿಂದ ನಾಟಕವೇನೋ ಮುಗಿಯುತ್ತದೆ. ಆದರೆ ನಾಟಕದಲ್ಲಿ ಎತ್ತಲಾದ ಸಮಸ್ಯೆಗಳು ಹಾಗೆಯೇ ಉಳಿಯುತ್ತವೆ. ಬದುಕಿನಲ್ಲಿಯೂ ಅಷ್ಟೇ ಅಲ್ಲವೇ?

ರಾಜು ಅವರು ಅಂತರಂಗದಲ್ಲಿ ಇಂದಿಗೂ ಕುಪಿತ ಯುವಕನೇ (Angry Youngman) ಆದರೆ ಆ ಕೋಪವನ್ನು ಹೇಳುವ ರೀತಿ, ಏರುದನಿಯ ಆಕ್ರೋಶವಿಲ್ಲ. ಅವರ ಬರವಣಿಗೆಯು, ಬಂಡಾಯದ ದನಿಗಳಿಗಿಂತ ಭಿನ್ನವಾಗುವುದು ಇಲ್ಲಿಯೇ, ಅವರ ತಣ್ಣನೆಯ ಕೋಪವು ಬಹು ಹರಿತವಾದ ವಿಡಂಬನೆಯ ಮಾಧ್ಯಮದಲ್ಲಿ ತನ್ನ ಅಭಿವ್ಯಕ್ತಿಯನ್ನು ಕಂಡುಕೊಳ್ಳುತ್ತದೆ. ವಿಡಂಬನೆಯ ಕೂಗಾಟಕ್ಕಿಂತ ಹೆಚ್ಚು ತೀವ್ರವಾಗಿ ತನ್ನ ಕಾರ್ಯವನ್ನು ಸಾಧಿಸುತ್ತದೆ. ಹಾಗೆ ಮಾಡಲು ಅಗತ್ಯವಾದ ಚುರುಕಾದ ಭಾಷೆಯು ಇವರಿಗಿದೆ.

ಈ ನಾಟಕಗಳಲ್ಲಿ ಗಮನಸೆಳೆಯುವ ಮತ್ತೊಂದು ಸಂಗತಿಯೆಂದರೆ, ಘಟನೆಗಳಿಗೆ ಮತ್ತು ವಿವರಗಳಿಗೆ ಪ್ರಾಪ್ತವಾಗುವ ಸಾಂಕೇತಿಕತೆ. ಮುಖವಾಡಗಳು, ನವಿಲು, ರೊಟ್ಟಿ, ಹೆದ್ದಾರಿ, ಹಡಗು, ಭರತನಹಳ್ಳಿ, ನ್ಯಾಯಾಲಯ, ಬಾಯಿಕಟ್ಟಿದ ಶೋಷಿತ ಹೆಣ್ಣುಗಳು ಹೀಗೆಯೆ ಹಲವು ನಿದರ್ಶನಗಳನ್ನು ಕೊಡಬಹುದು. ನಾಟಕದ ಕಥೆಯ ಚೌಕಟ್ಟಿನಲ್ಲಿ ತಮ್ಮ ಸ್ಥಾನವನ್ನು ಉಳಿಸಿಕೊಂಡ ನಂತರವೇ ಸಾಂಕೇತಿಕವಾಗುವ ಈ ಅಂಶಗಳು ಸಂವಹನದ ಅಸ್ಪಷ್ಟತೆಗೆ ಕಾರಣವಾಗುವುದಿಲ್ಲ. ಭರತನಹಳ್ಳಿಯ ಹೆಸರಿನಿಂದ ಹಿಡಿದು ಅಲ್ಲಿನ ಬದುಕಿನವರೆಗೆ, ಎಲ್ಲವೂ ನಮ್ಮದೇ ಬದುಕಿನ ಕಟು ವಿಡಂಬನೆಗಳಾಗಿವೆ. ಭಾಷೆ, ಭ್ರಷ್ಟತೆ ವಂಶಪಾರಂಪರ್ಯ ವಾಗಿರುವ ರಾಜಕೀಯ ಅಧಿಕಾರ ಇವೆಲ್ಲವೂ ವಸ್ತುನಿಷ್ಠ ವಿಶ್ಲೇಷಣೆಗೆ ಒಳಗಾಗಿವೆ.

ಇದುವರೆಗೆ ಚರ್ಚಿಸಿದ ಸಂಗತಿಗಳಿಗಿಂತ ಹೆಚ್ಚು ಮಹತ್ವಪೂರ್ಣವಾದ ವಿಷಯವೆಂದರೆ ಈ ನಾಟಕಕಾರರ ತಾತ್ವಿಕ ಕಾಳಜಿಗಳು, 'ರಂಗಕೃತಿ'ಗಳಾಗಿ ರೂಪಿತವಾಗುವುದರಲ್ಲಿ ಅವರಿಗೆ ದೊರೆತಿರುವ ಯಶಸ್ಸು ಮತ್ತು ಆ ಯಶಸ್ಸಿನ ಕಾರಣಗಳು. ಏಕೆಂದರೆ ಕೊನೆಗೂ ನಾಟಕವನ್ನು ಕುರಿತಾದ ಮಾತುಗಳು ಅವುಗಳ ನಾಟಕೀಯತೆಯನ್ನು ಕುರಿತಂತೆಯೇ ಇರಬೇಕು. ಅನೇಕ ವರ್ಷಗಳಿಂದ ನಾಟಕಗಳನ್ನು ನೋಡಿರುವ, ಆಡಿರುವ ಮತ್ತು ಆಡಿಸಿರುವ ರಾಜು ಅವರು, ಆ ಅನುಭವವನ್ನು ಇಲ್ಲಿ ದುಡಿಸಿಕೊಂಡಿರುವುದರಿಂದ, ಅವರಿಗಿಂತ ಹೆಚ್ಚು ಮಹತ್ವಾಕಾಂಕ್ಷೆಯುಳ್ಳ ಹಲವು ನಾಟಕಕಾರರು ಸೋತಿರುವ ಕಡೆ ತಾವು ಯಶಸ್ವಿಯಾಗಿದ್ದಾರೆ. ಇಲ್ಲಿನ ಪ್ರತಿಯೊಂದು ನಾಟಕವೂ ಕೊನೆಯ ಕ್ಷಣದವರೆಗೆ ಪ್ರೇಕ್ಷಕರನ್ನು ಹಿಡಿದಿಟ್ಟುಕೊಳ್ಳುತ್ತದೆ. ಏಕೆಂದರೆ ನಾಟಕದ ಶಿಖರ ಕ್ಷಣವು ಅದರ ಮುಕ್ತಾಯದಲ್ಲಿರುತ್ತದೆ ಮತ್ತು ಕಥೆ ಬೆಳೆಯುವ ದಿಕ್ಕನ್ನು ಮೊದಲೇ

ಊಹಿಸಲು ಸಾಧ್ಯವಾಗುವುದಿಲ್ಲ. 'ನಾಳೆ ಯಾರಿಗೂ ಇಲ್ಲ' ನಾಟಕದಲ್ಲಿ ರೊಟ್ಟಿಯನ್ನು ಬಚ್ಚಿಟ್ಟ ನಾವಿಕ ಸಾಯುವ ಬಗೆ ಕುತೂಹಲಕಾರಿಯಾಗಿದೆ. ಸ್ವಲ್ಪ ಎಚ್ಚರ ತಪ್ಪಿದರೆ ಈ ಘಟನೆ ತುಂಬಾ ಕೃತಕವಾಗಬಹುದಿತ್ತು. ಏಕೆಂದರೆ ತಾನು ಬಚ್ಚಿಟ್ಟಿರುವುದು ಕೇವಲ ರೊಟ್ಟಿಯನ್ನು ಎಂದು ಅವನ ಏಕೆ ಹೇಳಲಿಲ್ಲವೆಂಬ ಪ್ರಶ್ನೆ ಸಹಜವಾಗಿಯೇ ಮೂಡುತ್ತದೆ. ಆದರೆ ಹಾಗೆ ಹೇಳಲು ಅವನಿಗೆ ಅವಕಾಶವೇ ಸಿಗುವುದಿಲ್ಲ. ಬೇಸರ ಮತ್ತು ಭಯಗಳ ಪರಿಣಾಮವಾಗಿಯೇ ಮೂಡಿರುವ ಹತಾಶ ಕ್ರೌರ್ಯವು ಕೊನೆಗೂ ಬಲಿ ತೆಗೆದುಕೊಳ್ಳುವುದು ನಿರಪರಾಧಿಯನ್ನೇ ಆಗಿರುತ್ತದೆ. ನಾಟಕ ಕ್ರಿಯೆಯ ರಭಸದಲ್ಲಿ ಆ ನಾವಿಕನ ಅಸಹಾಯಕತೆಯನ್ನು ಪರಿಣಾಮಕಾರಿಯಾಗಿ ಸಂವಹನ ಮಾಡಲಾಗಿದೆ. ಹಾಗೆಯೇ ಎರಡನೆಯ ನಾಟಕದಲ್ಲಿ ಮುಖವಾಡಗಳನ್ನು, ನಾಟಕೀಯತೆಯನ್ನು ಸಾಧಿಸಲು ಬಳಸಿಕೊಳ್ಳಲಾಗಿದೆ. 'ಮುಖವಾಡ'ವನ್ನು ಹಾಕಿಕೊಂಡಾಗ ವ್ಯಕ್ತಿಯ ಅಂತರಂಗದ ಭಾವನೆಗಳು ಬಹಿರಂಗವಾಗುವುದು ವಾಸ್ತವತೆಯ ತಲೆಕೆಳಗಾದ ಚಿತ್ರಣವಾಗಿದೆ. ಬದುಕಿನಲ್ಲಿ ಅಂತರಂಗವನ್ನು ಮರೆ ಮಾಡಲು ನೆರವಾಗುವ ಮುಖವಾಡವು ನಾಟಕದಲ್ಲಿ ತದ್ವಿರುದ್ಧವಾದ ಕೆಲಸವನ್ನು ಮಾಡುತ್ತದೆ. ಇದು ಫ್ಲಾಶ್‌ಬ್ಯಾಕ್ ತಂತ್ರವನ್ನು ನೆನಪಿಗೆ ತರುವ ಆದರೆ ಅದಕ್ಕಿಂತ ಭಿನ್ನವಾದ ಉಪಕರಣ. ಮೂರನೆಯ ನಾಟಕವು ಟೀ ಅಂಗಡಿಯ ಮಾಲೀಕನ ಸಾವಿನೊಂದಿಗೆ ಮುಕ್ತಾಯವಾಗಿದ್ದರೆ, ಒಂದು ರೀತಿ ಇರುತ್ತಿತ್ತು. ಆದರೆ ಹಾವಿನ ಕೆಳಗಿನ ಕೊಲೆಗಡುಕರು ತಾವೂ ಸಾಯುತ್ತಾರೆ. ಆದರೆ ಆ ಸಾವು ತಕ್ಷಣದ ಸತ್ಯವಲ್ಲ. ಭವಿಷ್ಯದಲ್ಲಿ ಇವರೂ ಸಾಯಬೇಕೆಂಬುದರ ಸೂಚನೆ ಮಾತ್ರ. ಎಂದರೆ ಇಲ್ಲಿ ಕಾಲವನ್ನು ಸಂಕುಚಿತಗೊಳಸಲಾಗಿದೆ (contraction). ಹೀಗೆಯೇ ಹಲವು ತಾಂತ್ರಿಕ ಸಂಗತಿಗಳನ್ನು ಹೆಸರಿಸಬಹುದು.

ರಾಜು ಅವರು ಅಸಂಗತ ನಾಟಕಗಳ ಉಚ್ಛ್ರಾಯದ ದಿನಗಳನ್ನು ದಾಟಿ ಬಂದವರು. ಆ ಕಾಲದಲ್ಲಿ ನಾಟಕವನ್ನು ಬರೆಯದಿದ್ದರೂ ಅವುಗಳ ದಟ್ಟ ಪ್ರಭಾವಕ್ಕೆ ಒಳಗಾದವರು. ಈ ನಾಟಕಗಳ ಸಂಭಾಷಣೆಯ ರಚನೆಯಲ್ಲಿ ಅದರಲ್ಲೂ ಮೂರನೆಯ ನಾಟಕದಲ್ಲಿ ಅಸಂಗತ ಛಾಯೆಯನ್ನು ಗುರುತಿಸಬಹುದು. ಆದರೆ ಅಸಂಗತದಲ್ಲಿ ಅಷ್ಟು ಮೂರ್ತವಾಗದೆ ಇರುತ್ತಿದ್ದ ಅರ್ಥವಲಯಗಳು ಇಲ್ಲಿ ಸಾಕಷ್ಟು ಸ್ಪಷ್ಟವಾಗಿವೆ. ಬದುಕಿನ ಹೆದ್ದಾರಿಯಲ್ಲಿ ರಾತ್ರಿ ಕಳೆಯುತ್ತಿರುವ ವ್ಯಕ್ತಿಗಳ ಕ್ರಿಯೆಯ ನಿರರ್ಥಕತೆಯು ನಮ್ಮೆಲ್ಲ ಕ್ರಿಯೆಗಳ ನಿರರ್ಥಕತೆಗೆ ಒಡ್ಡಿದ ಪ್ರತಿಮೆಯೇ ಆಗಿರುವುದರಿಂದ ಅರ್ಥಪೂರ್ಣವಾಗುತ್ತದೆ. ಸಂಭಾಷಣೆಯ ಚುರುಕುತನವಂತೂ ಅಸಂಗತ ಫಲಿತವೇ ಆಗಿದೆ.

ನಾಟಕದಲ್ಲಿ ಭಾಷೆಯ ಬಳಕೆಗೆ ಸಂಬಂಧಪಟ್ಟಂತೆ ಪ್ರಯೋಗಶೀಲತೆ ಹಾಗೂ ವೈವಿಧ್ಯಕ್ಕೆ ಅವಕಾಶವಿದೆ. ಕನ್ನಡದ ಪ್ರಮುಖ ಪ್ರಾದೇಶಿಕ ವೈವಿಧ್ಯಗಳ ಪರಿಚಯವಿದ್ದವರು ಒಂದೇ ನಾಟಕದಲ್ಲಿ ಭಾಷೆಯ ಹಲವು ಪದರಗಳನ್ನು ಬಳಸಿಕೊಳ್ಳಬಹುದು. ಕೈಲಾಸಂ ಕೆಲವು ಮಿತಿಗಳೊಳಗೆ ಹಾಗೆ ಮಾಡಿದರು. ಆದರೆ ಬಹುಪಾಲು ನಾಟಕಕಾರರು ಪ್ರಮಾಣೀಕೃತ ಭಾಷೆಯನ್ನು ಬಳಸಿದರು ಅಥವಾ ಒಂದು ಪ್ರದೇಶದ ಭಾಷೆಗೆ ತಮ್ಮನ್ನು ಸೀಮಿತಗೊಳಿಸಿಕೊಂಡರು. ರಾಜುರವರ ನಾಟಕಗಳಲ್ಲಿ ಇಂತಹ ವೈವಿಧ್ಯಕ್ಕೆ ಅವಕಾಶವಿತ್ತು. ಕರಾವಳಿಯ ಹುಡುಗ ಹೊಳ್ಳ, ದಾವಣಗೆರೆಯ ವರ್ತಕ ವಿವಿಧ ಪ್ರದೇಶಗಳಿಂದ ಬಂದಿರಬಹುದಾದ

ನಾವಿಕರು ಇವರೆಲ್ಲರಲ್ಲೂ ಪ್ರಾದೇಶಿಕತೆಯ ಛಾಯೆ ಇರಬಹುದಿತ್ತು. ಈ ನಾಟಕಗಳಲ್ಲಿ ವಿವರಗಳಲ್ಲಿ ಪ್ರಾದೇಶಿಕತೆಯಿದ್ದರೂ ಭಾಷೆ ತುಡಿಯುವುದು ಪ್ರಮಾಣದ (standard) ಕಡೆಗೆ.

ಈಗಾಗಲೇ ಹತ್ತಾರು ಯಶಸ್ವೀ ರಂಗ ಪ್ರಯೋಗಗಳನ್ನು ಕಂಡಿರುವ ಈ ಏಕಾಂಕಗಳು, ಜನಪ್ರಿಯವಾಗುವುದರಲ್ಲಿ ಸಂದೇಹವೇ ಇಲ್ಲ. ರಾಜುರವರ ಬರಲಿರುವ ನಾಟಕಗಳು, ಇಲ್ಲಿರುವ ಎಲ್ಲ ಗುಣಗಳೊಂದಿಗೆ, ಮತ್ತಷ್ಟು ಶೋಧನಪರತೆಯನ್ನು ಮೈಗೂಡಿಸಿಕೊಳ್ಳಲೆಂಬ ಹಾರೈಕೆಯೊಂದಿಗೆ, ಈ ಕೆಲವು ಮಾತುಗಳನ್ನು ಮುಗಿಸುತ್ತಿದ್ದೇನೆ.

*(ಮೊದಲ ಮೂರು ಏಕಾಂಕಗಳಿಗೆ ಬರೆದ ಮುನ್ನುಡಿ)*



# ಚಿ.ಶ್ರೀನಿವಾಸರಾಜು ಅವರ ಐದು ಮೂಕ ನಾಟಕಗಳು

● *ಕ.ವೆಂ. ರಾಜಗೋಪಾಲ*

**ಕ**ನ್ನಡ ರಂಗಭೂಮಿಯ ಇತಿಹಾಸದಲ್ಲಿ ಹೊಸ ಬಗೆಯ ನಾಟಕಗಳು ಕಾಣಿಸಿಕೊಂಡ ಸಮಯವನ್ನು ೧೯೬೦ರಿಂದ ೭೦ರ ದಶಕವೆಂದು ಹೇಳಬೇಕಾದೀತು. ಅಂತಹ ಚಿಂತನೆಯು ರಾಷ್ಟ್ರೀಯವಾಗಿ ನವ್ಯ ಚಿಂತನೆಯ ಸಾಹಿತ್ಯದ ಗರ್ಭದಿಂದ ಒಡಮೂಡಿದಂತೆ ಆಯಿತೆನ್ನ ಬಹುದು. ಇದಕ್ಕೆ ಬೇಕಾಗಿದ್ದ ಪ್ರಭಾವವು ರಾಷ್ಟ್ರೀಯ ರಂಗಭೂಮಿಯ ನೆಲೆಯನ್ನ ಪಡೆದುಕೊಳ್ಳಲು ಎರಡನೆಯ ಮಹಾಯುದ್ಧದ ನಂತರದಲ್ಲಿ ಪಾಶ್ಚಿಮಾತ್ಯ ಗಾಳಿಯು ಅಸಂಗತ ಎಂಬುದರ ಅವಶ್ಯವಾದ ಪ್ರಭಾವವಾಗಿದ್ದಿತು. ಇದರಿಂದಾಗಿ ನಮ್ಮಲ್ಲಿಯೂ ಸ್ವಾತಂತ್ರ್ಯಪೂರ್ವದ ರಂಗಭೂಮಿಯು ಹೊಸ ಆವಿಷ್ಕಾರಗಳಿಗೆ ಒಳಗಾಯಿತು. ಕನ್ನಡದಲ್ಲಿ ನವ್ಯ ಕಾವ್ಯವು ತನ್ನ ಪೂರ್ಣ ಪ್ರಮಾಣದ ಹವಾಗುಣವನ್ನು ಪಡೆದುದಾಗಿದ್ದ ಕಾಲವು- ಅದು. ಆದುದರಿಂದ ನವ್ಯೋತ್ತರ ತರುಣ ಪೀಳಿಗೆಯು ಆಧುನಿಕ ರೀತಿ ನೀತಿಯ ನಾಟಕ ರಚನೆಗಳಿಗೆ ತೊಡಗಿದಂತೆ ಕಂಡುಬರುತ್ತಿದೆ – ಆ ವೇಳೆಗೆ ಪಾಶ್ಚಿಮಾತ್ಯ ರಂಗ ಸಂಸ್ಥೆಗಳು ಬಂದು ಹೋಗುತ್ತಾ ಹೊಸ ಬಗೆಯ ಪ್ರಯೋಗಗಳಿಗೆ ತಳಹದಿಯನ್ನು ಹಾಕಿದವೆನ್ನ ಬಹುದು. ಅವುಗಳು ಎರಡು ಮಹಾಯುದ್ಧಗಳ ನಡುವಿನ ನಾಟಕಗಳನ್ನು ಷೇಕ್ಸ್‌ಪಿಯರನ್ನು ಕೂಡ ಅಭಿನಯಿಸುವ ಬಗೆಯಲ್ಲಿ 'ಆತುರ'ಗಳನ್ನು ಬಹಳ ಹಿಂದಕ್ಕೆ ತಳ್ಳಿಬಿಟ್ಟಿದ್ದು – ರಂಗಪ್ರಯೋಗ ಗಳಲ್ಲಿ ಅನೇಕ ಹೊಸ ಬಗೆಗಳನ್ನು ತೋರಿಸಿದ್ದಲ್ಲದೆ ತಮ್ಮ ಅಸಂಗತ ವಿಚಾರ ಧಾರೆಯನ್ನು ಚರ್ಚೆಗಳಲ್ಲಿ ನಮ್ಮ ಮುಂದೆ ತೋರಿಸಿ ಕೊಟ್ಟಿದ್ದುವು. ಇದರ ಫಲವೇ ಈಗಲೂ ನಾವು ಇತಿಹಾಸದ ಒಂದು ಖಚಿತವಾದ ಹೆಜ್ಜೆಯೆಂದು ಗುರುತಿಸಬೇಕಾಗಿರುವ ಆಧುನಿಕ ನಾಟಕ ರಂಗಪ್ರಯೋಗಗಳು ಮತ್ತು ನಾಟಕಕಾರರು ಎಂಬ ವಿಷಯವೇ ಮುಖ್ಯವಾಗಿದೆ.



ಇಂದು ನಾವು ಈ ಹೊಸ ಬಗೆಯನ್ನು ನಮ್ಮ ರಂಗಪ್ರಯೋಗಗಳಲ್ಲಿ ಮತ್ತು ರಚಿತವಾಗುತ್ತಿರುವ ನಾಟಕಗಳಲ್ಲಿ ಗುರುತಿಸಬಹುದು ಇಂತಹ ಅವಕಾಶದಲ್ಲಿ ಬೆಂಗಳೂರಿನಲ್ಲಿದ್ದ ಶ್ರೀರಂಗರೂ ಸೇರಿದಂತೆ ಅಲ್ಲದೆ ಲಂಕೇಶರಲ್ಲೂ ಪ್ರಮುಖವಾಗಿ ಗುರುತಿಸಬೇಕಾದ ಆಶಯಗಳು ಗಮನಾರ್ಹವಾಗಿದೆ. ಇದರಿಂದ ಗಮನಕ್ಕೆ ಬರುವ ನಾಟಕಕಾರರೆಂದರೆ ಕಾರ್ನಾಡ್, ಕಂಬಾರ, ಚಂಪಾ ಮತ್ತು ಶ್ರೀನಿವಾಸರಾಜು ; ರತ್ನ ಮತ್ತು ಪೂಚಂತೇ ಅಂದಿನ ಎಲ್ಲ ಹೊಸ ನಾಟಕಗಳಿಗೂ ಕಾರಣರಾದರು. ಇಂತಹ ಅವಕಾಶವು ನಾಟಕಗಳಲ್ಲಿರುವ ಸಾಮರ್ಥ್ಯದಿಂದ ಉಂಟಾಗಿರುವುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಶ್ರೀರಂಗರು ಕೂಡ ಈ ಸಮಯದಲ್ಲಿ ರಚಿಸಿದ ನಾಟಕಗಳಿಗೆ ಈ ಹೊಸ ಸತ್ವವು ಸೇರಿಕೊಂಡಿರುವುದು ಮುಖ್ಯವೇ ಆಗುತ್ತದೆ. ಆದರೆ ನಾಟಕ ರಚನೆಯು ಹೊಸ ರಂಗಭೂಮಿಯನ್ನು (ಸ್ಪಾಟ್ ಲೈಟಿನಿಂದ ಒದಗಿಸದ ಅನುಕೂಲಗಳನ್ನು) ಕೇವಲ ಪ್ರಯೋಗಗಳಿಗೆ ಬಿಡದೆ ನಾಟಕ ರಚನೆಯ ಹೊಸ ಚಿಂತನೆಯಲ್ಲಿ ರಂಗಭೂಮಿಯ ಅನುಕೂಲಗಳನ್ನು ಬಿಟ್ಟುಕೊಡದೆ ಇಂದಿಗೂ ಆಧುನಿಕ – ವೈಜ್ಞಾನಿಕ ಸವಾಲುಗಳನ್ನು ಎದುರಿಸುತ್ತಾ ಬಂದಿದೆ. ಗಿರೀಶ್ ಕಾರ್ನಾಡರ ಇತ್ತೀಚಿನ "ಒಡಕು ಬಿಂಬ"ದ ಪ್ರಯೋಗವು ಮುಖ್ಯವಾದುದೆಂಬುದನ್ನು ಮರೆಯುವಂತಿಲ್ಲ.

ಇಂತಹ ಪ್ರಯೋಗವು (ಒಡಕು ಬಿಂಬದ ಪ್ರಯೋಗ) ಅಂದಿನ ಅಂದರೆ ಅರವತ್ತರ ದಶಕದಲ್ಲಿ ಹೊಸ ಕಾಲದಲ್ಲಿ ಸಾಧ್ಯವಾದೀತೆಂದು ಹೇಳಲು ಬರುತ್ತಿರಲಿಲ್ಲ – ಆದರೆ ಒದಗಿ ಬಂದಿರುವ ರಂಗಭೂಮಿಯ ವಿಕಾಸದಲ್ಲಿ ಅಂದಿನ ತರುಣ ಪೀಳಿಗೆಯು ವಹಿಸಿದ ಪಾತ್ರವು ಬಹುಮುಖ್ಯವಾದುದು ಮೊದಲಿಗೆ ಪೂಚಂತೇ ಅವರ 'ಯಮಳ ಪ್ರಶ್ನೆ'ಯ ಪ್ರಯೋಗವು ಹೊಸ ಹಾದಿಯನ್ನು ತೆರೆದು ತರುಣರನ್ನು ಆಹ್ವಾನಿಸಿತೆಂದರೆ ಅತಿಶಯೋಕ್ತಿಯಾಗಲಾರದು.

ಅಂತಹ ಸಮಯದಲ್ಲಿ ಶ್ರೀನಿವಾಸರಾಜು ರಚಿಸಿದ ಮೂಕ ನಾಟಕಗಳು – ಒಂದು ವಿಸ್ಮಯಕರವಾದ ಪ್ರಯೋಗ ಸಹಿತವಾದ ಹೊಸ ನಾಟಕದ ರಚನೆಗೆ ಪುಷ್ಟಿ ನೀಡಿದ ಬಗೆಯೇ ಆಗುತ್ತದೆ – ಅವರ ಮೊದಲ ಮೂಕನಾಟಕ 'ಬೀಗದಕೈ' ಅಂದಿನ 'ಥಿಯೇಟರ್' ಪತ್ರಿಕೆಯಲ್ಲಿ ಪ್ರಕಟವಾಯಿತು. ಇದರ ಪ್ರಯೋಗವು ಅಂದಿನ ಬೆಂಗಳೂರು ಎಂ.ಇ.ಎಸ್ ಕಾಲೇಜಿನ ರಂಗಭೂಮಿಯಲ್ಲಿ ಒಡಮೂಡಿತ್ತು. ಇದರ ಯಶಸ್ಸಿನಿಂದ ಶ್ರೀನಿವಾಸರಾಜು – ಮುಂದಿನ ನಾಲ್ಕು ನಾಟಕಗಳನ್ನು (ಮೂಕ ನಾಟಕಗಳು–೫) ರಚಿಸಿ ಪ್ರಕಟಿಸಿದ್ದಾರೆ (ಅದರ ಕಾಲ ೧೯೭೭). ಅದರ ಮುನ್ನುಡಿಯಲ್ಲಿ ನಾಲ್ಕು ವರ್ಷಗಳ ಹಿಂದೆ ರಚಿಸಿದ ಮೊದಲ ಕೃತಿಯ ವಿಷಯವಿದೆ. ಈ ಕೃತಿಯನ್ನು ಈಗ ಪುನಃ ಪರಿಶೀಲನೆಗೆ ಒಳಪಡಿಸಿದಲ್ಲಿ ಆಧುನಿಕ ನಾಟಕದ ಜೀವಾಳವನ್ನು ಗುರುತಿಸಬಹುದಾಗಿದೆ.

೧. ಮೂಕನಾಟಕಕ್ಕೆ ಸಾಹಿತ್ಯ (ಉಳಿದ ರಚನೆಗಳಂತೆ) ಎಂಬುದಿಲ್ಲ. ಆದರೆ ಅದು ಅಭಿನಯ ಕ್ರಿಯೆಯ ರೂಪದಲ್ಲಿಯೇ ಇರುವುದರಿಂದ ನಾಟಕವು ಪ್ರಯೋಗವಿಲ್ಲದೆ ಇರುವಂತಿಲ್ಲ.

೨. ಮೂಕನಾಟಕದ ಪ್ರಯೋಗವು ರಂಗಭೂಮಿಯಲ್ಲಿ ಆಧುನಿಕ ಸಲಕರಣೆಗಳಿಂದ (ಸ್ಪಾಟ್ ಲೈಟುಗಳು ಸಾಕು ಬೇಕು.) ಪ್ರೇಕ್ಷಕರನ್ನು ಎಂದಿನ (ಇಂದಿನದು ಕೂಡ) 'ರಚಿತ ನಾಟಕ'ಗಳಂತೆಯೇ ಪರಿಣಾಮಕಾರಿಯಾಗುತ್ತದೆ.

೩. ಇದರಲ್ಲಿ ನಟನಿಗೆ ಅವಶ್ಯವಾದ ಅಭಿನಯದ ಸೂಕ್ಷ್ಮತೆಗಳ ಅರಿವಿರಬೇಕು – ಆತನು ಒಮ್ಮೆ ರಂಗಭೂಮಿಯಲ್ಲಿ Spot lightನಲ್ಲಿ ಕಾಣಿಸಿಕೊಂಡರೆ ತನ್ನನ್ನು ನಾಟಕಕ್ರಿಯೆಯ ಒಂದು ಸಾಧನ (Tool)ದ ಪರಿಕರವಾಗಿ ಬಿಡುತ್ತಾನೆ – ಹಾಗೆ ಮಾಡುವಲ್ಲಿ ಬೇರೆಯ ನಾಟಕ (ರಚಿತ ಸಂಭಾಷಣೆ ಇತ್ಯಾದಿಗಳಿಂದ ಕೂಡಿದ ಕೃತಿ)ಗಳಂತೆಯಲ್ಲದೆ ಪ್ರತಿಯೊಂದು ಸಣ್ಣ ಚಲನೆಗೂ ಜೀವ ಬರುವಂತಹ ಅಭಿನಯವನ್ನು ಸಾಧಿಸಬೇಕಾಗುತ್ತದೆ

೪. ಮೂಕನಾಟಕದ ಪರಿಣಾಮವು ಪ್ರೇಕ್ಷಕರನ್ನು ಏಕಾಂತಕ್ಕೆ ತೊಡಗುವಂತೆ ಪರಿಣಾಮಕಾರಿ ಯಾಗುತ್ತದೆ. ಅಭಿನಯದ ಮೂಕ ಅಂಶಗಳು 'ಮೌನ'ದ ಸತ್ವವಾಗಿ ಜೀವಂತವಾಗುತ್ತವೆ.

೫. ವಾಸ್ತವವಾಗಿ ಬೇರೆಯ 'ನಾಟಕ'ಗಳೂ ಇಂತಹ ಪರಿಣಾಮಕ್ಕಾಗಿಯೇ ರಚಿತವಾಗುತ್ತದೆ ಎಂಬುದನ್ನು ನೆನೆದಲ್ಲಿ ಯಾವುದೇ 'ನಾಟಕ'ದ ಒಳಗೆ ಈ ಬಗೆಯ ಅಂದರೆ ಮೂಕನಾಟಕದ (ಶ್ರೀನಿವಾಸರಾಜು ಚಿಂತಿಸಿ ರಚಿಸಿದ) ಎಲುಬಿನ ಹಂದರವನ್ನು ಪಡೆದಿರಲೇಬೇಕಾಗುತ್ತದೆ.

೬. ಹೀಗೆ ಮೂಕನಾಟಕವು ಮಾತಿನ ಸಂಭಾಷಣೆಯ ಅಭಿನಯ ಕ್ರಿಯೆಯ ಪರಿಣಾಮ (Live wireನಂಥ)ವಾಗುತ್ತದೆ. ಇಂತಹ ಸಂದರ್ಭದಲ್ಲಿ ಪೂಚಂತೇ ಅವರ **'ಯಮಳ ಪ್ರಶ್ನೆ'** ಮತ್ತು ರತ್ನ ಅವರ 'ಎಲ್ಲಿಗೆ' ಇವೆರಡನ್ನು ಕೇವಲ ಪರಿಣಾಮಕ್ಕಾಗಿಯೇ ಗುರುತಿಸ ಬೇಕಾದೀತು – **'ಯಮಳ ಪ್ರಶ್ನೆಯಲ್ಲಿ'** ಒಂದು ಮೋಟರು ಬೈಕು 'ಜೀವಂತ ಪಾತ್ರ'ವಾಗುವ ಬಗೆ ವಿಶಿಷ್ಟವಾದುದು. ನಮ್ಮ ಜೀವನದಲ್ಲಿ ಯಾಂತ್ರಿಕ ಯುಗವು ಪ್ರವೇಶ ಮಾಡುತ್ತಿರುವುದನ್ನು ಕಂಪ್ಯೂಟರ್ ಮೂಲಕ ರೂಪಿಸುವ **'ಒಡಕು ಬಿಂಬ'** ಕೂಡ ಒಂದು ವಿಶಿಷ್ಟ ಪ್ರಯೋಗ ಮತ್ತು ನಮ್ಮ ಬದುಕಿನಲ್ಲಿ ಜೀವಂತತನವನ್ನು ರಕ್ಷಿಸಿಕೊಳ್ಳಲು ಗಂಡಿನ ಅವಜ್ಞತೆಯನ್ನು ಸಹಿಸಿಕೊಳ್ಳುವ ಹೆಣ್ಣಿನ ಸಹನಶಕ್ತಿಯನ್ನು ತೋರುವಲ್ಲಿ – ರಂಗಭೂಮಿಯು ಆಧುನಿಕತೆ ಅಥವಾ ಸಮಕಾಲೀನತೆಯನ್ನು ತೋರಿಸುವ ಪ್ರಯತ್ನ ಪರಿಣಾಮಕ್ಕಾಗಿಯೇ ಗುರುತಿಸಬೇಕಾದ ಬೆಳವಣಿಗೆಯಾಗಿದೆಯಷ್ಟೆ – ಈ ನಾಟಕದಲ್ಲಿ ಕೂಡ ಪಾತ್ರವು ಏಕಪಾತ್ರವಾಗಿ – ನಾಟಕದ ತಿರುಳಾಗಿರುವ 'Mime Tone' ಎನ್ನಬಹುದಾದ ಅಂಶವನ್ನು ಶ್ರೀನಿವಾಸರಾಜು ಅವರ ಮೂಕ ನಾಟಕಗಳನ್ನು ಅದರಲ್ಲಿ **'ಬೀಗದಕೈ'** ಮತ್ತು **'ಫೀನಿಕ್ಸ್'** ಕೃತಿಗಳನ್ನು ನೋಡುವಲ್ಲಿ ಅರಿವಾಗಬಹುದಾಗಿದೆ.

೭. ನಾಟಕವು ಏಕಾಂಕವಾಗಲಿ ಪೂರ್ಣಕಾಲಿಕವಾಗಲಿ (Full time play) – ತಿರುಳಿನ ಪರಿಣಾಮದ ವಿಷಯ ಅಥವಾ ಆಶಯವು ನಮ್ಮ ದೇಹದ ಸೌಂದರ್ಯವನ್ನು ಹಿಡಿದಿಟ್ಟಿರುವ 'ಎಲುಬಿನ ಹಂದರ'ದ ಪ್ರಾಮುಖ್ಯತೆಯನ್ನು ಮರೆಯುವಂತಿಲ್ಲ – ನಾಟಕವು ಪ್ರದರ್ಶನದ ಮೂಲಕ ಗಮನಕ್ಕೆ ತರುವ ಬದುಕಿನ 'ಧರ್ಮ' ಕೂಡ, ಈ 'ಮೂಕ-ಹಂದರ'ದ ಫಲವೆಂಬುದನ್ನು ಮರೆಯುವಂತಿಲ್ಲ.

೮. ನಾಟಕದ ತಿರುಳನ್ನು ಕುರಿತು ವಿಚಾರ ಮಾಡುವಲ್ಲಿ ಚಂಪಾ ಅವರ **'ಕೊಡೆಗಳು'** ಮತ್ತು ಲಂಕೇಶರ **'ತೆರೆಗಳು'** ರಾಜು ಅವರ ಮೂಕ ನಾಟಕಗಳಂತೆಯೇ ಪರಿಣಾಮಕಾರಿ ಯಾಗುತ್ತವೆ. ಒಟ್ಟಿನಲ್ಲಿ ಶ್ರೀನಿವಾಸರಾಜು ಕಂಡುಕೊಂಡ ನಾಟಕದ ಈ ವಿಶಿಷ್ಟವಾದ

ಆಶಯವನ್ನು ಅವರ ಮೂಕ ನಾಟಕಗಳಲ್ಲಿ ಕಾಣಬಹುದಾಗಿದೆ ಎಂಬುದು ನನ್ನ ಈ ಲೇಖನದ ಆಶಯವಾಗಿದೆ.

ಪ್ರೊ. ಚಿ. ಶ್ರೀನಿವಾಸರಾಜುರ ಮೂಕ ನಾಟಕಗಳಲ್ಲದೆ **'ಭಸನಾಲ ಬಂಧು'** ಎಂಬ ಒಂದು ಕವನ ಸಂಕಲನವನ್ನು ಹಲವು ಏಕಾಂಕ ನಾಟಕಗಳನ್ನು ರಚಿಸಿದ್ದಾರೆ. ಅವುಗಳಲ್ಲಿ **'ನಾಳೆ ಯಾರಿಗೂ ಇಲ್ಲ'** – ಎಂಬುದು ಒಂದು ಶ್ರೇಷ್ಠ ಏಕಾಂಕವಾಗಿದೆ. ದಿವಂಗತ ರಾಜರತ್ನಂ ಅವರ 'ಸಾಹಿತ್ಯ ಪರಿಚಾರಿಕೆ'ಯನ್ನೂ ಉಳಿಸಿದ್ದಾರೆ. ಆಧುನಿಕ ರಂಗಭೂಮಿಗೆ ಇವರ ಕೊಡುಗೆ ಗಂಭೀರವೂ ಅಮೂಲ್ಯವೂ ಆದುದಾಗಿದೆ.

❑

# ಶ್ರೀನಿವಾಸರಾಜುರವರ ಏಕಾಂಕಗಳು

● ಡಾ. ಹೆಚ್.ಎಲ್. ಪುಷ್ಪ

ಕಾಲೇಜು ರಂಗಭೂಮಿಯಲ್ಲಿ ಪ್ರದರ್ಶನದ ಸಾಧ್ಯತೆಗಳನ್ನು ವಿಸ್ತರಿಸಿದ ನಾಟಕ ಪ್ರಕಾರವೆಂದರೆ ಏಕಾಂಕಗಳು. ಏಕಾಂಕಗಳು ಎಲ್ಲಾ ನಾಟಕಕಾರರನ್ನು ಕಾಡಿದ ದೃಶ್ಯರೂಪಕಗಳಾಗಿವೆ. ಪಾಶ್ಚಾತ್ಯ ಸಾಹಿತ್ಯದಲ್ಲಿ ಪೂರ್ಣ ಪ್ರಮಾಣದ ನಾಟಕಗಳು ರೂಪುಗೊಳ್ಳುವುದಕ್ಕಿಂತ ಮುಂಚೆ ಚಿಕ್ಕ ಚಿಕ್ಕ ದೃಶ್ಯರೂಪಗಳು ಪ್ರಕಟಗೊಂಡಿದ್ದು ಅವುಗಳನ್ನು ಮಿಸ್ಟರಿ ಮತ್ತು ಮಿರಕಲ್ ಎಂದು ಕರೆಯಲಾಯಿತು. ಧಾರ್ಮಿಕ ಸಂತರ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಈ ಚಿಕ್ಕ ಚಿಕ್ಕ ದೃಶ್ಯರೂಪಗಳು ಮುಂದೆ ಲೌಕಿಕ ವಸ್ತುಗಳನ್ನು ಒಳಗೊಂಡು ಏಕಾಂಕಗಳೆನ್ನಿಸಿಕೊಂಡವು. ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಕಂಪನಿ ನಾಟಕಗಳಲ್ಲಿನ ಏಕತಾನತೆಯಿಂದ ಬೇಸತ್ತ ಜನಕ್ಕೆ ಪಾಶ್ಚಾತ್ಯ ಪ್ರಭಾವದಿಂದ ಬಂದ ಏಕಾಂಕಗಳು ಆಕರ್ಷಕವೆನಿಸಿದವು.

ಕನ್ನಡದ ಬಹುಪಾಲು ಮುಖ್ಯನಾಟಕಕಾರರು ಏಕಾಂಕಗಳಿಗೆ ತಮ್ಮ ಕೊಡುಗೆ ಸಲ್ಲಿಸಿದ್ದರೆ, ಕೈಲಾಸಂ, ಶ್ರೀರಂಗ, ಬೇಂದ್ರೆ, ಸಂಸ, ಶಿವರಾಮ ಕಾರಂತ, ಪರ್ವತವಾಣಿ ನ. ರತ್ನ, ಚಂದ್ರಕಾಂತ ಕುಸನೂರ, ಲಂಕೇಶ್, ಗಿರೀಶ್ ಕಾರ್ನಾಡ್, ಚಂದ್ರಶೇಖರ ಕಂಬಾರ, ಚಂದ್ರಶೇಖರ ಪಾಟೀಲ, ಡಾ. ವಿಜಯಾ, ಚಿ. ಶ್ರೀನಿವಾಸರಾಜು ಹಾಗೂ ಹಲವರು ಈ ಏಕಾಂಕಗಳನ್ನು ರಚಿಸಿದ್ದಾರೆ. ಸೀಮಿತವಾದ ಕಾಲ, ಸ್ಥಳ, ಕಥೆಯ ಚೌಕಟ್ಟಿನಲ್ಲಿ ರಚಿತವಾದ ಈ ನಾಟಕಗಳು ತಮ್ಮ ಕಿರು ಆಕೃತಿಯಲ್ಲಿ ನಿರ್ದಿಷ್ಟವಾದ ಪರಿಣಾಮವನ್ನು ಸಾಧಿಸಿದವು. ೧೯೮೬ರಲ್ಲಿ ಸಿಂಧುವಳ್ಳಿ ಅನಂತಮೂರ್ತಿ ಸಂಪಾದಿಸಿ ಪ್ರಕಟಿಸಿದ 'ಏಕಾಂಕ ಸಂಗ್ರಹ' ಪರ್ವತವಾಣಿಯವರನ್ನು ಒಳಗೊಂಡಂತೆ ವ್ಯಾಸ ದೇಶಪಾಂಡೆಯವರೆಗೆ ಎಲ್ಲಾ ಸಾಹಿತ್ಯಕ ಚಳುವಳಿಗಳಲ್ಲಿ ಬರೆದ ನಾಟಕಕಾರರ ಏಕಾಂಕಗಳನ್ನು ಒಳಗೊಂಡಿದ್ದು ಏಕಾಂಕಗಳ ಪ್ರಾತಿನಿಧಿಕ ಸಂಕಲನವೂ ಆಗಿದೆ. ಈ

ಸಂಕಲನದಿಂದೀಚೆಗೆ ಬರೆಯುತ್ತಿರುವ ನಾಟಕಕಾರ ಏಕಾಂಕಗಳನ್ನೊಳಗೊಂಡ ಮತ್ತೊಂದು ಸಂಗ್ರಹ ಪ್ರಕಟವಾಗಬೇಕಾದ ಅಗತ್ಯವನ್ನು ಈ ಸಂದರ್ಭದಲ್ಲಿ ಗುರುತಿಸಲಾಗಿದೆ.

ಚಿ. ಶ್ರೀನಿವಾಸರಾಜುರವರ ಏಕಾಂಕಗಳಿಗೆ ಕಾಲೇಜು ರಂಗಭೂಮಿಯಲ್ಲಿ ವಿಶೇಷವಾದ ಸ್ಥಾನವಿದ್ದು ಸ್ವತಃ ನಾಟಕಕಾರರ ಆಸಕ್ತಿಯೂ ಈ ರಚನೆಗಳ ಹಿಂದೆ ಕೆಲಸ ಮಾಡಿದೆ. ಮಾನವೀಯತೆಯ ಅರ್ಥ ಕಳಕೊಂಡ ಕ್ರೌರ್ಯ ಹಿಂಸೆಗಳಿಂದ ಕೂಡಿದ ಸಮಕಾಲೀನ ಸಮಾಜವೊಂದರ ಚಿತ್ರಣ ಶ್ರೀನಿವಾಸರಾಜುರವರ ನಾಟಕಗಳಲ್ಲಿ ಸಾಮಾನ್ಯವಾಗಿ ಕಾಣಸಿಗುತ್ತದೆ. ಆಯ್ಕೆಯ ಹಕ್ಕನ್ನು ಕಳೆದುಕೊಂಡ ಅಸಂಗತ ಜಗತ್ತಿನ ಪಳೆಯುಳಿಕೆಗಳಿಂದಲೇ ಇಲ್ಲಿನ ನಾಟಕ ಕಟ್ಟುವ ಪ್ರಯತ್ನ ನಡೆದಿದೆ. ಸಾವಿನ ಕರಿನೆರಳನ್ನು ಹೊತ್ತ ಈ ನಾಟಕಗಳು ಕಲಾತ್ಮಕ ಚಿತ್ರಣಕ್ಕಿಂತ ಸಹಜ ಜೀವನದ ವಿಕೃತಿಗಳನ್ನು ಚಿತ್ರಿಸುವೆಡೆಗೆ ಹೆಚ್ಚು ಒತ್ತನ್ನು ಕೊಡುತ್ತವೆ. ೧೯೬೦ರ ಸುಮಾರಿನಲ್ಲಿ ಬರೆಯುತ್ತಿದ್ದ ಲೇಖಕರಲ್ಲಿ ಅಸಂಗತದ ಕಲ್ಪನೆ ಪ್ರಾಯೋಗಿಕ ಹಾಗೂ ಬೌದ್ಧಿಕ ತಂತ್ರವೆಂಬಂತೆ ಬಳಕೆಯಾಯಿತೇ ಹೊರತು ಸಹಜ ಜೀವನ ವಿಧಾನವೆಂಬಂತೆ ಬಳಕೆಯಾಗಲಿಲ್ಲ. ನಾವು ಜೀವಿಸುತ್ತಿದ್ದ ಸಂದರ್ಭಕ್ಕೆ ಹೊಂದಾಣಿಕೆಯಾಗದೆ ಎರವಲು ತಂದ ಪರಕೀಯ ಭಾವದಲ್ಲಿ ಈ ಕೃತಿಗಳು ನರಳಿದರೂ ಪ್ರಯೋಗದ ಹಿನ್ನೆಲೆಯಲ್ಲಿ ಹೊಸ ಸಾಧ್ಯತೆಗಳನ್ನು ಹುಟ್ಟು ಹಾಕಿದವು. ಆದರೆ ಬಹುಕಾಲ ಉಳಿಯಲು ಸಾಧ್ಯವಾಗಲಿಲ್ಲ. ಸ್ವಸ್ಥ ಜೀವನದಲ್ಲಿ ಹುಟ್ಟುಹಾಕಲ್ಪಟ್ಟ ಅಸ್ವಸ್ಥ ವಾತಾವರಣದಲ್ಲಿ ವಿಧಿ, ರೂಢಿಗತ ಪ್ರಪಂಚದ ಎದುರು ಏಕಾಂಗಿ ಮನುಷ್ಯನೊಬ್ಬನ ಬಂಡುಪ್ರವೃತ್ತಿಯನ್ನು ಇಲ್ಲಿ ಚಿತ್ರಿಸಲಾಯಿತು. ಶ್ರೀನಿವಾಸರಾಜುರವರ ಏಕಾಂಕಗಳು ಅಸಂಗತವಾದವನ್ನು ಒಳಗೊಂಡೂ ಸಹಜೀವನದ ಹುಡುಕಾಟಕ್ಕೇ ತೊಡಗಿರುವುದು ಸಮಾಧಾನಕರವಾದ ಅಂಶವಾಗಿದೆ.

ಒಂದು ವ್ಯವಸ್ಥೆಯನ್ನು ಒಪ್ಪಿಕೊಂಡು ಜೀವಿಸುತ್ತಿರುವ ಮನುಷ್ಯನಿಗೆ ಆ ವ್ಯವಸ್ಥೆಯೇ ಒಂದು ಬಂಧನವೆಂಬಂತೆ ಕಿರಿಕಿರಿ, ಅನುಮಾನಗಳು ಹುಟ್ಟಲಾರಂಭಿಸಿದರೆ ಅವನು ತನ್ನೊಳಗೆ ಛಿದ್ರಗೊಳ್ಳುತ್ತಾನೆ. ಆ ಛಿದ್ರತೆ ಅವನನ್ನು ಹಿಂಸಾಪ್ರವೃತ್ತಿಯ ಕಡೆಗೆ ಎಳೆಯಲಾರಂಭಿಸುತ್ತದೆ. ಜೀವನದ ಬಗ್ಗೆ ಶ್ರದ್ಧೆಗಿಂತ ಗೊಂದಲಗಳು ಹುಟ್ಟಲಾರಂಭಿಸುತ್ತವೆ. ಈ ಅಸಂಗತದ ಅಂಶಗಳು ನವ್ಯ ನಾಟಕಕಾರರಾದ ಗಿರೀಶ್‌ಕಾರ್ನಾಡ್, ಚಂದ್ರಶೇಖರ ಕಂಬಾರ, ಲಂಕೇಶ್ ಹಾಗು ಚಂದ್ರಶೇಖರ ಪಾಟೀಲರ ಪೂರ್ಣಾವಧಿ ಮತ್ತು ಏಕಾಂಕ ನಾಟಕಗಳಲ್ಲಿ ಕಂಡುಬಂದವು. ವ್ಯವಸ್ಥೆಯ ವಿರುದ್ಧ ಸಿಟ್ಟು, ಕ್ರಾಂತಿ ಮಾಡುವ ಹಂಬಲ, ಕ್ರಾಂತಿ ಮಾಡಲಾಗದ್ದಕ್ಕೆ ಹತಾಶೆ, ಮನುಷ್ಯನ ಗೋಸುಂಬೆತನಗಳು ವ್ಯಕ್ತವಾಗುತ್ತಾ ದುರಂತ ನಾಯಕರ ಮಾದರಿಗಳು ಹೆಚ್ಚು ಜನಪ್ರಿಯವಾಗತೊಡಗಿದವು. ಕಾರ್ನಾಡರ ತುಘಲಕ್‌ನನ್ನು ಒಳಗೊಂಡಂತೆ ಲಂಕೇಶರ ಹತಾಶಗೊಂಡ ನಾಯಕರು, ಕಂಬಾರರ ವ್ಯವಸ್ಥೆಯೊಳಗಿದ್ದೂ 'ವ್ಯಂಗ್ಯ ವಿಷಾದಕ್ಕೆ' ಒಳಗಾದ ನಾಯಕರ ಪರಂಪರೆ ಸೃಷ್ಟಿಗೊಂಡಿತು.

ಶ್ರೀನಿವಾಸರಾಜುರವರ ಏಕಾಂಕ ನಾಟಕಗಳ ನಾಯಕರು ಈ ದುರಂತ ನಾಯಕರ ಪರಂಪರೆಯೊಳಗಿನಿಂದಲೇ ಮೈತಳೆದವರಾಗಿದ್ದಾರೆ. ಆದರೆ ಅವರು ವ್ಯಂಗ್ಯ, ವಿಷಾದಗಳಲ್ಲಿ ಮುಳುಗಿ ಮೈಮರೆತವರಲ್ಲ. ಅವರು ನಕ್ಸಲೈಟ್ಸ್‌ಗಳ ಮಾದರಿಯಲ್ಲಿ ಹಿಂಸಾವಾದವನ್ನು ಸಮಾಜದ ಬದಲಾವಣೆಯಲ್ಲಿ ಅಸ್ತ್ರವಾಗಿಸಿಕೊಂಡವರು. ಈ ಹಿಂಸಾವಾದ ಎಲ್ಲ ವಾದಗಳು

ತಮ್ಮ ಟೊಳ್ಳುತನದಿಂದಲೇ ನೆಲಕಚ್ಚುತ್ತಿರುವಾಗ ವ್ಯವಸ್ಥೆಯನ್ನು ಹತೋಟಿಯಲ್ಲಿಟ್ಟುಕೊಳ್ಳಲು ಹುಡುಕುವ ಅಂತಿಮ ಆಯ್ಕೆಯಾಗಿದೆ. ಹೆಚ್ಚೆಂದರೆ ಸಾಮ, ದಾನ, ಭೇದ, ದಂಡದ ಬಳಿಕೆಯೆಂಬಂತೆ ಹಿಂಸಾವಾದ ತನ್ನ ಅಸ್ತಿತ್ವ ಪಡೆದಿದೆ.

ಸಮಾಜದ ಸಹಜಗತಿಯನ್ನು ಚಿತ್ರಿಸಲು ಹೊರಟ ಇಲ್ಲಿನ ನಾಟಕಗಳು ಮಹತ್ವಾಕಾಂಕ್ಷೆಗೆ ಒಳಗಾಗದೆ ತಮ್ಮ ಸಹಜತೆಯಿಂದಲೇ ಜನರನ್ನು ಸಮೀಪಿಸಲು ಯತ್ನಿಸುತ್ತವೆ. ಸಹಜ ಚಲನೆಯಲ್ಲಿ ಇದ್ದಕ್ಕಿದ್ದಂತೆ ಆಳಕ್ಕಿಳಿದು ಶೋಧನೆಗೆ ತೊಡಗುವ ಘಟನೆಗಳು ರಚನಾತಂತ್ರಗಳಿಗಿಂತ ಬದುಕನ್ನು ಸಮೀಪದಿಂದಲೇ ನೋಡುವ ಪ್ರಯತ್ನ ಮಾಡುತ್ತವೆ. ಚಿ. ಶ್ರೀನಿವಾಸರಾಜುರವರ ಐದು ಏಕಾಂಕಗಳು ರಂಗತಂತ್ರಗಳನ್ನು, ಸಂಕೇತಗಳನ್ನು ಸೂಕ್ತವಾಗಿ ಅಳವಡಿಸಿಕೊಂಡು ರಚನೆಗಳಾಗಿವೆ. ೧೯೮೪ರಲ್ಲಿ ಪ್ರಕಟಗೊಂಡ ಮೂರು ಏಕಾಂಕಗಳಿಗೂ ೨೦೦೨ರಲ್ಲಿ ಪ್ರಕಟವಾದ ಎರಡು ಏಕಾಂಕಗಳಿಗೂ ರಚನೆ ಮತ್ತು ಆಶಯದಲ್ಲಿ ಸಾಕಷ್ಟು ವ್ಯತ್ಯಾಸಗಳಿವೆ. ವ್ಯಕ್ತಿ ೧, ೨, ೩ ತರುಣ ೧, ೨, ೩, ಮುಖವಾಡದಪ್ಪ, ಅಧಿಕಾರಿ ಎಂದು ಸಾಮಾನ್ಯವಾಗಿ ಕರೆಯಲ್ಪಡುವ ಇಲ್ಲಿನ ಪಾತ್ರಗಳು ಸಾರ್ವಕಾಲಿಕ ಸಾರ್ವದೇಶಿಕವಾಗಬಲ್ಲ ಸಾಧ್ಯತೆ ಪಡೆದಿವೆ. ಅನಗತ್ಯವಾದ ಸಂಭಾಷಣೆ, ಕಥಾವಿವರಗಳನ್ನು ಒಳಗೊಳ್ಳದ ಈ ನಾಟಕಗಳಿಗೆ ಏಕಮುಖ ಚಲನೆಯಿದೆ. ಆ ಚಲನೆ ಚುರುಕಾದ ಸಂಭಾಷಣೆ ಹಾಗೂ ಸಾಂದ್ರತೆಯನ್ನು ಒಳಗೊಂಡಿದ್ದು ನಿರ್ದಿಷ್ಟ ಕೇಂದ್ರದೆಡೆಗೆ ಚಲಿಸುವಂತದ್ದಾಗಿದೆ.

'ನಾಳೆ ಯಾರಿಗೂ ಇಲ್ಲ' ತನ್ನ ಬಿಗಿಬಂಧದಿಂದಲೇ ಹಿಡಿದಿಡುವ ನಾಟಕವಾಗಿದೆ. ಏಕಾಂಕಕ್ಕಿರುವ ಸೀಮಿತ ವ್ಯಾಪ್ತಿಯಲ್ಲಿಯೇ ಹಸಿವು ಮತ್ತು ಕ್ರಾಂತಿಯ ಹಲವು ಮುಖಗಳನ್ನು ಚಿತ್ರಿಸಲಾಗಿದೆ. ಸಬಲರು ದುರ್ಬಲರನ್ನು ಕಿತ್ತು ತಿನ್ನುವ, ಹಸಿವಿನ ಮುಂದೆ ಎಲ್ಲಾ ಸಿದ್ಧಾಂತಗಳು ಸೋಲನಪ್ಪುವ ಪರಿಯನ್ನು ಇಲ್ಲಿ ಚಿತ್ರಿಸಲಾಗಿದೆ. ಭಾಷಣಗಳಂತಹ ಕೃತಕ ಮಾತುಗಳಲ್ಲಿ ಮುಗಿಯಬಹುದಾಗಿದ್ದ ಈ ನಾಟಕವು ಚುರುಕಾದ ಸಂಭಾಷಣೆ ಹಾಗೂ ಕ್ರಿಯೆಯಿಂದಲೇ ಗೆಲ್ಲುತ್ತದೆ. ನಾಟಕಕಾರರು ಹಸಿವಿನ ಬಗ್ಗೆ, ಕ್ರಾಂತಿಯ ಬಗ್ಗೆ ತನ್ನ ಖಚಿತವಾದ ಅಭಿಪ್ರಾಯವನ್ನು ರಂಗಕೃತಿಯನ್ನಾಗಿಸುವಲ್ಲಿ ಸಫಲರಾಗುತ್ತಾರೆ.

ಇಲ್ಲಿನ ಎಲ್ಲಾ ವ್ಯಕ್ತಿಗಳು ಹಸಿವಿನ ಹಿಂದೆ ನಡೆದವರು. ಎಲ್ಲರ ಹೋರಾಟ ರೊಟ್ಟಿ ಅಥವಾ ಅನ್ನಕ್ಕಾಗಿ. "ಅಗಲ ಕುಂಕುಮದ ಹೆಂಡತಿ, ಕಾಯುವ ಮಗಳು" – ಇವರ ನೆನಪಿನಲ್ಲಿ ಮುಳುಗಿದ ವ್ಯಕ್ತಿ ಸುಲಭವಾಗಿಯೇ ತನ್ನ ರೋಗಿ ತಂದೆಗಾಗಿ ಬ್ರೆಡ್ ಒಯ್ಯುತ್ತಿದ್ದ ಹುಡುಗ ಹೊಳ್ಳನನ್ನು ದೋಚುತ್ತಾನೆ. ಈ ಬ್ರೆಡ್‌ನ್ನು ದೋಚಲು ಅವನನ್ನು ಅವನ ಸಂಗಡಿಗರೇ ಕೊಲ್ಲುತ್ತಾರೆ. ಈ ಬ್ರೆಡ್, ಸಾವು, ಹೆಣದ ಬಗ್ಗೆ ಯಾವುದೇ ಆಸಕ್ತಿಯಿಲ್ಲದೆ ಕ್ಯಾಪ್ಟನ್ ಯೋಚಿಸುವುದು ಗೆರಿಲ್ಲಾಗಳಿಂದ ತಾವು ಪಾರಾಗುವುದರ ಬಗ್ಗೆ ಮಾತ್ರ, ನಾವೇ ಅಂತಿಮ ಸತ್ಯ ಅಥವಾ ಸಾವಿನಿಂದಲೇ ಮರುಸೃಷ್ಟಿ ಅಥವಾ ಸಾವಿನಿಂದಲೇ ಹೊಸ ಬೆಳಕು ಎಂಬ ಅಂತಿಮ ಸತ್ಯವನ್ನು ಇಲ್ಲಿ ಸ್ಥಾಪಿಸಲು ಪ್ರಯತ್ನ ಮಾಡಲಾಗಿದೆ. ಈ ಏಕಾಂಕದಲ್ಲಿ ಪ್ರೀತಿಯ ಬಗ್ಗೆ ಇರುವ ಅಣಕ ವಿಶೇಷವಾಗಿ ಗಮನ ಸೆಳೆಯುತ್ತದೆ. ಈ ಅಣಕದಲ್ಲಿ ವ್ಯರ್ಥ ಆಲಂಕಾರಿಕ ಮಾತು, ವ್ಯರ್ಥವಾಗುವ ವೇಳೆಯ ಬಗ್ಗೆ ಅಸಹನೆಯೂ ಕಂಡುಬರುತ್ತದೆ.

ವ್ಯಕ್ತಿ – ೩ : ಹೃದಯೇಶ್ವರಾ........ ನಿನ್ನನ್ನು ಯಾವ ಭಾಷೆಯಲ್ಲಿ ಪ್ರೇಮ ಮಾಡಲಿ? ಇಂಗ್ಲೀಷಿನಲ್ಲೋ?........ ಸಂಸ್ಕೃತದಲ್ಲೊ?....... ಉರ್ದುವಿನಲ್ಲೊ?............ ಹಿಂದಿಯಲ್ಲೊ?............ ಕನ್ನಡದಲ್ಲೊ!?

ವ್ಯಕ್ತಿ – ೨ : ಪ್ರಿಯೆ.......... ಊರ ಪಟೇಲನ ಭಾಷೆಯಲ್ಲೇ ಪ್ರೇಮ ಮಾಡುವಂತವಳಾಗು.

ವ್ಯಕ್ತಿ – ೩ : ಪ್ರಾಣಕಾಂತ ನಮ್ಮ ಪ್ರೇಮ ಆಚಂದ್ರಾರ್ಕವಾಗಿ ನಿಲ್ಲುವಂತಾಗಲಿ.

ವ್ಯಕ್ತಿ – ೨ : ಪ್ರಿಯೆ.... ನಮ್ಮ ಅಮರಪ್ರೇಮ (ತಡವರಿಸುತ್ತಾ) ಅಮರ...... ಪ್ರೇಮ.... ಆ........ ಆ.... ತಾಜ್‌ಮಹಲ್‌ನಂತೆ ಶಾಶ್ವತವಾಗಿ ನಿಲ್ಲುವಂತಾಗಲಿ.

ವ್ಯಕ್ತಿ – ೪ : (ಸಿಡುಕಿನಿಂದ ಮಧ್ಯೆನುಗ್ಗಿ) ನಿಮ್ಮನೆ ಕಕ್ಕಸ್‌ಗುಂಡೀ ಮೇಲೆ ಬೆಳೆಯುವಂತಾಗಲಿ.

**'ಯಾರಿಲ್ಲಿಗೆ ಬಂದವರು'** – ಈ ನಾಟಕದಲ್ಲಿ ಮುಖವಾಡ ಎಂಬ ಕಲ್ಪನೆಯೇ ಸಾಂಕೇತಿಕವಾಗಿ ಬಳಕೆಯಾಗಿದೆ. ಇಲ್ಲಿ ಎಲ್ಲರು ಒಂದಲ್ಲ ಒಂದು ಮುಖವಾಡವನ್ನು ಧರಿಸಿದವರೇ. ಯಜಮಾನ ಹಣದ ಹಿಂದೆ ಬೆನ್ನತ್ತಿ ಮಗಳನ್ನು ಮರೆತವನು. ಮಾನವೀಯ ಪ್ರೀತಿ ಮರೆತು ಹಣದ ಗಳಿಕೆಯಲ್ಲಿ ಮೈ ಮರೆತ ಅವನಿಗೆ ಕಳೆದು ಹೋದ ಮಗಳನ್ನು ಹುಡುಕಲು ಜ್ಯೋತಿಷಿಯ ನೆರವು ಬೇಕಾಗಿದೆ. ಹೆಂಡತಿಯನ್ನು ಕಳೆದುಕೊಂಡ ಶಿವರುದ್ರ ಮುಖವಾಡದಪ್ಪನ ಮುಖವಾಡ ಹಾಕಿದ ಕೂಡಲೇ ಅವನ ಅಂತರಂಗ ಬಯಲಾಗುತ್ತದೆ. ಹೆಂಡತಿಯನ್ನು ಕೊಲ್ಲಿ ಷೇಕರಿಗೆ ಮಾರಿದ ಶಿವರುದ್ರ ಅವಳನ್ನು ಹುಡುಕುವ ಆಟವನ್ನು ಮಾವನೆದುರು ಆಡುತ್ತಾನೆ. ಮಾವನ ಹಣ, ತಾನು ಮೆಚ್ಚಿದ ಹೆಣ್ಣನ್ನು ಪಡೆದ ಅವನು ಆಧುನಿಕ ಆದರೆ ದಿಕ್ಕು ತಪ್ಪಿದ ಯುವಜನಾಂಗದ ಪ್ರತಿನಿಧಿ. ಶಿವರುದ್ರ ಮೆಚ್ಚಿದ ಯುವತಿ ಕುತೂಹಲಕ್ಕೆಂದು ತಾನು ಕೊಂಡ ಮುಖವಾಡ ಧರಿಸಿದಾಗ ಅಂತರಂಗಕ್ಕಿಂತ ಅವಳೇ ಬಯಲಾಗಿ ಸತ್ತು ಹೋಗುತ್ತಾಳೆ. ಹೀಗೆ ಪರಸ್ಪರರು ಬೇಟೆಯಾಡುವ ಈ ಆಟದಲ್ಲಿ ಮುಖವಾಡ ದೈವದ ಸಂಕೇತವೆನ್ನುವಂತೆ ಚಿತ್ರಿತವಾಗಿದೆ. ಯಾರೂ ಯಾರನ್ನು ಪ್ರಾಮಾಣಿಕವಾಗಿ ಪ್ರೀತಿಸಿದ ಕಾರ್ಯಕಾರಣವಾಗಿಯೇ ಸ್ಥಾಪಿಸಲ್ಪಟ್ಟ ಸಂಬಂಧಗಳು ಮುರಿದು ಬೀಳುತ್ತಾ ಮುಖವಾಡಗಳು ಆವರಿಸಲ್ಪಟ್ಟ ಸಮಾಜದ ಚಿತ್ರಣವನ್ನು ಈ ಏಕಾಂಕ ಕಟ್ಟಿಕೊಡುತ್ತದೆ.

**'ಹೆದ್ದಾರಿಯಲ್ಲೊಂದು ರಾತ್ರಿ'** ವಿಶೇಷವಾಗಿ ಗಮನಿಸಲ್ಪಡಬೇಕಾದ ನಾಟಕವಾಗಿದೆ. ತನ್ನ ಸೀಮಿತ ಅವಧಿ ಮತ್ತು ಚೌಕಟ್ಟಿನಲ್ಲಿ ಬದುಕಿನ ವಿವಿಧ ಮಗ್ಗಲುಗಳನ್ನು ತ್ವರಿತಗತಿಯಲ್ಲಿ ಶೋಧಿಸುವ ಇದು ಕೊನೆಗೊಳ್ಳುವುದು ಸಾವಿನಲ್ಲಿಯೇ. ಸಾವು ಮತ್ತು ಹಿಂಸೆ ಇಂದಿನ ಬದುಕಿನಲ್ಲಿ ಕಾಡುವ, ನಡುಗಿಸುವ ಸಂಗತಿಗಳಾಗಿವೆ. ಸಾವೇ ಅಂತಿಮ ಸತ್ಯವೆಂದು ತಿಳಿದಿದ್ದರೂ ಇಲ್ಲಿನ ನಿರುದ್ಯೋಗಿ ಯುವಕರು ತಮ್ಮ ಬೇಸರವನ್ನು ಹೋಗಿಸಿಕೊಳ್ಳಲು ಸಾಯುವ ಆಟವೊಂದನ್ನು ಆಡಲು ತೀರ್ಮಾನಿಸುತ್ತಾರೆ. ಬದುಕಿನ ಅರಾಜಕತೆ ಅವರನ್ನು ಬೇಟೆಯಾಡಿದ್ದರಿಂದ ಅವರು ಬದುಕಿನೊಂದಿಗೆ ಆಟವಾಡಲು ಆರಂಭಿಸುತ್ತಾರೆ. ಕಾಕಾ ಈ ಆಟದ ಮಿಕವಾಗಿ ಸಿಕ್ಕಿಕೊಂಡು ಪ್ರಾಣ ಬಿಡುತ್ತಾನೆ. ದೇಶದ ಸಮಸ್ತ ಸಮಸ್ಯೆಗಳನ್ನು ಚರ್ಚಿಸುವ ಈ ಯುವಕರಿಗೆ ತಮಗೆ ಬೇಕಾದುದಾದರೂ ಏನು ಎಂಬುದು ತಿಳಿಯುತ್ತಿಲ್ಲ. ಈ ನಿರುದ್ದೇಶವಾದ ಚರ್ಚೆ

ಕೊನೆಗೊಳ್ಳುವುದು 'ಪ್ರಾಣ ಹೇಗೆ ಹೋಗುತ್ತೆ' ಎಂಬುದನ್ನು ನೋಡುವ ಕುತೂಹಲದಲ್ಲಿ. ಕೊನೆಗೂ ಕಾಕಾನ ದೇಹದಿಂದ ಹೊರ ಹೋಗುವ ಪ್ರಾಣ ಅರಿವಿಗೆ ಬಾರದೆ ಇವರ ಕುತೂಹಲವನ್ನು ಹಾಗೆಯೇ ಉಳಿಸಿಬಿಡುತ್ತದೆ. ಹೆಣವಿರುವ ಗುಡಿಸಲಿನಿಂದ ಹೊರಬರುವ ನವಿಲು ಮುಖದ ಆಕೃತಿ ಸಾವಿನ ಮೇಲೆ ಕುಡಿಯೊಡೆದು ಚೈತನ್ಯದ ಪ್ರತಿರೂಪವಾಗಿ ನಿಲ್ಲುತ್ತದೆ.

ಮಾನಸಿಕ ಸ್ಥಿರತೆ, ಆಲೋಚನಾ ಶಕ್ತಿ ಕಳೆದುಕೊಂಡು 'ಥ್ರಿಲ್'ಗಾಗಿ ಏನು ಬೇಕಾದರೂ ಮಾಡಲು ಸಿದ್ಧವಿರುವ ಅಸ್ವಸ್ಥ ಯುವ ಜನಾಂಗದ ಚಿತ್ರಣವನ್ನು ಈ ಏಕಾಂಕದಲ್ಲಿ ಚಿತ್ರಿಸಲಾಗಿದೆ. ಕ್ರೌರ್ಯದ ವಿವಿಧ ಮುಖಗಳನ್ನು ಕಟ್ಟಿಕೊಡುತ್ತಾ, ಆ ಮೂಲಕವೇ ಪತನದೆಡೆಗೆ ಜಾರುತ್ತಿರುವ ತಲೆಮಾರನ್ನು **'ಹೆದ್ದಾರಿಯಲ್ಲೊಂದು ರಾತ್ರಿ'** ಚಿತ್ರಿಸುತ್ತದೆ. ಒಂದಕ್ಕೊಂದು ಸಂಬಂಧವಿಲ್ಲದ ಅಸಂಗತಲೋಕದ ವಿವರಗಳು, ಕ್ರೌರ್ಯ, ಕ್ಷಣಕ್ಷಣಕ್ಕೂ ಬದಲಾಗುವ ಯುವಕರ ಚಂಚಲ ಲಹರಿಗಳನ್ನು ಇಲ್ಲಿ ಚಿತ್ರಿಸಲಾಗಿದೆ.

೨೦೦೨ರಲ್ಲಿ ಪ್ರಕಟಗೊಂಡ ಎರಡು ಏಕಾಂಕಗಳು **'ಇದು ಕಾರಣ'** ಮತ್ತು **'ಎಲ್ಲೋ ಒಂದು ಕಡೆ'** ಎಂಬ ನಾಟಕಗಳನ್ನೊಳಗೊಂಡಿದೆ. ಮೊದಲ ಏಕಾಂಕಗಳಲ್ಲಿ ಇರುವ ಅಸಂಗತ ಲೋಕದ ನಿರ್ದಿಷ್ಟತೆ ಈ ನಾಟಕಗಳಲಿಲ್ಲ. ಸಂಗತ ಲೋಕದಲ್ಲಿ ನಡೆವ ಸಹಜ ಘಟನೆಗಳಿಂದಲೇ ರೂಪುಗೊಂಡ ಇಲ್ಲಿನ ಲೋಕ ಕೃತ್ರಿಮವಾದದ್ದಲ್ಲ. **'ಇದು ಕಾರಣ'**ದಲ್ಲಿ ಶವಸಂಸ್ಕಾರ ಪ್ರಶ್ನೆಯೊಂದಿಗೆ ಹುಟ್ಟುವ ವಾಗ್ವಾದ ಆಸ್ತಿಯ ಹಕ್ಕನ್ನು ಒಳಗೊಂಡು ಮುಂದುವರೆಯುತ್ತದೆ. ಮಕ್ಕಳಿಲ್ಲದ ರಂಗಪ್ಪ ವಾರಸುದಾರರಿಲ್ಲದೆ ಸತ್ತಾಗ ಶವಸಂಸ್ಕಾರದ ಪ್ರಶ್ನೆಯೊಂದಿಗೆ ಜನರ ಅಂತರಂಗಗಳು ಬಿಚ್ಚಿಕೊಳ್ಳುತ್ತವೆ. ಬದುಕಿದ್ದಾಗ ಹತ್ತಿರ ಸುಳಿಯದ ರಂಗಪ್ಪನ ತಮ್ಮ ನರಸಿಂಹ ಹಾಗೂ ಇನ್ನೊಬ್ಬ ತಮ್ಮನ ಮಗ ಗೋವಿಂದನ ನಡುವೆ ಆಸ್ತಿಗಾಗಿ ಮೌನಯುದ್ಧವೇ ಆರಂಭವಾಗುತ್ತದೆ. ನಡುನಡುವೆ ಹುಚ್ಚನಂತೆ ಮಾತನಾಡುವ ಕೆಂಚನ ಮಾತುಗಳು ಅಲ್ಲಿನ ಸಂದರ್ಭಕ್ಕೆ ಹೊಂದದೆ ಅಸಂಗತವಾಗಿ ತೋರಿದರೂ ಸತ್ಯದ ಕಾವನ್ನು ಒಳಗೊಂಡಿದೆ. ಇಲ್ಲಿನ ಕಥೆ ವಿಶೇಷತೆ ಏನನ್ನೂ ಒಳಗೊಳ್ಳದಿದ್ದರೂ ಸಾವು ಯಾರನ್ನೂ ಕಾಡದೆ ಸಾವಿನಿಂದ ಉದ್ಭವಿಸುವ ಸಮಸ್ಯೆಗಳೇ ಪ್ರಧಾನವಾಗಿವೆ. ನಡುನಡುವೆ ಬರುವ ಕೆಂಚನ ಮಾತುಗಳಿಂದಲೇ ಜನರ ಸ್ವಾರ್ಥ ಜಗತ್ತು ತೆರೆಯುತ್ತಾ ಹೋಗುತ್ತದೆ. ಹೆಣದ ಸುತ್ತಲೂ ಬದುಕಿರುವವರ ಅಂತರಂಗದ ರಾಜಕಾರಣದ ಚಿತ್ರಣ ಇಲ್ಲಿನ ಬಹುಮುಖ್ಯ ಸಂಗತಿಯಾಗಿದೆ.

**'ಎಲ್ಲೋ ಒಂದು ಕಡೆ'** ಎಂಬ ನಾಟಕದಲ್ಲಿ ಬದಲಾಗುತ್ತಿರುವ ಕಾಲಗತಿಯನ್ನು ಅದರ ಸಂದರ್ಭದೊಂದಿಗೆ ಹಿಡಿದಿಡಲಾಗಿದೆ. ಹೆಸರೇ ಸೂಚಿಸುವಂತೆ ಸ್ಥಳ, ಕಾಲ, ಕಥೆಯ ನಿರ್ದಿಷ್ಟತೆ ಯಿಲ್ಲದ ಈ ನಾಟಕ ಎಲ್ಲಿ ಬೇಕಾದರೂ ನಡೆಯಬಲ್ಲದ್ದಾಗಿದೆ. ಇಲ್ಲಿ ನವಾಬ ಪ್ರಜೆಗಳ ಬಗ್ಗೆ ಯೋಚಿಸದೆ ಆತ್ಮರತಿಯಲ್ಲಿ ಮುಳುಗಿಹೋಗಿದ್ದಾನೆ. ಒಂದು ಕಡೆ ಯುದ್ಧದ ಅನಿಶ್ಚಯತೆ, ಇನ್ನೊಂದು ಕಡೆ ಸಡಿಲಗೊಳ್ಳುತ್ತಿರುವ ತನ್ನ ರಾಜ್ಯಭಾರ, ಇವುಗಳ ನಡುವೆ ತನ್ನ ಕಾವ್ಯ ಹಾಗೂ ಕಲಾಕಾರರು ರಚಿಸುವ ಚಿತ್ರಗಳಲ್ಲಿ ತನ್ನನ್ನು ಕಾಣಬೇಕೆನ್ನುವ ನವಾಬ ನಗೆಪಾಟಲಿಗೆ ಈಡಾಗಿದ್ದಾನೆ. ಅಸಂಗತ ನಾಟಕಗಳ ಮಾದರಿಯ ನಾಯಕನಂತೆ ಟೊಂಗೆಯ ಮೇಲೆ ನಿಂತು ನಕ್ಷತ್ರಗಳನ್ನು ಕೀಳ ಹೊರಟವನಾಗಿದ್ದಾನೆ.

ಯುದ್ಧದ ಸಂದರ್ಭದಲ್ಲಿ ತನ್ನ ಕಾವ್ಯದಲ್ಲಿ ಮುಳುಗಿ ಹೋದ ನವಾಬ ಪ್ರಶಸ್ತಿ, ಹೆಸರಿಗಾಗಿ ಹಂಬಲಿಸುವುದು ನಗೆ ಚಾಟಿಕೆಯಾಗಿಯೋ ಕಾಣುತ್ತದೆ. ಸೆರೆಸಿಕ್ಕ ಶತ್ರುಸೈನ್ಯದ 'ಸೈನಿಕರು' ನವಾಬನ ಅಸಂಗತದ ಲೋಕದಲ್ಲಿ ತಬ್ಬಿಬ್ಬಾದ ವಾಸ್ತವದ ತುಣಕುಗಳಂತೆ ಕಂಡುಬರುತ್ತಾರೆ. ಇದೇ ಸಂದರ್ಭದಲ್ಲಿ ಲಂಕೇಶ್, ಕಾರ್ನಾಡರ ನಾಟಕಗಳ ಅಸಂಗತ ನಾಯಕರು ಇಲ್ಲಿ ನೆನಪಿಗೆ ಬಂದರೂ ಶ್ರೀನಿವಾಸರಾಜುರವರ ನಾಯಕರು ಪೂರ್ಣಪ್ರಮಾಣದಲ್ಲಿ ಪಕ್ವಗೊಳ್ಳದೆ ಸೀಮಿತ ಚೌಕಟ್ಟಿನಲ್ಲಿಯೇ ಉಳಿದುಬಿಡುತ್ತಾರೆ. ದೇಶಭಕ್ತಿಯೂ, ಪ್ರಾಮಾಣಿಕತೆಯೂ ಇದಕ್ಕೆ ಏಕಾಂಕಗಳ ಆಕೃತಿಯೂ ಕಾರಣವಿರಬಹುದು. ಅಣಕಗಳಾಗಿ ತೋರುವ ಪಲ್ಲಟಗಳ ಕಾಲದಲ್ಲಿ ಇಂದು ನಾವಿದ್ದು ನವಾಬನ ವರ್ತನೆಗಳು ಒಮ್ಮೆ ಬೇಜವಾಬ್ದಾರಿ, ಮತ್ತೊಮ್ಮೆ ಜವಾಬ್ದಾರಿಯಿಂದ ಕೂಡಿ ಅವನ ನಿಜದ ವ್ಯಕ್ತಿತ್ವವಾದರೂ ಯಾವುದು ಎಂಬ ಪ್ರಶ್ನೆ ಸಹಜವಾಗಿಯೇ ಉಳಿದುಕೊಳ್ಳುತ್ತದೆ.

ಮೇಲಿನ ಐದು ನಾಟಕಗಳಲ್ಲಿ ಕೆಲವು ಈಗಾಗಲೇ ಸಾಕಷ್ಟು ಪ್ರದರ್ಶನಗಳನ್ನು ಕಂಡಿವೆ. ಹುಸಿ ಮೌಲ್ಯಗಳನ್ನು ದೂರವಿಟ್ಟ ಈ ಏಕಾಂಕಗಳು ತಮ್ಮ ಸಹಜತೆಯಿಂದಲೇ ಗೆಲ್ಲುತ್ತವೆ ಮತ್ತು ಕೆಲವು ಸಂದರ್ಭಗಳಲ್ಲಿ ಈ ಸಹಜತೆಯಿಂದಲೇ ಸೋಲನ್ನು ಅನುಭವಿಸುತ್ತದೆ. ನಾಟಕಗಳಲ್ಲಿ ಸಾಂಕೇತಿಕವಾಗಿ ಬಳಸಲ್ಪಡುವ ಬ್ರೆಡ್, ನವಿಲು, ಮುಖವಾಡ, ಅರೆಹುಚ್ಚ ಕೆಂಚ, ಮೂಕಿಯಾದ ಕ್ಯಾಪ್ಟನ್ ಹೆಣ್ಣು, ಸುಂದರಿಯಂತಹ ಚಿತ್ರಗಳು ಅರ್ಥಪೂರ್ಣವಾಗಿವೆ. ಶ್ರೀನಿವಾಸರಾಜುರವರು ಬಳಸುವ 'ಅಸಂಗತಗಳ ಕಲ್ಪನೆ' ಹಾಗೂ ತರ್ಕಬದ್ಧವಾದ ಮಾತುಗಳು ನಾಟಕಗಳ ಬಿಗಿಯನ್ನು ಹೆಚ್ಚಿಸಿವೆ. ಈ ಏಕಾಂಕಗಳ ಶಿಲ್ಪ 'ಕೃತಿ ಮತ್ತು ಪ್ರದರ್ಶನ'ದ ಹಿನ್ನೆಲೆಯಲ್ಲಿ ಇನ್ನಷ್ಟು ಚರ್ಚೆಗೆ ಒಳಗಾಗಬೇಕಿದೆ. ಚಾಲ್ತಿಯಲ್ಲಿರುವ ಜನಪ್ರಿಯ ಸರಕುಗಳಾದ 'ಜನಪದ, ಪುರಾಣ, ಚರಿತ್ರೆ' ಮುಂತಾದ ಮಾದರಿಗಳಿಗೆ ಕೈಚಾಚದೆ ಸಾಮಾಜಿಕ ಆಯಾಮದಲ್ಲೇ ಅನಾವರಣಗೊಂಡ ಇಲ್ಲಿಯ ನಾಟಕಗಳು ಕಥೆಗಿಂತ ತಾತ್ವಿಕತೆಗೆ ಒತ್ತು ಕೊಟ್ಟಿವೆ. ಕ್ರೌರ್ಯ ಹಿಂಸೆಯ ಕಡೆಗೆ ಆಕರ್ಷಿತವಾಗುತ್ತಿರುವ ಚಲನಶೀಲ ಸಮಾಜವೊಂದನ್ನು ಅದರ ಸಮಕಾಲೀನತೆಯೊಂದಿಗೆ ಚಿತ್ರಿಸುವ ಪ್ರಯತ್ನ ಇಲ್ಲಿ ನಡೆದಿದೆ.



# ಮೂಕನಾಟಕಗಳು

● ಕೆ.ವಿ. ನಾರಾಯಣ

೧. ಮೂಕ ನಾಟಕ (MIME PLAY) ಎಂದರೇನು? ಸರಳವಾಗಿ ವಿವರಿಸುವುದಾದರೆ ಪಾತ್ರಧಾರಿಗಳ ನಡುವೆ ಭಾಷೆಯ ಮೂಲಕ ಸಂವಾದ, ಸಂಭಾಷಣೆಗಳು ನಡೆಯದ ನಾಟಕವನ್ನೇ ಮೂಕ ನಾಟಕವೆಂದು ಹೇಳಬಹುದು. ಇದನ್ನೇ ಪಾರಿಭಾಷಿಕವಾಗಿ ಹೀಗೆ ವಿವರಿಸಬಹುದು. ರೂಪಕ (PLAY)ವೊಂದರ ರಂಗನಿರ್ಮಿತಿಯಲ್ಲಿ ನಾಲ್ಕು ಮುಖ್ಯ ಅಂಗಗಳಿರುತ್ತವೆ. ಈ ಅಂಗಗಳನ್ನು ನಾಟ್ಯಶಾಸ್ತ್ರ 'ಅಭಿನಯ'ವೆಂದು ಹೆಸರಿಸುತ್ತದೆ. ಆಂಗಿಕ, ಸಾತ್ತ್ವಿಕ, ಆಹಾರ್ಯ ಮತ್ತು ವಾಚಿಕ ಎಂಬಿವೇ-ಆ ನಾಲ್ಕು ಅಭಿನಯಗಳು. ಇವುಗಳಲ್ಲಿ ಆಂಗಿಕ, ಸಾತ್ತ್ವಿಕಗಳೆರಡು ನಟನ ದೇಹಚಲನೆಗೆ ಸಂಬಂಧಿಸಿದವು. ಆಂಗಿಕವೆಂಬುದು ಆರೋಪಿತ ಭಂಗಿಯಾದರೆ ಸಾತ್ವಿಕವು ಮನುಷ್ಯ ಸಹಜ ಭಂಗಿಯಾಗಿರುತ್ತದೆ. ಆಹಾರ್ಯವೆಂದರೆ ನಟರ ಉಡಿಗೆತೊಡಿಗೆ ಮತ್ತು ರಂಗಸಜ್ಜಿಕೆ. ವಾಚಕವೇ ರೂಪಕದ ಭಾಷಿಕವಾದ ಭಾಗ. ನಟರು ಆಡುವ ಮಾತುಗಳು ಇದರಲ್ಲಿ ಸೇರುತ್ತವೆ. ಈ ನಾಲ್ಕೂ ಒಂದಕ್ಕೊಂದು ಪೂರಕವಾಗಿ ಸೇರಿದಾಗ ಮಾತ್ರ ರೂಪಕದ ರಂಗನಿರ್ಮಿತಿ ಯಶಸ್ವಿ ಎನಿಸುತ್ತದೆ. ಆದ್ದರಿಂದಲೇ ಓದು ನಾಟಕವೆಂಬ ಕಲ್ಪನೆ ಇಲ್ಲಿ ಸಲ್ಲ. ಏಕೆಂದರೆ ಆಗ ಲಭಿಸುವುದು ವಾಚಿಕ ಮಾತ್ರ. ಈ ಬಗೆಗೆ ಇನ್ನೂ ಸೂಕ್ಷ್ಮ ವಿವೇಚನೆ ಸಾಧ್ಯ. ಆದರೆ ಇಲ್ಲಿ ಅಪ್ರಸ್ತುತ. ನಾವು ಮೂಕ ನಾಟಕಗಳೆಂದು ಕರೆಯುವ ರೂಪಕಗಳು ವಾಚಿಕಾಭಿನಯುವನ್ನು ಸಂಪೂರ್ಣವಾಗಿ ನಿರಾಕರಿಸುತ್ತವೆ. ಉಳಿದ ಮೂರು ಅಭಿನಯನಗಳನ್ನೇ ಆಧರಿಸಿ ಈ ಬಗೆಯ ರೂಪಕವು ನಿರ್ಮಾಣಗೊಳ್ಳುತ್ತದೆ. ಈಗ ಏಳುವ ಪ್ರಶ್ನೆಯೆಂದರೆ ಸಹಜವಾದ ಸಂಪರ್ಕ ಮಾಧ್ಯಮದ ಭಾಷೆಯನ್ನು ನಿರಾಕರಿಸುವುದು ಕೇವಲ ಪ್ರಯೋಗಶೀಲತೆಯೋ ಅಥವಾ ಅದರ ಪ್ರಯೋಜನಗಳೇನಾದರೂ ಇವೆಯೋ? ಈ ಪ್ರಶ್ನೆಯ ಮೂಲ ಗ್ರಹಿಕೆಯೇ ಚರ್ಚಾರ್ಹ. ಭಾಷೆ ಸಹಜವಾದ ಸಂಪರ್ಕ



ಮಾಧ್ಯಮವೆಂಬುದನ್ನು ಮುಗ್ಧ ಮನಸ್ಸು ಮಾತ್ರ ಒಪ್ಪಬಲ್ಲದು. ವಾಸ್ತವವಾಗಿ ಮನುಷ್ಯರ ನಡುವಣ ಸಂಪರ್ಕ ತಲುಪಬಹುದಾದ ಸೂಕ್ಷ್ಮ ನೆಲೆಗಳಲ್ಲೆಲ್ಲಾ ಭಾಷೆ ನೆರವಿಗೆ ಬರಲಾರ ದೆಂಬುದು ಹಲವರ ಅನುಭವದ ಮಾತು. ಆಧುನಿಕ ನಾಟಕಗಳ ರಂಗ ನಿರ್ಮಿತಿಯನ್ನೇ ಗಮನಿಸಿದರೆ ಈ ಸಂಗತಿ ಸ್ಪಷ್ಟವಾಗುತ್ತದೆ. ನಾಟಕಕಾರರನು ಬರೆದ ಮಾತುಗಳನ್ನು ಏರಿಳಿತ ಗಳೊಡನೆ ಉಚ್ಚರಿಸುವುದೇ ಮುಖ್ಯವಲ್ಲ. ಮಾತುಗಳ ನಡುವಣ ಮೌನ; ನಟರ ಚಲನವಲನ; ರಂಗಸನ್ನಿವೇಶ (ಬೆಳಕು ವಿನ್ಯಾಸ) ಮತ್ತು ಪರಿಕರಗಳು ಇವೆಲ್ಲವೂ ಮುಖ್ಯವಾಗುತ್ತವೆ. ಎಂದರೆ ಕೇವಲ ಮಾತುಗಳಿಗೆ ಇಲ್ಲದ ಸಾಮರ್ಥ್ಯವನ್ನು ರೂಪಕಕ್ಕೆ ತುಂಬಿಕೊಡಲು ನಿರ್ದೇಶಕ ಯತ್ನಿಸುತ್ತಾನೆ. ಆದ್ದರಿಂದ ಮೂಕನಾಟಕಗಳಲ್ಲಿ ಮಾತಿಲ್ಲದೆ ಹೋಗುವುದು ಅಸಹಜವಾಗದೆ ಮಾನವ ಸಂಪರ್ಕದ ಸಾಧ್ಯತೆಗಳ ಶೋಧನೆಯಾಗುತ್ತದೆಯೆನ್ನಬೇಕು.

೨. ಹೆಲೆನಿಸ್ಟಿಕ್ ಸಂಸ್ಕೃತಿಯಲ್ಲಿ ಪೂರ್ಣಪ್ರಮಾಣದ ಮೂಕನಾಟಕಗಳಿದ್ದುದಕ್ಕೆ ದಾಖಲೆಗಳಿವೆ. ಗ್ರೀಕರ ಆದಿಮ ಕಲೆಯಾದ 'ತ್ರಿವಳಿ ಮೇಳ' (TRIUNE CHOREIA)ದಲ್ಲಿ ನೃತ್ಯ, ನಿರೂಪಣೆ, ಸಂಗೀತಗಳಿದ್ದವು. ಇವುಗಳೇ ಬೇರೆ ಬೇರೆಯಾಗಿ ಮುಂದೆ ಬೆಳೆದವು. ನಿರೂಪಣೆಯೇ ಮಾತಿನ ಭಾಗ. ಇದು ಮುಂದೆ ಬಂದು ಸೇರಿದುದು. ಅದಕ್ಕೆ ಮೊದಲು ಭಾವರೇಚಕ ಕ್ರಿಯೆಯನ್ನಪೇಕ್ಷಿಸುವ ನೃತ್ಯ ಮತ್ತು ವಾದ್ಯ ಸಂಗೀತಗಳು ಮಾತ್ರ ಇರುತ್ತಿದ್ದವು. ಇಲ್ಲಿಯೂ ತೆಳುವಾದ ಕಥಾವಿವರವಿರುತ್ತಿತ್ತು. ಆದರೆ ಅದು ಮಾತಿನಲ್ಲಿ ಹೊರ ಬೀಳುತ್ತಿರಲಿಲ್ಲ. ಸ್ಥೂಲವಾಗಿ ಇದು ಮೂಕ ನಾಟಕವೇ ಆಗಿದೆ. ಆದರೆ ಅದು ಮನುಷ್ಯನ ಬದುಕನ್ನು ಭಾಷೆ ತೀವ್ರವಾಗಿ ಆವರಿಸದಿದ್ದ ಅವಧಿಯದು. ಈಗ ಭಾಷೆಯನ್ನು ನಿರಾಕರಿಸುವುದು ಅವಶ್ಯಕವೆನಿಸಿ ದರೂ ಅಸಾಧ್ಯವೆನಿಸುವ ಕಾಲ. ಸಂಪರ್ಕ ಮಾಧ್ಯಮವನ್ನಾಗಿ ಭಾಷೆ ಏರ್ಪಡಿಸುವ ಅಸಂಗತ ಸನ್ನಿವೇಶವನ್ನು ನಿರೂಪಿಸಲು ಕೂಡ ಐಯನೆಸ್ಕೊ ಭಾಷೆಯನ್ನೇ ಬಳಸಿದ. ಆದ್ದರಿಂದ ಮೂಕ ನಾಟಕಗಳು ಸಾಧ್ಯತೆಯಾಗಿ ಸುಲಭವೆನಿಸಿದರೂ, ರಚನೆಯ ದೃಷ್ಟಿಯಿಂದ ಮಹತ್ವದ ಸವಾಲುಗಳಾಗುತ್ತವೆ.

ಮೂಕ ನಾಟಕಗಳೊಡನೆ ಹೋಲಿಸಬಹುದಾದ ಇನ್ನೆರಡು ಕಲಾಪ್ರಕಾರಗಳೆಂದರೆ ಅಪೆರಾ (Opera) ಮತ್ತು ಮೂಕಿ ಚಲನಚಿತ್ರಗಳು. ಸಂಗೀತ ಮತ್ತು ಸಿದ್ಧಮಾದರಿಯ (Stylized) ಆಂಗಿಕ ಅಭಿನಯಗಳನ್ನು ಅವಲಂಬಿಸುವ ಅಪೆರಾಗಳು: ಹಾಗೂ ಚಿತ್ರಿಕೆಗಳ ಚಲನೆಯ ಮೂಲಕವೇ ಸಂದರ್ಭವೊಂದನ್ನು ಸಂಹವನಗೊಳಿಸಲು ಯತ್ನಿಸುವ ಮೂಕಿ ಚಲನಚಿತ್ರ ಇವೆರಡೂ ಮೂಕ ನಾಟಕದ ಸಂವಾದಿ ಕಲೆಗಳು. ಮೂರಕ್ಕೂ ಸಾಧ್ಯತೆ ಮತ್ತು ಆವಿಷ್ಕಾರಗಳು ಬೇರೆ ಬೇರೆಯಾಗಬಹುದಾದರೂ ತಾತ್ತ್ವಿಕವಾದ ನೆಲೆಮಾತ್ರ ಒಂದೇ ಎಂದು ಭಾವಿಸಲು ಶಕ್ಯವಿದೆ.

ಭಾಷೆಯ ಮಿತಿಗಳಿಲ್ಲದ ಮೂಕನಾಟಕಗಳು ಯಾವ ಭಾಷೆಯ ಪ್ರೇಕ್ಷಕನಿಗಾದರೂ ತಲುಪಬಲ್ಲದು. ಹೀಗಿದ್ದರೂ ಈ ಪ್ರಕಾರಕ್ಕೆ ತನ್ನದೇ ಮಿತಿಗಳಿಲ್ಲವೆಂದಲ್ಲ. ತನ್ನ ಸಂವಹನ ಸಾಧ್ಯತೆಯ ವಿಸ್ತಾರದಿಂದಾಗಿ ಅದರ ಆಯ್ಕೆಗೆ ಸಿಗಬಹುದಾದ ವಸ್ತು ಸಂದರ್ಭವೇ ಆ ಮಿತಿ. ತೀವ್ರ ವಿಸಂಗತಿಗಳಿಲ್ಲದ ಅಥವಾ ತೀರಾ ಆತ್ಮರತವಾದ ವಸ್ತು ಸಂದರ್ಭಗಳನ್ನು

ಮೂಕನಾಟಕ ಒಳಗೊಳ್ಳಲಾರದೇನೊ! ಇದು ಅಭಿನಯದ ಹೊಸ ಪ್ರಕಾರಗಳನ್ನು ರೂಢಿಸಿ ಕೊಂಡ ಹೊರತು ಸಾಧ್ಯವಾಗದ ಮಾತಾಗಿ ಉಳಿಯುತ್ತದೆ.

ಇಲ್ಲಿರುವ ಐದು ಮೂಕ ನಾಟಕಗಳೂ ಬೇರೆ ಬೇರೆ ವಸ್ತು ಸಂದರ್ಭಗಳನ್ನವಲಂಬಿಸಿದೆ. ಸಾಮಾಜಿಕ ಸನ್ನಿವೇಶದ ತೀವ್ರ ವಿಸಂಗತಿಗಳು ಐದು ರಚನೆಗಳನ್ನು ಆವರಿಸಿವೆ. ಈ ವಿಸಂಗತಿ ಗಳು 'ಕಣ್ಣಿಗೆ ರಾಚುವಷ್ಟು' ಸ್ಪಷ್ಟವಾಗಿರುವುದು ಒಂದು ನೆಲೆಯಲ್ಲಿ ಈ ಮೂಕ ನಾಟಕಗಳ ಸಂವಹನಶೀಲತೆಯನ್ನು ನಿಖರಗೊಳಿಸಿದೆ. **'ಏಳು ಮನುವಿನ ಮಗನೆ'** ಮತ್ತು **'ಯೋಚಿಸಿ'** ಎಂಬೆರಡು ರಚನೆಗಳ ಹಿಂದೆ ಆಶಾಚಿಂತನ ಇದೆ; ಸಂದರ್ಭವನ್ನು ಬೇರೆಯಾಗಿಸುವ ಯತ್ನವನ್ನು ನಾಟಕ ಹುಡುಕುತ್ತದೆ. **'ಬೀಗದ ಕೈ'**ನಲ್ಲಿ ಮಾತು ಹೊರಬರಲು ನರಳುವುದು ಸಂದರ್ಭದಲ್ಲೇ ನಿರ್ಮಾಣಗೊಂಡಿದೆ. ಒಂದರ್ಥದಲ್ಲಿ ಪಂಜರದ 'ಬುಲ್ ಬುಲ್'ನಂತಾಗಿದೆ ಅಲ್ಲಿ ಮಾತು. ನಾಟಕದ ಉದ್ದೇಶವೂ ಅದೇ ತಾನೇ. ಹೀಗೆಯೇ ಸಂದರ್ಭದ ನಿರ್ಮಿತಿಯ ಹಂತದಲ್ಲೇ ನಿಂತು ಅರ್ಥ ಪರಂಪರೆಗೆ ಅನುವು ಮಾಡಿಕೊಡುವ ಇನ್ನೊಂದು ರಚನೆ **'ಫೀನಿಕ್ಸ್'**. ವಿಸಂಗತಿಯನ್ನು ಬಿಡಿಸುವಲ್ಲಿ **'ಮನೆಯೊಳಗಣ ಕಿಚ್ಚು'** ಕೊಂಚ ಸರಳವಾದ ಮಾರ್ಗವನ್ನು ಹಿಡಿದುಬಿಟ್ಟಿದೆ. ಆಶಾಚಿಂತನೆ ಹೇಗೆ ಕೃತಿಯ ಸಂಕೀರ್ಣಗಳನ್ನು ನಯಗೊಳಿಸಿ ಬಿಡುತ್ತದೆಂಬುದಕ್ಕೆ ಈ ಕೃತಿ ನಿದರ್ಶನ. ಈ ಐದರಲ್ಲಿ ಕೆಲವು ಈಗಾಗಲೇ ಪ್ರಯೋಗಗಳನ್ನು ಕಂಡಿವೆ. ಬಳಸಬಹುದಾದ ಸಂಗೀತ ಮತ್ತು ಅಭಿನಯದ ಬಗೆಯನ್ನು ರಚನೆಯಲ್ಲಿ ಸೂಚಿಸಿಲ್ಲ ವಾದ್ದರಿಂದ ಅದು ರಂಗನಿರ್ಮಿತಿಕಾರನಿಗೆ ಅವಕಾಶಗಳನ್ನು ತಂದುಕೊಟ್ಟಿದೆ ಎನ್ನಬಹುದು.

*(ಮುನ್ನುಡಿ : ಮೂಕನಾಟಕಗಳು)*



# ಮೂಕನಾಟಕಗಳು ಮತ್ತು ಏಕಾಂಕಗಳು

● ಡಾ. ಕೆ. ಮರುಳಸಿದ್ದಪ್ಪ

**ಅ.** ಶ್ರೀನಿವಾಸರಾಜುರವರ 'ಮೂಕ ನಾಟಕಗಳು', ಸಮಕಾಲೀನ ನಾಟಕ ಸಂದರ್ಭದಲ್ಲಿಯೇ ಗಮನಿಸಲು ಯೋಗ್ಯವಾದ ವಿನೂತನ ಬಗೆಯ ಕೃತಿಗಳು. ಇಲ್ಲಿ ಭಾಷೆಯ ಬಳಕೆಯೆಂಬುದು ಕೇವಲ ರಂಗ ಸೂಚನೆಯ ಮಟ್ಟಿಗೆ ಸೀಮಿತಗೊಂಡಿದೆ. "ಮೂಕ ನಾಟಕಗಳೆಂದು ಕರೆಯುವ ರೂಪಕಗಳು ವಾಚಿಕಾಭಿನಯನವನ್ನು ಸಂಪೂರ್ಣವಾಗಿ ನಿರಾಕರಿಸುತ್ತವೆ. ಉಳಿದ ಮೂರು ಅಭಿನಯಗಳನ್ನೆ ಆಧರಿಸಿ ಈ ಬಗೆಯ ರೂಪಕವು ನಿರ್ಮಾಣಗೊಳ್ಳುತ್ತದೆ". ಶ್ರೀನಿವಾಸ ರಾಜುರವರ ಎಲ್ಲ ಮೂಕ ನಾಟಕಗಳಿಗೂ ಒಂದೊಂದು ಸಾಮಾಜಿಕ ಸಂದರ್ಭದ ಹಿನ್ನೆಲೆಯಿದೆ. ಸ್ಥೂಲವಾದ ಕತೆಯೂ ಉಂಟು. ಅದರ ವಿವರಗಳನ್ನು ಪ್ರೇಕ್ಷಕರಿಗೆ ತಲುಪಿಸಲು ನಟರ ಚಲನವಲನ, ದೃಶ್ಯ ಕಲ್ಪನೆ, ರಂಗಾಲಂಕಾರ, ಸಂಜ್ಞೆಗಳು – ಮುಂತಾದ ಭಾಷೆಯಲ್ಲದ ಮಾಧ್ಯಮಗಳನ್ನು ಬಳಸಿದ್ದಾರೆ. ಭಾಷೆಯನ್ನೂ ಮೀರಿದ ಅನುಭವಗಳನ್ನು ನಿರೂಪಿಸುವಲ್ಲಿ ಮೂಕ ನಾಟಕಗಳು ಯಶಸ್ವಿಯಾಗುತ್ತವೆ. ಭಾಷೆಯ ಪರಿಮಿತಿಯನ್ನೇ ಕಿತ್ತುಹಾಕುವುದರಿಂದ ಅಭಿವ್ಯಕ್ತಿಗೆ ಸಿಗುವ ಮುಕ್ತ ಅವಕಾಶ ವಿಶಿಷ್ಟವಾದುದು. "ಭಾಷೆಯ ಮಿತಿಗಳಿಲ್ಲದ ಮೂಕ ನಾಟಕಗಳು ಯಾವ ಭಾಷೆಯ ಪ್ರೇಕ್ಷಕನಿಗಾದರೂ ತಲುಪಬಲ್ಲದು. ಹೀಗಿದ್ದರೂ ಈ ಪ್ರಕಾರಕ್ಕೆ ತನ್ನದೇ ಮಿತಿಗಳಿಲ್ಲವೆಂದಲ್ಲ. ತನ್ನ ಸಂವಹನ ಸಾಧ್ಯತೆಯ ವಿಸ್ತಾರದಿಂದಾಗಿ ಅವರ ಆಯ್ಕೆಗೆ ಸಿಗಬಹುದಾದ ವಸ್ತು ಸಂದರ್ಭವೇ ಆ ಮಿತಿ". ಶ್ರೀನಿವಾಸರಾಜುರವರ 'ಐದು ಮೂಕ ನಾಟಕಗಳು' (ಬೀಗದ ಕೈ, ಫೀನಿಕ್ಸ್, ಮನೆಯೊಳಗಣ ಕಿಚ್ಚು, ಏಳು ಮನುವಿನ ಮಗನೆ, ಯೋಚಿಸಿ?) ಸಮಕಾಲೀನ ಸಮಾಜದ ವಿಸಂಗತಿಗಳನ್ನು ಆಧರಿಸಿವೆ. ರಂಗಭೂಮಿಯ ಹೊಸ ಅಭಿವ್ಯಕ್ತಿ ಸಾಧ್ಯತೆಗಳನ್ನು ಸೂಚಿಸುವಂತಹ ಈ ಬಗೆಯ ನಾಟಕಗಳು ಪಾಶ್ಚಾತ್ಯರಲ್ಲಿವೆಯಾದರೂ, ನಮ್ಮಲ್ಲಿ ಹೊಸವು.



ಇತ್ತೀಚಿನ ರಂಗಭೂಮಿಯಲ್ಲಿ ಏಕಾಂಕಗಳಿಗೆ ಉತ್ಕರ್ಷ ಕಾಣುತ್ತಿಲ್ಲ. ಕಾಲೇಜು ರಂಗಭೂಮಿಯಲ್ಲಿಯೂ ಏಕಾಂಕಗಳಿಗಿದ್ದ ಪ್ರಾಶಸ್ತ್ಯ ಕಡಿಮೆಯಾಗುತ್ತಿದೆ. ಪ್ರಕಟವಾಗುತ್ತಿರುವ ಬಹುಪಾಲು ಏಕಾಂಕಗಳು ಗಮನಾರ್ಹ ಗುಣಮಟ್ಟ ಉಳಿಸಿಕೊಂಡಿಲ್ಲದಿರುವ ಹಿನ್ನೆಲೆಯಲ್ಲಿ ಚಿ. ಶ್ರೀನಿವಾಸರಾಜುರವರ 'ಮೂರು ಏಕಾಂಕಗಳು' ಉಲ್ಲೇಖಾರ್ಹವಾಗಿವೆ. ಅಸಂಗತ ರಂಗಭೂಮಿಯ ಪ್ರಭಾವಕ್ಕೊಳಗಾಗಿರುವದರಿಂದ ಮೂರು ಏಕಾಂಕಗಳಲ್ಲಿ ಉದ್ದೇಶರಹಿತ ಕ್ರೌರ್ಯಕ್ಕೆ ಅರ್ಥರಹಿತ ಸಂವಾದಕ್ಕೆ ಹೆಚ್ಚು ಒತ್ತು ಬಿದ್ದಿದೆ. ಮೂರು ನಾಟಕಗಳೂ ಕೊಲೆಯಲ್ಲಿ ಅಥವಾ ಸಾವಿನಲ್ಲಿ ಮುಕ್ತಾಯವಾಗುತ್ತವೆ. ಅಪರಿಚಿತವಾದ ವಿಲಕ್ಷಣ ವಾತಾವರಣದಲ್ಲಿ ಕ್ರಿಯೆಗಳು ಘಟಿಸುತ್ತವೆ. ಪಾತ್ರಗಳ ಸಂಭಾಷಣೆಯಲ್ಲಿ ಅಡೆತಡೆಯಿಲ್ಲದ ಲೈಂಗಿಕತೆ, ಹಿಂಸೆ ಮತ್ತು ಅರಾಜಕ ಪ್ರವೃತ್ತಿಗಳೂ ಸ್ಫುಟವಾಗಿ ಗೋಚರಿಸುತ್ತವೆ. **'ನಾಳೆ ಯಾರಿಗೂ ಇಲ್ಲ'** ಎಂಬ ಏಕಾಂಕದಲ್ಲಿ ಅಸಂಗತ ನಾಟಕಗಳ ತಣ್ಣನೆಯ ಕ್ರೌರ್ಯಕ್ಕಿಂತ ಭಾವಾತಿರೇಕದ ಗೋಳಾಟವಿದೆ. ಕೊನೆಯ ನಾಟಕವಾದ **'ಹೆದ್ದಾರಿಯಲ್ಲೊಂದು ರಾತ್ರಿ'**ಯಲ್ಲಿ ಅಸಂಗತ ಗುಣಗಳು ದಟ್ಟವಾಗಿವೆಯಾದರೂ ಈ ಮಾದರಿಯ ಬೇರೆ ಬೇರೆ ನಾಟಕಗಳ ಪ್ರತಿಧ್ವನಿ ಅಲ್ಲಿ ಕೇಳಿಸುತ್ತದೆ, ರಚನೆಯ ದೃಷ್ಟಿಯಿಂದ ಮೂರು ಏಕಾಂಕಗಳು ಕುತೂಹಲಕಾರಿಯಾಗಿವೆ. ಆದಿಯಿಂದ ಮುಕ್ತಾಯದವರೆಗೆ ಪತ್ತೆದಾರಿ ಕೃತಿಗಳಂತೆ ನಿರೀಕ್ಷೆಯ ವಾತಾವರಣವನ್ನು ಕಾಪಾಡಿಕೊಂಡು ಬರುವಲ್ಲಿ ಯಶಸ್ವಿಯಾಗಿವೆ. ಸ್ವಚ್ಛಂದ ಮಾತುಗಾರಿಕೆಯಿಂದಾಗಿ ಮತ್ತು ಪತ್ತೆದಾರಿ ವಾತಾವರಣದಿಂದಾಗಿ ರಂಗಪ್ರಯೋಗದಲ್ಲಿ ಈ ನಾಟಕಗಳು ಪ್ರೇಕ್ಷಕರ ಕುತೂಹಲ ಬೆಳೆಸುವಲ್ಲಿ ಯಶಸ್ವಿಯಾಗಬಹುದಾದರೂ ಕನ್ನಡದ ಸಾಮಾಜಿಕ ಸಂದರ್ಭಕ್ಕೆ ಈ ಬಗೆಯ ನಾಟಕಗಳು ಹೊರತಾಗಿಯೇ ಉಳಿಯುತ್ತವೆ. ಅಸಂಗತ ಜೀವನದೃಷ್ಟಿಯಾಗಲೀ ನಾಟಕಗಳಾಗಲೀ ನಮ್ಮ ಸಂದರ್ಭಕ್ಕೆ ಹೊಂದಿಕೆಯಾಗಲಿಲ್ಲವೆನ್ನುವುದು ಈಗಾಗಲೇ ಮನವರಿಕೆಯಾಗಿರುವಾಗ ಈ ನಾಟಕಗಳು ಪ್ರಕಟವಾಗುತ್ತಿರುವುದೇ ಒಂದು ವಿಶೇಷ ಸಂಗತಿಯಾಗಿದೆ.

*('ಆಧುನಿಕ ಕನ್ನಡ ನಾಟಕ" ಕೃತಿಯಿಂದ ಆಯ್ದ ಭಾಗ)*



# ನಿಶ್ಶಬ್ದದ ನೆರಳು

● *ಸುಗತ ಶ್ರೀನಿವಾಸರಾಜು*

**ಈ** ಮೂಕ ನಾಟಕಗಳು ತುರ್ತು ಪರಿಸ್ಥಿತಿಯ ವರ್ಷಗಳಲ್ಲಿ ರಚಿತವಾಗಿ ರಂಗವೇರಿದವುಗಳು. ಆದರೆ ಇವು ಪ್ರಕಟಗೊಂಡದ್ದು ೧೯೭೭ರಲ್ಲಿ, ತುರ್ತು ಪರಿಸ್ಥಿತಿ ಹಿಂತೆಗೆದುಕೊಂಡ ಕೂಡಲೇ. ಈ ನಾಟಕಗಳು ಭಾಷೆಯ ಬಳಕೆಯನ್ನು ಏಕೆ ನಿರಾಕರಿಸುತ್ತವೆ ಎಂಬುದಕ್ಕೆ ಹೆಚ್ಚೇನನ್ನೂ ಹೇಳುವ ಅವಶ್ಯಕತೆ ಇಲ್ಲವೆಂದು ತೋರುತ್ತದೆ. ಮೂಕತೆ, ನಾಟಕ ರಚನೆಯ ಹೊಸ ತಂತ್ರ ಮತ್ತು ರೂಪದೊಂದಿಗಿನ ಅದ್ಭುತ ಪ್ರಯೋಗ ಮಾತ್ರವಲ್ಲ, ಇದು ಪ್ರಜಾಪ್ರಭುತ್ವದ ನತದೃಷ್ಟ ವರ್ಷಗಳಿಗೆ ಒಡ್ಡಿದ ಬೃಹತ್ ರೂಪಕವಾಗಿ ಕೂಡಾ ಕಂಡುಬರುತ್ತದೆ. ಇಲ್ಲಿ ರಂಗದ ಎದುರು ಕಾಣಿಸಿಕೊಳ್ಳುವ, ಹಿಂದೆ ಸರಿಯುವ ಅನೇಕ ಪಾತ್ರಗಳಿರಬಹುದು. ಆದರೆ ಅದೃಶ್ಯ ಮತ್ತು ಅಶ್ರಾವ್ಯ ಮೌನ ಈ ನಾಟಕಗಳ ಪ್ರಮುಖ ಪಾತ್ರವಾಗಿ ಹೊಮ್ಮುತ್ತದೆ.

ಏನೇ ಇದ್ದರೂ ಈಗ ಈ ನಾಟಕಗಳನ್ನು ಅನುವಾದಿಸಲು ಯಾಕೆ ಬಯಸುತ್ತಿದ್ದೇನೆ? ಇದಕ್ಕೆ ವೈಯಕ್ತಿಕ ಮತ್ತು ರಾಜಕೀಯ ಹಿನ್ನೆಲೆಗಳಿವೆ. ಮೊತ್ತಮೊದಲನೆಯದಾಗಿ ರಾಜಕೀಯ ಹಿನ್ನೆಲೆಯನ್ನು ನೋಡೋಣ: ೨೦೦೨ರ ಆರಂಭದಲ್ಲಿ ಈ ನಾಟಕಗಳನ್ನು ನಾನು ಪುನಃ ಓದಿದಾಗ ನಾನು ನನ್ನ ಕುಟುಂಬದಿಂದ ದೂರವಾಗಿ ಜೈಪುರಕ್ಕೆ ತೆರಳುತ್ತಿದ್ದೆ ಮತ್ತು ಅಲ್ಲಿ ತುರ್ತು ಪರಿಸ್ಥಿತಿಯ ೨೫ನೇ ವರ್ಷದ ಸ್ಮರಣೆ ನಡೆಯುತ್ತಿತ್ತು. ಕಾಂಗ್ರೆಸ್‌ನ ಈ 'ಅಮಾನವೀಯ' ಕೃತ್ಯವನ್ನು ಪ್ರಮುಖವಾಗಿ ಎತ್ತಿ ತೋರಿಸುವುದು ಅಂದಿನ ಬಲಪಂಥೀಯ ಒಕ್ಕೂಟಕ್ಕೆ ರಾಜಕೀಯ ಅವಶ್ಯಕತೆಯಾಗಿತ್ತು. ಇವರು ಸದೃಢತೆ ಮತ್ತು ಮಾಧ್ಯಮದ ಬೆಂಬಲದೊಂದಿಗೆ ತುರ್ತು ಪರಿಸ್ಥಿತಿಯ ಕರಾಳ ನೆನಪುಗಳನ್ನು ಕೆದಕಿ ರಾಜಕೀಯವಾಗಿ ತಮ್ಮ ಸ್ಥಾನವನ್ನು ಸಮರ್ಥಿಸಿಕೊಂಡರು. ತುರ್ತು ಪರಿಸ್ಥಿತಿಯ ವಿರುದ್ಧ ಹೋರಾಡಿದ



ಕಳಂಕರಹಿತ ದೇವತೆಗಳಂತೆ, ದೇಶ ರಕ್ಷಣೆಗಾಗಿ ಅದೃಶ್ಯ ಸೆರೆಯಲ್ಲಿ ದೀರ್ಘ ಕಾಲ ಇದ್ದು ಸೇವೆಸಲ್ಲಿಸಿದ ಮಹಾಪುರುಷರಂತೆ ಅವರು ತಮ್ಮನ್ನು ತಾವು ಚಿತ್ರಿಸಿಕೊಂಡರು. ಆದರೆ, ಒಡನೆ ಗುಜರಾತ್ ಗಲಭೆ ತಲೆಯೆತ್ತಿತು. ಇವರು ಪ್ರತಿಪಾದಿಸಿದ ಆ ನೈತಿಕ ನೆಲೆ ಸಂಪೂರ್ಣವಾಗಿ ಅಳಿಸಿಹೋಯಿತು. ರಕ್ತದ ಬದಲಾಗಿ ರಕ್ತ ನಾಳಗಳಲ್ಲೆಲ್ಲ ನಿರ್ವಾತವೇ ತುಂಬಿದೆಯೇನೋ ಎಂಬಂತೆ ಒಂದು ರೀತಿ ಮರಗಟ್ಟಿದ ಅನುಭವ ಗುಜರಾತಿನ ಪ್ರಕರಣ ಸೃಷ್ಟಿಸಿತ್ತು. ಆದರೆ ಅವರು ಮತ್ತೂ ಅರಾಜಕವಾಗಿದ್ದರು. ತಮ್ಮನ್ನು ಆವರಿಸಿದ ಕ್ರೌರ್ಯ ಹುಟ್ಟಿದ ಪಾತಾಳದಾಳಕ್ಕೆ ನಾಚಿಕೆ ಹುಟ್ಟಿಸುವಂತೆ! ತುರ್ತು ಪರಿಸ್ಥಿತಿಯ ಅತಿಯ ಬಗ್ಗೆ ಮಾತಾಡುತ್ತಲೇ ಸಹಜೀವಿಗಳ ನಾಶಕ್ಕೂ ಸಮ್ಮತಿ ನೀಡುವುದು ಯಾರ ಗಮನಕ್ಕೂ ಬರಬಹುದಾದ ವೈರುಧ್ಯವಾಗಿತ್ತು. ನೈತಿಕತೆ ತನ್ನ ಕೊಟ್ಟಕೊನೆಯನ್ನು ತಲುಪಿದಂತೆ, ಇನ್ನು ಮುಂದೆ ಒಂದೇ ಮೌನ ಅಥವಾ ಮಾತಾಡುವುದಿದ್ದರೆ ಅದು ಗೋಡೆಯೊಂದಿಗೆ ಎಂಬಂತೆ ಭಾಸವಾಗುತ್ತಿತ್ತು. ಈ ಸಂದರ್ಭದಲ್ಲೇ ನನ್ನ ತಂದೆಯವರು ತುರ್ತು ಪರಿಸ್ಥಿತಿಯ ಸಮಯದಲ್ಲಿ ಬರೆದ ಅಸಂಗತತೆ ಮತ್ತು ಹುಸಿ ಆದರ್ಶಗಳನ್ನು ಅಣಕಿಸುವ ಈ ನಾಟಕಗಳನ್ನು ನಾನು ಪುನಃ ಸ್ಮರಿಸಿಕೊಳ್ಳುವಂತೆ ಆಯಿತು.

ಈ ರಾಜಕೀಯ ಹಿನ್ನೆಲೆಯ ಜೊತೆಜೊತೆಗೇ ಎಲ್ಲೆಡೆ ಹಣವೇ ಅಸಹ್ಯವಾಗಿ ನರ್ತಿಸುತ್ತಿದ್ದು, ನಾನು ಅದನ್ನು ಅಧ್ಯೆಸಿಕೊಳ್ಳಬೇಕಿತ್ತು. ಈ ನಾಟಕಗಳು ವರ್ತಮಾನಕ್ಕೆ ವೈರುಧ್ಯವನ್ನು ಒಡ್ಡುತ್ತಲೇ ಆ ಬಗ್ಗೆ ಒಳನೋಟವನ್ನೂ ಕೊಡುತ್ತವೆ. ನನ್ನಂತೆ ೧೯೭೦ರ ಆರಂಭದಲ್ಲಿ ಸಮಾಜವಾದೀ ಕಲ್ಯಾಣ ರಾಷ್ಟ್ರದಲ್ಲಿ ಹುಟ್ಟಿದವರಿಗೆ, ಸ್ಥಳೀಯ ಮಾರುಕಟ್ಟೆಯಲ್ಲಿ ದೊರೆಯುವ ಕಾನ್ವಾಸ್ ಶೂ ಮೇಲೆ ನೈಕ್‌ನ 'ಜಸ್ಟ್ ಡು ಇಟ್' ಬರೆಯುತ್ತಿದ್ದವರಿಗೆ ವಿಶ್ವದೆಲ್ಲೆಡೆಯಿಂದ ಏಕಾಏಕಿ ಹರಿದು ಬಂದ ಝಗಮಗ, ವಿವಿಧ ವಸ್ತುಗಳು ಮತ್ತೆ ಮನದಲ್ಲಿ ವೈರುಧ್ಯದ ಚಿತ್ರಗಳನ್ನೇ ಹುಟ್ಟಿಸಿದವು. ಈ ನಾಟಕಗಳ ವಸ್ತು ನಮ್ಮ ಹುಟ್ಟನ್ನು ನೆನಪಿಸುವಂತಿದ್ದವು.

ಒಬ್ಬ ಪತ್ರಕರ್ತನಾಗಿ ನನ್ನ ಮೌನವನ್ನು ಕಂಡ, ಅನುಭವಿಸಿದ ಬಗೆಯನ್ನೂ ಇಲ್ಲಿ ಹೇಳಬೇಕು. ಪತ್ರಕರ್ತರು ಸದಾ ಪದಗಳು ಮತ್ತು ಕ್ರಿಯೆಗಳ ನಡುವೆಯೇ ಬದುಕುತ್ತಾರೆ ಎಂಬುದು ಸಾಮಾನ್ಯ ಗ್ರಹಿಕೆ. ಈ ಗ್ರಹಿಕೆ ಸರಿಯಾದುದಲ್ಲ. ಪದ ಮತ್ತು ಕ್ರಿಯೆ, ಪ್ರತಿಭಟನೆ ಮತ್ತು ಗೊಂದಲ, ಲೂಟಿ ಮತ್ತು ದಂಗೆಗಳಿಗಿಂತ ಹೆಚ್ಚಾಗಿ ಪತ್ರಕರ್ತ ಮೌನದ ನಡುವೆಯೇ ಜೀವಿಸುತ್ತಾನೆ. ಕೆಲವೊಮ್ಮೆ ಈ ಮೌನ ಬಾಹ್ಯ ಹೇರಿಕೆಯಾಗಿರುತ್ತದೆ, ಸಂಸ್ಥೀಯ ಹಿತಾಸಕ್ತಿಗಳು ಮತ್ತು ಕೆಲವೊಮ್ಮೆ ನಮ್ಮ ಆದರ್ಶಗಳ ಕಾರಣದಿಂದಾಗಿ ನಾವೇ ಹೇರಿಕೊಂಡ ಸ್ವನಿರ್ಬಂಧ ಇದಕ್ಕೆ ಕಾರಣವಾಗಿರಬಹುದು. ಕೆಲವೊಮ್ಮೆ ಬೃಹತ್ ಉದ್ಯಮಪತಿಗಳ ದುರಾಗ್ರಹ ಈ ಮೌನಕ್ಕೆ ಕಾರಣವಾದರೆ ಮತ್ತೆ ಕೆಲವೊಮ್ಮೆ ಅತ್ಯಂತ ಭ್ರಷ್ಟ ಸರಕಾರ ನಾವು ದನಿಯಡಗಿಸಿ ಕುಳಿತುಕೊಳ್ಳುವಂತೆ ಮಾಡಬಹುದು. ಮತ್ತೊಮ್ಮೊಮ್ಮೆ ಸಮತೋಲನ ಮತ್ತು ಹಿತಕರವಾದ ಸಂಬಂಧ ಹದಗೆಡಗೊಡದಂತೆ, ನಾವೇ ಉನ್ನತೀಕರಿಸಿದ ಬಿಂಬವನ್ನು ಕೆಳಗಿಳಿಬಯಸದೇ ಮೌನಕ್ಕೆ ಮೊರೆಹೋಗಬಹುದು. ಈ ಲೇಖನದ ವ್ಯಾಪ್ತಿಯಾಚೆಗೆ ಹೋಗಿ ನಿರ್ದಿಷ್ಟ ಅಂಶಗಳನ್ನು ಗುರುತಿಸುತ್ತಾ ಹೋಗದೇ ಪತ್ರಕರ್ತರು ತಾವು ಆತುಕೊಳ್ಳುವ ಮೌನದ ಅರಿವು ಹೊಂದಿರಬೇಕಾಗುತ್ತದೆ ಎಂಬುದನ್ನಷ್ಟೇ ತಿಳಿಸಬಯಸುತ್ತೇನೆ.

ಈ ರೀತಿಯ ಎಚ್ಚರಿಕೆ, ಸ್ವ-ಜಾಗೃತಿ ೩೦ ವರ್ಷಗಳ ಹಿಂದಿನ ತುರ್ತುಪರಿಸ್ಥಿತಿಯ ಸಂದರ್ಭಕ್ಕಿಂತ ಇಂದು ಹೆಚ್ಚು ಪ್ರಸ್ತುತ. ಏಕೆಂದರೆ ಇಂದು ನಮ್ಮ ಆರ್ಥಿಕ ವಲಯವನ್ನು ಬೃಹತ್ ಬಂಡವಾಳಗಾರರು ಆಕ್ರಮಿಸಿದ್ದಾರೆ.

ಸಂಕೀರ್ಣ ಮತ್ತು ತಪ್ಪುದಾರಿಗೆಳೆಯುವ ಪರಿಭಾಷೆಯ ಮೂಲಕ ಬಂಡವಾಳ ಹೂಡಿಕೆಯ ಕ್ಲಿಷ್ಟ ಸಂರಚನೆಯನ್ನು ನಾವು ಎದುರುಗೊಳ್ಳುತ್ತಿದ್ದೇವೆ. ಇವೆಲ್ಲಕ್ಕಿಂತ ಹೇಯವಾಗಿ ನಮ್ಮಿಂದ ಚುನಾಯಿತರಾದ ಜನಪ್ರತಿನಿಧಿಗಳು ತಮ್ಮ ದುಷ್ಟ ಜಾಲಗಳನ್ನು ವಿಸ್ತರಿಸುತ್ತಾ ಸಾಗುತ್ತಿರುವುದಕ್ಕೆ ನಾವು ಸಾಕ್ಷಿಗಳಾಗಿದ್ದೇವೆ. ಉದ್ಯಮಪತಿಗಳ ಔದಾರ್ಯ ಆಡಳಿತ ಮಂಡಳಿಯ ಸಭೆಗಳಲ್ಲಿ 'ಸಾಮಾಜಿಕ ಬಂಡವಾಳ ಹೂಡಿಕೆ'ಯಲ್ಲದೇ ಸೋಷಿಯಲ್ ಇನ್ವೆಸ್ಟ್‌ಮೆಂಟ್ (Social investment) ಎಂದು ಅರ್ಥೈಸಲ್ಪಡುತ್ತದೆ ಎಂಬ ಅರಿವು ಪತ್ರಕರ್ತನಾದವನಿಗಿರಬೇಕು. ೩೦ ವರ್ಷಗಳ ಹಿಂದೆ ನಾವು ಬಹುಶಃ ಸಮ್ಮತಿಗಳನ್ನು ಸೃಷ್ಟಿಸುತ್ತಿದ್ದರೆ ಇಂದು ನಾವು ನಿರ್ಲಜ್ಜವಾಗಿ ಮೌನದ ಮೂಲಕ ಸತ್ಯವನ್ನು ಸೃಷ್ಟಿಸುತ್ತಿದ್ದೇವೆ. ಟೆಲ್ ಮಿ ನೋ ಲೈಸ್ (Tell me no Lies) ಎಂಬ ತನಿಖಾ ಪತ್ರಿಕೋದ್ಯಮಕ್ಕೆ ಸಂಬಂಧಿಸಿದ ಲೇಖನ ಮಾಲೆಗೆ ಮುನ್ನುಡಿ ಬರೆಯುತ್ತಾ ಆ ರಂಗದ ದಂತಕತೆ ಜಾನ್ ಪಿಲಜರ್, ಕ್ರಾಂತಿಕಾರಿ ರಷ್ಯನ್ ಕವಿ ಯೆವ್‌ಜೆನಿ ಯೆವ್ತುಶೆಂಕೋನ ಮಾತನ್ನು ಉದ್ಧರಿಸುತ್ತಾನೆ. 'ಮೌನವು ಸತ್ಯದ ಸ್ಥಾನವನ್ನು ಆವರಿಸಿದಾಗ ಆ ಮೌನ ಸುಳ್ಳೇ ಆಗಿರುತ್ತದೆ'. ತುರ್ತು ಪರಿಸ್ಥಿತಿಯ ಬಗ್ಗೆ ನಾವು ಮಾತನಾಡುವಾಗ ಶ್ರೀಮತಿ ಇಂದಿರಾ ಗಾಂಧಿಯವರ ಆಳ್ವಿಕೆ ಹೇರಿದ ಮಾಧ್ಯಮ ನಿರ್ಬಂಧದ ಬಗ್ಗೆ ಮಾತನಾಡದೇ ಇರಲು ಸಾಧ್ಯವಿಲ್ಲ. ಆದರೆ ಇಂದು ನಾವು ಎದುರುಗೊಳ್ಳುತ್ತಿರುವ ನಿರ್ಬಂಧ ಇನ್ನಷ್ಟು ದೊಡ್ಡದು, ಅದೃಶ್ಯವಾದುದು, ಸಂಕೀರ್ಣವಾದುದು ಮತ್ತು ದೂರಗಾಮಿ ಪರಿಣಾಮಗಳನ್ನುಳ್ಳದ್ದು. ಹೀಗೆ ಈ ನಾಟಕಗಳು ಇಂತಹ ವೃತ್ತಿಪರ ಪ್ರಶ್ನೆಗಳನ್ನೆತ್ತುವುದಕ್ಕೆ ದಾರಿಮಾಡಿ ಕೊಡುತ್ತವೆ.

ಈ ವಿಶಾಲ ಆಯಾಮದಲ್ಲಿ ಪುಸ್ತಕವನ್ನಿಟ್ಟು ನೋಡುವುದರ ಜೊತೆಗೇ ವೈಯಕ್ತಿಕವಾಗಿ ಹೇಳುವುದಾದೆ ನನ್ನ ತಂದೆಯವರ ಷಷ್ಟಬ್ದಿ ಆಚರಣೆಯಲ್ಲಿ ಪಾಲ್ಗೊಳ್ಳಲು ಸಾಧ್ಯವಾಗದಾಗ ಅದನ್ನು ತುಂಬಿಕೊಳ್ಳುವ ದಾರಿಯೆಂದರೆ ಈ ನಾಟಕಗಳನ್ನು ಅನುವಾದ ಮಾಡುವುದು ಎಂದು ನಾನು ಯೋಚಿಸಿದೆ. ಈ ನಾಟಕ ಕೃತಿ ನನ್ನ ತಂದೆಯವರ ಮೂರು ದಶಕಗಳ ಸಾಹಿತ್ಯ ಚಟುವಟಿಕೆಗಳ ಪ್ರತಿನಿಧಿಯಲ್ಲ ಎಂಬ ಅರಿವು ನನಗಿದೆ. ಆದರೆ ಸಾಂಸ್ಕೃತಿಕ ಕೆಲಸಗಳಲ್ಲಿ ಸಾಮೂಹಿಕ ಜಾಗೃತಿ ಮೂಡಿಸುವ ಅವರ ಹುರುಪು, ಇದುವರೆಗೆ ಒಂದಿನಿತೂ ಕಡಿಮೆಯಾಗಿಲ್ಲ ಎಂದು ಖಚಿತವಾಗಿ ಹೇಳಬಲ್ಲೆ. ಹಾಗೆಯೇ ಅವರ ನಿರ್ಮಮಕಾರ ಮತ್ತು ಸ್ಥಿತಪ್ರಜ್ಞತೆ ಸಾಹಿತ್ಯವಲಯದಲ್ಲಿ ಮನೆಮಾತಾಗಿವೆ. 'ಕನ್ನಡದ ಯುವ ಬರಹಗಾರರನ್ನು ಸಂಘಟಿಸಿ ಇವರು ಮೌನ ಕ್ರಾಂತಿಯನ್ನು ಮಾಡಿದ್ದಾರೆ' ಎಂದು ಲಂಕೇಶರಂತಹ ಹಿರಿಯ ಬರಹಗಾರರು ತಮ್ಮ ಪತ್ರಿಕೆಯ ಸಂಪಾದಕೀಯದಲ್ಲಿ ಇದನ್ನು ಚೆನ್ನಾಗಿ ದಾಖಲಿಸಿದ್ದಾರೆ. ಮೂವತ್ತು ವರ್ಷಗಳಿಂದ ನನ್ನ ತಂದೆಯವರು ಯುವಬರಹಗಾರರ ಚೊಚ್ಚಲ ಕೃತಿಗಳನ್ನು ಪ್ರಕಟಿಸುತ್ತಾ ಬಂದಿದ್ದಾರೆ. ಅವರಲ್ಲಿ ಎಚ್.ಎಸ್. ಶಿವಪ್ರಕಾಶ್, ಅಬ್ದುಲ್ ರಶೀದ್, ಟಿ.ಎನ್. ಸೀತಾರಾಮ್, ಕೆ.ವಿ. ನಾರಾಯಣ, ರಾಘವೇಂದ್ರ ಖಾಸನೀಸ, ಹೆಚ್.ಎಸ್. ರಾಘವೇಂದ್ರ

ರಾವ್, ಕಿ.ರಂ. ನಾಗರಾಜ್ ಮತ್ತಿತರರು ವರ್ತಮಾನದ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಪ್ರಮುಖವಾಗಿ ಕಾಣಿಸಿಕೊಳ್ಳುತ್ತಿರುವಂತವರು. ಹಿರಿಯ ಸಾಹಿತಿಗಳಾದ ದ.ರಾ. ಬೇಂದ್ರೆ, ಎ.ಎನ್. ಮೂರ್ತಿರಾವ್, ಶ್ರೀರಂಗ, ಎಚ್.ಎಸ್. ಬಿಳಿಗಿರಿ, ಶಂಕರಭಟ್ ಮುಂತಾದವರ ಕುರಿತು ವಿಮರ್ಶಾತ್ಮಕ ಆಸಕ್ತಿಯನ್ನೂ ನನ್ನ ತಂದೆ ಬೆಳೆಸಿದ್ದಾರೆ. ಇವೆಲ್ಲವನ್ನೂ ಅವರು ಮಾಡಿದ್ದ ತಮ್ಮ ಸಂಬಳದ ಉಳಿತಾಯದ ಹಣದಿಂದ ಮತ್ತು ನಮ್ಮಮ್ಮನ ತ್ಯಾಗದ ಕಾರಣದಿಂದ. ಸಂಸ್ಕೃತಿ ಚಿಂತಕ ಬಸವರಾಜ ಕಲ್ಗುಡಿ ಸಾರ್ವಜನಿಕ ಸಭೆಯೊಂದರಲ್ಲಿ ನಮ್ಮ ತಂದೆಯವರ ಸಾಂಸ್ಕೃತಿಕ ಪಾತ್ರವನ್ನು ನೆಲದ ಮೇಲಿರುವ ಸಕಲಕ್ಕೂ ಜೀವ ಹರಿಸುವ 'ಅಂತರ್ಜಲ'ಕ್ಕೆ ಹೋಲಿಸಿದ್ದಾರೆ. ಆದುದರಿಂದ ಮೌನ, ಶಾಂತ, ನಿಶ್ಶಬ್ದ ಈ ಪದಗಳು ನನ್ನ ತಂದೆಯವರ ವ್ಯಕ್ತಿತ್ವಕ್ಕೆ ತೀರಾ ಹತ್ತಿರ ಎನಿಸುತ್ತವೆ. ಆದುದರಿಂದ ಈ ನಾಟಕಗಳನ್ನೇಕೆ ಅನುವಾದಿಸಬಾರದು ಎಂದು ನಾನು ಚಿಂತಿಸಿದೆ.

ಈ ನಾಟಕಗಳ ಅನುವಾದ ನನ್ನ ಪಾಲಿಗೆ ಅವರ ಮೌನವನ್ನು ಅರ್ಥಮಾಡಿಕೊಳ್ಳುವ ಒಂದು ಪ್ರಕ್ರಿಯೆಯೂ ಕೂಡಾ. ನಾನು ಮನೆಯಿಂದ ಹೊರಬಂದು ಹೆಚ್ಚೆಚ್ಚು ಪ್ರವಾಸ ಮಾಡಿದಂತೆ, ಹೆಚ್ಚೆಚ್ಚು ಜನರನ್ನು ಭೇಟಿಯಾದಂತೆ, ನನ್ನ ತಂದೆಯ ಮೌನ ತೀರಾ ವಿಶಿಷ್ಟವಾದುದು ಎಂದು ಅರಿತುಕೊಂಡೆ. ಭಾವುಕತೆ ಮತ್ತು ಸಮಯದ ಪರಿಧಿಯಲ್ಲಿ ಅದು ಏನು ಎಂಬುದನ್ನು ವಿವರಿಸುವುದು ನನಗೆ ಸಾಧ್ಯವಾಗದೇ ಹೋಗಬಹುದು. ಆದರೆ ಅದು ಯಾವುದು ಅಲ್ಲ ಎಂದು ನಾನು ಹೇಳಬಲ್ಲೆ. ಅದು ನಾನು ಹೈದರಾಬಾದ್ ವಿಶ್ವವಿದ್ಯಾಲಯದಲ್ಲಿ ಕಂಡ ಕಲಿತ ಮಂದಿಯ ಔದ್ಧತ್ಯವಲ್ಲ: ಜೈಪುರದಲ್ಲಿ ನಾನಿದ್ದ ಮನೆಯ ಮಾಲೀಕ, ನಿವೃತ್ತ ಅಧಿಕಾರಿಯ ಒಂಟಿತನದ ಮೌನವೂ ಅಲ್ಲ; ಲಂಡನ್‌ನ ಅಂಡರ್‌ಗ್ರೌಂಡ್ ರೈಲಿನಲ್ಲಿ ನಾನು ಎದುರುಗೊಂಡ ಅಲಕ್ಷದ ಮೌನವೂ ಅಲ್ಲ; ಕುಡಿತ ಕುಣಿತಗಳ ಬಳಿಕ ಡಬ್ಲಿನ್‌ನ ಸರಳುಗಳೊಳಗಿನ ಖಾಲಿ ಮೌನವೂ ಅಲ್ಲ; ಎಲ್ಲದಕ್ಕೂ ತಲೆಯಾಡಿಸುವ ಅಥವ ಒಳಗೊಳಗೇ ಕಾರಸ್ಥಾನ ನಡೆಸುವವನ ಮೌನವಲ್ಲ; ನಾನು ನನ್ನ ಅಜ್ಜನಲ್ಲಿ ನೋಡಿದ ತೃಪ್ತ ಶ್ರದ್ಧಾಳುವೊಬ್ಬನ ಮೌನವೂ ಅದಲ್ಲ; ಪ್ರಶ್ನೆ, ಸನ್ನೆ ಅಥವಾ ಪತ್ರಕ್ಕೆ ಉತ್ತರಿಸದಿರುವ ಅಧಿಕಾರದ ಮೌನವೂ ಅಲ್ಲ. ಬಹುಶಃ ಅದು ನನ್ನ ತಮ್ಮನ ಚಿತ್ರ ಪುಸ್ತಕದ ಮೂಲೆಯಲ್ಲಿ ರೂಪುತಳೆದ ಬುದ್ಧನ ಮೌನ! ನನ್ನ ಗೆಳೆಯ ಹೇಳುವಂತೆ ಶಾಂತತೆಯ ಮೌನ ಇರಬಹುದು, ನನಗೆ ಹೆಚ್ಚೇನೂ ತಿಳಿದಿಲ್ಲ. ನನಗೆ ತಿಳಿದಿರುವುದಿಷ್ಟೇ. ನಾನು ೭ ವರ್ಷದ ಹುಡುಗನಾಗಿದ್ದಾಗ ನನ್ನ ಹೊದಿಕೆಯೊಳಗಣ ಸಣ್ಣ ರಂಧ್ರದಿಂದ ನೋಡುತ್ತಿದ್ದ ತಂದೆಯ ಮೌನವನ್ನು ಈಗಲೂ ಅದೇ ಭಾವದಿಂದ ನೋಡುತ್ತಿದ್ದೇನೆ.

ನಾನು ಆ ದಿನ ಬೇಗ ಎಚ್ಚರಗೊಂಡೆ. ಅದು ಮುಂಜಾನೆ ೪.೩೦ರ ಸಮಯ. ನನ್ನ ತಂದೆ ಮೇಜಿನೆದುರು ಕುಳಿತು ಏನೋ ಬರೆಯುತ್ತಿದ್ದಾರೆ. ಮೇಜಿನ ದೀಪ ಅವರ ಮುಖವನ್ನು, ಅಲೆಅಲೆಯಾಗಿರುವ ಕೂದಲನ್ನು ಬೆಳಗಿಸುತ್ತಿದೆ. ಅವರು ಆಗಾಗ ತಲೆಯೆತ್ತಿ ಗೋಡೆಯ ಸೆರಳನ್ನವಲೋಕಿಸಿ ಮುಗುಳ್ನಗುತ್ತಿದ್ದಾರೆ. ಅರ್ಧ ಗಂಟೆಯಲ್ಲೇ ನಾನು ಪುನಃ ನಿದ್ದೆಗೆ ಜಾರಿದೆ. ಆ ದಿನ ನಾನು ಶಾಲೆಗೆ ಹೋಗುವಾಗ ತಡವಾಗಿ ಹೋಗಿತ್ತು.

**ಮರೆತ ಮಾತು :**

೧೯೭೭ರಲ್ಲಿ ಈ ನಾಟಕಗಳು ಮೊದಲ ಬಾರಿಗೆ ಪ್ರಕಟಗೊಂಡಾಗ ಅವುಗಳನ್ನು ಮಾತು ರಹಿತ ವಸ್ತು ಎಮ್.ಇ.ಕ್ಯು. ೩೩೩೬ ನೋದಣಿ ಸಂಖ್ಯೆಯ ವೆಸ್ಪಾ ಸ್ಕೂಟರ್‌ಗೆ ಅರ್ಪಿಸಲಾಗಿತ್ತು. ಇದು ನನ್ನ ತಂದೆಯವರನ್ನು ಅವರ ಸಾಂಸ್ಕೃತಿಕ ಚಟುವಟಿಕೆಗಳಿಗಾಗಿ ಬೆಂಗಳೂರಿನ ಉದ್ದಗಲಕ್ಕೂ ಒಯ್ಯುತ್ತಿದ್ದ ಮೊದಲ ವಾಹನ.

(ಚಿ. ಶ್ರೀನಿವಾಸರಾಜು ಅವರ ಐದು ನಾಟಕಗಳ ಇಂಗ್ಲಿಷ್ ಅವತರಣಿಕೆಗೆ
ಬರೆದ ಮುನ್ನುಡಿಯ ವಿಸ್ತೃತ ರೂಪ)
ಕನ್ನಡಕ್ಕೆ : ಭಾರತೀ ದೇವಿ





# ಅಚ್ಚುಕಟ್ಟಾದ ರಚನೆ

● ಓ.ಎಲ್. ನಾಗಭೂಷಣಸ್ವಾಮಿ

**ಗೆ**ಳೆಯ ಶ್ರೀನಿವಾಸರಾಜು ಅವರನ್ನು ತಿಳಿಯದ ಸಾಹಿತ್ಯ ಪ್ರೇಮಿಗಳು ಇಲ್ಲ. ಅವರ ಹೊಸ ನಾಟಕಕ್ಕೆ ನನ್ನ ಪರಿಚಯದ ಮುನ್ನುಡಿ ಅಗತ್ಯವಿಲ್ಲ. ಶ್ರೀನಿವಾಸರಾಜು ಅವರು ನನ್ನ ಮೇಲೆ ಇಟ್ಟಿರುವ ಪ್ರೀತಿ, ವಿಶ್ವಾಸಗಳು ನನ್ನನ್ನು ಈ ಮಾತುಗಳನ್ನು ಬರೆಯುವಂತೆ ಮಾಡಿದೆ.

ಶ್ರೀನಿವಾಸರಾಜು ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಮುಖಾಂತರ ಮಾಡಿರುವ ಕೆಲಸ ನಮ್ಮ ಕಾಲದ ಸಾಹಿತ್ಯದ ಬೆಳವಣಿಗೆಗೆ ಎಷ್ಟೊಂದು ಮುಖ್ಯವಾದದ್ದು. ಅವರು ಸಾಹಿತ್ಯಕ್ಕಾಗಿ ಕೆಲಸ ಮಾಡ ಮಾಡುತ್ತ ತಾವೇ ಸ್ವತಃ ಎಷ್ಟು ಬರೆಯಬಹುದಾಗಿತ್ತೋ ಅಷ್ಟು ಬರೆಯಲು ಆಗಲಿಲ್ಲ. ಹಾಗೆಂದು ಅವರ ಅಲ್ಪ ಪ್ರಮಾಣದ ಬರವಣಿಗೆಯೂ ಗುಣದಲ್ಲಿ ಹಿರಿದಾದುದೇ ಆಗಿದೆ. ಶ್ರೀನಿವಾಸರಾಜು ಅವರ **'ಛಸನಾಲ ಬಂಧು'** ಮತ್ತು ಇತ್ತೀಚಿನ **'ಎಲ್ಲಿ ಹುಡುಕಲಿ ನಿನ್ನ'** ಕವನಗಳು ಬಹಳ ಕಾಲ ಸಹೃದಯರ ಮನಸ್ಸಿನಲ್ಲಿ ಉಳಿಯುವಂಥವು. ಅವರ ಮೂಕ ನಾಟಕಗಳು ಮತ್ತು ಏಕಾಂಕಗಳು ತಮ್ಮ ಯೋಗ್ಯತೆಗೆ ತಕ್ಕ ಮನ್ನಣೆಯನ್ನು ಪಡೆದುಕೊಂಡಿವೆ. ಅವರ ಬರಹಗಳನ್ನು ಕುರಿತು ವಿಮರ್ಶಕರು ಚರ್ಚಿಸಿಲ್ಲದಿರಬಹುದು. ಆದರೆ ಅವರ ಎಲ್ಲ ಕೆಲಸಗಳಲ್ಲೂ, ಬರಹದಲ್ಲೂ ಆಪ್ತತೆ ಮತ್ತು ಪ್ರಾಮಾಣಿಕತೆಯ ಗುಣಗಳು ಮನಸ್ಸನ್ನು ತಟ್ಟುತ್ತವೆ.



ಶ್ರೀನಿವಾಸರಾಜು ಅವರ ಮೂಕ ನಾಟಕಗಳಾಗಲೀ, ಏಕಾಂಕಗಳಾಗಲೀ ಅಥವಾ ಈಗ ಪ್ರಕಟವಾಗುತ್ತಿರುವ **'ಹಳಿಯ ಮೇಲಿನ ಸದ್ದು'** ನಾಟಕವಾಗಲೀ ಅವರಿಗೆ ಇರುವ ಪ್ರದರ್ಶನ ಕಲೆಗಳನ್ನು ಕುರಿತ ಆಸಕ್ತಿಯ ಫಲಗಳು. ಈ ನಾಟಕಗಳನ್ನು ಮಹತ್ವಾಕಾಂಕ್ಷೆಯ ನಾಟಕಗಳೆಂದು ಗುರುತಿಸುವುದು ಬೇಕಿಲ್ಲ. ಆದರೆ ಇವು ತನ್ನ ಮಿತಿಗಳನ್ನು ಬಲ್ಲ ನಾಟಕಕಾರನೊಬ್ಬನ ಅಚ್ಚುಕಟ್ಟಾದ ರಚನೆಗಳು ಎಂಬುದು ನಿಜ.

ಕನ್ನಡ ರಂಗಭೂಮಿಯಲ್ಲಿ ಪ್ರಚಲಿತವಾಗಿರುವ ನಾಟಕಗಳ ಮಾದರಿಯನ್ನು ಇಲ್ಲಿ ಕಾಣಲಾಗುವುದಿಲ್ಲ.

ಪುರಾಣದ, ಚರಿತ್ರೆಯ ಅಥವಾ ಜಾನಪದದ ವಸ್ತುಗಳನ್ನು ನಾಟಕ ರೂಪದಲ್ಲಿ ಅಳವಡಿಸಿ, ಕಾವ್ಯ ಸಂಗೀತ, ನೃತ್ಯದ ಮೂಲಕ ಅರ್ಥವಂತಿಕೆಯನ್ನು ಸಾಧಿಸಲು ಶ್ರೀನಿವಾಸರಾಜು ಪ್ರಯತ್ನಿಸುವುದಿಲ್ಲ. ದಿನನಿತ್ಯದ ಬದುಕಿನ ಸಾಮಾನ್ಯ, ಸಣ್ಣಪುಟ್ಟ ಸಂಗತಿಗಳೇ ಇವರ ಕೃತಿಯ ಮೂಲ ದ್ರವ್ಯ. ಹೀಗಾದಾಗ ನಾಟಕಕಾರ ಬಹಳ ಕಷ್ಟದ ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ. ಪ್ರೇಕ್ಷಕರಿಗೂ, ತನಗೂ ದತ್ತವಾದ ವಸ್ತು ಸಾಮಗ್ರಿಯನ್ನು ನಿರಾಕರಿಸಿ ತಾನು ಆಯ್ದ ಸಂಗತಿಗಳನ್ನು ಜೋಡಿಸುವ ಕ್ರಮದಲ್ಲಿ, ರಂಗ ತಂತ್ರಗಳನ್ನು ಬಳಸಿಕೊಳ್ಳುವ ರೀತಿಯಲ್ಲಿ ಅರ್ಥವಂತಿಕೆಯನ್ನು ಸಾಧಿಸಬೇಕಾಗುತ್ತದೆ. ಶ್ರೀನಿವಾಸರಾಜು ಈ ಕೆಲಸವನ್ನು ಅಚ್ಚುಕಟ್ಟಾಗಿ ಮಾಡುತ್ತಾರೆ.

**'ಹಳಿಯ ಮೇಲಿನ ಸದ್ದು'** ರೇಲ್ವೆ ಗೇಟಿನ ಕಾವಲುಗಾರನೊಬ್ಬನ ಸಂಸಾರದ ಕಥೆ. ಶ್ರೀನಿವಾಸರಾಜು ನೇರವಾಗಿ ಕಥೆ ಹೇಳುತ್ತಾರೆ. ಕೋಲಾರ ಜಿಲ್ಲೆಯ ಆಸುಪಾಸಿನ ಪ್ರದೇಶವನ್ನೂ, ಅಲ್ಲಿನ ತೆಲುಗು ಮಿಶ್ರಿತ ಕನ್ನಡವನ್ನೂ ಬಳಸುತ್ತಾರೆ. ಆದರೆ ಕಥೆಯ ಮುಖಾಂತರ ನಮ್ಮ ಬದುಕಿನ ಮೇಲೆ ವ್ಯಾಖ್ಯಾನವನ್ನೂ ಮಾಡುತ್ತಾರೆಂಬುದು ಮುಖ್ಯ. ಈ ವ್ಯಾಖ್ಯಾನಕ್ಕೆ ಶ್ರೀನಿವಾಸರಾಜು ಹಲವಾರು ಬಗೆಯ ಸಂಕೇತಗಳನ್ನು ಬಳಸಿಕೊಳ್ಳುತ್ತಾರೆ. ಮೊದಲನೆಯದು ಪಾತ್ರಗಳ ಸಂಭಾಷಣೆಯಲ್ಲಿ ಬರುವ ಮಾತುಗಳಿಗೆ ಇರುವ ಅರ್ಥ ಸೂಚನೆಯ ಸಾಮರ್ಥ್ಯ. "ಇಲ್ಲೊಂದು ಮೊಳೆ ಬೇರೆ ಬಿದ್ದೋಗೈತೆ ಈಗ್ಬರೋ ಮೊಳೇನೂ ಗಟ್ಟಿಲ್ಲ, ಬರೋ ಕಂಬೀನೂ ಗಟ್ಟಿಲ್ಲ...... ಎಲ್ಲಾ ಅದ್ವಾನ ಎದ್ದೋಯ್ತು, ಮೇಲ್ನೋರೂ ಸರಿಕಿಲ್ಲ, ಕೆಳಗ್ನೋರು ಮೊದ್ಲೇ ಸರೀಕಿಲ್ಲ... ನೀಯತ್ ಇಲ್ಲದ ಗಬ್ ನನ್‌ಮಕ್ಕಳು", "ಗಾಡಿ ಹಣೆ ಬರಾ ಇರೋದು ಬಾವುಟದಾಗ" ಇಂಥ ಮಾತುಗಳನ್ನು ನೋಡಬಹುದು. ಎರಡನೆಯದು ಸಂಯೋಜನೆಯ ಮುಖಾಂತರ ಒದಗುವ ಸಾಂಕೇತಿಕತೆ. ರೈಲು ಕಾವಲುಗಾರನನ್ನೂ, ಅವನ ಹೆಂಡತಿಯನ್ನೂ ಒಟ್ಟುಗೂಡಿಸಿದರೆ, ಪಟದಪ್ಪನನ್ನು ಅವನ ಪ್ರಿಯವಾದ ನೆಲದಿಂದ ದೂರ ಮಾಡಿದ್ದೂ ಹೌದು. ಹಾಗೇ ರೈಲು ಬದಲಾಗುವ ಕಾಲಗತಿಯನ್ನೂ, ನಿರ್ಜನ ಹಳ್ಳಿಗೆ ನಾಗರೀಕರಿಂದ ಒದಗುವ ತಂಟೆ ತಕರಾರನ್ನೂ ಸೂಚಿಸಿಬಿಡುತ್ತದೆ. ಮೂರನೆಯದು ವಸ್ತುಗಳ ಮತ್ತು ರಂಗತಂತ್ರಗಳ ಸಾಂಕೇತಿಕತೆ. ಬ್ಯಾಟಮ್ಮ ಚಿಂತೆಯಲ್ಲಿ ಮುಳುಗಿದಾಗ ಹತ್ತಿ ಆರುವ ದೀಪಗಳು, ಮತ್ತು ಮುಖ್ಯ ಸಂದರ್ಭಗಳಲ್ಲಿ ಕೇಳುವ ರೈಲಿನ ಸದ್ದು ಇಂಥವು. ಹಾಗೆ ನೋಡಿದರೆ ರೈಲಿನ ಸದ್ದು ಮತ್ತು ರೈಲು ಇಡೀ ನಾಟಕದಲ್ಲಿ ಮೇಳ ಪಾತ್ರದ ಕಾರ್ಯವನ್ನೇ ನಿರ್ವಹಿಸುವಂತೆ ತೋರುತ್ತದೆ. ನಿಧಾನವಾಗಿ ಬೆಳೆದು ನೂರು ಕಾಲ ಬದುಕಿ ತುಂಬ ಉಪಯುಕ್ತವಾಗುವ ತೆಂಗಿನ ಸಸಿಗೆ ನೀರು ಹಾಕುವ ಕ್ರಿಯೆ, ಸಾಂಕೇತಿಕತೆಯ ನಾಲ್ಕನೆಯ ಬಗೆ. ಇಂಥಲ್ಲಿ ಅಮ್ಮು, ಬ್ಯಾಟಿ ಇವರು ಮಾಡುವ ಸಾಮಾನ್ಯ ಕೆಲಸ ಭವಿಷ್ಯತ್ತಿನ ಸುಖದ ಹಾರೈಕೆಯಾಗಿ ಬಿಡುತ್ತದೆ. ಇಂತಹ ಸಂಯೋಜನೆಯಿಂದ ಶ್ರೀಮಂತ-ಬಡವರ, ನಾಗರೀಕರು-ಹಳ್ಳಿಗರ, ಸಾಮಾನ್ಯ ಮನುಷ್ಯನ ಸಾಮಾನ್ಯ ಆಸೆಗಳು ಮತ್ತು ಸಾಮಾನ್ಯ ಮನುಷ್ಯರೊಳಗೇ ಇರುವ ಸ್ವಾರ್ಥದ ಸಂಘರ್ಷಗಳನ್ನೂ ಶ್ರೀನಿವಾಸರಾಜು ಹೊಮ್ಮಿಸಲು ಯತ್ನಿಸಿದ್ದಾರೆ. ಸಮಾಜ ವ್ಯವಸ್ಥೆಯ ವಿರುದ್ಧ ಹೋರಾಡಬಯಸುವ 'ಪ್ರಜಾಯುದ್ಧಂ' ಯುವಕರು ಬಡ ಕಾವಲುಗಾರನನ್ನು

ಹಿಂಸಿಸುವುದು, ಆ ಬಡ ಕಾವಲುಗಾರ ಟ್ರಾಲಿಸಾಹುಕಾರನಿಗಿಂತ ಇವರೇ ಒಳ್ಳೆಯವರೆಂದು, ಅವರಿಂದ ಪೀಡಿತನಾಗಿಯೂ ತಿಳಿಯುವುದು ಅರ್ಥಪೂರ್ಣವಾಗಿದೆ. ಅಂತೆಯೇ ನಾಟಕದ ಉದ್ದಕ್ಕೂ ಸೂತ್ರಧಾರನಂತಿರುವ ಟ್ರಾಲಿಸಾಹುಕಾರ ಅದೃಶ್ಯಪಾತ್ರನಾಗಿರುವುದೂ ತುಂಬ ಉಚಿತವಾಗಿಯೇ ಇದೆ. ಚಂದ್ರಣ್ಣನು ನಡೆಸುವ ಮದುವೆ ಮಾತುಕತೆ ಕೇವಲ ರಕ್ತಸಂಬಂಧದ ತೊಡಕುಗಳನ್ನು ಮಾತ್ರವಲ್ಲದೆ ಇಂಥ ಸಂಬಂಧಗಳನ್ನು ನಿರ್ಣಯಿಸುವ ಹಣಕಾಸಿನ ಶಕ್ತಿಯ ಮುಖವನ್ನೂ ತೋರುತ್ತದೆ.

ಇಷ್ಟೆಲ್ಲ ಸಾಧ್ಯತೆಗಳನ್ನು ನಿರ್ವಹಿಸುವ ನಾಟಕದಲ್ಲಿ, ನಾನು ಪ್ರದರ್ಶನ ನೋಡಿಲ್ಲವಾದ್ದರಿಂದ, ಒಂದು ಪ್ರಶ್ನೆಯೂ ಹುಟ್ಟುತ್ತದೆ. ಅದು ಭಾವ ತೀವ್ರತೆಯದು. ಕೊನೆಗೆ ಸಂಭವಿಸುವ ದುರಂತಕ್ಕೆ ಇನ್ನಷ್ಟು ಸಿದ್ಧತೆ ಬೇಕಿತ್ತೆಂದೂ, ಬ್ಯಾಟಮ್ಮನ ತುಮುಲ ತುಂಬ ಯಾಂತ್ರಿಕ ರೀತಿಯಲ್ಲಿ ವ್ಯಕ್ತವಾಗುತ್ತದೆಂದೂ ಅನಿಸುತ್ತದೆ. ಆದರೆ ಎಷ್ಟೆಂದರೂ ನಾಟಕದ ಪಠ್ಯ ಜೀವಂತವಾಗುವುದು ಪ್ರದರ್ಶನದಲ್ಲಿ. ಅಲ್ಲಿ ಈ ಕೊರತೆಗಳನ್ನು ಮೀರಬಹುದೆಂದು ತೋರುತ್ತದೆ. ಗದ್ಯಕ್ಕೆ ಒಂದಿಷ್ಟು ಕಾವ್ಯಸ್ಪರ್ಶ ಇದ್ದಿದ್ದರೆ ಆಗುತ್ತಿತ್ತೆನಿಸುತ್ತದೆ. ಪ್ರೊಸೀನಿಯಂ ರಂಗಭೂಮಿಯ, ವಾಸ್ತವವಾದ ಶೈಲಿಯ ನಾಟಕಗಳ ಮಿತಿಯನ್ನೂ 'ಹಳಿಯ ಮೇಲಿನ ಸದ್ದು' ಸೂಚಿಸುತ್ತದೆ.

ಈ ಮಾತುಗಳು ನಾಟಕದ ದೋಷಗಳನ್ನು ಎತ್ತಿ ಹೇಳುವಂಥದಲ್ಲ. ಶ್ರೀನಿವಾಸರಾಜು ತಮ್ಮ ಮಿತಿಯೊಳಗೇ ಎಷ್ಟು ಅಚ್ಚುಕಟ್ಟಾಗಿ ನಾಟಕ ರಚನೆ ಮಾಡಿದ್ದಾರೆಂದು ತಿಳಿಸುವುದಕ್ಕೆ ಹೇಳಿದ್ದು, ಶ್ರೀನಿವಾಸರಾಜು ಮತ್ತಷ್ಟು ಹೆಚ್ಚು ಬರೆಯಲಿ, ಅವರ ಬರವಣಿಗೆಗೆ ಅವರ ವ್ಯಕ್ತಿತ್ವಕ್ಕೆ ಸಿಗುವಂಥದೇ ಮನ್ನಣೆ ಸಿಗಲಿ ಎಂದು ಹಾರೈಸುತ್ತೇನೆ.

*('ಹಳಿಯ ಮೇಲಿನ ಸದ್ದು' ನಾಟಕಕ್ಕೆ ಬರೆದ ಮುನ್ನುಡಿ)*



# ಮೂಕ ಸಾಕ್ಷಿಯಲ್ಲಿ ಮೌನದ ಆಸ್ಫೋಟ

● *ಡಾ. ಮೊಗಳ್ಳಿ ಗಣೇಶ್*

ಆಧುನಿಕ ಮನೋ ರಂಗಭೂಮಿಯ ಅತಿ ಸೂಕ್ಷ್ಮ ಸಂವೇದನೆಯನ್ನು ಮಾತಿನ ಹಂಗಿಲ್ಲದೆ ಬಿಂಬಿಸಿದವರು ಚಿ. ಶ್ರೀನಿವಾಸರಾಜು ಅವರು. ಅಸಂಗತ ನಾಟಕಗಳ ಕೃತಕ ಒತ್ತಡವನ್ನು ನಿರಾಕರಿಸಿ ವ್ಯಕ್ತಿಯ ಒಳಗಿನ ನಿಜವಾದ ಅಸಂಗತ ಸ್ಥಿತಿಯನ್ನು ನಿರೂಪಿಸುವ ಶ್ರೀನಿವಾಸರಾಜು ಅವರ ಮೂಕ ನಾಟಕಗಳು ದುರಂತದ ಆಸ್ಫೋಟಕ್ಕೆ ಸಿಕ್ಕು ಚೂರುಚೂರಾದ ಅಸಂಗತ ತುಣುಕುಗಳಂತೆ ನಮ್ಮೆದುರು ಒಟ್ಟು ಮನುಷ್ಯತ್ವದ ಆಕ್ರಂಧನವನ್ನು ನುಡಿಸುತ್ತವೆ. ಕನ್ನಡ ರಂಗಭೂಮಿಯಲ್ಲಿ ಇಂತಹ ಮೂಕ ಆಕ್ರಂಧನವು ತುಂಬ ಹೊಸದು. ಅವರ 'ಐದು ಮೂಕ ನಾಟಕಗಳು' ಅಪವಿತ್ರಗೊಂಡ ಹುಸಿ ಮಾತಿನ ಅಗತ್ಯವನ್ನೇ ನಿರಾಕರಿಸುತ್ತವೆ. ನಮ್ಮ ಬದುಕಿನಂತೆ ಭಾಷೆಯೂ ನಡೆನುಡಿಯ ಭಾವವೂ ಭ್ರಷ್ಟಗೊಂಡಾಗ ಮೌನವೇ ಕೊನೆಗುಳಿವ ವಾಸ್ತವವಾಗಿ ಬಿಡುತ್ತದೆ. ಗಾಯಗೊಂಡ ಮನಸ್ಸು ಆಶ್ರಯಿಸುವುದು ಮೌನದ ಪಾತಳಿಯನ್ನೇ. ನಮ್ಮ ಸುತ್ತಲ ಬದುಕಿನ ಬರ್ಬರತೆಯ ಎದಿರು ಮಾತು ಸೂತಕವೆನಿಸಿಬಿಡುತ್ತದೆ. ಅದೇ ಮಾತು ಅಸತ್ಯದ ತಾರಕವೂ ಆಗಿಬಿಡುತ್ತದೆ. ಶ್ರೀನಿವಾಸರಾಜು ಅವರು ಇಂತಹ ಮೌನ ಸಂವೇದನೆಯಲ್ಲಿ ಈ ಐದೂ ಮೂಕ ನಾಟಕಗಳ ದೃಶ್ಯ ಕಾವ್ಯ ಕಥನ ನಾಟಕವನ್ನು ರೂಪಿಸಿದ್ದಾರೆ. ಇಲ್ಲಿ ಬೇಕೆಂತಲೇ ದೃಶ್ಯ, ಕಾವ್ಯ, ಕಥನ, ನಾಟಕ ಎಂಬ ನಾಲ್ಕು ಪ್ರಕಾರಗಳನ್ನು ಬೆರೆಸಿ ಮೂಕ ನಾಟಕಗಳ ಸಂಯುಕ್ತ ಭಾವಾಭಿವ್ಯಕ್ತಿಯನ್ನು ಹೇಳಿರುವೆ. ಶ್ರೀನಿವಾಸರಾಜು ಅವರ ಐದು ನಾಟಕಗಳಲ್ಲಿ ಈ ನಾಲ್ಕೂ ಸಾಹಿತ್ಯ ಪ್ರಕಾರಗಳು ಒಂದರೊಳಗೊಂದು ಬೆರೆತು ಹದವಾಗಿ ಅನಾವರಣಗೊಳ್ಳುತ್ತವೆ. ದಟ್ಟವಾದ ಮೌನವೇ ಇಲ್ಲಿ ಅಭಿವ್ಯಕ್ತಿಯ ಹಿಂದೆ ನಿರ್ಣಾಯಕವಾಗಿ ಕೆಲಸ ಮಾಡುವುದು. ಎಲ್ಲ ದೃಶ್ಯಗಳೂ ಮೂಕ ಸಾಕ್ಷಿಗಳೇ. ಮೂಕ ಸಾಕ್ಷಿ ದೃಶ್ಯಗಳು ಪರಮ ಸಾಕ್ಷಿಯಾಗಿರುತ್ತವೆ ಎನ್ನುವುದರ ಜೊತೆಯಲ್ಲೇ ಅವು



ಮನುಷ್ಯನ ಎಲ್ಲ ಸ್ಥಿತಿಗಳ ಅನುಶಾಸನಗಳೂ ಆಗಿಬಿಟ್ಟಿರುತ್ತವೆ. ನಮ್ಮ ಸುಪ್ತಪ್ರಜ್ಞೆಯ ಭಾಗವಾಗಿಯೇ ಮೂಕ ಸಾಕ್ಷಿಗಳು ಬೇರು ಬಿಟ್ಟಿರುತ್ತವೆ. ಸಮಾಜದಲ್ಲಿ ತುಂಬಿ ಹೋಗಿರುವ ಇಂತಹ ಮೂಕ ಸಾಕ್ಷಿ ದೃಶ್ಯಗಳನ್ನು ಕವಿ ಸಂವೇದನೆಯ ಪ್ರತಿಭಾವಂತ ಲೇಖಕರು ತಮ್ಮ ಸೃಜನಶೀಲತೆಯಲ್ಲಿ ಧಾರಣ ಮಾಡಿಕೊಂಡಿರುತ್ತಾರೆ. ಶ್ರೀನಿವಾಸರಾಜು ಅವರ ಸೃಜನಶೀಲತೆಯ ಈ ಬಗೆಯ ಮೂಕ ಸಾಕ್ಷಿಯನ್ನು ಗಾಢವಾಗಿ ಆವಾಹಿಸಿಕೊಂಡು ಮೂಕದೃಶ್ಯಗಳನ್ನೇ ರೂಪಕವಾಗಿಸಿಕೊಳ್ಳುತ್ತದೆ. ಮೂಲತಃ ಕವಿಯಾದ ರಾಜು ಅವರಿಗೆ ಕಾವ್ಯಕ್ಕಿರುವ ಮೂಕ ವೇದನೆ ಮತ್ತು ಅದರ ಧ್ವನಿತಾರ್ಥಗಳನ್ನೆಲ್ಲ ರಂಗ ರೂಪಕ್ಕೆ ಅಳವಡಿಸಿಕೊಳ್ಳುವುದು ಸಹಜವೇ.

ಶ್ರೀನಿವಾಸರಾಜು ಅವರು ದೃಶ್ಯಗಳನ್ನು ಚಿತ್ರಿಸುವುದು ಕೂಡ ಒಬ್ಬ ದೃಶ್ಯ ಮಾಧ್ಯಮದ ಕಲಾವಿದನಂತೆಯೇ. ಬಣ್ಣಗಳ ಸಂಯೋಜನೆಯಿಂದ ಆಕಾರಗೊಳಿಸುವ ಭಾವವೂ ಮೂಕ ವಾದದ್ದೆ. ಪರಮ ಮೂಕತೆಯು ಮೈದಾಳುವುದು ಚಿತ್ರಕಲೆಯಲ್ಲಿಯೇ. ಹಲವಾರು ರೂಪಕ ಸಂಯೋಜನೆಯ ಹತ್ತಾರು ವರ್ಣ ಚಿತ್ರಗಳು ಕೂಡ ಭಾಷೆಯ ಗೊಡವೆಯೆ ಇಲ್ಲದೆ ಒಂದು ಸ್ಥಿತಿಯನ್ನು ಪ್ರದರ್ಶಿಸಬಲ್ಲವು. ಸ್ಥಿರ ಚಿತ್ರಗಳ ಅಂತಹ ಸರಣಿಯು ಮೂಕಾಭಿನಯವನ್ನೇ ಬಿಂಬಿಸಬಲ್ಲದು. ಯಾವುದೊ ಒಂದು ಆರ್ಟ್ ಗ್ಯಾಲರಿಯಲ್ಲಿ ನಿಂತು ಆ ಎಲ್ಲ ವರ್ಣದೃಶ್ಯಗಳಿಗೆ ಸಾಕ್ಷಿಯಾದಂತೆ ಶ್ರೀನಿವಾಸರಾಜು ಅವರ ಮೂಕ ನಾಟಕಗಳನ್ನು ಪ್ರವೇಶಿಸಿದೆ ಅನಿಸುತ್ತದೆ. ಅಂದರೆ ತಂತಾನೆ ಇವರ ಮೂಕ ನಾಟಕಗಳು ಚಿತ್ರ ಕಲಾವಿದನ ಪೆಯಿಂಟಿಂಗ್ ಎಕ್ಸಿಬಿಷನ್ ತರಹದಲ್ಲೂ ಕಾಣಬಲ್ಲವು. ರಾಜು ಅವರು ಇಲ್ಲಿ ಬಣ್ಣಗಳಿಗೆ ಬದಲಾಗಿ ಅಕ್ಷರಗಳನ್ನು ಮಾತ್ರ ಬಳಸುತ್ತ ಮನಸ್ಸಿನ ಸುಪ್ತ ಸ್ಥಿತಿಯಲ್ಲಿ ಇಂತಹ ಅಕ್ಷರ ದೃಶ್ಯಗಳಿಗೆ ಬಣ್ಣ ತುಂಬಿದ್ದಾರೆ. ಇದು ನಿಜಕ್ಕೂ ಅತಿ ಸೂಕ್ಷ್ಮ ಕುಸುರಿ ಕೆಲಸಗಾರನಿಂದ ಮಾತ್ರ ಸಾಧ್ಯವಾಗುವ ಅಭಿವ್ಯಕ್ತಿಯ ವಿಧಾನ. ಶಬ್ದ ಶಿಲ್ಪದ ಜೊತೆ ಭಾವ ಸಂಬಂಧವನ್ನು ಕಡೆಯುವುದು ರಂಗದ ಮೂಕ ಸ್ಥಿತಿಯಲ್ಲಿ ಕಠಿಣವಾದ ಕೆಲಸ. ಇಂತಹ ಕೆಲಸವನ್ನು ಶ್ರೀನಿವಾಸರಾಜು ಅವರು ಸಮರ್ಥವಾಗಿ ಮಾಡಿದ್ದಾರೆ. ಪ್ರಾಚೀನಕಾವ್ಯ ಪದ್ಧತಿಗಳಲ್ಲಿ ಚಿತ್ರಕಾವ್ಯವೂ ಒಂದಿತ್ತು. ಜಾಣ್ಮೆಯ ಶಬ್ದ ಚಿತ್ತಾರದ ವರ್ಣನೆಯಲ್ಲಿ ಚಿತ್ರಮಾಲೆಯ ಆಕಾರಗೊಳ್ಳುವುದು ಒಂದು ವಿಶೇಷ ಪರಿಣತಿಯಿಂದ. ಅದು ಭಾಷೆಯ ಮೇಲಿನ ಸಮರ್ಥ ಹಿಡಿತದಿಂದ. ಪ್ರಾಚೀನ ಕವಿಗಳ ಚಿತ್ರ ಕಾವ್ಯದ ಉದ್ದೇಶ ವಿಧಾನ ಅಭಿವ್ಯಕ್ತಿಯ ಕ್ರಮ ಬೇರೆಯಿತ್ತು. ಶ್ರೀನಿವಾಸರಾಜು ಅವರ ಶಬ್ದಕಾವ್ಯದ ಮೂಕಾಭಿನಯವು ರಸಾನಂದದ ದಾರಿಯದಲ್ಲ.

ನಮ್ಮ ಸುತ್ತಣ ನರಕವನ್ನು ರಸಾಸ್ವಾದನೆಯಲ್ಲಿ ಧ್ವನಿಸಲು ಸಾಧ್ಯವಿಲ್ಲ. ಮೊದಲೇ ನೆನಪಿಸಿದಂತೆ; ಶ್ರೀನಿವಾಸರಾಜು ಅವರು ಆಧುನಿಕ ಸಮಾಜದ ದುರಂತದ ಆಸ್ಫೋಟಕ್ಕೆ ಸ್ಥಿತಿಯ ಛಿದ್ರಾವತಾರದ ಬಿಡಿ ಬಿಡಿ ತುಣುಕುಗಳನ್ನು ನಿರೂಪಿಸುವುದರಿಂದ ಅವರು ನಿರ್ಮಿಸುವ ಮೂಕ ವೇದನೆಯು ವರ್ತಮಾನದ ಎಲ್ಲ ಹಿಂಸೆಯನ್ನು ಅತಿ ಸೂಕ್ಷ್ಮವಾಗಿ ಧ್ವನಿಸುತ್ತದೆ. ಪ್ರತಿಭಟಿಸುವುದಕ್ಕೆ ಹಾಗೂ ದೊಡ್ಡ ದನಿಯಲ್ಲಿ ನ್ಯಾಯ ಕೇಳುವುದಕ್ಕೆ ಮತ್ತು ಬಂಡಾಯದ ಕಹಳೆ ಮೊಳಗಿಸಿ ಬೆದರಿಕೆ ಒಡ್ಡುವುದಕ್ಕೆ ಸಾಧ್ಯವಾಗದ ಸ್ಥಿತಿಯನ್ನು ತಲುಪಿದಾಗಲೆಲ್ಲ ಸ್ವತಃ ಭಾಷೆಯೆ ವ್ಯಕ್ತಿಯ ಸೂಕ್ಷ್ಮ ಸಾಮರ್ಥ್ಯಕ್ಕೆ ಅನುಗುಣವಾಗಿ ಅಭಿವ್ಯಕ್ತಿಯ ಇನ್ನಿತರ ಸಾಧ್ಯತೆಗಳ ಕಡೆಗೆ ಒತ್ತಾಯಿಸುತ್ತದೆ. ಅಂತಹ ಸ್ಥಿತಿಯಲ್ಲಿ ಶ್ರೀನಿವಾಸರಾಜು ಅವರ ಮೂಕ ನಾಟಕಗಳು

ಹುಟ್ಟಿಕೊಂಡಿವೆ. ನಿತ್ಯ ನರಕದ ಸಾಮಾಜಿಕ ವಾಸ್ತವದಲ್ಲಿ ಮಾತಿನಿಂದ ಏನೂ ಆಗುವುದಿಲ್ಲ. 'ಕತ್ತಿ ಕೂಡ ಎಚ್ಚರಿಸಲಾಗದ ಸ್ಥಿತಿಯಲ್ಲಿ ಕಾವ್ಯ ತಾನೆ ಏನು ಮಾಡಬಲ್ಲದು' ಎಂಬ ಅಸಹಾಯಕತೆಯಲ್ಲಿ ಮೌನವೇ ದೊಡ್ಡ ಉಪಕರಣವಾಗಿ ಬಿಡುತ್ತದೆ. ಮೌನಕ್ಕಿರುವ ಶಕ್ತಿ ಆಸ್ಫೋಟಕರ ಸದ್ದಿಗೂ ಇರುವುದಿಲ್ಲ. ಗಾಂಧೀಜಿ ಅಂತಹ ಮೌನದ ಆಸ್ಫೋಟದಲ್ಲಿ ಎಲ್ಲ ಮದ್ದುಗುಂಡುಗಳ ಬಂದೂಕಿನ ಬಾಯಿ ಮುಚ್ಚಿಸಿದ್ದರು. ಮೂಕವಾದ ಪ್ರತಿಭಟನೆ, ಮೂಕವಾದ ಪ್ರತಿಧ್ವನಿ, ಮೂಕವಾದ ನಿವೇದನೆ ಬಹಳ ದೊಡ್ಡ ಶಕ್ತಿ. ಮನುಷ್ಯನಿಗೆ ಭಾಷೆಯೇ–ಅಂದರೆ ಮಾತನಾಡುವ ಶಕ್ತಿಯೇ ಅತ್ಯಂತ ಮಹತ್ವದ್ದು ಎಂದು ತಿಳಿದಿರುವಾಗ ನಾನು ಅಂತಹ ಶಕ್ತಿಯಿರುವ ಮಾತನ್ನೇ ಭಾಷೆಯ ಮೌಖಿಕತೆಯನ್ನೇ ನಿರಾಕರಿಸಿ ಮೌನ ತಾಳುವೆ ಎಂದರೆ ಅದು ಪ್ರತಿಭಟನೆಯ ಪರಮಸ್ಥಿತಿ. ಇಂತಹ ಮೌನ ಹಾದಿಯಲ್ಲಿ ಎಷ್ಟೋ ತಲೆಮಾರುಗಳ ಮಹಿಳೆಯರು ಪುರುಷಾಧಿಪತ್ಯದ ಮುಂದೆ ಮೂಕಾಭಿನಯವನ್ನು ಮಾಡಿದ್ದಾರೆ. ಹಾಗೆ ನೋಡಿದರೆ ಎಷ್ಟೋ ಸಂಸಾರಗಳಲ್ಲಿ ಹೆಣ್ಣುಗಳು ನಿತ್ಯವೂ ಮೂಕ ನಾಟಕದ ದುರಂತ ಮೌನವನ್ನು ನಿಭಾಯಿಸುತ್ತಲೇ ಇರುತ್ತಾರೆ. ಅಂದಿನಿಂದಲೂ ಮಹಿಳೆಯರು ಮಾಡಿಕೊಂಡು ಬಂದಿರುವ ಬದುಕಿನ ಅಸ್ತಿತ್ವದ ಪಾಡಿನ ಮೂಕ ನಾಟಕಗಳಿಗೆ ಕೊನೆ ಮೊದಲಿಲ್ಲ. ಶ್ರೀನಿವಾಸರಾಜು ಅವರ ಮೂಕನಾಟಕಗಳು ಅಂತಹ ಮೂಕಸ್ಥಿತಿಯ ಸಣ್ಣಸಣ್ಣ ಪ್ರತಿಬಿಂಬ ಗಳಷ್ಟೇ. ಇವರ ಬಹುಪಾಲು ಎಲ್ಲ ನಾಟಕಗಳಲ್ಲೂ ಮಾತಿಲ್ಲದ ಮಹಿಳೆಯರ ಮೂಕ ಪ್ರತಿಮೆಗಳು ಬಂದು ಹೋಗುವುದು ಇಂತಹ ಪರಂಪರೆಯ ಹಿನ್ನೆಲೆಯಿಂದಲೇ.

ಶ್ರೀನಿವಾಸರಾಜು ಅವರ ಈ ಮೂಕ ನಾಟಕಗಳಿಗೆ ಕಥನ ಗುಣವೂ ದಟ್ಟವಾಗಿದೆ. ವಿವರಗಳೇ ಇಲ್ಲಿ ಪಾತ್ರವಾಗಿ ಬಿಡುತ್ತವೆ. ಕಥೆಗಾರನ ನಿರೂಪಣೆಯೇ ಒಂದು ಬಗೆಯ ಪ್ರದರ್ಶನ. ಅನುಭವವನ್ನು ನಿರೂಪಿಸುವಾಗ ವಿವರಗಳಿಂದಲೇ ಕಥನಕ್ಕೆ ಬೇಕಾದ ಘಟನೆ, ಸಂದರ್ಭ, ಪಾತ್ರ ವರ್ತನೆಗಳನ್ನು ಕತೆಗಾರ ತುಂಬುತ್ತಾನೆ. ಅಂತದೇ ಕೆಲಸವನ್ನು ಶ್ರೀನಿವಾಸರಾಜು ಅವರು ಬಹುಪಾಲು ಎಲ್ಲ ನಾಟಕಗಳಲ್ಲೂ ನಿರ್ವಹಿಸುತ್ತಾರೆ. ಅವರ ಏಕಾಂಕಗಳಂತೂ ತೀವ್ರ ಕುತೂಹಲದ ಕಥನ ಕ್ರಿಯೆಯನ್ನೇ ಪ್ರದರ್ಶಿಸುತ್ತವೆ. ಮೂಕ ನಾಟಕಗಳು ಒಂದು ಸಂದರ್ಭದ ವಾಸ್ತವ ಸ್ಥಿತಿಯನ್ನು ಬಿಂಬಿಸುವಾಗ ಅವು ಮೌನದ ಮೂಲಕ ಕತೆ ಹೇಳಲು ತೊಡುಗುತ್ತವೆ. ಪಾತ್ರಗಳು ಹೇಳಬೇಕಿದ್ದ ಮಾತನ್ನೆಲ್ಲ ವಿವರಗಳೇ ಧ್ವನಿಸುತ್ತವೆ. ಹೀಗಾಗಿ ಮೂಕನಾಟಕಗಳಲ್ಲಿ ದೃಶ್ಯ ನಿರ್ಮಿಸುವ ವಿವರಗಳು ಮನುಷ್ಯ ಪಾತ್ರಗಳಿಗಿಂತಲೂ ಮುಖ್ಯವಾಗುತ್ತವೆ. ಶ್ರೀನಿವಾಸರಾಜು ಅವರು ತಮ್ಮ ಮೂಕ ಪಾತ್ರಗಳನ್ನು ಪರಿಚಯಿಸುವುದು ಅಂತಹ ದೃಶ್ಯ ವಿವರಗಳಿಂದಲೇ. ಹಾಗೆಯೇ ಈ ತರದ ವಿವರಗಳು ಪಾತ್ರಗಳ ಅವಿನಾಭಾವ ಸಂಬಂಧವಾಗಿ ಕಾಣಿಸಿಕೊಳ್ಳುತ್ತವೆ. ವಿವರಗಳನ್ನು ತೆಗೆದುಬಿಟ್ಟರೆ ಅದು ಮೂಕ ನಾಟಕವಾಗದೆ ಕೇವಲ ಮೂಕಾಭಿನಯ ಮಾತ್ರವಾಗಿ ಬಿಡುತ್ತದೆ. ದೃಶ್ಯದ ವಿವರಗಳು ಕಾವ್ಯಾತ್ಮಕವಾಗಿದ್ದಾಗ ಆ ವಿವರಗಳ ಧ್ವನಿ ಸಾಧ್ಯತೆ ಹೆಚ್ಚಿರುತ್ತದೆ. ಶ್ರೀನಿವಾಸರಾಜು ಅವರು ಕೊಡುವ ವಿವರಗಳು ರೂಪಕವಾಗಿವೆ. ಕಾವ್ಯದ ಟಿಪ್ಪಣಿಯಂತಿವೆ. ಅಂತೆಯೇ ಗದ್ಯಪದ್ಯ ಮಾದರಿಯ ರಚನೆಯಂತಿವೆ. ಗದ್ಯಪದ್ಯ ಮಿಶ್ರಿತವಾದ ಈ ರೂಪಕ ವಿವರಗಳು ಮೂಕ ನಾಟಕದ ಜೀವಾಳ. ಶ್ರೀನಿವಾಸರಾಜು ಅವರು ಇಂತಹ ರೂಪಕ ಜೀವಾಳದ ವಿವರಗಳನ್ನು ನೀಡುವ ಮೂಲಕವೇ ರಂಗಾಕೃತಿಯನ್ನು

ನಿರ್ಮಿಸುತ್ತಾರೆ. ಯಾವ ಬಗೆಯಲ್ಲಿ ಎಂತಹ ಸೂಕ್ಷ್ಮತೆಯಲ್ಲಿ ವಿವರಗಳು ಆಕೃತಿಗೊಳ್ಳುತ್ತವೆ ಎಂಬುದುರ ಮೇಲೆ ಆ ಮೂಕಸಾಕ್ಷಿಯು ವರ್ತಮಾನವನ್ನು ಪ್ರತಿಬಿಂಬಿಸಬಲ್ಲದು. ದಟ್ಟವಾದ ಅಂತಸಾಕ್ಷಿಯ ನೋಟ ಶ್ರೀನಿವಾಸರಾಜು ಅವರ ಮೂಕ ನಾಟಕಗಳಲ್ಲಿ ಪ್ರತಿಫಲಿಸುತ್ತದೆ. ಈ ಬಗೆಯ ವಿವರಗಳು ಕತೆಗಾರನ ಕುಸುರಿ ಕಲೆಯನ್ನು ನೆನಪಿಸುತ್ತವೆ. ಮೌನವನ್ನು ಚಿತ್ರಿಸುವುದು ಸುಲಭವಲ್ಲ. ನಮ್ಮ ಬದುಕಿನ ಗದ್ದಲವನ್ನು ಮೌನದಲ್ಲಿ ನುಡಿಸುವುದು ಕಾವ್ಯಾತ್ಮಕ ವ್ಯಕ್ತಿತ್ವ ಇದ್ದವರಿಗೆ ಮಾತ್ರ ಸಾಧ್ಯ. ವಿವರಗಳೇ ಮೂಕವಾಗಿ ಅಭಿನಯಿಸ ತೊಡಗಿದಾಗ ಮೌನದ ಪಾತ್ರ ವಹಿಸಿರುವ ನಟನಿಗೆ ಆಗ ಹೆಚ್ಚಿನ ಕೆಲಸವಿರುವುದಿಲ್ಲ. ಶ್ರೀನಿವಾಸರಾಜು ಅವರಿಗೆ ವಿವರಗಳು ಕೇವಲ ಹಿನ್ನೆಲೆಯಾಗಿ ಕಂಡಿಲ್ಲ. ಹಾಗೆಯೇ ಆ ವಿವರಗಳು ನಟನಿಗೂ ನಿರ್ದೇಶಕನಿಗೂ ನೀಡುತ್ತಿರುವ ಸೂಚನೆಗಳಲ್ಲ. ಮುಖ್ಯವಾಗಿ ಈ ವಿವರಗಳು ಪಾತ್ರದಷ್ಟೇ ಮುಖ್ಯ. ಹಾಗೆಯೇ ಮೂಕಾಭಿನಯದ ಸಹಭಾಗಿಯಾಗಿವೆ. ಜೊತೆಗೆ ಇಂತಹ ರೂಪಕ ವಿವರಗಳೆ ಪ್ರೇಕ್ಷಕನಿಗೆ ಸಂವೇದನೆಯ ಕೀಲಿ ಕೈಯಿದ್ದಂತೆ. ಪ್ರೇಕ್ಷಕನ ಭಾಗವಾಗಿ ವಿವರಗಳನ್ನು ಹೊಂದಿಸುವುದು ಇದರಿಂದ ಸುಲಭವಾಗುತ್ತದೆ. ಶ್ರೀನಿವಾಸರಾಜು ಅವರು ರಂಗಭೂಮಿಯ ಆಳವನ್ನು ಬಲ್ಲವರಾಗಿದ್ದರಿಂದಲೇ ಇಂತಹ ಮೂಕ ನಾಟಕಗಳನ್ನು ರಚಿಸಲು ಸಾಧ್ಯವಾಗಿರು ವುದು. ನಾಟಕ ಎಂದರೇನೇ ಒಂದು ಬಗೆಯ ಪ್ರತಿಕೃತಿಯಿದ್ದಂತೆ. ಮುಂದುವರಿದು ಅದನ್ನು ಕೃತಕ ಅವತರಣಿಕೆ ಎಂತಲೂ ಕರೆಯಬಹುದು. ಇನ್ನು ಮೂಕನಾಟಕವಂತೂ ಭಾಷೆಯನ್ನು ನಿರಾಕರಿಸಿ ವಸ್ತು ಸ್ಥಿತಿಯು–ಪ್ರತಿಬಿಂಬದ ಮೂಲಕ ಬದುಕನ್ನು ಅಭಿವ್ಯಕ್ತಿಸಲು ತೊಡಗುವುದು ಮತ್ತೂ ಕೃತಕವೆನಿಸಿ ಬಿಡಬಲ್ಲದು ಅಥವಾ ಕೃತಕ ಮಾತಿನ ನಟನೆಯ ವಿರುದ್ಧ ಮೌನ ತಾಳುವ ಮತ್ತೊಂದು ಸಾಧ್ಯತೆಯಾಗಿಯೂ ಕಾಣಬಲ್ಲದು. ಇಂತಹ ಎರಡೂ ಸ್ಥಿತಿಗಳನ್ನು ಅಳವಡಿಸಿಕೊಂಡು ಬೆಳೆವ ಮೂಕ ನಾಟಕಗಳು ಯಶಸ್ವಿ ರಚನೆಗಳಾಗುವುದು ಬಹಳ ಕಷ್ಟ. ಮಾತಿನಲ್ಲೂ ಹೇಳಲಾಗದ, ಮೌನದಲ್ಲೂ ಹೇಳಲಾಗದ ಚಡಪಡಿಕೆಯನ್ನು ಶ್ರೀನಿವಾಸರಾಜು ಅವರು ತಮ್ಮ ಮೂಕ ನಾಟಕಗಳಲ್ಲಿ ಧ್ವನಿಸಲು ಯತ್ನಿಸುವುದು ಗಮನಾರ್ಹವಾಗಿದೆ. ಮೌನವೂ ಒಂದು ಭಾಷೆಯೇ. ಭಾಷೆಯ ಪರಮ ಸ್ಥಿತಿ ಮೌನ. ಮೌನದಲ್ಲಿ ಹುಟ್ಟುವ ಮನುಷ್ಯ ಭಾವ ಸಂಬಂಧಗಳು ಗಾಢವಾಗಿರುತ್ತವೆ.

ಈ ಅಂಶಗಳನ್ನು ಬಿಡಿಸಿ ನೋಡುವ ಮೂಕ ನಾಟಕಗಳು ಅತ್ಯಂತಿಕವಾಗಿಯೂ ಕೃತಕತೆಯನ್ನೂ ಭಾವಿಸಬಲ್ಲವು. ಅಂತೆಯೇ ಆ ಬಗೆಯ ಕೃತಕ ಅಭಿವ್ಯಕ್ತಿಯಲ್ಲಿ ಅಷ್ಟೇ ಅತ್ಯಂತಿಕವಾಗಿ ಮೌಖಿಕತೆಯನ್ನೂ ಮುರಿದು ಮಾತಿನ ಭ್ರಷ್ಟತೆಯ ಎದಿರು ಮೌನವಹಿಸಬಲ್ಲವು. ಶ್ರೀನಿವಾಸರಾಜು ಅವರ ಮೂಕ ನಾಟಕಗಳ ಚೌಕಟ್ಟಿನಲ್ಲಿ ಈ ಮಾತುಗಳನ್ನು ಪರಿಶೀಲಿಸಬಹುದು.

'ಬೀಗದ ಕೈ' ಸಣ್ಣಕತೆಯ ಚಿತ್ರಕ ಶಕ್ತಿಯಿಂದ ತೆರೆ ಸರಿಸಿ ಆರಂಭವಾಗುತ್ತದೆ. ಹಾಗೆಯೇ ಕಾವ್ಯಾತ್ಮಕ ರೂಪಕ ಸ್ಥಿತಿಯನ್ನು ಧ್ವನಿಸುವ ಮೂಲಕ ಮೌನದಲ್ಲಿ ಮಾತಿನ ಅರ್ಥವನ್ನು ಹೊರಡಿಸುತ್ತದೆ. ಮೂಕವಾದ ಬದುಕಿನಲ್ಲಿ ಮಾತಿನ ಹಂಗು ಮುಖ್ಯವಾಗುವುದಿಲ್ಲ. ಆ ಮಾತನ್ನು ರೂಪಕದಿಂದ ಶ್ರೀನಿವಾಸರಾಜು ಧ್ವನಿಸುತ್ತಾರೆ. ಬಡ ಮುಸ್ಲಿಂ ಕುಟುಂಬದ ಮುಗ್ಧ ಬಾಲಕ ಬೀಗದ ಕೈ ಮೂಕನಾಟಕದ ಕೇಂದ್ರ ವಿವರಗಳ ಮೂಲಕ ಅನಾವರಣಗೊಳ್ಳುವ

ವಸ್ತುಸ್ಥಿತಿ ಮೂಕವಾಗಿದೆ. ಬಂಧಿಯಾದ ಬುಲ್ ಬುಲ್ ಹಕ್ಕಿಯ ಸಂಕೇತವು ಮುಗ್ಧ ಬಾಲಕನ ಸ್ಥಿತಿಯನ್ನು ಧ್ವನಿಸುತ್ತ ಆ ಮೂಲಕ ವರ್ತಮಾನದ ಸೆರೆಯನ್ನು ಅರ್ಥಪೂರ್ಣವಾಗಿ ಬಿಂಬಿಸುತ್ತದೆ. ಮುಗ್ಧ ಬಾಲಕನ ಜೀವನ ಅನೇಕ ರೀತಿಯಲ್ಲಿ ಬೀಗಮುದ್ರೆಗೊಂಡಿದೆ. ಬೀಗ ರಿಪೇರಿ ಮಾಡಿ ಸೈಕಲ್ ಚಲಿಸುವಂತೆ ಮಾಡಬಲ್ಲನಾಗಿದ್ದರೂ, ಸ್ಕೂಟರ್ ಟ್ಯೂಬ್‌ಗೆ ಪಂಚರ್ ಹಾಕುವ ಯುಕ್ತಿ ಅವನಿಗಿದ್ದರೂ ಅವನು ಮಾತ್ರ ಎಲ್ಲೂ ಹೋಗಲಾಗದ ಹಾರಲಾರದ ಹಕ್ಕಿಯ ಸ್ಥಿತಿಯಾಗಿದೆ. ಈ ನಾಟಕದ ಮೂಕ ರೂಪಕಗಳೆಲ್ಲವೂ ಸೆರೆಯಾದ ಬದುಕಿನ ಸ್ಥಿತಿಗೆ ಅರ್ಥ ರೂಪಿಸುತ್ತವೆ. ಸತ್ತ ಬದುಕಿನ ಸ್ಥಿತಿಯಲ್ಲಿ ತಂದೆಯನ್ನೂ ಕಳೆದುಕೊಂಡ ದುರಂತದಲ್ಲಿ ರಿಪೇರಿ ಮಾಡುವ ಹುಡುಗನ ಬದುಕು ರಿಪೇರಿಯಾಗದೆ ದಟ್ಟವಾದ ವಿಷಾದವು ಮಡುಗಟ್ಟಿ ನಿಲ್ಲುತ್ತದೆ.

ತನ್ನದಲ್ಲದ ಕಾರಣಕ್ಕೆ ತನ್ನ ಮೇಲಾಗುವ ಶೋಷಣೆಯನ್ನು ಮೂಕನಾಟಕಗಳು ಮೂಕವಾಗಿಯೇ ಅಭಿನಯಿಸುತ್ತ ಕೃತಕ ವಾತಾವರಣ ನಿರ್ಮಿಸಿದರೂ ಅವು ಮೌನದ ರೂಪಕ ಭಾಷೆಯಲ್ಲಿ ನಮ್ಮನ್ನು ಮುಟ್ಟಲು ತೊಡಗುತ್ತವೆ. ಹಾಗೆಯೇ ನರಕದ ಹಿಂಸೆಯ ವಿರುದ್ಧ ಮೌನ ತಾಳಿ ಮೌನದಿಂದಲೇ ಮಾತಿನಾಚೆಯ ಸತ್ಯವನ್ನು ತೋರಲು ತೊಡಗುತ್ತವೆ. ಆ ಮೂಲಕ ಮಾತಿನ ಹುಸಿಯನ್ನು ಬೆತ್ತಲಾಗಿಸುತ್ತ ಮೌನದ ವಿಷಾದದಲ್ಲಿ ಅರ್ಥಹೊರಡಿಸುತ್ತವೆ. ಬೀಗದ ಕೈ ಈ ಅರ್ಥಲ್ಲಿ ಅಪರೂಪದ ರೂಪಕ. ಸಂಬಂಧಗಳು ಹೇಗೆ ಬೀಗಗೊಂಡಿವೆ ಎಂಬುದನ್ನು ಒಂದು ಪುಟ್ಟ ಗತಿಸ್ಥಿತಿಯ ಮೂಲಕ ಈ ನಾಟಕವು ಧ್ವನಿ ಪೂರ್ಣವಾಗಿ ಹೆಣೆದು ಕೊಡುತ್ತದೆ. ಯಾರನ್ನೂ ತೆಗಳದೆ ಯಾವ ಅಬ್ಬರಕ್ಕೂ ಎಡೆ ಇಲ್ಲದಂತೆ ಯಾವುದೇ ಘನ ವಿಚಾರಗಳ ಹಂಗಿಲ್ಲದೆ ಮೂಕವಾಗಿ ಅಂತರಂಗದಲ್ಲಿ ಪಿಸುಮಾತುಗಳ ನುಡಿಸುವ ಬೀಗದ ಕೈ ಅತ್ಯಂತ ಕಡಿಮೆ ಅವಧಿಯಲ್ಲೇ ಹೆಚ್ಚು ಕಾಲ ನೆನಪಿನಲ್ಲಿ ಉಳಿಯುವ ರೂಪಕಗಳನ್ನು ಮನಸ್ಸಿನಲ್ಲಿ ಬಿತ್ತುತ್ತದೆ. 'ಫೀನಿಕ್ಸ್' ಕೂಡ ಇದೇ ಬಗೆಯ ರೂಪಕ ದೃಶ್ಯವಾದರೂ ಇದರಲ್ಲಿ ಮಾತು ಬಲ್ಲ ಸುಶಿಕ್ಷಿತ ಜಗತ್ತು ಎಷ್ಟೊಂದು ಹುಸಿ ಮಾತಿನ ಅಮಲಲ್ಲಿ ಎಂತಹ ಕೃತಕ ದುಃಖದ ವಾತಾವರಣದಲ್ಲಿ ಯಾವ ಬಗೆಯ ಸ್ವರ್ಗ ನರಕದ ಪ್ರಜ್ಞೆಯಲ್ಲಿ ಬದುಕಿದೆ ಎಂಬುದನ್ನು ವ್ಯಂಗ್ಯ ವಿನೋದ ಮಾದರಿಯಲ್ಲಿ ತಿಳಿಸುತ್ತದೆ. ಬದುಕಿನಲ್ಲಿ ಎದುರಾಗುವ ಕ್ಷುದ್ರತೆಯನ್ನು ಮೀರಲಾಗದ ಸ್ಥಿತಿಯನ್ನು ಶ್ರೀನಿವಾಸರಾಜು ಅವರು ಸಮರ್ಥವಾಗಿ ತೋರುತ್ತಾರೆ. ಸಾವನ್ನು ಕೂಡ ಒಂದು ಕ್ಷುದ್ರ ಲಾಭದ ಆಟವಾಗಿ ಮಾಡಿಕೊಳ್ಳುವ ಅನೈತಿಕ ಸ್ಥಿತಿಯನ್ನು 'ಫೀನಿಕ್ಸ್' ಅಚ್ಚರಿಯ ಅಂತ್ಯದೊಂದಿಗೆ ಧ್ವನಿಸುತ್ತದೆ. ಮೌನ ಸೂತಕದ ಕೃತಕ ಆವರಣದಲ್ಲಿ ಫೀನಿಕ್ಸ್‌ನ ದೃಶ್ಯ ಚಿತ್ರಗಳು ಕೊನೆಗೆ ಬಂದು ಸೇರುವುದು ಪುಟ್ಟ ಬಾಲಕನ ಪುಟಿವ ಚೆಂಡಿನ ಜೀವನೋತ್ಸಾಹದಲ್ಲಿ. ಮತ್ತೆ ಇಲ್ಲಿ ಜೀವನೋತ್ಸಾಹದ ಪುಟಿವ ಧರ್ಮದ ಕಡೆಗೇ ಮೌನವಾಗಿ ಬೆಟ್ಟು ಮಾಡಿ ತೋರುವ ಶ್ರೀನಿವಾಸರಾಜು ಅವರ ಸೂಕ್ಷ್ಮ ಸಂವೇದನೆಯು ಗಮನೀಯವಾಗಿದೆ.

"ಮನೆಯೊಳಗಣ ಕಿಚ್ಚು" ಮೂಕ ನಾಟಕವೇ ಹೌದಾದರೂ ಈ ನಾಟಕದಲ್ಲಿ ಮಾತುಗಳು ದಟ್ಟವಾಗಿ ಕೇಳಿಸುತ್ತವೆ. ಕಳ್ಳ ಸ್ವಾಮಿಜಿ, ಆತನ ಮೂಕ ಹೆಂಗಸು, ಕೊಲೆಗಡುಕ ಡಾಕ್ಟರ್, ಕಾವಲುಗಾರ, ಕ್ರಾಂತಿಕಾರ ತರುಣ ಇವರೆಲ್ಲ ಎಲ್ಲೂ ಏನನ್ನೂ ಮಾತನಾಡದಿದ್ದರೂ ಬಹಳ ಜೋರಾಗಿ ಮಾತನಾಡುತ್ತಿದ್ದಾರೇನೊ ಎಂಬ ಭಾವವು ಬಂದು ಬಿಡುತ್ತದೆ. ಇದು ಶ್ರೀನಿವಾಸ

ರಾಜು ಅವರ ಶಕ್ತಿ. ಭಾಗಶಃ ಕಾವ್ಯಾತ್ಮಕವಾಗಿ ರೂಪಕ ಮಾದರಿಯ ದೃಶ್ಯಗಳ ವಿವರಗಳನ್ನೇ ಅನುಸರಿಸಿ ಮೂಕ ಪಾತ್ರಗಳನ್ನು ಅವರು ಎದಿರುಗೊಳಿಸುವುದರಿಂದ ಪಾತ್ರಗಳು ಮಾತನಾಡದಿದ್ದರೂ ನಮ್ಮೊಳಗೇ ಅವು ಆಡಬೇಕಿರುವ ಮಾತುಗಳೆಲ್ಲ ಪ್ರತಿಧ್ವನಿಸುತ್ತವೆ. ಪಾತ್ರಗಳ ಕ್ರಿಯೆಯೇ ಅವುಗಳ ಮಾತುಗಳನ್ನು ಧ್ವನಿಸುತ್ತವೆ. ಇದು ಮೂಕನಾಟಕಗಳ ಬಹು ಮುಖ್ಯಗುಣ. ಹಾಗೆಯೇ ಮೌನ ಕೂಡ ಮಾತಿನಾಚೆಯ ಮಾತನ್ನು ಅಂತಹ ಕ್ರಿಯೆಯಿಂದಲೇ ಪ್ರತಿಧ್ವನಿಸುವುದು. 'ಮನೆಯೊಳಗಣ ಕಿಚ್ಚು' ನಾಟಕದಲ್ಲಿ ಸಂದರ್ಭದ ವಸ್ತು ಸ್ಥಿತಿಯು ಎಲ್ಲ ಮಾತುಗಳನ್ನು ಪ್ರೇಕ್ಷಕರ ಬೆಳಗಿಂದಲೇ ಆಡಿಸಿಬಿಡುತ್ತದೆ. ನೋಡುವ ಪ್ರೇಕ್ಷಕನೇ ಮಾತನ್ನು ತುಂಬಿಕೊಳ್ಳಬೇಕೆಂದು ಮೂಕ ನಾಟಕಗಳು ಒತ್ತಾಯಪಡಿಸುತ್ತವೆ. ಇದು ಪ್ರೇಕ್ಷಕನ ಜವಾಬ್ದಾರಿಯನ್ನು ವಿಶೇಷ ಬಗೆಯಲ್ಲಿ ಎತ್ತಿ ಹಿಡಿಯುವ ರೀತಿ. ಪಾತ್ರಕ್ಕೂ ಪ್ರೇಕ್ಷಕನಿಗೂ ಅವಿನಾಭಾವ ಸಂಬಂಧ ಇದರಿಂದ ಸಾಧ್ಯವಾಗುತ್ತದೆ. ಪಾತ್ರವೇ ಎಲ್ಲ ಮಾತುಗಳನ್ನು ಆಡಿಬಿಟ್ಟರೆ ಪ್ರೇಕ್ಷಕ ಮುಖ್ಯವಾಗಿ ಮನರಂಜನೆ ಪಡೆದು ಕಲೆಯ ಆಸ್ವಾದನೆಗೆ ಮುಂದಾಗಬಲ್ಲ. ಪಾತ್ರಗಳಿಗಿಂತಲೂ ಮುಖ್ಯವಾದ ಪಾತ್ರಗಳೆಂದರೆ ಪ್ರೇಕ್ಷಕರೇ. ಅಭಿನಯಿಸುವ ನಟ ಇಲ್ಲಿ ನೆಪ ಮಾತ್ರ, ನಿಜವಾದ ನಟ ಎಂದರೆ ಮೂಕನಾಟಕಗಳಲ್ಲಿ ಪ್ರೇಕ್ಷಕನೇ. ಇಂತಹ ಜವಾಬ್ದಾರಿಯ ಮೂಲಕವೇ ಮೂಕನಾಟಕದಲ್ಲಿ ಭಾಗಿಯಾಗಬೇಕಾದ ಮೂಕ ಪ್ರೇಕ್ಷಕ ದೊಡ್ಡ ಅರ್ಥದಲ್ಲಿ ಮೂಕವಾಗಿರುವ ಸಮಾಜದ ಪ್ರತಿನಿಧಿಯೂ ಆಗಬೇಕಾಗುತ್ತದೆ. ಈ ಬಗೆಯ ತೀವ್ರತರವಾದ ಭಾವ ಸಂಚಾರವನ್ನು ಶ್ರೀನಿವಾಸರಾಜು ಅವರ ಮೂಕನಾಟಕಗಳು ಬಿತ್ತುತ್ತವೆ.

'ಏಳು ಮನುವಿನ ಮಗನೆ' ಮೂಕ ರೂಪಕವು ನವ್ಯ ಕವಿತೆಗಳ ನಾಯಕನ ಪ್ರತೀಕದಂತಿದೆ. 'ಮೂಕ ರೂಪಕ' ಎಂಬ ಮಾತನ್ನು ಇಲ್ಲಿ ಬಳಸಿದೆ. ಮೂಕ ನಾಟಕ ಎಂಬುದಕ್ಕಿಂತ ಮೂಕ ರೂಪಕವೇ ಹೆಚ್ಚು ಧ್ವನಿ ಪೂರ್ಣವಾದ ಹಾಗೂ ಆ ಬಗೆಯ ನಿರೂಪರಚನೆಗೆ ಹೊಂದುವ ಮಾತು. ಮೂಕ ರೂಪಕವು ಇಡಿಯಾಗಿ ವಸ್ತುಸ್ಥಿತಿಯನ್ನು ಪ್ರತಿಫಲಿಸುವುದರಿಂದ ಅದು ಕೇವಲ ನಾಟಕ ಮಾತ್ರವಾಗದೆ ಬೇರೆ ಬೇರೆ ಸ್ತರದಲ್ಲಿ ಅಭಿವ್ಯಕ್ತಿಯನ್ನು ಕ್ರಿಯಾಶೀಲಗೊಳಿಸುತ್ತಿರುತ್ತದೆ. ಹಾಗೆಯೆ ಹಲವು ಪ್ರಕಾರಗಳ ಅಂತಃಶಕ್ತಿಯನ್ನು ವ್ಯಕ್ತಪಡಿಸುತ್ತಿರುತ್ತದೆ. ಈ ಅರ್ಥದಲ್ಲಿ 'ಏಳು ಮನುವಿನ ಮಗನೆ' ಕೂಡ ಭಗ್ನ ರೂಪಕಗಳ ಅಸ್ಪಷ್ಟ ಮನಸ್ಸಿನ ಪ್ರತೀಕಗಳಾಗಿ ಕಾಣುತ್ತದೆ. ಇದೊಂದು ಸರಳ ಏಕಾಂಕದಂತೆ ಕಂಡು ಬಂದರೂ ನಿರುದ್ಯೋಗಿ ಪುಂಡನೊಬ್ಬನ ಮನಸ್ಥಿತಿಯನ್ನು ಭೌತಿಕ ವಿವರಗಳ ಮೂಲಕ ಚೆನ್ನಾಗಿ ಪರಿಚಯಿಸುತ್ತದೆ. ಹಾಗೆಯೇ ಅಂತಹ ಪಾಡಿನ ಹುಡುಗರ ವರ್ತನೆಯನ್ನು ಸರಿಪಡಿಸಿ ಸರಿದಾರಿಗೆ ತರುವ ಅಂತೆಯೇ ತಕ್ಕ ಪಾಠ ಕಲಿಸಿ ಜವಾಬ್ದಾರಿ ಹೊರಿಸುವ ಬಗೆಯನ್ನೂ ಈ ಮೂಕ ನಾಟಕ ತೋರುತ್ತದೆ. ಸದ್ದು ಗದ್ದಲವೇ ಇಲ್ಲದೆ ಇಲ್ಲಿ ನ್ಯಾಯ ನಡೆದು ಹೋಗುತ್ತದೆ. ಕೆಡಿಸಿದವಳನ್ನೇ ಹಿಡಿದು ಕಟ್ಟಿ ಆ ಯುವತಿಗೆ ನ್ಯಾಯ ಕೊಡಿಸುವ ಮಿಂಚಿನ ಘಟನೆಯು ನಾಟಕದಲ್ಲಿ ಬಹಳ ಚೇತೋಹಾರಿಯಾಗಿ ಬಂದು ಸುಖಾಂತದಲ್ಲಿ ಮುಗಿಯುತ್ತದೆ. ಭಾಗಶಃ ಇದೊಂದೇ ನಾಟಕ ಮಾತ್ರ ಶ್ರೀನಿವಾಸರಾಜು ಅವರ ವಿನೋದ ಸುಖಾಂತದ ರಚನೆ ಎನಿಸುತ್ತದೆ.

ಇವರ ಎಲ್ಲ ಮೂಕ ನಾಟಕಗಳಲ್ಲೂ ಲಿರಿಕಲ್ ಆದ ಗುಣ ಉದ್ದಕ್ಕೂ ಕ್ರಿಯಾಶೀಲವಾಗಿರುವುದರಿಂದಲೇ ಈ ಎಲ್ಲ ನಾಟಕಗಳಿಗೆ ಹಿಡಿದಿಟ್ಟುಕೊಳ್ಳುವ ಶಕ್ತಿ ಬಂದಿರುವುದು.

ಅದರಲ್ಲೂ ಏಕಾಂಕಗಳಲ್ಲಿ ಶ್ರೀನಿವಾಸರಾಜು ಅವರು ಇದೇ ಬಗೆಯ ಲಿರಿಕಲ್ ಗುಣವನ್ನು ಸಮರ್ಥವಾಗಿ ಅಳವಡಿಸಿಕೊಂಡಿದ್ದಾರೆ. 'ಹಳಿಯ ಮೇಲಿನ ಸದ್ದು' ನಾಟಕ ಮಾತ್ರ ಈ ಮಾತಿಗೆ ಪೂರಕವಲ್ಲ. ಮುಂದೆ ಈ ವಿವರಗಳನ್ನು ಚರ್ಚಿಸಬಹುದು. ಐದು ಮೂಕ ನಾಟಕಗಳ ಪೈಕಿ 'ಯೋಚಿಸಿ' ಕೂಡ ರಾಜಕೀಯ ವಿಡಂಬನೆಯನ್ನು ನಿರೂಪಿಸುತ್ತದೆ. ಯುವಕನೊಬ್ಬನ ಒಳತೋಟಿಯ ಮೂಲಕ ಅಶೋಕ ಸ್ತಂಭದ ಕೆಳಗೆ ಕುಳಿತು ಅವೇಳೆಯಲ್ಲಿ ದುಷ್ಟ ರಾಜಕಾರಣಿ ಹಾಗೂ ನೀಚ ಜಮೀನ್ದಾರರ ವಿವರಗಳ ಮೂಲಕ ವ್ಯವಸ್ಥೆಯ ವಿಕಾರವನ್ನು ತೆರೆದು ತೋರಿಸುತ್ತಾರೆ. ವ್ಯವಸ್ಥೆಯ ಸಂಕೇತಗಳಾಗಿ ಬರುವ ಮಾರ್ವಾಡಿ, ಡಾಕ್ಟರ್ ಜಮೀನ್ದಾರ, ರಾಜಕಾರಿಣಿ ಎಲ್ಲ ನೀಚರನ್ನು ಅಶೋಕ ಸ್ತಂಭದ ಮರೆಯಲ್ಲಿ ಕೊಂದು ಹಾಕಿದಂತೆ ಯುವಕನ ಮೂಲಕ ಕ್ರಾಂತಿಯ ದನಿಯನ್ನು ಮೊಳಗಿಸುತ್ತಾರೆ. ಇಲ್ಲೂ ಕೂಡ ಮಾತಿನಲ್ಲಿ ಹೇಳಲಾಗದ್ದನ್ನು ಪಿಸ್ತೂಲಿನಿಂದ ಹೇಳಿಸಲು ಶ್ರೀನಿವಾಸರಾಜು ಅವರು ಯತ್ನಿಸುತ್ತಾರೆ. ಈ ಐದೂ ನಾಟಕಗಳಲ್ಲೂ ದುರಂತ ಪ್ರಜ್ಞೆ ತಟ್ಟನೆ ರಂಗದ ಮೇಲೆ ಎದಿರಾಗುವುದಿದೆ.

ಶ್ರೀನಿವಾಸರಾಜು ಅವರ ಮೂಕನಾಟಕಗಳು ದೃಶ್ಯ ಕಾವ್ಯ ಕಥನ ರೂಪಕಗಳಾಗಿ ಆವರಿಸಿದರೂ ಅವುಗಳಿಗೆ ಕೆಲವು ಮಿತಿಗಳಿವೆ. ಈ ನಾಟಕಗಳು ದೀರ್ಘ ಕಥನಗಳಲ್ಲ. ಮಾತಿನಾಚೆಯ ಸತ್ಯವನ್ನು ದೃಶ್ಯ ಸರಣಿಗಳ ಮೂಲಕ ತಾರ್ಕಿಕವಾಗಿ ಜೋಡಿಸಿಕೊಟ್ಟು ತಕ್ಷಣವೇ 'ಒಂದು ಪರಿಣಾಮವನ್ನು ಉಂಟು ಮಾಡಬೇಕಾಧ ಇಕ್ಕಟ್ಟನ್ನು ಈ ರಚನೆಗಳು ಎದುರಿಸುತ್ತವೆ. ತಟ್ಟನೆ ಒಂದು ಉದ್ದೇಶಿತ ಆಶಯವನ್ನು ಹೇಳಲು ದೀರ್ಘ ಕಥನಗಳಲ್ಲೇ ಸಾಧ್ಯವಿಲ್ಲ ಎನ್ನುವಾಗ ಇಂತಹ ಪುಟ್ಟ ಕಥನಗಳ ಸಮಯಾವಕಾಶದಲ್ಲಿ ದೊಡ್ಡದೊಂದು ನಿಲುವಿಗೆ, ಆಶಯಕ್ಕೆ, ನ್ಯಾಯಕ್ಕೆ ಬಂದು ನಿಲ್ಲುವುದು ಕೇವಲ ಸಂದೇಶವಾಗುತ್ತದೆಯೇ ಹೊರತು ಒಂದು ಪರಿಣಾಮವಾಗುವುದಿಲ್ಲ. ಇಲ್ಲಿನ ರಚನೆಗಳು ಇದರಿಂದಲೇ ತುರ್ತು ನ್ಯಾಯದಲ್ಲಿ ತುರ್ತು ನಿಲುಗಡೆಗೆ ಬಂದು ಅಖಂಡವಾದ ಮೌನವನ್ನು ಧ್ವನಿಸಲಾರದೇ ಹೋಗುತ್ತವೆ. ಇಂತಹ ತುರ್ತು ಅಂತ್ಯ ಅಥವಾ ನ್ಯಾಯವು ವಾಚ್ಯಗೊಂಡ ಮಾತಿನಂತೆಯೇ ಕೇಳಿಸುತ್ತದೆಯೇ ವಿನಃ ಮೌನವಾಗಿ ಮನಸ್ಸಿನಲ್ಲಿ ಅನು ರಣಿಸುವುದಿಲ್ಲ.

ಮತ್ತೊಂದು ಸಮಸ್ಯೆ ಎಂದರೆ; ಶ್ರೀನಿವಾಸರಾಜು ಅವರು ನಾಟಕದ ಕೊನೆಯ ಸ್ಥಿತಿಯನ್ನು ಹಿಂಸೆಯ ಮೂಲಕ ಪ್ರತಿಪಾದಿಸುವುದು. ಎಚ್.ಎಸ್. ರಾಘವೇಂದ್ರರಾವ್ ಮತ್ತು ಮರುಳ ಸಿದ್ದಪ್ಪ ಹಾಗೂ ಕೆ.ವಿ. ನಾರಾಯಣರಂತಹ ವಿಮರ್ಶಕರು ಶ್ರೀನಿವಾಸರಾಜು ಅವರ ಈ ಬಗೆಯ ಧೋರಣೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದ್ದಾರೆ. ಭಾಗಶಃ ಇಂತಹ ಹಿಂಸಾಪರವಾದ ನಿಲುವು ರಂಗತಂತ್ರವಾಗಿಯೂ ಹೊರಹೊಮ್ಮಿರಬಹುದು. ಆದರೂ ಹಿಂಸೆಯ ಮೂಲಕ ಕ್ರಾಂತಿಯನ್ನು ಧ್ವನಿಸುವ ನಿಲುವು 'ನಾಟಕ'ದಲ್ಲೂ ಅಸಾಧುವೇ. ಮೌನದಿಂದ ಆಶಯವನ್ನು ಧ್ವನಿಸುವ ಸರಿಯಾದ ಅವಕಾಶ ಸಿಕ್ಕದೇ ಹೋದಾಗಲೂ ಲೇಖಕನಾದವನು ಮೊಳಗುವ ಕೃತಕ ನ್ಯಾಯಾವರಣವನ್ನು ಕಂಡುಕೊಳ್ಳುತ್ತಾನೆನಿಸುತ್ತದೆ. ಬಂಡಾಯದ ಕವಿಗಳು ಹೀಗಾಗಿಯೇ ಪುಟ್ಟದಾದ ಕಾವ್ಯಾವಕಾಶದಲ್ಲಿ ದೊಡ್ಡ ಕ್ರಾಂತಿಯ ಕಹಳೆಯನ್ನು ಮೊಳಗಿಸಲು ಮುಂದಾದದ್ದು. ಶ್ರೀನಿವಾಸರಾಜು ಅವರು ಅಕ್ಷರಮಟ್ಟಿಗೆ ಅಸಹನೆಯನ್ನು ನ್ಯಾಯದ ದಂಡನೆಯ ಮೂಲಕ ಕಂಡುಕೊಳ್ಳುತ್ತಿರಬಹುದು. ಫ್ಯಾಂಟಸಿಯಲ್ಲಿ ಮಾಡುವ ದಂಡನೆ ಪೊಯೆಟಿಕ್ ಆಗಿದ್ದರೆ

ಅದರ ನ್ಯಾಯಕ ಧರ್ಮವು ಬೇರೆಯದಾಗಿರುತ್ತದೆ. ಶ್ರೀನಿವಾಸರಾಜು ಅವರ ನಾಟಕಗಳ ಅಂತ್ಯ ಬಹಳ ಸಲೀಸಾದ ಬಗೆಯಲ್ಲಿ ಪರಿಹಾರವನ್ನು ಕಂಡುಕೊಳ್ಳುವುದು ವಿಚಿತ್ರವಾಗಿದೆ. ಗ್ರೀಕ್ ರುದ್ರ ನಾಟಕಗಳು ಇನ್ನಿಲ್ಲದಷ್ಟು ಹಿಂಸೆಯನ್ನು ವೈಯಕ್ತಿಕ ದುರಂತದಲ್ಲಿ ನರಳಿ ಆ ದುರಂತದ ಮೂಲಕವೇ ಮುಕ್ತಿ ಕಂಡುಕೊಳ್ಳುತ್ತವೆ. ಅಂತಹ ಹಿಂಸೆಯಿಂದುಂಟಾಗುವ ಅನುಭವವೇ ಬೇರೆ. ಹಾಗೆಯೇ ಅಂತಹ ಸ್ಥಿತಿಯಲ್ಲಿ ವ್ಯಕ್ತವಾಗುವ ಮಾನವ ಪಾಡಿನ ದುರಂತವೇ ಬೇರೆ. ಶ್ರೀನಿವಾಸರಾಜು ಅವರ ಬಹುಪಾಲು ನಾಟಕಗಳು ದುರಂತ ಪ್ರಜ್ಞೆಗಿಂತಲೂ ಮಿಗಿಲಾಗಿ ಹಿಂಸೆಯ ದಂಡಾಧಿಕಾರದಲ್ಲಿ ಮೊಳಗುತ್ತವೆ. ವರ್ತಮಾನದಲ್ಲಿ ಆಗಲಾರದ್ದನ್ನು ಕನಸಿನಲ್ಲಿ ಕಾಣುವಂತೆಯೇ ಇವರ ನಾಟಕಗಳು ಕೊನೆಯಲ್ಲಿ ಅಸಹಾಯಕರ ತಾಳ್ಮೆಗೆಟ್ಟ ಸ್ಥಿತಿಯನ್ನು ಹೋಲುತ್ತವೆ.

ಐದು ಮೂಕ ನಾಟಕಗಳ ವಿಸ್ತರಣೆಯೇ ಇವರ ಏಕಾಂಕಗಳೇನೊ ಎಂಬಂತೆ ಕಾಣುತ್ತವೆ. ಮೂಕನಾಟಕಗಳಲ್ಲಿ ಶ್ರೀನಿವಾಸರಾಜು ಅಪ್ಪಟ ಕತೆಗಾರನಂತೆ, ಕವಿಯಂತೆ ದೃಶ್ಯ ಕಲಾವಿದನಂತೆ ಕಂಡು ಬಂದರೆ ಏಕಾಂಕಗಳ ರಚನೆಯಲ್ಲಿ ಅವರು ಪಳಗಿದ ನಿರ್ದೇಶಕನಂತೆಯೊ, ನಾಟಕಕಾರನಂತೆಯೊ ನಟನಂತೆಯೊ ಕಾಣುತ್ತಾರೆ. ಈ ಮೂರೂ ಬಗೆಯ ಪ್ರಬಲ ಸಂವೇದನೆ ರಾಜು ಅವರಿಗೆ ಇರುವುದರಿಂದಲೇ ರಂಗ ಪಠ್ಯವಾಗಿಯೂ ಹೇಗೆ ನಾಟಕವೊಂದು ಬೆಳೆಯಬೇಕು ಎಂಬುದು ಗೊತ್ತಿದೆ. ಐದು ಮೂಕ ನಾಟಕಗಳ ರೀತಿಯಲ್ಲೇ ಶ್ರೀನಿವಾಸರಾಜು ಅವರು ಐದು ಏಕಾಂಕಗಳನ್ನು ಒಂದು ಪೂರ್ಣ ಪ್ರಮಾಣದ 'ಹಲಿಯ ಮೇಲಿನ ಸದ್ದು' ನಾಟಕವನ್ನು ಬರೆದಿದ್ದಾರೆ. ಮೂಲ ಸಂವೇದನೆಯಲ್ಲಿ ಇವೆಲ್ಲ ಒಂದೇ ಬೀಜದವು. ಈ ನಾಟಕಗಳಲ್ಲೂ ಕೃತಕವಾದ ದುರಂತ ಅಥವಾ ಹಿಂಸೆಯ ಮೂಲಕ ಉಂಟಾಗುವ ಸಾವು ಎದುರಾಗುತ್ತದೆ. 'ನಾಳೆ ಯಾರಿಗೂ ಇಲ್ಲ' ಏಕಾಂಕವು ಹಡಗಿನಲ್ಲಿ ಕಳೆದುಹೋಗುವ ಅಮಾಯಕನೊಬ್ಬನ ದುರಂತ ಸಾವನ್ನು ಹೇಳುವ ನಾಟಕ. ವ್ಯವಸ್ಥೆಯನ್ನು ಕಾಯುವ ಕಾವಲುಗಾರನೇ ತನ್ನ ಸಹೋದ್ಯೋಗಿಗಳ ಅಮಾನುಷ ಹತ್ಯೆಗೆ ಒಳಗಾಗಿ ತನ್ನ ಪ್ರೀತಿಯ ಮಡದಿ ಮಕ್ಕಳಿಂದ ಕಳೆದುಹೋಗುವ ವೇದನೆಯ ಸ್ಥಿತಿಯನ್ನು ಮಾರ್ಮಿಕವಾಗಿ ಕಟ್ಟಿಕೊಡುವುದು ಈ ನಾಟಕದ ಕೇಂದ್ರ ಕಾಳಜಿ.

'ನನಗೆ ಈ ಸಮುದ್ರಾನೇ ಸೆರೆಮನೆ
ಅವರಿಗೆ ಆ ಮನೆನೇ ಸೆರೆಮನೆ
ಏನು ಬದುಕೋ ಈ ಹಾಳು ಬದುಕು'

ಎಂದು ನಾಟಕದ ಮೊದಲಿಗೇ ಬರುವ ಕಾವಲುಗಾರನ ಮಾತು ಧ್ವನಿಪೂರ್ಣವಾಗಿ ನಾಟಕದ ಕೊನೆಯಲ್ಲಿ ಮೊಳಗುತ್ತವೆ. ತುಂಡು ಬ್ರೆಡ್ಡಿನ ವಿಚಾರದಲ್ಲಿ ಹಡಗಿನ ಕಾವಲುಗಾರನ ಪ್ರಾಣವೇ ಹೊರಟುಹೋಗುವ ಸ್ಥಿತಿ ಮನಕರಗಿಸುವಂತಿದೆ. ಆತನ ದುರಂತದಲ್ಲಿ ಅನೇಕ ಅಮಾಯಕರ ನುಡಿಗಳು ಪ್ರತಿಧ್ವನಿಸುತ್ತವೆ.

'ಯಾರೊ ಮಾಡಿಕೊಳ್ಳೊ ದುಡ್ಡಿಗೆ
ಯಾರೊ ಸಾಯೋದು. ನಮ್ಮ ಹಣೆಬರಹಾನೆ ಇಂಗೆ.
ಹುಟ್ಟೋದೆಲ್ಲೊ, ಸಾಯೋದೆಲ್ಲೊ ಕಟ್ಕೊಂಡ್ ಹೆಂಡ್ತೀನ

ಅಡ್ಡಿಡಬೇಕು, ಒದ್ದರೆ ಒದಿಸ್ಕೋಬೇಕು
ಉಗಿದರೆ ಉಗಿಸ್ಕೋಬೇಕು, ಹಾಳು ಹೊಟ್ಟೆ ಪಾಡು'

ಕಾವ್ಯದ ಆಲಾಪದಂತಿರುವ ನತದೃಷ್ಟ ಕಾವಲುಗಾರನ ಈ ಮಾತುಗಳು ಅಂತಿಮವಾಗಿ 'ಈ ಭೂಮಿ ಮೇಲೆ ಬದುಕೋದೇ ಒಂದು ಹಲ್ಕ ಕೆಲಸ' ಎಂಬ ಹತಾಶ ಸ್ಥಿತಿಗೆ ಬಂದು ನಿಲ್ಲುತ್ತವೆ. ಇಲ್ಲವಾಗುವ, ಕಳೆದುಹೋಗುವ, ಕೊಂದುಕೊಳ್ಳುವ, ಲಯವಾಗುವ ಮಾನವ ಪಾಡನ್ನು ಈ ನಾಟಕವು ತುಂಬ ಧ್ವನಿಪೂರ್ಣವಾಗಿ, ಲಿರಿಕಲ್ ಆದ ಭಾಷೆಯ ಮೂಲಕ ಉದ್ದಕ್ಕೂ ಸಂಕೇತ ಪ್ರತಿಮೆಗಳ ಜೋಡಣೆಯಿಂದ ಪರಿಣಾಮಕಾರಿಯಾಗಿ ಕಟ್ಟಿಕೊಡುತ್ತದೆ. ಆದರೆ ಇಡೀ ನಾಟಕವು ಸಮುದ್ರ ಮಧ್ಯದಲ್ಲಿ ಗೆರಿಲ್ಲಾಗಳ ಕರಿನೆರಳಲ್ಲಿ, ಅಪರಿಚಿತ ಜೀವನ ಕ್ರಮದಲ್ಲಿ, ನಡತೆಯಲ್ಲಿ ನಡೆಯುವುದರಿಂದ ಪ್ರಸಿದ್ಧವಾದ ಇಂಗ್ಲೀಷ್ ಲೇಖಕರೊಬ್ಬರ ಅನುವಾದಿತ ಕೃತಿಯಂತೆ ಈ ಏಕಾಂಕವು ಎದುರಾಗುತ್ತದೆ. ಎಲ್ಲಿಯೂ ಕಾಲ ಪೋಲಾಗದಂತೆ ಸರಸರನೆ ಘಟಿಸುವ ಕ್ರಿಯೆಗಳು ನಾಟಕ ಕ್ರಿಯೆಗೆ ಒಪ್ಪುವಂತಿದೆ. ಲಘುಹಾಸ್ಯ, ವಿಡಂಬನೆ, ವಿಷಾದ, ಆಕಸ್ಮಿಕ ತಿರುವು, ವೈನೋದಿಕ ನಿರೂಪಣೆ ಈ ಏಕಾಂಕದಲ್ಲಿ ಹದವಾಗಿ ಬೆರಕೆ ಯಾಗಿರುವುದರಿಂದ ನಾಟಕವು ಏಕಕಾಲಕ್ಕೆ ಹಲವಾರು ಸಂಬಂಧವನ್ನು ಸಾಮಾಜಿಕವಾಗಿಯೂ ರಾಜಕೀಯವಾಗಿಯೂ ಎಟುಕಿಸಿಕೊಳ್ಳುತ್ತದೆ. ಅದರಲ್ಲೂ 'ಹೆದ್ದಾರಿಯಲ್ಲೊಂದು ರಾತ್ರಿ' ಏಕಾಂಕವು ಈ ಬಗೆಯ ಹಲವು ಸಮಸ್ಯೆಗಳನ್ನೆಲ್ಲ ಒಂದೇ ಬಾರಿಗೆ ಮೈಮೇಲೆ ಹಾಕಿಕೊಂಡ ನಿರುದ್ಯೋಗಿ ಪುಂಡು ತರುಣರ ಮೂಲಕ ಇಡೀ ನಮ್ಮ ಸಮಾಜದ ಎಲ್ಲ ವಿರೂಪವನ್ನು ದರ್ಶನ ಮಾಡಿಸುತ್ತದೆ, ನಮ್ಮನ್ನು ಆಳುವ ವ್ಯವಸ್ಥೆ, ಪೊಲೀಸು, ರಾಜಕಾರಣ, ಅಧಿಕಾರಶಾಹಿ, ಸುತ್ತಲ ವಂಚಕ ಸಮಾಜದ ಛಿದ್ರ ಅವಸ್ಥೆಗಳು ಹೇಗೆ ಅಮಾಯಕರನ್ನು ಬೇಟೆ ಆಡುತ್ತ ಕೊನೆಗೆ ಆ ಬೇಟೆಯಾಡುವ ಆಟದಲ್ಲಿ ಅಂತಹ ಅಮಾಯಕರನ್ನೂ ಕೂಡಿಸಿಕೊಂಡು ಬರ್ಬರ ಹತ್ಯೆಯಲೋಕ ಹೇಗೆ ದಾಳಿ ಮಡುತ್ತ ಕೊನೆ ಮೊದಲಿಲ್ಲದೆ ಅವಸಾನದ ಅಂಚಿಗೆ ಕರೆದೊಯ್ಯುತ್ತದೆ ಎಂಬುದನ್ನು ಮಾರ್ಮಿಕವಾಗಿ ತಿಳಿಸುತ್ತದೆ. ಯುವಕರ ಚಂಚಲ ಚಿತ್ತದ ಓಘದಂತೆಯೇ ನಾಟಕದ ಪಲ್ಲಟಗಳು ಒಂದರ ಮೇಲೊಂದು ನಾಟಕೀಯ ತಿರುವುಗಳ ಮೂಲಕ ಘಟಿಸಿ, ಕ್ರೂರ ವಾಸ್ತವಕ್ಕೆ ನಮ್ಮನ್ನು ಸಾಕ್ಷೀದಾರರನ್ನಾಗಿಸುವ ಮೂಲಕ ನಾಟಕ ಮುಗಿಯುತ್ತದೆ.

ಇದೇ ಬಗೆಯಲ್ಲಿ 'ಇದು ಕಾರಣ' ನಾಟಕವೂ ಸಹ ಕ್ಷುದ್ರ ಮನುಷ್ಯರ ಲೋಭಿತನವನ್ನು ಬಯಲು ಮಾಡಿ ಹೇಗೆ ಹಣ ಆಸ್ತಿ ಸಂಪತ್ತಿಗಾಗಿ ಹೆಣದ ನೆಪವಿಟ್ಟುಕೊಂಡು, ಅದಕ್ಕೆ 'ಕರ್ಮಾಂತರ' ಮಾಡುವ ಹಕ್ಕಿನ ನಾಟಕ ಮಾಡಿ ಕೊನೆಗೆ ಸತ್ತಿರುವ ವ್ಯಕ್ತಿ ಬರೆಸಿರುವ ವಿಲ್‌ನ ವಿಷಯ ತಿಳಿದು ಹೇಗೆ ಕ್ಷುದ್ರವಾಗಿ ವರ್ತಿಸಿ ಇಲ್ಲಿ ಕಿಲುಬು ಕಾಸೂ ತಮಗೆ ಸಿಗುವುದಿಲ್ಲವೆಂದು ಹೆಣ ಬಿಟ್ಟು ಹೊರಟುಹೋಗುತ್ತಾರೆ ಎಂಬುದನ್ನು ದಾಯಾದಿಗಳ ಪಾತ್ರದ ಮೂಲಕ ಶ್ರೀನಿವಾಸರಾಜು ಅವರು ಸಮರ್ಥವಾಗಿ ಚಿತ್ರಿಸುತ್ತಾರೆ. ಇವರ ಏಕಾಂಕಗಳಲ್ಲೂ ಕವಿ ಮನಸ್ಸು ತೀವ್ರವಾಗಿ ಕೆಲಸ ಮಾಡಿದೆ. ಅಷ್ಟೇ ಪ್ರಮಾಣದಲ್ಲಿ ಪ್ರತಿಭಟನೆಯ ಮಾತುಗಳೂ ಕೂಡ ಅಂತರಂಗಕ್ಕೆ ತಿವಿಯುವಂತೆ ಬರುತ್ತವೆ. ಆ ಬಗೆಯ ಕೆಲವು ಮಾತುಗಳನ್ನಿಲ್ಲಿ ಗಮನಿಸಬಹುದು.

"ಈ ದೇಶದಲ್ಲಿ ಜನ ಹಸಿವಿಗಾಗಿ ಹೊಡೆದಾಡೋದಿಲ್ಲ
ಚೆನ್ನಾಗಿ ಬದುಕಬೇಕೆಂದೂ ಸಾಯೋದಿಲ್ಲ
ದರಿದ್ರ ಧರ್ಮಕ್ಕೆ, ಇಲ್ಲದ ದೇವರಿಗೆ ಹೊಡೆದಾಡಿ ಸಾಯ್ತಾರೆ
ಹಂದಿ ಮರಿಗಳು ಹಾಕಿದಂತೆ ದೇವರುಗಳು ಬಾಬಾಗಳು
ಜಗದ್ಗುರುಗಳು ಹುಟ್ಟಿ ಬಂದರೂ ಈ ಜನ ರಿಪೇರಿ ಆಗೋಲ್ಲ
ರೈತರ ಮೇಲ್ಲಿಲ್ಲ ಬೇರೇನಿದೆ"

"ಈ ಧರ್ಮಗ್ರಂಥಗಳಿಂದ ಈ ಲೋಕಕ್ಕೆ ಆಗಿರೊ ಅನ್ಯಾಯ
ಬೇರೆ ಯಾವುದರಿಂದಲೂ ಆಗಿಲ್ಲ. ಅವು ಬಿತ್ತಿರೊ ದ್ವೇಷ
ಅವು ಮಾಡಿಸಿರೊ ಕೊಲೆ ಅವು ಕೊಟ್ಟಿರೊ ಬಡತನ ಸಾಮಾನ್ಯವೇ"

"ತೀರ್ಪು ನೀಡುವುದು ಮುಖ್ಯ
ತೀರ್ಪು ಹೇಗಿರಬೇಕು ಎಂಬುದು ಮುಖ್ಯವಲ್ಲ"

ಈ ತರದ ತೀವ್ರವಾದ ಮಾತುಗಳು ಇವರ ನಾಟಕಗಳಲ್ಲಿ ತಟ್ಟನೆ ನುಗ್ಗಿ ಬಂದು ಪರಿಣಾಮ ಬೀರಿ ಬೇರೊಂದು ಘಟನೆಯ ಜೊತೆ ಪ್ರತಿಧ್ವನಿಸಿ ಮರೆಯಾಗುತ್ತದೆ. ಮೂಕನಾಟಕಗಳಲ್ಲಿ ಅಷ್ಟೊಂದು ಕಾವ್ಯಾತ್ಮಕ ನಿಶ್ಯಬ್ಧವನ್ನು ಬೀರುವ ಕವಿ ಶ್ರೀನಿವಾಸರಾಜು ಅವರು ಬಂಡಾಯಗಾರನಂತೆ ಇಂತಹ ಮಾತುಗಳನ್ನೂ ಸಿಡಿಸಬಲ್ಲರು. ಮೌನ ಹೆಪ್ಪುಗಟ್ಟಿ ಸಿಡಿಲಿಗೀಡಾದಂತೆ ಗುಡುಗುವ ಈ ಬಗೆಯ ಮಾತುಗಳು ವಿಶೇಷವಾಗಿ ತರುಣ ಪಾತ್ರಗಳಿಂದ ಬರುತ್ತಿರುವುದನ್ನು ಗಮನಿಸಬೇಕು. ಮೂಕನಾಟಕಗಳ ನಿಶ್ಯಬ್ಧ ಸ್ಥಿತಿಯಲ್ಲೂ ಯುವಜನಾಂಗದ ಮೂಲಕ ರಾಜು ಅವರು ಕ್ರಾಂತಿಯ ಗದ್ದಲವನ್ನು ನಿರ್ಮಿಸುವುದಿದೆ. 'ಮನದೊಳಗಣ ಕಿಚ್ಚು' ಮೂಕ ನಾಟಕವಾಗಿದ್ದರೂ ಅಲ್ಲಿ ನಡೆವ ಕ್ರಿಯೆಗಳೆಲ್ಲವೂ ಗದ್ದಲದ ಸಂತೆಯ ಸಂಚಿನವೇ ಆಗಿವೆ. ಮೌನವನ್ನು ಪ್ರಬಲ ಅಸ್ತ್ರವಾಗಿಯೂ ಬಳಸಬಲ್ಲ ಶ್ರೀನಿವಾಸರಾಜು ಅವರು ವಿಷಮಯ ಮಾನವ ಸಂಬಂಧಗಳು ಹೇಗೆ ಅಬ್ಬರಿಸಿ ಮನುಷ್ಯತ್ವವನ್ನು ಹತ್ಯೆ ಮಾಡುತ್ತವೆಂಬುದನ್ನು ಮನಮಿಡಿವ ದೃಶ್ಯರೂಪಕಗಳ ಮೂಲಕ ನಿವೇದಿಸುತ್ತಾರೆ. ಈ ಬಗೆಯ ಮಾನವ ಪಾಡನ್ನು ಮನುಷ್ಯನ ಹಿಂಸೆಯ ಮೂಲ ಪ್ರವೃತ್ತಿಯ ಜಾಡು ಹಿಡಿದು ಹೇಗೆ ಆತನ ಯುದ್ಧದಾಹ ನಿರಂತರವಾಗಿ ಬೆಳೆಯುತ್ತಲೆ ಬಂದಿದೆ ಎಂಬುದನ್ನು "ಎಲ್ಲೊ ಒಂದು ಕಡೆ' ಏಕಾಂಕದ ಮೂಲಕ ವಿಷಾದದ ಹಗೆಯ ಹೊಗೆತನವನ್ನು ಚಿತ್ರಿಸುತ್ತಾರೆ.

ಇಪ್ಪತ್ತನೆ ಶತಮಾನದ ಕೊನಯ ಕಾಲ ಘಟ್ಟದ, ಬದಲಾದ ನಗರ ಜೀವನದ ವ್ಯಕ್ತಿಗತ ಗೋಳುಗಳನ್ನು ಶ್ರೀನಿವಾಸರಾಜು ಅವರ ಎಲ್ಲ ನಾಟಕಗಳು ಅಭಿನಯಿಸುತ್ತವೆ. ಸಾಮಾಜಿಕವಾದ ಅಖಂಡ ಸಮಸ್ಯೆಗಳನ್ನು ಅವರು ಎದುರುಗೊಳ್ಳುವುದಿಲ್ಲ. ಮನುಷ್ಯನ ಅಸ್ತಿತ್ವ ಹೇಗೆ ಛಿದ್ರವಾಗುತ್ತಾ ಭವಿಷ್ಯವಿಲ್ಲದ ದುರವಸ್ಥೆ ಹೇಗೆ ಬಿಡಿಬಿಡಿಯಾಗಿ ವ್ಯಕ್ತಿಗಳ ಬದುಕಿನ ಒಳಗೆ ದಾಳಿ ಮಾಡಿ ಭಗ್ನತೆಯು ದಿಗ್ವಿಜಯ ಸಾಧಿಸುತ್ತದೆ ಎಂಬುದನ್ನು ಇವರ ನಾಟಕಗಳು ಧ್ವನಿಸುತ್ತವೆ. ಅಸಂಗತವೆನಿಸುವಂತೆ ಬೇರು ಬಿಟ್ಟಿರುವ ಕಾಣದ ಕೈಯ ವ್ಯವಸ್ಥೆ ಅದರ ಮೌಲ್ಯಗಳನ್ನೂ ನಾಶಮಾಡಿ ದಿಕ್ಕೆಟ್ಟ ಭವಿಷ್ಯಕ್ಕೆ ಕಾರಣವಾಗುತ್ತವೆ ಎಂಬುದು ಎಲ್ಲ ನಾಟಕಗಳಲ್ಲೂ ಸಮಾನವಾಗಿ ಕಂಡು ಬರುವ ಅಂಶ. ವ್ಯವಸ್ಥೆಯ ವಿರುದ್ಧದ ದನಿಯಲ್ಲಿ ಶ್ರೀನಿವಾಸರಾಜು ಅವರ ಪ್ರತಿಭಟನೆಯು ಪೊಯೆಟಿಕ್ ಜಸ್ಟೀಸಿನದು. ಕಾವ್ಯಾತ್ಮಕ ನ್ಯಾಯವು ಭಾವನಾತ್ಮಕವಾದುದೂ

ಹೌದು. ಈ ಭಾವನಾತ್ಮಕ ನ್ಯಾಯ ನೀತಿಯನ್ನು ಕವಿಯಾದವನು ಎಲ್ಲ ಮನುಷ್ಯರ ಪರವಾಗಿ ನುಡಿಸುತ್ತಾನೆ. ಶ್ರೀನಿವಾಸರಾಜು ಅವರ ಸೃಜನಶೀಲ ಧ್ಯಾನ ಇದಕ್ಕೆ ಹೊರತಾದುದೇನಲ್ಲ. ಅಂತಹ ನ್ಯಾಯವೇ ಕವಿಗೆ ಇರುವ ಮುಕ್ತಿಯ ದಾರಿ. ಆ ಬಗೆಯ ಮುಕ್ತಿಯಲ್ಲಿ ಕವಿಭಾವದ ಮನಸ್ಸು ವ್ಯವಸ್ಥೆಯ ಕುರೂಪವನ್ನು ಬಯಲು ಮಾಡಿ ಆನಂದವಾದದ್ದರ ಕಡೆಗೆ ಮನುಷ್ಯರನ್ನು ನೆನಪಿಸುತ್ತದೆ. 'ಹಳಿಯ ಮೇಲಿನ ಸದ್ದು' ನಾಟಕದ ಆಶಯದಲ್ಲಿ ಸೂಕ್ಷ್ಮವಾಗಿ ಈ ಬಗೆಯ ಧ್ವನಿ ಕೇಳಿಸುತ್ತದೆ. ಬದುಕುಳಿಯಬೇಕಾದ ಕ್ರೂರ ಸ್ಪರ್ಧೆಯಲ್ಲಿ ಹೇಗೆ ಅಮಾನುಷತೆಯು ಮನುಷ್ಯನಲ್ಲಿ ಸ್ಥಾಯಿಯಾಗಿ ಉಳಿದಿರುತ್ತದೆ ಎಂಬುದು ಇವರ ಒಟ್ಟು ರಚನೆಗಳ ಹಿಂದಿರುವ ಸೃಜನಶೀಲ ಒತ್ತಡ. 'ಹಳಿಯ ಮೇಲಿನ ಸದ್ದು' ಈ ದೃಷ್ಟಿಯಿಂದ ಗಮನ ಸೆಳೆಯುತ್ತದೆ.

ಇವರ ಮೂಕನಾಟಕಗಳಿಗಿಂತ ಹಾಗೂ ಏಕಾಂಕಗಳಿಗಿಂತ ವ್ಯಾಪ್ತಿಯ ದೃಷ್ಟಿಯಿಂದ ಭಿನ್ನವಾದದ್ದು 'ಹಳಿಯ ಮೇಲಿನ ಸದ್ದು', ಈ ನಾಟಕ ಬಡ ಗ್ಯಾಂಗ್‌ಮನ್ ಒಬ್ಬನ ದುರಂತವನ್ನು ನಿರೂಪಿಸುತ್ತದೆ. ಈ ರಚನೆಯಲ್ಲೂ ಶ್ರೀನಿವಾಸರಾಜು ಅವರು ದಟ್ಟವಾಗಿ ಬದುಕಿನ ಪಡಿಪಾಟಲು ನಿತ್ಯದ ಗೋಳನ್ನು ತುಸು ಹೆಚ್ಚಿನಿಸುವ ಮಾತಿನ ಗದ್ದಲದಲ್ಲಿ ಕೇಳಿಸಿಕೊಳ್ಳುವಂತೆ ಮಾಡುತ್ತಾರೆ. ರೈಲಿನ ಕರ್ಕಶ ಶಬ್ಧವನ್ನೇ ಪಾತ್ರಗಳ ಆಕ್ರಂದನವಾಗಿ ತೋರಿಸಲು ಇಲ್ಲಿ ಸಾಧ್ಯವಿತ್ತಾದರೂ ಆ ಬಗೆಯ ಯತ್ನ ಸಫಲವಾಗಿಲ್ಲ. ಪೂರ್ಣ ಪ್ರಮಾಣದ ನಾಟಕವಾದ ಹಳಿಯ ಮೇಲಿನ ಸದ್ದು ಸಿದ್ಧ ಮಾದರಿಯ ನಾಟಕದಲ್ಲಿ ನಡೆದು ವಾಸ್ತವದ ನಡುವೆಯೆ ಸಿಲುಕಿಕೊಳ್ಳುತ್ತದೆ. ಪ್ರೇಕ್ಷಕರ ಓದುಗರ ಸಿದ್ಧ ನಂಬಿಕೆಗಳನ್ನು ಮೀರಲಾರದ ಈ ನಾಟಕದಲ್ಲಿ ಬರುವ ನಿತ್ಯಜೀವನದ ರಗಳೆಯ ಮಾತುಗಳು ಕೂಡ ಮನಸ್ಸನ್ನು ತಟ್ಟುವುದಿಲ್ಲ. ಬ್ಯಾಟಮ್ಮ ಹಾಗೂ ಈಕೆಯ ಗಂಡ ಕಾವಲುಗಾರ ಮತ್ತು ಪಟದಪ್ಪರ ಮಾತುಗಳು ನಾಟಕಕ್ಕೆಂದೇ ಕಲಿತುಕೊಂಡ ಮಾತಿನಂತೆ ಅಡುತ್ತವೆ. ಮಗಳ ಮದುವೆ ಮಾಡಿಸುವ ಚಿಂತೆಯಲ್ಲಿ ಸ್ವಂತ ಅಣ್ಣನ ಮಗನನ್ನು ತಂದುಕೊಳ್ಳಲು ಮುಂದಾಗುವ ಬ್ಯಾಟಮ್ಮ, ಮಗಳಾದರೂ ಸುಖವಾಗಿರಲಿ ಎಂದು ತಿಳಿಸಿ ಸಾಲ ಮಾಡಿ ವರದಕ್ಷಿಣೆ ಕೊಡಲು ಕಷ್ಟ ಅನುಭವಿಸುವುದು ಸಾಮಾನ್ಯ ಎನಿಸಿಬಿಡುತ್ತದೆ. ಅತ್ಯಂತ ಕೆಳಗಿನ ಜಾತಿಗಳ ಬಡವರಲ್ಲೂ ಹೇಗೆ ವೈವಾಹಿಕ ಒಪ್ಪಂದಗಳು ಕ್ರೂರವಾಗಿರುತ್ತವೆ ಎಂಬುದನ್ನಷ್ಟೇ ಹೇಳಲು ಸಾಧ್ಯವಾಗಿ ಅದರಾಚೆಗಿನ ಸಂಕೀರ್ಣ ಹಾಗೂ ಕಾಣದ ಬದುಕಿನ ವಿಪರ್ಯಾಸಗಳು ಮುಂದೆ ಬರುವುದಿಲ್ಲ. ಆಕಸ್ಮಿಕವೊ ಕೃತಕವೊ ಎಂಬಂತೆ ಕಾವಲುಗಾರ ರೈಲಿಗೆ ಸಿಕ್ಕು ಸತ್ತಂತೆ ಮಾಡುವುದು ಮತ್ತು ಟ್ರಾಲಿ ಸವಾರನ ಉದ್ದೇಶಕ್ಕೆ ಕಾವಲುಗಾರ ಬಳಕೆಯಾಗಿ ಮತ್ತೆ ಆತ ಜೀವಂತವಾಗಿ ಹಿಂತಿರುಗಿ ಬಂದು ದೆವ್ವವೇನೊ ಎಂಬ ಭಯ ಹುಟ್ಟಿಸುವುದು ಹಾಗೂ ಕೊನೆಗೆ ತಿಥಿ ಮಾಡಿ ಮಗಳ ಮದುವೆಗಾಗಿ ಬಡಿದಾಡುತ್ತಿರುವಾಗ ಈ ಗಂಡ ಯಾಕೆ ಹಿಂತಿರುಗಿದನೊ ಎಂಬ ಗೊಂದಲದಲ್ಲಿ ಮಗಳ ಬದುಕಿಗಾಗಿ ತನ್ನ ಗಂಡನನ್ನೇ ಕೊಂದು ಬಿಡುವುದು ಬಹಳ ಕೃತಕವಾಗಿದೆ. ಈ ದೃಷ್ಟಿಯಿಂದ ಹಳಿಯ ಮೇಲಿನ ಸದ್ದು ನಾಟಕ ದೊಡ್ಡ ವ್ಯಾಪ್ತಿಯಲ್ಲಿ ಘಟಿಸಿದರೂ ಅದರ ಪರಿಣಾಮ ತುಂಬ ಚಿಕ್ಕದು. ಇದೇ ನಾಟಕವನ್ನು ಮೂಕನಾಟಕವಾಗಿಸಿ ಅದ್ಭುತವಾದ ಪರಿಣಾಮವನ್ನು ಉಂಟುಮಾಡಬಹುದಾಗಿತ್ತು. ಅನವಶ್ಯಕವಾಗಿ ಕೋವಿಕೋರ ಕ್ರಾಂತಿಕಾರಿಗಳನ್ನು ಈ ನಾಟಕದಲ್ಲಿ ಬಳಸಿಕೊಳ್ಳಲಾಗಿದ್ದು ಅದರಿಂದ ನಾಟಕದ ಒಟ್ಟು ಸಂವಿಧಾನಕ್ಕೆ ಯಾವ ಲಾಭವೂ ಉಂಟಾಗಿಲ್ಲ.

ಕೇವಲ ಬಂಡಾಯದ ನಾಟಕವಾಗಿ ಮಾತ್ರ 'ಹಳಿಯ ಮೇಲಿನ ಸದ್ದು' ನಿಂತುಬಿಡುತ್ತದೆ. ವ್ಯವಸ್ಥೆಯ ಹಳಿಗಳೇನು ಇಲ್ಲಿ ಬದಲಾಗುವುದಿಲ್ಲ. "ದಿನನಿತ್ಯದ ಬದುಕಿನ ಸಾಮಾನ್ಯ ಸಣ್ಣಪುಟ್ಟ ಸಂಗತಿಗಳೇ ಇವರ ಕೃತಿಯ ಮೂಲದ್ರವ್ಯ. ಹೀಗಾದಾಗ ನಾಟಕಕಾರ ಬಹಳ ಕಷ್ಟದ ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ. ಪ್ರೇಕ್ಷಕರಿಗೂ ತನಗೂ ದತ್ತವಾದ ಮತ್ತು ಸಾಮಗ್ರಿಯನ್ನು ನಿರಾಕರಿಸಿ ತಾನು ಆಯ್ದ ಸಂಗತಿಗಳನ್ನು ಜೋಡಿಸುವ ಕ್ರಮದಲ್ಲಿ ರಂಗ ತಂತ್ರಗಳನ್ನು ಬಳಸಿಕೊಳ್ಳುವ ರೀತಿಯಲ್ಲಿ ಅರ್ಥವಂತಿಕೆಯನ್ನು ಸಾಧಿಸಬೇಕಾಗುತ್ತದೆ. ಶ್ರೀನಿವಾಸರಾಜು ಈ ಕೆಲಸವನ್ನು ಅಚ್ಚುಕಟ್ಟಾಗಿ ಮಾಡುತ್ತಾರೆ" ಎಂಬ ಓ.ಎಲ್. ನಾಗಭೂಷಣ ಸ್ವಾಮಿ ಅವರ ಮಾತು ಸೂಕ್ತವಾದದ್ದೇ. ಆದರ ನಿತ್ಯ ಜೀವನದ ನರಕದ ಆಚೆಗೆ ಹೋಗಲು ಇಂತಹ ಸಂಗತಿಗಳು ಲೇಖಕನನ್ನು ಅಷ್ಟು ಸುಲಭವಾಗಿ ಬಿಟ್ಟುಕೊಡದೆ ತಮ್ಮ ಅಗತ್ಯಕ್ಕೆ ತಕ್ಕಂತೆ ಲೇಖಕನನ್ನೇ ಬಳಸಿಕೊಳ್ಳುತ್ತವೆ. 'ಹಳಿಯ ಮೇಲಿನ ಸದ್ದು' ನಾಟಕವು ಇದರಿಂದಲೇ ಸಿದ್ಧವಾಗಿರುವ ಹಳಿಯ ಮೇಲೆಯೆ ಸಾಗಬೇಕಾಗುತ್ತದೆ. ಇರುವ ಶೋಷಣೆಯ ಹಳಿಯನ್ನೇ ತಪ್ಪಿಸುವ ದೊಡ್ಡ ಸವಾಲಿಗೆ ಇದರಿಂದ ಪಾತ್ರಗಳೂ ಒಳಗಾಗುವುದಿಲ್ಲ. ಹಾಗೆಯೇ ಲೇಖಕನೂ ಈ ಚೌಕಟ್ಟಿನಿಂದ ಆಚೆ ಹೋಗಲು ಸಾಧ್ಯವಾಗುವುದಿಲ್ಲ.

ಶ್ರೀನಿವಾಸರಾಜು ಅವರ ನಿಜವಾದ ಸೃಜನಶೀಲ ಶಕ್ತಿ ಇರುವುದು ಮೂಕನಾಟಕ ಹಾಗೂ ಏಕಾಂಕಗಳಲ್ಲೇ. ಪೂರ್ಣ ಪ್ರಮಾಣದ ಹಳಿಯ ಮೇಲಿನ ಸದ್ದು ವಸ್ತುವಿನ ಸಮಸ್ಯೆಯಿಂದ ವಿಫಲವಾಗಿದೆ ಎಂದಲ್ಲ. ಬಡವರ ಪಡಿಪಾಟಲನ್ನು ಧ್ವನಿಸಲು ಬ್ರೆಕ್ಟ್ ಅದ್ಭುತವಾಗಿ ರಂಗ ಮಾಂತ್ರಿಕತೆಯನ್ನೇ ಮಾಡಿಬಿಡುತ್ತಾರೆ. ಆಫ್ರಿಕಾದ ಕರಿಯರ ಏಕಾಂಕಗಳಂತೂ ಗಾಢವಾಗಿ ನೊಂದವರ ನೋವ ನೋಯದವರಿಗೂ ಮುಟ್ಟಿಸುತ್ತವೆ. ಆ ನಿಟ್ಟಿನಲ್ಲಿ ವೊಲೆ ಷೋಯಿಂಕಾನ 'ದಿ ರೋಡ್' ನಾಟಕವು ಎಂತವರನ್ನೂ ಒಳಕ್ಕೆ ಕರೆದುಕೊಳ್ಳುತ್ತದೆ. ಹಳಿಯ ಮೇಲಿನ ಸದ್ದು ಈ ಹಿನ್ನೆಲೆಯಲ್ಲಿ ಅಂತಹ ಒಂದು ನಾಟಕವಾಗಬಹುದಿತ್ತು. ತೆಲುಗು ಭಾಷೆಯನ್ನಾಡುತ್ತ ಬಂದು ಟ್ರಾಲಿ ಸವಾರನ ವಿರುದ್ಧ ಕಿಡಿಕಾರಿ ಮರೆಯಾಗುವ ಕ್ರಾಂತಿಕಾರಿಗಳು ಈ ನಾಟಕದ ಕೇಂದ್ರ ಪಾತ್ರಗಳಾಗಿ ಬೆಳೆದಿದ್ದರೆ, ಆಗ ನಾಟಕದ ಆಯಾಮವೇ ಬದಲಾಗಿ ಕಾವಲುಗಾರನೂ ಅವರ ಇನ್ನೊಂದು ಭಾಗವಾಗಬಹುದಿತ್ತು. ಒಟ್ಟಿನಲ್ಲಿ ಹಳಿಯ ಮೇಲಿನ ಸದ್ದು ಶ್ರೀನಿವಾಸರಾಜು ಅವರ ಪ್ರಾತಿನಿಧಿಕ ನಾಟಕವಲ್ಲ. ಅವರ ಮೂಕನಾಟಕಗಳೇ ಅವರ ಅಂತರಾಳವನ್ನು ತೋರುವ ರಚನೆಗಳು. ಕನ್ನಡದ ಆಧುನಿಕ ಸಂವೇದನೆ, ವಸ್ತು ವಿಷಯ, ಸಮಸ್ಯೆಗಳು ರಂಗಾವರಣದಲ್ಲಿ ಧ್ವನಿ ಸಾಧ್ಯತೆಯಿಂದ ವರ್ತಮಾನವನ್ನು ಪ್ರತಿಫಲಿಸುವುದು ಹೊಸತನದ ಹುಡುಕಾಟ. ಶ್ರೀನಿವಾಸರಾಜು ಅವರು ಅಂತಹ ಹುಡುಕಾಟವನ್ನು ಪ್ರಾಮಾಣಿಕವಾಗಿ ಮಾಡಿದ್ದಾರೆ. ಕನ್ನಡದ ನವ್ಯ ಕಾವ್ಯದ ಪ್ರಜ್ಞೆಯು ಶ್ರೀನಿವಾಸರಾಜು ಅವರ ಏಕಾಂಕ ಹಾಗೂ ಮೂಕನಾಟಕಗಳಲ್ಲಿ ಪರಿಣಾಮಕಾರಿಯಾಗಿ, ನವ್ಯ ಕಾವ್ಯದ ಅಮೂರ್ತತೆಯಿಂದ ಪಾರಾಗಿ, ವ್ಯಕ್ತಿ ವಿಶಿಷ್ಟ ಹಠದಿಂದ ಬಿಡಿಸಿಕೊಂಡು ಸಾಮುದಾಯಿಕ ನೆಲೆಯಿಂದ ವಿಕಾಸವಾಗಿರುವುದು ವಿಶೇಷವಾಗಿದೆ. ಕನ್ನಡದ ಪ್ರಮುಖ ನಾಟಕಕಾರರಾದ ಕಂಬಾರ, ಕಾರ್ನಾಡ, ಲಂಕೇಶ್, ಚಂಪಾ ಅವರ ಸಾಲಿನಲ್ಲೇ ಶ್ರೀನಿವಾಸರಾಜು ಅವರನ್ನು ಗುರುತಿಸಬೇಕಾಗಿರುವುದು ಈ ಕಾರಣದಿಂದಲೇ. ಇವರ ನಾಟಕಗಳು ಹುಡುಕುತ್ತಿರುವ ಮಾನವೀಯತೆಯು ಯಾವ ಕಾಲಕ್ಕೂ ಬೇಕಾದ ಹಾದಿಯೇ. ದೊಡ್ಡ

ವ್ಯಾಪ್ತಿಯಲ್ಲಿ ಶ್ರೀನಿವಾಸರಾಜು ಅವರು ನಾಟಕಗಳನ್ನು ರಚಿಸದಿದ್ದರೂ ಅಂತಹ ಸಾಧ್ಯತೆ ಈಗಲೂ ಅವರಲ್ಲಿ ಗಾಢವಾಗಿದೆ. ಪುರಾಣ ಮತ್ತು ಚರಿತ್ರೆಯ ವಸ್ತು ವಿಷಯವನ್ನು ಬಿಟ್ಟು ಆಧುನಿಕ ಸಮಾಜದ ಬಿರುಕನ್ನು ತೋರುವ ಇವರ ನಾಟಕಗಳು ಜಾತಿ ಹಾಗೂ ಲಿಂಗ ತಾರತಮ್ಯದ ಸಂಗತಿಗಳ ಬಗ್ಗೆ ವಿಶೇಷವಾಗಿ ಏನನ್ನೂ ಹೇಳುವುದಿಲ್ಲ. ಅದು ಆಯಾಯ ಲೇಖಕರ ಮನೋಧರ್ಮಕ್ಕೆ ಬಿಟ್ಟ ಸಂಗತಿ ಎನ್ನಬಹುದಾದರೂ ಸೂಕ್ಷ್ಮ ಸಂವೇದನೆಯ ಲೇಖಕನಾದವನು ಅಂತಹ ವಿಕೃತ ಸಾಮಾಜಿಕ ಪರಿಸರಕ್ಕೆ ತನ್ನ ಸಾಕ್ಷಿ ಪ್ರಜ್ಞೆಯನ್ನು ಬೆಸೆದುಕೊಳ್ಳದಿದ್ದರೆ ಅದು ಆ ಲೇಖಕನಿಗೇ ಉಂಟಾಗುವ ನಷ್ಟ. ಮನುಷ್ಯನ ಆಳದ ದುರಂತದ ನೆಲೆಗಳು ಅಖಂಡವಾಗಿ ಸೃಜನಶೀಲ ಅಭಿವ್ಯಕ್ತಿಯಲ್ಲಿ ಆಕೃತಿ ಪಡೆಯಲು ಬೇಕಾದ ಕಾಲ ಮತ್ತು ಅವಕಾಶ ಯಾವತ್ತೂ ಇದೆ. ಅದು ಈ ಕಾಲದಲ್ಲಿ ಇನ್ನೂ ಅನುಕೂಲಕರವಾಗಿದೆ. ಶ್ರೀನಿವಾಸರಾಜು ಅವರು ಇಂತಹ ಪಯಣದಲ್ಲಿ ಎಂದೂ ನಿವೃತ್ತರಾಗುವಂತವರಲ್ಲ. ಅವರಿಂದ ಕನ್ನಡ ಸಾಹಿತ್ಯ ಇನ್ನೂ ಅಪಾರವಾದ್ದನ್ನು ನಿರೀಕ್ಷಿಸುತ್ತದೆ. ಅವರಿಗೆ ಅಂತದನ್ನು ಪೂರೈಸಲು ಎಲ್ಲ ಬಗೆಯ ಶಕ್ತಿಯೂ ಇದೆ ಎಂಬುದು ನನ್ನ ವಿಶ್ವಾಸ.

❑

# ಎರಡು ಏಕಾಂಕಗಳು

● *ಜಯದೇವಪ್ಪ ಜೈನಕೇರಿ*

**ಕ**ನ್ನಡ ಸಾಹಿತ್ಯ ಸಂದರ್ಭದಲ್ಲಿ ನಾಟಕಗಳು ವಿರಳ ಎಂದು ಹೇಳಲಾಗದಿದ್ದರೂ ಏಕಾಂಕಗಳು ಇತ್ತೀಚಿನ ದಶಕಗಳಲ್ಲಿ ಅಪರೂಪ ಎನ್ನಬಹುದು. ಇಂಥ ಅಪರೂಪದ ಏಕಾಂಕಗಳ ರಚನೆಯಲ್ಲಿ ತೊಡಗಿರುವವರಲ್ಲಿ ಚಿ. ಶ್ರೀನಿವಾಸರಾಜು ಮುಖ್ಯವಾದವರು. ನಾಟಕಕಾರ, ನಟ, ನಿರ್ದೇಶಕರಾಗಿ ಗುರುತಿಸಲ್ಪಟ್ಟಿರುವ ಶ್ರೀನಿವಾಸ ರಾಜು ಅವರು, ಮುಖ್ಯವಾಗಿ ಕಾಲೇಜು ವಿದ್ಯಾರ್ಥಿಗಳ ರಂಗಭೂಮಿಗೆ ನೀಡಿರುವ ಕೊಡುಗೆಯನ್ನು ಹಲವು ನಿಟ್ಟಿನಿಂದ ಗುರುತಿಸಬಹುದಾಗಿದೆ. ಸರಳ ರಂಗ ಪರಿಕರಗಳು, ಕೆಲವೇ ಪಾತ್ರ ಗಳು, ಸೀಮಿತ ರಂಗಸ್ಥಳದ ಸಾಧ್ಯತೆಗಳನ್ನು ಪರಿಣಾಮಕಾರಿಯಾಗಿ ಬಳಸುವ ಅವರ ಏಕಾಂಕಗಳು ಸಾಕಷ್ಟು ಪ್ರದರ್ಶನ ಕಂಡಿವೆ. ಸಾಮಾನ್ಯವಾಗಿ ನಾಟಕಗಳು ನಮ್ಮನ್ನು ಭ್ರಮಾ ಲೋಕಕ್ಕೆ ಕರೆದೊಯ್ಯುತ್ತವೆ ಎಂಬ ಮಾತಿಗೆ ಅಪವಾದವಾಗಿ ವಾಸ್ತವ ಜಗತ್ತನ್ನು ಪ್ರಚಲಿತ ಸಮಸ್ಯೆಗಳನ್ನು ಅನಾವರಣಗೊಳಿಸುವುದರಲ್ಲಿ ಶ್ರೀನಿವಾಸ ರಾಜು ಅವರ ಏಕಾಂಕಗಳು ಸಫಲವಾಗಿವೆ. ಈಗಾಗಲೇ ಹಲವು ರಂಗ ಪ್ರಯೋಗಗಳನ್ನು ಕಂಡಿರುವ ಇವರ ನಾಟಕಗಳು ಭಾರತದ ಇತರ ಭಾಷೆಗಳಿಗೂ ಅನುವಾದಗೊಂಡು ಪ್ರದರ್ಶನಗಳನ್ನು ಕಂಡಿರುವುದು ವಿಶೇಷ.



**ಎರಡು ಏಕಾಂಕಗಳು :** ಪ್ರಸ್ತುತ ಚಿ. ಶ್ರೀನಿವಾಸರಾಜು ಅವರು ರಚಿಸಿರುವ ಎರಡು ಏಕಾಂಕಗಳು ನಾಟಕ ಕೃತಿ (ಪ್ರ. ೨೦೦೨) ಕುರಿತು ಚರ್ಚಿಸುತ್ತೇನೆ. ಈ ಕೃತಿಗೆ ಶಿವಮೊಗ್ಗ ಕರ್ನಾಟಕ ಸಂಘವು ಪ್ರತಿವರ್ಷ ನೀಡುವ ಅತ್ಯುತ್ತಮ ನಾಟಕ ಕೃತಿಗೆ ೨೦೦೨ ರ ಕೆ.ವಿ. ಸುಬ್ಬಣ್ಣ ಹೆಸರಿನ ಪ್ರಶಸ್ತಿ ಮತ್ತು ನಗದು ಪುರಸ್ಕಾರ ದೊರಕಿರುವುದು ಕೃತಿಯ ಮೌಲ್ಯವನ್ನು ಹೆಚ್ಚಿಸಿದೆ ಎನ್ನಬಹುದು. ಸಂಚಯ ಪ್ರಕಾಶನದಿಂದ ಪ್ರಕಟವಾಗಿರುವ ಕೃತಿಯ, ಮೊದಲ ಏಕಾಂಕ

"ಇದು ಕಾರಣ" ಹೊಸತು ಮಾಸಿಕದ ೨೦೦೨ರ ವಾರ್ಷಿಕ ಸಂಚಿಕೆಯಲ್ಲಿ ಪ್ರಕಟವಾಗಿ ಓದುಗರ ಮೆಚ್ಚುಗೆ ಗಳಿಸಿತ್ತು. ಎರಡನೇ ಏಕಾಂಕ ನಾಟಕ 'ಎಲ್ಲೋ ಒಂದು ಕಡೆ' ಸಹ ಪ್ರಜಾವಾಣಿ ೨೦೦೦ ದ ದೀಪಾವಳಿ ಸಂಚಿಕೆಯಲ್ಲಿ ಪ್ರಕಟವಾಗಿದೆ ಎಂದು ಲೇಖಕರು ತಿಳಿಸಿದ್ದಾರೆ. ಈ ನಾಟಕವನ್ನು ಬೆಂಗಳೂರಿನ ರಂಗ ಕಲಾವಿದರು ಮುಂಬಯಿ ನಗರದ ರಂಗದ ಮೇಲೆ ತಂದು ಯಶಸ್ವಿಯಾಗಿದ್ದಾರೆ. Wilfred Owen ನ Strange meeting ಎಂಬ ಕವನದಿಂದ ಸ್ಫೂರ್ತಿ ಪಡೆದು 'ಎಲ್ಲೋ ಒಂದು ಕಡೆ' ಏಕಾಂಕ ರಚಿಸಿರುವುದಾಗಿ ಸಹ ಲೇಖಕರು ಪ್ರಾಮಾಣಿಕವಾಗಿ ದಾಖಲಿಸಿದ್ದಾರೆ. ರಂಗ ಜಂಗಮ ದಿ.ಬಿ.ವಿ. ಕಾರಂತರಿಗೆ ಅರ್ಪಿತವಾಗಿರುವ ಕೃತಿಗೆ ಮೌಲಿಕವಾದ ಮುನ್ನುಡಿಯನ್ನು ಡಾ.ಕೆ. ಮರುಳಸಿದ್ದಪ್ಪನವರು ಬರೆದಿದ್ದಾರೆ.

ಇದು ಕಾರಣ : ಮೊದಲ ನಾಟಕ 'ಇದು ಕಾರಣ' ಗ್ರಾಮಾಂತರ ಪ್ರದೇಶದಲ್ಲಿ ಸಹಜವಾಗಿ ನಡೆಯುವ ನೇರ ವಾರಸುದಾರರಿಲ್ಲದೆ ಮೃತವಾದ ವ್ಯಕ್ತಿಯ ಶವ ಸಂಸ್ಕಾರದ ಸುತ್ತ ನಡೆಯುವ ಮನುಷ್ಯ ಸಂಬಂಧಗಳ ಗೋಜಲಾಗಲಿ ಇಲ್ಲಿಲ್ಲ. ಇಲ್ಲಿ ಎಲ್ಲವೂ ನೇರ, ಸರಳ. ಸತ್ತ ರಂಗಪ್ಪನಿಗೆ ಮಕ್ಕಳಿರಲಿಲ್ಲ. ಆತನ ಅಂತ್ಯ ಸಂಸ್ಕಾರಕ್ಕೆ ಬಂಧುಗಳು ಬರಲಿ ಎಂಬ ಸಹಜ ಆಶಯ ನೆರೆಹೊರೆಯವರದು. ಅಂತ್ಯಕ್ರಿಯೆ ಆಗುವವರೆಗೆ ನೆರೆಹೊರೆ ಒಲೆಹೊತ್ತಿಸುವಂತಿಲ್ಲ. ಕ್ರಿಯಾವಿಧಿ ಬೇಗ ಮುಗಿಯಲಿ ಎಂಬ ಆತುರ ಅಕ್ಕಪಕ್ಕದವರಿಗೆ. ರಂಗಪ್ಪನ ಸಾಕುಮಗ ಕೆಂಚ ವಾಚಾಳಿ, ನಾಟಕದ ಪಾತ್ರಗಳ ನಡುವಿನ ಕೊಂಡಿಯಂತೆ ಮೊದಲಿಂದ ಕೊನೆಯವರೆಗೆ ಕಂಡು ಬರುತ್ತಾನೆ. ಪಕ್ಕದೂರಿನಿಂದ ಬರುವ ಬಂಧುಗಳಿಗೋ ರಂಗಪ್ಪ ಆಸ್ತಿ ಮೇಲೆ ಕಣ್ಣು. ಆತನ ಅಂತಿಮ ಸಂಸ್ಕಾರದ ಹಕ್ಕಿಗಾಗಿ ಲಜ್ಜೆ ಗೆಟ್ಟ ವರ್ತನೆ, ಜಗಳ, ನಾಟಕದಲ್ಲಿ ಕಂಡು ಬರುವ ಎಲ್ಲ ಪಾತ್ರಗಳಿಗೂ ಅವರದೇ ಆದ ಚಿಂತೆಗಳು. ರಂಗಪ್ಪನ ಅಗಲಿಕೆಯ ದುಃಖ ಯಾರನ್ನೂ ಕಾಡಿದಂತಿಲ್ಲ. ಪರಂಪರೆ, ಸಂಪ್ರದಾಯಗಳ ಹಿನ್ನೆಲೆಯಲ್ಲಿ ಹೆಣದ ಸುತ್ತಲಿನ ಎಲ್ಲ ಪಾತ್ರಗಳೂ ಅಸಂಗತವಾಗಿ ವರ್ತಿಸುತ್ತವೆ. ಬದುಕಿನ ಅಸ್ತಿತ್ವದ ಗಹನ ಚರ್ಚೆಯಾಗಲಿ, ಸಾವಿನ ಕುರಿತ ಭಯ ಆತಂಕಗಳಾಗಲಿ ಕಂಡುಬರದೆ ಕೆಲವು ಮೂಲಭೂತ ಪ್ರಶ್ನೆಗಳಿಗೆ ದಾರಿಯಾಗುತ್ತದೆ. ನಾಟಕದ ಪ್ರಾರಂಭ ಎಷ್ಟು ಧ್ವನಿ ಪೂರ್ಣವಾಗಿದೆ ಎಂದರೆ, ಕೇಂದ್ರ ವ್ಯಕ್ತಿಯ ಸಾವು ಯಾರನ್ನೂ ತಟ್ಟದೆ, ಸಹಜ ಪ್ರಹಸನವಾಗಿ ಮನುಷ್ಯ ಕ್ರೌರ್ಯದ ದುರಂತವಾಗಿ ಕಂಡು ಬರುತ್ತದೆ. ದುರಂತ ಪ್ರಹಸನದ ಅಭಿವ್ಯಕ್ತಿಯಾಗಿ ಏಕಾಂಕ ಓದುಗರನ್ನು, ಪ್ರೇಕ್ಷಕರನ್ನು ಆದ್ರಗೊಳಿಸುತ್ತದೆ.

ಏಕಾಂಕವಾದರೂ ೧೩ ಪಾತ್ರಗಳಿಂದ ಕೂಡಿದ ನಾಟಕ ನಿಧಾನವಾಗಿ ತೆರೆದುಕೊಳ್ಳುತ್ತಾ ಹೋಗುತ್ತದೆ. ಕೆಂಚನ ಅಸಂಬದ್ಧ ಚುರುಕು ಸಂಭಾಷಣೆ ನಾಟಕದ ಚುರುಕಿನ ಓಟಕ್ಕೆ ಪೂರಕವಾಗಿದೆ. ಆರಂಭದಲ್ಲಿಯೇ ನಾಟಕದ ವಸ್ತು, ಹಿನ್ನೆಲೆ ಪ್ರೇರಣೆ, ಪ್ರಚೋದನೆಗಳು ನಾಟಕಕಾರನ ಮನೋಭೂಮಿಕೆಯನ್ನು ಅನಾವರಣಗೊಳಿಸುತ್ತವೆ. ನಿರ್ದೇಶಕರೂ ಆಗಿರುವ ಶ್ರೀನಿವಾಸರಾಜು ಅವರ ಶ್ರದ್ಧೆಯನ್ನು ನಾಟಕ ರಚನೆಯಲ್ಲಿ ಕಾಣಬಹುದು. ನಾಟಕದಲ್ಲಿ ಮಾತೇ ಮುಖ್ಯ. ಸಂಭಾಷಣೆ ಜೀವಂತವಾಗಿದ್ದಷ್ಟೂ ಪ್ರೇಕ್ಷಕರನ್ನು ಕುತೂಹಲಿಗಳನ್ನಾಗಿಸುತ್ತದೆ. ಚಿಕ್ಕಚಿಕ್ಕ ವಾಕ್ಯಗಳು. ಅನಿರೀಕ್ಷಿತ ತಿರುವುಗಳು, ಏಕಾಂಕದ ವಿಶಿಷ್ಟತೆಗಳು. ಅಂತಿಮ ಸಂಸ್ಕಾರಕ್ಕಾಗಿ

ಕಾದಿರುವ ಹೆಣದ ಸುತ್ತಲೇ ಪರಿಭ್ರಮಿಸುವ ಎಲ್ಲ ಪಾತ್ರಗಳೂ ಮುಂದೇನು? ಎಂಬ ಕುತೂಹಲವನ್ನು ಉಳಿಸಿಕೊಳ್ಳುತ್ತಲೇ ಹೇಗೋ ಸಂಸ್ಕಾರ ಪೂರೈಸಿದರೆ ಸಾಕು, ಎಂಬ ಭಾವನೆಯನ್ನು ಓದುಗರಲ್ಲಿ ಹುಟ್ಟಿಸುತ್ತವೆ. ಏಕಾಂಕದಲ್ಲಿ ಕಂಡುಬರುವ ಮಾತಿನ ಏರಿಳಿತಗಳು, ಸ್ಪಷ್ಟತೆ, ಖಚಿತವಾದ ಬೆಳಕಿನ ವಿನ್ಯಾಸ, ರಂಗಚಲನೆ, ರಂಗ ಪರಿಕರ, ವೇಷಭೂಷಣಗಳು ಓದುಗನ ಮನಸ್ಸಿನಲ್ಲಿ ಮೂಡಿಮರೆಯಾಗುತ್ತವೆ. ಶ್ರೀನಿವಾಸರಾಜು ಅವರು ನಿರ್ದೇಶಕರಾಗಿಯೂ ಯಶಸ್ವಿಯಾಗಿದ್ದಾರೆ. ಅವರಿಂದ ಪಡೆದ ರಂಗಶಿಕ್ಷಣದಿಂದ ಇಂದು ಅನೇಕರು ಕಿರುತೆರೆ, ಹಿರಿತೆರೆ, ನಾಟಕಗಳಲ್ಲಿ ತಾರೆಗಳಾಗಿ ಮಿಂಚುತ್ತಿದ್ದಾರೆ.

**ಪ್ರತಿಯೊಬ್ಬ ನಾಟಕ ಕರ್ತೃ** ಒಬ್ಬ ಕವಿ ಎನ್ನುವ ಮಾತಿದೆ. ಹಾಗೆ ನೋಡಿದರೆ ಕಳೆದ ಶತಮಾನದ ಆರಂಭದ ನಾಟಕಗಳು ಎಂದರೆ ಸಂಗೀತ ನಾಟಕಗಳೇ. ಸಂಭಾಷಣೆಗಿಂತ ಹಾಡುಗಳೇ ಮುಖ್ಯವಾಗಿದ್ದ ದಿನಗಳು ಅವು. ಆಧುನಿಕ ಕಾಲದಲ್ಲಿಯೂ ನಾಟಕ ರಚನಕಾರರು ಕವಿಯ ಧ್ಯಾನಸ್ಥ ಸ್ಥಿತಿಯನ್ನೇ ಆವಾಹಿಸಿಕೊಂಡು ಸಮಾಜ ಮುಖಿಯಾಗಿ ನಾಟಕ ರಚನೆಯಲ್ಲಿ ತೊಡಗಬೇಕಾಗುತ್ತದೆ. ಬೇರೆಲ್ಲ ಸಾಹಿತ್ಯ ಪ್ರಕಾರಗಳಿಗಿರುವಂತೆ ನಾಟಕ ಕೃತಿಗೂ ತನ್ನದೇ ಆದ ಸಾಮಾಜಿಕ ಜವಾಬ್ದಾರಿ ಮತ್ತು ಹೊಣೆಗಾರಿಕೆ ಇರುತ್ತದೆ. ಪ್ರಯೋಗಶೀಲ ಮನಸ್ಸು ಸದಾ ಸೃಜನಕ್ರಿಯೆಯಲ್ಲಿ ತೊಡಗಿರುತ್ತದೆ. ಶ್ರೀನಿವಾಸರಾಜು ಅವರ ಏಕಾಂಕಗಳು, ಮುಖ್ಯವಾಗಿ ಕಾಲೇಜು ವಿದ್ಯಾರ್ಥಿಗಳಿಗಾಗಿ ರಚಿಸಿದ ನಾಟಕಗಳಾದರೂ ಸಾವಿನ ಸುತ್ತ ಪರಿಭ್ರಮಿಸುವ ಅವರ ರಚನೆಗಳು ವಿದ್ಯಾರ್ಥಿಗಳಲ್ಲಿರುವ ಸುಪ್ತಪ್ರತಿಭೆಯನ್ನು ಹೊರತರುವುದರಲ್ಲಿ ಸಫಲವಾಗಿರುವುದು ವಿಶೇಷ. ಪ್ರತಿಯೊಬ್ಬರಲ್ಲೂ ಒಬ್ಬ ಕಲಾವಿದನಿರುತ್ತಾನೆಂಬ ವಾಸ್ತವ ಸತ್ಯವನ್ನು ಲೇಖಕರು ಸಮರ್ಥವಾಗಿ ಕಂಡುಕೊಂಡಿದ್ದಾರೆ. ಏಕಾಂಕಗಳಾದರೂ ವಿದ್ಯಾರ್ಥಿಗಳ ಅಭಿನಯ ಪ್ರದರ್ಶನಕ್ಕೆ ಸಾಕಷ್ಟು ಅವಕಾಶ ಒದಗಿಸಿದ್ದಾರೆ. ಕಳೆದ ೩೫ ವರ್ಷಗಳಿಂದಲೂ ರಂಗಭೂಮಿಯೊಂದಿಗೆ ಭಾವನಾತ್ಮಕ ಸಂಬಂಧಗಳನ್ನು ಇರಿಸಿಕೊಂಡಿರುವ ಶ್ರೀನಿವಾಸರಾಜು ಅವರು ತಮಗೆ ಆಶ್ರಯ ನೀಡಿದ ಕ್ರೈಸ್ಟ್ ಕಾಲೇಜಿಗೆ ಒಂದು ರೀತಿಯ ಸಾಹಿತ್ಯಿಕ, ಸಾಂಸ್ಕೃತಿಕ ಮೆರುಗನ್ನು ನೀಡಿದ್ದಾರೆ. ಅವರ ಕೊಡುಗೆಯನ್ನು ಧಾರವಾಡದ ಡಾ. ದ.ರಾ. ಬೇಂದ್ರೆ ರಾಷ್ಟ್ರೀಯ ಪ್ರತಿಷ್ಠಾನ ಗುರುತಿಸಿ ಗೌರವಿಸಿರುವುದೇ ಈ ಮಾತಿಗೆ ಸಾಕ್ಷಿಯಾಗಿದೆ.

**ಇದು ಕಾರಣ** ಏಕಾಂಕ, ಮಾನವೀಯ ಸಂಬಂಧಗಳನ್ನು ಕುರಿತು ವಿಭಿನ್ನವಾಗಿ ಚರ್ಚಿಸುತ್ತದೆ. ಆರಂಭದ ದೃಶ್ಯದ ಮೊದಲ ವಾಕ್ಯದಲ್ಲೇ ಇಡೀ ನಾಟಕದ ವಸ್ತು ಅನಾವರಣ ಗೊಳ್ಳುತ್ತದೆ. ಬದುಕಿದ್ದಾಗ ಬಂಧುಗಳಿಂದ ಬೇರೆಯಾಗಿದ್ದ ವ್ಯಕ್ತಿ ಸತ್ತನಂತರ ವಾರಸುದಾರಿಕೆಯ ನೆಪದಲ್ಲಿ ಹೇಗೆ ಹತ್ತಿರದ ಬಂಧುವಾಗುತ್ತಾನೆ, ಎಂಬ ವಸ್ತುವನ್ನು ಶ್ರೀನಿವಾಸರಾಜು ನಿರ್ವಹಿಸುವ ರೀತಿ ವಿಸ್ಮಯವನ್ನುಂಟು ಮಾಡುತ್ತದೆ. ಕೆಂಚ ಎಂಬ ಬಾಯಿ ಬಡುಕ ಅರೆ ಹುಚ್ಚನ ಪಾತ್ರದ ಮೂಲಕವೇ ಇಡೀ ನಾಟಕ ತನ್ನ ಗತಿಯನ್ನು ಕಂಡುಕೊಳ್ಳುವ ವಿಶಿಷ್ಟ ತಂತ್ರವನ್ನು ಶ್ರೀನಿವಾಸರಾಜು ಸಮರ್ಥವಾಗಿ ಪ್ರಯೋಗಿಸಿದ್ದಾರೆ. ಹೆಣದ ಅಕ್ಕಪಕ್ಕದ ಮನೆಯವರ ಸಂಭಾಷಣೆಗಳಲ್ಲಿಯೂ ಸತ್ತವನ ವಿಶ್ಲೇಷಣೆಗಿಂತ, ಅಂತ್ಯಸಂಸ್ಕಾರ ಬೇಗ ಆದರೆ ಸಾಕು, ಒಲೆಗೆ ಬೆಂಕಿ ಹಾಕಬಹುದು ಎಂಬ ವಿಷಯವೇ ಪ್ರಧಾನವಾಗಿ ಒಂದು ರೀತಿಯ ವಿಷಾದ

ಮೂಡುತ್ತದೆ. ಸತ್ತವ್ಯಕ್ತಿಯ ವಾರಸುದಾರರು ಬಂದ ನಂತರ ನಾಟಕ ಮತ್ತೊಂದು ತಿರುವು ಪಡೆಯುತ್ತವೆ. ಮೃತನ ಆಸ್ತಿ ಪಡೆಯುವ ಹುನ್ನಾರವನ್ನು ಸಹೋದರ ಮತ್ತು ಅಣ್ಣನ ಮಗನ ಸಂಭಾಷಣೆಯಲ್ಲಿ ಗಮನಿಸಬಹುದು. ತುಣುಕುಮಾತುಗಳು, ಮಾತಿನ ಬಲದ ಮೇಲೆ ನಿಂತ ಪಾತ್ರಗಳು, ವಸ್ತು ಹಳೆಯದಾದರೂ, ನಿರೂಪಣೆಯಲ್ಲಿರುವ ನಾವೀನ್ಯತೆ, ಆಡುಮಾತು, ವ್ಯಂಗ್ಯ ವಿಡಂಬನೆಯಿಂದ ಕೂಡಿದ ಗಂಭೀರ ಹಾಸ್ಯ, ನೋಡುವ ಕಣ್ಣಿಗೆ ಹೊಸ ಅರ್ಥಗಳನ್ನು ಹುಟ್ಟಿಸುತ್ತಲೇ ತೃಪ್ತಿ ನೀಡುತ್ತದೆ. ಏಕಾಂಕವೊಂದು ಅದ್ಭುತ ರಮ್ಯ ಸೃಷ್ಟಿ, ಸಮಯಪ್ರಜ್ಞೆ, ಪಾತ್ರಗಳನ್ನು ನಿರ್ವಹಿಸುವ ಸಾಮರ್ಥ್ಯ ಈ ಏಕಾಂಕದಲ್ಲಿ ಹರಳುಗಟ್ಟಿವೆ. ಪಾತ್ರಗಳ ಆಗಮನ ನಿರ್ಗಮನ, ಸನ್ನಿವೇಶಗಳು, ಮಾತುಗಳು ಕ್ಲಿಷ್ಟವಾಗದ ಹಾಗೆ ಪೋಣಿಸಲ್ಪಟ್ಟಿವೆ. ಕೇವಲ ೨೩ ಪುಟಗಳ ನಾಟಕದಲ್ಲಿ ೨೦ನೇ ಪುಟದವರೆಗೆ ಸಮಸ್ಯೆ ಬೆಳೆಯುತ್ತಲೇ ಹೋಗುತ್ತದೆ. ಇನ್ನೇನು ಪರಿಹಾರ ಕಾಣುವುದೇ ಇಲ್ಲವೇನೋ ಎನ್ನುವಾಗ ನಾಟಕದಲ್ಲಿ ವಕೀಲರ ಆಗಮನದೊಂದಿಗೆ ಅಂತಿಮ ತಿರುವು ಪಡೆಯುತ್ತದೆ. ಜೊತೆಗೆ ಸಮಸ್ಯೆಗೆ ಪರಿಹಾರವೂ ದೊರಕುತ್ತದೆ. ಕರ್ಮಾಂತರ ಯಾರು ಮಾಡಿದ್ರೂ ನಡೀತೈತೆ ನಮ್ಮ ಕೆಂಚ ಮಾಡಿದ್ರೂ ನಡೀತೈತೆ ಎಂಬ ವಕೀಲರ ಮಾತು, ಸಮಕಾಲೀನ ಪರಿಸ್ಥಿತಿಗೆ ಕನ್ನಡಿ ಹಿಡಿಯುತ್ತದೆ. ಉಯಿಲು ಬರೆದಿರುವ ವಿಷಯ ವಕೀಲರಿಂದ ತಿಳಿಯುತ್ತಿದ್ದಂತೆ, ವಾರಸುದಾರರಾಗಿ ಬಂದ ಇಬ್ಬರು ಬಂಧುಗಳೂ ತಮಗೇನೂ ಗಿಟ್ಟುವುದಿಲ್ಲವೆಂದು ಷರಟು ಹಾಕಿಕೊಂಡು ನಿರ್ಗಮಿಸುತ್ತಾರೆ. ಕೊನೆಯಲ್ಲಿ ಕೆಂಚನ 'ಕಾರ್ಪೋರೇಷನ್ ವ್ಯಾನ ಬಂತು!' ಮಾತಿನೊಂದಿಗೆ ತೆರೆ ಬೀಳುತ್ತದೆ. ನಾಟಕ ಅಳಿಯುತ್ತಿರುವ ಸಂಪ್ರದಾಯದ ಮುನ್ಸೂಚನೆಯಾಗಿ ಯಶಸ್ವಿಯಾಗಿದೆ.

### *ಎಲ್ಲೋ ಒಂದು ಕಡೆ :*

ಆಂಗ್ಲ ಲೇಖಕ ವಿಲ್‌ಫ್ರೆಡ್ ಓವನ್‌ನ 'ಸ್ಟ್ರೇಂಜ್ ಮೀಟಿಂಗ್' ಕವನದ ಸ್ಫೂರ್ತಿಯಿಂದ ರಚಿತವಾದ ೨ನೇ ನಾಟಕ "ಎಲ್ಲೋ ಒಂದು ಕಡೆ" ಇತ್ತೀಚಿನ ಬೆಳವಣಿಗೆಯಾದ, ಸಣ್ಣಕಥೆ, ಕಾದಂಬರಿ, ಪ್ರಸಂಗಗಳನ್ನು ಆಧರಿಸಿ ನಾಟಕ ರಚಿಸುವ ಸಂಪ್ರದಾಯಕ್ಕೆ ಮಾದರಿಯಾಗಿ ಮೂಡಿ ಬಂದಿದೆ. ಒಂದು ಕವನ, ೨೬ ಪುಟಗಳ ದೀರ್ಘ ಏಕಾಂಕ ಸೃಷ್ಟಿಗೆ ವಸ್ತುವಾಗಿದೆ ಎಂಬುದು ಲೇಖಕರ ಕಲ್ಪನೆ ಮತ್ತು ಸೃಜನ ಶೀಲತೆಗೆ ಸಾಕ್ಷಿಯಾಗಿದೆ. ಮುಸ್ಲಿಂರ ಆಳ್ವಿಕೆಯಲ್ಲಿ ನಡೆದ ಪ್ರಸಂಗವನ್ನು ದೇಸೀ ಪಾತ್ರಗಳ ಮೂಲಕ ಚಿತ್ರಿಸುವ ಚಿ. ಶ್ರೀನಿವಾಸರಾಜು ಅವರ ಪ್ರತಿಭೆ ಇಲ್ಲಿ ಹರಳುಗಟ್ಟಿದೆ. ನಮ್ಮದಲ್ಲದ ಸಂಸ್ಕೃತಿಯ ಕೆಲವು ಪಾತ್ರಗಳು, ಅವುಗಳ ವರ್ತನೆ, ಸಂಭಾಷಣೆಗಳಲ್ಲಿ ಆಂಗ್ಲ ನಾಟಕಗಳ ಛಾಯೆಯನ್ನು ಕಾಣಬಹುದು. ಎಂದಿನಂತೆ ಈ ನಾಟಕವೂ ಸಾವಿನ ದುರಂತ ಚಿತ್ರಣವನ್ನು ಪ್ರಧಾನವಾಗಿ ಚಿತ್ರಿಸುತ್ತದೆ. ಅರಿಯದ ದ್ವೀಪದಲ್ಲಿ ಬಲವಂತವಾಗಿ ಲಂಗರು ಹಾಕಿದ ಯುದ್ಧದ ದೋಣಿಯಲ್ಲಿರುವ ನವಾಬ, ಅಧಿಕಾರಿ, ಸೇವಕ, ಅಂಗರಕ್ಷಕರ ಮನಸ್ಥಿತಿಗಳ ಹಸಿ ಹಸಿ ಚಿತ್ರಣ ವಿಸ್ಮಯ ಮೂಡಿಸುತ್ತದೆ. ಸಹಜವಾಗಿ ಒಳನಾಡಿಗರು ಕಾಣದ ಜಗತ್ತನ್ನು ಅನಾವರಣಗೊಳಿಸುತ್ತದೆ. ಜೀವ ಅಪಾಯದಲ್ಲಿರುವಾಗ ಹಡಗಿನಲ್ಲಿರುವ ಮದ್ಯಕ್ಕಿಂತಲೂ, ಒಂದು ತುಂಡು ಬ್ರೆಡ್ ಎಷ್ಟು ಅಮೂಲ್ಯ ಎಂಬುದರ ಚಿತ್ರಣ ಅದ್ಭುತವಾಗಿ ಮೂಡಿಬಂದಿದೆ. ಹೆಣ್ಣುಹೆಂಡಗಳು ಯುದ್ಧಭೂಮಿಯಲ್ಲಿ ಎಷ್ಟು ಚೀಪ್ ಎಂಬುದು, ಪ್ರಾಣಭೀತಿಯಿಂದಾಗಿ ಯಾರೂ ಯಾರನ್ನೂ ನಂಬದಿರುವಂತಹ ವಾತಾವರಣದಲ್ಲಿ

ತನ್ನ ಪ್ರಾಣ ಉಳಿಸಿಕೊಳ್ಳಲು ನಡೆಸುವ ಹೆಣಗಾಟಗಳು ಪರಿಣಾಮಕಾರಿಯಾಗಿವೆ. ಬಳಸಿರುವ ಭಾಷೆ ಸಶಕ್ತವಾಗಿದೆ. ಒಂದೊಂದು ಪಾತ್ರದ ಅಂತರಂಗದಲ್ಲಿ ನಡೆಯುವ ತುಮುಲ, ಸೈನಿಕರ ಖಾಸಗಿ ಬದುಕಿನ ಚಿತ್ರಣ, ನವಾಬನ ವಿಷಯ ಲೋಲುಪತೆ, ಏಕಾಂಗಿಯಾಗಿ ದ್ವೀಪದಲ್ಲಿ ಸಿಕ್ಕಿರುವಾಗಲೂ ನವಾಬನ ತುರ್ತುಘೋಷಣೆ, ಚಿತ್ರ ರಚಿಸುವಂತೆ ಆಜ್ಞಾಪಿಸುವುದು ನವಾಬ ರಿದ್ದಲ್ಲಿಯೇ ರಾಜಧಾನಿ ಎಂಬ ಕಲ್ಪನೆಗಳು ವಿಚಿತ್ರವಾಗಿ, ವಿಕೃತ ಮನಸ್ಸಿನ ಬಡಬಡಿಕೆಯಾಗಿ ಕಂಡುಬರುತ್ತದೆ. ಯುದ್ಧ ಯಾರು ಮಾಡಿದರೂ, ಯಾಕೆ ಮಾಡಿದರೂ, **ಸಿಪಾಯಿಗಳಿಗೆ ಸಾಯುವುದು ತಪ್ಪಿದ್ದಲ್ಲ** ಎಂಬ ಮಾತಿನಲ್ಲಿ ಬದುಕಿನ ಕಠೋರ ಸತ್ಯವನ್ನು ಕಾಣಿಸುತ್ತಾರೆ. ವಜೀರ ಹಮೀದ್, ಬಸಯ್ಯ ಪಾತ್ರಗಳು ತಾವಾಡುವ ಭಾಷೆಯ ಮೂಲಕವೇ ನಾಟಕದ ಚಲನೆಗೆ ಕಾರಣವಾಗಿವೆ.

ನವಾಬನ ಮನಸ್ಥಿತಿಯ ಚಿತ್ರಣ ಅದ್ಭುತವಾಗಿ ಮೂಡಿಬಂದಿದೆ. ಪ್ರಜೆಗಳನ್ನು ಸಮೂಹ ಸನ್ನಿಯಲ್ಲಿರಿಸಲು ರಾಜರು ಮಾಡುವ ಎಲ್ಲ ಹುನ್ನಾರಗಳನ್ನೂ ಪ್ರಸ್ತುತ ರಾಜಕಾರಣಿಗಳೂ ಅನುಸರಿಸುತ್ತಿರುವ ವಾಸ್ತವ ಸತ್ಯವನ್ನು ನಾಟಕಕಾರರು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ದುರಂತದಲ್ಲಿ ಕೊನೆಗೊಳ್ಳುವ ನಾಟಕದಲ್ಲಿ ಹೊರಗೂ ಯುದ್ಧ, ಒಳಗೂ ಯುದ್ಧ...... 'ನಾನು ಯುದ್ಧವನ್ನು ಬಿಟ್ಟರೂ, ಯುದ್ಧ ನನ್ನನ್ನು ಬಿಡುತ್ತಿಲ್ಲ, ಓ ದೇವರೇ ಕಾಪಾಡು' ಎಂಬ ನವಾಬನ ಮಾತುಗಳು ಯುದ್ಧದ ಭೀಕರತೆಯನ್ನು ಪರಿಣಾಮಗಳನ್ನು ತಿಳಿಸುತ್ತದೆ. 'ಇವರು ಇಂದು ಸತ್ತರು ನಾನೋ ಎಂದೋ ಸತ್ತೆ' ಎಂಬ ಮಾತು ಬದುಕಿನ ನಶ್ವರತೆಯ ವಿಡಂಬನೆಯಾಗಿ ಚಿತ್ರಿತವಾಗಿದೆ. ಯಾರು ಸತ್ರೇನು ಜ್ವಾಳದ ಹೊಲ ತೆನೆ ತುಂಬಿಕೊಂಡು ತೂಗಾಡ್ತಾವು ಎಂಬ ಲೇಖಕರ ಮಾತು ಬದುಕಿನ ಬಗ್ಗೆ ಅವರಿಗಿರುವ ಜೀವನ ಪ್ರೀತಿಯನ್ನೂ, ಜಗತ್ತಿನ ಆಶಾಕಿರಣವಾಗಿ ಚಿತ್ರಿಸಿರುವುದನ್ನು ಕಾಣಬಹುದು.

ಸಮಕಾಲೀನ ಘಟನೆಗಳು, ಸನ್ನಿವೇಶಗಳಿಗೆ ಮಾನವೀಯ ಅನುಕಂಪೆಯ ಸಂವೇದನಾಶೀಲ ಲೇಖಕ ಹೇಗೆ ಪ್ರತಿಕ್ರಿಯಿಸಬಹುದೆಂಬ ಪ್ರಶ್ನೆಗೆ ಶ್ರೀನಿವಾಸರಾಜು ತಮ್ಮ ಏಕಾಂಕಗಳ ಮೂಲಕ ಉತ್ತರಿಸಿದ್ದಾರೆ. ಅವರ ನಾಟಕಗಳಲ್ಲಿ ಪಾತ್ರಗಳು ಸಹಜವಾಗಿ ಚಿತ್ರಿತವಾಗಿವೆ. ಮನುಷ್ಯರ ಅಂತರಂಗವನ್ನು ಅನಾವರಣಗೊಳಿಸುವ ಮಹತ್ವದ ಕಾರ್ಯವನ್ನು ಏಕಾಂಕಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಎರಡು ಏಕಾಂಕಗಳೂ ಸಾವಿನ ಸುತ್ತ ಪರಿಭ್ರಮಿಸುತ್ತವೆ. ಮೊದಲ ನಾಟಕ ಸಾವಿನೊಂದಿಗೆ ಪ್ರಾರಂಭವಾಗಿ, ಅಂತ್ಯಸಂಸ್ಕಾರ ಪ್ರಧಾನ ಸಮಸ್ಯೆಯಾಗಿ ನಗರಸಭೆ ಹೆಣಸಾಗಿಸುವ ವಾಹನದ ಆಗಮನದೊಂದಿಗೆ ಮುಕ್ತಾಯವಾಗುತ್ತದೆ. ಎರಡನೇ ನಾಟಕ ಯುದ್ಧದ ಕ್ರೌರ್ಯಗಳನ್ನು, ಅದರಿಂದುಂಟಾಗುವ ಸಮಸ್ಯೆಗಳ ಆಳಕ್ಕೆ ಇಳಿದು ಸಾವಿನೊಂದಿಗೆ ಕೊನೆಗೊಳ್ಳುತ್ತದೆ. ಸಾವು ಬದುಕಿನ ಪಾಠಗಳನ್ನು ಕಲಿಸುತ್ತದೆ. ಸಾವು, ಬದುಕಿನ ಸಾತತ್ಯಕ್ಕೆ ಪೂರಕ, ಎಂಬದು ಲೇಖಕರ ನಿಲವು. ಸಾವಿನೊಂದಿಗೆ ನಾಟಕ ಮುಗಿದರೂ, ಸಮಸ್ಯೆಗಳು ಮುಕ್ತಾಯವಾಗದೇ ಉಳಿಯುತ್ತವೆ ಎನ್ನುವುದೇ ಬದುಕು.

ಚಿ.ಶ್ರೀನಿವಾಸರಾಜು ಅವರ ನಾಟಕಗಳಲ್ಲಿ ದಿನನಿತ್ಯದ ಬದುಕಿನ ಸಾಮಾನ್ಯ ಸಣ್ಣಪುಟ್ಟ ಸಂಗತಿಗಳೇ ಮೂಲದ್ರವ್ಯ. ಬೆಂಗಳೂರು, ಕೋಲಾರ ಭಾಗದ ಕನ್ನಡಭಾಷೆ ಬಳಸುವ ಮೂಲಕ

ಏಕಾಂಕಗಳಲ್ಲಿ ದೇಶೀಯತೆಗೆ ಒತ್ತು ನೀಡಿದ್ದಾರೆ. ಸಾಮಾನ್ಯ ಮನುಷ್ಯನ ಸಾಮಾನ್ಯ ಆಸೆಗಳನ್ನು, ಸ್ವಾರ್ಥ ಸಂಘರ್ಷಗಳನ್ನು ಚಿತ್ರಿಸಿದ್ದಾರೆ. ಕಳೆದ ಮೂರು ದಶಕಗಳ ಸಾಹಿತ್ಯ ಪರಿಚಾರಕರಾಗಿ ನಾಡಿನಾದ್ಯಂತ ಹಿರಿಕಿರಿಯ ಗೆಳೆಯರನ್ನು ಹೊಂದಿರುವ ಶ್ರೀನಿವಾಸರಾಜು ಯುವಪ್ರತಿಭೆಯನ್ನು ಹೊರತರುವುದರಲ್ಲಿ ಯಶಸ್ವಿಯಾಗಿದ್ದಾರೆ. ಹಲವಾರು ಏಕಾಂಕಗಳನ್ನು ರಚಿಸಿ, ನಿರ್ದೇಶಿಸಿ ಸದ್ದಿಲ್ಲದೆ ರಂಗ ಚಟುವಟಿಕೆಗಳಲ್ಲಿ ನಿರತರಾಗಿದ್ದಾರೆ. ಬಹುಪಾಲು ಅವರ ಎಲ್ಲ ನಾಟಕಗಳೂ ಹಲವಾರು ಪ್ರದರ್ಶನಗಳನ್ನು ಕಂಡಿವೆ. ಇತರ ಭಾಷೆಗಳಿಗೂ ಅನುವಾದವಾಗಿ ಪ್ರದರ್ಶನ ಗೊಂಡಿರುವುದು ವಿಶೇಷ. ಸೃಜನಶೀಲ ಸಾಹಿತ್ಯ ಪ್ರಕಾರಗಳಲ್ಲಿಯೂ ಕೈಯಾಡಿಸಿರುವ ಚಿ.ಶ್ರೀನಿವಾಸರಾಜು ಕನ್ನಡದ ಸಂಘಟಕರಾಗಿಯೂ ಕಂಡುಬರುತ್ತಾರೆ. ಅವರಿಂದ ಇನ್ನೂ ಅನೇಕ ಸತ್ವಶಾಲಿ ನಾಟಕಗಳು ಮೂಡಿಬರಲಿ ಎಂದು ಆಶಿಸುತ್ತೇನೆ.



## ಸಹಜ ಮುಗ್ಧತೆ – ಅಸಹಜ ವ್ಯವಸ್ಥೆ

● ಎಂ.ಕೆ. ಅನಿಲ್

**ಟಿ.** ಶ್ರೀನಿವಾಸರಾಜು ಅವರ 'ಹಳಿಯ ಮೇಲಿನ ಸದ್ದು' ಒಬ್ಬ 'ಸಾಮಾನ್ಯ' ಮನುಷ್ಯನ ದಿನನಿತ್ಯದ ಜಗತ್ತಿಗೆ ನಮ್ಮನ್ನೂ ಆಹ್ವಾನಿಸುತ್ತದೆ. ತನ್ನ ಹೊಟ್ಟೆಪಾಡಿಗಾಗಿ ಹೋಗೋ ಬರೋ ರೈಲುಗಳನ್ನು ಅವಲಂಬಿಸಿರುವ ರೈಲ್ವೆ ಗೇಟನ್ನು ಕಾಯುವ ಒಬ್ಬ ಕಾವಲುಗಾರನ ದುರಂತ ಇಲ್ಲಿ ಚಿತ್ರತವಾಗಿದೆ. ಕಾವಲುಗಾರನ ಹೆಂಡತಿ ಬ್ಯಾಟಮ್ಮ, ಅವರ ಮಗಳು ಅಮ್ಮು, ಅಂತೋನಪ್ಪ, 'ಪ್ರಜಾಯುದ್ಧಂ' ಯುವಕರು, ನಾಟಕದಲ್ಲಿ ಎಲ್ಲೂ ಕಾಣಿಸಿಕೊಳ್ಳದೇ ಆ ಜಗತ್ತನ್ನು ನಿಯಂತ್ರಿಸುತ್ತಿರುವ ಟ್ರಾಲಿ ಸಾಹುಕಾರ – ಎಲ್ಲ ಹಾಕಿಟ್ಟ ಹಳಿಗಳ ಮೇಲೆ ರೈಲು ಬಿಡುವವರೇ.

ನಾಟಕದ ಕೊನೆಯಲ್ಲಿ ಬ್ಯಾಟಮ್ಮ ಕಾವಲುಗಾರನನ್ನು ಕೊಲ್ಲುತ್ತಾಳೆ. ತನ್ನ ಗಂಡನ ಸಾವಿನಿಂದಲೇ ತನ್ನ ಮಗಳಿಗೊಂದು ಭವಿಷ್ಯವನ್ನು ಬ್ಯಾಟಮ್ಮ ಸೃಷ್ಟಿಸುವ ವ್ಯಂಗ್ಯದಲ್ಲಿ ನಾಟಕ ಕೊನೆಗೊಳ್ಳುತ್ತದೆ. ರೈಲು, ಬಾವುಟ ಹಳಿಗಳು ಬಡತನದ ಬದುಕು ಬ್ಯಾಟಮ್ಮನ ಎದುರಿಗೆ ಒಂದು 'ಅಸಹಜ' ಆಯ್ಕೆಯನ್ನು ಒಡ್ಡುತ್ತದೆ. ಕಾವಲುಗಾರ ಗಂಗಣ್ಣನ ಕುಟುಂಬದ ದುರಂತದ ಮೂಲವಿರುವುದು ಅವರ 'ಸಹಜ' ಆಕಾಂಕ್ಷೆಗಳಿಗೂ, ಅವರನ್ನು ಸುತ್ತುವರೆದ 'ಅಸಹಜ' ವ್ಯವಸ್ಥೆಗೂ ಇರುವ ಸಂಘರ್ಷದಲ್ಲಿ. ಆಧುನಿಕತೆಯ ಅನುಭವದಿಂದ ಎದುರಾದ 'ಸಹಜತೆ' – ಅಸಹಜತೆ'ಯ ಉದಾರ ಮಾನವತಾವಾದಿ ದ್ವಂದ್ವ ಈ ನಾಟಕದಲ್ಲೂ ಕಾಣಿಸಿಕೊಳ್ಳುತ್ತದೆ. ಹೀಗಾಗಿ 'ಸಹಜ' ಮುಗ್ಧತೆ ಒಂದು 'ಅಸಹಜ' ವ್ಯವಸ್ಥೆಯ ಬಲೆಯಲ್ಲಿ ಸಿಲುಕಿ ನಾಶವಾಗುತ್ತದೆ. 'ಅಸಹಜ ಕೃತ್ಯಗಳನ್ನು ಬಡತನದ 'ಸಹಜ' ಪರಿಣಾಮಗಳೆಂದು ಚಿತ್ರಿಸುವ ವರದಿಗಳನ್ನು ನಮ್ಮ ಪತ್ರಿಕೆಗಳಲ್ಲಿ ಆಗಾಗ ಗಮನಿಸಬಹುದು.



*(ಕನ್ನಡ ವಾರ್ಷಿಕ ೧೯೯೨*
*ಕನ್ನಡ ವಿಶ್ವವಿದ್ಯಾನಿಲಯ, ಹಂಪಿ)*

❑

# ಸಾಹಿತ್ಯದಲ್ಲಿ ಸಾಮಾಜಿಕ ಕಾಳಜಿ

● ಜಿ. ರಾಮಕೃಷ್ಣ

ಮಾನವತೆಯು ಸಾಹಿತ್ಯದ ಅವಿಚ್ಛಿನ್ನವಾದ ಅಂಗ. ಯಾವುದೇ ಸನ್ನಿವೇಶದಲ್ಲಿ ಅದು ಎಷ್ಟು ಗಾಢವಾಗಿದೆಯೆಂಬುದನ್ನು ತಿಳಿಯಲು ವಾಸ್ತವ ವಿದ್ಯಮಾನಗಳನ್ನು ಗ್ರಹಿಸಬೇಕಾಗುತ್ತದೆ. ಅತ್ಯಂತ ಕ್ರೌರ್ಯ ತುಂಬಿರುವ ಸಾಮಾಜಿಕ ನೆಲೆಯಲ್ಲಿ ಸಾಹಿತ್ಯವು ಸೃಷ್ಟಿಯಾದರೂ ಅದು ಮಾನವತೆಯ ಎಳೆಗಳನ್ನು ಗುರುತಿಸುತ್ತದೆಯೇ ವಿನಾ ಕ್ರೌರ್ಯವನ್ನು ಸಮರ್ಥಿಸುವುದಿಲ್ಲ; ಅದನ್ನು ಸಮರ್ಥಿಸುವಂತಹವರು ಸಾಹಿತ್ಯದ ರಚನೆಯಲ್ಲಿ ತೊಡಗುವುದಿಲ್ಲವೋ ಏನೋ. ಸಾಹಿತ್ಯದ ಒಂದು ಭಾಗವಾದ ಕತೆ–ಕಾದಂಬರಿಗಳನ್ನು ಗಮನಿಸಿ ಹೇಳುವುದಾದರೆ ಅವು ಯಾವುವೂ ಸಮಗ್ರವಾಗಿ 'ಸಮಾಜ' ಎಂಬುದನ್ನು ಪ್ರತಿಫಲಿಸಲಾರವು. ಒಬ್ಬ ಕಲಾವಿದನು ತನ್ನ ಕುಂಚದಿಂದ ಇಂದು ಮರವನ್ನು ಬಿಡಿಸಬಲ್ಲನೇ ಹೊರತು ಸಾಮಾನ್ಯೀಕೃತವಾದ 'ಮರ' ಎಂಬುದನ್ನು ಚಿತ್ರಿಸಲಾರನು. ಅಂತೆಯೇ ಸಾಹಿತಿಯು ಜನರನ್ನು ಬಿಂಬಿಸುವುದರ ಮೂಲಕವೇ ಸಮಾಜವನ್ನು ತೆರೆದಿಡಬೇಕಾಗುತ್ತದೆ. ಹಾಗೆ ಮಾಡುವಾಗ ಸಾಹಿತಿಯ ಸಾಮಾಜಿಕ ಚಿಂತನೆ, ಸಮಾಜದ ಬಗೆಗಿನ ಅವನ ಒಳ ಅರಿವು, ಶೋಧ, ಎಲ್ಲವೂ ಪರಿಕರಗಳಾಗಿ ಕೆಲಸ ಮಾಡುತ್ತವೆ. ಅಮೂರ್ತವಾದದ್ದೇನನ್ನೋ ಪ್ರತಿಪಾದಿಸಿ ಅವನು ಅದನ್ನೇ "ಸಮಾಜದ ಜನ" ಎನ್ನುವುದಿಲ್ಲ. ಹಾಗೆ ನೋಡಿದರೆ ಅವನ ಪಾತ್ರಗಳು ನೈಜವಾದುದಕ್ಕಿಂತಲೂ ಹೆಚ್ಚು ನೈಜವಾಗಿ ಪರಿಣಮಿಸುತ್ತವೆ. ನಾವೆಲ್ಲಾ ಅನುಭವಿಸುತ್ತಿರುವ ಲೋಕವನ್ನೇ ಸಾಹಿತ್ಯವು ನಮ್ಮ ಮುಂದೆ ಬಿಚ್ಚಿಡುವುದು ಅನಗತ್ಯವೆಂದು ವಾದಿಸುವವರು ವಿರಳ; ಆದರೂ ಅಂಥವರಿದ್ದಾರೆ. ಅವರಿಗೆ ಪ್ರತಿಯಾಗಿ ಒಂದು ಪ್ರಶ್ನೆ ಅನಿವಾರ್ಯ. ಈ ಲೋಕವನ್ನು ಅದಿರುವಂತೆ ಚಿತ್ರಿಸದಿದ್ದರೆ ಬೇರಾವ ಲೋಕವನ್ನು



ತಾನೆ ಸಾಹಿತ್ಯವು ಸೃಷ್ಟಿಸೀತು? ಕನಸಿನ ಲೋಕ ಇಲ್ಲವೆ ಸಾವಿನ ಲೋಕವನ್ನು ಮಾತ್ರವೇ ಆಧರಿಸಿ ಸಾಹಿತ್ಯ ಸೃಷ್ಟಿಯಾಗಬೇಕಾದ ಪರಿಸ್ಥಿತಿ ಒದಗಿಬಂದರೆ ಅದಕ್ಕೆ ಅಗ್ಗದ ಬೆಲೆಯನ್ನು ಕಟ್ಟುವುದು ತಪ್ಪಾಗುವುದಿಲ್ಲ.

ನಿಜ ಜೀವನದಲ್ಲಿ ಅನೇಕ ಹೋರಾಟಗಳಲ್ಲಿ ತೊಡಗಿಕೊಂಡು ಸಾಮಾಜಿಕ ನ್ಯಾಯಕ್ಕಾಗಿ ತಹತಹಿಸುವವರು ಕೆಲವರು ಸಾಹಿತ್ಯಾಭ್ಯಾಸ ಮಾಡುವಾಗ ಅದೇಕೋ ಶುದ್ಧ ಸಾಹಿತ್ಯದ ನಿಯಮಗಳನ್ನು ನಿರೂಪಿಸಿಬಿಡುತ್ತಾರೆ. ಲೆಬನಾನ್ ಮೇಲೆ ಇಸ್ರೇಲಿನ ಧಾಳಿಯನ್ನವರು ಖಂಡಿಸುತ್ತಾರೆ, ಬುಷ್ ಭಾರತಕ್ಕೆ ಬಂದರೆ ತೊಲಗಿಹೋಗು ಎನ್ನುತ್ತಾರೆ, ಮೀಸಲಾತಿಯ ಪರವಿರುತ್ತಾರೆ, ರೈತರ ಆತ್ಮಹತ್ಯೆಗಳು ಘಟಿಸಿದಾಗ ನಮ್ಮ ಆರ್ಥಿಕತೆಯನ್ನು ಟೀಕಿಸುತ್ತಾರೆ; ಆದರೆ ಸಾಹಿತ್ಯದ ವಿಮರ್ಶಾ ಸೂತ್ರಗಳು ಸಾಹಿತ್ಯದಿಂದಲೇ ಆಂತರಿಕವಾಗಿ ಹೊರಹೊಮ್ಮ ಬೇಕೆಂದು ಬಯಸುತ್ತಾರೆ. ನಾರ್ತ್ರಾಪ್ ಫ್ರೈ ಪ್ರತಿಪಾದಿಸಿದ್ದ ಸೂತ್ರ ಅವರಿಗೆ ಮಾನ್ಯ. ಅದು ಹೀಗಿದೆ: "ತನ್ನದೇ ಆದ ಕಲ್ಪನಾ ವಿಶ್ವದಲ್ಲಿದ್ದು ಕೆಲಸ ಮಾಡುವುದಷ್ಟೇ ಅಲ್ಲ, ಒಬ್ಬ ವಿಮರ್ಶಕನು ಅದನ್ನು (ಅಂದರೆ, ಕಲ್ಪನಾ ವಿಶ್ವವನ್ನು) ನಿರ್ಮಿಸಿಕೊಳ್ಳಲು ಸಾಮರ್ಥ್ಯವನ್ನು ಹೊಂದಿರಬೇಕು." ಸಾಹಿತ್ಯದ "ಸ್ವಕೀಯ ವಿಶ್ವ" ಎಂಬ ಪರಿಭಾಷೆಯನ್ನು ಅಂಗೀಕರಿಸಿದರೆ ಆಗ ಎರಡು ಸಂಗತಿಗಳನ್ನು ಗಮನಿಸಬೇಕು : (ಅ) ಆಯಾ ಕಾಲದ ಚಾರಿತ್ರಿಕ ಸನ್ನಿವೇಶಕ್ಕೂ ಸಾಹಿತ್ಯಕ್ಕೂ ಯಾವುದೇ ನಿಕಟವಾದ ಸಂಬಂಧವಿಲ್ಲ ಎನ್ನುವುದೊಂದು, ಮತ್ತು (ಆ) ಸಾಹಿತ್ಯದಿಂದ ಕ್ರಿಯಾಶಾಲಿತ್ವ ಮೂಡುವುದಿಲ್ಲ ಎಂಬುದಿನ್ನೊಂದು. ಇದನ್ನು ಬೇರೊಂದು ರೀತಿಯಲ್ಲಿ ವ್ಯಾಖ್ಯಾನಿಸಿಕೊಳ್ಳಬಹುದು: (ಅ) ಅಕ್ಕಮಹಾದೇವಿ ಅಥವಾ ಲಕ್ಷ್ಮೀಶ ಅಂದು ಪರಿಭಾವಿಸಿದ ರೀತಿಯಲ್ಲಿ ಇಂದು ಸಹ (ಅವರಿದ್ದಿದ್ದರೆ) ಪರಿಭಾವಿಸಿಕೊಳ್ಳುತ್ತಿದ್ದರು ಮತ್ತು ಇಂದಿನ ಕವಿಗಳು ಅದೇ ರೀತಿಯ ತದ್ರೂಪಿಗಳಾಗಿ ಸಾಹಿತ್ಯ ರಚನೆ ಮಾಡಬಹುದು. ವಸ್ತುಸ್ಥಿತಿ ಹಾಗಿದೆಯೇ ಎಂಬುದನ್ನು ಪರೀಕ್ಷಿಸಿ ನೋಡಿಕೊಳ್ಳಲು ಅಡ್ಡಿಯಿಲ್ಲ (ಆ) ಒಬ್ಬ ವ್ಯಕ್ತಿ ದಿನವಿಡೀ ಯಾವುದೇ ಪ್ರತಿಭಟನೆಯಲ್ಲಿ ಭಾಗವಹಿಸಿ ಆಳುವ ವರ್ಗದ ಅನೈತಿಕ ಆಡಳಿತವನ್ನು ಖಂಡಿಸುತ್ತಾನೆ ಮತ್ತು ಸಂಜೆ ಮನೆಗೆ ಹೋಗಿ ಟಿ.ಎಸ್. ಎಲಿಯಟ್‌ನಂತೆ ಖಿನ್ನತೆಯ ಪದ್ಯಗಳನ್ನು ಬರೆಯು ತ್ತಾನೆ. ಇದು ಸಮಂಜಸವೇ ಎಂಬುದು ಪ್ರಶ್ನೆ.

ಸಾಹಿತಿಯೊಬ್ಬನನ್ನು ವಾಸ್ತವವಾದಿಯೆಂದು ಬಣ್ಣಿಸಿದರೆ ಅದು ಆ ಕಲಾ ಪ್ರಕಾರವನ್ನು ಹೀಯಾಳಿಸಿದಂತೇನೂ ಆಗುವುದಿಲ್ಲ. ವಾಸ್ತವವಾದದ್ದೆಲ್ಲಾ ನಮಗೆ ಪೂರ್ತಿಯಾಗಿ ಅರ್ಥವಾಗು ತ್ತದೆಯೆಂಬ ವಿಶ್ವಾಸವೂ ಸಲ್ಲದು. ಆದರೆ ಅದು ರಾಡಿ ಎಬ್ಬಿಸುವ ಕೆಲಸವಾಗಬೇಕೆಂಬ ಅಪೇಕ್ಷೆ ಅಥವಾ ನಿರ್ಬಂಧವೂ ಇಲ್ಲ. ಅಯನೆಸ್ಕೋ ಒಮ್ಮೆ ಉದ್ಗರಿಸಿದ್ದನಂತೆ: "ಅದು ಸಾಮಾಜಿಕ ವಾಸ್ತವತೆಯಾಗಿರಲಿ ಅಥವಾ ಬೇರಾವುದೋ ತರಹ ವಾಸ್ತವತೆ ಇರಲಿ, ಅದು ವಾಸ್ತವತೆಯ ಆಚೆಗೆ ಏನನ್ನೂ ಗ್ರಹಿಸ ಹೋಗುವುದಿಲ್ಲ. ಅದು ವಾಸ್ತವತೆಯನ್ನು ಮೊಟಕು ಗೊಳಿಸಿಬಿಡುತ್ತದೆ ಮತ್ತು ನಮಗೆ ಮೂಲಭೂತವಾದ ಪ್ರಖರ ಸತ್ಯಗಳನ್ನು ಅದು ಲೆಕ್ಕಕ್ಕೇ ತೆಗೆದುಕೊಳ್ಳುವುದಿಲ್ಲ. ಉದಾಹರಣೆಗೆ, ಪ್ರೇಮ, ಸಾವು ಮತ್ತು ವಿಸ್ಮಯ. ವಾಸ್ತವತೆಯ ತತ್ತ್ವವು ಮನುಷ್ಯನನ್ನು ಸಂಕುಚಿತ ಪರಿಪ್ರೇಕ್ಷ್ಯದಲ್ಲಿ ಇರಿಸುತ್ತದೆ. ಆದರೆ ಸತ್ಯವಿರುವುದು ನಮ್ಮ ಕನಸುಗಳಲ್ಲಿ, ಭಾವನೆಗಳಲ್ಲಿ ಜೀವನದ ಒಂದೊಂದು ಕ್ಷಣವೂ ಇದನ್ನು

ಸಾಬೀತುಪಡಿಸುತ್ತದೆ." ಈ ಉದ್ಗಾರವು ನಿಜಕ್ಕೂ ಆಶ್ಚರ್ಯಕರವಾಗಿದೆ; ಏಕೆಂದರೆ, ವಾಸ್ತವತೆಗೆ ಕಟ್ಟುಬಿದ್ದ ಕಲಾವಿದ ಸಹ ಕನಸು ಮತ್ತು ಭಾವನೆಗಳನ್ನು ನಿಕೃಷ್ಟವೆಂದು ಬಗೆದು ತಳ್ಳಿಹಾಕುವುದಿಲ್ಲ. ಕಲೆಯ ಜೀವಸತ್ವವೇ ಅದೆಂದರೂ ತಡೆಯುತ್ತದೆ. ವ್ಯಕ್ತಿಗತ ದೃಷ್ಟಿ ಮತ್ತು ನಿಷ್ಠೆಗಳಿಗೆ ವಾಸ್ತವತೆಯು ಧಕ್ಕೆ ತರಬೇಕೆಂಬ ನಿಯಮವೇನೂ ಇಲ್ಲ. ಹೆಚ್ಚೆಂದರೆ ಅದು "ಇರುವುದನ್ನು" ಪ್ರತಿಪಾದಿಸುವುದರ ಜೊತೆಗೆ "ಇರಬಹುದಾದ್ದನ್ನು" ಸಹ ಪ್ರತಿಪಾದಿಸುತ್ತದೆ. ಅಂದರೆ, ಸಾಧ್ಯತೆಗಳು ಎಷ್ಟು ವಿಪುಲವಾಗಿದೆ ಮತ್ತು ಅವನ್ನೆಲ್ಲಾ ಇನ್ನು ರೂಢಿಸಿಕೊಳ್ಳಲಾಗಿಲ್ಲದಿರುವುದು ಎಷ್ಟು ಶೋಚನೀಯ, ಎಂಬುದು ವಾಸ್ತವವಾದಿ ಕಲೆ, ಸಾಹಿತ್ಯಗಳ ಆಶಯ.

"ರೂಢಿಸಿಕೊಳ್ಳುವುದು" ಎಂಬ ಮಾತಿನ ವ್ಯಾಪ್ತಿ ವಿಶಾಲವಾಗಿದೆ. ಸಾಮಗ್ರಿಗಳು ಲಭ್ಯ, ಆದರೆ ಅವುಗಳ ಲಾಭ ಪಡೆಯಲು ಯಾವುದೋ ಕಾರಣದಿಂದ ಸಾಧ್ಯವಾಗಿಲ್ಲ, ಎಂದಾಗ ರೂಢಿಸಿಕೊಳ್ಳುವುದಕ್ಕೆ ಏನೋ ಅಡಚಣೆ ಉಂಟಾಗಿದೆ ಎಂದರ್ಥ. ಮೊಮ್ಮಗಳಿಗೆ ಜ್ವರ ಬಂದಾಗ ಇಂಥದೊಂದು ಮದ್ದು ನೀಡಬೇಕೆಂಬ ತಿಳುವಳಿಕೆ ಅಜ್ಜಿಗೆ ಖಂಡಿತ ಇದೆ. ಆದರೆ ಪ್ರಸ್ತುತ ವ್ಯವಸ್ಥೆಯಲ್ಲಿ ಅದನ್ನು ದೊರಕಿಸಿಕೊಳ್ಳಲು ಅವಳಿಗೆ ಆಗುತ್ತಿಲ್ಲ. ಇಂತಹ ಸಂದಿಗ್ಧದಲ್ಲಿ ನೋಡುಗನೊಬ್ಬನ ಪ್ರತಿಕ್ರಿಯೆಗಳು ಹೇಗಿರಬಹುದು? ಆ ಅಜ್ಜಿಯ ಗೊಡವೆ ನಮಗೇಕೆ, ಎನ್ನಬಹುದು; ಅಯ್ಯೋ ಪಾಪ! ಅಜ್ಜಿಯ ಪಾಡು ಹೀಗಾಯಿತೆ ಎನ್ನಬಹುದು; ಅಜ್ಜಿಯ ಬಗ್ಗೆ ಮರುಕ ಉಂಟಾಗುವಂತಹ ದಯನೀಯ ವ್ಯವಸ್ಥೆಯ ಬಗ್ಗೆ ಉಗ್ರವಾದ ಕೋಪ ತಾಳಬಹುದು; ಅಜ್ಜಿಯ ಹತಾಶೆಯನ್ನು ನಿವಾರಿಸಲು ಸಂಘಟನೆಗೆ ಕೈಹಾಕುವುದು; ಇಲ್ಲವೇ ಇದನ್ನೆಲ್ಲಾ ಬಿಟ್ಟು, ಅಜ್ಜಿಯ ಕರ್ಮ ಹಾಗಿದೆ, ಅವಳ ಕರ್ಮ ಬಲವಂತವಾಗಿದ್ದರೆ ನೀ ಮಾಡುವುದೇನೊ ಹರಿಯೆ, ಎಂದು ಕೈಚೆಲ್ಲಿ ಕೂಡಬಹುದು. ಇದರಲ್ಲಿ ಯಾವುದೋ ವಾಸ್ತವತೆಗೆ ಹೊರತಾದುದಲ್ಲ; ಆದ್ದರಿಂದ ಒಬ್ಬ ವಾಸ್ತವವಾದಿ ಸಾಹಿತಿಯು ಈ ಎಲ್ಲ ಮುಖಗಳನ್ನು ಪರಿಚಯಿಸಿ ನಮ್ಮ ಆಯ್ಕೆ ಏನಾಗಬೇಕೆಂದು ಸೂಕ್ಷ್ಮವಾಗಿ ಸೂಚಿಸಬಲ್ಲ. ಹಾಗೆ ಅವನು ನೇರವಾಗಿ ಸೂಚಿಸದಿದ್ದರೂ ಅವನ ಇಂಗಿತವು ಸಂಶಯಕ್ಕೆ ಎಡೆಯಿಲ್ಲದಂತೆ ಸ್ಪಷ್ಟವಾಗಿರಬಹುದು.

ಸಾಹಿತಿಯು ಸಮಾಜದಿಂದ ವಿಮುಖನಾಗಬಹುದು, ಆದರೆ ಸಾಹಿತ್ಯವು ವಿಮುಖವಾಗ ಲಾರದು; ಏಕೆಂದರೆ ಅದು ಯಾವುದಾದರೊಂದು ಮುಖವನ್ನು ತೋರಿಸುತ್ತಲೇ ಇರುತ್ತದೆ. ಯಾವ ಮುಖವೂ ಇಲ್ಲದ ಸಾಹಿತ್ಯವೆಲ್ಲಿಯಾದರೂ ಇದ್ದರೆ ಅದನ್ನು 'ಶುದ್ಧ ಸಾಹಿತ್ಯ' ಎನ್ನಬಹುದು. ಆದರೆ ಬಳಕೆಗೆ ಬಂದಿರುವುದು ಆ ರೀತಿಯಲ್ಲಿ ಅಲ್ಲ. ಸಾಮಾಜಿಕ ಮತ್ತು ಸಾಮೂಹಿಕ ಪ್ರಶ್ನೆಗಳನ್ನೆತ್ತಿಕೊಂಡರೆ ಅದು 'ಶುದ್ಧೇತರ'; ಹಾಗೆ ಮಾಡದಿದ್ದರೆ ಅದು ಮಡಿ ಸಾಹಿತ್ಯ ಅಥವಾ ಶುದ್ಧ ಸಾಹಿತ್ಯ. ಮಡಿ ಸಾಹಿತ್ಯವು ಮಡಿಯುವ ಸಾಹಿತ್ಯವಾಗಿ ಕಂಡರೆ ಆಶ್ಚರ್ಯವಿಲ್ಲ. ಸಾಮಾಜಿಕ ಪ್ರಶ್ನೆಗಳು ರಾಜಕೀಯ ಪ್ರಶ್ನೆಗಳಾಗಿ ಗೋಚರಿಸುವುದರಿಂದ ಕೆಲವು ಸಾಹಿತ್ಯಾಭ್ಯಾಸಿಗಳಿಗೆ 'ಶುದ್ಧೇತರ' ಸಾಹಿತ್ಯವು ಅಪಥ್ಯವಾಗಿ ಕಾಣುತ್ತದೆ. ವಿಶಾಖದತ್ತನು ರಾಜಕೀಯ ಪ್ರಶ್ನೆಗಳನ್ನೆತ್ತುವುದಿಲ್ಲವೆ? ಶೇಕ್ಸ್‌ಪಿಯರ್ ತಾನೆ ಅದನ್ನು ಮಾಡದಿದ್ದಾನೆಯೆ? ಹಾಗೆಂದು ಅವರನ್ನು ಸಾಹಿತಿಗಳ ಪಟ್ಟದಿಂದ ಕಿತ್ತುಹಾಕಿದ್ದೇವೆಯೆ? ಇಲ್ಲಿ 'ರಾಜಕೀಯ' ಎಂದರೆ ಬದಲಾವಣೆಗಾಗಿ ಅನುಸರಿಸಬೇಕಾದ ಮಾರ್ಗದ ಬಗ್ಗೆ ಚಿಂತನೆ ಮತ್ತು ಕ್ರಿಯೆ

ಎರಡೂ ಸೇರಿವೆ. ನಮ್ಮ ಕೆಲವು ವೃತ್ತಪತ್ರಿಕೆಗಳು ಬಳಸುವ ಸೀಮಿತಾರ್ಥದಲ್ಲಿ ಅಥವಾ ಹೀನಾರ್ಥದಲ್ಲಿ ಅದನ್ನು ಗ್ರಹಿಸಬೇಕಾಗಿಲ್ಲ. ಅದು ಶುದ್ಧವಾಗಿರಲಿ, ಶುದ್ಧೇತರವಾಗಿರಲಿ, ಸೃಷ್ಟಿಯಾಗುವ ಸಾಹಿತ್ಯವೆಲ್ಲಾ ಆಯಾ ವರ್ಗೀಕರಣದಿಂದ ಮಾತ್ರವೇ ಒಳ್ಳೆಯದೂ ಅಲ್ಲ, ಕೆಟ್ಟದ್ದೂ ಅಲ್ಲ. ಸಾಹಿತ್ಯ ಗುಣಕ್ಕೆ ಮಾಪಕ ಸಾಧನವು ಬೇರೆಯೇ ಇದೆ. ಅದರ ಪ್ರಕಾರ ಅದು ರಂಜನೆ ಕೊಡುತ್ತದೆ, ರಮಣೀಯವಾಗಿರುತ್ತದೆ, ಬೋಧಪ್ರದವಾಗಿರುತ್ತದೆ, ಉತ್ಸಾಹ ತುಂಬುತ್ತದೆ; ಇಲ್ಲವೇ ಅದಾವುದನ್ನೂ ಮಾಡದೆ ಗೊಡ್ಡಾಗಿರುತ್ತದೆ.

೧೯೭೯ರಲ್ಲಿ ಬಂಡಾಯ ಸಾಹಿತ್ಯ ಸಂಘಟನೆಯು ಅಸ್ತಿತ್ವಕ್ಕೆ ಬಂದು "ಖಡ್ಗವಾಗಲಿ ಕಾವ್ಯ" ಎಂದು ಘೋಷಿಸುವ ಮೊದಲೇ ಸಾಹಿತ್ಯದ ವ್ಯಾಪ್ತಿಯನ್ನು ಚರ್ಚಿಸುವಾಗ ಅದು ಸಾಮಾಜಿಕ ಚಿಂತನೆಗೆ ಒಂದು ಮಾನವೀಯ ಆಯಾಮವನ್ನು ನಿರ್ಮಿಸಿಕೊಡಬೇಕೆಂಬ ಆಶಯವು ಪ್ರಗತಿಶೀಲರಲ್ಲಿ ಪ್ರಕಟವಾಗಿತ್ತು. ಆಗ್ಗೆ ಪ್ರಗತಿಶೀಲರು ಅಷ್ಟಾಗಿ ಪ್ರತಿಗಾಮಿಗಳ ವಿರುದ್ಧ ದನಿಯೆತ್ತುವ ಅಗತ್ಯವಿರಲಿಲ್ಲ. ಏಕೆಂದರೆ, ಸಾಹಿತಿಗಳ ಪೈಕಿ ಅಪ್ಪಟ ಜನವಿರೋಧಿ ಅಥವಾ ಪ್ರತಿಗಾಮಿ ನಿಲುವನ್ನು ಸಮರ್ಥಿಸುವವರು ಅಷ್ಟಾಗಿ ಇರಲಿಲ್ಲ. ಜನವರಿ ೧೯೭೭ರಲ್ಲಿ ಪ್ರಗತಿ ಪಂಥವೆಂಬ ಹೆಸರಿನಲ್ಲಿ ಕೆಲವು ಸಾಹಿತಿಗಳು ಒಟ್ಟಾದಾಗ ಅವರಿಗೆ ಬಲಪಂಥೀಯ ಧೋರಣೆಗಳನ್ನು ಬಲವಾಗಿ ಪ್ರತಿಪಾದಿಸುತ್ತಿದ್ದವರೊಡನೆ ದ್ವಂದ್ವಯುದ್ಧವು ಅನಿವಾರ್ಯವಾಗಿತ್ತು. ತನ್ನ ಅಂಗೀಕೃತ ಘೋಷಣೆಯಲ್ಲಿ ಪ್ರಗತಿ ಪಂಥವು ಸಾರಿದ್ದಿದು: "ವಿಮುಕ್ತ ಮಾನವ, ಶೋಷಣೆ ರಹಿತ ಸಮಾಜ ಮತ್ತು ಸುವ್ಯವಸ್ಥಿತ ಸಮೃದ್ಧ ಸಾಮಾಜಿಕ ಜೀವನ, ಇವನ್ನು ಪ್ರಗತಿಪಂಥ ಬಯಸುತ್ತದೆ." ಯಾವ ಸಾಹಿತಿ ಅಥವಾ ರಾಜಕಾರಣಿ ಇವನ್ನು ಬಯಸುವುದಿಲ್ಲ ವೆಂದು ಹೇಳಿಯಾನು? ಮಾತಿನಲ್ಲಿ ಅದನ್ನು ಹೇಳದೆ, ವ್ಯವಸ್ಥೆಗೆ ನಿರ್ದಿಷ್ಟ ಸ್ವರೂಪವನ್ನು ಹೇರುವ ಮೂಲಕ ಈ ಆಶಯಗಳು ಕಾರ್ಯಸಾಧುವಲ್ಲದಂತಿರುವ ಸನ್ನಿವೇಶವನ್ನು ರಚಿಸುವುದು ಪ್ರಗತಿ ವಿರೋಧಿಗಳ ತಂತ್ರವಾಗಿರುತ್ತದೆ. ಅಂತಹ ಸಂದರ್ಭದಲ್ಲಿ ಸಹ ಯಾವ ರೀತಿಯಲ್ಲೂ ಪ್ರಗತಿಯೇ ಇರುವುದಿಲ್ಲವೆಂದರ್ಥವಲ್ಲ. ಉತ್ಪಾದನೆ, ತಂತ್ರಜ್ಞಾನ, ಮುಂತಾದುವು ಗಳಲ್ಲಿ 'ಅಭಿವೃದ್ಧಿ' ಉಂಟಾದರೂ ಅದರ ಫಲವು ಎಲ್ಲರಿಗೂ ದಕ್ಕದಿರುವಂತಹ ವ್ಯವಸ್ಥೆ ಅದು. ಅದನ್ನು ಪ್ರಶ್ನಿಸುವುದು, ವಿಶ್ಲೇಷಿಸುವುದು, ಬದಲಾವಣೆಯ ಮಾರ್ಗವನ್ನು ಹುಡುಕುವುದು, ಕ್ರಿಯಾಶೀಲತೆಗೆ ಅಗತ್ಯವಾದ ಚಿಂತನೆಯನ್ನು ಹರಿಬಿಡುವುದು, ಇದು ಪ್ರಗತಿಶೀಲರ ಉದ್ದೇಶವಾಗಿದ್ದಿತು.

೧೮೪೩ರಲ್ಲಿ ಕಾರ್ಲ್ ಮಾರ್ಕ್ಸ್ ತನ್ನ ದೇಶವಾದ ಜರ್ಮನಿಯನ್ನು ಬಿಟ್ಟು ಬೇರೆ ದೇಶಕ್ಕೆ ಹೋಗಬೇಕಾದ ರಾಜಕೀಯ ಪರಿಸ್ಥಿತಿ ಉದ್ಭವಿಸಿತ್ತು. ಅದರ ಮುಂದಿನ ವರ್ಷವೇ ಆತ ಪ್ಯಾರಿಸ್ಸಿನಲ್ಲಿ ಏಂಗಲ್ಸರನ್ನು ಭೇಟಿಯಾದದ್ದು. ದೇಶವನ್ನು ತೊರೆಯುವ ಸಂದರ್ಭದಲ್ಲಿ "ಘಟಿಸುತ್ತಿರುವ ಪ್ರತಿಯೊಂದು ಅಂಶವನ್ನೂ ಯಾವ ಅಳುಕೂ ಇಲ್ಲದೆ ತೀವ್ರ ವಿಮರ್ಶೆಗೆ ಗುರಿಮಾಡಬೇಕು" ಎಂದಿದ್ದ ಮಾರ್ಕ್ಸ್ ಆ ಹೇಳಿಕೆಗೆ ವಿವರಣೆ ನೀಡಿದ್ದು ಹೀಗೆ: "ತೀವ್ರ ವಿಮರ್ಶೆ ಎಂದರೆ ಅರ್ಥ ಇದು: ಯಾವ ತೀರ್ಮಾನವೇ ತರ್ಕಬದ್ಧವಾಗಿ ಮೂಡಿಬಂದರೂ ಅದರಿಂದ ಹಿಮ್ಮೆಟ್ಟದಿರುವುದು; ಆ ತೀರ್ಮಾನದಿಂದಾಗಿ ಆಳುವ ಪ್ರಭುತ್ವದೊಡನೆ ಸಂಘರ್ಷ ವೇರ್ಪಡುವಂತಿದ್ದರೆ ಅದನ್ನು ಸಹ ಸ್ವೀಕರಿಸುವುದು ಅನಿವಾರ್ಯವಾಗುತ್ತದೆ." ಇದಕ್ಕೆ

ಸಾಮಾಜಿಕ ಪ್ರಜ್ಞೆಯು ಅಂಕುರಿಸುವುದಷ್ಟೇ ಅಲ್ಲ, ಅದು ವಿಶಾಲವಾಗಿ ವ್ಯಾಪಿಸಿರಬೇಕಾಗುತ್ತದೆ. ತಿಳಿವಳಿಕೆಯು ತನ್ನಿಂದ ತಾನೆ ಬದಲಾವಣೆಗೆ ಕಾರಣವಾಗುವುದಿಲ್ಲ; ಪ್ರಜ್ಞಾಪೂರ್ವಕವಾದ ಸಾಮೂಹಿಕ ಮಧ್ಯಪ್ರವೇಶವು ಯಾವುದೇ ಗುಣಾತ್ಮಕ ಬದಲಾವಣೆಗೆ ಅತ್ಯಗತ್ಯ. ಅದನ್ನು "ರಾಜಕೀಯ ಕಾರ್ಯಾಚರಣೆ" ಎಂದು ಬೇಕಾದರೂ ಕರೆಯಬಹುದು. ಸಾಹಿತ್ಯವು ಬದಲಾವಣೆಯ ಹರಿಕಾರನಾಗುವುದೆಂದರೆ ಅದಕ್ಕೆ ಅನುವಾಗುವ ಪ್ರಜ್ಞೆಯನ್ನು ರೂಪಿಸುವುದು ಎಂದರ್ಥ. ಯಥಾಸ್ಥಿತಿಯನ್ನು ಆರಾಧಿಸುವ ಸಾಹಿತಿ ಮತ್ತು ಅದಕ್ಕಿಂತಲೂ ವಿಕೃತವಾದ ಪೂರ್ವರೂಪದ ಸ್ಥಿತಿಗೆ ಮರಳಬೇಕೆನ್ನುವ ಸಾಹಿತಿ ಹೆಚ್ಚಿನ ಚಿಂತನೆ, ವಿಶ್ಲೇಷಣೆ ಮಾಡುವ ಅಗತ್ಯವಿಲ್ಲ. ವೈಭವೀಕರಿಸಲು ಬೇಕಾದ ಮನೋಭೂಮಿಕೆ ಮತ್ತು ಪದಗುಚ್ಛಗಳು ಆ ಸಾಹಿತಿಗೆ ಸಾಕಾಗುತ್ತದೆ. ಯಜಮಾನ ಸಂಸ್ಕೃತಿಯ ಮೂಲ ಲಕ್ಷಣವೇ ಇದು : ತಿಳಿವಳಿಕೆಯನ್ನು ಹ್ರಸ್ವಗೊಳಿಸುವುದು ಇಲ್ಲವೆ ಮಣಗಟ್ಟಲೆ ಮೌಢ್ಯವನ್ನು ತುಂಬುವುದು. ಪ್ರಗತಿಶೀಲ ಸಾಹಿತಿಗಳು ತಮ್ಮ "ತೀವ್ರ ವಿಮರ್ಶೆಯನ್ನು ಯಾವ ಮಟ್ಟದವರೆಗೆ ಕೊಂಡೊಯ್ಯಲು ಸಿದ್ಧರಿದ್ದರೆಂಬುದು ಪ್ರಮುಖ ಪ್ರಶ್ನೆ. ಮಾತಿನ ಮಂಟಪದಾಚೆಗೆ ಹೋಗಿ ಕ್ರಿಯಾಶೀಲ ರಾಜಕೀಯಕ್ಕೆ ಧುಮುಕಲು ಮಾನಸಿಕವಾಗಿ ಸಿದ್ಧತೆಯಿದ್ದ ಸಾಹಿತಿಗಳು ನಮ್ಮಲ್ಲಿ ವಿರಳವೇ; ಪ್ರಗತಿಶೀಲರಿಗಂತೂ ಈ ಮಾತು ಇನ್ನೂ ಹೆಚ್ಚು ಪ್ರಖರವಾಗಿ ಅನ್ವಯವಾಗುತ್ತದೆ".

ಪ್ರಗತಿಶೀಲರನ್ನು ಹಗುರವಾಗಿ ಕಾಣುತ್ತಿದ್ದವರ ಟೀಕೆಯನ್ನೆದುರಿಸಲು ಬಸವರಾಜ ಕಟ್ಟೀಮನಿಯವರು ತಮ್ಮ "ಜ್ವಾಲಾಮುಖಿಯ ಮೇಲೆ" ಕಾದಂಬರಿಯ ಪೀಠಿಕೆಯಲ್ಲಿ ಟೀಕಾಕಾರರಿಗೆ ಮಾನವೀಯ ದೃಷ್ಟಿ ಬೆಳೆಸಿಕೊಳ್ಳಬೇಕೆಂಬ ಸಲಹೆ ನೀಡಿದ್ದಾರೆ. ಶೋಷಿತ ಜನತೆಯ ಕಾರ್ಪಣ್ಯಗಳಿಗೆ ಸ್ಪಂದಿಸದೆ ಪ್ರಗತಿಶೀಲ ಸಾಹಿತ್ಯವನ್ನು ದಂಡಿಸಿದರೆ ಆ ಮರ್ದಿತ ಜನತೆಯ ಸಂಕಷ್ಟಗಳು ಇನ್ನೂ ಹೆಚ್ಚುತ್ತವೆಂಬ ಕಳಕಳಿಯನ್ನೂ ಅವರು ಪ್ರಕಟಿಸಿದ್ದಾರೆ. ಸಾಹಿತಿಯು ಪ್ರಚಾರಕನಾಗಕೂಡದೆಂಬ ಮಾತನ್ನು ಗಮನಿಸಿ ಅವರೆನ್ನುತ್ತಾರೆ: ಅಸತ್ಯ ಮತ್ತು ಅನ್ಯಾಯಗಳನ್ನು ಸಮರ್ಥಿಸುವಂಥವನೂ ಆಗಬಾರದು ಸಾಹಿತಿ, ಎಂದು. ೧೯೬೨ರಲ್ಲಿ ಸಾಹಿತ್ಯ ಅಕಾಡೆಮಿ ಪ್ರಕಟಿಸಿದ್ದ "ಕನ್ನಡ ಸಣ್ಣ ಕತೆಗಳು" ಎಂಬ ಪುಸ್ತಕದ ಮುನ್ನುಡಿಯಲ್ಲಿ ಅದರ ಸಂಪಾದಕ ಎಲ್.ಎಸ್. ಶೇಷಗಿರಿರಾವ್ ಅವರು ಅ.ನ.ಕೃಷ್ಣರಾಯರ ಬಗ್ಗೆ ಕೆಲವು ಮಾತುಗಳನ್ನು ಹೇಳಿದ್ದಾರೆ. ಸಮಕಾಲೀನ ಸಾಮಾಜಿಕ ಪಿಡುಗುಗಳನ್ನು ಬಹಿರಂಗಗೊಳಿಸಲು ಸಾಹಿತ್ಯವು ಸಾಧನವಾದರೆ ಅದು ಉಪಯುಕ್ತ ಸಾಹಿತ್ಯವೆಂದು ಅನಕೃ ಬಗೆದಿದ್ದರೆಂದು ಹೇಳಿ ಶೇಷಗಿರಿರಾಯರು ಒಂದು ಸಾಮಾನ್ಯೀಕೃತ ತೀರ್ಮಾನವನ್ನು ಕೊಟ್ಟಿದ್ದಾರೆ. ಕನ್ನಡದಲ್ಲಿ ಪುರೋಗಾಮಿ ಸಾಹಿತ್ಯವು ಹತ್ತಾರು ಅಂಶಗಳ ಪ್ರಭಾವಕ್ಕೆ ಒಳಗಾಯಿತಾದರೂ ಈ ಬಣದ ಪ್ರಮುಖ ಲೇಖಕರು ಸ್ವತಂತ್ರವಾದ ಮತ್ತು ದಿಟ್ಟತನದ ಕೃತಿಗಳನ್ನು ರಚಿಸಿದ್ದು ಗಮನಾರ್ಹವಾಗಿದೆ, ಎಂದು. ಮುಂದುವರಿದು ಕಟ್ಟೀಮನಿ ಬಗ್ಗೆ ಅವರೆನ್ನುತ್ತಾರೆ, ಕಟ್ಟೀಮನಿ ಒಂದು ಜ್ವಾಲಾಮುಖಿ; ಆದರೆ ವಿವೇಚನಾತ್ಮಕ ಜ್ವಾಲಾಮುಖಿ ಅದು. ಹೊಲಸನ್ನು ಸುಟ್ಟುಹಾಕುವಂತಹ ಬೆಂಕಿಯನ್ನದು ಕಾರುತ್ತದೆ, ಎಂದು. ಬೂಟ್ ಪಾಲಿಶ್, ಗಿರಿಜಾ ಕಂಡ ಸಿನಿಮಾ ಮತ್ತು ರಕ್ತಧ್ವಜ ಕತೆಗಳನ್ನವರು ಇದಕ್ಕೆ ಪುರಾವೆಯಾಗಿ ಹೆಸರಿಸಿದ್ದಾರೆ. ನಿರಂಜನ, ವೆಂಕಟರಾಜ, ಪಾನಸೆ, ವ್ಯಾಸರಾಯ ಬಲ್ಲಾಳ, ಸುಬ್ಬಣ್ಣ, ಎಕ್ಕುಂಡಿ, ಮುಂತಾದವರೆಲ್ಲಾ ಇವೇ ಆಕಾಂಕ್ಷೆಗಳನ್ನು ವೈವಿಧ್ಯಮಯವಾಗಿ

ಪ್ರಕಟಿಸುವ ಪ್ರಗತಿಶೀಲ ಸಾಹಿತಿಗಳು. ಕಟ್ಟಿಮನಿಯವರಾದರೋ "ಜ್ವಾಲಾಮುಖಿಯ ಮೇಲೆ" ಕಾದಂಬರಿಯಲ್ಲಿ ಮಾರ್ಕ್ಸ್‌ವಾದ, ರಷ್ಯಾದಲ್ಲಿ ಅದರ ಅಳವಡಿಕೆ, ಕಮ್ಯುನಿಸ್ಟ್ ಅಂತರರಾಷ್ಟ್ರೀಯ, ವರ್ಗ ಸಂಘರ್ಷ, ಇತ್ಯಾದಿಗಳನ್ನೆಲ್ಲಾ ತಂದುಬಿಟ್ಟಿದ್ದಾರೆ. ಇಂದಿನ ವ್ಯವಸ್ಥೆಯಲ್ಲಿ ಹಿಂಸೆಯು ಆಮೂಲಾಗ್ರವಾಗಿ ಪಸರಿಸಿದೆಯೆಂಬುದನ್ನವರು ಗಟ್ಟಿಯಾಗಿ ಪ್ರತಿಪಾದಿಸಿದ್ದಾರೆ. "ಆರ್ಥಿಕ ವಿಷಮತೆ ನಾಶವಾದ ಹೊರತು ಜನತೆಗೆ ನಿಜವಾದ ಸ್ವಾತಂತ್ರ್ಯ ಬರಲಾರದು" (ಪು. ೧೫೨) ಎಂದವರು ಸ್ಪಷ್ಟವಾಗಿ ನಿರೂಪಿಸುತ್ತಾರೆ. ನಿರಂಜನರ "ವಿಮೋಚನೆ" ಮತ್ತು "ಚಿರಸ್ಮರಣೆ" ಸಹ ಇದೇ ನೆಲೆಯಲ್ಲಿ ನಿಲ್ಲುವಂತಹ ಉತ್ತಮ ಸಾಹಿತ್ಯ ಕೃತಿಗಳು. ತಮ್ಮ ಕಾದಂಬರಿಯನ್ನು ಕಮ್ಯುನಿಸ್ಟ್ ಪಕ್ಷದ ಪ್ರಚಾರವೆಂದು ಯಾರಾದರೂ ಮೂದಲಿಸಿಯಾರೆಂದು ಮೊದಲೇ ನಿರೀಕ್ಷಿಸಿದ್ದ ನಿರಂಜನರು ಕಾದಂಬರಿಗೊಂದು ಕೊನೆಯ ಮಾತನ್ನು ಸೇರಿಸಿ ತಮ್ಮ ಉದ್ದೇಶ ಅದಾಗಿರಲಿಲ್ಲವೆಂದು ಹೇಳಿಕೊಂಡಿದ್ದಾರೆ. ಅದು ತಮ್ಮ ಅಂತಃಕರಣದಿಂದ ಮೂಡಿಬಂದ ಭಾವನೆಗಳ ಪ್ರತೀಕವೆಂಬ ಅರ್ಥ ಬರುವಂತೆ ಅವರು ಬರೆದಿದ್ದಾರೆ. "ಆಳುವ ಶಕ್ತಿಯ ಬಾಡಿಗೆಯ ಬಂಟರೊಡನೆ ಮೊದಲ ಪ್ರತ್ಯಕ್ಷ ಭೇಟಿಗಾಗಿ ಜನಶಕ್ತಿಯ ಪ್ರತಿನಿಧಿಗಳಾಗಿದ್ದ ಅಪ್ಪು ಮತ್ತು ಚಿರಕುಂಡ ಹೊರಟರು" ಎಂದು ಬರೆಯುವಾಗ ನಿರಂಜನರಿಗೆ ಸಹಜವಾಗಿಯೇ ವರ್ಗ ವಿಭಜಿತ ಸಮಾಜದ ರೂಪುರೇಷೆಗಳು ಮನಸ್ಸಿಗೆ ಬರುತ್ತವೆ. ವ್ಯಾಸರಾಯ ಬಲ್ಲಾಳರ "ಹೇಮಂತಗಾನ"ವಾಗಲಿ "ಉತ್ತರಾಯಣ"ವಾಗಲಿ ಪ್ರಗತಿಶೀಲ ಸಾಹಿತ್ಯದ ಉತ್ತಮ ಪ್ರತಿನಿಧಿಗಳೆಂಬುದರಲ್ಲಿ ಸಂಶಯವಿರಲಾರದು. ಈ ಕಾದಂಬರಿಕಾರರ ಆಶಯಗಳನ್ನು ತಮ್ಮದನ್ನು ಆಗಿಸಿಕೊಂಡಿರುವ ವೆಂಕಟರಾಜ ಪಾನಸೆಯಂತಹ ಸಾಹಿತಿಗಳು ಕತೆಗಳ ನಿರೂಪಣೆಯಲ್ಲಿ ವಿಪರೀತ ವಾಚ್ಯವಾಗಿಬಿಡುತ್ತಾರೆಂಬುದು ಒಂದು ಕೊರತೆಯಾಗಿ ಎದ್ದುಕಾಣುತ್ತದೆ. ಕಾಳಿದಾಸನ "ಮಾಲವಿಕಾಗ್ನಿಮಿತ್ರ" ನಾಟಕವನ್ನೋದಿದರೆ ಸಂಸ್ಕೃತದ ನೂರಾರು ನಾಟಕಗಳನ್ನೋದಿದಂತೆ ಎಂಬ ಮಾತೊಂದಿದೆ. ಅಂದರೆ, ನಂತರದ ನಾಟಕಕಾರರು ಕಾಳಿದಾಸನನ್ನು ಅಷ್ಟೊಂದು ಅಣಕಿಸುತ್ತಾರೆ ಎಂದರ್ಥ. ಅಲ್ಲೊಂದು ಇಲ್ಲೊಂದು ವ್ಯತ್ಯಾಸ ಮಾಡಿ ಕಾಳಿದಾಸನ ನಾಟಕದ ಪ್ರತಿರೂಪಗಳನ್ನೇ ಅವರು ಸೃಷ್ಟಿ ಮಾಡಿಬಿಡುತ್ತಾರೆ. ವೆಂಕಟರಾಜ ಪಾನಸೆಯವರ ಸಾಹಿತ್ಯದ ಸೀಮಿತತೆ ಎಷ್ಟೊಂದಿದೆಯೆಂದರೆ ಅವರು ತಮ್ಮದೇ ಕತೆಯೊಂದನ್ನು ಬೇರೆ ಹತ್ತು ಕತೆಗಳಲ್ಲಿ ಅಣಕಿಸುತ್ತಾರೆ. ಒಂದನ್ನು ಓದಿದರೆ ಮಿಕ್ಕವನ್ನು ಓದುವ ಗೋಜಿಗೆ ಹೋಗಬೇಕಾಗಿಲ್ಲ. "ಜಯಪಾಲನ ಕುಸ್ತಿ"ಯ ಪಡಿಯಚ್ಚು "ರಕ್ತದಾನ", "ಮಾಲೆಯರ ಹುಡುಗ" ಎಂಬ ಕಥಾಸಂಕಲನದಲ್ಲಿ ಅವರ ರೋಷ ಪ್ರಕಟವಾಗುವುದನ್ನು ನೋಡಿದರೆ ಬಹುಶಃ ಕೆಲವು ಪ್ರಗತಿಶೀಲ ಸಾಹಿತಿಗಳ ಸೋಲಿಗೆ ಕಾರಣ ಗೊತ್ತಾಗುತ್ತದೆ. ಮೃದುವಾಗಿ, ಮಾರ್ಮಿಕವಾಗಿ ಸೂಚಿಸಬೇಕಾದ್ದನ್ನು ಕರ್ಕಶವಾಗಿ ಒಪ್ಪಿಸುವುದು ಉತ್ತಮ ಸಾಹಿತ್ಯವಾಗುವುದಿಲ್ಲ. "ಲಚ್ಮಿ" ಎಂಬ ಕತೆಯಲ್ಲಿ ಬರುವ ಮಾತುಗಳಿವು : " 'ಆ' ಲಕ್ಷ್ಮಿಗೂ 'ಈ' ಲಕ್ಷ್ಮಿಗೂ ಎಷ್ಟು ಅಂತರವಿದೆ? ಜಗತ್ತುಗಳ ಅಂತರವಿದೆಯಲ್ಲವೇ? ಜೀವನ ಮರಣಗಳ ಅಂತರವಿದೆಯಲ್ಲವೇ? ಈ ಅಂತರಕ್ಕೆ ಹಿಂದಿನ ಜನ್ಮಗಳ ಪಾಪಪುಣ್ಯಗಳೇ ಕಾರಣವೆನ್ನುವ ಜನರಷ್ಟು ಚಂಡಾಲ ಪಾಪಿಗಳು ಭೂಮಿಯಲ್ಲಿ ಬೇರೊಬ್ಬರಿಲ್ಲ. ಹೀಗನ್ನುವುದರಿಂದ ಈ ಅಂತರ ಎಂದೆಂದೂ ಕಡಿಮೆಯಾಗದು. ಹೊಟ್ಟೆಗೆ ಬಿದ್ದರೆ ಮಕ್ಕಳು ಬೆಳೆಯುತ್ತಾರೋ, ಪಾಪ ಪುಣ್ಯಗಳ ಮಾತನ್ನಾಡಿದರೆ ಮಕ್ಕಳು

ಬೆಳೆಯುತ್ತಾರೋ, ಇದನ್ನರಿಯದ ಚಂಡಾಲರು ಈ ಪಾಪಪುಣ್ಯಗಳನ್ನು ಕಂಡುಹಿಡಿದಿದ್ದಾರೆ. ಸ್ವರ್ಗ ನರಕಗಳ ಕಥೆಗಳನ್ನು ಕಟ್ಟಿದ್ದಾರೆ. ಅದರ ಹೊರತು ಹಸಿದ ಮಕ್ಕಳಿಗೆ ಅನ್ನ ದೊರಕುವ ಒಂದೇ ಒಂದು ಏರ್ಪಾಟನ್ನು ಅವರು ಮಾಡಲಿಲ್ಲ ಮಾಡಹೋಗಲಿಲ್ಲ. ಬಯಸಲಿಲ್ಲ" (ಪುಟ ೭೬). "ಪ್ರಗತಿಶೀಲ"ರೆಂಬ ಹಣೆಪಟ್ಟಿ ಧರಿಸದ ಕುವೆಂಪು ಅಂಥವರು "ಓ ಬನ್ನಿ, ಸೋದರರೆ, ಬೇಗ ಬನ್ನಿ" ಅಥವಾ "ಹೊಸ ಬಾಳಿನ ಗೀತೆ"ಯಂತಹ ಕವನಗಳಲ್ಲಿ ಇದೇ ಭಾವನೆಯನ್ನು ಎಷ್ಟು ಉತ್ಕಟವಾಗಿ ಮತ್ತು ಅಚ್ಚುಕಟ್ಟಾಗಿ ಪ್ರಕಟಿಸಿದ್ದಾರೆಂಬುದನ್ನು ಗಮನಿಸಬಹುದು. ಅಥವಾ, ವಿ. ಸೀತಾರಾಮಯ್ಯನವರ "ಕ್ರೋಧಕೇತನ" ಎಂಬ ಕವನವನ್ನು ಮನನ ಮಾಡಿಕೊಳ್ಳಬಹುದು. (ಇದು "ದ್ರಾಕ್ಷಿ-ದಾಳಿಂಬಿ" ಸಂಕಲನದಲ್ಲಿದೆ).

ಎಷ್ಟೋ ಪ್ರಗತಿಶೀಲರು ಬಹುಬೇಗನೆ ವಿಗತಿಯತ್ತ ಧಾವಿಸಿದ್ದು ಸಹ ಪ್ರಗತಿಶೀಲತ್ವದ ಗಟ್ಟಿತನದ ಅಭಾವವನ್ನು ಸೂಚಿಸುತ್ತದೆ. ನಿರಂಜನರು ೧೯೭೦ರ ದಶಕದಲ್ಲಿ ಆಕಾಶವಾಣಿಯ ಒಂದು ಸಂದರ್ಶನದಲ್ಲಿ ಹೇಳಿದ ಮಾತುಗಳಿವು: "ಚಿರಸ್ಮರಣೆಯಂತಹ ಕಾದಂಬರಿಗಳನ್ನು ಬರೆದಾಗ ನಾನು ಒಂದು ಸಿದ್ಧಾಂತಕ್ಕೆ ಕಟ್ಟುಬಿದ್ದಿದ್ದೆ; ಆದರೆ ಈಗ ನಾನು ಸ್ವತಂತ್ರನಾಗಿದ್ದೇನೆ." ಅಂದರೆ, ಸಿದ್ಧಾಂತವು ಅವರಿಗೆ ಮಾರ್ಗಸೂಚಿಯಲ್ಲ; ಅವರಿಗೆ ಅದೊಂದು ಬಂಧನ. ಕಾದಂಬರಿಯ ಕೊನೆಗೆ ಮಾತಿನಲ್ಲಿ ಅವರೇ ಹೇಳಿದ್ದ ಮಾತುಗಳಿಗೆ ತೀರ ವಿರುದ್ಧವಾದ ಮಾತುಗಳಿವು. ಪ್ರಗತಿಶೀಲ ಸಾಹಿತಿಯೊಬ್ಬನ ಈ ಎರಡು ಮಾತುಗಳಲ್ಲಿ ನಾವು ಯಾವುದನ್ನು ಸ್ವೀಕರಿಸಬೇಕು? ಅಥವಾ, ಎರಡನ್ನೂ ನಿರಾಕರಿಸಿ ಪ್ರಗತಿಯ ಕಲ್ಪನೆಯು ಇವರಲ್ಲಿ ಎಷ್ಟು ಮೇಲ್ಪದರದಲ್ಲಿತ್ತು ಎಂಬುದನ್ನು ತರ್ಕಿಸಬೇಕೋ? ಒಂದಂತೂ ನಿಜ : "ಸ್ವತಂತ್ರ ನಿರಂಜನರು" ಬರೆದ ಯಾವ ಸಾಹಿತ್ಯಕೃತಿಯೂ "ಬಂಧನದಲ್ಲಿದ್ದ ನಿರಂಜನರು" ಬರೆದ "ಚಿರಸ್ಮರಣೆ"ಯ ಸಮಕ್ಕೆ ಬರುವುದಿಲ್ಲ. ಎಷ್ಟೋ ಬಂಡಾಯ ಲೇಖಕರು ಕೂಡ ಆ ಕಾದಂಬರಿಯ ಸೊಗಸನ್ನು ಈವರೆಗೆ ನಿರ್ಮಿಸಿಕೊಟ್ಟಿಲ್ಲ. ಅದು ಬಂಧನ ಮತ್ತು ಮುಕ್ತತೆಯ ಪ್ರಶ್ನೆಯಲ್ಲ, ಸಾಮಾಜಿಕ ಪ್ರಶ್ನೆಯ ಆಳ, ಹರಹುಗಳ ಪ್ರಶ್ನೆ.

ಬಂಡಾಯ ಸಾಹಿತ್ಯ ಸಂಘಟನೆಯು ನಿರ್ದಿಷ್ಟವಾದ ಸಾಮಾಜಿಕ ವಿಶ್ಲೇಷಣೆಯ ಅಡಿಪಾಯದ ಮೇಲೆ ರಚಿತಗೊಂಡದ್ದು. ಜನಸಂಸ್ಕೃತಿ ಮತ್ತು ಯಜಮಾನ ಸಂಸ್ಕೃತಿಗಳ ನಡುವಣ ವ್ಯತ್ಯಾಸ ಮತ್ತು ತಿಕ್ಕಾಟವು ಬಂಡಾಯ ಸಾಹಿತ್ಯಕ್ಕೆ ಮೂಲಧಾತು. ಇಲ್ಲಿಯೂ ಸಾಹಿತ್ಯವೂ ಪ್ರಪ್ರಥಮವಾಗಿ ಕಲಾತ್ಮಕವಾಗಿರಬೇಕೆಂಬ ನಿಲುವನ್ನು ಮಾನ್ಯಮಾಡಲಾಗಿತ್ತು. ಪ್ರಾಚೀನವಾದುದೆಲ್ಲಾ ತಿರಸ್ಕಾರಯೋಗ್ಯವೆಂಬ ಗ್ರಹಿಕೆ ಇರಲಿಲ್ಲ; ಬದಲಾಗಿ ಪುನರ್ಮೌಲ್ಯೀಕರಣಕ್ಕೆ ಒತ್ತು ನೀಡಲಾಗಿತ್ತು. ಪ್ರಗತಿಶೀಲರು ಈ ಪ್ರಶ್ನೆಯನ್ನು ಸೂಕ್ಷ್ಮವಾಗಿ ಎತ್ತಲೇ ಇಲ್ಲ. ಜನರ ಹೋರಾಟಗಳಿಂದ ದೂರವಿದ್ದು, ತಮ್ಮ ಕಲ್ಪನಾ ಸಾಮ್ರಾಜ್ಯದಲ್ಲಿ ಪ್ರಗತಿಯ ಹೂವನ್ನು ಮನಸ್ವೀ ಅರಳಿಸುತ್ತಾ ಮುಂದುವರಿದ ಪ್ರಗತಿಶೀಲರು ವಾಸ್ತವಿಕ ಜಗತ್ತಿಗೆ ಮರಳಿದಾಗ ಬಹುಬೇಗನೆ ಹತಾಶರಾಗಿಬಿಡುತ್ತಿದ್ದರು. ಎಷ್ಟೋ ಪ್ರಗತಿಶೀಲ ಸಾಹಿತಿಗಳಿಗೆ ನಮ್ಮ ಸಾಮಾಜಿಕ-ಆರ್ಥಿಕ ವ್ಯವಸ್ಥೆಯು ಸಂಕೀರ್ಣವಾಗಿದ್ದಿತೆಂಬ ಅರಿವು ಸಹ ಮೂಡಲಿಲ್ಲ. ಬೌದ್ಧಿಕವಾಗಿ ಜಯ ಗಳಿಸಲು ಸಾಹಿತ್ಯವಿರುವಾಗ ಭೌತಿಕ ವಸ್ತುಸ್ಥಿತಿಯ ಬಗ್ಗೆ ಏಕೆ ತಲೆ ಕೆಡಿಸಿಕೊಳ್ಳಬೇಕೆಂಬ

ಹುಂಬತನ ಅದರಲ್ಲಿರಬಹುದು. ಅವರಲ್ಲಿ ಕೆಲವರಿಗೆ ಕ್ರಾಂತಿ ಇನ್ನೇನು ಕೈಗೆಟಕುತ್ತದೆಯೆಂಬ ಭಾವುಕತೆಯೂ ತುಂಬಿತ್ತು. ಆದ್ದರಿಂದಲೇ ನಂತರ ಅವರನ್ನು ಹತಾಶೆಯು ಆವರಿಸಿದ್ದು ಎನ್ನಬಹುದು. ಪ್ರಗತಿಶೀಲರಲ್ಲದಿದ್ದರೂ ಪ್ರಗತಿಯ ಹುರುಪನ್ನು ಸಾರಿದ ಗೋಪಾಲಕೃಷ್ಣ ಅಡಿಗರು "ಕಟ್ಟುವೆವು ನಾವು" ಎಂಬ ಕವನವನ್ನು ರಚಿಸಿ ಯುವಕರಿಗೆ ರಕ್ತ-ಮಾಂಸಗಳನ್ನು ಬಳುವಳಿಯಾಗಿ ನೀಡಿದರು. ಆದರೆ ಕಟ್ಟುವ ಪ್ರಕ್ರಿಯೆಗೆ ಅಡೆತಡೆಗಳೆಷ್ಟು, ಅವನ್ನು ಮೀರಲು ಎಂತಹ ಸಾಹಸದ ಯೋಜನೆಗಳು ಅಗತ್ಯ, ಮುಂತಾದ ಪ್ರಶ್ನೆಗಳು ಅವರನ್ನು ಕಾಡಲಿಲ್ಲ. ಆದ್ದರಿಂದ ಯುವಕರಿಗೆ ಆ ಬಗ್ಗೆ ಅಡಿಗರಿಂದ ಯಾವ ಬೋಧನೆಯೂ ದೊರೆಯಲಿಲ್ಲ. ಕಟ್ಟುವ ಕೆಲಸ ನಾಲ್ಕೈದು ವರ್ಷಗಳಲ್ಲಿ ಸಿದ್ಧಿಸಲಿಲ್ಲವೆಂದು ಗೊಣಗಾಟ ಆರಂಭಿಸಿದ ಹಲವು ಸಾಹಿತಿಗಳು ಹತಾಶೆಯನ್ನು ಒಂದು ಮೌಲ್ಯದ ಮಟ್ಟಕ್ಕೇರಿಸಿಬಿಟ್ಟದ್ದು ಮಾತ್ರ ಒಂದು ದುರಂತ, ಅವರಿಗೆ ಕೂಡಲೆ ಸಿದ್ಧಾಂತಗಳು, ಆದರ್ಶಗಳು, ಎಲ್ಲಾ ಅರ್ಥಹೀನವೆಂದು ಕಂಡವು. ಶಿವರಾಮ ಕಾರಂತರಂತಹ ದೃಢ ಸಾಹಿತಿಗಳಿಗೆ ಹತಾಶೆಯ ಲೋಪವು ಸುಳಿಯಲು ಅರ್ಧ ಶತಮಾನ ಬೇಕಾಯಿತು; ಆದರೆ ಪ್ರಗತಿಶೀಲರಿಗೆ ಹಾಗೂ ಅವರ ಹತ್ತಿರದ ಬಂಧುಗಳಿಗೆ ಅರ್ಧ ದಶಕವೇ ಸಾಕಾಯಿತು. ಪ್ರಗತಿಶೀಲ ಸಾಹಿತ್ಯದ ಸೋಲು ಇದರಲ್ಲಿದೆಯೆನ್ನಬಹುದು.

ಎಪ್ಪತ್ತರ ದಶಕದ ನಂತರ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಮಿಂಚಿದ ಪ್ರಗತಿಪರ ಧೋರಣೆಯ ಸಾಹಿತಿಗಳು ಒಂದು ರೀತಿಯ ಅರೆಕಾಲಿಕ-ಪ್ರಗತಿಶೀಲರು. ಯುರೋಪಿನಲ್ಲಿ ಅಸ್ತಿತ್ವವಾದವು ಪ್ರಖರವಾಗಿ ಬೆಳೆದು ನಿಂತರೆ ಅದನ್ನವರು ಕೂಡಲೆ ಆಮದು ಮಾಡಿಕೊಂಡು ತಮ್ಮ ಮೇಲೆ ಆವಾಹನೆ ಮಾಡಿಕೊಂಡರು. ಅಲ್ಲಿ ಅಸಂಗತ ನಾಟಕ ಬಂದರೆ ಇಲ್ಲಿ ಅದರ ಎರಡರಷ್ಟು ಜನ್ಮ ತಾಳಿತು. ಅಲ್ಲಿ ಅದು ಅದೃಶ್ಯವಾದಾಗ ಇಲ್ಲಿಯೂ ಅದೃಶ್ಯವಾಯಿತು. ಅನಾಥ ಪ್ರಜ್ಞೆಯದೂ ಅದೇ ಕತೆ. ಒಟ್ಟಿನಲ್ಲಿ, ಅಮೆರಿಕಾ-ಯುರೋಪಗಳ ವಾತಾವರಣವನ್ನು ತಮ್ಮ ಮೇಲೆ ಆರೋಪಿಸಿಕೊಂಡು ಕೃತಕ ಅನುಭವಗಳ ಹಾವಳಿಯಿಂದ ಸಾಹಿತ್ಯವು ಮಂಕಾಗಿ ಹೋಯಿತಾದರೂ ಅದನ್ನೇ ವಿಜೃಂಭಿಸಿದ್ದು ಒಂದು ಆಶ್ಚರ್ಯಕರ ಸಂಗತಿ. ಜೀವನದ ಅಸಾಂಗತ್ಯವು ನಮ್ಮ ವಾಸ್ತವಿಕ ಜೀವನದಿಂದ ಅನುಭವಕ್ಕೆ ಬಂದಿದ್ದರೆ ಸಾಹಿತ್ಯದ ಮೆರುಗು ಬಹುಶಃ ಬೇರೆ ರೀತಿಯಲ್ಲಿರುತ್ತಿತ್ತು. ಪಾತ್ರಗಳು ಹಾಗೂ ಸನ್ನಿವೇಶಗಳೂ ಬೇರೆ ಪ್ರಕಾರದಲ್ಲಿರುತ್ತಿದ್ದುವು. ಸಾಹಿತ್ಯವು ಜನರ ಬಳಿಗೆ ಹೋಗುವ ಬದಲು ಅವರಿಂದ ಹೆಚ್ಚು ಹೆಚ್ಚು ದೂರವಾದದ್ದು ಈ ಹಿನ್ನೆಲೆಯಲ್ಲಿ. ಅಂತಹ ಸಾಹಿತ್ಯದಲ್ಲಿ ಸಾಮಾಜಿಕ ಕಾಳಜಿಗೆ ವಿಶಿಷ್ಟ ಪ್ರಾಧಾನ್ಯವಿರಲಿಲ್ಲ; ಇದ್ದರೂ ಅದನ್ನು ಓದುಗರು ಗ್ರಹಿಸುವಂತಿರಲಿಲ್ಲ.

ಋಗ್ವೇದದ ಒಂದು ಸೂಕ್ತದಲ್ಲಿ ಕವಿ ಪ್ರತಿಭೆ, ನೈಪುಣ್ಯ, ಚಮತ್ಕಾರಗಳ ಬಗ್ಗೆ ವಿಸ್ಮಯ ಮತ್ತು ಪ್ರಶಂಸೆಯ ಕೆಲವು ಮಾತುಗಳಿವೆ. ಸಾಹಿತಿಯ ಶಕ್ತಿ ಅಸಾಧಾರಣವಾದ್ದು; ನಾವು ಕಂಡದ್ದನ್ನು ಮತ್ತು ಕೇಳಿದ್ದನ್ನೇ ಅವನೂ ಕಾಣುತ್ತಾನೆ, ಕೇಳುತ್ತಾನೆ. ಆದರೆ ನಾವು ಗುರುತಿಸದ ಏನನ್ನೋ ಅವನು ಗುರುತಿಸುತ್ತಾನೆ, ನಾವು ಗುರುತಿಸಿದರೂ ಹೇಳಲಾರದ್ದನ್ನು ಅವನು ಆಹ್ಲಾದಕರವಾದ ರೀತಿಯಲ್ಲಿ ಹೇಳುತ್ತಾನೆ. ಹೆಣ್ಣು ತನ್ನ ಗಂಡನ ಸನಿಹದಲ್ಲಿ ವಿವಸ್ತ್ರಳಾಗುವಂತೆ ಕಾವ್ಯಪ್ರತಿಭೆಯು ಕವಿಯ ಮನಸ್ಸಿಗೆ ತಂತಾನೇ ತೆರೆದುಕೊಳ್ಳುತ್ತದೆ. (ಉತ ತ್ವಃ ಪಶ್ಯನ್ ನ

ದದರ್ಶ ವಾಚಮುತತ್ವಃ ಶೃಣ್ವನ್ ನ ಶೃಣೋತ್ಯೇನಾಮ್। ಉತೋ ತ್ವಸ್ಮೈ ತನ್ವಂ ವಿ ಸಸ್ರೇ ಜಾಯೇವ ಪತ್ಯ ಉಶತೀ ಸುವಾಸಾಃ॥ ಋಗ್ವೇದ : ೧೦.೭೧.೪). ಸಾಹಿತಿಯು ಗ್ರಹಿಸುವ ಅಂಶಗಳಲ್ಲಿ ಸಾಮಾಜಿಕ ಕಾಳಜಿಯೂ ಸೇರಿರಬೇಕೆಂದು ನಿರೀಕ್ಷಿಸುವುದು ತಪ್ಪಲ್ಲ. ಮಧ್ಯಯುಗದ ಅವಧಿಯಲ್ಲಿ ಬಂದ ಸಂತ ಸಾಹಿತ್ಯ ಸಹ ಅಂದಿನ ಕಾಲಕ್ಕೆ ಪ್ರಗತಿ ಸಾಧನವಾಗಿತ್ತು. ಮಾನವನ ಪ್ರಗತಿಯನ್ನು ಸಾರುವ ಎಲ್ಲ ಸಾಹಿತ್ಯವೂ ಶ್ರೇಷ್ಠವೇ ಆಗಿರುತ್ತವೆ. ಸ್ವಭಾವತಃ ಒಬ್ಬ ವ್ಯಕ್ತಿಯು ಪ್ರಗತಿಶೀಲನೇ ಆಗಿರಬೇಕೆಂದು ಭಾವಿಸಲು ಯಾವ ಪುರಾವೆಯೂ ಇಲ್ಲ. ಮಾನವೀಯತೆ ಮತ್ತು ವರ್ಗಪ್ರಜ್ಞೆಯು ಲೇಖಕರನ್ನು ಪ್ರಗತಿಶೀಲರನ್ನಾಗಿ ಮಾಡುತ್ತವೆ. ಕೆಲಸ ಮಾಡದೆಯೇ ಜೀವನ ನಡೆಸುವ ಪರತಂತ್ರ ಜೀವಿಗಳ ಡಾಂಭಿಕ ಸಂಸ್ಕೃತಿಯ ಪ್ರತಿಪಾದಕರು ಪ್ರಗತಿಯ ವಿರೋಧಿಗಳು. ಸ್ವಭಾವವು ಅನುಭವಜನ್ಯವಾಗಿದ್ದು, ವಿವಿಧ ಕ್ರಿಯೆಗಳಲ್ಲಿ ಭಾಗವಹಿಸುತ್ತಿದ್ದಂತೆ ವ್ಯಕ್ತಿಯ ಸ್ವಭಾವವೂ ಬದಲಾಯಿಸುತ್ತದೆ. ವ್ಯಕ್ತಿಯ ಪ್ರಜ್ಞೆಯು ಆತನ ಸಾಮಾಜಿಕ ಅಸ್ತಿತ್ವದಿಂದ ರೂಪಿತವಾಗುತ್ತದೆಂಬುದು ಒಂದು ವೈಜ್ಞಾನಿಕ ಸತ್ಯ. ಈ ಸತ್ಯವನ್ನು ಅರಸುವುದು ಹಾಗೂ ಅರಗಿಸಿಕೊಳ್ಳುವುದು ಶ್ರೇಷ್ಠ ಸಾಹಿತ್ಯದ ಲಕ್ಷಣ.



# ಕುವೆಂಪು ನಾಟಕ ಭಾಷೆ

● *ರಾಮಲಿಂಗಪ್ಪ. ಟಿ. ಬೇಗೂರು*

**ಕು**ವೆಂಪು ಬಳಸಿರುವ ಸಾಹಿತ್ಯಭಾಷೆ ಏಕಾಕಾರಿಯಾದುದಲ್ಲ. ಇವರ ನಾಟಕಗಳ ಭಾಷೆಯೂ ಏಕಾಕಾರಿಯಲ್ಲ. ಭಾಷೆಯು ಕೃತಿಯಲ್ಲಿ ಪ್ರಕಾರದಿಂದ, ವಸ್ತು, ಪಾತ್ರಗಳಿಂದ ನಿರ್ದೇಶಿತವಾಗುತ್ತದೆ ಎಂಬುದು ಎಷ್ಟು ನಿಜವೋ ಹಾಗೇ ಅದು ವ್ಯಕ್ತಿ ವಿಶಿಷ್ಟವಾದದ್ದು ಎಂಬುದೂ ಅಷ್ಟೇ ನಿಜ. ಆದರೆ ಆಯಾ ವ್ಯಕ್ತಿ ವಿಶಿಷ್ಟ ಭಾಷೆಯು ಅದೇ ರೀತಿ ರೂಪಗೊಳ್ಳುವಲ್ಲಿ ಹತ್ತಾರು ಕಾರಣಗಳಿರಬಹುದು. ಅವೆಲ್ಲ ವೈಯಕ್ತಿಕ ಕಾರಣಗಳಾಗಿರುವಂತೆಯೇ ಸಮಾಜೋ-ಸಾಂಸ್ಕೃತಿಕ ಕಾರಣಗಳೂ ಆಗಿರುತ್ತವೆ. ಅವುಗಳಲ್ಲಿ ಕೆಲವನ್ನು ಚರ್ಚಿಸಲು ಈ ಟಿಪ್ಪಣಿಯಲ್ಲಿ ಯತ್ನಿಸಲಾಗಿದೆ.

೧. 'ಶ್ರೀಯವರಿಗೆ' ಎಂಬ ತಲೆಬರಹದಡಿ ಕುವೆಂಪು 'ಬೆರಳ್‌ಗೆ ಕೊರಳ್' ನಾಟಕದಲ್ಲಿ ಮೊದಲಿಗೆ ಒಂದೆರಡು ಮಾತು ಬರೆದಿದ್ದಾರೆ. ಇವು ಬಿ.ಎಂ.ಶ್ರೀ.ಯವರಿಗೆ ಬರೆದ ಮಾತುಗಳಾದರೂ ಈ ಮಾತುಗಳ ಭಾಷೆಗೂ ನಾಟಕದ ಮಾತುಗಳ ಭಾಷೆಗೂ ಅಂಥಾ ವ್ಯತ್ಯಾಸವೇನೂ ಇಲ್ಲ. ಇಲ್ಲಿ ಕುವೆಂಪು 'ನಿಮ್ಮ ಧರ್ಮಂ ನಿಮಗೆ ನನ್ನ ಧರ್ಮ ನನಗೆ ಪಲವು ಬಟ್ಟೆಗಳಲ್ತೆ ಭಗವದಿಚ್ಛೆಯ ಮನೆಗೆ' ಎಂದು ಹೇಳಿದ್ದಾರೆ. ಈ ಮಾತುಗಳು ಕುವೆಂಪು ಅವರ ಶೈಲಿ-ವಿಧಾನಗಳ ಕುರಿತು ಮಾತಾಡುತ್ತಿವೆ ಎಂಬುದು ಮುಖ್ಯ. ತಮ್ಮದೇ ಶೈಲಿ, ಮಾರ್ಗದಲ್ಲಿ ತಾವು ನಡೆಯಬೇಕೆಂಬ ಪ್ರಜ್ಞಾಪೂರ್ವಕ ನಿರ್ಧಾರ ಕುವೆಂಪು ಅವರ ಬರವಣಿಗೆಯ ಹಿಂದೆ ಇದೆ. ಕುವೆಂಪು ಅವರ ನಾಟಕ ಭಾಷೆ ಹೀಗಾಗಲು ಅವರ ವೈಯಕ್ತಿಕ ಅಪೇಕ್ಷೆ ಮೊಟ್ಟಮೊದಲ ಕಾರಣವಾಗಿದೆ.



೨. ಇವರ ನಾಟಕ ಭಾಷೆ ಕೈಲಾಸಂ/ಶ್ರೀರಂಗರಂತೆ ಆಡಬಹುದಾದ

ಭಾಷೆಯಲ್ಲ. ಪಠಿಸಬಹುದಾದ ವಾಚಿಸಬಹುದಾದ ಭಾಷೆ. ಒಂದೆರಡನ್ನು ಹೊರತು ಪಡಿಸಿದಂತೆ ಮಿಕ್ಕೆಲ್ಲ ಇವರ ನಾಟಕಗಳು ಕಾವ್ಯನಾಟಕಗಳು. ನಾಟಕವು ಕಾವ್ಯನಾಟಕವಾದಾಗ ಸಹಜವಾಗಿಯೇ ಅದರ ಭಾಷೆ ಭಿನ್ನವಾಗುತ್ತದೆ.

ಹಾಗೆ ನೋಡಿದರೆ ಕುವೆಂಪು ನಾಟಕಗಳ ಭಾಷೆ ಕಾವ್ಯಭಾಷೆ ಮತ್ತು ಆಡುಭಾಷೆಗಳ ಸಂಮಿಶ್ರಣ. ಕಾವ್ಯಾತ್ಮಕತೆಯು ಸಂಭಾಷಣಾ ಧಾಟಿಗೆ ಎರಕಗೊಳ್ಳುವಾಗ ನಿರ್ಮಾಣ ವಾಗಬಹುದಾದ ಭಾಷೆಯಿದು. ಮೇಲ್ನೋಟಕ್ಕೆ ಬಹು ಎಚ್ಚರದಿಂದ ಕಟ್ಟಲ್ಪಟ್ಟಿರುವ ಭಾಷೆಯಂತೆ ಇದು ಕಾಣುತ್ತದಾದರೂ ಇದರ ಆವಿರ್ಭವದಲ್ಲಿ ಪ್ರಜ್ಞಾಪೂರ್ವಕ ಎಚ್ಚರ ನಿರಂತರವಾಗಿ ಕೆಲಸ ಮಾಡಿಲ್ಲ. ಸಂಸ್ಕೃತ ಭೂಯಿಷ್ಠತೆ, ಹಳಗನ್ನಡ ಧಾಟಿ, ಕನ್ನಡತನ, ಆಡುಕನ್ನಡ ಗುಣ, ಆಂಗ್ಲಲಯ, ಓದುಗನ್ನಡ ಧಾಟಿಗಳೆಲ್ಲವೂ ಇವರ ಭಾಷೆಯೊಳಗೆ ಹುರಿಗೊಂಡಿವೆ.

ತಮ್ಮ ತಾತ್ವಿಕತೆ, ದರ್ಶನಗಳ ವಿಚಾರದಲ್ಲಿ ಕುವೆಂಪು ಶೂದ್ರತೆ, ಸ್ಥಳೀಯತೆ ಮತ್ತು ವಿಶ್ವಾತ್ಮಕತೆಗಳು ಬೆಸೆದುಕೊಂಡಂತಹ– ಪರಂಪರೆ ಮತ್ತು ವರ್ತಮಾನಗಳು ಸಂಗಮ ಗೊಂಡಂತಹ ಒಂದು ರೀತಿ 'ಪಂಚಲೋಹ'ದ ಥರದವರು. ಇದೇ ರೀತಿ ಇವರ ಭಾಷಾರೂಪ ಕೂಡ ಪಂಚಲೋಹ ಮಾದರಿಯದ್ದೇ. ಇವರ ನಾಟಕ ಭಾಷೆ ಹಲವು ಧಾಟಿಗಳು ಎರಕಗೊಂಡಿರುವ ಕುವೆಂಪು ಕನ್ನಡ. ಹಳಗನ್ನಡವೂ ಅಲ್ಲದ ಗಿಳಗನ್ನಡವೂ ಅಲ್ಲದ ಕುವೆಂಪು ಕನ್ನಡ.

೩. ಕುವೆಂಪುವೇ ಹೇಳಿಕೊಂಡಿರುವಂತೆ ಮಿಲ್ಟನ್ನನ ಎಪಿಕ್ ಬ್ಲಾಂಕ್ ವರ್ಸ್ ಇವರ ಭಾಷೆಯ ಮೇಲೆ ಅಪಾರ ಪ್ರಭಾವ ಬೀರಿದೆ. ಇವರ ನಾಟಕ ಭಾಷೆಯ ಮೇಲೆ ಇಂಗ್ಲಿಷಿನ ಬ್ಲಾಂಕ್ ವರ್ಸ್ ಮತ್ತು ಕನ್ನಡ ಪರಂಪರೆಯ ಹಳಗನ್ನಡ ಲಯ, ರಗಳೆ ಛಂದಗಳು ಬಹುತೆರನ ಪ್ರಭಾವಗಳನ್ನು ಬೀರಿವೆ. ಇಲ್ಲಿನ ಭಾಷೆಯ ಲಯ, ಗತಿ, ಪ್ರಾಸ, ನಾದಗಳು ಅದು ಹೊರಡಿಸುವ ಭಾವದೊಂದಿಗೆ–ಮಾಂತ್ರಿಕತೆಯೊಂದಿಗೆ ಬೇರ್ಪಡಿಸಲಾಗದಂತಹ ಸಂಬಂಧವನ್ನು ಪಡೆದಿವೆ.

೪. ಕುವೆಂಪು ನಾಟಕಗಳನ್ನು ಓದುತ್ತಿದ್ದರೆ–ಅಲ್ಲಿನ ಭಾಷಾ ಪ್ರಯೋಗವು ಸದಾ ಬಯಲಾಟ/ ಪೌರಾಣಿಕ ನಾಟಕಗಳ ಭಾಷೆಯನ್ನು ನೆನಪಿಗೆ ತರುತ್ತದೆ. ಜಾನಪದ ರಂಗಭೂಮಿಯ ಭಾಷೆ ಕುವೆಂಪು ನಾಟಕ ಭಾಷೆಯನ್ನು ನಿಸ್ಸಂಶಯವಾಗಿ ಪ್ರಭಾವಿಸಿದೆ.

೫. ನಾವು ಯಾರೊಂದಿಗೆ ಮಾತಾಡುತ್ತಿದ್ದೇವೆ ಎಂಬುದೇ ನಮ್ಮ ಭಾಷೆ ಹೇಗಿರಬೇಕೆಂದು ನಿರ್ಧರಿಸುತ್ತದೆ. ಉದಾ. ಗೆ ನಾವು ಭಿಕ್ಷುಕರೊಂದಿಗೆ ಮಾತಾಡುವಾಗ ಮತ್ತು ಶಾಲಾ ಬೋಧನೆಯಲ್ಲಿ ಒಂದೇ ರೀತಿ ಮಾತಾಡುವುದಿಲ್ಲ. ಮಗುವಿನೊಂದಿಗೆ ಮಾತಾಡುವಾಗ ಮತ್ತು ಮುಖ್ಯಮಂತ್ರಿಯೊಂದಿಗೆ ಮಾತಾಡುವಾಗ ನಮ್ಮ ಭಾಷೆಯ ಸ್ವರೂಪ ಒಂದೇ ಆಗಿರುವುದಿಲ್ಲ. ಅಂದರೆ ಲೇಖಕನ ಉದ್ದೇಶಿತ ಓದುಗ ವರ್ಗ ಯಾವುದೋ ಅದಕ್ಕೆ ತಕ್ಕಾದ ಭಾಷೆ ಆತನ ಬರವಣಿಗೆಯಲ್ಲಿರುತ್ತದೆ.

ಹಾಗಾದರೆ ಕುವೆಂಪು ಅವರ ಉದ್ದೇಶಿತ ಓದುಗ ವರ್ಗ ಯಾರಾಗಿದ್ದರು ? (ಇವತ್ತು

ಓದುಗರು ಯಾರಾಗಿದ್ದಾರೆ? ಆವತ್ತು ಓದುಗರು ಯಾರಾಗಿದ್ದರು ಎಂಬ ಸರ್ವೆಯನ್ನು ಆಧಾರವಾದಿಗಳಿಗೆ ಬಿಡೋಣ) ಕುವೆಂಪುಗೆ ನಾನು ಯಾರಿಗೆ ಬರೆಯುತ್ತಿದ್ದೇನೆ ಮತ್ತು ಯಾರ ಬಗೆಗೆ ಬರೆಯುತ್ತಿದ್ದೇನೆ, ಹೇಗೆ ಮತ್ತು ಏನು ಬರೆಯಬೇಕು ಎಂಬ ಖಚಿತ ತಿಳುವಳಿಕೆಯಿತ್ತು. ಇವರ ನಾಟಕಗಳು ಶಂಬೂಕ ನಾಟಕದ ಬ್ರಾಹ್ಮಣ ವರ್ಗ ಮತ್ತು ಏಕಲವ್ಯ ನಾಟಕದ ಅರ್ಜುನ ವರ್ಗದವರಿಗಾಗಿ ಬರೆದ ನಾಟಕಗಳು. ಹಾಗಾಗಿ ಈ ನಾಟಕಗಳ ಭಾಷೆ ಬ್ರಾಹ್ಮಣಿಕೆ ಮತ್ತು ಕ್ಷಾತ್ರತೆ ಉಳ್ಳ ವರ್ಗದವರಿಗೆ ಕಟ್ಟಿದ ಭಾಷೆಯಾಗಿತ್ತು. ಹಾಗಾಗಿ ಇವರ ಭಾಷೆಗೆ ಈ ಸ್ವರೂಪ ಬಂದಿರಬಹುದು. ಅಂದರೆ ಕುವೆಂಪು ಅವರ ಟಾರ್ಗೆಟ್ ಕೂಡ ಕುವೆಂಪು ಅವರ ಭಾಷೆಯನ್ನು ರೂಪಿಸಿದೆ ಎಂಬುದರಲ್ಲಿ ಎರಡು ಮಾತಿಲ್ಲ.

ತಾನು ಯಾತಕ್ಕಾಗಿ ಬರೆಯುತ್ತಿದ್ದೇನೆ ಎಂಬುದೂ ಲೇಖಕನ ಭಾಷಾ ಸ್ವರೂಪವನ್ನು ನಿರ್ಧರಿಸುತ್ತದೆ. ಕುವೆಂಪು ಅವರಿಗೆ ತಮ್ಮ ಕಾದಂಬರಿಗಳಲ್ಲಿ ಮಾಡಿರುವಂತೆ ಮಲೆನಾಡಿನ ಬದುಕನ್ನು ವಾಸ್ತವವಾದಿಯಾಗಿ ಕಟ್ಟಿಕೊಡುವ ಉದ್ದೇಶವಿಲ್ಲ. ಕುವೆಂಪು ನಾಟಕ ಬರೆಯುತ್ತಿರುವುದರ ಹಿಂದಿನ ಉದ್ದೇಶವೇ ಬೇರೆ. ನಾಟಕವೆಂಬ ಪ್ರಕಾರ ಇಲ್ಲಿ ನಿಮಿತ್ತ ಮಾತ್ರ, ತಮ್ಮ ತಾತ್ವಿಕತೆಯನ್ನು ಕುವೆಂಪು ಇಲ್ಲಿ ಈ ಮೂಲಕ ಪ್ರಕಟಪಡಿಸುತ್ತಿದ್ದಾರೆ ಅಷ್ಟೆ. ಹೀಗಾಗಿ ಇಲ್ಲಿ ಆಡು ಕನ್ನಡ ಪ್ರಯೋಗಿಸಿ–ಪ್ರಯೋಗಕ್ಕೆಂದೇ–ನಾಟಕ ಬರೆಯುವ ನಾಟಕಕಾರತನ ಅಷ್ಟಾಗಿ ಇಲ್ಲವಾಗಿದೆ. ಅಲ್ಲದೆ ೧೯೩೬ರಲ್ಲಿ ಪ್ರಕಟವಾದ ಹೆಗ್ಗಡಿತಿ ಕಾದಂಬರಿಯ ಭಾಷೆಗೂ ೧೯೪೪ ರಲ್ಲಿ ಪ್ರಕಟವಾದ ಶೂದ್ರ ತಪಸ್ವಿ ನಾಟಕದ ಭಾಷೆಗೂ ಸಂಬಂದವೇ ಇಲ್ಲ. ಅದೇ ೧೯೬೩ ರಲ್ಲಿ ಪ್ರಕಟವಾದ ಮದುಮಗಳು ಮತ್ತು ೧೯೭೪ರಲ್ಲಿ ಪ್ರಕಟವಾದ ಕಾನೀನ ಇವುಗಳ ಭಾಷೆಗೂ ಸಂಬಂಧವಿಲ್ಲ. ಅಂದರೆ ಕುವೆಂಪು ತಮ್ಮ ಪುರಾಣ ಪ್ರತಿಮಾ ನಾಟಕಗಳಿಗೆ ತಮ್ಮದೇ ಆದ ಬೇರೆಯ ಭಾಷೆಯೊಂದನ್ನು ನಿರ್ಮಿಸಿಕೊಂಡಿದ್ದಾರೆ. ಹಾಗೇ ಅದಕ್ಕೆ ಯಾವತ್ತೂ ಬದ್ಧವಾಗಿದ್ದಾರೆ ಎಂಬುದು ಕಾಣುತ್ತದೆ.

ಅಲ್ಲದೆ ಕುವೆಂಪು ಅವರ ರಂಗಭೂಮಿಯ ಕಲ್ಪನೆಯೇ ಭಿನ್ನ. ಅದು ಮನೋ ರಂಗಭೂಮಿಯ ಕಲ್ಪನೆ. (ಕಾದಂಬರಿಯನ್ನು ಇವರು ಕರತಲರಂಗಭೂಮಿ ಎಂದೇ ಕರೆದಿದ್ದಾರೆ.) ನಾಟಕ ರಚನೆ ಇವರಿಗೆ ಒಂದು ರಸ ತಪಸ್ಸು. ಇವರ ನಾಟಕಗಳು ಮೊದಲಿಗೆ ಸಾಹಿತ್ಯಕೃತಿಗಳು. ತಮ್ಮ ನಾಟಕಗಳು ಪ್ರಯೋಗಕ್ಕೆ ದರಿದ್ರವಾದವು ಎಂದೂ ಬರವಣಿಗೆಯ "ದೃಶ್ಯರೂಪ ಧಾರಣೆ ಮಾಡಿದ ಮಾತ್ರಕ್ಕೆ ಕಾವ್ಯವು ಟಿಕೇಟಿನ ಆಡಳಿತಕ್ಕೆ ಒಳಗಾಗಲೇ ಬೇಕೆಂಬ ದುರಾಗ್ರಹ ಹಳೆಯ ಪ್ರಯೋಜನದ ಒಂದು ನಿಷ್ಪ್ರಯೋಜಕವೂ, ಅವಶೇಷಾತ್ಮಕವೂ ಆಗಿರುವ ಮನಸ್ಥಿತಿ" ಎಂದೂ ಶೂದ್ರ ತಪಸ್ವಿ ನಾಟಕದ ಮುನ್ನುಡಿಯಲ್ಲಿ ಕುವೆಂಪು ಹೇಳಿದ್ದಾರೆ. ಆದರೆ ಸಮರ್ಥ ನಿರ್ದೇಶಕ ಅವುಗಳನ್ನು ಪರಿಣಾಮಕಾರಿಯಾಗಿ ಪ್ರದರ್ಶಿಸಬಲ್ಲ ಎಂಬುದು ಈಗಾಗಲೇ ಸಾಬೀತಾಗಿದೆ. ನಾಟಕವೆಂಬ ಸಾಹಿತ್ಯ ಪ್ರಕಾರವನ್ನು ರಚಿಸುವುದೇ ಪ್ರಯೋಗಕ್ಕಾಗಿ ಆದ್ದರಿಂದ ನಾಟಕ ಭಾಷೆಯು ಆಡುಕನ್ನಡ / 'ಸಂವಹನಶೀಲ' ಕನ್ನಡವೆ ಆಗಿರಬೇಕು ಎಂದು ಯಾರಾದರೂ ಯಾಕಾದರೂ ಭಾವಿಸಬೇಕು? ಎಂಬುದು ಕುವೆಂಪು ಪ್ರಶ್ನೆ. ಆಡುವುದಕ್ಕೆಂದೇ ನಾಟಕವನ್ನು ರಚಿಸಬೇಕಿಲ್ಲೆಂಬ ಇಂಥಾ ಕುವೆಂಪು ನಂಬಿಕೆ ಮತ್ತು ಕುವೆಂಪುರ ಮನೋ ರಂಗಭೂಮಿಯ ಕಲ್ಪನೆ ಇವರ ಭಾಷೆಯ ಹಿನ್ನೆಲೆಗೆ ಕೆಲಸ ಮಾಡಿದೆ.

೬. ನಿರ್ದಿಷ್ಟ ತಾತ್ವಿಕತೆಯನ್ನು ನಿರ್ದಿಷ್ಟ ಆಶಯಗಳನ್ನು ಇಟ್ಟುಕೊಂಡು ಅವುಗಳಿಗೆ ಸಾಹಿತ್ಯ ಪ್ರಕಾರಗಳನ್ನು ನಿರ್ಮಿಸುವಾಗ ಕಸುಬುದಾರಿಕೆ ಹೆಚ್ಚಿನ ಪಾತ್ರವನ್ನು ವಹಿಸುತ್ತದೆ. ಆದರೆ ಕುವೆಂಪು ರಂಗಾಕೃತಿ ನಿರ್ಮಾಣದಲ್ಲಿ ಹೆಚ್ಚಿನ ಕಸುಬುದಾರರಲ್ಲ, ಸೃಜನಶೀಲರು. ಇಲ್ಲಿ ಕುವೆಂಪುಗೆ ತನ್ನ ವರ್ಗದ ಅನುಭವ, ಒತ್ತಾಸೆ, ಪ್ರತಿಭಟನೆಗಳನ್ನು ಹೇಳಿಕೊಳ್ಳುವ ಮತ್ತು ತಮ್ಮದೇ ತಾತ್ವಿಕತೆಯನ್ನು ಮಂಡಿಸುವ ಒತ್ತಡ ಮುಖ್ಯವಾಗಿದೆಯೇ ಹೊರತು, ಪ್ರಕಾರದ ಕುರಿತ ತಾಂತ್ರಿಕತೆ–ಕಸುಬುದಾರಿಕೆ ಮುಖ್ಯವಾಗಿಲ್ಲ. ಅಂದರೆ ಕುವೆಂಪು ಭಾಷೆ ರಂಗ ಕುಶಲಿ ಭಾಷೆಯಲ; ಕವಿ ಭಾಷೆ. ರಂಗ ಸಂವಹನದ ತೊಡಕು ಇದೆಯೆಂದು ಕೆಲವರಿಗೆ ಅನ್ನಿಸುವುದು ಬಹುಶಃ ಈ ಕಾರಣಕ್ಕೇ ಇರಬಹುದು. ಇವರ ನಾಟಕದ ಭಾಷೆ ಹಳಗನ್ನಡದ ಹಾಗೆ ಇದೆ ಎಂದು ಕೆಲವರಿಗೆ ಅನ್ನಿಸಲೂ ಇದೊಂದು ಕಾರಣ ವಿರಬಹುದು. (ಹಾಗೆ ನೋಡಿದರೆ ನಾಟಕ ಕೃತಿಯಲ್ಲಿ ಬಳಕೆಯಾಗಿರುವ ಭಾಷೆಯನ್ನೇ ಯಾರೂ ತದ್ವತ್ತಾಗಿ ರಂಗದ ಮೇಲೆ ಬಳಸುವುದಿಲ್ಲ. ಅದು ಆಡುತ್ತಲೇ ರಂಗಭಾಷೆಯಾಗಿ ಮಾರ್ಪಾಡಾಗಿರುತ್ತದೆ. ಬರಹಭಾಷೆ ಮತ್ತು ರಂಗಭಾಷೆ ಎರಡೂ ಬೇರೆ ಬೇರೆ.

೭. ಭಾಷೆ ಅಥವಾ ಛಂದಸ್ಸು ಬರೀ ಸಾಹಿತ್ಯ ಶರೀರ ಅಷ್ಟೇ ಅಲ್ಲ. ಅದು ಬರಹಗಾರನ ಮೌಲ್ಯಪ್ರಜ್ಞೆ, ಅಭಿರುಚಿ, ತಾತ್ವಿಕತೆಗಳ ಕನ್ನಡಿಯೂ ಆಗಿರುತ್ತದೆ. ಹಾಗಾಗಿ ಅದು ವ್ಯಕ್ತಿಯ ಬದುಕಿನಿಂದಲೂ ಮತ್ತು ಆತ ಬಾಳುವ ಸಂಸ್ಕೃತಿಯಿಂದಲೂ ನಿರ್ದೇಶಿತವಾಗುತ್ತಿರುತ್ತದೆ. ಕುವೆಂಪು ಬಾಳುತ್ತಿದ್ದ ವಸಾಹತುಶಾಹಿ ಕಾಲವು ಹತ್ತಾರು ಪಲ್ಲಟಗಳು ಏಕಕಾಲಕ್ಕೆ ಸಂಭವಿಸುತ್ತಿದ್ದ ಸ್ಥಿತ್ಯಂತರದ ಕಾಲ. ಇಂಥಾ ಕಾಲದ ಎರಡು ಬಹುಮುಖ್ಯ ಸಾಮಾಜಿಕ ವಾಸ್ತವಗಳೆಂದರೆ; ಎಂ.ಎನ್.ಶ್ರೀನಿವಾಸ್ ಹೇಳಿರುವ ಸಂಸ್ಕೃತಾನುಕರಣ ಮತ್ತು ಪಾಶ್ಚಾತ್ಯೀಕರಣ ಕ್ರಿಯೆಗಳು. ತಾವು ಉನ್ನತವಾಗಬೇಕೆಂಬ 'ಮೇಲ್ಮುಖ ಚಲನೆ'ಯ ಮಾನವ ಸಹಜ ಕ್ರಿಯೆಗಳಿವು. ಕುವೆಂಪು ಜೀವನ ಶೈಲಿಯನ್ನು ರೂಪಿಸುವಲ್ಲಿ ಈ ಪ್ರಕ್ರಿಯೆಗಳೂ ಪಾಲ್ಗೊಂಡಿವೆ.

ಇವಕ್ಕೂ ಇವರ ಭಾಷೆಗೂ ಸಂಬಂಧವಿದೆ. ಕುವೆಂಪುರಲ್ಲಿನ ಸಾಮಾಜಿಕ ಉನ್ನತೀಕರಣದ– 'ಮೇಲ್ಮುಖ ಚಲನೆ'ಯ (?) ಧೋರಣೆಯೇ ಇವರ ಭಾಷಾಶೈಲಿಯನ್ನೂ ರೂಪಿಸಿರ ಬಹುದು. ಹೀಗಾಗಿ ಕುವೆಂಪು ಅವರದ್ದು ಹಳೇ ಭಾಷೆ–ಛಂದಸ್ಸಿನ ಸಂಪೂರ್ಣ ಸ್ವೀಕಾರವೂ ಅಲ್ಲದ, ತಿರಸ್ಕಾರವೂ ಅಲ್ಲದ ಪರಿಷ್ಕಾರ ಮಾರ್ಗವೊಂದನ್ನು ನಿರ್ಮಿಸುವ ಭಾಷಾ ಮಾರ್ಗ. ಅದೇ ರೀತಿ ಇದು ಒಂದು ಭಾಷಿಕ ಉನ್ನತೀಕರಣದ ಮಾದರಿಯಲ್ಲಿ ಸ್ವಾತಂತ್ರ್ಯಪ್ರಜ್ಞೆ ಪ್ರಕಟಗೊಂಡಿರುವ ಬಗೆ ಕೂಡ ಹೌದು. (ಇದೆಲ್ಲವೂ ಗತದ ಕುರಿತ ಕಣಿಯ ಹಾಗೆ ಅನ್ನಿಸಬಹುದು, ಅನ್ನಿಸಲಿ.)

೮. ಸಂಸ್ಕೃತಾನುಕರಣ, ಪಾಶ್ಚಾತ್ಯೀಕರಣಗಳ ಮೇಲ್ಮುಖ ಚಲನೆ ಮಾತ್ರವೇ ಅಂದಿನ ಸಾಮಾಜಿಕ ವಾಸ್ತವವಾಗಿತ್ತು ಎಂದೇನೂ ಅಲ್ಲ. ಇವುಗಳಿಗೆ ಭಿನ್ನವಾದ ದೇಸಿ ಕಡೆಗಿನ ಚಲನೆ– ಸಾಂಸ್ಕೃತಿಕ ಬೇರುಗಳ ಕಡೆಗಿನ ಚಲನೆಯೂ ವಾಸ್ತವವಾಗಿ ಇತ್ತು. ನಮ್ಮ ಅನುಕೂಲಕ್ಕೆ ಇದನ್ನು ಹಿಮ್ಮುಖ ಚಲನೆಯೆಂದು ಬೇಕಾದರೆ ನಾಮಕರಣ ಮಾಡಬಹುದು. (ಈ ರೀತಿಯ ಚಲನೆಯೂ ಇತ್ತು ಎನ್ನುವುದಕ್ಕೆ ಆಧಾರಗಳೇನೆಂದು ಆಧಾರವಾದಿ ಇತಿಹಾಸ

ಶಾಸ್ತ್ರಿಗಳು ಕೇಳಿದರೆ ಈ ಟಿಪ್ಪಣಿಯಲ್ಲಿ ಅದಕ್ಕೆ ವ್ಯಾಪ್ತಿಯಿಲ್ಲ.) ಕುವೆಂಪು ನಾಟಕಗಳಲ್ಲಿ ಈ ರೀತಿಯ ಹಿಮ್ಮುಖ ಚಲನೆಯನ್ನು ಕಾಣಲಾಗುವುದಿಲ್ಲ ಮತ್ತು ಇಂಗ್ಲಿಷ್ ಶಿಕ್ಷಣ ಪದ್ಧತಿ ಹಾಗೂ ಭಾರತೀಯ ಋಷಿ ಪ್ರಜ್ಞೆಯ ಉತ್ಪನ್ನ ಕುವೆಂಪು ಎಂಬುದು ಮೇಲ್ನೋಟಕ್ಕೇನೋ ನಿಜವೇ. ಆದರೆ ಇವರ ಬದುಕು, ಚಿಂತನೆ, ಧೋರಣೆಗಳ ಹಿಂದಿನ ಚಾಲಕಶಕ್ತಿ ಈ ಸಂಸ್ಕೃತ – ಪಶ್ಚಿಮ ಶಕ್ತಿಯ ದೇಸೀಕರಣ ಕೂಡ. ಮತ್ತು ಅವುಗಳ ಹುನ್ನಾರ ಕುಯುಕ್ತಿಯ ಛಿದ್ರೀಕರಣ ಕೂಡ.

ಕುವೆಂಪು ಕನ್ನಡದಲ್ಲಿ ಬರೆದದ್ದೇ ಒಂದು ಮಹಾಘಟನೆಯಲ್ಲವೇ – ಅದೇ ಅಂದಿಗೆ ದೊಡ್ಡ ದೇಸೀಕರಣ. ಇವತ್ತಿನ ಮಾದೇವ, ಸಿದ್ಲಿಂಗಯ್ಯ ಮೊದಲಾದವರ ಮೂಲಕ ನೋಡಿದರೆ ಕುವೆಂಪುರಲ್ಲಿ ತೀವ್ರ ತೆರನ ಹಿಮ್ಮುಖ ಚಲನೆ ಢಾಳಾಗಿ ಕಾಣುವುದಿಲ್ಲವಷ್ಟೆ. ಮಾದೇವನಂಥವರು, ಸಿದ್ಲಿಂಗಯ್ಯನಂಥವರು ಅಥವಾ ಇಂಥಾ ಪೀಳಿಗೆ ತಮ್ಮದೇ ಭಾಷೆಯನ್ನು ರೂಪಿಸಿಕೊಳ್ಳುವ ಹಿಂದಿನ ಚಿಮ್ಮುಹಲಗೆಯಾಗಿ ಕುವೆಂಪು ಕೆಲಸ ಮಾಡಿದ್ದಾರೆ ಎಂಬುದರಲ್ಲಿ ಎರಡು ಮಾತಿಲ್ಲ. ಕುವೆಂಪು ತಮ್ಮ ತಾತ್ವಿಕತೆಯಿಂದ ಮಾತ್ರ ನಂತರದ ಪೀಳಿಗೆಯಲ್ಲಿ ವಿವೇಕವನ್ನು ಹುಟ್ಟಿಸಲಿಲ್ಲ. ತಮ್ಮ ಭಾಷೆಯ ನಿರ್ಮಿತಿಯಿಂದಲೂ ಹಲತೆರನ ವಿವೇಕವನ್ನು ಹುಟ್ಟಿಸಿದ್ದಾರೆ. (ಸ್ತುತಿ, ನಿಂದಾಸ್ತುತಿಗಳೆರಡೂ ಅನುರಣಿಸಿವೆ)

೯. ನಮ್ಮಲ್ಲಿ ಸಂಸ್ಕೃತ ಭೂಯಿಷ್ಠತೆ (ಅಥವಾ ಸಂಸ್ಕೃತಾನುಸಂಧಾನ) ಕನ್ನಡವನ್ನು ಬಲಿಷ್ಠಗೊಳಿಸುವ, ಕನ್ನಡಕ್ಕೆ ಉನ್ನತ ಅಂತಸ್ತನ್ನು ತಂದು ಕೊಡುವ, ಸಂಸ್ಕೃತದ ಸಮಕ್ಕೆ ಕನ್ನಡವನ್ನು ಕಟ್ಟಿ ನಿಲ್ಲಿಸುವ ಕ್ರಿಯೆಯಾಗಿ ಸಾಹಿತ್ಯ ಚರಿತ್ರೆಯುದ್ದಕ್ಕೂ ನಡೆಯುತ್ತ ಬಂದಿದೆ. ಈ ಕ್ರಿಯೆ ಈಗಾಗಲೇ ಇಂಗ್ಲಿಷಿನೆದುರಿಗೆ ಕೂಡ ಆರಂಭವಾಗಿದೆ. ನಿಮಗಿಂತ ನಾನೇನು ಕಮ್ಮಿಯಲ್ಲ ಅನ್ನೋಥರದ ಗೈರತ್ತು ಇದು. ಅಧ್ಯಾತ್ಮ, ವಿಜ್ಞಾನವೂ ಸೇರಿದಂತೆ ಲೋಕದ ಎಲ್ಲ ಜ್ಞಾನವನ್ನೂ ಕನ್ನಡದಲ್ಲಿ ಹೇಳಬಹುದೆಂಬ ಅಂಥಾ ಶಕ್ತಿ ಕನ್ನಡಕ್ಕಿದೆಯೆಂಬ ನಂಬಿಕೆಯಿಂದ ಹುಟ್ಟುವ ಕ್ರಿಯೆ ಇದು. ಇದು ಕುವೆಂಪು ನಾಟಕ ಭಾಷೆಯ ಹಿಂದೆಯೂ ಸಾಕಷ್ಟು ಕೆಲಸ ಮಾಡಿದೆ.

**ಶಕ್ತ ಕವಿಯೊಬ್ಬ ಭಾಷೆಗೆ ಹೊಸವರಸೆ/ಉತ್ಪಾದಕತೆ/ಆಕಾರಗಳನ್ನು, ಅದುವರೆಗೆ ಬಳಕೆಯಲ್ಲಿ ಇಲ್ಲದಿರಬಹುದಾದ ಒಂದು ಹೊಸ ಅವತಾರವನ್ನು ಸೃಷ್ಟಿಸಿ ಸೇರಿಸುತ್ತಾನೆ ಎಂಬುದು ಕುವೆಂಪು ವಿಚಾರದಲ್ಲಿ ನಿಜ. ಕುವೆಂಪು ತಮ್ಮದೇ ಆದ ಒಂದು ಡಿಕ್ಷನ್ ಅನ್ನು ಇಲ್ಲಿ ನಿರ್ಮಿಸಿಕೊಂಡಿದ್ದಾರೆ. ಅದಕ್ಕಾಗಿಯೇ ಕುವೆಂಪು ನಾಟಕ ಭಾಷೆಯನ್ನು ಕುವೆಂಪು ಕನ್ನಡ ಎಂದು ಕರೆದಿರುವುದು.**

೧೦. ಕುವೆಂಪು ನಾಟಕಗಳ ಭಾಷೆ ಈಗಾಗಲೇ ಬದಲಾವಣೆಗೆ ಈಡಾಗಿದೆ. ದೇ.ಜ.ಗೌ. ಈಗಾಗಲೇ ಶೂದ್ರತಪಸ್ವಿ, ಬೆರಳ್ಗೆ ಕೊರಳ್, ಇತ್ಯಾದಿ ನಾಟಕಗಳನ್ನು ಹೊಸದಾಗಿ ಅಕ್ಷರ ವಯಸ್ಕರಿಗೆ ಮತ್ತು ಮಕ್ಕಳಿಗೆ ಅರ್ಥವಾಗುವ ಹಾಗೆ ಸರಳಾನುವಾದ ಮಾಡಿದ್ದಾರೆ. ಅವುಗಳ ಕಥಾರೂಪ ಕೂಡ ಸಿದ್ಧ ಮಾಡಿದ್ದಾರೆ. ಇದಕ್ಕೆ ಸ್ವತಃ ಕುವೆಂಪುನೇ ಪ್ರೋತ್ಸಾಹಿಸಿ, ಹರಸಿ, ಅನುಮತಿ ನೀಡಿದ್ದಾರೆಂದು ಇವರು ಮಕ್ಕಳ ಶೂದ್ರತಪಸ್ವಿ(ಪು.೮೫) ನಾಟಕದ

ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ. ಕುವೆಂಪುರ ಬೆರಳ್ಗೆಕೊರಳ್, ಶೂದ್ರತಪಸ್ವಿ, ಸ್ಮಶಾನಕುರುಕ್ಷೇತ್ರ ನಾಟಕಗಳ ರಂಗಪಠ್ಯವನ್ನು ಜಿ.ಎಸ್. ಶಿವರುದ್ರಪ್ಪ ನಿರ್ಮಾಣ ಮಾಡಿದ್ದಾರೆ. (ನೋಡಿ;ರಾಷ್ಟ್ರಕವಿ ಕುವೆಂಪು ವಿಚಾರ ವೇದಿಕೆಯಿಂದ ಪ್ರಕಾಶಿತ: ೨೦೦೦) ಜಿ.ಎಸ್.ಎಸ್.ರ ಈ ರಂಗಪಠ್ಯವನ್ನು ಕೆಲವರು 'ಸಂವಹನಾರ್ಥ ಕನ್ನಡ' ಎಂದು ಕರೆದಿದ್ದಾರೆ (ನೋಡಿ;ಜನಸಂಸ್ಕೃತಿ ಉತ್ಸವದ ಆಹ್ವಾನ ಪತ್ರಿಕೆ: ೨೦೦೧) ಮತ್ತೆ ಕೆಲವರು ಇದನ್ನು 'ಸರಳ ಪಠ್ಯ'ಎಂದೂ ಕರೆದಿದ್ದಾರೆ. (ನೋಡಿ;ನಾಗತಿಹಳ್ಳಿ ಸಂಸ್ಕೃತಿ ಹಬ್ಬ ೨೦೦೪ರ ಆಹ್ವಾನ ಪತ್ರಿಕೆ) ಪ್ರೊ. ಕಿ.ರಂ. ನಾಗರಾಜ ಅವರಂತೂ ಜಿ.ಎಸ್.ಎಸ್.ರ 'ರಂಗಪಠ್ಯ' ನಿರ್ಮಾಣವನ್ನು ವಿರೋಧಿಸಿ ಒಂದು ಲೇಖನವನ್ನೇ ಬರೆದಿದ್ದಾರೆ. (ನೋಡಿ; ಹಂಗಾಮ;ಮೇ-೧-೨೦೦೪ರ ಸಂಚಿಕೆ) ಜಿ.ಎಸ್.ಎಸ್. ರಂಗಪಠ್ಯ ನಿರ್ಮಾಣ ಕ್ರಿಯೆಯನ್ನು ವಿರೋಧಿಸಿ ಪತ್ರಿಕಾ ಹೇಳಿಕೆಯನ್ನೂ ನೀಡಲಾಗಿದೆ.

ಯಾವುದೇ ಒಬ್ಬ ಬರಹಗಾರನ ಭಾಷೆ-ಛಂದೋ ಪ್ರಮಾಣಗಳನ್ನು ಒಂದು ಕಾಲವು ಯಾಕೆ ಒಪ್ಪುತ್ತದೆ ಅಥವಾ ಬದಲಾಯಿಸಿಕೊಳ್ಳಲು ಅಪೇಕ್ಷಿಸುತ್ತದೆ ಎಂಬುದು ಕೂಡ ಆಯಾ ಕಾಲದ ಅಗತ್ಯ, ಅಪೇಕ್ಷೆ, ಶಕ್ತಿ, ಮೌಲ್ಯ ಪ್ರಜ್ಞೆಗಳನ್ನು ಬಿಂಬಿಸುತ್ತದೆ. ಇದು ಕೆಲವೊಮ್ಮೆ ಪ್ರಕಾರ ಅಥವಾ 'ಬಳಕೆ'ಯ ಸಾಹಿತ್ಯದ ಪ್ರಮಾಣ ಭಾಷೆಯೊಂದರಿಂದಲೂ ನಿರ್ದೇಶಿತ ವಾಗುತ್ತಿರುತ್ತದೆ. ಕೆಲವೊಮ್ಮೆ ಇದು ಜನಸಮುದಾಯದ ಭಾಷಾಶಕ್ತಿ ಅಥವಾ ಪದಶಕ್ತಿಯ ದುರ್ಬಲತೆಯಿಂದಲೂ ನಿರ್ದೇಶಿತವಾಗುತ್ತಿರುತ್ತದೆ. ಸಿನಿಮಾ, ಟಿ.ವಿ, ಪತ್ರಿಕಾ ಮಾಧ್ಯಮಗಳ ಏಕರೂಪ ಭಾಷಾರೂಪಣೆಯ ದಾಳಿಯಿಂದ ಯಾವ ಸಮಾಜವು ಭಿನ್ನ ಭಿನ್ನ ಭಾಷಾ ವೈವಿಧ್ಯತೆಗಳನ್ನು ಕಳಕೊಳ್ಳುತ್ತಾ ತನ್ನ ಬಹುರೂಪಿ ಭಾಷಿಕ ಆಯ್ಕೆಗಳನ್ನು ಸಂಕುಚಿತಗೊಳಿಸಿ ಕೊಂಡಿರುತ್ತದೋ ಅಂಥದೊಂದು ಸಮಾಜ ತನಗೆ ಬೇಕಾದ ಭಾಷೆಯ ಮೂಲಕವೇ ಎಲ್ಲವೂ ದೊರಕಬೇಕೆಂದು ಅಪೇಕ್ಷಿಸುತ್ತದೆ.

ಕತೆ, ಕಾದಂಬರಿ ಕಾವ್ಯಗಳಿಗೆ ರಂಗರೂಪ ನೀಡುವ ಪದ್ಧತಿ ನಮ್ಮಲ್ಲಿ ಚಾಲ್ತಿಯಲ್ಲಿದೆ. ಅಂದರೆ ನಾಟಕಗಳಿಗೆ ಈ ಪದ್ಧತಿ ಅನ್ವಯವಲ್ಲವಾ? ಕುವೆಂಪು ನಾಟಕಗಳಿಗೆ 'ರಂಗಪಠ್ಯ' ನಿರ್ಮಿಸಿ ಅದನ್ನು ಪುಸ್ತಕ ರೂಪದಲ್ಲೂ ಮುದ್ರಿಸಲಾಗಿದೆ. ಶಿಕ್ಷಿತರು ಮತ್ತು ಪಂಡಿತರಲ್ಲಿ ಒಂದು ವರ್ಗವನ್ನು ಹೊರತುಪಡಿಸಿದರೆ ಮಿಕ್ಕವರಿಗೆ ಕುವೆಂಪು ನಾಟಕಗಳ ಭಾಷೆ ಸಂವಹನದ ತೊಡಕನ್ನು ಒಡ್ಡುತ್ತದೆ. ಹೀಗಿರುವಾಗ ಇನ್ನಷ್ಟು ಜನಕ್ಕೆ ಕುವೆಂಪು ತಲುಪಲು ಜಿ.ಎಸ್.ಎಸ್ ರೀತಿಯ ಪಠ್ಯಾಂತರಗಳು ಸದಾ ಸಮಾಜದಲ್ಲಿ ಆಗುತ್ತಿರುತ್ತವೆ, ಹೋಗುತ್ತಿರುತ್ತವೆ. ಆದರೆ ಅದೇ ಒಂದು ಸ್ಟಾಂಡರ್ಡ್ ಅಂತಾಗಬಾರದು ಅಷ್ಟೆ. ಕುವೆಂಪು ನಾಟಕಗಳು ಭಾಷೆಯ ಕಾರಣಕ್ಕೆ ಕೆಲವರಿಗೆ ತಲುಪಲಾರವು ಎನ್ನುವುದಾದರೆ ಭಾಷೆಯು ಎಷ್ಟು ಅವತಾರಗಳನ್ನು ಎತ್ತುತ್ತದೋ ಎತ್ತಲಿ. ಒಂದು ಭಾಷೆಯು ಇನ್ನೊಂದು ಭಾಷೆಯಾಗಿ ಅವತರಿಸಿದಾಗ / ರೂಪಾಂತರಗೊಂಡಾಗ ಮೊದಲ ರೂಪದ ಮಾಂತ್ರಿಕತೆಗಳು, ನಾದವಿನ್ಯಾಸ, ಪರಿಣಾಮರಮಣೀಯತೆಗಳು ನಷ್ಟವೂ ಆಗಬಹುದು. ಆದರೆ ಆಗಲಿ. ಚಲಾವಣೆ, ಜನಬಳಕೆ ಮುಖ್ಯ. ❑

# ಪ್ರಗತಿಶೀಲ ಸಾಹಿತ್ಯ : ನಿಸರ್ಗ ಹಾಗೂ ಸಮಾಜ

● *ಆರ್.ಜಿ. ಹಳ್ಳಿ ನಾಗರಾಜ್*

ಪ್ರಗತಿಶೀಲ ಸಾಹಿತ್ಯವನ್ನು ಒಂದು ಚಳುವಳಿಗಾಗಿ ಗುರ್ತಿಸಲಾಗಿದೆ. ಭಾರತದ ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯೋತ್ತರದ ಸಂದರ್ಭ ದಲ್ಲಿ ಎಡಪಂಥೀಯ ಚಿಂತನೆಯ ಮೂಸೆಯಲ್ಲಿ ಹುಟ್ಟಿದ ಈ ಪ್ರಕಾರ ಪ್ರಗತಿಶೀಲ ಎಂಬುದು ಇತಿಹಾಸದ ಮಾತು.

"ಚಳುವಳಿ ಮೂಲತಃ ಶುದ್ಧ ಸಾಹಿತ್ಯಿಕ ಪರಿಕಲ್ಪನೆಯಲ್ಲ. ರಾಜಕೀಯ, ಸಾಮಾಜಿಕ, ಧಾರ್ಮಿಕ ವಲಯಗಳಿಗೆ ಸಂಬಂಧಿಸಿದ್ದು; ಸಾಮೂಹಿಕ ಹೋರಾಟವನ್ನು ಸೂಚಿಸುವಂಥದು. ವ್ಯಕ್ತಿಯೊಬ್ಬನ ಏಕಾಂತ ಧ್ಯಾನದಲ್ಲಿ ಸೃಷ್ಟಿಯಾಗುವ ಸಾಹಿತ್ಯವನ್ನೂ, ಸಾಮೂಹಿಕ ಹೋರಾಟದ ಚಳುವಳಿಯನ್ನೂ ಒಟ್ಟಿಗೇ ಇಟ್ಟು ನೋಡುವುದೇ ತೊಡಕಿನದಾಗಿ ಕಾಣುತ್ತದೆ. ಆದರೆ ಆಧುನಿಕ ಸಾಹಿತ್ಯ ವಿಮರ್ಶೆಯಲ್ಲಿ 'ಸಾಹಿತ್ಯ ಚಳುವಳಿ' ಎಂಬ ಪರಿಭಾಷೆ ಬಳಕೆಯಾಗುತ್ತಿದೆ. ವಿಶಾಲ ವಾದ ಅರ್ಥದಲ್ಲಿ ಇದನ್ನು ನಾವು ಸಾಹಿತ್ಯದಲ್ಲಿ ಆಗಿಂದಾಗ್ಗೆ ಆಗುತ್ತಿರುವ ಬದಲಾವಣೆಯ ಹಂತಗಳಿಗೆ ಅನ್ವಯಿಸಿ ಬಳಸುತ್ತಿದ್ದೇವೆ. ಆಧುನಿಕ ಸಾಹಿತ್ಯ ವಿಮರ್ಶೆಯಲ್ಲಿ ರೂಪುಗೊಂಡ ಈ ಪರಿಕಲ್ಪನೆ ಯನ್ನು ಈಗ ನಾವು ಪ್ರಾಚೀನ ಸಾಹಿತ್ಯಕ್ಕೂ ಅನ್ವಯಿಸುತ್ತಿದ್ದೇವೆ."



ಸಾಹಿತ್ಯ ಚಳುವಳಿ ಎಂಬ ಪರಿಭಾಷೆ ಅಭ್ಯಾಸಕ್ಕೆ ಅನುಕೂಲ ವಾಗುವ ಕ್ರಮವೂ ಕೂಡ ಆಗಿರುವುದರಿಂದ ಒಂದು ಕಾಲಘಟ್ಟದಲ್ಲಿ ಒಡಮೂಡುವ ಸಾಹಿತ್ಯ ವಿಚಾರಗಳ ದಾಖಲಾತಿಯೂ ಆಗಿರುತ್ತದೆ. ಹೀಗಾಗಿ ಚಳುವಳಿ ಮೂಲಕ ಹುಟ್ಟುವ ಯಾವುದೇ ಸಾಹಿತ್ಯ ಪ್ರಕಾರಕ್ಕೆ ವ್ಯಕ್ತಿ ಹಾಗೂ ಸಮಾಜದ ಒಡನಾಟ, ನಿಸರ್ಗ ಹಾಗೂ ಸಮಾಜದ ನಡುವಿನ ಹೊಂದಾಣಿಕೆ ದಾಖಲಾತಿ ದಕ್ಕಿವೆ. ಸಾಹಿತ್ಯ ವಿದ್ಯಾರ್ಥಿಯಾದವನಿಗೆ ಚಳುವಳಿಗಳ ಪರಿಚಯದ ಅಗತ್ಯ ಬೇಕಾಗುವುದಾದರೂ, ಮನರಂಜನೆಗಷ್ಟೇ ಸಾಹಿತ್ಯವನ್ನು ಓದುವವನಿಗೆ ಇವಾವುದರ ಕಲ್ಪನೆಯೂ ಇದರ ಛಾಯೆಯೂ

ಅಗತ್ಯವಿಲ್ಲ. ಆದರೆ, ಸಾಹಿತ್ಯದಲ್ಲಿ ಮನುಷ್ಯನ ಹುಡುಕಾಟ ನಿಸರ್ಗದ ಜೊತೆಗಿನ ಸಂಬಂಧದಷ್ಟೇ ಪ್ರಮುಖವಾದದ್ದು. ನಿಸರ್ಗದೊಟ್ಟಿಗೆ ಬದುಕುವ ಮನುಷ್ಯ ತನ್ನ ಸೃಷ್ಟಿ ಕ್ರಿಯೆಯನ್ನು ಸಾಮಾಜಿಕ ಸ್ಥಿತ್ಯಂತರದಲ್ಲೂ ಕೂಡ ಲೆಕ್ಕಿಸುತ್ತಾ ಸಾಗುತ್ತಾನೆ. ಸಾಹಿತ್ಯದ ಈ ಸಾಗುವಿಕೆ ಕಥೆ, ಕಾವ್ಯ, ಕಾದಂಬರಿ ಲೇಖನಗಳ ಮುಖೇನ ಒಡಮೂಡಿ ಒಂದು ಕಲಾಕೃತಿಯ ನಿರ್ಮಾಣಕ್ಕೆ ಕಾರಣ ವಾಗುತ್ತದೆ. ಮನುಷ್ಯ ನಿಸರ್ಗದ ಶಿಶು ಎಂಬ ಮಾತಿದೆ. ಇದಕ್ಕೆ ಪೂರಕವಾಗಿ ನಮ್ಮ ಸಾಹಿತ್ಯ ಚರಿತ್ರೆಯ ಪುಟಗಳೂ ಕೂಡ ದಾಖಲಾತಿ ಒದಗಿಸುತ್ತವೆ.

"ನಿಸರ್ಗ ಚಿತ್ರಣವು ಯಾವುದೇ ಸಾಹಿತ್ಯದಲ್ಲಿ ಇದ್ದೇ ಇರುತ್ತವೆಯೆಂದು ಖಚಿತವಾಗಿ ಹೇಳುವಷ್ಟು ವ್ಯಾಪಕತೆಯನ್ನು ಪಡೆದಿದೆ. ಇದು ಪ್ರಾಚೀನ ಸಾಹಿತ್ಯದಿಂದ ಆಧುನಿಕ ಸಾಹಿತ್ಯ ದವರೆಗೂ ಸತ್ಯ. ಆದರೆ ನಿಸರ್ಗವೂ ಕೇವಲ ಚಿತ್ರವಾಗಿ ಮೂಡಿದೆಯೊ ಅಥವಾ ಅರ್ಥದ ಆಯಾಮಗಳನ್ನು ನಿರ್ಮಿಸುವ ಸಾಧ್ಯತೆಗಳನ್ನು ಪಡೆದಿದೆಯೊ ಎಂಬ ಪ್ರಶ್ನೆ ಮುಖ್ಯವಾದುದು. ನಿಸರ್ಗ ಚಿತ್ರಣದ ವಿಧಾನದಲ್ಲಾಗುತ್ತಿರುವ ಬದಲಾವಣೆಗಳಿಗೂ ಸಾಮಾಜಿಕ ಸ್ಥಿತ್ಯಂತರಕ್ಕೂ ಇರುವ ಸಂಬಂಧವನ್ನು ಶೋಧಿಸುವ ಪ್ರಯತ್ನವು ಸಾಹಿತ್ಯ ಮತ್ತು ಸಾಹಿತ್ಯ ವಿಮರ್ಶೆಯ ಹೊಸ ಸಾಧ್ಯತೆಗಳನ್ನು ತೆರೆಯುತ್ತದೆ. ಬನವಾಸಿಯ ಬಗೆಗಿನ ಅಭಿಮಾನವಾಗಲಿ, ವಸಂತ ವರ್ಣನೆಯಾಗಲಿ, ಕಡಲಿನ ಭೋರ್ಗರೆತವಾಗಲಿ, ಮಳೆಯ ಮಾತಾಗಲಿ, ಸುಂದರ ಚಿತ್ರಗಳಷ್ಟೇ ಆಗದೆ, ಆಯಾ ಸನ್ನಿವೇಶಗಳನ್ನು ಪ್ರತಿಮಿಸುವ ವಿಧಾನವಾಗಿರಲು ಸಾಧ್ಯ. ಈ ಅಭಿವ್ಯಕ್ತಿ ವಿಧಾನವು ಸಾಮಾಜಿಕ ಸ್ಥಿತ್ಯಂತರಕ್ಕನುಗುಣವಾಗಿ ವಿಶೇಷ ಅರ್ಥ ವಿನ್ಯಾಸಗಳನ್ನು ಹುಟ್ಟುಹಾಕುವುದುಂಟು. ಸೂರ್ಯೋದಯವು ಒಬ್ಬೊಬ್ಬ ಕವಿಗೂ ಒಂದೊಂದು ರೀತಿಯಲ್ಲಿ ಕಾಣಿಸುವುದರ ಹಿಂದೆ ಕವಿಯ ಕಾಣ್ಕೆಯಿರುವಷ್ಟೇ ಕಾಣ್ಕೆಯ ಹಿಂದೆ ಸಾಮಾಜಿಕ ಸಂದರ್ಭದ ಒತ್ತಾಸೆಯೂ ಇರಬಹುದು. ಹೀಗೆ ಶೋಧಿಸುತ್ತ ಹೋದಂತೆ ಹೊಸ ಹೊಳಹುಗಳು ಮಿಂಚಬಹುದು."

'ನಿಸರ್ಗ'-ಸೃಷ್ಟಿಯ ಅರ್ಥ ವಿನ್ಯಾಸವನ್ನು ಆಕೃತಿಗೊಳಿಸುತ್ತ, ತನ್ನ ರಚನಾತ್ಮಕತೆಯನ್ನು ಇನ್ನೂ ವ್ಯಾಪಕಗೊಳಿಸುವ ಸಹಜ ಸ್ವಭಾವ ಹೊಂದಿದೆ. ಸ್ವಾಭಾವಿಕವಾದದ್ದನ್ನು ಸ್ವೀಕರಿಸುತ್ತ, ಅಸ್ವಾಭಾವುಕವಾದದ್ದನ್ನು ತಿರಸ್ಕರಿಸುವ ಹಂತದಲ್ಲಿ ಈ ನಿಸರ್ಗ ಮನುಷ್ಯನ ಬದುಕಿನಲ್ಲಿ ಮಹತ್ವದ ಪಾತ್ರ ವಹಿಸುತ್ತದೆ. ಮನುಷ್ಯ ವ್ಯಕ್ತಿಯಾಗಿ, ಸಾಮೂಹಿಕವಾಗಿ ಬದುಕುತ್ತ, ತನ್ನ ಒಳ, ಹೊರಗುಗಳನ್ನು ಬಿಚ್ಚಿಕೊಳ್ಳುವ ತವಕದಲ್ಲಿ ಬರಹದ ಮೊರೆ ಹೋಗುತ್ತಾನೆ. ಆಗ ತನ್ನ ಅನುಭವವನ್ನು ವೈಯಕ್ತಿಕತೆಯಿಂದ ಸಾರ್ವತ್ರಿಕದೆಡೆಗೆ ಕೊಂಡೊಯ್ಯುವ ಪ್ರಯತ್ನಮಾಡಿದಾಗ ಸಮಾಜದ ಪರಿಕಲ್ಪನೆಯ ದೃಷ್ಟಿಯನ್ನು ಆತ ಹೊಂದಿರುತ್ತಾನೆ. ತನ್ನ ಕಾಲವನ್ನು ಸಮಾಜ ಮುಖಿಯಾಗಿಸುತ್ತ, ಬದಲಾವಣೆಯ ಓಘವನ್ನು ಚಿಂತನಶೀಲವಾಗಿಸುತ್ತಲೇ ಸೃಷ್ಟ್ಯಾತ್ಮಕ ಪ್ರಕ್ರಿಯೆಗೆ ಒಡ್ಡಿದಾಗ ಸಾಮಾಜಿಕ ಸ್ಥಿತ್ಯಂತರವನ್ನು ಗುರ್ತಿಸಲು ಸಾಧ್ಯ.

ಬರಹಗಾರನ ಸಾಮಾಜಿಕ ದೃಷ್ಟಿಕೋನ ಅನುಭವದ ಸೀಮಾರೇಖಾ ಪರಧಿಯನ್ನು (ದೃಷ್ಟಿಕೋನದಲ್ಲಿ) ಅವಲಂಬಿಸಿರುತ್ತದೆ. ಆಗ ಬದುಕಿದ ಮಜಲುಗಳಿಗೆ ಪೂರಕ ಸನ್ನಿವೇಶ, ಹುಡುಕಾಟ ನಡೆಸುತ್ತ ; ತನ್ನ ಅರಿವಿನ ಆಳ-ಅಗಲಗಳ ಅಳತೆಗೋಲನ್ನು ಈ ಸ್ಥಿತ್ಯಂತರದಲ್ಲಿ

ಅನ್ವೇಷಣೆ ಮಾಡುವುದು ಮೂಲ ಚಿಂತನಾ ಕ್ರಮಕ್ಕೆ ದಾರಿ ಮಾಡಿಕೊಡುವುದಾಗಿದೆ. ಇಂಥ ನೈಸರ್ಗಿಕ ಬದಲಾವಣೆಗಳನ್ನು ಗುರ್ತಿಸುವ ಜವಾಬುದಾರಿ ಬರಹಗಾರನದ್ದಾದಾಗ ಸಾಹಿತ್ಯದಲ್ಲಿ ಹಲವು ಮುಖಗಳ ಹುಡುಕಾಟ ಸಾಧ್ಯವಾಗುತ್ತದೆ.

ಇಂಥ ನಿರಂತರ ಪ್ರಕ್ರಿಯೆ ಕನ್ನಡ ಸಾಹಿತ್ಯದ ಉಗಮದಿಂದಲೂ ಒಂದಿಲ್ಲೊಂದು ಸಂದರ್ಭದಲ್ಲಿ ವ್ಯಕ್ತವಾಗುತ್ತಲೇ ಬಂದಿದೆ. ಆಗ ಕಾಲಮಾನದ ದೃಷ್ಟಿಯಿಂದ ಅವುಗಳ ಸ್ಥಾನಮಾನ ಗುರ್ತಿಸುವ ಪ್ರಯತ್ನ ಸಾಗಿದಾಗ ಈ ರೀತಿಯ ನಿಸರ್ಗ, ಸಮಾಜ, ಅದರೊಳಗಿನ ಹುಡುಕಾಟ ಎಲ್ಲಿ ಹೇಗೆ ಪ್ರತಿಬಿಂಬಿತವಾಗಿದೆ ಅನ್ನುವ ಪರಿಶೀಲನೆ ಸಾಧ್ಯವಾಗುತ್ತದೆ. ಸಾಹಿತ್ಯ ಸಂದರ್ಭವೆಂದಾಗಲೆಲ್ಲಾ ಸಾಹಿತ್ಯ ಚರಿತ್ರೆಯ ನೆನಪಿನ ಪುನರಾವರ್ತನೆ ಸಹಜ. ಆಗ ಒಂದೊಂದು ಸಾಹಿತ್ಯ ಪ್ರಕಾರಗಳಲ್ಲೂ ಅದು ವ್ಯಕ್ತವಾದ ರೀತಿಯನ್ನು ಹೆಕ್ಕಿ ತೆಗೆಯುವುದೇ ಸಂಶೋಧನಾ ಕ್ರಮವಾಗುತ್ತದೆ. ಉದಾ: ಸಾಹಿತ್ಯದಲ್ಲಿ ವಸಂತಕಾಲ ಕುರಿತ ಬರಹದಲ್ಲಿ ಬರಿ ಚಿಗಿತ ಮರದ ಆನಂದೋತ್ಸಾಹವನ್ನಷ್ಟೇ ಕಾಣುತ್ತೇವಾದರೂ ಈ ಆನಂದೋತ್ಸಾಹಕ್ಕೆ ಬೇಕಾದ ಕಾಯುವಿಕೆಯ ಹಿಂದಿನ ಬರಡು ಸ್ಥಿತಿಯೂ ಗೌಣ ಪರಿಗಣನೆಯಾಗುತ್ತದೆ. ಇಲ್ಲಿ ಬರಡು ಸ್ಥಿತಿಯನ್ನು ನಿಸರ್ಗದೊಟ್ಟಿಗೆ ನೋಡಬೇಕಾಗಿದೆಯಾದರೂ, ಸಾಹಿತ್ಯದ ಸಂದರ್ಭದಲ್ಲಿ ಬರುವ ಬೇರೊಂದು ಮುಖದ ಅರ್ಥವನ್ನೂ ಹಿಗ್ಗಿಸಿ ನೋಡಬೇಕು. ಬದುಕಿನಲ್ಲಿ ಸುಖ ಇರುವುದೊಂದೇ ಸ್ಥಿತಿಯಲ್ಲ, ಸುಖದೊಟ್ಟಿಗೆ ದುಃಖವೂ ಸಮಪಾಲಾಗಿಯೋ, ಹೆಚ್ಚುಕಮ್ಮಿ ಆಗಿಯೋ ಪರಿಗಣಿಸಲ್ಪಟ್ಟಿರುತ್ತದೆ. ಇಲ್ಲಿ ಕೆಲವೊಮ್ಮೆ ಸಾಂಕೇತಿಕರಿಸಿದ ರೀತಿಯನ್ನು ಹುಡುಕಬೇಕಾಗುತ್ತದೆ. ಇದನ್ನು ಸಾಹಿತ್ಯ ಪರಂಪರೆಯಲ್ಲಿ ಸ್ಪಷ್ಟವಾಗಿ ಗುರ್ತಿಸಬಹುದು. 'ಮನುಷ್ಯ ಜಾತಿ ತಾನೊಂದೆವಲಂ' ಎಂದೇಳಿದ ಪಂಪನಿಂದ ಆರಂಭವಾಗಿ ಇವೊತ್ತಿನ ದಲಿತ–ಬಂಡಾಯ ಪ್ರಜ್ಞೆಯ ಸಾಮಾಜಿಕ ಸ್ಥಿತ್ಯಂತರಗಳಲ್ಲಿ ಹಾಗೂ ಕಾಲಕ್ರಮದಲ್ಲಿ ಗುರ್ತಿಸಲ್ಪಟ್ಟ ಸಾಹಿತ್ಯ ಚಳವಳಿಯಲ್ಲಿ ಕಾಣಬರುವ ಚಿತ್ರಗಳನ್ನು ಮುಖ್ಯ ದಾಖಲೆಗಳಾಗಿ ಸೇರಿಸಬಹುದು.

"ಸೃಷ್ಟಿಯಿಂದ ಈತನಕ ಮಾನವ ಪ್ರಗತಿ ಹೊಂದುತ್ತಲೇ ಇದ್ದಾನೆ. ಅವನ ಸಂಸ್ಕಾರ, ನಾಗರಿಕತೆ ಕಾಲಕಾಲಕ್ಕೂ ಬದಲಾಗುತ್ತಾ ಬಂದಿದೆ. ಪ್ರಪಂಚದ ನಾನಾ ಭಾಗಗಳ ಮಾನವರ ಸಂಸ್ಕೃತಿಯ ಏರಿಳಿತಗಳನ್ನು ಅವಲೋಕಿಸಿದರೆ ಒಂದು ವಿಷಯ ಸ್ಪಷ್ಟವಾಗುವುದು – ಎಲ್ಲೆಡೆಗಳಲ್ಲೂ ಏಕ ಪ್ರಕಾರವಾಗಿ ಸಂಸ್ಕೃತಿ ನಮಗೆ ಕಾಣಲು ದೊರೆಯುವುದಿಲ್ಲ. ಒಂದೊಂದು ದೇಶದ ಸಂಸ್ಕೃತಿಯೂ ಅಲ್ಲಲ್ಲಿನ ಸಮಾಜ ವ್ಯವಸ್ಥೆಯ ಪ್ರತಿಬಿಂಬವಾಗಿದೆ. ಪ್ರತಿಯೊಂದು ದೇಶದ ಸಾಹಿತ್ಯವೂ ಅಲ್ಲಲ್ಲಿನ ಪ್ರಮುಖ ಮಾನವ ಪ್ರವೃತ್ತಿಗಳ ಕೈಗನ್ನಡಿಯಾಗಿದೆ.

ಸಾಹಿತ್ಯವು ಪ್ರಗತಿ ಹೊಂದುತ್ತ ಬಂದಿದೆ ಎಂಬುದು ನಿಜ. ಆದರೆ ಅದು ಏಕ ಪ್ರಕಾರವಾದ ಪ್ರಗತಿಯಲ್ಲ. ಏಳ್ಗೆಯ ಶಕ್ತಿಗಳನ್ನು ಅದುಮಿ ಹಿಡಿಯುವ ಸಮಾಜ ವ್ಯವಸ್ಥೆಯಲ್ಲಿ ಪಾಳೆಗಾರರ ಕಲಹಗಳಿಂದ ಜನಜೀವನ ಬೆಂದು ಬೆಂಡಾದಾಗ ಸಾಹಿತ್ಯ, ಲಲಿತ ಕಲೆಗಳು ಪ್ರಗತಿ ಹೊಂದಲಿಲ್ಲ. ಅಧರ್ಮ ತಾಂಡವಾಡಿದಾಗ, ಅನ್ಯಾಯಕ್ಕೆ ಗುರಿಯಾದ ಜನತೆಯ ವಾಣಿಯಾಗಿ ಪ್ರತಿಭಟನೆ ಸಾಹಿತ್ಯ ಹುಟ್ಟಿತು. ಅಂಥ ಸಾಹಿತ್ಯ ಪ್ರಗತಿಯ ಹಾದಿ ತೋರಿತು. ಪ್ರಗತಿ ಹೊಂದಬೇಕಾದ್ದು ನಿಸರ್ಗ ನಿಯಮ"

ನಮಗೊಂದು ಚಿತ್ರಣವಾಗಿ ಕಣ್ಣಪಟ್ಟಿಯ ನೋಟದಲ್ಲಿ ಈ ಎಲ್ಲ ಹಿನ್ನೆಲೆಯೂ ಸಿಲುಕುತ್ತದೆ. ಆಗ ಕಾಲಘಟ್ಟದ ಅರಿವಿನಿಂದ ಇವುಗಳನ್ನು ಗುರ್ತಿಸುತ್ತಾ ಹೋಗುತ್ತೇವೆ. ಪ್ರಕೃತಿಯ ಆರಾಧನೆ, ಪ್ರೇಮ, ಆದರ್ಶಗಳಲ್ಲಿ 'ನಿಸರ್ಗ' ರೂಪುತಾಳಿದ ಸಂದರ್ಭ ನವೋದಯವಾಗುತ್ತದೆ. ಭಾವುಕತೆಯ ರಮ್ಯ ಮನಸ್ಥಿತಿಯಲ್ಲಿ ಹುಟ್ಟಿದ ಸಾಹಿತ್ಯವೆಲ್ಲಾ ಪ್ರೇಮಗಾನದ ಮಾಧುರ್ಯವನ್ನೇ ಉಣಬಡಿಸಿದೆ. ಉಂಡ ಮನಸ್ಸು ತೇಗಿನಲ್ಲಿ ಮೈಮರೆವ ಕಾರಣ ಇದ್ದಿರಬಹುದಾಗಲೇ ವಾಸ್ತವದ ಅರಿವಿನಿಂದಲೇ ಬದುಕಿನ ನೈಜತೆಯನ್ನು ಅರಿಯಬಹುದು. ಈ ವಸ್ತು-ಸ್ಥಿತಿಗಳ ಹೋರಾಟವನ್ನು ಚಿತ್ರಿಸುವ ಹೊಸ ಅಲೆಯೊಂದು ಎಡಪಂಥೀಯ ಅರಿವಿನಿಂದ ಬೀಸತೊಡಗಿದ ಸಂದರ್ಭವನ್ನು ಪ್ರಗತಿಶೀಲವೆಂದು ಗುರ್ತಿಸಲಾಗುತ್ತದೆ.

"ಪ್ರಗತಿಯೆನ್ನುವುದು ಈಗ ಇರುವ ಸ್ಥಿತಿಯಿಂದ ಇನ್ನೂ ಒಳ್ಳೆಯ ಸ್ಥಿತಿಯ ಕಡೆಗೆ ನಡೆಯುವ ಚಲನೆ. ಈ ಚಲನೆಯ ಸಮಾಜದ ಉತ್ಪಾದನಾ ಸಂಬಂಧಗಳಲ್ಲೇ ಅಡಕವಾಗಿರುವ ಬೆಳವಣಿಗೆಯ ನಿಯಮಗಳಿಗನುಸಾರವಾಗಿ ತನ್ನಂತೆಯೇ ನಡೆಯುವುದಾದರೂ, ಸಂದರ್ಭಕ್ಕೆ ಸರಿಯಾಗಿ ಮುಂದೆ ಬರುವ ವ್ಯಕ್ತಿಗಳ ಇಚ್ಛಾಶಕ್ತಿಯ ನೆರವನ್ನೂ ಬಯಸುತ್ತದೆ. ಒಳ್ಳೆಯ ಸ್ಥಿತಿ ಎನ್ನುವ ಮಾತು, ಎಲ್ಲ ಮನುಷ್ಯರೂ ಸಮಾನರಾದುದರಿಂದ ಒಂದು ಇನ್ನೊಬ್ಬರನ್ನು ಶೋಷಿಸದಿರುವ ಆದರ್ಶವನ್ನು ತನ್ನ ಮನಸ್ಸಿನಲ್ಲಿಟ್ಟುಕೊಂಡಿರುತ್ತದೆ. ಸಾಮಾಜಿಕ ನ್ಯಾಯವು ಎಲ್ಲರ ಹಕ್ಕು ಎಂಬ ಅಂಶವನ್ನು ಒಪ್ಪಿಕೊಂಡಾಗ ಬಹುಜನ ಹಿತ, ಬಹುಜನ ಸುಖಗಳ ಅಪೇಕ್ಷಣೀಯ ಮೌಲ್ಯಗಳಾಗುತ್ತವೆ.

ಇಂಥ ವಾದಗಳಿಗೆ ವ್ಯಕ್ತಿಯ ಪ್ರಜ್ಞೆಯನ್ನು ಅವನ ಪರಿಸರವೇ ರೂಪಿಸುತ್ತದೆಂಬ ಖಚಿತವಾದ ತಿಳುವಳಿಕೆ ಇರುವುದರಿಂದ ಇಲ್ಲಿ ಒತ್ತು ಬೀಳುವುದು ಪರಿಸರವನ್ನು ಬದಲಾಯಿಸುವುದರ ಕಡೆಗೆ".

ಪರಿಸರ ಎಂಬುದು ಸಾಹಿತ್ಯ ನಿರ್ಮಿತಿಯಲ್ಲಿ ತನ್ನ ಅಸ್ಥಿತ್ವದ ಒಟ್ಟು ಪಾತ್ರವನ್ನು ಕುರಿತು ಹೇಳುತ್ತದೆ. ದುಡಿವ ವರ್ಗದ ಕಷ್ಟ-ಸುಖಗಳ ಅನಿವಾರ್ಯ ದಾಖಲೆಯಾದದ್ದು ಇಂಥ ಸಂಬಂಧದ ಪ್ರಗತಿಯ ಚಿಂತನೆಯಲ್ಲೇ. ರಮ್ಯ ಮನಸ್ಥಿತಿಯನ್ನೊಪ್ಪಿಕೊಂಡ ನವೋದಯದ ಒಡಲಲ್ಲೇ ಪ್ರಗತಿಶೀಲದ ಹುಟ್ಟು ಪಡೆಯಿತಾದರೂ (ನವೋದಯದಂತೆ) ನಿಸರ್ಗದ ಆರಾಧನೆ ಇಲ್ಲಿರಲಿಲ್ಲ. ಉತ್ಪಾದನಾ ವಿಧಾನ ಮತ್ತು ಹಂಚಿಕೆಯ ವಿಧಾನದ ಮೂಲಕ ನಿಸರ್ಗವನ್ನು ಅನುಲಕ್ಷಿಸಿ, ನಿಸರ್ಗ ಮನುಷ್ಯನ ಉಪಯೋಗಕ್ಕೆ ಎಂಬ ಧೋರಣೆ ನವೋದಯದವರದಾಗಿತ್ತು. ಇದನ್ನು ಸುಳ್ಳಾಗಿಸುವುದೇ ಪ್ರಗತಿಶೀಲರ ದೃಷ್ಟಿಯೂ ಕೂಡ.

"ಕನ್ನಡ ಸಾಹಿತ್ಯದಲ್ಲಿ ಪ್ರಕೃತಿ; 'ಸಾಮಾಜಿಕ ಸ್ಥಿತ್ಯಂತರ" ಎಂಬ ವಿಷಯವನ್ನು ಕುರಿತು ಪ್ರಸ್ತಾಪಿಸುವಾಗ ಪ್ರಕೃತಿಯನ್ನು ಅದರ ಅನನ್ಯತೆ ಮತ್ತು ಸಂಬಂಧಾತ್ಮಕತೆಯ ಜೊತೆಗೆ ಅರ್ಥೈಸಿಕೊಳ್ಳೂವುದು ಒಳಿತು. ಪ್ರಕೃತಿ ಒಂದು ಸ್ಥಿತಿಯಾಗಿದೆ. ಇದರ ಚಲನೆ ವಿಶ್ವದ ಚಲನೆಯ ಜೊತೆಗೆ ಬದಲಾಗುವಂಥದು. ಮನುಷ್ಯನ ಅತಿ ಚಲನೆಯೊಂದಿಗೆ ನಾಶವಾಗುವಂಥದು. ಮನುಷ್ಯನೂ ಪ್ರಕೃತಿಯ ಹಾಗೆಯೆ ಒಂದು ಸ್ವಭಾವ. ಅವನ ಪ್ರಾಥಮಿಕ ಅಸ್ತಿತ್ವ ಇರುವುದು ಪ್ರಕೃತಿಯಲ್ಲಿಯೆ. ಈ ಘಟ್ಟದಲ್ಲಿ ಪ್ರಕೃತಿ ಮತ್ತು ಮನುಷ್ಯ ಬೇರೆ ಬೇರೆಯಲ್ಲ. ಈ

ಸ್ಥಿತಿಯಿಂದ ಮನುಷ್ಯ (ಪ್ರಕೃತಿಯಿಂದ) ಬೇರೆಯಾಗುತ್ತಾ ಹೋಗುವುದಕ್ಕೆ ಪ್ರಕೃತಿ ಮತ್ತು ಮಾನವನ ಸ್ಥಿತ್ಯಂತರ ಎಂದು ಹೇಳಬಹುದು. ಏಕೆಂದರೆ, ಪ್ರಕೃತಿಯಿಂದ ಹೊರಗೆ ಮಾನವ ಚಲಿಸಿದ ತಕ್ಷಣದಿಂದ ಅವನು ಬಳಕೆದಾರನೂ, ಪ್ರಕೃತಿ ಬಳಸಲ್ಪಡುವ ಅನುಭೋಗವೂ ಆಗುತ್ತಿದೆ. ಇಲ್ಲಿಂದ ಮನುಷ್ಯ ತನ್ನ ದೇಹಸ್ಥಿತಿಯನ್ನು ಪ್ರತ್ಯೇಕವಾಗಿ ಪ್ರಕೃತಿ ಎಂದು ಕರೆದುಕೊಂಡು ಅದನ್ನು 'ಬೀಡು' ಎಂದು ಕರೆದು ಉಳಿದುದನ್ನು 'ಕಾಡು' ಎಂದು ಕರೆಯುತ್ತಾನೆ."

ಹೀಗೂ (ಮೇಲಿನಂತೆ) ಯೋಚಿಸಬಹುದಾದ ಸಂದರ್ಭವಿದೆ. ಆದರೆ ಪ್ರಗತಿಶೀಲ ಸಾಹಿತಿಗಳು ನಿಸರ್ಗದಲ್ಲಿ ಮೈಮರೆತು ಕಾವ್ಯ ಬರೆಯಲಿಲ್ಲ. ಜನರೊಡನೆ ಬೆರೆತಾಗ ನಿಸರ್ಗ ಕಲ್ಪನೆ ದೂರಮಾಡಿದರು ಎಂಬುದು ವಾಸ್ತವ.

ಪ್ರಗತಿಶೀಲದ ಹುಟ್ಟಿನ ಪೂರ್ವಹಿನ್ನೆಲೆ ತತ್‌ಕ್ಷಣದ ಪ್ರಕ್ರಿಯೆಗೆ ಸಿಲುಕವುದಿಲ್ಲ. ಯೂರೋಪಿನಲ್ಲಿ ಫ್ಯಾಸಿಸ್ಟ್ ಶಕ್ತಿಗಳ ದಬ್ಬಾಳಿಕೆಯ ವಿರುದ್ಧ ದಿಕ್ಕೆಟ್ಟ ಸಂದರ್ಭ ಲಂಡನ್‌ನಲ್ಲಿ ಸೇರಿದ ವಾಸ್ತವ ಪ್ರಜ್ಞೆಯ ಬರಹಗಾರರ ಒಕ್ಕೊರಳಿನಿಂದಾದ ಬೀಜಾಂಕುರವೇ ಪ್ರಗತಿಶೀಲ ಚಳವಳಿಯ ಹುಟ್ಟು. ಇದು ಭಾರತದ ನೆಲ ತಾಗಿದ್ದೂ ಒಂದು ವಿಶೇಷವೇ. ಬ್ರಿಟಿಷರ ವಸಾಹತುಷಾಹಿ ಧೋರಣೆಯ ಜೊತೆ ಜೊತೆಗೇ ಶ್ರಮಜೀವಿಗಳ, ಕಾರ್ಮಿಕರ ಹೋರಾಟಪ್ರಜ್ಞೆ ಹಾಗೂ ಸ್ವಾವಲಂಬನೆಯ ಹಿನ್ನೆಲೆಯಲ್ಲಿನ ಹುಟ್ಟು ಇಲ್ಲಿ ಗಮನಾರ್ಹ : ಲಂಡನ್‌ನಲ್ಲಿದ್ದ ಉರ್ದು ಸಾಹಿತಿ ಸಜ್ಜಾದ್ ಜಾಹಿರ್, ಭಾರತೀಯ ಆಂಗ್ಲ ಲೇಖಕ ಮುಲ್ಕ್‌ರಾಜ್ ಆನಂದ್ ಮುಂತಾದವರು ಸ್ಥಾಪಿಸಿದ ಪ್ರಗತಿಶೀಲ ಸಾಹಿತ್ಯ ಚಳುವಳಿ ಶೋಷಣೆ, ಕ್ರೌರ್ಯಗಳನ್ನು ದಮನ ಮಾಡುವ ಮಾನವೀಯ ಅನುಕಂಪದ ಹಿನ್ನೆಲೆ ಪಡೆದಿತ್ತು ಎಂಬುದಿಲ್ಲಿ ಮುಖ್ಯ.

"ಸಾಹಿತ್ಯ ಮತ್ತು ಕಲಾರಂಗ ನಿತ್ಯ ಜೀವನದ ಅಂಗವಾಗಿರಬೇಕು; ಕಲೆಗಾಗಿ ಕಲೆ, ಕಲೆ ದೈವಿಕವಾದದ್ದು, ಅದು ಮನಸ್ಸಿಗೆ ನೆಮ್ಮದಿ ತರುವ ಸಾಧನ – ಎಂಬ ಕಲ್ಪನೆಗಳನ್ನು ನಾವು ಒಪ್ಪುವುದಿಲ್ಲ; ಕೃತಿಯಲ್ಲಿ ವ್ಯಕ್ತವಾಗುವ ಅಭಿಮತಕ್ಕೆ ಅಧಿಕ ಪ್ರಾಧಾನ್ಯ; ಮಹಾರಾಜರ ಮೇಲಿನ ಮಹಾಕಾವ್ಯಕ್ಕಿಂತ ದುಡಿವ ಬಡವನ ವಿಚಾರದ ಲಾವಣಿ ನಮ್ಮ ದೃಷ್ಟಿಯಲ್ಲಿ ಶ್ರೇಷ್ಠವಾದದ್ದು" – ಎಂಬುದು ಪ್ರಗತಿಶೀಲ ಸಾಹಿತ್ಯ ನಿರ್ಮಾಣದಲ್ಲಿ ತೊಡಗಿದವರು ವ್ಯಕ್ತಪಡಿಸಿದ ಅಭಿಪ್ರಾಯ ವಾಗಿತ್ತು.

ಲಂಡನ್‌ನಲ್ಲಿದ್ದ ಭಾರತೀಯ ಲೇಖಕರು ಹುಟ್ಟು ಹಾಕಿದ ಪ್ರಗತಿಶೀಲ ಚಳುವಳಿ ಭಾರತದಲ್ಲೂ ಹಲವು ಲೇಖಕರನ್ನು ತನ್ನ ತೆಕ್ಕೆಗೆ ತೆಗೆದುಕೊಂಡಿತು. ಪ್ರೇಮ್‌ಚಂದ್, ಕೆ.ಎ. ಅಬ್ಬಾಸ್, ಬಲ್‌ರಾಜ್ ಸಾಹ್ನಿ, ವಿಷ್ಣು ಡೇ ಮುಂತಾದವರು ೧೯೩೬ರಲ್ಲಿ ಲಖನೌದಲ್ಲಿ 'ಅಖಿಲ ಭಾರತ ಪ್ರಗತಿಶೀಲ ಲೇಖಕರ ಸಂಘ, ಸ್ಥಾಪಿಸಿಕೊಂಡರು. ನಂತರ ಹಲವು ರಾಜ್ಯಗಳಲ್ಲೂ ಇದರ ಶಾಖೆಗಳು ಪ್ರಗತಿಪರ ಆಸಕ್ತರ ನಡುವೆ ಚಿಗುರೊಡೆದವು. ಕರ್ನಾಟಕದ ಸಂದರ್ಭದಲ್ಲೂ ಕೆಲವು ಸಮಾಜ ಸುಧಾರಣಾವಾದಿ ಬರಹಗಾರರು ಒಗ್ಗೂಡಿ ಪ್ರಗತಿಶೀಲ ಚಳುವಳಿಯನ್ನು ಉತ್ಸಾಹದಿಂದಲೇ ಆರಂಭಿಸಿದರು. ನವೋದಯದ ಆದರ್ಶ, ರಮ್ಯತೆಯನ್ನು ಮೈಗೂಡಿಸಿಕೊಂಡ ಬರಹಗಾರರಲ್ಲಿ ಕೆಲವರು ವೈಚಾರಿಕ ಚಿಂತನೆಗೆ ತೊಡಗಿದ ಸಂದರ್ಭ ಇಲ್ಲಿನ ಪ್ರಗತಿಶೀಲದ ದಾಖಲೆಯಲ್ಲಿ ಸೇರಿಕೊಂಡಿತು. ಅನಕೃ, ತರಾಸು, ಶ್ರೀರಂಗ, ಕುಮಾರ

ವೆಂಕಣ್ಣ, ಬಸವರಾಜ ಕಟ್ಟೀಮನಿ, ನಿರಂಜನ, ಚದುರಂಗ, ಎಕ್ಕುಂಡಿ ಮುಂತಾದವರು ಇದರ ಮುಂಚೂಣಿಯಲ್ಲಿ ತೊಡಗಿದರು.

ಪ್ರಗತಿಶೀಲದ ಕರ್ನಾಟಕದ ಮುಂಚೂಣಿ ಬರಹಗಾರರೆಲ್ಲಾ 'ಪ್ರಗತಿಶೀಲದ ತತ್ವ ಪ್ರಣಾಳಿಕೆ'ಯಿನ್ನು ಒಪ್ಪಿ ಬರೆದರೆಂಬುದು ಸತ್ಯವಲ್ಲವಾದರೂ, ಇವರೆಲ್ಲಾ ಮಾನವೀಯ ಅನುಕಂಪದ ಬರಹಗಳ ಕಡೆ ಮುಖ ಮಾಡಿದ್ದರೆಂಬುದು ವಾಸ್ತವ ಸಂಗತಿ. ಸಮಾಜಮುಖೀ ಚಿಂತನೆ ಅಂದರೇನೇ ಸಮಾಜದ ಅನಿಷ್ಟಗಳ, ದೌರ್ಜನ್ಯಗಳ ತೊಡೆದು ಹಾಕುವಿಕೆಯಿಂದ ಬದಲಾವಣೆ ಬಯಸುವುದೇ ಆಗಿದೆ. ಇದನ್ನು 'ಬರಹದ ನ್ಯಾಯ'ದಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಬಳಸಿಕೊಂಡ ಕೆಲವರು ಪ್ರಗತಿಶೀಲದ ಉದ್ದೇಶವನ್ನೇ ಮರೆತರೆಂಬ ಟೀಕೆಗೂ ಗುರಿ ಆದರು. ಮಾನವೀಯ ಭಾವನೆಗಳನ್ನು ತುಂಬಿ, ಅಶ್ಲೀಲತೆ, ಕಾಮಪ್ರಚೋದನೆ, ಕೊಲೆ ಸುಲಿಗೆಯ ಸಾಹಿತ್ಯವನ್ನು ವಿರೋಧಿಸುತ್ತದೆಂಬ ಪ್ರಗತಿಶೀಲ ಆಶಯಗಳನ್ನು ಅನಕೃರಂಥ ಬರಹಗಾರರು ಧಿಕ್ಕರಿಸಿದರೆಂಬ ಟೀಕೆಗೆ ಗುರಿಯಾದಾಗ, ಅನಕೃ ಬರೆದಿದ್ದನ್ನು ಬಲವಾಗಿ ಸಮರ್ಥಿಸಿಕೊಂಡರು. ಕರ್ನಾಟಕದ ಪ್ರಗತಿಶೀಲದ ಚುಕ್ಕಾಣಿ ಹಿಡಿದ ಅನಕೃ ಇಂಥಾ ಟೀಕೆಗಳನ್ನು ಪ್ರಗತಿಶೀಲ ಚಿಂತಕರಿಂದಲೇ ಪಡೆದಾದರೂ; ಅವರ 'ಜೀವನ ಯಾತ್ರೆ' ಪ್ರಗತಿಶೀಲ ಚಳುವಳಿಯ ಹುಟ್ಟಿಗೆ ಮುನ್ನವೇ ಪ್ರಕಟವಾದರೂ ಅದರಲ್ಲಿ ಪ್ರತಿಭಟನೆಯ ಅಂಶ ಇತ್ತು. ಹಸಿವಿನಂಥ ಹೆಬ್ಬಾವಿನೆದುರು ವ್ಯಭಿಚಾರ, ರೋಗ, ದಾಸ್ಯಗಳು ತಾಂಡವಾಡುವುದನ್ನು ಸೂಚ್ಯವಾಗಿ ಹೇಳಿದ್ದರು.

ಅನಕೃ ವೈವಿಧ್ಯಮಯವಾದ ಸಾಹಿತ್ಯ ಕೃಷಿಗೆ ತೊಡಗಿದ್ದರಿಂದಲೋ ಏನೋ ಪ್ರಗತಿಶೀಲದ ತತ್ತ್ವಕ್ಕೆ ಬದ್ಧರಾಗಿ ಹೆಚ್ಚು ಕೃತಿ ರಚಿಸಲಾಗಲಿಲ್ಲ – ಪ್ರತಿಭಟನೆ ಬಹುಮುಖ್ಯ ಆಶಯ ಆದರೂ ಸಾಮಾಜಿಕ ಸಮಸ್ಯೆಯೆಂದು ವೇಶ್ಯಾ ವಿಚಾರಗಳನ್ನು, ಲೈಂಗಿಕಾಸಕ್ತ ವಿಚಾರಗಳನ್ನು ಮುಕ್ತವಾಗಿ ಹೇಳಬಹುದೆಂದು ಹೊರಟು ಪ್ರಗತಿಶೀಲರಲ್ಲಿ ಭಿನ್ನ ಅಭಿಪ್ರಾಯವನ್ನು, ಒಡಕು ದನಿಯನ್ನು ಮೂಡಿಸಲು ಕಾರಣರಾದರು. ಒಂದಕ್ಕೊಂದು ಪೂರಕ ಸಂಬಂಧ ಇರುವ ವೇಶ್ಯಾ ಜೀವನವನ್ನೊಳಗೊಂಡ ನಗ್ನಸತ್ಯ, ಶನಿಸಂತಾನ, ಸಂಜೆಗತ್ತಲು ಎಂಬ ಕೃತಿಗಳಿಂದ ಭಾರೀ ಪ್ರತಿಭಟನೆ ಎದುರಿಸಿ ಪ್ರಗತಿಶೀಲದ ಮೂಲ ಉದ್ದೇಶವೇ ಮರೆಯಾಯಿತೆಂಬ ಟೀಕೆ ಹೊರಬೇಕಾಯಿತು.

ಮುಖ್ಯವಾಗಿ ನಗರ ಕೇಂದ್ರಿತ ಸಮಸ್ಯೆಗಳೇ ಅನಕೃ ಅವರಂಥವರಲ್ಲಿ ಹೆಚ್ಚು ಕೆಲಸ ಮಾಡಿವೆ. ನಾಟಕ, ಚಿತ್ರಕಲೆ, ಸಂಗೀತ ಮುಂತಾದ ಕಲಾ ಪ್ರಕಾರಗಳಲ್ಲೂ ಆಸಕ್ತಿ ಕೆರಳಿಸಿಕೊಂಡ ಅನಕೃ ಮುಖ್ಯವಾಗಿ ಕಾದಂಬರಿ ಸಾರ್ವಭೌಮರೆಂದು ಹೆಸರಾದರು. ಸಣ್ಣ ಕತೆಗಳ ಪ್ರಕಾರದಲ್ಲಿ ಸಾಧ್ಯವಾದಷ್ಟು ಕೃಷಿಗೆ ತೊಡಗಿದರೂ, ಹೆಚ್ಚು ಓದುಗ ವರ್ಗವನ್ನು ಮುಟ್ಟಲೆಂದೇ ಕಾದಂಬರಿ ಪ್ರಕಾರವನ್ನು ಕೈಗೆತ್ತಿಕೊಂಡಂತೆ ಕಾಣುತ್ತದೆ. ಇದಕ್ಕೆ ಕಾರಣವೂ ಇದ್ದಿರಬಹುದು. ಬರೆದು ಬದುಕುವುದು ಸಾಧ್ಯವೆಂದು ಹೊರಟು ಬೆರಳೆಣಿಕೆಯ ಪ್ರಗತಿಶೀಲರಲ್ಲಿ ಇವರೂ ಒಬ್ಬರಾಗಿರುವುದು.

ಬದುಕು–ಬರಹಗಳನ್ನು ಒಟ್ಟು ಗೂಡಿಸುತ್ತಲೇ ಇಷ್ಟಾನಿಷ್ಟಗಳ ಕಡೆಯೂ ಗಮನಹರಿಸುತ್ತ ಹೊರಟ ಪ್ರಗತಿಶೀಲರಲ್ಲಿ ತರಾಸು ಲೆಕ್ಕಕ್ಕಿಡಬಹುದಾದ ಬರಹಗಾರರಾಗಿಯಷ್ಟೇ ಕಾಣುತ್ತಾರೆ.

ಸಾಮಾಜಿಕ ಕಾಳಜಿ, ಬದ್ಧತೆ ಪಡೆದ ಪ್ರಗಿತಶೀಲ ತತ್ವಕ್ಕೆ ಇವರು ಹತ್ತಿರವಾದಂತೆ ಕಂಡರೂ ಇನ್ನೊಂದು ದೃಷ್ಟಿಯಲ್ಲಿ ದೂರವೇ! ಐತಿಹಾಸಿಕ ಘಟನೆಗಳನ್ನು ತಮ್ಮ ಬರಹದಲ್ಲಿ ತಂದು ಯಶಸ್ವಿ ಆದಷ್ಟು ಸಾಮಾಜಿಕ ಸಮಸ್ಯೆಗಳನ್ನು ತಂದಾಗ ಸೋಲು ಕಾಣುವುದನ್ನು ಇವರ ಬಹಳಷ್ಟು ಬರಹದಲ್ಲಿ ಗುರ್ತಿಸಬಹುದಾಗಿದೆ.

ತರಾಸು ಅವರ ಸಾಮಾಜಿಕ ಕಾದಂಬರಿಗಳು ಕೇವಲ ಅಜ್ಞಿಕತೆಗಳನ್ನಾಧರಿಸದೆ ಸಮಾಜದ ವಿವಿಧ ಸಮಸ್ಯೆಗಳನ್ನು ಗ್ರಹಿಸಿ, ಅವುಗಳ ಪ್ರತಿಬಿಂಬವನ್ನು ವಾಸ್ತವವಾಗಿ ಚಿತ್ರಿಸಿ ಓದುಗರನ್ನು ಎಚ್ಚರಿಸುವುದಾಗಿದೆ. ಅವರ ಕಾದಂಬರಿಗಳ ವಸ್ತು ಸಮಕಾಲೀನ ಬದುಕಿನ ವಾಸ್ತವ ಚಿತ್ರಣ. ಸಾಮಾಜಿಕ ಪ್ರಜ್ಞೆಯಿಂದ ಸ್ಪಂದಿಸಿದುದರಿಂದಲೇ ಅವರು 'ಮಸಣದ ಹೂವು', 'ಬಿಡುಗಡೆಯ ಬೇಡಿ', 'ಕೇದಗೆಯವನ', 'ಚಂದವಳ್ಳಿಯ ತೋಟ'ದಂತಹ ಉತ್ತಮ ಕಾದಂಬರಿಗಳನ್ನು ಅತಿಯಾದ ಆದರ್ಶವಾದದಂತೆ, ಅತಿಯಾದ ದೋಷವೂ ಕಾದಂಬರಿಯ ಕಲಾಕತ್ಮಕತೆಯನ್ನು ನುಂಗಿ ಹಾಕುತ್ತದೆ ಎಂಬುದು ಅವರ ಐತಿಹಾಸಿಕ ಕಾದಂಬರಿಗಳಿಗೆ ಅನ್ವಯಿಸುತ್ತದೆ. ಸಮಾಜ ವೆಂಬ ಬಂಧನದ ವರ್ತುಲದೊಳಗೆ ಸುತ್ತಿ ಬಿಡುಗಡೆ ಬಯಸುವ ಹೆಣ್ಣಿನ ಹೋರಾಟವನ್ನು 'ಬಿಡುಗಡೆಯ ಬೇಡಿ'ಯಲ್ಲಿ ತಂದಿರುವುದು ಪ್ರಜ್ಞಾ ಪ್ರವಾಹ ತಂತ್ರವಾಗಿದೆ.

ಸಮಾಜದ ಕುರುಡು ನಂಬಿಕೆ, ಟೊಳ್ಳು ಢಂಬಾಚಾರಗಳನ್ನು ಬಹಳಷ್ಟು ಕಾದಂಬರಿಗಳಲ್ಲಿ ವಸ್ತುವಾಗಿಸಿಕೊಂಡ ತರಾಸು ಅವರು ವೇಶ್ಯಾ ಸಮಸ್ಯೆಯನ್ನೊಳಗೊಂಡ 'ಮಸಣದ ಹೂವು' ನೀಡಿದರು. ಇದು ಪ್ರಗತಿಶೀಲರಲ್ಲಿ ಮುಖ್ಯರಾದ ಅನಕೃ ಹೆಚ್ಚು ಮುಟ್ಟಿಕೊಂಡ ವಸ್ತುವಿಗೇ ಸಂಬಂಧಿಸಿದ್ದಾದರೂ ತರಾಸು ನೋಡುವ ದೃಷ್ಟಿ ವಿಭಿನ್ನ ಅನ್ನಿಸಿಕೊಳ್ಳುತ್ತದೆ.

ಸಾಮಾಜಿಕ ಸಮಸ್ಯೆಯಿಲ್ಲದಿದ್ದರೂ 'ಹಂಸಗೀತೆ'ಯಂಥಾ ಸಂಗೀತಪ್ರಿಯನ ವಸ್ತುವಿನ ಆಯ್ಕೆಯಲ್ಲಿ ನಿಸರ್ಗ ಪ್ರೀತಿ ಅಪ್ರಜ್ಞಾಪೂರ್ವಕವಾಗಿ ಕೆಲಸ ಮಾಡಿದೆ. ಚಿತ್ರದುರ್ಗದ ಮದಕರಿ ನಾಯಕರ ಕಾಲಕ್ಕೆ ಸೇರಿದ ಸಂಗೀತಗಾರ ವೆಂಕಟಸುಬ್ಬಯ್ಯನ ಭಾವ ತೀವ್ರತೆ ಹಾಗೂ ಆದರ್ಶದ ಹೆಗ್ಗಳಿಕೆ ಹಂಸಗೀತೆಯಲ್ಲಿದೆ. ಐತಿಹಾಸಿಕ ಬೆಟ್ಟದಲ್ಲಿ ಅದರ ಸುತ್ತಲೇ ಕತೆ ನಡೆಯುತ್ತದೆ. ಸಂಗೀತ ಪ್ರಿಯನೂ ಆದ ವೆಂಕಟಸುಬ್ಬಯ್ಯ ಪ್ರಕೃತಿ ಪ್ರಿಯನೂ ಸಹ. ಮನಸ್ಸಿನ ಏಕಾಗ್ರತೆಯಿಂದ ನಿಶ್ಯಬ್ದ ಸ್ಥಳದಲ್ಲಿ ಕೂತು ಹಾಡುವ ಸಂಗೀತ ಸುತ್ತಲ ಪರಿಸರವನ್ನು ಕೂಡ ಮೆಚ್ಚಿಸಬಹುದು. ಇದಕ್ಕೆ ವಿದ್ವಾಂಸರಲ್ಲಿ ಒಂದಷ್ಟು ಚರ್ಚೆಗಳಿವೆ. ನಿರಂತರ ಸಂಗೀತವನ್ನು ಆಲಿಸಿದ ಗಿಡ ಮರಗಳೂ ಸಹ ಉಲ್ಲಾಸಿತವಾಗಿರುತ್ತವೆ ಎಂಬುದು ಆ ಮಾತು. ಇದು ವಿಜ್ಞಾನದ ವಿಚಾರಕ್ಕೆ ಸಂಬಂಧಿಸಿದ್ದಾದರೂ ಒಟ್ಟು ಇದರರ್ಥ ಸಂಗೀತಕ್ಕೆ ಮನುಷ್ಯರಂತೆ ಪ್ರಕೃತಿಯೂ ತಲೆದೂಗುತ್ತದೆ ಎನ್ನುವುದಕ್ಕೆ ಸಾಕ್ಷಿ. ತರಾಸು ಅವರು ಸಾಮಾಜಿಕ ಪ್ರಜ್ಞೆಯನ್ನೊಳಗೊಂಡ ಕಥೆಗಳನ್ನು ನೇಯ್ದರೂ ಸಾಂಸ್ಕೃತಿಕ ಹಾಗೂ ಐತಿಹಾಸಿಕ ವಸ್ತುವನ್ನೊಳಗೊಂಡ ಕಾದಂಬರಿಯಲ್ಲಿ ಇಂಥ ಎಷ್ಟೋ ವಿಚಾರಗಳನ್ನು ದಾಖಲಿಸಿದ್ದಾರೆ.

ಗಂಭೀರ ಸಾಹಿತ್ಯ ವಿದ್ಯಾರ್ಥಿಗಳೂ ಓದಿ ಪ್ರಬಂಧಕ್ಕೆ ಸಿದ್ಧಪಡಿಸಬಹುದಾದ, ಚರ್ಚಿಸ ಬಹುದಾದ ಎಷ್ಟೋ ವಿಚಾರಗಳಿದ್ದರೂ ಸಾಮಾನ್ಯ ಓದುಗನ ದೃಷ್ಟಿಯಲ್ಲೂ ಬಹಳಷ್ಟು ಬರಹಗಳು ಸಿಕ್ಕುವುದೂ ಕೂಡ ಅಷ್ಟೇ ಸತ್ಯ.

ಭಾವ ಸಂಪತ್ತಿನಿಂದ ಸಣ್ಣ ಕತೆಗಳ ಕ್ಷೇತ್ರ ಪ್ರವೇಶಿಸುವ ತರಾಸು ಸಂಕೇತೀಕರಿಸಿದ ವಿಶಿಷ್ಟ ಕತೆಗಳಾದ '0-0=0' ಹಾಗೂ '೪+೪+೧' ಬರೆದು ಪ್ರಗತಿಶೀಲದಲ್ಲಿ ವಿಭಿನ್ನ ಚಿಂತನೆ ಮಾಡುವರಾಗಿ ಕಾಣಬರುತ್ತಾರೆ. ಲೆಕ್ಕಕ್ಕೆ ಸಂಬಂಧಿಸಿದ ಶೀರ್ಷಿಕೆಯ ಕಥೆಗಳು ವಿಚಿತ್ರ ಅನ್ನಿಸಿದರೂ ಅವುಗಳ ಅರ್ಥಗಳಲ್ಲಿ ನಿಗೂಢತೆ ಅಡಗಿದೆ. ಮನುಷ್ಯನ ಅಂತರಂಗದಲ್ಲಿ ಎಲ್ಲವೂ ಕೂಡ ಲೆಕ್ಕಾಚಾರವೇ. ಲೆಕ್ಕ ನಮ್ಮೆಲ್ಲರ ಬದುಕನ್ನು ಸಂಖ್ಯೆಗಳ ಮುಖೇನ ಅಳೆವ ಒಂದು ಸಾಧನ. ಲೆಕ್ಕಾಚಾರವಾಗಿ ಬದುಕಿದವನು ಏನಾದರೂ ಸಾಧಿಸುತ್ತಾನೆ ಎಂಬುದು ಕೆಲವರ ನಂಬುಗೆ. ಆದರೆ ಭಾರತದಂಥ ಪ್ರಗತಿಶೀಲ ರಾಷ್ಟ್ರದಲ್ಲಿ ಲೆಕ್ಕಕ್ಕೇ ಸಿಗದ, ಲೆಕ್ಕಾಚಾರವಿಲ್ಲದ ಕೋಟ್ಯಾಂತರ ಮಂದಿ ಸಿಗುತ್ತಾರೆ ಅನ್ನುವುದು ಸುಳ್ಳಲ್ಲ. ಹೀಗಿದ್ದೂ ಇಂಥ ಲೆಕ್ಕಾಚಾರದ ಕಥೆಯನ್ನು ಪ್ರಗತಿಶೀಲ ಬರಹಗಾರರಲ್ಲಿ ಅರ್ಥಪೂರ್ಣವಾಗಿ ಬಳಸಿಕೊಂಡವರು ತರಾಸು ಅವರು ಎಂಬುದು ಇಲ್ಲಿ ಮುಖ್ಯವಾದ ವಿಚಾರ.

ನಗರ ಬದುಕಿನ ಏರುಪೇರುಗಳಿಗೆ ಕಾಲಘಟ್ಟದ ತಿರುವಿಗೆ ತಕ್ಕಂತೆ ಕಾದಂಬರಿಗಳಲ್ಲಿ ಸ್ಪಂದಿಸಿದ ಅನಕೃ, ತರಾಸು ಅವರಿಗಿಂತ ಭಿನ್ನ ಆಸಕ್ತಿಯ, ವಿಶಿಷ್ಟ ವ್ಯಕ್ತಿತ್ವದ ಬಸವರಾಜ ಕಟ್ಟೀಮನಿ ಅವರು ಅಪ್ಪಟ ಗ್ರಾಮೀಣ ಹಿನ್ನೆಲೆಯ ಬಂಡಾಯಗಾರ ಬರಹಗಾರರು. ಬದುಕನ್ನು ಹೋರಾಟವೆಂದೇ ತಿಳಿದು ಹಳ್ಳಿ–ನಗರಗಳೆರಡರಲ್ಲೂ ನೆಲೆವೂರಲು ತವಕಿಸುತ್ತ ಸಮಾಜಮುಖಿಯಾಗುತ್ತಲೇ ವ್ಯವಸ್ಥೆಯನ್ನು ಕಠೋರವಾಗಿ ಟೀಕಿಸುತ್ತಲೇ, ಅಷ್ಟೇ ಸನಿಹದಿಂದ ಒಪ್ಪಿಕೊಂಡ ರಾಜಕೀಯ ಸಿದ್ಧಾಂತವನ್ನು ಮೆಚ್ಚುವ ದ್ವಂದ್ವತನವಿದ್ದು ಅಪ್ಪಟ ಮಾನವ ಪ್ರೀತಿ, ಕಾಳಜಿ ಹೊಂದಿದ ಕಟ್ಟೀಮನಿ ಸೃಷ್ಟಿಸಿದ್ದು ಪ್ರಗತಿಪರ ಹಿನ್ನೆಲೆಯ ಹೋರಾಟದ ಬದುಕನ್ನೇ.

ಜೀವನದ ಹಲವಾರು ಮುಖಗಳನ್ನು ಕಂಡ ಸೂಕ್ಷ್ಮಗ್ರಾಹಿಯಾದ ಕಟ್ಟೀಮನಿಯವರ ಮನಸ್ಸು ಸಮಾಜದ ಅಸಮಾನತೆ ಮನುಷ್ಯನ ದುಷ್ಟಬುದ್ಧಿ ಮತ್ತೊಬ್ಬರ ಬಗ್ಗೆ ಅಸೂಯೆ ಕಂಡು ಕೆರಳಿದೆ. ಮನಸ್ಸು ನರಳಿ ಒಳಬೇಗುದಿಯ ಹೊಗೆ ಎದ್ದು ಬೆಂಕಿ ಕಾರಿದೆ. ಸಮಾಜದ ಉತ್ತಮರು ಹಾಗೂ ಮಾನವೀಯ ಅನುಕಂಪ ಇದ್ದವರ ಮೇಲೆ ಕ್ಷಕಿರಣ ಬೀರಿ ಅವರ ಬಗ್ಗೆ ಒಳ್ಳೆಯದನ್ನು ದಾಖಲಿಸಿ ತಮ್ಮ ಶ್ರದ್ಧೆ ಹಾಗೂ ನಿಷ್ಠೆಯನ್ನು ಪ್ರದರ್ಶಿಸಿದ್ದಾರೆ. ಅವರ ಸಾಮಾಜಿಕ ಕಾದಂಬರಿಗಳೆಲ್ಲ ಶ್ರದ್ಧೆ ಹಾಗೂ ನಿಷ್ಠೆಯ ನಿಯಂತ್ರಣಕ್ಕೊಳಪಟ್ಟಿವೆ.

ಕಟ್ಟೀಮನಿ ಅವರ ಕಾದಂಬರಿಗಳಲ್ಲಿ ಹಲವು ಸಾಮಾಜಿಕವಾದುವುಗಳೇ. ಆದರೆ ಇವುಗಳ ಜೊತೆಗೆ ಐತಿಹಾಸಿಕ ಕಾದಂಬರಿಗಳೂ ಸೇರಿವೆ. ಆ ಚರ್ಚೆ ಬೇರೆಯ ತಿರುವನ್ನೇ ಪಡೆಯುವುದಾದರೂ ಪ್ರಗತಿಶೀಲಕ್ಕೆ ಹತ್ತಿರವಾಗಿ ಮಾತಾಡುವಾಗ ಸಮಾಜವೇ ಅವರ ಕಣ್ಣೆದುರಿನ ಚಿತ್ರಣ ಎನ್ನಲಡ್ಡಿಯಿಲ್ಲ.

ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯೋತ್ತರ ಬದುಕಿನ ಚಿತ್ರಣಕ್ಕೆ ಕಟ್ಟೀಮನಿ ಅವರ ಬರಹಗಳು ತತ್‌ಕ್ಷಣದ ಪ್ರತಿಕ್ರಿಯೆ ಕೊಡುತ್ತವೆ. ಕಂಡದ್ದನ್ನು ನೇರವಾಗಿ ಖಂಡಿಸುವ ಛಾತಿ ಹೊಂದಿ ನಿಷ್ಠೂರ ಕಟ್ಟಿಕೊಂಡು ಮಠಮಾನ್ಯಗಳನ್ನು, ರಾಜಕಾರಣಿಗಳನ್ನು, ಅಧಿಕಾರಿಗಳನ್ನು ತರಾಟೆ ತೆಗೆದುಕೊಂಡು ಇವರೆಲ್ಲರ ಆಷಾಢಭೂತಿತನವನ್ನು ಯಾವ ಮುಲಾಜಿಗೂ ಒಳಗಾಗದೆ ದಾಖಲಿಸಿದ್ದು ಕಟ್ಟೀಮನಿ ಅವರ ಬದ್ಧತೆಯನ್ನು ಸ್ಪಷ್ಟಪಡಿಸುತ್ತದೆ. ಸಾಮಾಜಿಕ ಸಂಬಂಧವನ್ನು

ತಮ್ಮ ಬರಹದ ಮೂಲಕವೇ ಗಟ್ಟಿಗೊಳಿಸುತ್ತ ಅದಕ್ಕೊಂದು ಸ್ವರೂಪ ಕೊಟ್ಟುಕೊಂಡ ಕಟ್ಟೀಮನಿ ಸಂವಹನೆಗೊಳ್ಳುವುದು ತಾವು ಕಟ್ಟಿಕೊಟ್ಟ ಸಾಹಿತ್ಯ ನಿರ್ಮಿತಿಯ ಹಿನ್ನೆಲೆಯಲ್ಲಿ. ವಸಾಹತುಶಾಹಿಯನ್ನು ಧಿಕ್ಕರಿಸಿ ಹುಟ್ಟಿಕೊಂಡ ಪ್ರಗತಿಶೀಲಕ್ಕೆ ಸಾಮಾಜಿಕ ಆಯಾಮ ಕೊಡುವ ಬರಹ ನೀಡಿಯೂ, ಮೆಚ್ಚುಗೆ ಟೀಕೆಗಳೆರಡನ್ನೂ ಸಮಪಾಲು ಪಡೆದುಕೊಂಡ ಕಟ್ಟೀಮನಿ ಅವರಿಗೆ ಮೂಲಭೂತವಾಗಿ ವ್ಯವಸ್ಥೆ ಬದಲಾಗಬೇಕೆಂಬ ಅಪೇಕ್ಷೆ. ಆ ನಿಟ್ಟಿನಲ್ಲಿ ಅವರು ಸೃಷ್ಟಿಸಿದ್ದು ಅತ್ಯಲ್ಪವೇನಲ್ಲ. ಸಣ್ಣಕತೆ, ಕಾದಂಬರಿ ಪ್ರಕಾರವನ್ನು ತಮ್ಮ ಹೋರಾಟ ಮನೋಭಾವಕ್ಕೆ ತಕ್ಕಂತೆ ರೂಪಿಸಿದ್ದೂ ಅಲ್ಲದೆ ಓದುಗ ವರ್ಗವನ್ನು ಸೃಷ್ಟಿಸುತ್ತ ನಡೆದದ್ದು ಮಹತ್ವದ ಕೊಡುಗೆಯಾಗಿದೆ.

ಕಟ್ಟೀಮನಿ ಅವರ 'ಗಿರಿಜಾ ಕಂಡ ಸಿನಿಮಾ' ಪ್ರಗತಿಶೀಲದ ಆಶಯಕ್ಕೆ ತಕ್ಕದಾದ ಕಥೆಯಾಗಿದ್ದು; ವಸ್ತು ನಮ್ಮ ನಿಮ್ಮ ಸುತ್ತಲೇ ಇರಬಹುದಾದ ಬಡ ಕುಟುಂಬದ ಚಿತ್ರಣವಾಗಿದೆ. ಸಿನಿಮಾ ಎಂಬ ಬಣ್ಣದ ಲೋಕವನ್ನು ಅಲ್ಲಿನ ಕನಸನ್ನು ನೋಡುವ ಇಚ್ಛೆ ವ್ಯಕ್ತವಾಗುವುದು – ಬಡದಂಪತಿಯ ಬದುಕಲ್ಲಿ. ಮನರಂಜನೆ ಅನ್ನುವುದೂ ಕೂಡ ಈ ದಂಪತಿಗಳಿಗೆ ಆಕಾಶದ ನಕ್ಷತ್ರ, ತೆರೆಯ ಮೇಲಿನ ಸಿನಿಮಾ ನೋಡುವ ಆಸೆ ವ್ಯಕ್ತಪಡಿಸುವ ಕಥಾಶೀರ್ಷಿಕೆಯ ನಾಯಕಿ ಗಿರಿಜಾಳನ್ನು ವಾಸ್ತವದ ಅರಿವಿನಿಂದ ಎಚ್ಚರಿಸುವ ಗಂಡ ಸಿದ್ಧರಾಮ ಹೇಳುವ ಮಾತು ಬಡತನದ ಅಸಹಾಯಕತೆಯ ಚಿತ್ರಣವಾಗುತ್ತದೆ. ಪಟ್ಟಣದ ಥೇಟರ್‌ನ ಬೆಳ್ಳಿತೆರೆಯಲ್ಲಿ ನೋಡುವ ಸಿನಿಮಾಚಿತ್ರ ಆಕೆಗೆ ಪ್ರಿಯವಾದರೆ, ಗಂಡನಿಗೆ ತನ್ನ ಮನೆಯ ಕೋಣೆಯ ವಾಸ್ತವ ಚಿತ್ರಣವೇ ಸಿನಿಮಾ ದೃಶ್ಯಗಳಾಗಿ ಕಾಣುತ್ತವೆ. ಸಿದ್ಧರಾಮನ ಕಲ್ಪನೆಯ ಸಿನಿಮಾ ಬರಿದು ನೋಡುವುದಕ್ಕಾಗಿ ಅಲ್ಲ, ಅದರಲ್ಲಿ ಎಲ್ಲರೂ ಪಾತ್ರಗಳೇ. "ಇದೊಂದು ಮಹಾ ದೊಡ್ಡ ಸಿನಿಮಾ! ಪಾತ್ರ ವಹಿಸುವವರು ಹತ್ತಿಪ್ಪತ್ತು ಮಂದಿ ಮಾತ್ರವಲ್ಲ – ದೇಶದ ಬಡ ಜನರೆಲ್ಲಾ ಅದರಲ್ಲಿ ಅಭಿನಯಿಸುತ್ತಿದ್ದಾರೆ. ನಾವೇ ಅದರ ನಿರ್ಮಾತೃಗಳು – ನಿರ್ದೇಶಕರು" ಎನ್ನುವ ಅವನ ಮಾತು ಬಡತನದ ಬವಣೆಯಲ್ಲಿ ತನ್ನ ಹೆಂಡತಿಗೆ ಸಿನಿಮಾ ತೋರಿಸಲಾರದ, ತಾನೂ ನೋಡಲಾರದ ವಾಸ್ತವದ ಭಾವನಾ ಸನ್ನಿವೇಶ ನಿರ್ಮಾಣವಾಗುತ್ತದೆ. ಇದೊಂದು ಮನ ಕಲಕುವ ಚಿತ್ರಣದ ಕತೆ. ಏಕೆಂದರೆ ಬಡತನಕ್ಕೆ ಮನರಂಜನೆಯೂ ಕೂಡ ಮೈಲಿಗೆ. ತನ್ನ ಪುಟ್ಟ ಕುಟುಂಬದ ಜೊತೆ ಬೆರೆತು ಬಾಳುವ ಸಂದರ್ಭ – ಕನಸು ಎಟುಕಿಸಿಕೊಳ್ಳಲಾರದ ವಾಸ್ತವ ನಮ್ಮೆದುರು ನಿಲ್ಲುತ್ತದೆ.

ಸಾಮಾಜಿಕ ಹಾಗೂ ಐತಿಹಾಸಿಕ ವಸ್ತುವನ್ನು ಕಾದಂಬರಿ ಪ್ರಕಾರಕ್ಕೆ ಬಳಸಿಕೊಂಡ ಕಟ್ಟೀಮನಿ ಜರತಾರಿ ಜಗದ್ಗುರು, ಜ್ವಾಲಾಮುಖಿಯ ಮೇಲೆ, ಸಂಗೊಳ್ಳಿರಾಯಣ್ಣ, ಕಿತ್ತೂರ ಕೇಸರಿ, ಮಾಡಿ ಮಡಿದವರು, ಜನಿವಾರ – ಶಿವದಾರ, ಸ್ವಾತಂತ್ರ್ಯದೆಡೆಗೆ ಮುಂತಾದುವುಗಳನ್ನು ಪ್ರಗತಿಪರ ಆಶಯದ ಹಿನ್ನೆಲೆಯಲ್ಲಿಯೇ ನೀಡಿದ್ದಾರೆ. ತಮ್ಮ ವೈಯಕ್ತಿಕ ಬದುಕೇ ಹೋರಾಟದಿಂದ ಕೂಡಿದ್ದಾಗ ಪ್ರಗತಿಶೀಲದ ಆಶಯವೂ ಇಲ್ಲಿ ಸಂಬಂಧ ಕಲ್ಪಿಸಿಕೊಂಡೇ ಹುಟ್ಟಿದೆ. ಕಾರ್ಮಿಕರ ಹೋರಾಟ ಮನೋಭಾವವನ್ನು ಕಣ್ಣಾರೆ ಕಂಡು 'ಜ್ವಾಲಾಮುಖಿಯ ಮೇಲೆ" ಚಿತ್ರಿಸಿದ್ದಾರೆ. ಕನ್ನಡ ಕಾದಂಬರಿ ಪರಂಪರೆಗೆ ಈ ಕೃತಿ ಶ್ರೇಷ್ಠ ಸೇರ್ಪಡೆಯೂ ಸಹಾ. ಸೋವಿಯತ್ ದೇಶದ ನೆಹರೂ ಪುರಸ್ಕಾರ ಸಿಕ್ಕಿದ್ದು ಎಡಪಂಥೀಯ ಚಿಂತನೆಯ ವಿಚಾರಕ್ಕೆ ಸಿಕ್ಕಿದ

ಮನ್ನಣೆಯಾಗಿದೆ. ಸಾಮಾಜಿಕ, ಆರ್ಥಿಕ, ರಾಜಕೀಯ ಸಮಸ್ಯೆಗಳನ್ನು ಹೋರಾಟದ ತೆಕ್ಕೆಗೆ ಸಿಲುಕಿಕೊಂಡು ಸಂಘರ್ಷದ ಮೂಲಕ ಕ್ರಾಂತಿಯನ್ನು ಸಾರುವ ಸಂಕೀರ್ಣ ಕಾದಂಬರಿ- ಜ್ವಾಲಾಮುಖಿಯ ಮೇಲೆ.

ಸ್ವಾತಂತ್ರ್ಯಪೂರ್ವದ ಚಳುವಳಿಗೆ ಪ್ರಾಣಾರ್ಪಣೆಯೇ ಹೋರಾಟ ಮೂಲಕದ ಕಾಣಿಕೆಯೆಂದು ತಿಳಿದ 'ಮಾಡಿ ಮಡಿದವರು'ವಿನ ವಸ್ತುವಿಗೂ ಸಂಗೊಳ್ಳಿರಾಯಣ್ಣನ ಕೆಚ್ಚುತನಕ್ಕೂ ಸಂಬಂಧವಿದೆ.

ಸಂಗೊಳ್ಳಿ ರಾಯಣ್ಣ ಕಿತ್ತೂರಿನ ಇತಿಹಾಸದ ಕೊನೆಯ ದಿನಗಳ ಕಥೆಯನ್ನು ಚಿತ್ರಿಸುವ ಕಾದಂಬರಿ. ಕಿತ್ತೂರು ರಾಣಿಯ ಪರಾಕ್ರಮದ ಸುವರ್ಣಾಧ್ಯಾಯ ಆ ವೇಳೆಗಾಗಲೇ ಮುಗಿದಿತ್ತು. ಚೆನ್ನಮ್ಮ ಬ್ರಿಟಿಷರ ಬಂಧಿಯಾಗಿ ಸೆರೆವಾಸ ಅನುಭವಿಸಿದ ಸಂದರ್ಭದಲ್ಲಿ ಆಕೆಯ ನಿಷ್ಠಾವಂತ ಅನುಯಾಯಿಗಳು ಕೈಗೊಂಡ ಹೋರಾಟದ ಕಥೆಯಲ್ಲಿ ರಾಯಣ್ಣನಂಥವನ ಪಾತ್ರ ಪ್ರಮುಖ ವಾದದ್ದು. ಯಾವುದೇ ಸಂಸ್ಥಾನಿಕವಾಗಿರದ ರಾಯಣ್ಣ ಒಬ್ಬ ಸಾಮಾನ್ಯ. ಜೀವನಕ್ಕಾಗಿ ಬೆವರಿಳಿಸಿ ದುಡಿಯುತ್ತಿದ್ದ ಶ್ರಮಜೀವಿ ರೈತ. ಈ ಹಿನ್ನೆಲೆಯಲ್ಲಿ ರಾಯಣ್ಣನ ಬಗ್ಗೆ ಕಟ್ಟೀಮನಿ ಯವರು ಹೇಳುವ ಈ ಮಾತು ಮಾರ್ಮಿಕವಾಗಿದೆ.

"ಜನಸಾಮಾನ್ಯರ ಪ್ರತಿನಿಧಿಯಾಗಿದ್ದ ಆ ಕಡುಗಲಿಯು ಸ್ವಾಭಿಮಾನ, ಸ್ವದೇಶಾಭಿಮಾನ, ಸ್ವಾತಂತ್ರ್ಯಪ್ರೇಮ, ಸೋಲನ್ನರಿಯದ ಅಪ್ರತಿಮ ಪೌರುಷ ಇತ್ಯಾದಿ ಸದ್ಗುಣಗಳಿಂದ ಮೆರೆದು, ಇಂದಿಗೂ ಲಕ್ಷಾಂತರ ಜನರ ಆರಾಧ್ಯಮೂರ್ತಿಯಾಗಿ ಉಳಿದಿದ್ದಾನೆ. ಇಂತಹ ಮಹಾವೀರನ ಜೀವನದ ಬಗೆಗೆ ಕಾದಂಬರಿ ಬರೆಯುವುದು ನನಗೊಂದು ಅಭಿಮಾನದ ವಿಷಯ. ಇಂದಿನ ಯುವಕ ಜನಾಂಗವು ರಾಯಣ್ಣನ ಜೀವನ ಕಥೆಯಿಂದ ಸಾಕಷ್ಟು ಸ್ಫೂರ್ತಿ ಪಡೆಯ ಬಹುದಾಗಿದೆ."

ಕಟ್ಟೀಮನಿ ಅವರ ಈ ಮಾತಿನಿಂದ ಇತಿಹಾಸ ಪುರುಷ ರಾಯಣ್ಣನನ್ನು ಹೋರಾಟಗಾರ ನೆಂದು ಸ್ಪಷ್ಟವಾಗಿ ಗುರ್ತಿಸಬಹುದಾಗಿದೆ. ರಾಯಣ್ಣನ ಸಮೀಪವಿದ್ದವರೇ ಅವನನ್ನು ನಿಶ್ಯಸ್ತ್ರನನ್ನಾಗಿ ಅಸಹಾಯಕ ಸ್ಥಿತಿಗೆ ದೂಡಿ ಶತ್ರು ಸೈನ್ಯದ ವಶವಾಗುವಂತೆ ಮಾಡುವುದು ಮನಸ್ಸು ಹಿಂಡುವ ಸಂದರ್ಭವಾದರೂ ಅದೊಂದು ಕರುಣಾಜನಕ ಕಥೆ. ಸ್ವದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ರಾಯಣ್ಣ ಈ ಸಮಾಜದ ಒಳಿತನ್ನು ಬಯಸಿದವನು. ಸ್ವಜನ ದ್ರೋಹದ ದುಷ್ಟಶಕ್ತಿ ಮೇಲ್ಗೈ ಪಡೆದು ಗಲ್ಲುಗಂಬವೇರಿದ ರಾಯಣ್ಣ ಜನಮಾನಸದ ವೀರ ನಾಯಕನಾಗಿದ್ದಾನೆ. ರಾಯಣ್ಣ ಕೊನೆಗೂ ಮಾನವೀಯ ಮೌಲ್ಯದ ಪ್ರತೀಕವಾಗಿ, ಮಾನವ ಬದುಕಿನ ಹೋರಾಟದ ಚಿರಂತನ ಸಂಕೇತವಾಗಿದ್ದಾನೆ. ಮನೆಯಿಂದ ಹೊರಗುಳಿದು ಎದೆಯಲ್ಲಿ ಕೆಚ್ಚನ್ನೇ ತುಂಬಿಕೊಂಡ ರಾಯಣ್ಣ ಪ್ರಕೃತಿಯ ಶಿಶು. ನಿಸರ್ಗದೊಟ್ಟಿಗಿನ ತನ್ನ ಅವಿನಾಭಾವ ಸಂಬಂಧವನ್ನು ಕೊನೆಯವರೆಗೂ ಉಳಿಸಿಕೊಂಡು ಅಲ್ಲಿಯೇ ಜೀವ ತೆತ್ತ ಹೋರಾಟಗಾರ.

ಕಟ್ಟೀಮನಿ ಅವರ ಮತ್ತೊಂದು ಕೃತಿ 'ಚಕ್ರವ್ಯೂಹ'ದಲ್ಲಿ ಸಮಕಾಲೀನ ಸಮಸ್ಯೆಯ ಸ್ಪಂದನವಿದೆ. ರೈತ ಸಮಸ್ಯೆಯ, ಭೂ ಸುಧಾರಣೆಯನ್ನೊಳಗೊಂಡ ವಸ್ತುವಲ್ಲದೆ ಆದರ್ಶೀಕರಣದ

ಜಾತಿ ವಿನಾಶ ಪರಿಕಲ್ಪನೆಯೂ ಈ ಕಾದಂಬರಿಯಲ್ಲಿದೆ. ಸಾಮಾಜಿಕ ಪಿಡುಗಿನ ವಿವಿಧ ಮುಖಗಳ ಮೂಲಭೂತ ಚಿಂತನೆ ಕಟ್ಟೀಮನಿ ಅವರ ಈ ಕಾದಂಬರಿಯಲ್ಲಿ ಕೆಲಸ ಮಾಡಿದೆ.

ಪ್ರಗತಿಶೀಲ ಚಳುವಳಿ ಕರ್ನಾಟಕಕ್ಕೆ ಹೆಜ್ಜೆ ಇರಿಸಿದ್ದ ಸಂದರ್ಭ ಕಟ್ಟೀಮನಿ ಅವರಂಥ ಸಾಮಾಜಿಕ ಕಳಕಳಿಯ ಲೇಖಕರ ಮೇಲೆ ಪ್ರಭಾವ ಬೀರಿತ್ತು. ಅದೇ ಸಂದರ್ಭದಲ್ಲಿ ರಚಿಸಿದ 'ಕಾರವಾನ್' ಕತೆ ಸ್ವಾತಂತ್ರ್ಯ ಪೂರ್ವದ ಸಂದರ್ಭದ್ದಾಗುತ್ತದೆ. ಅನ್ನ, ನೀರಿಲ್ಲದೆ ಸಾವಿರಾರು ಜನ ಮನೆ ಮಠ ತೊರೆದು ಗುಳೆ ಹೋಗುವ ಸಂದರ್ಭವನ್ನು ಕಾರವಾನ್‌ನಲ್ಲಿ ದಾಖಲಿಸಿದ್ದಾರೆ.

ಕಟ್ಟೀಮನಿ ಅವರಿಗೆ ಕಾಲಘಟ್ಟ ನಿರ್ಣಯಿಸುವ ಪ್ರಗತಿಪರ ವಿಚಾರಗಳು ಬೇಗ ಕಾರ್ಯ ರೂಪಕ್ಕೆ ಬರಬೇಕೆಂದು ಅಪೇಕ್ಷೆ. ಅದಕ್ಕಾಗಿ ಅವರು ವೈಯಕ್ತಿಕ ನೆಲೆಯಲ್ಲಿ ನಿಂತು ಸ್ಪಂದಿಸತೊಡಗಿದರು. ಸಾಹಿತ್ಯ-ಸಾಂಸ್ಕೃತಿಕ ಕ್ಷೇತ್ರದ ಅನಿವಾರ್ಯ ಹುಟ್ಟುಗಳಾದ ದಲಿತ-ಬಂಡಾಯ ಚಳುವಳಿಯ ಬಗ್ಗೆ ಸಹಾನುಭೂತಿ, ಪ್ರೀತಿ ಹೊಂದಿದ್ದ ಅವರು ಬಯಸಿದ ಕನಸು ಈ ವ್ಯವಸ್ಥೆಯಲ್ಲಿ ಕೈಗೂಡದೇ ಹೋದದ್ದು ಸ್ಥಿತ್ಯಂತರದ ಅನಿವಾರ್ಯತೆಯಿಂದ ಮಾತ್ರ. ತಮ್ಮ ಜೀವಿತಾವಧಿಯ ಕೊನೆ ಗಳಿಗೆವರೆವಿಗೂ ಸಮಾಜ ಪರಿವರ್ತನೆ ಕುರಿತೇ ಚಿಂತಿಸಿ, ಬರೆದು ಹೋರಾಟಕ್ಕೆ ಉಸಿರು ತುಂಬಿದ ಕಟ್ಟೀಮನಿ ಸಮಾಜ ಪರಿವರ್ತನೆಯ ಸಾಹಿತ್ಯದ ಹರಿಕಾರರಾಗಿದ್ದರು.

"ಸಾಹಿತಿಗೂ ಸಮಾಜಕ್ಕೂ ಸಂಬಂಧವಿದೆ; ನಿಕಟ ಸಂಬಂಧವಿದೆ. ಅಷ್ಟೇ ಅಲ್ಲ, ಸಾಹಿತಿ ಸಮಾಜಕ್ಕೆ ಜವಾಬ್ದಾರನಾಗಿದ್ದಾನೆ. ಅವನ ಮೇಲೆ ದೊಡ್ಡ ಜವಾಬ್ದಾರಿಯಿದೆ.......

........ಸಾಹಿತಿ ಸಾಮಾನ್ಯವಾಗಿ ಬಾಹ್ಯ ಜಗತ್ತಿನಲ್ಲಿ ಹಲವೊಂದು ವಿಷಯಗಳನ್ನು ನಿರೀಕ್ಷಿಸುತ್ತಾನೆ. ಕೆಲವೊಂದು ವಿಷಯಗಳನ್ನು ಅನುಭವಿಸುತ್ತಾನೆ. ಈ ನಿರೀಕ್ಷಣೆ, ಅನುಭವಗಳು ಆತನ ಹೃದಯದ ಹೊಯ್ದಾಟವನ್ನು, ಮೆದುಳಿನ ಕೆಲಸವನ್ನು ನಿಯಂತ್ರಿಸುತ್ತದೆ. ಮುಂದೆ ತನ್ನ ಭಾವನೆ ವಿಚಾರಗಳಿಗೆ ಆತ ರೂಪುಕೊಡಬಯಸುತ್ತಾನೆ."

ನಿರಂಜನರು ಒಪ್ಪಿಕೊಂಡ ಸೈದ್ಧಾಂತಿಕ ನಿಲುವಿನ ಈ ಮಾತುಗಳು ಅವರ ಬದುಕು ಬರಹದ ಮೇಲೆ ಕ್ಷ ಕಿರಣ ಬೀರಲು ಸಹಾಯಕವಾಗುವಂಥವು. ನಂಬಿಕೊಂಡ ವಿಚಾರಗಳಿಗೆ ಬದ್ಧರಾದ ಸಾಹಿತಿಗಳಲ್ಲಿ ಕಟ್ಟೀಮನಿ ಅವರಿಗಿಂತಲೂ ಗಟ್ಟಿ ವಿಚಾರಗಳ ಹೋರಾಟಗಾರ ನಿರಂಜನ ಪ್ರಗತಿಶೀಲರಲ್ಲೇ ಪ್ರಮುಖರು.

ಎಡಪಂಥೀಯ ವಿಚಾರಗಳಿಗೆ ಬದ್ಧರಾದ ನಿರಂಜನ ಕತೆ, ಕಾದಂಬರಿಗಳ ಜೊತೆಗೆ ವಿಚಾರ ಸಾಹಿತ್ಯವನ್ನೂ ಉಣಬಡಿಸಿದರು. ನೂರಕ್ಕೂ ಮಿಕ್ಕ ಕತೆಗಳಲ್ಲಿ ಕೆಲವು ಪತ್ರಿಕೆಯ ಪುಟಮಿತಿಗೆ ತಕ್ಕಂತೆ ಬರೆದವುಗಳಾಗಿವೆ. ಬರೆದೇ ಬದುಕಬೇಕಾದ ಅನಿವಾರ್ಯತೆ ಇದ್ದಾಗ ಸಾಹಿತ್ಯ ಮೌಲ್ಯ ಬಹಳಷ್ಟು ಕಡೆ ಗೌಣ ಅನ್ನಿಸುತ್ತದೆ. ಇಷ್ಟಾಗಿಯೂ ನೆನಪಲ್ಲಿ ಉಳಿವ ಕತೆಗಳೂ ಇವೆ. ಕೊನೆಯ ಗಿರಾಕಿ, ಒಂಟಿ ನಕ್ಷತ್ರ ನಕ್ಕಿತು, ಧ್ವನಿ ಮುಂತಾದುವು ಗುಣಾತ್ಮಕ ದೃಷ್ಟಿಯಿಂದಲೂ ಒಳ್ಳೆಯ ಕತೆಗಳೇ. 'ಕೊನೆಯ ಗಿರಾಕಿ'ಯಂತೂ ಮನುಷ್ಯನ ವಿಕೃತಿಯ ಕಾಮಾಂಧತೆ ಹಾಗೂ ಸಾಮಾಜಿಕ ಪಿಡುಗೆನಿಸಿದ ಹೆಣ್ಣಿನ ಮೇಲಿನ ದೌರ್ಜನ್ಯದ ನಿರಂತರ ಹಲ್ಲೆಯನ್ನು ದಾಖಲಿಸುವುದಾಗಿದೆ.

ಮನುಷ್ಯನ ಮನಸ್ಸೆ ವಿಕೃತಿಯೋ, ಸಮಾಜವೇ ರೋಗಪೀಡಿತವೋ ಎಂಬ ಪ್ರಶ್ನೆಗಳನ್ನು ಎತ್ತಿಕೊಳ್ಳುವ ಕತೆಯಲ್ಲಿ ನಿರಂಜನ ವಸ್ತುಸ್ಥಿತಿಯ ಕಡೆ ಮುಖಮಾಡಿ ಪರಿಚಯಿಸುತ್ತಾರೆ. ಕ್ರೂರ ದಬ್ಬಾಳಿಕೆಯೆದುರು ಸಮಾನತೆಗಾಗಿ ಮಿಡಿವ ಮನಸ್ಸುಗಳಿಗೆ 'ಧ್ವನಿ' ಒಳ್ಳೆಯ ಉದಾಹರಣೆ. ಮೌನದ ಮಾತುಗಳಲ್ಲೇ ಧ್ವನಿಯೂ ಒಳಗೊಂಡ ಈ ಕತೆ ಸ್ವಾತಂತ್ರ್ಯ ಭಾರತದ ನೈಜತೆಯನ್ನೇ ಹೇಳುತ್ತದೆ. ಸಾಮಾಜಿಕ ವೈರುಧ್ಯಗಳ ನಡುವೆಯೂ ಮನುಷ್ಯ ಪ್ರೀತಿಗಾಗಿ ಹಂಬಲಿಸುವ ನಿರಂಜನರ ಕತೆಗಳು ಬದಲಾವಣೆಯ ಹೊಸ ಆವಿಷ್ಕಾರಕ್ಕೆ ಮಿಡುಕಾಡುವುದನ್ನು ಕಾಣಬಹುದಾಗಿದೆ. ರಾಜಕೀಯ ಗೂಂಡಾ ಸಂಸ್ಕೃತಿಯ ನಿರ್ಲಜ್ಜತನವನ್ನು ಎತ್ತಿ ಹೇಳುವ 'ಕಣ್ಣಾರೆ ಕಂಡವರು' ಕತೆ ಹೆಪ್ಪುಗಟ್ಟಿದ ಕ್ರೌರ್ಯದ ದಾಖಲೆ ಎನಿಸುತ್ತದೆ. ವಾಸ್ತವದ ವಿಚಾರಗಳನ್ನು ತೆರೆದಿಟ್ಟಾಗಲೂ ನಮಗೆ ಸಹಜ ಪ್ರೀತಿ ಮಾನವೀಯತೆ ಎದ್ದು ಕಾಣುತ್ತದೆ.

ಕತೆಗಳಿಗೆ ಒಂದು ಚೌಕಟ್ಟು ನಿರ್ಮಿಸಿಕೊಂಡ ನಿರಂಜನರು ಕಾದಂಬರಿ ಪ್ರಕಾರದಲ್ಲೂ ಯಶಸ್ವಿಹೆಜ್ಜೆ ಗುರುತು ಇಟ್ಟರು. ಮೃತ್ಯುಂಜಯ, ಚಿರಸ್ಮರಣೆಯಂಥ ಕಾದಂಬರಿಗಳು ನಿರಂಜನರು ಪಡೆದಿದ್ದ ಅನುಭವದ ಕ್ಯಾನವಾಸಿನ ವಿಸ್ತೀರ್ಣವನ್ನು ಹೇಳುವುದಾಗಿದೆ. ಇತಿಹಾಸದ ಒಂದು ಎಳೆ ಒಂದು ಕಾದಂಬರಿಗೆ ವಸ್ತುವಾಗುವುದನ್ನು ಮೃತ್ಯುಂಜಯದಲ್ಲಿ ಕಾಣಬಹುದಾದರೆ, ರೈತ ಹಾಗೂ ಕಾರ್ಮಿಕ ಹೋರಾಟದ ಕಯ್ಯೂರು ಜನತೆಯ ಜೀವನಾಡಿಯಂತಿರುವ 'ಚಿರಸ್ಮರಣೆ' ಕನ್ನಡ ಕಾದಂಬರಿ ಲೋಕದ ಸ್ಮರಣೀಯ ನೆನಪೂ ಕೂಡ. ಸಾಮ್ರಾಜ್ಯಶಾಹಿ ಜಗತ್ತು ಮತ್ತು ಜಮೀನ್ದಾರಿ ಆಡಳಿತ ಅನುಭವವನ್ನು 'ಚಿರಸ್ಮರಣೆ' ಕೊಡುತ್ತದೆ. ಸ್ವಾತಂತ್ರ್ಯ ಪೂರ್ವದ ಜಮೀನ್ದಾರಿ ನಡವಳಿಕೆಗೆ ರೈತ ಹೋರಾಟದ ತಾತ್ವಿಕ ಚೌಕಟ್ಟಿನ ನಿರ್ಮಾಣ ಇದರಲ್ಲಾಗಿದೆ. ಕಯ್ಯೂರಿನ ಕ್ರಾಂತಿಬೀಜ ಬಿತ್ತಿದ ಶಾಲಾ ಮಾಸ್ತರು ರೈತರನ್ನು ಸಂಘಟಿಸುವ, ಹೋರಾಟಕ್ಕೆ ಅಣಿಗೊಳಿಸುವ ರೀತಿ ಭಿನ್ನವಾದುದು, ವೈಚಾರಿಕ ವಿಚಾರಗಳ ತಳಹದಿ ಶಾಲಾ ಮಾಸ್ತರ ಮೂಲಕ ಇಲ್ಲಿ ಕೆಲಸ ಮಾಡಿದೆ. ಗ್ರಾಮದಲ್ಲಿ ಬದಲಾವಣೆ ತರಲು ಚಳುವಳಿಯ ಅರ್ಥಪೂರ್ಣತೆಯನ್ನು ಸಾರುತ್ತದೆ. ಚಳುವಳಿಗಳ ಮೂಲಕ ಬದುಕಿನ ಬದಲಾವಣೆಗಳನ್ನು ಕಾಣಬಹುದೆಂದು ಈ ಕಾದಂಬರಿ ಸ್ಪಷ್ಟಪಡಿಸುತ್ತದೆ.

ಹೊಸ ಸಂಸ್ಕೃತಿಯೊಂದರ ಹುಟ್ಟಿಗೆ ಪ್ರೇರಣೆ ಆಗುವ ಚಳುವಳಿಯ ಕೇಂದ್ರ ಬಿಂದುವಾದ 'ಚಿರಸ್ಮರಣೆ' ಮಾನವೀಯ ನೆಲೆಯನ್ನು ತನ್ನ ಒಡಲಲ್ಲಿ ತುಂಬಿಕೊಂಡು ಸಮಾಜಕ್ಕೆ ಬೇಕಾದ ಹೊಸ ತಂಪುಗಾಳಿಯನ್ನು ತಿದ್ದಿ ಒತ್ತಿ ಕೊಡುವುದಾಗಿದೆ.

ಬೆಟ್ಟ, ಬೆಟ್ಟದ ಇಳಿಜಾರು, ಕಾಡುಪೊದೆ, ತರಗೆಲೆ ಅದರೊಳಗೆ ಶಬ್ದಿಸುತ್ತ ಓಡುವ ಓತಿಕ್ಯಾತ, ಮರದ ಕಾಂಡದಿಂದ ಒಸರಿದ್ದ ಗೋಮದು–ಇಂಥಲ್ಲೇ ಆಶ್ರಯಿತವಾಗಿ ಕುಳಿತಿದ್ದ ಅಪ್ಪು ಚಿರಕುಂಡರು ವಹಿಸಿದ ಮೌನಗಳ ದಾಖಲೆ ಚಿರಸ್ಮರಣೆಯಲ್ಲಿ ನಿಸರ್ಗದ ಸಾವಯುವ ಸಂಬಂಧಕ್ಕೆ ತಳುಕು ಹಾಕಿಕೊಂಡಿದೆ.

"ಪ್ರಜ್ಞಾವಂತ ಬರಹಗಾರ–ಕಾಲ, ಇತಿಹಾಸ, ಸಮಾಜ, ಪ್ರಗತಿಗಳ ಪ್ರಜ್ಞೆ ಇರುವ ಬರಹಗಾರ–ಅರ್ಥಪೂರ್ಣ ಸಾಹಿತ್ಯವನ್ನು ನಿರ್ಮಿಸಲು ಶಕ್ತ. ಅಂತಹ ಸಾಹಿತ್ಯದಿಂದ ಬದುಕು ಹಸನಾಗುತ್ತದೆ, ಮಾನವ ಉನ್ನತಿಯತ್ತ ಸಾಗುತ್ತಾನೆ" ಇಂಥ ಶಕ್ತಿಯನ್ನು ನಂಬಿದ್ದ ನಿರಂಜನರು ಕೊಟ್ಟ ಕೃತಿಗಳು ಪ್ರಗತಿಶೀಲ ಸಾಹಿತ್ಯಕ್ಕೆ ಮಹತ್ವದ ಕೊಡುಗೆಗಳಾಗಿವೆ.

ಪ್ರಗತಿಶೀಲರಲ್ಲಿ ಕೆಲವರು ಇದುವರೆಗೆ ದಾಖಲಾಗಿದ್ದ ಮಡಿವಂತಿಕೆ ಸಾಹಿತ್ಯದಿಂದ ಹೊರಬಂದು ಸೂಳೆಗಾರಿಕೆಯಂಥ ವಸ್ತುವನ್ನು ಕತೆ ಕಾದಂಬರಿಗೆ ಆಯ್ಕೆ ಮಾಡಿಕೊಂಡರು. ಅವರಲ್ಲಿ ಕೈಲಾಸಂ, ಅನಕೃ, ತರಾಸು ಮುಖ್ಯವಾಗುತ್ತಾರೆ. ಆ ಸಂದರ್ಭದ ಕೆಲವು ಬರಹಗಾರರಂತೂ ಅನುಭವಕ್ಕಾಗಿಯೇ ಶೃಂಗಾರ ಬದುಕನ್ನು ಅಪ್ಪಿದ್ದುಂಟು. ಕಟ್ಟೀಮನಿ ತಮ್ಮ ಆತ್ಮಕಥೆಯಲ್ಲಿ ಪತ್ರಕರ್ತರಾಗಿದ್ದ ಸಂದರ್ಭದ ಘಟನೆಯೊಂದನ್ನು ನೆನೆಯುತ್ತಾರೆ. ಹಾಗೆ ನಿರಂಜನರು ಈ ವಿಚಾರವನ್ನು ಹೊರ ನಿಂತು ಚರ್ಚೆಗೆ ಎಳೆತಂದು ತಮ್ಮ "ಬುದ್ಧಿ ಭಾವ ಬದುಕು" ಕೃತಿಯಲ್ಲಿ ಹೀಗೆ ದಾಖಲಿಸಿದ್ದಾರೆ:

"ಆಧುನಿಕ ಕನ್ನಡ ಸಾಹಿತ್ಯ ಮಡಿವಂತಿಕೆಯ ಸಂಕುಚಿತ ಪ್ರವೃತ್ತಿಯಿಂದ ಆವೃತ್ತವಾಗಿದ್ದರೂ ಆ ಆವರಣದಿಂದ ಹೊರಬಂದು ಸೂಳೆಗಾರಿಕೆಯ ಬಗ್ಗೆ ಬರೆಯುವ ಯತ್ನ ಬಲು ಹಿಂದೆ ನಡೆಯಿತು. ಅದು ೧೯೧೯ರಲ್ಲಿ ಆ ಯತ್ನವನ್ನು ಮಾಡಿದವರು ಕನ್ನಡದಲ್ಲಿ ಪ್ರಗತಿಶೀಲತೆಯ ಪಿತಾಮಹರಾದ ಕೈಲಾಸಂ! ಅವರು ರಚಿಸಿದ 'ಮೊಮ್ಮಗಳ ಮುಯ್ಯಿ'ಯನ್ನು ಯಾರೋ ಬರೆದುಕೊಂಡಿದ್ದರು. ಆದರೆ ಆ ಹಸ್ತಪ್ರತಿ ಕಳೆದುಹೋಗಿದೆ. ಅಲ್ಪಸ್ವಲ್ಪ ಅಂಶಗಳನ್ನು ನೆನಪಿಟ್ಟವರು, ಅಷ್ಟನ್ನು ಮಾತ್ರ ಅಚ್ಚುಹಾಕಿದ್ದಾರೆ. ಆ ಭಾಗವನ್ನಷ್ಟು ಓದಿದರೂ, ಸಾಕು, ಮೈ ರೋಮ ಮುಳ್ಳಾಗುವುದು. ಕೈಲಾಸಂ ನಾಲಿಗೆ, ಮಾರಕ ಅಸ್ತ್ರವಾಗಿ ತನ್ನ ಮೂಲಕ ಮಾತುಗಳನ್ನಾಡಿಸಿದ ಪಾತ್ರಗಳ ಆ ಬಗೆಯೊ! 'ಮೊಮ್ಮಗಳ ಮುಯ್ಯಿ'ಯಲ್ಲಿದ್ದುದು, ಸೂಳೆಗಾರಿಕೆಯ ಶನಿಸಂತಾನವಾದ ಗುಹ್ಯರೋಗದ ಚಿತ್ರಣ....

......ಅನಕೃ ಅವರ ಕಾದಂಬರಿಗಳು ಪ್ರಗತಿಯ ದೃಷ್ಟಿಗೆ ಎಳ್ಳುನೀರು ಬಿಟ್ಟುದು ಮಾತ್ರವಲ್ಲ; ನಮ್ಮ ಬರಹಗಾರರು ಪ್ರಗತಿಗೆದುರಾದ ಹಾದಿಯಲ್ಲಿ ಕೆಳಕ್ಕೆ ಜಾರುವುದು ಹೇಗೆ ಸಾಧ್ಯವೆಂಬುದನ್ನೂ ತೋರಿಸಿಕೊಟ್ಟವು. ವೇಶ್ಯಾ ಪದ್ಧತಿಯ ಮೂಲೋತ್ಪಾದನೆಯೇ ತಮ್ಮ ಗುರಿಯೆಂದು ಅವರು ಮುನ್ನುಡಿಯಲ್ಲಿ ಎಷ್ಟು ಹೇಳಿಕೊಂಡರೂ ಒಳಗಿನ ತಿರುಳು ಹಳಸಿಹೋಗಿದ್ದ ಕಾಮ ಕೇಳುಗರ ವಿಕೃತ ವಿಲಾಸಗಳು ರಸಪುಷ್ಟ ವರ್ಣನೆಯಾಗಿತ್ತು...."

ಇಂಥ ವಾಸ್ತವಾಂಶಗಳನ್ನು ಹೇಳುತ್ತಲೇ ಕನ್ನಡ ಪ್ರಗತಿಶೀಲ ಚಳುವಳಿಯಲ್ಲಿ ಹುಟ್ಟಿದ ಕೆಲವು ಬರಹಗಾರರ ಮೇಲೆ ತೀಕ್ಷ್ಣ ವಿಮರ್ಶೆಗೂ ತೊಡಗಿದ ನಿರಂಜನ, ಪ್ರಗತಿಶೀಲದ ಅನಿವಾರ್ಯದ ಹುಟ್ಟು ಅವಸಾನದ ಹಾದಿ ಹಿಡಿದ ಬಗ್ಗೆ ನೊಂದಿದ್ದರು.

ಮನುಷ್ಯ ಬದುಕಿನೊಟ್ಟಿನ ನಿಸರ್ಗದ ತಿರಸ್ಕಾರವನ್ನು ಕಂಡ ಬೆರಳೆಣಿಕೆಯ ಪ್ರಗತಿಶೀಲರು ಸಮಾಜೋದ್ಧಾರದ ಹೆಸರಿನಲ್ಲಿ ಕಳಂಕಿತರಾದದ್ದು ವಾಸ್ತವ ಸಂಗತಿ.

ಅನಕೃ, ತರಾಸು, ಕಟ್ಟೀಮನಿ, ನಿರಂಜನರಂತೆ ಪ್ರಗತಿಶೀಲ ಚಳುವಳಿಯಲ್ಲಿ ನೇರ ಪಾಲ್ಗೊಳ್ಳದಿದ್ದರೂ, ಪ್ರಗತಿಶೀಲ ಮನೋಭಾವದ ಬರಹಗಾರ ಚದುರಂಗದ ಪ್ರಗತಿಶೀಲ ಬರೆಹಗಳ ಮೂಲಕ ಸಾಹಿತ್ಯವಲಯದಲ್ಲೇ ವಿಶಿಷ್ಟ ವ್ಯಕ್ತಿಯಾಗಿ ಚಿರಪರಿಚಿತರು. ಕಟ್ಟೀಮನಿಯವರದು ಗ್ರಾಮೀಣ ಹಿನ್ನೆಯ ಬರಹಗಳಾದರೆ; ಚದುರಂಗರದು ಮತ್ತೊಂದು ರೀತಿಯ ಗ್ರಾಮ್ಯ ಬದುಕು, ನಗರದ ಬದುಕುಗಳ ಮಿಶ್ರಣ.

'ನಾಲ್ಕು ಮೊಳ ಭೂಮಿ' ಎಂಬ ಕತೆ ಪ್ರಗತಿಶೀಲ ಚಳುವಳಿಯ ಆಶಯಕ್ಕೆ ತಕ್ಕ, ಅಭಿವ್ಯಕ್ತಿ ಕೊಡುವುದಾಗಿದೆ. ಇದರ ವಸ್ತು ಭೂಮಿ ಸಮಸ್ಯೆ. ಭಾರತೀಯ ಗ್ರಾಮೀಣ ವ್ಯವಸ್ಥೆಯಲ್ಲಿ ಗ್ರಾಮ ಪಂಚಾಯ್ತಿ ಹಾಗೂ ಅಮಲ್ದಾರ ಕಛೇರಿಯ 'ಲಂಚಗುಳಿತನದ ನ್ಯಾಯ' ಇಲ್ಲಿ ಸಾಂದರ್ಭಿಕವಾಗೇ ಬಂದಿದೆ. ಭೂ ವ್ಯಾಜ್ಯ ಅನ್ಯಾಯಕ್ಕೆ ತುತ್ತಾದ ವಿವರಗಳಿಂದಾಗಿ ಗ್ರಾಮೀಣ ಬದುಕಿನ ಒಂದು ಎಳೆ ಮಾತ್ರ ಇಲ್ಲಿ ದಕ್ಕಿ ಇಡೀ ಪರಿಸರದ ಒಳ ಹೊರಗುಗಳ ಬಗೆಗೆ ಪರಿಚಯವಾಗುವುದು ಚದುರಂಗರ ಕಲಾತ್ಮಕತೆಯನ್ನು ಎತ್ತಿ ಹಿಡಿಯುತ್ತದೆ.

"ಪ್ರಗತಿಶೀಲರು ಕಲ್ಪನೆಗೆ ಹೆಚ್ಚು ಪ್ರಾಧಾನ್ಯವಿದ್ದ Romantic ಸಂಪ್ರದಾಯವನ್ನು ತಿರಸ್ಕರಿಸಿ, ಜನಪರವಾದ ಸಾಹಿತ್ಯ ಸೃಷ್ಟಿಯತ್ತ ತಮ್ಮ ದೃಷ್ಟಿ ಹರಿಸಿದರು. ಮಾರ್ಕ್ಸ್‌ವಾದದಿಂದ ಪ್ರಭಾವಿತರಾದ ಇವರು, ಇಲ್ಲಿಯವರೆಗೆ Romantic ಸಾಹಿತಿಗಳ ಅನಾದರಕ್ಕೆ ಪಾತ್ರವಾಗಿದ್ದ ಕೂಲಿಕಾರರು, ರೈತರು ಇತ್ಯಾದಿ ಕೆಳವರ್ಗದ ಜನರಿಗೆ, ತಮ್ಮ ಸಾಹಿತ್ಯದಲ್ಲಿ ಅವಕಾಶ ಮಾಡಿಕೊಟ್ಟರು. ಇದೇನೊ ಪ್ರಗತಿಪರ ಹೆಜ್ಜೆಯೇ; ಒಂದು ರೀತಿಯ ಬಂಡಾಯವೇ. ಆದರೆ ಬಡವ-ಬಲ್ಲಿದ ಶೋಷಣೆ-ಶೋಷಿತ-ಹೀಗೆ ವಿಶೇಷವಾಗಿ ಕಪ್ಪು, ಬಿಳುಪಾಗಿ ಸೃಷ್ಟಿಗೊಂಡದ್ದರಿಂದ, ಇವರ ಬಹಳಷ್ಟು ಕೃತಿಗಳು ಸಾಫಲ್ಯ ಪಡೆಯಲಿಲ್ಲ, ಚಾರಿತ್ರಿಕ ವಸ್ತುವನ್ನು ತೆಗೆದುಕೊಂಡಾಗಲೂ ಆ ಕಾಲದ ಗತ ವೈಭವದ ಕಲ್ಪನೆಯಲ್ಲೇ ಬರೆದರು! ಆದರೂ ಮುಂದೆ ಬಂದ ದಲಿತ ಸಾಹಿತಿಗಳಿಗೆ ಒಂದು ಅರ್ಥದಲ್ಲಿ ಮಾರ್ಗದರ್ಶಕರಾದರೂ ಎಂದು ಹೇಳಬಹುದೇನೋ! ಹೀಗಿದ್ದೂ ಕೆಲವು ಉತ್ತಮ ಕಥೆ ಕಾದಂಬರಿಗಳನ್ನು ಕೆಲವರಾದರೂ ಕೊಟ್ಟಿದ್ದಾರೆ." ಮಾನವೀಯತೆಯೇ ಮೂರ್ತಿವೆತ್ತ ಚದುರಂಗರು ಪ್ರಗತಿಶೀಲ ಚಳುವಳಿ ಬಗ್ಗೆ ದಾಖಲಿಸಿದ ಈ ಮಾತು ಪ್ರಾಮಾಣಿಕದ್ದು. ಅವರೇ ಈ ಚಳುವಳಿಯ ಸಮೀಪವಿದ್ದವರಾಗಿ, ಪ್ರಭಾವಿತರಾಗಿ ಪ್ರಗತಿಶೀಲದ ಕೆಲವು ಮಿಂಚುಗಳನ್ನು ಬಿಟ್ಟಿದ್ದಾರೆ.

ಸಮಾಜದ ಕೆಳವರ್ಗದ ಜನರ ದಾರುಣ ಸನ್ನಿವೇಶಗಳನ್ನು ಹೊಂದಿದ ಕಥಾವಸ್ತುಗಳು ಚದುರಂಗ ಅವರಿಂದ ಮೂಡಿಬಂದಿವೆ. ಹಸಿವು, ದಾರಿದ್ರ್ಯ, ಅಜ್ಞಾನಗಳ ಆಚೆಗಿನ ಬೆಳಕು ಕಾಣುವ ಕತೆಗಳೂ ಬಂದಿವೆ. ಸಾಮಾಜಿಕ ಶೋಷಣೆಯ ವಿವಿಧ ಸ್ವರೂಪಗಳು ಪ್ರತಿಬಿಂಬಿತ ವಾಗಿವೆ. ಸಮಕಾಲೀನ ಬದುಕನ್ನು ಸಾಮಾಜಿಕ ಸಮಸ್ಯೆಗಳು ದುರ್ಬಲಗೊಳಿಸುತ್ತ ಸಾಗುವುದಕ್ಕೆ ವ್ಯಕ್ತಿ ಪ್ರವೃತ್ತನಾಗಬೇಕೆಂಬ ಆಶಯ ಹಲವು ಕತೆಗಳಲ್ಲಿ ಅಭಿವ್ಯಕ್ತಗೊಂಡಿದೆ.

ಪ್ರಗತಿಶೀಲ ಚಳುವಳಿಯಲ್ಲಿ ಪರೋಕ್ಷ, ಅಪರೋಕ್ಷ ಪಾತ್ರವಹಿಸಿದ ಪ್ರಮುಖರ ಕೆಲವು ಕತೆ, ಕಾದಂಬರಿಗಳ ಒಳಹೊರಗುಗಳನ್ನು ತಿಳಿದ ನಂತರ, ಈ ಚಳುವಳಿಯ ಸಂದರ್ಭದಲ್ಲೇ ಬರೆದು ಶ್ರೇಷ್ಠರಾಗಿದ್ದ ಕುವೆಂಪು, ಕಾರಂತ, ಮಾಸ್ತಿ ಮುಂತಾದವರ ಮೇಲೆ ಈ ಚಳುವಳಿ ಬೀರಿದ ಪಾತ್ರವೇನು? ಎಂಬ ಪ್ರಶ್ನೆ ಉಳಿಯುತ್ತದೆ. ಯಾವುದೇ ಚಳುವಳಿ ಎಲ್ಲಾ ಕಾಲದ ಬರಹಗಾರನ್ನು ತಟ್ಟಬೇಕೆಂಬ ನಿಯಮ ಇಲ್ಲದಿದ್ದರೂ, ಆಯಾ ಕಾಲದ, ಸಂದರ್ಭದ ಚಳುವಳಿಗಳು ಸಂವೇದನಾಶೀಲ ಬರಹಗಾರನ ಮೇಲೆ ಒಂದಿಲ್ಲೊಂದು ಘಟ್ಟದಲ್ಲಿ ಪ್ರಭಾವ ಬೀರುವುದಂತೂ ಸತ್ಯ ಸಂಗತಿ.

ಇಲ್ಲಿ ಕಾರಂತ, ಮಾಸ್ತಿ ಅವರನ್ನು ಹೊರಗಿಟ್ಟು, ಕುವೆಂಪು ಅವರ ಬಗ್ಗೆ ಹೇಳುವುದಾದರೆ;

ಕುವೆಂಪು ಪ್ರಗತಿಶೀಲ ಚಳುವಳಿಗೆ ಮುನ್ನವೇ ಪ್ರಗತಿಪರ ಧೋರಣೆಯಿಂದ ಮೌಢ್ಯತೆ ಅಂಧಶ್ರದ್ಧೆಗಳನ್ನು ಕಟುವಾಗಿ ಟೀಕಿಸುತ್ತ, ವೈಚಾರಿಕ ಆಲೋಚನೆಯಿಂದ ವಿಚಾರವಾದವನ್ನು ಮಂಡಿಸಿದ್ದರು. ಪ್ರಗತಿಶೀಲರು ಕಂಡ ಸತ್ಯವನ್ನು ಕುವೆಂಪು ತಮ್ಮ ಕಾವ್ಯ, ನಾಟಕ, ಕತೆ, ಕಾದಂಬರಿಗಳಲ್ಲಿ ಹೇಳಿದ್ದರಾದ್ದರಿಂದ ಅವರ ಕೆಲವು ಬರಹಗಳನ್ನಾದರೂ ಇಲ್ಲಿ ಉದಾಹರಿಸ ಬಹುದು: ಕತೆಗಳಲ್ಲಿ ಧನ್ವಂತರಿಯ ಚಿಕಿತ್ಸೆ, ಕಾವ್ಯದಲ್ಲಿ ಕಲ್ಕಿ, ವೈಚಾರಿಕ ಲೇಖನಗಳಲ್ಲಿ ನಿರಂಕುಶಮತಿಗಳಾಗಿ, ವಿಶ್ವಮಾನವ ಸಂದೇಶ ಮುಖ್ಯವಾಗುತ್ತವೆ. ಹಾಗೆ ನೋಡಿದರೆ ಕುವೆಂಪು ಪ್ರಕೃತಿಯ ಆರಾಧಕರು, ಸೂರ್ಯೋದಯ, ಸೂರ್ಯಾಸ್ತ, ಮಳೆಗಾಲ, ಮಳೆಯ ರಾತ್ರಿ ಬೆಳದಿಂಗಳ ರಾತ್ರಿಗಳ ಸೌಂದರ್ಯೋಪಾಸನೆಯನ್ನು ಸೃಜನಶೀಲ ಬರಹದಲ್ಲಿ ಧಾರಾಳವಾಗಿ ಬಳಸಿದ್ದಾರೆ. ಒಂದೆಡೆ ನಿಸರ್ಗ, ಮತ್ತೊಂದೆಡೆ ಸಾಮಾಜಿಕ ಅಸಮಾನತೆ ಮೌಢ್ಯತೆಯ ವಿರುದ್ಧದ ದನಿ ಎತ್ತುವಿಕೆಯಿಂದ ವಿಚಾರವಾದದ ಬೀಜ ಬಿತ್ತುತ್ತಾರೆ.

ಕುವೆಂಪು ಅವರ 'ಕಲ್ಕಿ' ಕವನ ಕನಸಿನ ಲೋಕದ ಮೂಲಕ ವಾಸ್ತವದ ಅರಿವನ್ನು ಮನಮುಟ್ಟುವಂತೆ ಚಿತ್ರಿಸುವುದಾಗಿದೆ. ಶೋಷಿತ ಜನರ ಆಕ್ರೋಶ ಜಡಗೊಂಡಿರುವ ವ್ಯವಸ್ಥೆಯೊಂದನ್ನು ಸಂಪೂರ್ಣ ಬುಡಮೇಲು ಮಾಡುವುದರ ಮೂಲಕ ಬದಲಾವಣೆ ತರಲು ಪ್ರಯತ್ನಿಸುವ ಆಂತರಿಕ ಬಂಡಾಯ ಇದರ ವಸ್ತುವಾಗಿದೆ. ಆಲೋಚನೆ ಮತ್ತು ಕ್ರಿಯೆಗಳೆರಡರಲ್ಲೂ ಕ್ರಾಂತಿಕಾರಕ ಬದಲಾವಣೆಗೆ 'ಕಲ್ಕಿ' ಸಂಕೇತವಾಗಿ ನಿಂತುಕೊಳ್ಳುತ್ತದೆ.

ಇದುವರೆಗಿನ ಅಭಿಪ್ರಾಯವನ್ನು ಸಂಕ್ಷೇಪಗೊಳಿಸುವ ಮುನ್ನ ಪ್ರಗತಿಶೀಲರು ಚಿಂತಿಸಿದ ಹಾಗೂ ಕಡೆಗಣಿಸಿದ ಕೆಲವು ವಿಚಾರಗಳು:

೧. ಪ್ರಗತಿಶೀಲರು ಗದ್ಯ ಪ್ರಕಾರಕ್ಕೆ ಪ್ರಾಧಾನ್ಯಕೊಟ್ಟದ್ದು.
೨. ಕಾವ್ಯದ ಮೂಲಕವೂ ಶೋಷಣೆ, ಅಂಧಶ್ರದ್ಧೆಗಳನ್ನು ಹೇಳಬಹುದೆಂಬುದನ್ನು ಮರೆತು ದೂರ ನಿಂತಿದ್ದು; ಅಥವಾ ಕಾವ್ಯವನ್ನು ಅಸ್ಪೃಶ್ಯವಾಗಿ ಕಂಡದ್ದು.
೩. ಶೋಷಣೆಯೆಂದರೆ ಕಾರ್ಮಿಕ, ರೈತರಷ್ಟೇ ಬರಬಹುದು ಅಥವಾ ಧನಿಕ-ಬಡವನನ್ನು ಶೋಷಿಸುತ್ತಾನೆಂದು ತಿಳಿದದ್ದು-
೪. ಹೆಣ್ಣು ಶತಮಾನಗಳಿಂದ ಶೋಷಿತಳಾಗುತ್ತಿದ್ದಾಳೆ ಎಂಬುದನ್ನು ಮರೆತದ್ದು-
೫. ಗಂಡಸರ ಸಮಸ್ಯೆಗಳಿಗಿಂತ ಮಹಿಳಾ ಸಮಸ್ಯೆಗಳು ಭಿನ್ನ ಎಂದು ತಿಳಿಯದೆ, ಆ ವರ್ಗವನ್ನೇ ಕಡೆಗಣಿಸಿ ಪ್ರಗತಿಶೀಲ ಚಳುವಳಿಯ ತೆಕ್ಕೆಗೆ ತೆಗೆದುಕೊಳ್ಳದೇ ಕಡೆಗಣಿಸಿದ್ದು-

ಈ ಮೇಲೆ ಕಾಣಿಸಿದ ವಿಚಾರಗಳು ಪರಿಗಣನೆಗೆ ಬಾರದಿರುವುದು ಪ್ರಾಸಂಗಿಕ ವಿಚಾರಗಳಾದರೆ, ಆ ಚಳುವಳಿಯ ಹೆಜ್ಜೆಗುರುತುಗಳನ್ನು ನಾವು ಪಟ್ಟಿ ಮಾಡಬೇಕಾಗುತ್ತದೆ. ಪ್ರಗತಿಶೀಲರಿಗೆ ಸಮಾಜಕ್ಕಿಂತ ನಿಸರ್ಗ ಮುಖ್ಯವಾಗದೇ ಹೋಗಿದ್ದರಿಂದ "ಮನುಷ್ಯ" ಎಲ್ಲಾ ಬರಹದ ಹಿಂದಿನ ಚರ್ಚಾ ವಿಷಯವಾಗಿರುವುದು ಮುಖ್ಯ. Creation ಅನ್ನುವುದು ನಿಸರ್ಗ ದೊಟ್ಟಿಗೆ ಸಾಮಾಜೀಕರಣಗೊಳ್ಳುತ್ತಲೇ ಒಂದಾಗುವ ಕ್ರಿಯೆ ಆಗಿರುವ ಕಾರಣಕ್ಕೆ 'ಪ್ರಗತಿ'ಹೊಸ ದಾರಿಯ ಹುಡುಕಾಟವೇ ಆಗುತ್ತದೆ. ಇಲ್ಲಿ ಪ್ರಗತಿಶೀಲರಿಗೆ ಸಾಮಾಜಿಕ ಬದಲಾವಣೆಗೆ ಸಾಹಿತ್ಯ ಒಂದು ಮಾಧ್ಯಮ ಅಷ್ಟೇ ! ಮತ್ತೆಲ್ಲ ಅವರ ಸಂಬಂಧ ಜನಸಾಮಾನ್ಯರ ಜೊತೆಗೇ.

ಈ ಕಾರಣಕ್ಕೆ ನಿಸರ್ಗ ಪ್ರೀತಿಗಿಂತ ಮನುಷ್ಯನ ಕಷ್ಟಗಳ, ನೋವುಗಳ ಸಾರ ಸಂಗ್ರಹ ಇಲ್ಲಿ ಮುಖ್ಯವಾಗುತ್ತದೆ. ನವೋದಯದ ಒಡಲಿನಲ್ಲೇ ಚಿಗುರೊಡೆದ ಪ್ರಗತಿಶೀಲಕ್ಕೆ ಆದರ್ಶದ ಪಾಠವೂ ಬೆನ್ನ ಹಿಂದಿತ್ತು ಎನ್ನುವುದನ್ನು ಮರೆಯಲಾಗುವುದಿಲ್ಲ.

ಪ್ರಗತಿಶೀಲರು ಕಂಡ ಸತ್ಯವನ್ನು ಪಟ್ಟಿ ಮಾಡುವುದಾದರೆ–

೧. ಅನಕೃ, ತರಾಸು ಅವರು ಹೋರಾಟಪ್ರಜ್ಞೆ ಎಂಬುದನ್ನು ತಾತ್ವಿಕ ಚೌಕಟ್ಟಿಗೆ ಒಳಪಡಿಸಿ ಎಲ್ಲವನ್ನೂ ಸ್ವೀಕರಿಸುವ ಹಂತಕ್ಕೆ ಹೋಗದೆ ತಮ್ಮ ಅನುಭವಗಳನ್ನೇ ಸಾಮಾಜೀಕರಣಕ್ಕೊಳಪಡಿಸಿದ್ದು;
೨. ಹಸಿವು, ಬಡತನ, ಶೋಷಣೆ, ದಬ್ಬಾಳಿಕೆಗಳನ್ನು ಗ್ರಾಮೀಣ ಪರಿಸರದಲ್ಲಿ ಹೊಕ್ಕು ನೋಡುತ್ತಲೇ ರಾಜಕಾರಣಿಗಳ, ಮಠಮಾನ್ಯಗಳ ಡಾಂಭಿಕತನವನ್ನು ಬಯಲಿಗೆಳೆವ ವಿಚಾರಗಳನ್ನು ತಾತ್ವಿಕ ಚೌಕಟ್ಟಿನಲ್ಲೇ ಮುಟ್ಟಿಸುತ್ತ ಐತಿಹಾಸಿಕ ಘಟನೆಗಳಿಗೂ ಕೊಂಡಿಯಾದ ಬಸವರಾಜ ಕಟ್ಟೀಮನಿ ಪ್ರಗತಿಶೀಲತೆಯನ್ನು ವಿಸ್ತರಿಸಿ, ಸಾಧಿಸಿದ್ದು;
೩. ತನ್ನದೇ ಕಾರಣಗಳಿಂದಾಗಿ ಪ್ರತಿಭಟನೆಗೆ ಅರ್ಥವಿರುವುದನ್ನು ಒಪ್ಪಿಕೊಂಡ ನಿರಂಜನರು ಉಳ್ಳವರ ವಿರುದ್ಧ ಶೋಷಿತರ ಪ್ರತಿಭಟನೆಯನ್ನು ಕತೆ, ಕಾದಂಬರಿಗಳಲ್ಲಿ ದಾಖಲಿಸಿದ್ದರ ಜೊತೆಗೆ ವೈಚಾರಿಕ ಲೇಖನಗಳನ್ನೂ ಬರೆದು ಪ್ರಗತಿಶೀಲರಲ್ಲಿ ಪ್ರಥಮರಾದದ್ದು;
೪. ವರ್ಗ ಪ್ರತಿಭಟನೆಯನ್ನು ತನ್ನ ಕಾದಂಬರಿ ಒಡಲೊಳಗೆ ತುಂಬುತ್ತಲೇ, ಶೋಷಣೆ ಗೊಳಗಾದ ಕೆಳವರ್ಗದ ಸಮಾಜವನ್ನು ಚದುರಂಗರು ಹಸಿದ ಕಣ್ಣುಗಳಲ್ಲಿ ತೆರೆದಿಟ್ಟಿದ್ದು;

ಹೀಗೆ ಬೆಳೆಯಬಹುದಾದ ಅರ್ಥಪೂರ್ಣಪಟ್ಟಿಗೆ ಪ್ರಗತಿಶೀಲದ ಯಶಸ್ಸು ಗುರ್ತಿಸ ಬಹುದಾದರೂ, ಅದರ ಬೆನ್ನಲ್ಲೇ ಅಪಸ್ವರ, ವ್ಯಂಗ್ಯ, ಕಟಕಿ, ಕೀಟಲೆ ಇತ್ಯಾದಿಗಳೂ ಇದ್ದ ವೆಂಬುದನ್ನು ನಾವೆಲ್ಲಾ ತಿಳಿಯಬೇಕಾಗಿದೆ.

ಪ್ರಗತಿಶೀಲರ ಸಾಧನೆ ಕುರಿತು ಮೆಚ್ಚುಗೆಗಳೇನೇ ಇರಲಿ, ಈ ಕುರಿತು ವಿಮರ್ಶಾತ್ಮಕ ಟೀಕೆಗಳೂ ಉಂಟು. ಇದಕ್ಕೆ ಅನಕೃ, ತರಾಸು, ಕಟ್ಟೀಮನಿ ಮುಂತಾದವರು ಉಣಬಡಿಸಿದ ಸಾಹಿತ್ಯ ಕಾರಣ ಇದ್ದಿರಬಹುದು. "ಕಲಾರೂಪದ ಕಡೆ ಕಾಳಜಿ ಕಡಿಮೆಯಾಗಿ ಕಾಮ ಜೀವನದ ರೋಚಕ ವಿವರಗಳನ್ನೊಳಗೊಂಡ ಕೃತಿಗಳು ಬಂದವು. ಆದರೆ ಆ ಕೃತಿಗಳ ಹಿಂದೆ ವೈಚಾರಿಕತೆ ಮತ್ತು ಕಲಾ ಪ್ರಜ್ಞೆಗಳು ಕ್ರಿಯಾಶೀಲವಾಗಿರಲಿಲ್ಲ. ರಂಜಕ ಸಂಭಾಷಣೆ ಹಾಗೂ ಕುತೂಹಲಭರಿತ ನಿರೂಪಣಾ ವಿಧಾನದಿಂದ ಜನಪ್ರಿಯತೆಯೂ ದೊರೆಯಿತು...... ಒಳಗೆ ಇಳಿಯದ ಮೇಲು ಪದರದ ವಿವರಗಳಿಗೆ ಸೀಮಿತವಾದ ಚಿತ್ರಣ ವಾಸ್ತವವೆಂದು ಕರೆಸಿಕೊಂಡಿತು. ಸಾಮಾಜಿಕ ಪರಿವರ್ತನೆಯ ಉದ್ದೇಶವಿಟ್ಟುಕೊಂಡು ಬರೆದ ಪ್ರಗತಿಶೀಲರ ಕಾದಂಬರಿಗಳು ಸರಳೀಕರಣದ ಸುಲಭ ಮಾರ್ಗ ಹಿಡಿದವು..... ಸಾಮಾಜಿಕ ಸನ್ನಿವೇಶ ಚಿತ್ರಿಸುವಾಗ ಪಾತ್ರಗಳು ತಾವು ಮೂಡಿಬಂದ ವರ್ಗಗಳ ಪ್ರತಿನಿಧಿಗಳಾಗುತ್ತಿರಲಿಲ್ಲ." ಎಂಬ ಅಭಿಪ್ರಾಯಗಳೂ ಇನ್ನೊಂದು ಮುಖದ ಚರ್ಚೆಯಲ್ಲಿ ಇರುವ ಕಾರಣಕ್ಕೆ ಪ್ರಗತಿಶೀಲ

ಎಂಬುದು ಅವರವರು ನಂಬಿಕೊಂಡ ಮನೋಧರ್ಮವಾಗಿ ಮೂಡಿದ್ದರಿಂದ ಇಲ್ಲಿ ಗಟ್ಟಿ ಜೊಳ್ಳುಗಳೆರಡೂ ಮೂಡಿಬಂದಿವೆ.

ಪ್ರಕೃತಿಯ ಸ್ಥಿತಿಯಿಂದ ನಾಗರೀಕತೆಯ ಕಡೆಗೆ ಸಮಾಜ ನಡೆಯಬೇಕು ಎಂಬುದೇ ಮನುಷ್ಯ ಹುಡುಕಾಟದ ಕಾಳಜಿಯೂ ಆಗುತ್ತವೆಂಬ ಸತ್ಯ ಅರಿಯಬೇಕಾಗುತ್ತದೆ. ಇದೇ ನಿರಂತರ ಹುಡುಕಾಟದ ಹೊಸ ಬದುಕಿನ ಆವಿಷ್ಕಾರ.

**ಮತ್ತೊಂದು ಮಾತು:**

ಪ್ರಗತಿಶೀಲರು ತಮ್ಮ ಮುಂದಿನ ತಲೆಮಾರಿನ ಕಥೆಗಾರರಿಗೆ ಹಲವು ದಾರಿಗಳನ್ನು ತೆರೆದರು, ತಮ್ಮ ಕಥಾವಸ್ತುವಿನ ವ್ಯಾಪಕತೆಯನ್ನು ಆಶ್ಚರ್ಯಕರವಾಗಿ ವಿಸ್ತರಿಸಿದರು. ಹಾಗೂ ವಾಸ್ತವದ ಆದ್ಯತೆಯನ್ನು ಪ್ರತಿಪಾದಿಸುವ ಮೂಲಕ ಅವರು ಸಣ್ಣಕತೆಗೆ ಸಾಮಾಜಿಕ ಪ್ರಸ್ತುತತೆಯನ್ನು ತಂದುಕೊಟ್ಟರು. ಇದಲ್ಲದೆ, ಹಲವಾರು ಕಥನತಂತ್ರಗಳನ್ನು ಬಳಕೆಗೆ ತಂದರು. ಪ್ರಗತಿಶೀಲರಲ್ಲಿದ್ದ ಸಣ್ಣ ಪುಟ್ಟ ದೌರ್ಬಲ್ಯಗಳನ್ನು ಮೀರುವ ಮೂಲಕವೇ ನವ್ಯರು ಮತ್ತು ನಂತರದ ಬಂಡಾಯ ದಲಿತ ಲೇಖಕರು ಒಳ್ಳೆಯ ಕಥೆಯನ್ನು ಬರೆಯಲು ಶಕ್ತರಾದರು. ವಾಸ್ತವವಾಗಿ ಪ್ರಗತಿಶೀಲ ಕಥೆಗಳ ಪ್ರಧಾನವಸ್ತು 'ಶೋಷಣೆ'ಯಾದರೂ ಅವರು ತುಳಿದ ಪರಂಪರೆ ದಲಿತ ಬಂಡಾಯದಲ್ಲಿ ನಿಚ್ಚಳವಾಗಿ ಕಾಣುತ್ತಿದೆ ಎಂದು ಜಿ.ಎಸ್. ಆಮೂರ 'ಪ್ರಗತಿಶೀಲ ಕತೆಗಾರರು' ಲೇಖನದಲ್ಲಿ ಸ್ಪಷ್ಟವಾಗಿ ಗುರುತಿಸಿದ್ದಾರೆ. ಹಾಗೇ ಪ್ರಗತಿಶೀಲ ತಲೆಮಾರಿನ ಕತೆಗಳಲ್ಲಿ ವರ್ಗಘರ್ಷಣೆಯಿದ್ದರೂ ಅದಕ್ಕೆ ಗಟ್ಟಿ ತಿಳುವಳಿಕೆಯ ಬಲವಿಲ್ಲ, ಇವರು ಮಾರ್ಕ್ಸ್‌ನ ಪ್ರಭಾವಕ್ಕೆ ಒಳಗಾದರೂ ಅವನ ಸಿದ್ಧಾಂತವನ್ನು ಸಮರ್ಪಕವಾಗಿ ಗ್ರಹಿಸಲಿಲ್ಲ ಎಂದು ಪಿ. ಲಂಕೇಶರೂ ಅಭಿಪ್ರಾಯಿಸಿದ್ದಾರೆ.

ಪ್ರಗತಿಶೀಲದ ಪರಂಪರೆಯ ಮುಂದುವರಿಕೆಯೇ ಇವೊತ್ತಿನ ಸಾಹಿತ್ಯದ ಪ್ರಮುಖ ಘಟ್ಟವಾಗಿರುವ ದಲಿತ-ಬಂಡಾಯ ಪ್ರಜ್ಞೆಯ ಚಳುವಳಿಯಾಗಿರುವುದು ನಿಸರ್ಗ ಹಾಗೂ ಸಮಾಜವನ್ನು ಒಟ್ಟುಗೂಡಿಸುತ್ತಲೇ ಶೋಷಿತರಪರ ದನಿ ಆಗುವ ನಿಟ್ಟಿನಲ್ಲಿರುವುದೇ ಮನುಷ್ಯ ಪರವಾದ ಕಾಳಜಿ ಹಾಗೂ ಪ್ರೀತಿ ಎಂಬುದನ್ನು ನಾವಿಲ್ಲಿ ಪ್ರಮುಖವಾಗಿ ಪರಿಗಣಿಸಬೇಕಾಗಿದೆ.



# ಮಹಿಳಾ ಅಭಿವ್ಯಕ್ತಿ : ಭಾಷಾ ಅಸ್ಮಿತತೆ

● ವಿನಯಾ ವಕ್ಕುಂದ

ಎಪ್ಪತ್ತು ಎಂಬತ್ತರ ದಶಕದಲ್ಲಿ ಕನ್ನಡವನ್ನು ಪ್ರವೇಶಿಸಿದ ಸ್ತ್ರೀವಾದಿ ಚಿಂತನೆ ಇಂದು ವಿಮರ್ಶೆಯ ಪ್ರಕಾರವಾಗಿ, ಸಾಂಸ್ಕೃತಿಕ ವಿಶ್ಲೇಷಣೆಯ ಅಗತ್ಯ ಕ್ರಮವಾಗಿ ಬೆಳೆದುಬಂದಿದೆ. ಸ್ತ್ರೀವಾದ ಎಂಬುದೊಂದು ಆಲೋಚನೆಯ ಕ್ರಮ, ಚಿಂತನೆಯ ವಿಧಾನ. ಮಹಿಳೆಗೆ ಆರೋಪಿಸಲಾಗಿದ್ದ ಪ್ರಾಣಿತನ ಮತ್ತು ವಸ್ತುಮೌಲ್ಯವನ್ನು ನಿರಾಕರಿಸಿ, ಮಹಿಳೆಯೂ ಮನುಷ್ಯಳೇ ಎಂಬುದನ್ನು ತಾತ್ತ್ವಿಕವಾಗಿ ನಿರೂಪಿಸುವುದು ಮತ್ತು ವಾಸ್ತವಿಕತೆಗೆ ಅನ್ವಯಿಸುವುದು. ಸ್ತ್ರೀ-ಪುರುಷರಲ್ಲಿಯ ಅಧಿಕಾರದ ಅಸಮರ್ಪಕ ಹಂಚಿಕೆಯನ್ನು ಮತ್ತು ಸಿದ್ಧ ಆಲೋಚನಾ ಕ್ರಮವನ್ನು ಸ್ತ್ರೀವಾದ ನಿರಾಕರಿಸುತ್ತದೆ. ಅಧಿಕಾರ ಕೇಂದ್ರವನ್ನು ಅದಲು ಬದಲು ಮಾಡುವುದು ಸ್ತ್ರೀವಾದದ ಉದ್ದೇಶ ವಲ್ಲ. ಏಕಲಿಂಗೀ ವ್ಯವಸ್ಥೆ ಹೋಗಿ ದ್ವಿಲಿಂಗೀ ವ್ಯವಸ್ಥೆ ನಿರ್ಮಿತಿಯಾಗ ಬೇಕು. ವ್ಯಕ್ತಿ ಗೌರವದ ಸಮಾಜ ನಿರ್ಮಾಣವಾಗಬೇಕೆಂಬುದು ಸ್ತ್ರೀವಾದದ ಒಲವಾಗಿದೆ. ಸ್ತ್ರೀ-ಪುರುಷರ ನಡುವಿನ ಭಿನ್ನತೆಗೆ ಕಾರಣ ಸಾಂಸ್ಕೃತಿಕ ತಿಳುವಳಿಕೆ ಎಂಬುದನ್ನು ಸ್ತ್ರೀವಾದ ಪ್ರತಿಪಾದಿಸುತ್ತದೆ.

ಮಹಿಳೆಯನ್ನು ಓದಿನ ಕೇಂದ್ರದಲ್ಲಿಟ್ಟುಕೊಂಡ ಸ್ತ್ರೀವಾದಿ ಯೋಚನೆ ಸ್ಥಾಪಿತ ಜ್ಞಾನ ವಲಯಗಳನ್ನು ಪುನರ್ ರೂಪಿಸಲು ಬಯಸುತ್ತದೆ. ಇಂತಹ ಮರುರೂಪಣ ಕ್ರಿಯೆಯಲ್ಲಿ ವಿಜ್ಞಾನ ಹಾಗೂ ಮಾನವಿಕ ಅಧ್ಯಯನ ಕ್ರಮಗಳ ಸೂಕ್ಷ್ಮ ಭೇದಕ ಸ್ತ್ರೀವಾದಕ್ಕೆ ಅಗತ್ಯ. ಆದ್ದರಿಂದ ಸ್ತ್ರೀವಾದಿ ಸಾಂಸ್ಕೃತಿಕ ಅಧ್ಯಯನದ ಒಂದು ಕ್ರಮವಾಗಿ ಭಾಷಾ ಅಧ್ಯಯನವನ್ನು ರೂಪಿಸಲಾಗುತ್ತದೆ.



ಭಾಷೆ ಬರಿಯ ಅಭಿವ್ಯಕ್ತಿಯ ವಿಧಾನವಲ್ಲ, ಗ್ರಹಿಕೆಯ ಕ್ರಮ. ಜನಾಂಗವೊಂದರ ಉದ್ದೇಶಪೂರ್ವಕ ರಚನೆ. ಇದು ಸಂವಹನ ಮಾಧ್ಯಮ ಮಾತ್ರವಾಗಿರದೆ, ಸಾಂಸ್ಕೃತಿಕ ರಾಜಕೀಯ ಆಲೋಚನಾ ವಿಧಾನವೂ ಆಗಿದೆ. ಸಮುದಾಯದ ಸೃಷ್ಟಿಯಾದ ಇದು ಸಾಮಾಜಿಕ

ಸಾಂಸ್ಕೃತಿಕ ಉತ್ಪನ್ನ. ಭಾಷಾ ನೀತಿಯು ಲಿಂಗನೀತಿಯನ್ನನುಸರಿಸಿಯೇ ರೂಪುಗೊಂಡಿರುವುದರಿಂದ ಪಿತೃ ಸಂಸ್ಕೃತಿಯ ಆಶಯಗಳನ್ನು ಸ್ಥಾಪಿಸುವ ಪ್ರಧಾನ ವಾಹಕವಾಗಿ ಭಾಷೆಯು ವ್ಯವಹರಿಸುತ್ತ ಬಂದಿದೆ.

ನಮ್ಮ ಸಂಸ್ಕೃತಿಯಲ್ಲಿ ಹೆಣ್ಣು ಪ್ರತ್ಯೇಕ ಮತ್ತು ಗುಲಾಮೀ ವರ್ಗ. ಇಂದಿಗೂ ಮಾನವ, ಮನುಷ್ಯ, ವ್ಯಕ್ತಿ, ಪ್ರಜೆ, ನಾಗರಿಕ ಎಂಬ ಪದಗಳಿಗೆ ಸ್ತ್ರೀವಾಚಿ ಅರ್ಥಗಳಿಲ್ಲ. ಹೆಣ್ಣು ಎಂಬ ಪದವೇ ಅಸಹಾಯಕ, ದುರ್ಬಲ, ಅಧೀನ, ಸೋಲು ಎಂಬ ಧ್ವನಿಯನ್ನು ಹೊಂದಿದೆ. ಗೆಲುವಿಗೆ 'ಗಂಡು' ಎಂದೂ ಸೋಲಿಗೆ 'ಹೆಣ್ಣು' ಎಂದೂ ಕರೆಯುತ್ತ ಬರಲಾಗಿದೆ. ಮಹಿಳೆಗೆ ಸಂಬಂಧಿಸಿದ ವಸ್ತು-ಸಂಗತಿಗಳನ್ನು ಮಹಿಳೆಗೆ ಸಂಬಂಧಿಸಿದಂತೆ ಶ್ರೇಷ್ಠಮೌಲ್ಯವೆಂದೂ ಪುರಷನಿಗೆ ಸಂಬಂಧಿಸಿದಂತೆ ಕನಿಷ್ಠವೆಂದೂ ತಿಳಿಯಲಾಗುತ್ತದೆ. ಪುರುಷ ಸಂಬಂಧೀ ಪದಗಳು ಶ್ರೇಷ್ಠತೆಯನ್ನೂ, ಮಹಿಳಾ ಸಂಬಂಧೀ ಪದಗಳು ಕನಿಷ್ಠತೆಯನ್ನು ಹೇಳುವುದು ಆ ಭಾಷೆಯನ್ನಾಡುವ ಸಮುದಾಯದ ಮನೋಧರ್ಮವನ್ನು ತೋರುತ್ತದೆ. ಬಯ್ಗುಳುಗಳು ಮುಕ್ಕಾಲು ಪಾಲು ಮಹಿಳೆಯನ್ನು ಸುತ್ತುವರಿದುಕೊಂಡೇ ಇವೆ. ಸಾಮಾಜಿಕ ಮೌಲ್ಯ ಪ್ರತಿಪಾದನೆಯಲ್ಲಿ ಮಹಿಳಾ ಜಗತ್ತನ್ನು ವಸ್ತುವಿನಂತೆ ಬಳಸಿಕೊಳ್ಳಲಾಗಿದೆ. ಇವು ನಮ್ಮ ಗಾದೆ, ಒಗಟು, ಪಡೆನುಡಿಗಳಲ್ಲಿ ಯಥೇಚ್ಛವಾಗಿವೆ.

ಅಧಿಕಾರ, ಅಕ್ಷರಜ್ಞಾನಗಳಿಂದ ವಂಚಿತವಾಗಿದ್ದ ಸ್ತ್ರೀ ಸಂವೇದನೆ ವಿಸ್ತೃತ ಭಾಷಾವಲಯದಲ್ಲಿ ವರ್ತಿಸಲಿಲ್ಲ. ಸಾಕುಪ್ರಾಣಿಗಳು ಒಡೆಯನ ಭಾಷಿಕ ಸಂಕೇತಗಳನ್ನು ಅರ್ಥೈಸಿಕೊಂಡು ವ್ಯವಹರಿಸುವಂತೆ, ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣಿನ ಅನುಭವ ಪ್ರಪಂಚ ಸೀಮಿತವಾಯ್ತು. ಅಪ್ರಾಮಾಣಿಕವಾಯ್ತು. ಇದರಿಂದ ಭಾಷೆಯ ಬಳಕೆ ಮಿತಗೊಂಡಿತು ಅಥವಾ ವಿಭಜಿತಗೊಂಡಿತು. ಮಹಿಳೆಯ ಬದುಕು ಅಧೀನ ಸ್ಥಿತಿಯಲ್ಲಿದ್ದುದರಿಂದ ಅವಳ ಭಾಷೆಗೂ ಅಧೀನಲಯ ಬಂದಿತು. ಹೆಣ್ಣಿಗೆ ಮೌನವನ್ನು ಮೌಲ್ಯವಾಗಿಸಲಾಯ್ತು ಮಾತನ್ನಲ್ಲ. ಅಭಿವ್ಯಕ್ತಿಯನ್ನಲ್ಲ. ಭಾಷೆಯ ಸಾಮೀಪ್ಯವನ್ನಲ್ಲ. ಮಹಿಳೆ ಹಾಗೂ ಭಾಷೆಯ ಮಧ್ಯೆ ಅಸಹಜ ಕಂದಕ ನಿರ್ಮಾಣವಾಯ್ತು. ಇದರಿಂದ ಪ್ರಧಾನ ಭಾಷಾ ಪರಂಪರೆಯಲ್ಲಿ ಮಹಿಳಾ ಭಾಷೆ ಅಂಚಿಗೆ ತಳ್ಳಲ್ಪಟ್ಟಿತು, ಆನುಷಂಗಿಕವಾಯ್ತು. ಇಂಥ ಚಾರಿತ್ರಿಕ ಕಾರಣಗಳಿಗಾಗಿ ಮಹಿಳಾ ಭಾಷೆಗೆ ಅಧೀನ ಧ್ವನಿ ಮತ್ತು ಅನುನಯದ ಲಯಗಳು ಪ್ರಾಪ್ತವಾದವು. ಪುರುಷನ ಹಾಗೂ ಮಹಿಳೆಯ ಧ್ವನ್ಯಂಗಗಳಲ್ಲಿ ಯಾವ ವ್ಯತ್ಯಾಸವಿಲ್ಲದಿದ್ದರೂ ಭಾಷೆಯ ಧ್ವನಿಯಲ್ಲಿ ಲಯದಲ್ಲಿ ಗಣನೀಯ ವ್ಯತ್ಯಾಸವಿದೆ. ಈ ಅಂತರ ಸಾಂಸ್ಕೃತಿಕ ನಿರ್ಮಿತಿಯದು, ರೂಢಿಗತವಾದದ್ದು.

ಮಗು ಮಗುವಾಗಿ ಹುಟ್ಟುತ್ತದೆ. ನಾವು ಅದನ್ನು ಹೆಂಗಸಾಗಿ ಗಂಡಸಾಗಿ ಬೆಳೆಸುತ್ತೇವೆ. ಕುಟುಂಬದಲ್ಲಿ ಪುರುಷ ವ್ಯವಹರಿಸುವ ಭಾಷೆ ಹಾಗೂ ಮಹಿಳೆ ವ್ಯವಹರಿಸುವ ಭಾಷೆ ಒಂದೇ ಆಗಿದ್ದರೂ ಅವುಗಳ ಬಳಕೆಯ ಕ್ರಮದಲ್ಲಿ ಸ್ಪಷ್ಟ ವ್ಯತ್ಯಾಸವಿದೆ. ಪುರುಷನದು ಪೂರ್ಣವಿರಾಮದ ಯಜಮಾನೀ ಭಾಷೆ ಮತ್ತು ಗತ್ತಿನ ಲಯ. ಮಹಿಳೆಯದು ಅರ್ಧವಿರಾಮದ ಪ್ರಶ್ನಾರ್ಥಕ ಭಾಷೆ. ಧೀರ್ಘ ಲಯ ಮತ್ತು ತಗ್ಗಿದ ದನಿ. ಜಮೀನ್ದಾರೀ ವ್ಯವಸ್ಥೆಯ ರೈತ,

ಬಂಡವಾಳಶಾಹಿಯ ಕಾರ್ಮಿಕ ಹಾಗೂ ಪುರುಷಶಾಹಿಯ ಹೆಣ್ಣು ಈ ಮೂವರ ಭಾಷೆಯ ಧಾಟಿ ಲಯಗಳಿಗೆ ಆಂತರಿಕವಾದ ಸಂಬಂಧವಿದೆ.

ಭಾಷೆಯಲ್ಲಿ ಮೂರ್ತಗೊಳ್ಳುವ ಸಾಹಿತ್ಯವನ್ನು ಸಂವೇದನೆಗೆ ಒಗ್ಗಿಸಿಕೊಳ್ಳುವಾಗ ಇದೇ ಅಧೀನ ಭಾಷೆ ಮತ್ತು ಅನುನಯದ ಲಯಗಳು ಅಭಿವ್ಯಕ್ತಗೊಂಡವು. "ಹೆಣ್ಣು ಆಗೂದಕಿಂತ, ಮಣ್ಣು ಆಗೂದು ಲೇಸು" ಎಂಬ ಆತ್ಮನಿಂದನೆ, ಆತ್ಮವಂಚನೆಗಳ ತಪ್ತಲಯ ಪ್ರಧಾನವಾಗಿ ಕೇಳಿಬಂದಿದೆ. ವ್ಯವಸ್ಥೆಯ ಸುಳಿಯಲ್ಲಿ ಸಿಕ್ಕಿ ಬದುಕು ಉದ್ದೇಶಪೂರ್ವಕ ಹೊಂದಾಣಿಕೆ ಮತ್ತು ಅಪ್ರಾಮಾಣಿಕ ವಿಧೇಯತೆಯಿಂದ ವರ್ತಿಸಬೇಕಾಯ್ತು.

ಪುರುಷ ಹಿತಾಸಕ್ತ ಭಾಷೆಯೊಂದಿಗೆ ಬೆರೆಯಲಾಗದ ತಳಮಳ ಸ್ವಭಾಷಾ ಸಾಧ್ಯತೆಯೊಂದನ್ನು ರೂಪಿಸಿಕೊಳ್ಳಲಾಗದ ಅಸಹಾಯಕತೆ, ಸ್ಥಾಪಿತ ಭಾಷೆಯಲ್ಲಿ ಸಂವಹನಿಸಲಾಗದ ವೇದನೆಗಳನ್ನು ಮಹಿಳಾ ಸಂವೇದನೆ ಎದುರಿಸುತ್ತ ಬಂದಿದೆ. ಒಂದು ಮೌಲ್ಯದ ಸಂಕೇತವಾಗಿ ರೂಪುಗೊಂಡ ಭಾಷೆಯಲ್ಲಿ ಅದಕ್ಕೆ ಭಿನ್ನವಾದ ಮೌಲ್ಯವನ್ನು ಹೇಳುವುದು ತೊಡಕಿನ ಸಂಗತಿ. ವಚನಕಾರರಲ್ಲಿ ಇಂಥ ಹಲವಾರು ನಿದರ್ಶನಗಳು ಸಿಗುತ್ತವೆ.

ಸೂಳೆಯ ಮಗ ಮಾಳವ ಮಾಡಿದಡೆ
ತಾಯ ಹೆಸರಾಯಿತ್ತಲ್ಲದೆ ತಂದೆಯ ಹೆಸರಿಲ್ಲ (ಬಸವಣ್ಣ)

ಕೂಸುಳ್ಳ ಸೂಳೆ ಧನದಾಸೆಗೆ ಒತ್ತೆಯ ಕೊಂಡಡೆ
ಕೂಸಿಂಗೂ ಅಲ್ಲ, ಬೊಜಗಂಗೂ ಅಲ್ಲ
ಕೂಸನೊಮ್ಮೆ ಸಂತೈಸುವಳು ಬೊಜಗನನ್ನೊಮ್ಮೆ ನೆರೆವಳು
ಧನದಾಸೆ ಹಿಂಗದು ಇದು ಕಾರಣ
ಇಮ್ಮನದವನ ಭಕ್ತಿ ಇಂತಾಯಿತ್ತು ಕಾಣಾ ಕೂಡಲಸಂಗಮದೇವಾ (ಬಸವಣ್ಣ)

ಬಸವಣ್ಣ ಸಾಮಾಜಿಕ ಕ್ರಾಂತಿಯ ಹರಿಕಾರ. ಸಮಾನ ಸುಂದರ ಸಮಾಜದ ಕನಸು ಕಂಡವ. ಇಮ್ಮನದ ಭಕ್ತಿ ಸಲ್ಲ ಎಂದು ಹೇಳಲು ಬಸವಣ್ಣ ಕೊಡುವ ಈ ಹೋಲಿಕೆ ಭಾಷಾ ಸಂದಿಗ್ಧತೆಯನ್ನು ಹೇಳುತ್ತದೆ. ಇಂಥದೇ ತೊಡಕು ಅಕ್ಕನ ವಚನಗಳಲ್ಲೂ ಇವೆ. ಅನ್ನ, ವಸ್ತ್ರ, ವಸತಿ ನೀಡಿ ಹೆಣ್ಣನ್ನು ಆಳಬಹುದೆಂಬ ಪರಂಪರೆಯನ್ನು ಪ್ರಶ್ನಿಸಿ ಪುರುಷಶಾಹಿ – ರಾಜಶಾಹಿಗಳೆರಡನ್ನೂ ಧಿಕ್ಕರಿಸುವ ಅಕ್ಕ –

ಆಳುತನದ ಮಾತನೇರಿಸಿ ನುಡಿದಡೆ
ಆಗಳೆ ಕಟ್ಟಿದೆನು ಗಂಡುಗಚ್ಚೆಯ

ಎನ್ನುವುದು ಹೆಣ್ಣುತನದ ಕೀಳರಿಮೆಯನ್ನು ನೀಗಿಕೊಳ್ಳಲು ಪದ ಸಿಗದ ನಿರ್ವಾತದಲ್ಲಿ ನಿರ್ಮಾಣವಾದದ್ದು. ಸಮಾಜಬಾಹಿರ, ನೀತಿಬಾಹಿರ ವ್ಯಕ್ತಿಗಳನ್ನು ದೂಷಿಸುವಾಗ ವಚನಕಾರರು ಬಳಸುವ ಬಯ್ಗುಳಗಳು ಹೆಣ್ಣನ್ನು ಕುರಿತ ಸಾಂಪ್ರದಾಯಿಕ ನಿಲುವನ್ನೇ ವ್ಯಕ್ತಪಡಿಸುತ್ತವೆ.

ಇಂಥ ಸಿದ್ಧ ಭಾಷೆಯೊಂದಿಗೆ ಮುಖಾಮುಖಿಯಾಗುವುದು ಮಹಿಳಾ ಅಭಿವ್ಯಕ್ತಿಯ ಎದುರಿಗಿರುವ ದೊಡ್ಡ ತೊಡಕಾಗಿತ್ತು. ಆಧುನಿಕ ಮಹಿಳಾ ಬರವಣಿಗೆ ಈ ಜಟಿಲತೆಯಿಂದ ನಿಧಾನವಾಗಿ ಬಿಡಿಸಿಕೊಳ್ಳುವ ಕೌಶಲ್ಯವನ್ನು ಪ್ರಕಟಿಸಿದೆ. ಆ ಸಂಕಟವನ್ನು ಅಭಿವ್ಯಕ್ತಿಸಿದೆ.

ಇರದ ಅರ್ಥಕ್ಕಾಗಿ ಇರುವ ಶಬ್ದದ ತವಕ
ಕಂಗಳಲಿ ಕನಸು ಉರಿಬೂದಿ ಈ ತನಕ. *(ಹೇಮಾಪಟ್ಟಣಶೆಟ್ಟಿ)*

ಮಹಿಳಾ ಸಂವೇದನೆಗೆ ಭಾಷೆಯನ್ನು ಸಜ್ಜುಗೊಳಿಸಬೇಕಾದ ಸ್ಥಿತಿಯನ್ನು ಹೇಳುತ್ತದೆ. ಇದಕ್ಕಾಗಿ ಮೂಲಭಾಷೆಯನ್ನು ಪರಿಷ್ಕರಿಸಬೇಕು. ಈ ಪರಿಷ್ಕಾರ ಸುಲಭದ್ದಲ್ಲ. –

ನೂರು ಪದಗಳು ಹೊಳೆದು
ಬರಿಯ ಮಾತುಗಳಾಗಿ
ಬಂಜೆ ಮೋಡಗಳಂತೆ ತೇಲಿಹೋಗುತ್ತವೆ. *(ಹೇಮಾಪಟ್ಟಣಶೆಟ್ಟಿ)*

ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಹೆಣ್ಣನ್ನು ಪುನರ್ ರೂಪಿಸಿಕೊಳ್ಳುವಾಗ ಅವಳ ಸಂವೇದನೆಗಳನ್ನು ವ್ಯಕ್ತಿಸುವಾಗಿನ ತೊಳಲಾಟಗಳಿವು. ಈ ತೊಳಲಾಟವನ್ನೂ ಸ್ಥಾಪಿತ ಭಾಷೆಯಲ್ಲೇ ಹೇಳುವುದು ಸಂಕಟದ ಕೆಲಸ. ಭಾನು ಮುಷ್ತಾಕರ ಕಥೆಯೊಂದರಲ್ಲಿ ಒಂದು ಸಂದರ್ಭ ಬರುತ್ತದೆ. ಕಥೆಯ ನಾಯಕಿ ತನ್ನ ಗಂಡನೊಂದಿಗೆ ಹೊರಟಾಗ ದಾರಿಯಲ್ಲಿ ಗೆಳತಿ ಸಿಗುತ್ತಾಳೆ. ಗೆಳತಿಗೆ ಗಂಡನನ್ನೇ ಪರಿಚಯಿಸಬೇಕು ಆದರೆ ಹೇಗೆ? "ಮುಜಾಹಿದ್ ನನ್ನ ಮನೆಯಾತ. ಛೇ, ಹಾಗನ್ನೋದು ಕಷ್ಟ. ಹೆಂಡತಿ ಮನೆಯಲ್ಲಿರುವವಳಾದ್ದರಿಂದ ಮನೆಯಾಕೆ ಎನ್ನಬಹುದು. ನನ್ನ ಆಫೀಸಿನಾತ ಎನ್ನಬಹುದೇ? ಛೇ, ಆಫೀಸಿನಲ್ಲಿ ಎಷ್ಟೆಲ್ಲ ಜನರಿರುತ್ತಾರೆ. ಯಜಮಾನರು ಎಂದರೆ...... "ನಾನು ಆಳಾಗಬಹುದು ಅಥವಾ ನಾಯಿಯೂ ಆಗಬಹುದು. ಗಂಡ ಎಂದರೆ ...... ಯಮಗಂಡ ಎಂದೇ? ಗಂಡಾಂತರ ಕಾದಿದೆ ಎಂದೇ? ಪತಿ ಎನ್ನಬಹುದಲ್ಲವೇ? ಪತಿಯೆಂದರೆ ದೇವರು ಎಂದಾಗುತ್ತದೆ. ಕಲ್ಲು ಎಂದಾಗುತ್ತದೆ ಮತ್ತೆ ನಾನು?" -- ಹಾಸ್ಯದ ಧಾಟಿಯಲ್ಲಿರೋ ಈ ಸಂದರ್ಭ ಭಾಷೆಯ ಮೂಲಪದಗಳು ಮಹಿಳಾ ಸಂವೇದನೆಯನ್ನು ನಿರ್ವಹಿಸಲು ಸೋಲುತ್ತವೆ ಎಂಬ ಅಂಶವನ್ನು ಹೇಳುತ್ತದೆ.

ಸ್ವಭಾಷಾ ಸಾಧ್ಯತೆಯೊಂದರ ಹುಡುಕಾಟ ನಡೆದಿದೆ. ಇದರಿಂದ ಮೂಲಭಾಷೆಯ ಅರ್ಥಲಯಗಳು ವಿಸ್ತರಣೆಗೊಳ್ಳುತ್ತವೆ.

ಗಂಡಿಗೆ ಹೆಣ್ಣಾಗಿ ಕಾಡಿತ್ತು ಮಾಯೆ
ಹೆಣ್ಣಿಗೆ ಗಂಡಾಗಿ ಕಾಡಿತ್ತು ಮಾಯೆ *(ಅಕ್ಕಮಹಾದೇವಿ)*

ಗಂಡು ಮೋಹಿಸಿ ಹೆಣ್ಣ ಹಿಡಿದಡೆ
ಅದು ಅವನ ಒಡವೆಯೆಂದರಿಯಬೇಕು.
ಹೆಣ್ಣು ಮೋಹಿಸಿ ಗಂಡ ಹಿಡಿದಡೆ
ಉತ್ತರ ಯಾವುದೆಂದರಿಯಬೇಕು? *(ಅಕ್ಕಮಹಾದೇವಿ)*

ಮೂಲ ರೂಪವನ್ನು ಒಪ್ಪಿಕೊಂಡು ಅದನ್ನು ವಿಸ್ತರಿಸುವ, ಪ್ರಶ್ನಿಸುವ ಕ್ರಮ; ಸ್ಥಾಪಿತ ಸ್ಥಿತಿಯನ್ನು ಒಪ್ಪಿಕೊಂಡು ಅದರಲ್ಲಿ ಒಂದಿಷ್ಟು ಅವಕಾಶವನ್ನು ಅಪೇಕ್ಷಿಸುವ ಈ ಕ್ರಮ ಮಹಿಳಾ ಬದುಕಿಗೂ ಸಾಕ್ಷಿಯಾಗಿದೆ. ಕುಟುಂಬದ ಸಮಾಜದ ಪ್ರಧಾನ ಧಾರೆಯನ್ನು ಅಚ್ಚರಿಯಿಂದ ಗಮನಿಸಿದ ಮಹಿಳಾ ಸಂವೇದನೆ ತನ್ನ ಭಾಷಾರೂಪದಲ್ಲಿ ಪ್ರತಿಭಟನೆಯನ್ನು ಘೋಷಣೆಯನ್ನು ರೂಪಸಿಕೊಂಡಿತು.

ಅಯ್ಯಾ ನಾನು ಹೆಂಗೂಸಲ್ಲ
ಅಯ್ಯಾ ನಾನು ಸೂಳೆಯಲ್ಲ (ಅಕ್ಕಮಹಾದೇವಿ)

ಎಂಬ ನಿಷೇಧಾತ್ಮಕ ಪ್ರಯೋಗವನ್ನು ಆಧುನಿಕ ಮಹಿಳಾ ಸಂವೇದನೆಯೂ ಸ್ವೀಕರಿಸಿದೆ.

ನಾವು ಪತಿವ್ರತೆಯರಲ್ಲ.
ನಿಮ್ಮ ಕಾಮಾಗ್ನಿ ಕುಂಡಕ್ಕೆ
ನಮ್ಮ ಶೀಲವನು ಬಲಿಗೊಟ್ಟು
ನಿಮ್ಮಿಂದಲೇ ಪತಿವ್ರತೆಯರ ಪಟ್ಟಕ್ಕೇರಿ
ಪ್ರಾತಃಕಾಲದ ಸ್ಮರಣೆಯಲಿ
ಉಳಿದು ನರಳುವವರು ನಾವು
ನಾವು ಪತಿವ್ರತೆಯರಲ್ಲ (ಎಚ್.ಎಸ್. ಮುಕ್ತಾಯಕ್ಕ)

ಈ ನಿರಾಕರಣೆ ತನ್ನನ್ನು ತಾನು ಪುನಃಸೃಷ್ಟಿಸಿಕೊಳ್ಳುವ ಹಂತದಲ್ಲಿ ನಡೆದಿದೆ. ಇದುವರೆಗೂ ಸಮ್ಮತಿ ಸೂಚಕ ಅಧೀನ ಭಾಷೆಯನ್ನೇ ಬಳಸುತ್ತಿದ್ದ ಮಹಿಳಾ ಸಂವೇದನೆ ನೇರ ವಾಚ್ಯ ಪ್ರತಿಭಟನೆಯನ್ನು ರೂಪಿಸಲು ಯತ್ನಿಸಿದ್ದು ಚಾರಿತ್ರಿಕ ಮಹತ್ವದ ಸಂಗತಿ –

ಅಯ್ಯಾ ನನಗೊಂದು ಆಸೆ
ಹಾಗೆ ಹೀಗೆ ಹೆಣ್ಣ ಬುಗುರಿಯಾಡಿಸುವ
ಇವುಗಳ ಕುಂಡಿಗೆ ಝಾಡಿಸಿ ಒದೆಯಬೇಕೆನ್ನಿಸುತ್ತೆ
ಒಮ್ಮೆಯಾದರೂ (ಚ. ಸರ್ವಮಂಗಳಾ)

ಎಂಬತ್ತರ ದಶಕಗಳಲ್ಲಿ ನಿರ್ಲಕ್ಷಿತ ಸಂವೇದನೆಯ ಪ್ರತಿಭಟನೆಯ ದನಿ 'ಇಕ್ರಲಾ ಒದೀರ್ಲಾ ಆ ನನ್ನಮಕ್ಳ ಮೂಳೆ ಎಬ್ರಲಾ' ಎಂಬ ಆಕ್ರೋಶವನ್ನು ವ್ಯಕ್ತಪಡಿಸಿದಂತೆ; ಮಹಿಳಾ ಸಂವೇದನೆಯಲ್ಲಿಯೂ ಈ ಆಕ್ರೋಶ ವ್ಯಕ್ತವಾಯಿತು. ಮಹಿಳಾ ಜಗತ್ತಿಗೆ ನಿಷಿದ್ಧವೆನಿಸಿದ್ದ ಭಾಷಾ ಮಗ್ಗಲು ಅನಾವರಣಗೊಂಡಿತು. ಹೊಸ ಭಾಷಾಗತ್ತನ್ನು ಸಾಧ್ಯವಾಗಿಸಿಕೊಳ್ಳಲಾಯ್ತು.

ಮಹಿಳೆಯ ಜಗತ್ತನ್ನು ವರ್ಗೀಕರಿಸಿದ ವ್ಯವಸ್ಥೆ ಇದನ್ನು ಶ್ರೇಷ್ಠ ಕನಿಷ್ಠ ಎಂಬ ನಿಲುವಿನಲ್ಲಿ ನಿರ್ವಚಿಸುತ್ತ ಬಂದಿದ್ದರಿಂದ ಮಹಿಳೆಯ ಅನುಭವ ಬೇರೆಯಾಗಿತ್ತು. ಈ ಭಿನ್ನತೆಯನ್ನು ಕನಿಕರಿಸುವ ಪ್ರಧಾನ ಸಂಸ್ಕೃತಿಯ ರಾಜಕೀಯವನ್ನು ಅರ್ಥೈಸಿಕೊಂಡು, ತನ್ನ ಜಗತ್ತನ್ನು ಭಾಷೆಯಲ್ಲಿ ಪುನರ್ ರೂಪಿಸುವ ಪ್ರಯತ್ನ ಆಹ್ಲಾದಕಾರಿಯಾಗಿತ್ತು. ತನ್ನ ಅನುಭವದ ಮಿತಿ ಹಾಗೂ ಸಾಧ್ಯತೆಗಳನ್ನು ಸ್ವಾಭಿಮಾನದಿಂದ ದಾಖಲಿಸುವ ಮೂಲಕ ಗಂಡಿನ ಅನುಭವವೇ ಶ್ರೇಷ್ಠ ಎಂಬ ಭ್ರಮೆಯನ್ನು ನಿರಸನಗೊಳಿಸಲಾಯಿತು. ಇದರಿಂದಾಗಿ ಒಮ್ಮುಖ ಚಲನೆಯಲ್ಲಿದ್ದ ಭಾಷೆಗೆ ಬದುಕಿನ ಇನ್ನೊಂದು ಮಗ್ಗಲು ತೆರೆಯಿತು.

ನನಗೆ ಕಾವ್ಯ ಗೊತ್ತಿಲ್ಲ, ತಿಳಿಸಾರು ಗೊತ್ತು
ಕಾವ್ಯದ ಬಗ್ಗೆ ದೊಡ್ಡಕೆ ತಿಳಿದವರೇ ಹೇಳಿ
ಗೊತ್ತೇ ನಿಮಗೆ ತಿಳಿಸಾರು? (ವೈದೇಹಿ)

ಸ್ತ್ರೀ ಸಂವೇದನೆಗೆ ಇತ್ಯಾತ್ಮಕ ಶಕ್ತಿಯನ್ನು ತುಂಬುವ ಯತ್ನ ಆಧುನಿಕ ಮಹಿಳಾ ಕಾವ್ಯದಲ್ಲಿದೆ. ಜನಪದ ಗರತಿಯ ತ್ರಿಪದಿಗಳಲ್ಲಿ ತನ್ನ ಅನುಭವವನ್ನು ದೈವತ್ವಕ್ಕೆ ಉದಾರೀಕರಿಸುವ ಸ್ಥಿತಿಯಂತೆ ಇದು.

ಅಳುವ ಕಂದನ ತುಟಿಯು
ಹವಳದ ಕುಡಿಹಾಂಗ । ಕುಡಿಹುಬ್ಬು
ಬೇವಿನ್ನೆಸಳಾಂಗ ಕಣ್ಣೋಟ ಶಿವನ ಕೈಯಲಗು ಹೊಳೆವ್ಹಾಂಗ

ಎಂಬತ್ತರ ದಶಕದಲ್ಲಿಯೇ ರಚಿತವಾದ ಎಚ್.ವಿ. ಸಾವಿತ್ರಮ್ಮನವರ 'ಸೀತೆ ರಾಮ ರಾವಣ' ಸ್ತ್ರೀಪರ ನಿಲುವಿನಿಂದ ರಾಮಾಯಣವನ್ನು ಪುನರ್ ರೂಪಿಸಿದ ಕೃತಿ. ಇದರಲ್ಲಿ ಕೌಸಲ್ಯೆ ಮೌನಿಯಲ್ಲ, ಮಾತಾಗುತ್ತಾಳೆ. ಸುಮಿತ್ರೆಯನ್ನು ಒಪ್ಪಿಕೊಂಡು ದಶರಥನ ಬಗ್ಗೆ ಅಪಾರ ಅಸಹನೀಯತೆಯನ್ನು ಬೆಳೆಸಿಕೊಂಡಿರುತ್ತಾಳೆ. – 'ಹಂಚಿಕೊಂಡು ತಿನ್ನಲು ಪ್ರೇಮ ಅವಲಕ್ಕಿಯಲ್ಲ ಸುಮಿತ್ರೆ" ಇಂತಹ ಸ್ತ್ರೀ ಬದುಕಿನ ಅನುಭವ ವಲಯ ಭಾಷೆಯ ಮಡಿ–ಮೈಲಿಗೆಗಳನ್ನು ಮೀರಿ ನೇರವಾಗುತ್ತದೆ.

ಮಹಿಳಾ ಭಾಷೆಯ ಸಾರ್ಥಕ ಸ್ಥಿತಿಯಿರುವುದು ತಣ್ಣನೆಯ ವ್ಯಂಗ್ಯದಲ್ಲಿ. ಸಾಂಕೇತಿಕತೆ ಮಹಿಳಾ ಅಭಿವ್ಯಕ್ತಿಯ ಪ್ರಧಾನ ಲಕ್ಷಣವಾಗಿದೆ.

ಜನಪದ ಗರತಿಯ ಹಾಡುಗಳು, ಒಗಟುಗಳು, ಕಥೆಗಳು ಇದಕ್ಕೊಂದು ಉದಾಹರಣೆ:

ಬಾಲಕರಿಲ್ಲದ ಬಾಳಿದ್ಯಾತರ ಜನ್ಮ
ಬಾಡಿಗಿ ಎತ್ತು ದುಡಿದ್ಹಾಂಗ । ಬಾಳೆಲೆಯ
ಹಾಸ್ಯುಂಡು ಬೀಸಿ ಒಗೆದ್ಹಾಂಗ ॥

ಬಾಳೆಯ ಎಲೆಯನ್ನು ಆಯ್ದುಕೊಳ್ಳುವ ಕೊಯ್ದುಕೊಳ್ಳುವ ಸ್ಥಿತಿ ಮದುವೆ ಎಂಬ ವ್ಯವಸ್ಥೆಗೆ ಹೆಣ್ಣನ್ನು ಸ್ವೀಕರಿಸುವ, ತವರ ಸಂಬಂಧವನ್ನು ಕತ್ತರಿಸಿಕೊಳ್ಳುವ, ದಾಂಪತ್ಯ ಬದುಕಿನಲ್ಲಿ ಇದ್ದೂ ಇಲ್ಲದಂತಾಗುವ ಸ್ಥಿತಿಯನ್ನು ಧ್ವನಿಸುತ್ತದೆ. ಸಾಂಪ್ರದಾಯಿಕ ದಾಂಪತ್ಯದ ಚೌಕಟ್ಟಿನಲ್ಲಿ ತನ್ನೆಲ್ಲ ಬೇಕು ಬೇಡಗಳನ್ನು ಹತ್ತಿಕ್ಕಿಕೊಂಡು ಬಾಳುವ ಬಹುಸಂಖ್ಯಾತ ಹೆಣ್ಣುಗಳ ಸ್ಥಿತಿಯನ್ನು ಪ್ರತಿಮಿಸುತ್ತದೆ. ಇಂಥ ಚರಿತ್ರೆಯನ್ನು ನುಡಿಯಲು ಇದಕ್ಕೂ ಸಾರ್ಥಕ ಅಭಿವ್ಯಕ್ತಿ ಇದ್ದಿರಲಾರದು. ಆಧುನಿಕ ಮಹಿಳಾ ಭಾಷೆಯೂ ತುಂಬ ಮುತುವರ್ಜಿಯಿಂದ ಇದನ್ನು ರೂಪಿಸಿಕೊಂಡಿದೆ–

ರಾತ್ರಿಯಿಡೀ ಭೂಮಿ
ಏಕಾಕಿ ನರಳಿದಳು ತಣ್ಣಗೆ
ಆಕಾಶ ದೇವನಿಗೆ
ನೂರಾರು ತಾರಕೆ (ವೈದೇಹಿ)

ಪುರುಷ ಪ್ರಧಾನ ಸಂಸ್ಕೃತಿಯ ಚೌಕಟ್ಟಿನಲ್ಲಿ ನಿರ್ಮಾಣಗೊಂಡ ಭಾರತೀಯ ಸಾಹಿತ್ಯ ಪರಂಪರೆ ಹಾಗೂ ಕಾವ್ಯ ಮೀಮಾಂಸೆಯ ಸ್ವರೂಪದಲ್ಲಿ ಅಸಮಾನತೆಗಳಿವೆ ಎಂಬ ಸ್ಪಷ್ಟ ಅರಿವಿನೊಂದಿಗೆ ಅವುಗಳನ್ನು ನಿರಾಕರಿಸಿ, ಹೊಸ ಪರಿಕಲ್ಪನೆ ಮತ್ತು ಅಭಿವ್ಯಕ್ತಿ ಕ್ರಮಗಳನ್ನು ಹುಡುಕಿದೆ.

ಚಂದ್ರಮ ಚಂದ್ರಕಾಂತ
ಮಾಮರ ಮಲ್ಲಿಗೆ
ಕನಸಿನ ತೇಲುಗಣ್ಣಲಿ
ಮತಿಸುವ ಹಾಡೇ
ತೊಲಗು ತೊಲಗೆನ್ನುವ
ನನ್ನ
ಈ ಕವನ ಹೊಸದಲ್ಲ, ಕೊನೆಯಲ್ಲ (ವಿಜಯಾ ದಬ್ಬೆ)

ಸಿದ್ಧ ಪ್ರತಿಮೆ ಮತ್ತು ಮಾದರಿಗಳ ವಿರೋಧ ನಡೆಯಿತು. ಜನಪದ ಅಜ್ಜಿ ಕಥೆಗಳಲ್ಲಿ ಹುಲಿ, ಸಿಂಹ, ಕರಡಿಗಳಂತಹ ಬಲಾಢ್ಯ ಪ್ರಾಣಿಗಳನ್ನು ಮೊಲ, ಇಲಿ, ಇಣಚಿಗಳಂತಹ ದುರ್ಬಲ ಪ್ರಾಣಿಗಳು ಗೆಲ್ಲುತ್ತವೆ. ಗಂಡು ಬಲಿಷ್ಠ ಎಂಬ ಮಿತ್‌ನ್ನು ಮೀರುವ ಪ್ರಯತ್ನ ಇವುಗಳಲ್ಲಿದೆ. ಇದನ್ನು ಆಧುನಿಕ ಮಹಿಳಾ ಭಾಷೆಯಲ್ಲಿಯೂ ಕಾಣಬಹುದು. ಅಲಕ್ಷಿತ ಸಮುದಾಯಗಳಲ್ಲಿ ತನ್ನನ್ನು ತಾನು ಗುರುತಿಸಿಕೊಳ್ಳುವ ಮಹಿಳಾ ಕಾವ್ಯ ತನ್ನ ಅಭಿವ್ಯಕ್ತಿಯಲ್ಲಿ ಆ ಪದ-ಸಂಕೇತಗಳನ್ನು ಬಳಸಿಕೊಳ್ಳುತ್ತದೆ.

ಹೀಗೆ ಮಹಿಳಾ ಸಂವೇದನೆ ಮಹಿಳಾ ಭಾಷೆಯನ್ನು ರೂಪಿಸಿಕೊಳ್ಳುವ ಹುಡುಕಾಟದಲ್ಲಿ ತೊಡಗಿಕೊಂಡಿದೆ. ಹೆಲೆನ್ ಸಿಕ್ಸಸ್ ಹೇಳುವಂತೆ- "ಮಹಿಳಾ ಜಗತ್ತು ಪುರುಷ ಪ್ರಧಾನ ಭಾಷಾ ವ್ಯವಸ್ಥೆಯಿಂದ ಅಪಹರಿಸಲ್ಪಟ್ಟಿದೆ. ಇಕ್ರೀಚರ್ ಫೆಮಿನೈನ್ ಎಂಬ ಭಾಷಾ ಸಂಕಥನವನ್ನು ರೂಪಿಸುವುದೆಂದರೆ ಮಹಿಳೆ ತನ್ನ ಜಗತ್ತಿಗೆ ವಾಪಸ್ಸಾಗುವುದು". ಪುರುಷ ಭಾಷೆಯಿಂದ ಮಹಿಳಾ ಬರವಣಿಗೆ ಬಿಡುಗಡೆಗೊಳ್ಳುವುದೆಂದರೆ ಪುರುಷ ಪ್ರಧಾನ ಸಾಂಸ್ಕೃತಿಕ ನಿರ್ಬಂಧಗಳಿಂದ ಮುಕ್ತಳಾಗುವುದು ಎಂದಾಗಿದೆ. ಆರೋಪಿತ ಮೌಲ್ಯಗಳಿಂದ ಬಿಡುಗಡೆಗೊಳ್ಳುವಲ್ಲಿ ಭಾಷೆ ಯೊಂದು ಪ್ರಬಲ ಮಾಧ್ಯಮವಾಗಬಲ್ಲದು. ಸಿದ್ಧ ಸಾಂಸ್ಕೃತಿಕ ರಚನೆಗಳನ್ನು ಪುನಃ ಸೃಷ್ಟಿಸುವ ಪ್ರತಿಸಾಂಸ್ಕೃತಿಕ ಪ್ರಕ್ರಿಯೆಯಲ್ಲಿ ಸ್ತ್ರೀ ಭಾಷೆಯೊಂದು ಸಾಧ್ಯವಾಗುತ್ತದೆ. ಅಂತಹ ಹುಡುಕಾಟ ಕನ್ನಡ ಮಹಿಳಾ ಅಭಿವ್ಯಕ್ತಿಯ ಅಸ್ಮಿತೆಯಾಗಿದೆ.

❑

# ಹೊಸೂರು ಸಾಹಿತ್ಯ ಸಮ್ಮೇಳನದ ಹಿನ್ನೆಲೆ ಮತ್ತು ವ್ಯಕ್ತಿತ್ವದ ರಸಸನ್ನಿವೇಶ

● ಕಾ.ನಾ. ಶ್ರೀನಿವಾಸ್

ಸಾಂಸ್ಕೃತಿಕ ಚಟುವಟಿಕೆಗಳು ಸಾಹಿತ್ಯ ಸಮ್ಮೇಳನಗಳು ನಗರ ಪ್ರದೇಶಗಳಲ್ಲಿ ಒಂದಲ್ಲಾ ಒಂದು ಕಾರಣಕ್ಕೆ ನಡೆಯುತ್ತಿರುತ್ತವೆ. ಇತ್ತೀಚಿನ ದಿನಗಳಲ್ಲಿ ಅದು ತಾಲ್ಲೂಕು ಕೇಂದ್ರಗಳಲ್ಲಿ ಮಾಯ ವಾಗುವುದರ ಜೊತೆಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ಅದನ್ನು ಕೇಳುವವರೂ ಇಲ್ಲವಾಗುತ್ತಿದೆ. ಇದಕ್ಕೆ ನಿರಂತರ ಹಳ್ಳಿಗಳಿಂದ ನಡೆಯುತ್ತಿರುವ ವಲಸೆ ಮುಖ್ಯಕಾರಣವಾದರೆ, ಅಲ್ಲಿ ವಾಸಿಸುವವರಿಗೆ ಪುಕ್ಕಟೆ ಮನರಂಜನೆ ಸಿಗುವ ಟಿ.ವಿ. ಮಾಧ್ಯಮಗಳು ಹಾಗೂ ಕ್ಷುಲ್ಲಕ ರಾಜಕಾರಣ ಕಾರಣವಾಗಿದೆ. ಗ್ರಾಮೀಣ ಜನರಲ್ಲಿ ಸಹಜವಾಗಿದ್ದ ಪ್ರೀತಿ, ಆತ್ಮೀಯತೆ, ಸ್ನೇಹಪರತೆ ಇಂದು ಕಾಣೆ ಯಾಗುತ್ತಿದೆ.

ಕಳೆದ ನಾಲ್ಕು ದಶಕಗಳಿಂದಲೂ ಸಾಂಸ್ಕೃತಿಕ ಚಟುವಟಿಕೆಗಳ ಸಂಘಟಕನಾಗಿ ಕೆಲಸ ಮಾಡುತ್ತಿರುವವ ನಾನು ನಗರ ಪಟ್ಟಣ, ಹಳ್ಳಿಗಳ ಚಟುವಟಿಕೆಗಳನ್ನು ಅದರ ಪ್ರೀತಿ, ಆಸ್ಥೆಯನ್ನು ಗಮನಿಸುತ್ತಾ ಬಂದಿದ್ದೇನೆ. ರಾಜ್ಯ, ಜಿಲ್ಲಾ ಮಟ್ಟದ ಕಾರ್ಯಕ್ರಮಗಳನ್ನು ಸಂಘಟಿಸಿದ ನನಗೆ ಅವೆಲ್ಲದರಿಂದ ಸ್ವಲ್ಪದೂರ ನಿಂತು ಯೋಚಿಸಿ ದಾಗ ಸಂಸ್ಕೃತಿ ಸಾಹಿತ್ಯ ನಿರಂಬಳವಾದ ಪ್ರೀತಿ ಇರುವುದೇ ಹಳ್ಳಿ ಗಳಲ್ಲಿ ಎಂದು ಮನವರಿಕೆಯಾಗಿದೆ. ಅವುಗಳು ಅಲ್ಲಿ ಗಗನ ಕುಸುಮಗಳಾಗಿರುವ ಸಂದರ್ಭ ೨೦೦೧ರಲ್ಲಿ ಕೋಲಾರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷನಾಗುವ ಸುಯೋಗ ಒದಗಿ ಬಂತು. ನನ್ನ ಮೂರು ವರ್ಷಗಳ ಅವಧಿಯ ಕಾರ್ಯಕ್ರಮಗಳನ್ನು ನನ್ನ ಅನುಭವದ ಹಿನ್ನೆಲೆಯಲ್ಲಿ ಯೋಚಿಸುತ್ತಿರುವಾಗಲೇ ಒಂದು ದಿನ ಬೆಳಗ್ಗೆ ಡಾ॥ ಎಚ್. ನರಸಿಂಹಯ್ಯನವರಿಂದ ದೂರವಾಣಿ ಕರೆ ಬಂತು. ಹಿರಿಯರ ದೂರವಾಣಿ ಕರೆ ಏನು ಕೇಳುತ್ತಾರೋ



ಎಂಬ ಭಯದಿಂದಲೇ 'ನಮಸ್ಕಾರ ಸಾರ್' ಎಂದೆ. ಅದಕ್ಕವರು "ನೋಡಪ್ಪ ನೀನು ಅಧ್ಯಕ್ಷನಾಗಿದ್ದು ನನಗೆ ಸಂತೋಷವಾಗಿದೆ ಅಭಿನಂದನೆಗಳು. ನಿನ್ನ ಅಧಿಕಾರಾವಧಿಯಲ್ಲಿ ನಮ್ಮ ಊರಿನಲ್ಲೊಂದು ದೊಡ್ಡ ಕಾರ್ಯಕ್ರಮ ನಡೆಸಪ್ಪ" ಎಂದರು. "ಆಯಿತು ಸಾರ್" ಎಂದು ನಮಸ್ಕಾರಗಳನ್ನು ತಿಳಿಸಿ ರಿಸೀವರ್ ಕೆಳಗಿಟ್ಟೆ ಜಾಸ್ತಿ ಮಾತನಾಡೋಕೆ ಮೊದಲೇ ಭಯ.

ಡಾ॥ಎಚ್.ಎನ್. ಅವರ ಹೊಸೂರು ನನ್ನ ಸ್ವಂತ ಊರೂ ಹೌದು. ಹೀಗಾಗಿ ಮೂರು ದಶಕಗಳ ನಮ್ಮ ನಿರಂತರ ಸಂಪರ್ಕ, ತಾಲ್ಲೂಕಿನಲ್ಲಿ ನಾನು ನಿರ್ವಹಿಸಿದ ಕಾರ್ಯಗಳನ್ನು ಕಂಡ ಅವರಿಗೆ ನಮ್ಮೂರಿನ ಒಬ್ಬ ಹುಡುಗ ಸಾಹಿತ್ಯ ಪರಿಷತ್ತಿನ ಅಧ್ಯಕ್ಷನಾಗಿದ್ದಕ್ಕೆ ಸಂತೋಷ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಏರ್ಪಡಿಸುವ ದೊಡ್ಡ ಕಾರ್ಯಕ್ರಮ ಎಂದರೆ ಜಿಲ್ಲಾ ಕನ್ನಡ. ಸಾಹಿತ್ಯ ಸಮ್ಮೇಳನವೇ.

ಈ ಹಿನ್ನೆಲೆಯಲ್ಲಿ ನಮ್ಮ ಜಿಲ್ಲಾ ಸಮಿತಿಯ ಮೊದಲ ಕಾರ್ಯಕಾರಿ ಸಮಿತಿಯ ಸಭೆಯಲ್ಲಿ ಏಳನೆಯ ಜಿಲ್ಲಾ ಸಮ್ಮೇಳನವನ್ನು ಹೊಸೂರಿನಲ್ಲಿ ನಡೆಸುವುದೆಂದು ತೀರ್ಮಾನಿಸಿ ದೆವು. ಈ ವಿಷಯವನ್ನು ಖುದ್ದು ಡಾ॥ ಎಚ್.ಎನ್. ಅವರನ್ನು ಭೇಟಿಯಾಗಿ ತಿಳಿಸಿದೆ. ಅದಕ್ಕವರು 'ಏನಪ್ಪಾ ನಾನು ಒಂದು ಸೂಚನೆ ಎಂದು ಹೇಳಿದೆ ಅಷ್ಟೆ' ಎಂದರು. ಅದಕ್ಕೆ ನಾನು 'ನಿಮ್ಮ ಸೂಚನೆ ನನಗೆ ಆಜ್ಞೆ ನಿಮ್ಮ ಹೊಸೂರಿನ ಪ್ರೀತಿ ನನ್ನ ಪ್ರೀತಿಯೂ ಹೌದು, ಹೀಗಾಗಿ ನನಗೆ ಬೇರೆ ಆಯ್ಕೆ ಇರಲಿಲ್ಲ' ಎಂದೆ. ಅದಕ್ಕವರು ನಸುನಕ್ಕು 'ಆಯಿತು ನಾನು ಊರಿಗೆ ಬರುತ್ತೇನೆ ಸ್ಥಳೀಯ ಗ್ರಾಮಸ್ಥರನ್ನು ಕಲೆಹಾಕು ಮಾತನಾಡಿ ಮುಂದಿನ ಏರ್ಪಾಟು ಮಾಡೋಣ' ಎಂದರು. ಪ್ರಾರಂಭದಲ್ಲಿ ಎರಡು ಸಭೆ ನಡೆಸಿ ಊರಿನ ಜನರ ಒಪ್ಪಿಗೆ ಪಡೆದೆವು. ಆಗ ಡಾ॥ ಎಚ್‌ಎನ್ ಅವರು 'ನೋಡಪ್ಪ ಊರಿನ ಜನ ನಿನ್ನ ಹಿಂದೆ ಇರ್ತಾರೆ. ನಾನೂ ನಿನ್ನ ಹಿಂದೇನೇ ಇರ್ತೀನಿ, ಚನ್ನಾಗಿ ಅರ್ಥಪೂರ್ಣವಾಗಿ ಮಾಡು' ಎಂದರು.

ನಂತರದ ಕೆಲಸಗಳು ಮಾಮೂಲಿನಂತೆ ನಡೆಯಿತು. ಶಾಸಕರಾದ ಶ್ರೀ ಶಿವಶಂಕರ ರೆಡ್ಡಿ, ನಮ್ಮ ಅಣ್ಣನ ಮಗ ತಾಲ್ಲೂಕು ಪಂಚಾಯತಿ ಸದಸ್ಯನಾಗಿದ್ದ ಹೆಚ್.ವಿ.ಮಂಜುನಾಥ ಗ್ರಾಮ ಪಂಚಾಯತಿಯಿಂದ ಹಿಡಿದು ಜಿಲ್ಲಾ ಪಂಚಾಯತಿವರೆಗಿನ ಎಲ್ಲಾ ಸದಸ್ಯರು, ಜಿಲ್ಲಾ ಉಸ್ತುವಾರಿ ಸಚಿವರಾಗಿದ್ದ ಶ್ರೀ ವಿ. ಮುನಿಯಪ್ಪ ಅವರು ಹಣಕಾಸು ಜಾಹಿರಾತು ಸಂಗ್ರಹ ಹಾಗೂ ಇತರೆ ಬೇರೆ ಬೇರೆ ವ್ಯವಸ್ಥೆಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸಿದರು. ನನ್ನ ಪಾಲಿಗೆ ಬಂದದ್ದು ಸಮ್ಮೇಳನಾಧ್ಯಕ್ಷರ ಆಯ್ಕೆ ಹಾಗೂ ಗೋಷ್ಠಿಗಳಿಗೆ ಪ್ರಬಂಧಕಾರರನ್ನು ಆಯೋಜಿಸುವುದು.

ಸಮ್ಮೇಳನಾಧ್ಯಕ್ಷರ ಆಯ್ಕೆ ನನಗೆ ತುಸು ಭಯವನ್ನು ಉಂಟುಮಾಡಿತ್ತು. ಅಖಿಲ ಭಾರತ ಸಮ್ಮೇಳನಗಳ ಸಂದರ್ಭದಲ್ಲಿ ನಮ್ಮವನೊಬ್ಬ ಆಯ್ಕೆಯಾಗಲಿ ಎಂದು ಜಾತಿ ಗುಂಪುಗಳ ನಾಯಕರು ತೆರೆಮರೆಯಲ್ಲಿ ಎಗ್ಗಿಲ್ಲದೆ ನಡೆಸುವ ಪ್ರಭಾವವನ್ನು ಕಂಡಿದ್ದ ನನಗೆ ಯಾವ ಲಾಬಿ ಅಡ್ಡಬರುವುದೋ ಎಂಬ ಭಯ ಕಾಡುತ್ತಿತ್ತು. ಆದರೆ ಅದು ಹಾಗಾಗಲಿಲ್ಲ. ಸಮ್ಮೇಳನದ

ಅಧ್ಯಕ್ಷ ಸ್ಥಾನಕ್ಕೆ ಹಲವು ಹೆಸರುಗಳು ಇದ್ದರೂ ನಾನು ಸೂಚಿಸಿದ ಪ್ರೊ. ಜಿ. ಶ್ರೀನಿವಾಸರಾಜು ಅವರ ಹೆಸರು ಸರ್ವಾನುಮತದಿಂದ ಅನುಮೋದನೆ ಪಡೆಯಿತು.

ಶ್ರೀ ಶ್ರೀನಿವಾಸರಾಜು ಎಂದೂ ನವ್ಯ, ನವೋದಯ, ದಲಿತ, ಬಂಡಾಯ ಸಾಹಿತಿಯೆಂದಾಗಲಿ, ತಾನೊಬ್ಬ ದೊಡ್ಡ ಚಿಂತಕ ಬರಹಗಾರರೆಂದಾಗಲಿ ಗುರುತಿಸಿಕೊಂಡವರಲ್ಲ. ಹಾಗೆಂದ ಮಾತ್ರಕ್ಕೆ ಅವರು ಆ ಎಲ್ಲಾ ಪ್ರಕ್ರಿಯೆಗಳಿಗೆ ವಿಮುಖರಾದವರಲ್ಲ. ಅವರ ಗುರು ಶ್ರೀ ಜಿ.ಪಿ ರಾಜರತ್ನಂ ಅವರ ಕನ್ನಡದ ಕಾಯಕವನ್ನು ಆದರ್ಶವೆಂದು ಒಪ್ಪಿ ಇಂದೂ ನಡೆದುಕೊಳ್ಳುತ್ತಿರುವವರು. ಹೊಸ ಯುವಬರಹಗಾರರ ಅನೇಕ ಮೊದಲ ಕೃತಿಗಳು ಇವರ ನೆರವು ಪ್ರೋತ್ಸಾಹದಿಂದಲೇ ಬೆಳಕು ಕಂಡದ್ದು ಒಂದು ಸತ್ಯಕಥೆ. ಕನ್ನಡದ ಕೆಲಸಕ್ಕೆ ಫಲಕ ಪ್ರತಿಷ್ಠೆ ಕಾರಣವಲ್ಲ ಎಂದು ತೋರಿಸಿಕೊಟ್ಟವರು. ಕ್ರೈಸ್ಟ್ ಕಾಲೇಜು ಕನ್ನಡ ಸಂಘದಿಂದ ಇವರ ಕಾಲಾವಧಿಯಲ್ಲಿ ಹೊರಬಂದ ಪುಸ್ತಕಗಳೇ ಇದಕ್ಕೆ ಸಾಕ್ಷಿ.

ಹೀಗಾಗಿ ಶ್ರೀ ರಾಜು ಅವರ ಹೆಸರು ಅಧ್ಯಕ್ಷಸ್ಥಾನಕ್ಕೆ ಸೂಚಿತವಾದಾಗ ಹಿರಿಯರಾಗಲಿ ಕಿರಿಯರಾಗಲಿ ಅಪಸ್ವರ ಎತ್ತಲು ಸಾಧ್ಯವಾಗಲಿಲ್ಲ. ನಮಗೆ ಎದುರಾದ ಸಮಸ್ಯೆ ಎಂದರೆ ಸ್ವತಃ ಶ್ರೀ ಶ್ರೀನಿವಾಸರಾಜು ಅವರೇ ನಮ್ಮ ಪ್ರಸ್ತಾಪವನ್ನು ಒಪ್ಪುತ್ತಾರೋ ಇಲ್ಲವೋ ಎಂಬುದು. ಆ ಕಾರಣದಿಂದಲೇ ಸಭೆಯ ತೀರ್ಮಾನವನ್ನು ನಾನು ಅಂದೇ ಪತ್ರಿಕೆಗಳಿಗೆ ಬಿಡುಗಡೆ ಮಾಡಲಿಲ್ಲ. ಅಳುಕಿನಿಂದಲೇ ದೂರವಾಣಿಯ ಮೂಲಕ ಅವರನ್ನು ಸಂಪರ್ಕಿಸಿ ವಿಷಯ ತಿಳಿಸಿದಾಗ ಮಾಮೂಲಿನಂತೆ ಶ್ರೀ ರಾಜು ಅವರು "ನನಗಿಂತ ಹಿರಿಯರು ಅರ್ಹರು ಇರುವಾಗ ನನ್ನನ್ನು ನೀವು ಆಯ್ಕೆಮಾಡಿದ್ದು ಸರಿಯಲ್ಲ" ಎಂದು ಹೇಳಿಬಿಡುವುದೇ. ಆಮೇಲೆ ಸಾಕಷ್ಟು ಸಮಜಾಯಿಸಿ ನೀಡಿ ಹಿರಿಯರು ಬೇರೆ ಬೇರೆ ಸಂದರ್ಭಗಳಲ್ಲಿ ಈಗಾಗಲೇ ಗುರುತಿಸಿಕೊಂಡಿರುವುದರಿಂದ, ನಿಮ್ಮ ಕಾಯಕಕ್ಕೆ ವ್ಯಕ್ತಿತ್ವಕ್ಕೆ ಜಿಲ್ಲೆಯ ಸಾಹಿತ್ಯಾಭಿಮಾನಿಗಳು ಮಾಡಿರುವ ತೀರ್ಮಾನವನ್ನು ಒಪ್ಪುವಂತೆ ಕೇಳಿದೆ. 'ಆಯಿತು ನಿಮ್ಮೆಲ್ಲರ ಅಭಿಮಾನಕ್ಕೆ ನಾನು ಚಿರಋಣಿ' ಎಂದು ಒಪ್ಪಿಕೊಂಡರು.

ಇದಾದ ನಂತರ ಡಾ॥ ಎಚ್.ಎನ್. ಅವರಿಗೆ ಶ್ರೀ ರಾಜು ಅವರ ಆಯ್ಕೆಯನ್ನು ತಿಳಿಸಿದೆ. ಅವರೂ ಸಹ ತುಂಬಾ ಸಂತೋಷಪಟ್ಟು ದೂರವಾಣಿಯ ಮೂಲಕ ಅವರನ್ನು ಅಭಿನಂದಿಸಿದರು. ಒಳ್ಳೆಯ ಆಯ್ಕೆಗೆ ನನ್ನ ಬೆನ್ನು ತಟ್ಟಿ ಸಮ್ಮೇಳನದ ಕಾರ್ಯಕ್ಕೆ ಹುರಿದುಂಬಿಸಿದರು. ಇದಾದ ಕೆಲವು ದಿನಗಳ ನಂತರ ಮತ್ತೆ ಶ್ರೀ ಶ್ರೀನಿವಾಸರಾಜು ಅವರಿಂದ ನನಗೆ ದೂರವಾಣಿ ಕರೆಬಂತು. 'ಸಮ್ಮೇಳನದ ಸಂದರ್ಭದಲ್ಲಿ ಸಮ್ಮೇಳನಾಧ್ಯಕ್ಷರ ಮೆರವಣಿಗೆ ದಯವಿಟ್ಟು ಮಾಡಬೇಡಿ' ಎಂದರು. ನಾನು ಅವರಿಗೆ ಸಮ್ಮೇಳನ ಹೇಗೆ ನಡೆಸಬೇಕು ಎಂಬುದು ನನ್ನೊಬ್ಬನ ಕೈಯ್ಯಲ್ಲಿ ಇಲ್ಲ. ಡಾ॥ ಎಚ್.ಎನ್ ಮತ್ತು ಊರಿನ ಜನರ ತೀರ್ಮಾನವೇ ಅಂತಿಮ ಎಂದು ತಿಳಿಸಿದೆ. ನನ್ನ ಹತ್ತಿರ ಮಾತನಾಡಿ ಪ್ರಯೋಜನ ಇಲ್ಲ ಎಂದು ಗೊತ್ತಾದ ಕೂಡಲೆ ಅವರೇ ಡಾ॥ ಎಚ್.ಎನ್. ಅವರನ್ನು ಭೇಟಿಯಾಗಿ 'ಮೆರವಣಿಗೆ ಬೇಡ ಸಾರ್' ಎಂದರು. ಅದಕ್ಕೆ ಡಾ॥ ಎಚ್.ಎನ್.ಎ 'ಅದು ಹೇಗಪ್ಪಾ ಆಗುತ್ತೆ. ನಮ್ಮ ಹಳ್ಳಿಯ ಜನ ನೋಡುತ್ತಿರುವ ಮೊದಲ ಸಮ್ಮೇಳನ ಇದು ಒಂದು ಕಾಲದಲ್ಲಿ ನಮ್ಮ ಊರಿನಲ್ಲಿ ಯಾರಾದರೂ

ಡಿಗ್ರಿ ತೆಗೆದುಕೊಂಡರೆ ವಿದೇಶ ವ್ಯಾಸಂಗಕ್ಕೆ ಹೊರಟರೆ ತಲೆಮೇಲೆ ಹೊತ್ತು ಊರೆಲ್ಲಾ ಮೆರವಣಿಗೆ ಮಾಡಿ ಸಂತೋಷಪಡ್ತಾ ಇದ್ರು. ಇವತ್ತು ನಮ್ಮ ಹಳ್ಳಿಗಳಿಗೆ ಅಂತಹ ಸಂಭ್ರಮ ಪಡುವ ಅವಕಾಶಗಳೇ ಇಲ್ಲ ಇಷ್ಟಕ್ಕೂ ನಿಮ್ಮ ಒಬ್ಬರನ್ನೇ ಕೂಡಿಸಿ ಮೆರವಣಿಗೆ ಮಾಡಲ್ಲಪ್ಪ. ಕೋಲಾಟ ಡೊಳ್ಳು ಕುಣಿತ ಹುಲಿವೇಷದವರೂ ಮೆರವಣಿಗೆಯಲ್ಲಿ ಇರ್ತಾರೆ ಈ ಎಲ್ಲಾ ಕಲೆಗಳನ್ನು ನಮ್ಮ ಜನ ನೋಡಿ ಎಷ್ಟೋ ವರ್ಷಗಳೇ ಆಯಿತು. ಆಗ ರಾಜು ಅವರು ಮಧ್ಯೆ ಡಾ॥ ಎಚ್.ಎನ್ ಅವರನ್ನು, ತಡೆದು 'ಸಾರ್ ನೀವು ಕ್ಲಾಸ್ ತಗೊಂಡು ಎಷ್ಟು ವರ್ಷ ಆಯಿತು' ಎಂದರು. ಅದಕ್ಕೆ ಡಾ॥ ಎಚ್.ಎನ್. 'ನೋಡಿ ಶ್ರೀನಿವಾಸರಾಜು ನೀವು ಸಾಹಿತಿಗಳು ಗ್ರಾಮೀಣ ಕಲೆಗಳು ಉಳಿಯಬೇಕು ಅಂತೀರ. ನಿಮ್ಮ ಹಾಗೆ ಎಲ್ಲರೂ ಮೆರವಣಿಗೆ ನಿಲ್ಲಿಸಿದರೆ ಆ ಕಲಾವಿದರನ್ನು ಕೇಳುವವರ್‍ಯಾರು. ರಾಜಕಾರಣಿಗಳಿಗೆ ಇವರನ್ನು ಕರೆಸುವ ಪುರಸೊತ್ತು ಇಲ್ಲ, ಇವರನ್ನೆ ನಂಬಿಕೊಂಡಿರುವ ದೇವರಿಗೆ 'ಮೆರವಣಿಗೆ' ಶಾಸ್ತ್ರ ಮಾತ್ರ ಆಗುತ್ತೆ ಸಂಭ್ರಮ ಇಲ್ಲ. ಇಷ್ಟಕ್ಕೂ ನಿಮ್ಮನ್ನು ನಾವು ರಥದಲ್ಲಿ ಕೂಡಿಸುವುದಿಲ್ಲ. ಇದೊಂದು ಗ್ರಾಮೀಣ ಸಮ್ಮೇಳನ ಆಗಿರುವುದರಿಂದ ಎತ್ತಿನ ಬಂಡಿಯಲ್ಲಿ ಕೂಡಿಸುತ್ತೇವೆ. ನೀವು ಜಾಸ್ತಿ ಏನೂ ಹೇಳಬೇಡಪ್ಪ' ಎಂದರು. ಇನ್ನೂ ಕ್ಲಾಸ್ ಮುಂದುವರೆಯುತ್ತಿತ್ತೋ ಏನೋ, ರಾಜ ಅವರು 'ಆಯಿತು ಸಾರ್' ಎಂದು ಅನಿವಾರ್ಯವಾಗಿ ಹೇಳಬೇಕಾಯಿತು.

ಅಧ್ಯಕ್ಷರ ಮೆರವಣಿಗೆಯ ಪೀಠಿಕೆಯೇ ಇಷ್ಟಾದ ಮೇಲೆ ಮೆರವಣಿಗೆಯೂ ಸ್ವಾರಸ್ಯವಾಗೇ ಇದ್ದಿರಬೇಕಲ್ಲವೆ? ಮೆರವಣಿಗೆಗೆ ಎತ್ತಿನಗಾಡಿ ಯಾರು ಕಟ್ಟಬೇಕು ಎನ್ನುವ ವಿಷಯಕ್ಕೂ ಸ್ಪರ್ಧೆಯೇ ನಡೆಯಿತು. ಅಂತಿಮವಾಗಿ ಸೆಣನಗಾನಹಳ್ಳಿ ಗ್ರಾಮ ಪಂಚಾಯತಿ ಅಧ್ಯಕ್ಷರಾದ ಶ್ರೀ ನಾರಾಯಣಪ್ಪ ಅವರಿಗೆ ಈ ಹೊಣೆ ಬಂತು. ಮೆರವಣಿಗೆಗಾಗಿಯೇ ಹತ್ತುಸಾವಿರ ಕೊಟ್ಟು ಬಿಳಿಯ ಜೋಡೆತ್ತುಗಳನ್ನು ಕೊಂಡರು. ತಾವೂ ಸಹ ಹೊಸಬಟ್ಟೆ ಕೊಂಡು ತಲೆಗೆ ರುಮಾಲು ಸುತ್ತಿ ಅವರೂ ಮದುಮಗನಂತೆ ಸಿದ್ಧವಾದರು. ಸಮ್ಮೇಳನದ ದಿನ ಮಾಧ್ಯಮಿಕ ಶಾಲೆಯ ಆವರಣದಲ್ಲಿ ಸಾವಿರಾರು ಜನ ಸೇರಿದರು. ಕೊಂಬು ಕಹಳೆ ಮೊಳಗಿತು. ಕೋಲಾಟ, ಹುಲಿವೇಶ, ಡೊಳ್ಳುಕುಣಿತ, ನಂದಿಕೋಲು ಮುಂತಾದ ಜಾನಪದ ಕಲಾವಿದರು ಸಾಲು ಸಾಲಿನಲ್ಲಿ ನಿಂತರು. ಜಿಲ್ಲೆಯ ಹಿರಿಯರು, ಶಾಸಕರು, ಸಾಹಿತ್ಯ ಪರಿಷತ್ ಅಧ್ಯಕ್ಷ ಶ್ರೀ ಹರಿಕೃಷ್ಣ ಪುನರೂರು ಹಾಗೂ ಪ್ರತಿನಿಧಿಗಳ ದೊಡ್ಡ ದಂಡೇ ಮುಂದೆ ನಿಂತಿತ್ತು. ಮೊದಮೊದಲು ಮುಜುಗರಕ್ಕೆ ಒಳಗಾದ ಶ್ರೀ ಶ್ರೀನಿವಾಸರಾಜು ಜನರ ಪ್ರೀತಿ ಅಭಿಮಾನವನ್ನು ಕಂಡು ಬಂಡಿಯೇರಿದರು. ಬಿಳಿ ಜುಬ್ಬ ಪೈಜಾಮ ವೇಸ್ಟ್‌ಕೋಟ್‌ನ ಮಾಮೂಲಿ ಉಡಿಗೆಯಲ್ಲಿ ನವತರುಣರಾದರು. ಈ ದೃಶ್ಯವನ್ನು ಕಂಡ ಅವರ ಬಾಳಸಂಗಾತಿ ಶ್ರೀಮತಿ ಸರಸ್ವತಿ ನಾಚಿ ನೀರಾದರು. ಅವರ ಮದುವೆಯ ಸಂದರ್ಭದಲ್ಲಿಯೂ ಸಹ ಇಂತಹ ಮನತುಂಬುವ ಮಧುರನೋಟ ಅವರಿಗೆ ಸಿಕ್ಕಿತೋ ಇಲ್ಲವೋ, ಅವರ ಮಕ್ಕಳು ಮೊಮ್ಮಕ್ಕಳು ಬಂಧುಗಳು ಮಾತಿಲ್ಲದೆ ಮೂಕರಾದರು. ಸ್ನೇಹಿತರಿಗೆ ಮಿತ್ರನ ಸಾಧನೆ ಹೆಮ್ಮೆಯೆನಿಸಿತು.

ಮೆರವಣಿಗೆ ಊರಿನ ಮುಖ್ಯ ಬೀದಿಗಳಲ್ಲಿ ಬಂದಾಗ ಊರ ಹೆಣ್ಣುಮಕ್ಕಳು ಮನೆಗಳ ಮುಂದೆ ಸಾರಿಸಿ ರಂಗೋಲೆ ಹಾಕಿದರು. ಯುವಕರು ತೋರಣ ಬಾಳೆಕಂದು ಸ್ವಾಗತ ಕಮಾನುಗಳನ್ನು ಕಟ್ಟಿ ಇಡೀ ಊರನ್ನು ಸಿಂಗರಿಸಿದ್ದರು. ನಾವು ಡಾ॥ ಎಚ್.ಎನ್. ಅವರಿಗೆ

ಮೆರವಣಿಗೆಗೆ ಬರುವುದು ಬೇಡ ಎಂದು ಹೇಳಿದ್ದೆವು. ಆದರೆ ಅವರ ಮನಸ್ಸು ಸುಮ್ಮನೆ ಕೂರಲು ಬಿಡಬೇಕಲ್ಲ. ಮೆರವಣಿಗೆ ಪ್ರಾರಂಭವಾದ ಸ್ವಲ್ಪ ಹೊತ್ತಿನಲ್ಲೆ ಪ್ರತ್ಯಕ್ಷರಾದರು. ಊರಿನ ಜನಕ್ಕೆ ಇದೊಂದು ವಿಸ್ಮಯ. ಈವರೆವಿಗೆ ನಮ್ಮ ಊರಿನ ಜನಕ್ಕೆ ಡಾ॥ ಎಚ್.ಎನ್. ಅವರೇ ಅತ್ಯಂತ ದೊಡ್ಡ ವ್ಯಕ್ತಿ. ಅದು ನಿಜವೂ ಹೌದು. ನಾಡಿಗೇ ದೊಡ್ಡ ವ್ಯಕ್ತಿ ಆದರೆ ಇಂತಹ ದೊಡ್ಡವ್ಯಕ್ತಿ ಮೆರವಣಿಗೆಯಲ್ಲಿ ನಡೆದುಕೊಂಡು ಬರುತ್ತಿರುವುದನ್ನು ಕಂಡು "ಈಯಪ್ಪ ಎವರೋ ಆಯಪ್ಪಕ್ಕಿಂತ ಪೆದ್ದ ಮನುಷೇ ಉಂಡೊಚ್ಚು" ಎಂದು ಶ್ರೀ ಶ್ರೀನಿವಾಸರಾಜು ಅವರನ್ನು ಕುರಿತು ತಮ್ಮ ತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಿದ್ದರು.

ಮೆರವಣಿಗೆ ಸಮ್ಮೇಳನದ ಮಹಾದ್ವಾರಕ್ಕೆ ಬಂದಾಗ ನಾಡಿನ ಹಿರಿಯ ಕವಿ ಡಾ॥ ಜಿ.ಎಸ್. ಶಿವರುದ್ರಪ್ಪನವರು ತಮ್ಮ ಶಿಷ್ಯನನ್ನು ಆಲಂಗಿಸಿ ಬರಮಾಡಿಕೊಂಡರು. ಮತ್ತೊಬ್ಬ ಗುರುಗಳು ನಮ್ಮೂರಿನವರೇ ಆದ ಡಾ॥ ಹಂಪನಾ ಅವರ ಕಣ್ಣಲ್ಲಿ ಸಂತೋಷದ ಹನಿಗಳು ಉದುರಿದವು. ಪಿಳನೆಯ ಸಮ್ಮೇಳನವಾಗಿದ್ದರಿಂದ ಏಳು ಮಹಾದ್ವಾರಗಳನ್ನು ನಿರ್ಮಿಸಲಾಗಿತ್ತು. ಪುಲ್ಲಕವಿ ಎಂ.ಜಿ. ನಂಜುಡಾರಾಧ್ಯ, ಸು. ವೆಂಕಟಾಚಲಯ್ಯ, ಚನ್ನಕೃಷ್ಣಯ್ಯ, ಇಡಗೂರು ರುದ್ರಕವಿ, ಓ.ಎನ್. ಲಿಂಗಣ್ಣಯ್ಯ, ಡಾ॥ ಜಚನಿ ಜಿಲ್ಲೆಯ ತಾಲ್ಲೂಕಿನ ಈ ಹಿರಿಯ ಕವಿಶ್ರೇಷ್ಠರ ನೆನಪಿನಲ್ಲಿ ಈ ಮಹಾದ್ವಾರಗಳನ್ನು ನಿರ್ಮಿಸಿ ಅವರನ್ನು ನಮಿಸುವ ಸುಯೋಗವನ್ನು ಸ್ವಾಗತ ಸಮಿತಿ ಕಳೆದುಕೊಳ್ಳಲಿಲ್ಲ.

೨೫-೦೧-೨೦೦೨ರ ಶುಕ್ರವಾರ ಸಂಜೆ ೭ಕ್ಕೆ ಡಾ॥ ಎಚ್.ಎನ್. ಪ್ರೌಢಶಾಲೆಯ ಆವರಣದಲ್ಲಿ ಡಾ॥ ಜಿ.ಎಸ್. ಶಿವರುದ್ರಪ್ಪನವರು ಉದ್ಘಾಟಿಸಿ ಗ್ರಾಮೀಣ ಸೊಗಡಿನ ಸಮ್ಮೇಳನ ಎಂದು ಮನತುಂಬಿ ಹೇಳಿ ಸಮ್ಮೇಳನಾಧ್ಯಕ್ಷ ಸ್ಥಾನ ಶ್ರೀ ಶ್ರೀನಿವಾಸರಾಜು ಅವರಂತಹ ಕನ್ನಡ ಕಟ್ಟುವ ಚಿಂತಕನಿಗೆ ದೊರೆತದ್ದಕ್ಕೆ ಹೆಮ್ಮೆ ಪಟ್ಟರು. ಸಮ್ಮೇಳನಕ್ಕೆ ಮಂತ್ರಿಗಳನ್ನು ಆಹ್ವಾನಿಸಲಾಗಿದ್ದರೂ ಯಾರು ಬರಲಿಲ್ಲ. ಅವರು ಬಾರದೆ ಹೋದದ್ದನ್ನು ಯಾರೂ ಗಮನಿಸಲೂ ಇಲ್ಲ. ಡಾ॥ ಎಚ್.ಎನ್., ಹಂಪನಾ, ಪುನರೂರು, ಡಾ॥ ನಿಂಗಪ್ಪ ತಮ್ಮ ಸಂತಸ ಹಂಚಿಕೊಂಡರು.

೨೫-೦೧-೨೦೦೨ರ ರಾತ್ರಿ ಡಾ॥ ಶಿವರುದ್ರಪ್ಪನವರು ಹೊಸೂರಿನಲ್ಲಿಯೇ ವಾಸ್ತವ್ಯ ಹೂಡಿದ್ದರು. ಮಾರನೆಯ ದಿನ ಬೆಳಗ್ಗೆ ಗಣರಾಜ್ಯೋತ್ಸವವನ್ನು ಶಾಲೆಯ ಆವರಣದಲ್ಲಿ ಅವರು ಧ್ವಜಾರೋಹಣ ನೆರವೇರಿಸುವುದರ ಮೂಲಕ ಶಾಲೆಯ ಮಕ್ಕಳಿಗೆ ಗ್ರಾಮಸ್ಥರಿಗೆ ಒಂದು ಐತಿಹಾಸಿಕ ಸಂದರ್ಭವನ್ನು ತಂದುಕೊಟ್ಟರು.

ಇನ್ನು ಸಮ್ಮೇಳನದ ಗೋಷ್ಠಿಗಳು ಈವರೆವಿಗೆ ನಾನು ಚಿತ್ರದುರ್ಗ ಹಾಗೂ ಕೋಲಾರ ಜಿಲ್ಲೆಗಳಲ್ಲಿ ಒಟ್ಟು ನಾಲ್ಕು ಜಿಲ್ಲಾ ಸಮ್ಮೇಳನಗಳನ್ನು ಸಂಘಟಿಸಿದ್ದೇನೆ. ಜಿಲ್ಲಾ ಸಾಹಿತ್ಯ ಸಮ್ಮೇಳನಗಳು ಎಂದರೆ ಜಿಲ್ಲೆಯಿಂದ ಜಿಲ್ಲೆಯವರಿಗಾಗಿ ಎನ್ನುವ ಸೂತ್ರವನ್ನು ಕೈಬಿಟ್ಟು ನಡೆದಿದ್ದೇನೆ. ಸಾಹಿತ್ಯ ಎಂದರೆ ಸಾರ್ವಕಾಲಿಕ ಮತ್ತು ಸಾರ್ವತ್ರಿಕವಾದದ್ದು ಎಂದೇ ಅರ್ಥ. ಅದಕ್ಕೆ ಗಡಿಯ ಬೇಡಿ ತೊಡಿಸಿ ಎಲ್ಲವನ್ನು ಆಸ್ವಾದಿಸುವ ನಮ್ಮ ಸಾಮಾನ್ಯ ಜನರನ್ನು ವಂಚಿತರನ್ನಾಗಿಸುವುದು ಸರಿಯಲ್ಲ. ಜಿಲ್ಲಾ ತಾಲ್ಲೂಕು ಸಮ್ಮೇಳನ ಎಂಬುದು ಒಂದು ನೆಪ. ಆ ಸಂದರ್ಭದಲ್ಲಿ

ಜಿಲ್ಲೆಯ ನಾಡಿನ ಸಾಹಿತಿಗಳನ್ನು ಬರಹಗಾರರನ್ನು ಒಂದೆಡೆ ನೋಡುವ ಅವರ ಅಭಿಪ್ರಾಯವನ್ನು ಹಂಚಿಕೊಳ್ಳುವ ಸಂದರ್ಭ. ಹೀಗಾಗಿ ಹೊಸೂರು ಸಮ್ಮೇಳನದಲ್ಲಿ 'ಮಂಕುತಿಮ್ಮನ ಕಗ್ಗ'ದಿಂದ ಹಿಡಿದು ಜಾಗತೀಕರಣ ವೈಜ್ಞಾನಿಕ ಮನೋಭಾವ ಧರ್ಮಾಂಧತೆಯಂತಹ ವಿಷಯಗಳನ್ನು ನಮ್ಮ ಸಾಹಿತ್ಯದ ಸಂದರ್ಭದಲ್ಲಿ ಹೇಗೆ ಸ್ವೀಕರಿಸಬೇಕು, ಅವುಗಳ ಪರಿಣಾಮ ನಮ್ಮ ಸಂಸ್ಕೃತಿಯ ಮೇಲೆ ಹೇಗೆ ನಡೆಯುತ್ತದೆ ಎಂಬುವ ಗಹನ ವಿಚಾರಗಳ ಮೇಲೆ ಗೋಷ್ಠಿಗಳನ್ನು ಆಯೋಜಿಸಲಾಗಿತ್ತು. ಶ್ರೀ ಶ್ರೀ ನಿರ್ಮಲಾನಂದನಾಥ ಸ್ವಾಮೀಜಿ, ಡಾ॥ ಹೆಚ್.ಎಸ್. ಲಕ್ಷ್ಮೀನಾರಾಯಣ ಭಟ್ಟ, ಓ.ಎಲ್. ನಾಗಭೂಷಣಸ್ವಾಮಿ, ಡಾ॥ ಎಸ್. ಆರ್.ಲೀಲಾ, ಚಂದ್ರ ಶೇಖರ ನಂಗಲಿ, ಡಾ॥ ಎಲ್. ಹನುಮಂತಯ್ಯ, ಟಿ.ಎಸ್. ನಾಗರಾಜಶೆಟ್ಟಿ, ಡಾ॥ ಹೆಚ್.ಆರ್. ರಾಮಕೃಷ್ಣರಾವ್, ಪ್ರೊ॥ ಎಂ.ಆರ್.ನಾಗರಾಜ್, ಡಾ॥ ರಂಗಾರೆಡ್ಡಿ, ಸ. ರಘುನಾಥ್, ಡಾ॥ ಎನ್. ಗಾಯಿತ್ರಿ, ಗುಡಿಬಂಡೆ ಪೂರ್ಣಿಮ, ಬಿ.ಆರ್. ಲಕ್ಷ್ಮಣರಾವ್, ಡಾ॥ ಮುನಿವೆಂಕಟಪ್ಪ, ಡಾ॥ ಎನ್. ಚಂದ್ರಪ್ಪ, ವಿ.ಆರ್. ಸುದರ್ಶನ್, ಅಶೋಕ್ ಕೃಷ್ಣಪ್ಪ, ಪತ್ರಿಕಾ ಅಕಾಡೆಮಿಯ ಅಧ್ಯಕ್ಷರಾಗಿದ್ದ ಎನ್. ಅರ್ಜುನದೇವ, ರಂಗಭೂಮಿ ಕ್ಷೇತ್ರದಿಂದ ಡಾ॥ ಬಿ.ವಿ. ರಾಜಾರಾಂ, ಆರ್. ನಾಗೇಶ್, ರಿಚರ್ಡ್ ಲೂಯಿಸ್ ಮುಂತಾದವರು ಗೋಷ್ಠಿಯಲ್ಲಿ ಭಾಗವಹಿಸಿ ತಮ್ಮ ವಿದ್ವತ್‌ಪೂರ್ಣ ಭಾಷಣಗಳಿಂದ ಪ್ರತಿನಿಧಿಗಳಿಗೆ ತಮ್ಮ ಭಾಗವಹಿಸುವಿಕೆಯ ಸಾರ್ಥಕತೆಯನ್ನು ತಂದುಕೊಟ್ಟಿತು. ಪ್ರತಿ ಗೋಷ್ಠಿಗಳಲ್ಲಿಯೂ ಸುಮಾರು ಐದುನೂರಕ್ಕೂ ಹೆಚ್ಚು ಪ್ರತಿನಿಧಿಗಳು ಭಾಗವಹಿಸುತ್ತಿದ್ದರು. ಡಾ॥ ಎಚ್.ಎನ್. ಅವರೂ ಸಹ ಎಲ್ಲಾ ಗೋಷ್ಠಿಗಳಲ್ಲಿ ಉಪಸ್ಥಿತರಿದ್ದು ತಮ್ಮ ಗ್ರಾಮಸ್ಥರ ಅನಿಸಿಕೆಗಳನ್ನು ಅವರು ಅನುಭವಿಸುತ್ತಿದ್ದ ರಸಾನುಭವಗಳನ್ನು ತನ್ಮಯತೆಯಿಂದ ನೋಡುತ್ತಿದ್ದರು.

ಸಮ್ಮೇಳನದ ಇನ್ನೊಂದು ಮುಖ್ಯ ಭಾಗವೇ ಊಟೋಪಚಾರ. ನ್ಯಾಷನಲ್ ಹೈಸ್ಕೂಲ್‌ಗೆ ಸಂಬಂಧಿಸಿದ ಹೊಸ ಭೋಜನ ಶಾಲೆಯಲ್ಲಿ ನಿರಂತರ ಊಟ–ತಿಂಡಿ. ಊಟದ ಚೀಟಿ ಇಲ್ಲ, ಸಾಲಿನಲ್ಲಿ ನಿಲ್ಲಬೇಕಾಗಿಲ್ಲ. ನೂಕಾಟ ತಳ್ಳಾಟವಿಲ್ಲ. ಪ್ರತಿನಿಧಿಗಳು ಆಹ್ವಾನಿತರು ಅತಿಥಿಗಳು ಎಲ್ಲರಿಗೂ ಒಂದೇ ಕಡೆ ವ್ಯವಸ್ಥೆ. ಸರಳ ಅಡಿಗೆ, ಶುಚಿರುಚಿ. ಜಿಲ್ಲಾ ಸಮ್ಮೇಳನದ ಈ ಸವಿಯನ್ನು ಉಂಡಿದ್ದ ಪ್ರತಿನಿಧಿಗಳಿಗೆ ಸಾಹಿತ್ಯಪ್ರಿಯರಿಗೆ ಹೊಸೂರು ಸಮ್ಮೇಳನದ ಒಂದು ವಾರದ ನಂತರ ತುಮಕೂರಿನಲ್ಲಿ ನಡೆದ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ತದ್ವಿರುದ್ಧ ವ್ಯವಸ್ಥೆ ಹೊಸೂರಿನ ಅಚ್ಚುಕಟ್ಟು ವ್ಯವಸ್ಥೆಯನ್ನು ನೆನಪಿಸುತ್ತಿತ್ತು.

ಪುಸ್ತಕ ಪ್ರದರ್ಶನ ಸಮ್ಮೇಳನದ ಮತ್ತೊಂದು ಮುಖ್ಯ ಅಂಗ. ಈ ಪ್ರದರ್ಶನದಲ್ಲಿ ಸುಮಾರು ಎರಡು ಲಕ್ಷಕ್ಕೂ ಮೀರಿದ ಮೌಲ್ಯಗಳ ಪುಸ್ತಕಗಳು ಮಾರಾಟವಾಗಿ ನಮ್ಮ ಗ್ರಾಮಾಂತರ ಪ್ರದೇಶದ ಜನರ ಪುಸ್ತಕಪ್ರೀತಿಯನ್ನು ಸಾಬೀತುಪಡಿಸಿತು.

ಜಿಲ್ಲೆಯ ಸಾಧಕರಿಗೆ ಸನ್ಮಾನ. ಶ್ರೀ ಬರಗೂರು ರಾಮಚಂದ್ರಪ್ಪನವರ ಸಮಾರೋಪ ಭಾಷಣ. ಶ್ರೀ ಶ್ರೀನಿವಾಸರಾಜು ಸಾರಥ್ಯದ ಮೂರು ದಿನಗಳ ಅರ್ಥಪೂರ್ಣ ಸಮಾರಂಭಕ್ಕೆ ತೆರೆಯೆಳೆಯಿತು.

ಸಮ್ಮೇಳನದ ನಂತರ ಮಾರನೆಯ ದಿನ ನಾನು ಹೊಸೂರಿನಲ್ಲೇ ಇದ್ದು, ಹಣಕಾಸಿನ ವ್ಯವಸ್ಥೆ, ಶಾಲಾ ಆವರಣ ಸ್ವಚ್ಛಗೊಳಿಸುವ ಮೇಲ್ವಿಚಾರಣೆಯಲ್ಲಿ ಇದ್ದಾಗ ಅಲ್ಲಿಗೇ ಬಂದ

ಗ್ರಾಮಸ್ಥರು "ನಾವು ಪತ್ರಿಕೆಗಳಲ್ಲಿ ಟಿ.ವಿ.ಯಲ್ಲಿ ಬರುವ ಸಮ್ಮೇಳನಗಳ ತುಣುಕುಗಳನ್ನು ನೋಡಿ, ವರದಿಗಳನ್ನು ಓದಿದ್ದ ನಮಗೆ ನಿಜವಾಗಿ ಸಮ್ಮೇಳನ ಹೇಗಿರುತ್ತದೆ, ಅದರ ಆನಂದ ಏನು ಎಂಬುದು ನಮಗೆ ಈಗ ಗೊತ್ತಾಯಿತು. ಎಂದು ಮನದುಂಬಿ ನುಡಿದರು. ನನಗೆ ಸಮ್ಮೇಳನದ ನಿಜವಾದ ಫಲಶೃತಿ ಕೇಳಿ ಸಂತೋಷಪಟ್ಟೆ.

ಸಮ್ಮೇಳನದ ನಂತರ ಡಾ॥ ಎಚ್.ಎನ್. ಅವರು ನನ್ನನ್ನು ತಮ್ಮ ಕೊಠಡಿಗೆ ಕರೆಸಿಕೊಂಡು "ನಾನು ಹೊಸೂರಿನಲ್ಲಿ ಅನೇಕ ಕಾರ್ಯಕ್ರಮಗಳನ್ನು ನಡೆಸಿದ್ದೇನೆ. ನಾಡಿನ ಹಿರಿಯರು ರಾಜ್ಯಪಾಲರಾದಿಯಾಗಿ ಎಲ್ಲರೂ ಬಂದಿದ್ದಾರೆ. ಆದರೆ ಈ ಸಮ್ಮೇಳನದ ಅಚ್ಚುಕಟ್ಟು ಮತ್ತು ಅರ್ಥವಂತಿಗೆ ನನಗೆ ತುಂಬಾ ಸಂತೋಷವನ್ನು ಉಂಟುಮಾಡಿದೆ. ನಿಮಗೆಲ್ಲಾ ನನ್ನ ಅಭಿನಂದನೆ ಗಳು" ಎಂದು ಹೇಳಿದಾಗ 'ಎಲ್ಲಾ ನಿಮ್ಮ ಮಾರ್ಗದರ್ಶನ ಸಾರ್' ಎಂದೆ. ಅದಕ್ಕೆ ಅವರು' ಮಾರ್ಗದರ್ಶನ ಮಾಡಿದರೆ ಈ ಕಾಲದಲ್ಲಿ ಅದರಂತೆ ನಡೆಯೋರು ಯಾರಪ್ಪ' ಎಂದರು. ನನಗೂ ಖುಷಿಯಾಯಿತು.

ಪತ್ರಿಕಾ ಅಕಾಡೆಮಿಯ ಅಧ್ಯಕ್ಷರಾಗಿದ್ದ ಶ್ರೀ ಎನ್. ಅರ್ಜುನದೇವ ಅವರು 'ಸಮಾರೋಪ ಸಮಾರಂಭದ ಗಡಿಬಿಡಿಯಲ್ಲಿದ್ದ ನಿಮ್ಮನ್ನು ಮಾತನಾಡಿಸಲು ಸಾಧ್ಯವಾಗಲಿಲ್ಲ' ಎಂದು ತಕ್ಷಣ ಪತ್ರ ಬರೆದು 'ನಾನು ಮೂರು ದಿನಗಳು ಬಂದು ಸಮ್ಮೇಳನದಲ್ಲಿ ಭಾಗವಹಿಸಲು ಸಾಧ್ಯವಾಗಲಿಲ್ಲ. ಕೊನೆಯ ದಿನದ ಕಾಯಕ್ರಮದಲ್ಲಿ ಮಾತ್ರ ಭಾಗಿಯಾಗಿದ್ದೆ. ಅಲ್ಲಿ ನಡೆಯುತ್ತಿದ್ದ ಗೋಷ್ಠಿಗಳು ಅದರಲ್ಲಿ ಭಾಗವಹಿಸುತ್ತಿದ್ದ ಜನರ ಪ್ರತಿಕ್ರಿಯೆ ಸೌಲಭ್ಯಗಳ ಕೊರತೆಯ ನಡುವೆಯೂ ಒಂದು ಪುಟ್ಟ ಹಳ್ಳಿಯಲ್ಲಿ ಜಿಲ್ಲಾ ಸಮ್ಮೇಳನದಂತಹ ದೊಡ್ಡ ಕಾರ್ಯಕ್ರಮ ನಡೆಸುವುದು ಸುಲಭಸಾಧ್ಯವಲ್ಲ. ಅಂತಹ ಒಂದು ಸಾಹಸಕ್ಕೆ ಪ್ರೇರಕರಾದ ಡಾ॥ ಎಚ್.ಎನ್. ಅವರಿಗೂ ಸಮ್ಮೇಳನಾಧ್ಯಕ್ಷರಾದ ಶ್ರೀ ಶ್ರೀನಿವಾಸರಾಜು ಅವರಿಗೂ ಜಿಲ್ಲಾಧ್ಯಕ್ಷರಾದ ನಿಮಗೂ ನನ್ನ ಅಭಿನಂದನೆಗಳು. ಮುಂದೆ ಸಮ್ಮೇಳನ ನಡೆಸುವವರಿಗೊಂದು ಮಾದರಿ ಹಾಕಿಕೊಟ್ಟಿದ್ದೀರಿ ಮತ್ತೊಮ್ಮೆ ಅಭಿನಂದನೆಗಳು' ಎಂದು ಮನಸಾರೆ ಪ್ರಶಂಸಿಸಿದರು.

ಸುಮಾರು ಆರು ತಿಂಗಳ ಕಾಲ ಹೊಸೂರು ಸಮ್ಮೇಳನ, ಶ್ರೀ ಶ್ರೀನಿವಾಸರಾಜು, ಒಂದಲ್ಲಾ ಒಂದು ಕಾರಣಕ್ಕೆ ಸಹೃದಯರು ಕಲೆತಾಗಲೆಲ್ಲಾ ಸಮ್ಮೇಳನದ ವಿಷಯ ಪ್ರತಿಧ್ವನಿಸುತ್ತಲೇ ಇರುತ್ತಿತ್ತು.

❑

# ತೊಗಲುಗೊಂಬೆಯಾಟ – ಚಿತ್ರಕಲೆ

● ಎಸ್.ಎ. ಕೃಷ್ಣಯ್ಯ

ಕರ್ನಾಟಕ ಜನಪದ ರಂಗಭೂಮಿಯ ಪ್ರಕಾರಗಳಲ್ಲಿ ಗೊಂಬೆಯಾಟ ಮಾಧ್ಯಮವು ಅಬಾಲವೃದ್ಧರಾಗಿ ಎಲ್ಲರನ್ನು ರಂಜಿಸುವ ಒಂದು ಪ್ರದರ್ಶನಾತ್ಮಕ ರಂಗಕಲೆ. ಗೊಂಬೆಯಾಟವು ಒಂದು ಅರ್ವಾಚೀನ ಕಲಾ ಪ್ರಕಾರ. ದೇವ ದಾನವರ ಕಥಾನಕವನ್ನು ಮಾನವರು ನಟನೆ ಮಾಡುವುದು ಅಥವಾ ಪ್ರದರ್ಶನ ಕೊಡುವುದು ಒಂದು ಅಪಚಾರ ಎನ್ನುವ ಪಾಪ ಪ್ರಜ್ಞೆಯಿಂದಾಗಿ ಆಚರಣೆ, ಪ್ರದರ್ಶನಗಳು ಆರಂಭವಾದವು ಎಂಬುದು ಒಂದು ವಾದ. ಮತ್ತೊಂದೆಡೆ ಮಾಡಿದ ಪಾಪವನ್ನು ತೊಳೆದುಕೊಳ್ಳಲು ಗೊಂಬೆಗಳನ್ನು ನಿರ್ಮಾಣ ಮಾಡಿಸಿ ಕೊಡುತ್ತಿದ್ದ ಪರಂಪರೆ ಹಿಂದೂ ಸಂಪ್ರದಾಯದಲ್ಲಿತ್ತು. ಹೀಗೆ ಕೊಟ್ಟಂತಹ ಅಥವಾ ಬಳುವಳಿಯಾಗಿ ಬಂದ ಗೊಂಬೆಗಳನ್ನು ತಟಸ್ಥವಾಗಿ ಇಟ್ಟುಕೊಳ್ಳುವಂತಿಲ್ಲ. ಹೀಗಾಗಿ ಗೊಂಬೆಗಳ ಮೂಲಕ ಗೊಂಬೆಯಾಟ ನಡೆಸುವ ಪರಿಪಾಠ ನಡೆಯುತ್ತಾ ಬಂದು ಕ್ರಮೇಣ ವೃತ್ತಿಧರ್ಮವಾಗಿ ಸ್ವೀಕರಿಸಿದ ಕೆಲವೇ ಜನವರ್ಗದವರುಗಳನ್ನು ಸಮಾಜ ಪ್ರತ್ಯೇಕವಾಗಿ ಗುರುತಿಸಿ ಗೊಂಬೆಯಾಟದ ಕಲಾವಿದರೆಂದು ಗೌರವಿಸಿತು. ಗೊಂಬೆಯಾಟ ಪ್ರಕಾರದಲ್ಲಿ ದ್ರಾವಿಡ ಸಿದ್ಧಾಂತದ ನಿಲುವುಗಳು ಹೆಚ್ಚು. ಪ್ರದರ್ಶನದ ಯಾವುದೇ ಪ್ರಕಾರವನ್ನು ಅವಲೋಕಿಸಿದಾಗ್ಯೂ ದ್ರಾವಿಡ ಸಿದ್ಧಾಂತದ ಆಶಯಗಳನ್ನು ಆಚರಣಾತ್ಮಕ ನೆಲೆಯಲ್ಲಿ ಹೆಚ್ಚಾಗಿ ಕಾಣಬಹುದು. ಈ ಸಿದ್ಧಾಂತದ ಪ್ರಕ್ರಿಯೆಯನ್ನು ಅಧ್ಯಯನದ ದೃಷ್ಟಿಕೋನದಿಂದ ವಿಶ್ಲೇಷಣೆ ಮಾಡ ತೊಡಗಿದವರಲ್ಲಿ ಡಾ. ಎ.ಕೆ. ರಾಮಾನುಜಂ ಇವರು ಮೊದಲಿಗರು. ಆ ಬಳಿಕ ಡಾ. ಚಂದ್ರಶೇಖರ ಕಂಬಾರರು. ಡಾ. ಚಂದ್ರಶೇಖರ ಕಂಬಾರ ಇವರು ಬಯಲಾಟ–ಸಂಬಂಧಿಯಾಗಿ ನಡೆಸಿದ ಅಧ್ಯಯನ ದಲ್ಲಿ ಸೈದ್ಧಾಂತಿಕ ಮಜಲುಗಳನ್ನು ಪರಿಚಯಿಸಿದ್ದಾರೆ. ದ್ರಾವಿಡ ಆಚರಣೆಗಳ ಸಿದ್ಧಾಂತದ ಪ್ರಕಾರ ಆವಾಹನೆ, ಉಪಾಸನೆ ಮತ್ತು ವಿಸರ್ಜನೆ ಈ ಮೂರು ಕ್ರಿಯೆಗಳನ್ನು ಪ್ರದರ್ಶನದಲ್ಲಿ



ಕಾಣಬಹುದಾಗಿದೆ. ಗೊಂಬೆಗಳನ್ನು ತಯಾರಿಸುವುದು ಮತ್ತು ವಿಸರ್ಜನೆ ನಡೆಸುವುದು ಇವೆರಡರ ನಡುವೆ ಅಭಿವ್ಯಕ್ತಗೊಳ್ಳುವುದನ್ನು ವಿಧಿ, ಲೀಲೆ, ಅಥವಾ ಪ್ರದರ್ಶನ ಎಂದು ಕರೆಯಲಾಗಿದೆ. ಈ ಸೈದ್ಧಾಂತಿಕ ನಿಲುವನ್ನು ಜನಪದ ಕಥೆ, ಬಯಲಾಟ, ಮಾರಿ ಹಬ್ಬದ ಆಚರಣೆ, ನಾಗಮಂಡಲ ಮುಂತಾದ ಪ್ರಕಾರಗಳಿಗೂ ಅನ್ವಯಿಸಿ ಅಧ್ಯಯನ ನಡೆಸಬಹುದಾಗಿದೆ. ಗೊಂಬೆಯಾಟದಲ್ಲಿನ ಪ್ರದರ್ಶನದಲ್ಲಿಯೂ ನಾಂದಿ ಮತ್ತು ಅಂತ್ಯ ಅಥವಾ ಮಂಗಳ ಗೀತೆಯೊಂದಿಗೆ ಸಮಾಪ್ತಿಗೊಳ್ಳುವುದು. ಮರುದಿನ ಅಥವಾ ಮತ್ತೆ ಪ್ರದರ್ಶನಕೊಡುವಂತಹ ಆಹ್ವಾನಗಳಿದ್ದರೆ ಇದೇ ಗೊಂಬೆಗಳನ್ನು ಪುನರ್‌ಬಳಕೆ ಮಾಡುವರು. ಮಾಡಿಕೊಂಡಂತಹ ಅಥವಾ ಮಾಡಿಕೊಂಡ ಅಥವಾ ಮಾಡಿಕೊಟ್ಟಂತೆ ಗೊಂಬೆಗಳು ಅಂತ್ಯ ಕಾಣುವುದಕ್ಕೆ ಹಲವು ಶತಮಾನಗಳು ಹಿಡಿದಾವು. ಮಾಡಿಸಿಕೊಟ್ಟ ತೊಗಲುಗೊಂಬೆಗಳಾಗಲಿ ಅಥವಾ ಮರದ ಗೊಂಬೆಗಳಾಗಲಿ ಇವುಗಳನ್ನು ಎಂದಿಗೂ ಶಾಶ್ವತವಾಗಿ ಉಳಿಸಿಕೊಳ್ಳಬಾರದು, ಉಳಿಸಿಕೊಳ್ಳುವುದಾದರೆ ಅವುಗಳನ್ನು ತಮ್ಮ ಮನೆಯ ಮಕ್ಕಳಂತೆ ನೋಡಿಕೊಳ್ಳಬೇಕು ಎನ್ನುವ ನಂಬಿಕೆಯೂ ಜನಪದ ಕಲಾವಿದರಲ್ಲಿದೆ. ಇಂದು ಜನ ಜಾಗೃತಗೊಂಡಿದ್ದಾರೆ, ಹಿಂದಿನ ಮೂಢನಂಬಿಕೆಯ ಪ್ರಕಾರ ಮಾಡಿಟ್ಟ ಅಥವಾ ಮಾಡಿಸಿಕೊಟ್ಟಂತಹ ಗೊಂಬೆಗಳನ್ನು ನೀರಿನಲ್ಲಿ ಅಥವಾ ಬೆಂಕಿಯಲ್ಲಿ ವಿಸರ್ಜಿಸಲು ಆಸಕ್ತಿ ತೋರದೆ ಸಂರಕ್ಷಣೆ ಮಾಡಬಲ್ಲ ವಸ್ತು-ಸಂಗ್ರಹಾಲಯಗಳಿಗೆ ಕೊಡುತ್ತಿರುವುದನ್ನು ಗಮನಿಸಬಹುದಾಗಿದೆ. ಗೊಂಬೆಗಳು ಅಥವಾ ಗೊಂಬೆಯಾಟದ ಚಿತ್ರಕಲೆ ವಿಸರ್ಜನೆಗೊಳ್ಳುವುದು ಅಥವಾ ಅಂತ್ಯವಾಗುವುದು ಒಂದು ದೀರ್ಘಕಾಲದ ನಡೆ ಇದ್ದಹಾಗೆ. ಕೆಲವೊಮ್ಮೆ ಯಾವುದಾದರೂ ಪ್ರಾಕೃತಿಕ ಅವಗಡಗಳಿಂದ ಈ ನಡೆ ತಪ್ಪಿದಾಗ ಗೊಂಬೆಯಾಟ ಪರಂಪರೆ ಸ್ಥಗಿತಗೊಳ್ಳಬಹುದು, ಭಿನ್ನವಾಗಿದ್ದರೆ, ಅಥವಾ ಉಪಯೋಗಕ್ಕೆ ಬಾರದ ಸ್ಥಿತಿಯಲ್ಲಿ ಗೊಂಬೆಗಳಿದ್ದರೆ ಅವುಗಳಿಗೆ ಮನುಷ್ಯರಿಗೆ ಮಾಡುವ ಸಂಸ್ಕಾರದ ವಿಧಿಗಳನ್ನು ಸಾಂಕೇತಿಕವಾಗಿ ನಡೆಸುತ್ತಾರೆ. ಇಂತಹ ಒಂದು ಸಾಂಸ್ಕೃತಿಕ ವಿಧಿನಿಯಮಗಳಿಂದಾಗಿ ಕೆಲವು ಜನವರ್ಗದವರು ಗೊಂಬೆಯಾಟವನ್ನು ತ್ಯಜಿಸಿದರು, ಕೆಲವರು ವಾಂಶಿಕ ಕಲೆಯನ್ನು ಮುಂದುವರೆಸಿದರು, ಇನ್ನು ಕೆಲವರು ಕಲೆಯ ಮೇಲಿನ ಆಸಕ್ತಿಯಿಂದಾಗಿ ಸಂವಹನ ಮಾಧ್ಯಮಕ್ಕೆ ಗೊಂಬೆಯಾಟ ಪ್ರಕಾರವು ಒಂದು ಉತ್ತಮ ಮಾದರಿ ಎನ್ನುವ ನಿಲುವಿನಿಂದ ಹೊಸ ಪ್ರಯೋಗಗಳನ್ನು ಮಾಡತೊಡಗಿದರು. ಕಲಾ ಪ್ರಕಾರಗಳು ಮುಖ್ಯವಾಗಿ ಆರಂಭದಲ್ಲಿ ಭಕ್ತಿ ಪ್ರಚಾರಕ್ಕೆ ಪೂರಕವಾಗಿ ಅಭಿವ್ಯಕ್ತಿಸಲ್ಪಟ್ಟು ಕ್ರಮೇಣ ಹೊಸ ಚಿಂತನೆಗಳನ್ನು ಸಾದರಪಡಿಸಲು ಈ ಮಾಧ್ಯಮವನ್ನು ಬಳಸಿಕೊಳ್ಳಲಾಯಿತು. ದಕ್ಷಿಣ ಭಾರತದಲ್ಲಿ ಮುಖ್ಯವಾಗಿ ತೊಗಲು ಗೊಂಬೆಯಾಟಕಾರರು ಗ್ರಾಮ ಪ್ರವೇಶಿಸಿದರೆ ಸಾಕ್ಷಾತ್ ದೇವರ ಪ್ರತಿನಿಧಿಗಳೆಂದು ಗ್ರಾಮದ ಸದಸ್ಯರುಗಳು ಭಾವಿಸುತ್ತಾ ಬಂದಿರುವರು. ಉದಾ: ಅಲೆಮಾರಿ ಜನವರ್ಗದವರೆಂದು ಒಂದು ಕಾಲದಲ್ಲಿ ಗುರುತಿಸಲ್ಪಟ್ಟ ತೊಗಲು ಗೊಂಬೆಯಾಟ ಪರಂಪರೆಯ ಕಿಳ್ಳಿಕ್ಯಾತ ಜನವರ್ಗದವರು ಊರೊಳಗೆ ಪ್ರದರ್ಶನ ನೀಡಲು ಅಡಿಯಿಟ್ಟರೆ ಅವರುಗಳು ಒಲೆ ಹಚ್ಚಬಾರದು. ಪ್ರದರ್ಶನದ ತರುವಾಯ ಅವರ ಸಾಂಸ್ಕೃತಿಕ ಬದುಕಿನಂತೆ ನಡೆಯಬಹುದು. ಗೊಂಬೆಯಾಟದವರನ್ನು ಸಾಕ್ಷಾತ್ ದೇವರ ಪ್ರತಿನಿಧಿಗಳು ಎಂಬುದಾಗಿ ಜನ ಇಂದಿಗೂ ನಂಬಿದ್ದಾರೆ. ಹಳ್ಳಿಗಳಲ್ಲಿ ಸರಿಯಾಗಿ ಮಳೆ-ಬೆಳೆ ಬಾರದೇ ಹೋದರೆ ಗೊಂಬೆಯಾಟದವರನ್ನು ಕರೆಯಿಸಿ

ಆಚರಣಾತ್ಮಕವಾಗಿ ಪ್ರದರ್ಶನ ಕೊಡುವಂತಹ ವ್ಯವಸ್ಥೆಯನ್ನು ಗ್ರಾಮಸ್ಥರು ನೋಡಿಕೊಳ್ಳುವರು. ಜನರ ನಂಬಿಕೆಯ ಆಧಾರದಿಂದ ಗೊಂಬೆಯಾಟದಂತಹ ಪ್ರದರ್ಶನಗಳು ಇಂದಿಗೂ ಕೆಲವೇ ಹಳ್ಳಿ ಪ್ರದೇಶಗಳಲ್ಲಿ ಉಳಿದಿದೆ ಹೊರತು ಮನರಂಜನೆಗಾಗಿ ಈ ಪ್ರಕಾರ ಉಳಿದಿದೆ ಎನ್ನುವುದು ಕೇವಲ ತೋರಿಕೆಯ ಮಾತಾದೀತು. ಉದಾ:- ಸಂತಾನ ಪ್ರಾಪ್ತಿಯಾಗದಿದ್ದಲ್ಲಿ ಲವ-ಕುಶ ಪ್ರದರ್ಶನಗಳನ್ನು ಸೂತ್ರದ ಗೊಂಬೆಯಾಟದ ಮೂಲಕ ನಡೆಸುತ್ತಿದ್ದರು. ಇದೇ ಆಚರಣೆಯ ಅಂಶಗಳನ್ನು ಪಶ್ಚಿಮ ಬಂಗಾಲದಲ್ಲಿಯೂ ಕಾಣಬಹುದಾಗಿದೆ. ಕರ್ನಾಟಕದಲ್ಲಿ ಮುಖ್ಯವಾಗಿ ಹಾಸನ, ಮಂಡ್ಯ, ತುಮಕೂರು - ಈ ಭಾಗಗಳಲ್ಲಿನ ಗ್ರಾಮದ ಹಿರಿಯರು (ಗೌಡ ಜನ ವರ್ಗ) ಸತ್ತರೆ ಅಪರಕರ್ಮದ ಕೊನೆಯ ದಿನದಂದು ತೊಗಲುಗೊಂಬೆಯಾಟದವರನ್ನು ಕರೆಯಿಸಿ ಸ್ವರ್ಗಾರೋಹಣ ಕಥೆ ನಡೆಸಿಕೊಡುವಂತೆ ಗೊಂಬೆಯಾಟಕಾರರಲ್ಲಿ ಗ್ರಾಮಸ್ಥರು ವಿನಂತಿಸಿಕೊಳ್ಳುವರು. ಇದರಿಂದ ಸತ್ತಂತಹ ವ್ಯಕ್ತಿಗೆ ಸ್ವರ್ಗ ಪ್ರಾಪ್ತಿ ಎನ್ನುವ ಬಲವಾದ ನಂಬಿಕೆ ಜನರಲ್ಲಿ ಇದೆ. ಮಾಟ-ಮಂತ್ರ, ದೆವ್ವ-ಗಾಳಿ, ಶಂಕೆ ಮುಂತಾದ ದುಷ್ಟ ಶಕ್ತಿಗಳನ್ನು ಹೊಡೆದೋಡಿಸಲು ಗೊಂಬೆಗಳನ್ನು ಬಳಸುವರು. ಉದಾ:- ಇಂಡೋನೇಷ್ಯಾದಲ್ಲಿ (ನೋಡಿ ಟಿಪ್ಪಣಿ - ೨) ಭೂತ-ಪ್ರೇತ ಉಚ್ಚಾಟನೆಗೆ ದಲಾಂಗ್ (ಗೊಂಬೆಯಾಟಕಾರರು) ಇವರುಗಳ ಮೂಲಕ ಆಚರಣೆ ನಡೆಸಿದರೆ ಕರ್ನಾಟಕದ ಹಾಸನ ಜಿಲ್ಲೆಯಲ್ಲಿಯೂ ಇಲ್ಲಿನ ಗೊಂಬೆಯಾಟ ಕಾರರು ಭೂತೋಚ್ಚಾಟನೆ ಮಾಡುವಲ್ಲಿ ತೊಗಲುಗೊಂಬೆಗಳ ಚಿತ್ರಗಳನ್ನು ಬಳಸಿ ಪ್ರೇತಾತ್ಮ ಶಕ್ತಿಗಳನ್ನು ಉಚ್ಚಾಟಿಸಬಲ್ಲರು. ಒಟ್ಟಿನಲ್ಲಿ ಗೊಂಬೆಗಳ ಚಿತ್ರಗಳ ಮೂಲಕ ಮನುಷ್ಯ ತಾನು ನೇರವಾಗಿ ಮಾಡಬಹುದಾದ ಕಾರ್ಯದಲ್ಲಿ ತೊಂದರೆಯಾಗಿ ತನಗೇ ಪಾಪ-ಭೀತಿ ತಗಲಬಹು ದೆಂದು ಭಯದಿಂದ ಪರೋಕ್ಷವಾಗಿ ಗೊಂಬೆಗಳ ಮೂಲಕ ಆಚರಣೆಗಳನ್ನು ನಡೆಸುತ್ತಾ ಬಂದಿರುವುದಕ್ಕೆ ಪ್ರಪಂಚದ ಅನೇಕ ಸಮಾಜದ ಜನವರ್ಗದವರಲ್ಲಿ ಇಂದಿಗೂ ಅನೇಕ ದೃಷ್ಟಾಂತಗಳಿವೆ.

ಗೊಂಬೆಯಾಟವನ್ನು ವಸ್ತು ವಿಶೇಷತೆಯ ದೃಷ್ಟಿಯಿಂದ ಮುಖ್ಯವಾಗಿ ಈ ಕೆಳಕಂಡಂತೆ ಗುರುತಿಸಬಹುದು.

೧. ತೊಗಲು ಗೊಂಬೆಯಾಟ
೨. ಸೂತ್ರದ ಗೊಂಬೆಯಾಟ (ನೋಡಿ ಟಿಪ್ಪಣಿ - ೧)
೩. ಕಂಚಿನ ಗೊಂಬೆಯಾಟ
೪. ಕೈ-ಗೊಂಬೆಯಾಟ (ಗಂಗೆ ಗೌರಿ ಅಥವಾ ತಾರಮಯ್ಯ ಗೊಂಬೆಗಳು)
೫. ಕೀಲು ಗೊಂಬೆಯಾಟ
೬. ಕಿಳ್ಳಿಬಾವಲಿಕೇಲ್ (ಕಾಗದ/ಮರದ ತೊಗಟೆಗಳಿಂದ ಮಾಡಲ್ಪಟ್ಟ ಗೊಂಬೆಗಳು)
(ಹೆಚ್ಚಿನ ವಿವರಗಳಿಗೆ ನೋಡಿ : ಕೃಷ್ಣಯ್ಯ ಎಸ್.ಎ. ಪು. ೧೪)

ಕಂಚಿನ ಗೊಂಬೆಯಾಟ, ಕೈ-ಗೊಂಬೆಯಾಟ, ಕೀಲು ಗೊಂಬೆಯಾಟ ಹಾಗೂ ಕಿಳ್ಳಿ ಬಾವಲಿ ಕೇಲ್ - ಈ ಪ್ರಕಾರಗಳು ಇಂದು ಕಣ್ಮರೆಯಾಗಿದೆ. ಕೀಲು ಗೊಂಬೆಯಾಟದ ಮಾದರಿಯನ್ನು ಮೈಸೂರು ವಿಶ್ವ ವಿದ್ಯಾನಿಲಯದಲ್ಲಿನ ಜಾನಪದ ವಸ್ತು ಸಂಗ್ರಹಾಲಯದಲ್ಲಿ ಕಾಣಬಹುದಾಗಿದೆ. ಕೈ-ಗೊಂಬೆಯಾಟ ಪ್ರಕಾರವು ಪ್ರಸ್ತುತ ಅನಂತಪುರ ಜಿಲ್ಲೆಯಲ್ಲಿನ ಹಳ್ಳಿಗಳಲ್ಲಿ

ಒಂದೆರಡು ಕುಟುಂಬದವರಲ್ಲಿ ಇದೆ ಎಂಬುದಾಗಿ ಪ್ರೊ.ಶೇಷಶಾಸ್ತ್ರಿ ಇವರ ಸಂಶೋಧನೆಯಿಂದ ತಿಳಿದುಬಂದಿದೆ.

ಕರ್ನಾಟಕದಲ್ಲಿ ಕಿಳ್ಳೆಕ್ಯಾತ ಅಥವಾ ಗೊಂಬೆರಾಮ ಈ ಜನವರ್ಗದವರಲ್ಲಿ ತೊಗಲು ಗೊಂಬೆಯಾಟ ಪ್ರಕಾರವು ಹೆಚ್ಚು ಪ್ರಚಲಿತದಲ್ಲಿದ್ದರೆ ಸೂತ್ರದ ಗೊಂಬೆಯಾಟ ಶೇಕಡ ೯೦ ರಷ್ಟು ವಿಶ್ವ-ಕರ್ಮ ಜನವರ್ಗದವರಲ್ಲಿ ಒಂದು ಕಲೆಯಾಗಿ ಹಾಗೂ ಕಸುಬಾಗಿ ಉಳಿದಿದೆ. ಉತ್ತರ ಭಾರತದಲ್ಲಿ ಮುಖ್ಯವಾಗಿ ರಾಜಸ್ಥಾನದಲ್ಲಿ ಸೂತ್ರದ ಗೊಂಬೆಯಾಟವು ಬಳಾಯೋಂಕೆ ನಟ್ ಎನ್ನುವ ಈ ಜನವರ್ಗದಲ್ಲಿದ್ದು ಮೂಲತಃ ಇವರು ಡೊಂಬ ವಿದ್ಯೆ ಮಾಡುವುದರಲ್ಲಿ ನಿಷ್ಣಾತರಾಗಿದ್ದವರು.

ಆಂಗ್ಲ ಭಾಷೆಯಲ್ಲಿ ಕರೆಯುವ PUPPET ಶಬ್ದವು ಸಂಸ್ಕೃತದಲ್ಲಿ ಸಿಗುವ 'ಪುತ್ರಿಕಾ', 'ದುಹಿತರಿಕಾ', 'ಪುತ್ತಳಿ', 'ಪುತ್ತಲಿಕಾ' ಇವೆಲ್ಲವೂ ತಿಳಿಸುವ ಅರ್ಥ, 'ಕಿರಿಯಮಗಳು/ಕಿರಿಯ ಪುತ್ರಿ (Little Daughter) ಎಂಬುದಾಗಿಯೂ ಸಂಸ್ಕೃತದಲ್ಲಿ ಗೊಂಬೆಯಾಟಕ್ಕೆ 'ಪುತ್ತಲಿ ಕ್ರೀಡೆ' ಎಂದು ಕರೆಯಲಾಗಿದೆ. 'ಪುತ್ತಲಿಕ ಅಥವಾ ಪುತ್ತಿಕ' ಎಂದರೆ ಜೀವ ಇರುವ ಬಾಲಕ ಎಂಬುದಾಗಿ ಡಾ. ಕಮಲಾ ದೇವಿ ಚಟ್ಟೋಪಾಧ್ಯಾಯ ತಿಳಿಸಿರುವರು. ಇದೇ ಅಭಿಪ್ರಾಯವನ್ನು ವಿದ್ವಾಂಸರಾದ ಮೊನಿಯರ್ ವಿಲಿಯಂ (೧೮೯೯-ಪು . ೬೩೩) ಅಭಿಪ್ರಾಯಿಸುತ್ತಾ ಪುತ್ರಿಕಾ ಎನ್ನುವುದು ತನ್ನ ವಂಶದ ಬೆಳವಣಿಗೆಗೆ ಪುತ್ರ ಸಂತಾನ ಕೊಡಬಲ್ಲ ಮಗಳು (ಪುತ್ರಿಕಾ) ಎನ್ನುವ ಅರ್ಥ ವ್ಯಾಖ್ಯೆಯನ್ನು ನೀಡಿರುವರು. ಈ ಪದ ಬಳಕೆಯನ್ನು ಮಹಾಭಾರತ ಕಾವ್ಯದಲ್ಲಿ ಬರುವ ಚಿತ್ರಾಂಗದ-ಅರ್ಜುನ ಪ್ರಸಂಗದಲ್ಲಿ ಉಲ್ಲೇಖವಾಗಿದ್ದುದನ್ನು ಗೊಂಬೆಯಾಟದ ಮತ್ತೋರ್ವ ವಿದ್ವಾಂಸ ಮೇಲ್ ಹೆಲಿಸ್ಟನ್ ಉಲ್ಲೇಖಿಸಿರುವರು. (ಮೆಲ್ ಹೆಲಿಸ್ಟನ್ - ೧೯೮೬, ಪು.-೪) ಕಲೆ-ವಿಮರ್ಶೆಗೆ ಹೆಸರಾದ ಕುಮಾರಸ್ವಾಮಿ ಇವರು (೧೯೨೯, ಪು ೧೮೨-೩) ತಿಳಿಸುವಂತೆ ಪಾಣಿನಿ (ಕಾಲ ಸುಮಾರು ಕ್ರಿಪೂ ೫ನೇ ಶತಮಾನ) ಇವರ ವ್ಯಾಕರಣ ಕೃತಿಗಳಲ್ಲಿ ಪುತ್ರಿಕ ಪದ ಪ್ರಯೋಗವಾದುದನ್ನು ತಿಳಿಸಿರುವರು. ಪತಂಜಲಿಯ ಮಹಾಭಾಷ್ಯದಲ್ಲಿ (ಕಾಲ : ಸುಮಾರು ಕ್ರಿಸ್ತ ಪೂರ್ವ ಐದನೇ ಶತಮಾನ) 'ಸೂತ್ರಧಾರ' ಎನ್ನುವ ಪದ ಗೊಂಬೆಯಾಟವನ್ನು ಕುರಿತಾಗಿ ಹೇಳಿರುವುದನ್ನೂ ಗಮನಿಸಬಹುದಾಗಿದೆ. (ಎಸ್.ಎ.ಕೃಷ್ಣಯ್ಯ, ೧೯೮೮-ಪು.೩). ಪ್ರಾಚೀನ ಕೃತಿಗಳಲ್ಲಿ ಒಂದಾದ ಗುಣಾಢ್ಯನ (ಕಾಲ ಸುಮಾರು ೫ ಅಥವಾ ೬-ನೇ ಶತಮಾನ) ಬೃಹತ್ ಕಥಾ ಭಾಗದಲ್ಲಿ ಒಂದು ಹೆಣ್ಣು ಗೊಂಬೆ ಇತರೆ ಗೊಂಬೆಗಳೊಂದಿಗೆ ನೃತ್ಯ-ರಂಜನೆ ನೀಡುತ್ತಾ ಸಂವಾದ ನಡೆಸುವ ಬಗ್ಗೆ ಪ್ರಸ್ತಾಪಿಸಲಾಗಿದೆ.

### ತೊಗಲು ಗೊಂಬೆಯಾಟದ ಪ್ರಾಚೀನತೆ

ತೊಗಲು ಗೊಂಬೆಯಾಟದ ಪ್ರಾಚೀನತೆಯನ್ನು ಭಗವದ್ಗೀತೆ ಕಾಲಕ್ಕೆ ಅಂದರೆ ಕ್ರಿಪೂ. ೩೦೦೦ ವರ್ಷಗಳಷ್ಟು ಹಿಂದೆ ಕೊಂಡೊಯ್ಯಬಹುದಾಗಿದೆ. ತೊಗಲು ಗೊಂಬೆಯಾಟವನ್ನು ನೆರಳು ಗೊಂಬೆಯಾಟವೆಂದು ಕರೆದಿರುವ ಪಿಶ್ಚಲ್ - ಅವರು ಸಂಸ್ಕೃತದ ಮಹಾನಾಟಕ ರಚನೆ ನೆರಳು ಗೊಂಬೆಯಾಟಕ್ಕೆಂದೇ ಬರೆದಿರುವುದಾಗಿ ತಿಳಿಸಿರುವರು. ಚೈನಾ ದೇಶದ

ದಂತಕತೆ ಪ್ರಕಾರ ಕ್ರಿಪೂ. ೧೫೦ ವರ್ಷಗಳ ಹಿಂದೆ ಹನ್ ರಾಜ್ಯಾಡಳಿತದ ಕಾಲದಲ್ಲಿ ವುಟಿ ಎಂಬ ದೊರೆ ಇದ್ದನಂತೆ. ಒಂದು ದಿನ ಈ ದೊರೆಯ ಪ್ರಿಯತಮೆ ತೀರಿ ಹೋದಳೆಂದು ದೊರೆ ತೀರ ವ್ಯಸನಪೀಡಿತನಾಗಿ ತನ್ನ ಆಸ್ಥಾನದ ಮಾಟಗಾರರನ್ನು ಕರೆಸಿ ತನ್ನ ಪ್ರಿಯತಮೆಯ ಚೈತನ್ಯವನ್ನು (ಜೀವಾತ್ಮ) ಪುನಃ ತರುವಂತೆ ಕಟ್ಟಾಜ್ಞೆ ಮಾಡಿದನು. ಮಾಟಗಾರನು ಒಂದು ಕತ್ತಲೆಯ ಕೊಠಡಿಯಲ್ಲಿ ಆಧಾರದ ಮೇಲೆ ಹಾಗೂ ವುಟಿ ಎನ್ನುವ ಐತಿಹಾಸಿಕ ದೊರೆ ಇದ್ದನೆಂಬುದು ಇತಿಹಾಸ ಪುರಾವೆ ನೀಡುವುದನ್ನು ಸಮರ್ಥಿಸಿ ಚೈನಾ ದೇಶ ಗೊಂಬೆಯಾಟದ ತವರೂರು ಎನ್ನುವ ಖ್ಯಾತಿಗೆ ಒಳಗಾಗಿದೆ ಎನ್ನುವುದು ವಿದ್ವಾಂಸರ ಅಭಿಪ್ರಾಯ.

ಪ್ರಸ್ತುತ ಅಧ್ಯಯನಕಾರರು ಗುರುತಿಸಿರುವಂತೆ ಅತ್ಯಂತ ಪ್ರಾಚೀನ ಗೊಂಬೆಯಾಟವೆಂದರೆ 'ನೆರಳು ಗೊಂಬೆಯಾಟ' ಅಥವಾ ತೊಗಲು ಗೊಂಬೆಯಾಟ. ಕರ್ನಾಟಕ, ಮಹಾರಾಷ್ಟ್ರ, ತಮಿಳುನಾಡು, ಆಂಧ್ರಪ್ರದೇಶ, ಕೇರಳ, ಒರಿಸ್ಸಾ ಈ ಎಲ್ಲಾ ರಾಜ್ಯಗಳಲ್ಲಿ ತೊಗಲು ಗೊಂಬೆಯಾಟವು ಇಂದಿಗೂ ಪ್ರಚಲಿತದಲ್ಲಿದೆ. ಒರಿಸ್ಸಾ ಹಾಗೂ ಕೇರಳ ರಾಜ್ಯ ಹೊರತು ಪಡಿಸಿ ಉಳಿದ ಎಲ್ಲಾ ರಾಜ್ಯಗಳಲ್ಲಿ ತೊಗಲುಗೊಂಬೆಯಾಟ ನಡೆಸುವವರು ಅರೆ ಮರಾಠಿ ಮಾತನಾಡುವ ಕ್ಷತ್ರಿಯ ಕುಲ ವರ್ಗದವರು. ಕರ್ನಾಟಕದಲ್ಲಿ ತೊಗಲುಗೊಂಬೆಯಾಟದವರನ್ನು ಗೊಂಬೆರಾಮ, ಕಿಳ್ಳೆಕ್ಯಾತ, ಕಟುಬು ಜ್ಯಾತ, ಸಿಳ್ಳೆಕ್ಯಾತ ಎಂದು ಕರೆಯುವರು. ಮಹಾರಾಷ್ಟ್ರದಲ್ಲಿ ಈ ಕಲಾವಿದರನ್ನು ಟಾಕರ್ ಲೋಗ್ ಎಂದೂ ಗೊಂಬೆಯಾಟವನ್ನು 'ಚಮಡಾಚೆ ಬಾವಲಿ ಕೇಲ್' ಎಂದು ಕರೆದಿರುವರು. ತಮಿಳುನಾಡಿನಲ್ಲಿ 'ತೋಲ್ ಪಾವೈ ಕೂತ್ತು', ಆಂಧ್ರಪ್ರದೇಶದಲ್ಲಿ 'ತೋಲು ಬೊಮ್ಮಲಾಟಂ' ಎಂಬುದಾಗಿಯೂ ಕೇರಳದಲ್ಲಿ 'ತೌಲ್ ಪಾವೈ ಕೂತ್ತು' ಎಂಬುದಾಗಿ ಜನಮನ್ನಣೆ ಪಡೆದಿದೆ. ಉತ್ತರ ಭಾರತದ ಒಂದು ಭಾಗವಾದ ಒರಿಸ್ಸಾ ಪ್ರಾಂತ್ಯದಲ್ಲಿ ತೊಗಲು ಗೊಂಬೆಯಾಟ ಪ್ರಕಾರವನ್ನು 'ರಾವಣ ಛಾಯ' ಎಂದು ಕರೆದಿರುವರು.

### ಕರ್ನಾಟಕದ ತೊಗಲು ಗೊಂಬೆಯಾಟ

ಕರ್ನಾಟಕದಲ್ಲಿ ತೊಗಲು ಗೊಂಬೆಯಾಟದ ಬಗ್ಗೆ ಹೆಚ್ಚಿನ ಅಧ್ಯಯನ ನಡೆಸಿರುವವರಲ್ಲಿ ಮುಖ್ಯವಾಗಿ ದಿ. ಪ್ರೊ. ಜೀ.ಶಂ. ಪರಮಶಿವಯ್ಯ, ಡಾ. ನಂ. ತಪಸ್ವಿ ಕುಮಾರ್, ಮೈಸೂರು ವಿ.ವಿ. ವಸ್ತು ಸಂಗ್ರಹಾಲಯದ ಕ್ಯುರೇಟರ್ ಆಗಿದ್ದ ದಿ. ಪಿ.ಆರ್. ತಿಪ್ಪೇಸ್ವಾಮಿ, ದಿ. ಗೊರೂರು ರಾಮಸ್ವಾಮಿ ಐಯ್ಯಂಗಾರ್ ಮುಂತಾದವರು. ಪ್ರಸ್ತುತ ೧೯೮೨-ರ ಬಳಿಕ ತೊಗಲು ಗೊಂಬೆಯಾಟದಲ್ಲಿ ಹೆಚ್ಚಿನ ಸಂಶೋಧನೆ ನಡೆಸಿದವರಲ್ಲಿ ಮುಖ್ಯವಾಗಿ ಸಂಶೋಧಕ ಎಸ್.ಎ. ಕೃಷ್ಣಯ್ಯ (೧೯೮೮), ಡಾ. ಗೋವಿಂದ ರಾಜು (೧೯೯೩), ಶ್ರೀ ಹಿ.ಚಿ. ಬೋರಲಿಂಗಯ್ಯ ಹಾಗೂ ದಿ. ಎಂ.ಎಸ್. ನಂಜುಂಡರಾವ್(೨೦೦೦) ಮುಂತಾದವರು. ಇತ್ತೀಚಿಗೆ ಎಂ.ಎಸ್. ನಂಜುಂಡರಾವ್ ಇವರು ಹೊರತಂದ ಕೃತಿ 'ಕರ್ನಾಟಕ ತೊಗಲು ಗೊಂಬೆ' ಗೊಂಬೆಯಾಟದ ಸಮಗ್ರ ಚಿತ್ರಗಳ ಮೂಲಕ ಅಚ್ಚುಟ್ಟಾಗಿ ಹೊರಬಂದಿರುವ ಈ ಕೃತಿಯನ್ನು ಕೈಗೆತ್ತಿಕೊಳ್ಳುವ ಮೊದಲ ಓದುಗರಿಗೆ ಅಪೂರ್ವಲೋಕವನ್ನು ತೆರೆದಿಡುವಂತಹ ಮಾದರಿಯಲ್ಲಿ ಬಹು ಸಂಖ್ಯೆಗಳ ವರ್ಣಚಿತ್ರಗಳು, ಛಾಯಾಚಿತ್ರಗಳು ತೊಗಲು ಗೊಂಬೆಯಾಟದ ಬಗ್ಗೆ ಕುತುಹಲವನ್ನು ಮೂಡಿಸುವುದು. ಈ ಕೃತಿಯಲ್ಲಿ ನೀಡಿರುವ ಅನೇಕ ವಿಷಯಗಳನ್ನು ಹೆಸರಿಸಲೇಬೇಕಾದ ಎರಡು ಕೃತಿಗಳಿಂದ ಎಂ.ಎಸ್. ನಂಜುಂಡರಾವ್ ಇವರು ಪಡೆದಿದ್ದಾರೆ. ಅವುಗಳಲ್ಲಿ

ಮುಖ್ಯವಾಗಿ ದಿ. ಮೆಲ್ ಹೆಲಿಸ್ಟನ್ ಇವರ ಕೃತಿ The Asian Puppets Wall of The World (1976-79) ಮತ್ತು ಎಸ್.ಎ. ಕೃಷ್ಣಯ್ಯ ಇವರ Karnataka Puppetry (1988) ಈ ಕೃತಿಗಳ ಸಂಪನ್ಮೂಲತೆಯ ವಿಷಯಗಳನ್ನು ತಮ್ಮದೇ ಶೈಲಿಯಲ್ಲಿ ಬಳಸಿಕೊಂಡಿರುವುದನ್ನು ಗಮನಿಸಬಹುದಾಗಿದೆ. ಶ್ರೀ ಎಂ.ಎಸ್. ನಂಜುಂಡರಾವ್ ಇವರು ಓರ್ವ ಚಿತ್ರಕಾರರಾಗಿ, ವಿದ್ವಾಂಸರಾಗಿ ಮತ್ತು ಸಂಘಟನಕಾರರಾಗಿ ತಮ್ಮ ಕ್ಷೇತ್ರಕಾರ್ಯದ ಅನುಭವ ಮತ್ತು ಕಲಾ ಇತಿಹಾಸದ ಪರಂಪರೆಯಿಂದ ಈ ಕೃತಿ ಮೌಲಿಕವಾದುದ್ದಾಗಿದೆ. ಪರಂಪರೆಯ ಗೊಂಬೆಯಾಟಕ್ಕೆ ಸಂಬಂಧಿಸಿದಂತೆ ಹಾಗೂ ಚಿತ್ರಗಾರಿಕೆಯಲ್ಲಿ ಸಂಶೋಧನಾ ವ್ಯಾಸಂಗ ನಡೆಸಲು ಉತ್ತಮ ತಳಪಾಯವನ್ನು ಕಟ್ಟಿಕೊಡುವ ಅನೇಕ ಮಾಹಿತಿಗಳನ್ನು ಈ ಕೃತಿ ಕೊಡಬಲ್ಲದು.

ತೊಗಲು ಗೊಂಬೆಯಾಟದವರನ್ನು ಕಿಳ್ಳೆಕ್ಯಾತ, ಸಿಳ್ಳೇಕ್ಯಾತ, ಕಟುಬುಜ್ಯಾತ, ಕೋಲುಕ್ಯಾತ, ಅಸ್ತ್ರೀ ಕ್ಯಾತ, ಕಲಿಕ್ಯಾತ, ಬುಂಡೇಕ್ಯಾತ ಹೀಗೆ ಅನೇಕ ಹೆಸರುಗಳಿಂದ ಕರೆಯುತ್ತಾರೆ. ಇವರು ರಾಮಾಯಣದಲ್ಲಿ ಬರುವ ಗುಹನ (ಅಂಬಿಗ) ವಂಶಕ್ಕೆ ಸೇರಿದವರೆಂದೂ, ಗೊಂಬೆಯಾಟ ಕುಲಕಸುಬಾಗಿ ಉಳಿಯಲು ಶ್ರೀ ರಾಮನ ಶಾಪ ಕಾರಣವೆಂದೂ ತಿಳಿದಿರುವರು. ಈ ಸಂಬಂಧವಾಗಿ ಗೊಂಬೆರಾಮ ಎಂಬ ಹೆಸರು ಬರಲು ಈ ವಂಶಜರ ಹಿಂದಿನವರು ಶ್ರೀರಾಮ, ಸೀತ ಹಾಗೂ ಲಕ್ಷ್ಮಣ ಇವರುಗಳನ್ನು ಗಂಗಾನದಿಯ ತಟಾಕದಲ್ಲಿ ದೋಣಿ ಮೂಲಕ ಮತ್ತೊಂದು ದಡ ಸೇರಿಸಿದ್ದರಂತೆ. ಈ ಕಾರಣಕ್ಕಾಗಿ ಶ್ರೀರಾಮ ಸ್ವರ್ಗಾರೋಹಣ ಸಂದರ್ಭದಲ್ಲಿ ಗುಹ ಬಂದು ತನ್ನ ಜೀವನಾಧಾರಕ್ಕೆ ಕಾಯಕ ಕೊಡುವಂತೆ ಕೋರಿದನು. ಈ ಸಂದರ್ಭದಲ್ಲಿ ಸೀತಾದೇವಿ ತನ್ನಲ್ಲಿ ಗುಪ್ತವಾಗಿ ಇರಿಸಿಕೊಂಡಿದ್ದ ಚರ್ಮದ ಗೊಂಬೆಯನ್ನು ಅಳುಕಿನಿಂದ ತಂದು ತ್ರಿಕರಣ ಶುದ್ಧಳಾಗಲು ಅಪ್ಪಣೆ ಕೇಳುವಳು. ಶೂರ್ಪನಖಿ ರಚಿಸಿಕೊಟ್ಟ ರಾವಣ ರೂಪದ ಚರ್ಮದ ಪಟವನ್ನು ಭಯದಿಂದ ಅಡಗಿಸಿಟ್ಟದ್ದಾಗಿ ಸೀತಾಮಾತೆ ಶ್ರೀರಾಮನಲ್ಲಿ ಅರಿಕೆ ಮಾಡಿಕೊಂಡಾಗ ಕೂಡಲೇ ಶ್ರೀರಾಮನು ಚರ್ಮಪಟವನ್ನು ಕತ್ತರಿಸಿ ಸಂಹರಿಸುವನು. ಇದೇ ಸಂದರ್ಭದಲ್ಲಿ ಗುಹ ಬಂದು ಕಾಯಕ ಕೇಳಿದಾಗ ಹರಿದು ಹೋದ ಗೊಂಬೆಯನ್ನು ಸರಿ ಮಾಡಿಕೊಂಡು ಗೊಂಬೆಗಳ ಮೂಲಕ ರಾಮಾಮೃತ ಕಥಾ ಸಾರವನ್ನು ಜನರಿಗೆ ತಿಳಿಸು ಎಂದು ಹೇಳಿದನಂತೆ. ಹರಿದು ಹೋದ ಗೊಂಬೆಯಿಂದ ಗೊಂಬೆಯಾಟ ಹೇಗೆ ಸಾಧ್ಯ ಎಂದು ಗುಹ ಕೇಳಿದಾಗ ಶ್ರೀರಾಮ ಹೇಳಿದನಂತೆ; ನಿನ್ನ ದೇಹದ ಮೇಲೆ ಧಾರಣೆಯಾಗಿರುವ ಉಪವೀತವನ್ನು ಹರಿದು ಸರಿಪಡಿಸಿಕೊಂಡು ಕಥಾಮೃತ ನಡೆಸು ಎಂದನಂತೆ. ಹೀಗೆ ಗೊಂಬೆಯಾಟದವರುಗಳಿಗೆ ಆರಂಭದಲ್ಲಿ ಜುಟ್ಟು-ಜನಿವಾರ ಎರಡೂ ಇದ್ದು ಈ ಒಂದು ಕಾರಣದಿಂದಾಗಿ ಜನಿವಾರ ಕಳೆದುಕೊಂಡು ಗೊಂಬೆಯಾಟ ವೃತ್ತಿ ಮಾಡತೊಡಗಿದರು. ಶ್ರೀರಾಮನ ಆಶೀರ್ವಾದದ ಕೃಪೆಯಿಂದ ದೊರೆತ ಗೊಂಬೆಯಾಟ ಪ್ರದರ್ಶನ ಮಾಡಲು ಹೊರಟ ಇವರುಗಳು ಕ್ರಮೇಣ ಗೊಂಬೆರಾಮರೆಂದು ಖ್ಯಾತರಾದರು. ಈ ಕಥೆಯ ಆಧಾರದಿಂದ ಗೊಂಬೆಯಾಟದವರಲ್ಲಿ ಅಥವಾ ಕಿಳ್ಳೆಖ್ಯಾತ ಜನವರ್ಗದ ಹಿರಿಯ ವಂಶಸ್ಥರಲ್ಲಿ ಶಿಖೆ ಇರುವುದನ್ನು ಗಮನಿಸಬಹುದು. ಹಾಸನ, ಮಂಡ್ಯ ಭಾಗದಲ್ಲಿರುವ ತೊಗಲುಗೊಂಬೆಯಾಟದ ಕೆಲವು ಹಿರಿಯ ಸದಸ್ಯರುಗಳಲ್ಲಿ ಶಿಖೆ ಹೊಂದಿದ ಕಲಾವಿದರನ್ನು ಗೊಂಬೆರಾಮರೆಂದು ಕರೆಯುತ್ತಾರೆ.

'ಕಿಳ್ಳೆಕ್ಯಾತ' ಎಂಬ ಪದವು ವಕ್ರಮೂರ್ತಿಯ, ದಪ್ಪ ತುಟಿಯ, ಬೆನ್ನು ಬಾಗಿದ, ಕಪ್ಪಾಗಿರುವ ಗೊಂಬೆಯನ್ನು ಸೂಚಿಸುವುದೆಂದು ಅರ್ಥ ನೀಡಿದ್ದಾರೆ. ಕಿಳ್ಳೆಕ್ಯಾತ ಎಂಬ ಪದಕ್ಕೆ ವಿಶೇಷವಾಗಿ ಹೊಸ ಪದವೊಂದನ್ನು ದಿ. ತ್ಯಾಪೇನಹಳ್ಳಿ ಹೊಂಬಯ್ಯ (ಮಂಡ್ಯ ಜಿಲ್ಲೆ) ತಮ್ಮ ಸಂದರ್ಶನದಲ್ಲಿ ಪ್ರಸ್ತಾಪಿಸಿದ್ದಾರೆ. ದಿ. ತ್ಯಾಪೇನಹಳ್ಳಿ ಹೊಂಬಯ್ಯ ಇವರ ಪ್ರಕಾರ ಕಿಳ್ಳೇಕ್ಯಾತನಿಗೆ ಶಿತಾನಿ, ಶಿಳ್ಳೇಕ್ಯಾತ ಅಥವಾ ಕಿಳ್ಳೇಕ್ಯಾತ ಎಂದು ಕರೆಯುತ್ತಿದ್ದರಂತೆ. ಶಿತಾನಿ ಎನ್ನುವ ವಿಶೇಷಣ ಪದವು (ಪೂರ್ವಜರ ಆತ್ಮ) ಎನ್ನುವ ಅರ್ಥ ನೀಡುವುದರಿಂದ ಇಂದಿಗೂ ಈ ಗೊಂಬೆಯಾಟ ದವರಲ್ಲಿ ಸತ್ತಂತವರನ್ನು ಹಿರಿಯರ ಸಾಲಿಗೆ ಸೇರಿಸುವಾಗ ನಿರ್ವಾಣ ರೂಪದ ಚಿತ್ರವನ್ನು ಚಿನ್ನ ಅಥವಾ ಬೆಳ್ಳಿ ತಗಡಿನಲ್ಲಿ ಕೊರೆದು ತಮ್ಮ ಮನೆಯ ದೇವತಾಸ್ಥಾನಕ್ಕೆ ಸೇರಿಸಿಕೊಳ್ಳುವ ಸಂಪ್ರದಾಯವನ್ನು ನಡೆಸಿಕೊಂಡು ಬಂದಿರುವರು. ಕಿಳ್ಳೇಕ್ಯಾತ ಗೊಂಬೆಯು ನೋಡುಗರಿಗೆ ಹಾಸ್ಯ ಪಾತ್ರವಾದ ವ್ಯಕ್ತಿಯಾಗಿ ಕಂಡರೂ ಈ ಜನವರ್ಗದವರುಗಳಿಗೆ ಕುಲದೇವತೆ (Totem) ಇದ್ದಂತೆ. ಇವರ ನಿಜವಾದ ಕುಲನಾಮ ಅಥವಾ ಜಾತಿ ಸೂಚಕ ಹೆಸರು ದಾಯತ್‌ಕರ್ ಎಂದು. ಸರಕಾರದ ಕಡತದಲ್ಲಿ ಆಗಲೀ ಅಥವಾ ಗೆಝೆಟಿಯರ್‌ಗಳಲ್ಲಿ ಕಿಳ್ಳೆಕ್ಯಾತ, ಸಿಳ್ಳೆಕ್ಯಾತ, ಕಟುಬುಜಾತ ಎಂದು ದಾಖಲಾಗಿದೆ. ದಾಯತ್‌ಕರ್ ಎಂದರೆ ದೇವತಾಕಥೆಗಳನ್ನು ನಡೆಸಿ ಕೊಡುವ ಕಲಾಕಾರರೆಂಬುದಾಗಿ ಅಭಿಪ್ರಾಯವಿದೆ.

**ತೊಗಲು ಗೊಂಬೆಯಾಟದ ಪ್ರದರ್ಶನ:** ತೊಗಲು ಗೊಂಬೆಯಾಟದ ಪ್ರದರ್ಶನವನ್ನು ಸಾಮಾನ್ಯವಾಗಿ ಊರ ಹೊರಗಿನ ಇಲ್ಲವೇ ಗ್ರಾಮದೇವತೆ ಚಾವಡಿ ಅಥವಾ ಎಲ್ಲೆಕಲ್ಲು (ಗಡಿಯನ್ನು ಗುರುತಿಸುವ ಕಲ್ಲು) ಮುಂಭಾಗದಲ್ಲಿ ನಡೆಸುವುದು ಸಂಪ್ರದಾಯವಾಗಿದೆ. ಇತ್ತೀಚಿನ ದಿನಗಳಲ್ಲಿ ಗ್ರಾಮಗಳು ಜನಸಂಖ್ಯೆಯ ಬೆಳವಣಿಗೆಯಿಂದ ಗ್ರಾಮ ವಿಸ್ತಾರಗೊಂಡು ಊರ ಹೊರಗಿನ ದೇವಾಲಯಗಳು ಊರಿನ ಹೃದಯ ಭಾಗದಲ್ಲಿದ್ದಂತಾಗಿದ್ದು ಈ ಸ್ಥಳದಲ್ಲಿ ಗೊಂಬೆಯಾಟಗಳು ನಡೆಯುತ್ತವೆ. ಗೊಂಬೆಯಾಟಕಾರರು ಸಂಪ್ರದಾಯ ನಿಯಮದಂತೆ ಏಕವ್ಯಕ್ತಿ ಕಲಾಕಾರ ಅಟ್ಟದ ಹಿಂದೆ ಕುಳಿತು ಪ್ರದರ್ಶನ ಕೊಡುತ್ತಿದ್ದನು, ಉಳಿದಂತೆ ಸಹಾಯಕರಾಗಿ ಈತನ ಕುಟುಂಬದವರು ಪ್ರೇಕ್ಷಕರಿಗೆ ಬೆನ್ನು ಹಾಕಿ ಕುಳಿತು ಸಂವಾದ, ಹಾಡುಗಾರಿಕೆಯಲ್ಲಿ ತೊಡಗುತ್ತಿದ್ದರು. ಈ ಸಂಪ್ರದಾಯದ ಅಟ್ಟ ಹಾಗೂ ಶೈಲಿಯನ್ನು ಇಂದಿಗೂ ಮಹಾರಾಷ್ಟ್ರದ ಸಾವಂತವಾಡಿ ಎಂಬಲ್ಲಿಯೂ ಹಾಗೂ ಬಳ್ಳಾರಿ ಜಿಲ್ಲೆ ಎಡ್ರಾಮನಹಳ್ಳಿ ಭರಮಪ್ಪ ಇವರ ತಂಡದಲ್ಲಿ ಕಾಣಬಹುದು. ಗೊಂಬೆಯಾಟಕ್ಕೆ ಸಿದ್ಧಪಡಿಸಿಕೊಳ್ಳುವ ಈ ಸಾಂಪ್ರದಾಯಿಕ ಅಟ್ಟವನ್ನು ಸಂಚಾರಿ ಅಟ್ಟವೆನ್ನಬಹುದು. ದಕ್ಷಿಣ ಕರ್ನಾಟಕದ ಭಾಗಗಳಲ್ಲಿ ಗೊಂಬೆಯಾಟಕಾರರು ನಡೆಸಿಕೊಡುವ ಅಟ್ಟ ಪ್ರಭೇದದಲ್ಲಿ ಕಲಾವಿದರೆಲ್ಲರೂ ರಂಗಮಂಚ ದೊಳಗೆ ಮರೆಯಾಗಿ ಕುಳಿತು ಕಟ್ಟಿದ ಪರದೆಯ ಹಿಂದೆ ಕಕ್ಕಡ ದೀಪದ ಬೆಳಕನ್ನು ಹಾಯಿಸಿ ಬಣ್ಣದ ಪಾರದರ್ಶಕ ಚಿತ್ರಗಳಿರುವ ಗೊಂಬೆಗಳನ್ನು ಹಾಡು-ಸಂವಾದದೊಂದಿಗೆ ಲಯಕ್ಕನು ಸಾರವಾಗಿ ಗೊಂಬೆಗಳನ್ನು ಕುಣಸುವುದನ್ನು ಇಂದಿಗೂ ಕಾಣಬಹುದು.

ದಕ್ಷಿಣ ಕರ್ನಾಟಕದಲ್ಲಿ ಊರ ಹೊರಗಿನ ಮಾರಿ ಗುಡಿಯ ಮುಂಭಾಗದಲ್ಲಿ ನಾಲ್ಕು ಗುಳಿ ಹೊಡೆದು ಕೆಲವು ಆಚರಣೆಗಳೊಂದಿಗೆ (ಕೋಳಿ ಬಲಿ ಕೊಡುವ ಕ್ರಮವಿದೆ) ರಂಗ ಮಂಚವನ್ನು ಸಿದ್ಧಪಡಿಸುವರು. ಸಾಮಾನ್ಯವಾಗಿ 9 x 6 ಅಳತೆಯಲ್ಲಿ ನಿರ್ಮಿಸಿದ ಅಟ್ಟದ

ಕೆಳಭಾಗದಿಂದ ಒಂದು ಅಥವಾ ಒಂದೂವರೆ ಅಡಿ ಅಂತರ ಬಿಟ್ಟು ಒಂದು ಗಳುವನ್ನು ಅಡ್ಡಲಾಗಿ ಕಟ್ಟುವರು. ಇನ್ನುಳಿದ ಗಳುಗಳನ್ನು ಅಟ್ಟದ ಭದ್ರತೆಗಾಗಿ ಎಡ–ಬಲ, ಮೇಲ್ಛಾವಣಿಗೆ ಬಿಗಿಯುತ್ತಾರೆ. ಇಪ್ಪತ್ತೆರಡು ಮೊಳದ ಕರಿಹುರಿಯನ್ನು ವಿಶಿಷ್ಟ ರೀತಿಯ ಕುಣಿಕೆ ಹಾಕಿ ಅಟ್ಟದ ಎದುರು ಭಾಗಕ್ಕೆ ನಾಲ್ಕೂ ಕಡೆ ಹಗ್ಗ ಹಾಯಿಸಿ ಬಿಗಿಗೊಳಿಸುವರು. ಅನಂತರ 9 x 4 ಅಳತೆಯ ಪಂಚೆಯನ್ನು ಸ್ವಲ್ಪ ಓರೆಯಾಗಿ ಪಾಪಸ್ ಕಳ್ಳಿಯ ಮುಳ್ಳಿನ ಹಾಯದಿಂದ ಚುಚ್ಚಿ ಕಿಂಡಿಗಳು ಕಾಣದಂತೆ ಪರದೆ (ಬಿಳಿ ಪಂಚೆ) ಕಟ್ಟುವರು. ಇದರ ಕೆಳಭಾಗದಲ್ಲಿ ಕರಿಹುರಿ (ಕಪ್ಪು ಹಗ್ಗ) ಹಾಯ್ದು ಸ್ಥಳದಿಂದ ಕರಿಕಂಬಳಿಯನ್ನು ಅಡ್ಡಲಾಗಿ ಇಳಿ ಬಿಡುವರು. ಸುತ್ತ ಚಾಪೆ–ತಡಿಕೆಗಳಿಂದ ಮುಚ್ಚಿ ಕಂಬಳಿ ಇಳಿಬಿಟ್ಟ ಜಾಗದಲ್ಲಿ ಪ್ರೇಕ್ಷಕರಿಗೆ ಕಾಣದಂತೆ ಕುಳಿತು ಬಿಳಿಯ ತೆರೆಯ ಹಿಂದುಗಡೆ ಗೊಂಬೆಗಳನ್ನು ನಿಲ್ಲಿಸಿ ಅವುಗಳಿಗೆ ಹಾಕಿರುವ ಕಡ್ಡಿಗಳನ್ನು ಹಿಡಿದು ಗೊಂಬೆ ಕುಣಿಸುವರು. ಆಗ ಪ್ರೇಕ್ಷಕರಿಗೆ ನಿಜವಾಗಲೂ ಬೆಳಕಿನಲ್ಲಿ ಬಣ್ಣ ಬಣ್ಣದ ಪಾತ್ರಗಳು ಜನರನ್ನು ರಂಜಿಸುತ್ತಿದ್ದವು. ಸಿನಿಮಾ ಮಾಧ್ಯಮ ಗ್ರಾಮೀಣ ಪ್ರದೇಶಕ್ಕೆ ಪರಿಚಯವಾಗುವ ಮುನ್ನ ನೆರಳುಗೊಂಬೆಯಾಟವೇ ದೇಶೀ ಸಿನಿಮಾವಾಗಿತ್ತು. ಹೆಚ್ಚಾಗಿ ಆಯಾಯಾ ಪ್ರದೇಶದ ಬಯಲಾಟಗಳ ಶೈಲಿಯ ಹಾಡುಗಾರಿಕೆ, ಸಂವಾದಗಳ ಪ್ರಭಾವವನ್ನು ರಾಯಚೂರು, ಮಂಡ್ಯ, ಹಾಸನ, ಈ ಭಾಗಗಳ ಕಲಾವಿದರು ಬಳಸಿಕೊಂಡಿರುವರು. ಪ್ರಸ್ತುತ ಜಾನಪದಶ್ರೀ ಪ್ರಶಸ್ತಿ ವಿಜೇತ ಶ್ರೀ ಎಡ್ರಾಮನಹಳ್ಳಿ ದೊಡ್ಡ ಭರಮಪ್ಪ ಓರ್ವನೇ ಅತ್ಯಂತ ಪ್ರಾಚೀನ ಶೈಲಿಯ ಹಾಡುಗಾರಿಕೆ ಮತ್ತು ಪರಂಪರೆಯ ಸಂವಾದವನ್ನು ಉಳಿಸಿಕೊಂಡಿರುವನು. ಈತನ ಜ್ಞಾನ ನಿಧಿ ಎಲ್ಲರನ್ನೂ ಬೆರಗುಗೊಳಿಸುವಂತಹುದು. ಉತ್ತರ ಕರ್ನಾಟಕ ಭಾಗದಲ್ಲಿನ ಗೊಂಬೆಗಳಿಗೂ ದಕ್ಷಿಣ ಕರ್ನಾಟಕ ಭಾಗದಲ್ಲಿನ ಗೊಂಬೆಗಳಿಗೂ ವ್ಯತ್ಯಾಸಗಳಿವೆ. ಬಳ್ಳಾರಿ, ಹಾಗೂ ಆಂಧ್ರಪ್ರದೇಶದ ಗಡಿ ಭಾಗವಾದ ಪಾವಗಡ, ತುಮಕೂರು ಈ ಭಾಗಗಳಲ್ಲಿನ ಗೊಂಬೆಗಳು ಆಳೆತ್ತರದ ಗೊಂಬೆಗಳಾಗಿವೆ. ಪ್ರಪಂಚದ ಗೊಂಬೆಯಾಟ ಪ್ರಕಾರದಲ್ಲಿ ಕಾಂಬೋಡಿಯಾದ ತೊಗಲು ಗೊಂಬೆ ಸುಮಾರು ಎಂಟು ಅಡಿ ಇದ್ದರೆ, ಬಳ್ಳಾರಿಯ (ಉತ್ತರ ಕರ್ನಾಟಕದ) ಹಾಗೂ ಆಂಧ್ರಪ್ರದೇಶದ ಗೊಂಬೆಗಳು ಸುಮಾರು ೭ ಅಡಿ ಎತ್ತರವಿದೆ. ಈ ಗೊಂಬೆಗಳನ್ನು ಕುಣಿಸಲು ಕಲಾಕಾರರು ಪರದೆಯ ಹಿಂದೆ ನಿಂತು ಗೊಂಬೆಗಳನ್ನು ಕುಣಿಸುವರು. ಈ ತಂತ್ರಗಾರಿಕೆಯಲ್ಲಿ ಪರದೆಯ ಹಿಂದೆ ಗೊಂಬೆ ಕುಣಿಸುವ ಪಾತ್ರಧಾರಿಗಳೂ ಕೂಡ ಅರೆ ಪಾರದರ್ಶಕ ಸ್ಥಿತಿಯಲ್ಲಿನ ಪರದೆಯಲ್ಲಿ ಗೋಚರಿಸುವರು.

ಸಾಮಾನ್ಯವಾಗಿ ರಾಮಾಯಣ, ಮಹಾಭಾರತ, ಭಾಗವತ ಕಥಾನಕಗಳನ್ನು ಗೊಂಬೆಯಾಟ ಕಾರರು ಪ್ರದರ್ಶಿಸುವರು. ಸಂಪ್ರದಾಯದಂತೆ ಸಂಪೂರ್ಣ ಮಹಾಭಾರತ, ಸಂಪೂರ್ಣ ರಾಮಾಯಣ ನಡೆಸಲು ಸುಮಾರು ೧೨ ರಾತ್ರಿ ವೇಳೆಯನ್ನು ನಿಗದಿಗೊಳಿಸಿ ಪ್ರದರ್ಶನ ನೀಡುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ಪ್ರದರ್ಶನಗಳು ಸುಮಾರು ಎರಡರಿಂದ ಮೂರು ಘಂಟೆ ತನಕ ಪ್ರದರ್ಶನಗೊಳ್ಳುವುದು.

ಗೊಂಬೆಯಾಟದವರೆಂದರೆ ಕೇವಲ ಪುರಾಣ ಪುಣ್ಯ ಕಥೆಗಳನ್ನು ನಡೆಸಿಕೊಡುವ ದಾಯತ್‌ಕರ್ (ಕಿಳ್ಳೇಕ್ಯಾತರು)ಗಳಲ್ಲ. ಒಂದು ಕಾಲದಲ್ಲಿ ರಾಷ್ಟ್ರದ ಐಕ್ಯತೆಗಾಗಿ ಹೋರಾಡಿದ ವೀರಕ್ಷತ್ರಿಯರು, ಹುಬ್ಬಳ್ಳಿ–ಗದಗ ಭಾಗದಲ್ಲಿನ ಕೆಲವು ಗೊಂಬೆಯಾಟಗಾರರು ತಮ್ಮ

ಕುಲನಾಮದೊಂದಿಗೆ ಕ್ಷತ್ರಿ ಎಂಬುದಾಗಿ ಸೇರಿಸಿಕೊಳ್ಳುವರು, ಇನ್ನು ಕೆಲವರು ರಾವ್ ಎನ್ನುವ ಪದವನ್ನೂ ಸೇರಿಸಿಕೊಳ್ಳುವರು. ಈ ವರ್ಗದವರನ್ನು ಹೆಚ್ಚಾಗಿ ದೊಡ್ಡಬಳ್ಳಾಪುರದ ಭಾಗದಲ್ಲಿ ಕಾಣಬಹುದು. ಕೆಲವು ಭಾಗಗಳಲ್ಲಿ ಈ ಗೊಂಬೆಯಾಟದವರನ್ನು ರಾಜಮರಾಠಿಗಳೆಂದು ಕರೆಯಲಾಗಿದೆ. ವಿಶೇಷವಾಗಿ ಈ ಜನವರ್ಗದವರುಗಳು ಶಹಾಜಿ ಆಡಳಿತ ಕಾಲದಲ್ಲಿ ಗುಪ್ತಚಾರರಾಗಿ ಹಾಗೂ ಯುದ್ಧ ತಂತ್ರದಲ್ಲಿ ನಿಪುಣರಾಗಿದ್ದರು. ಬಾಡಿಗೆ ಸೇನೆಯ ಯೋಧರಾಗಿ ಕರೆದಲ್ಲಿ ಹೋಗಿ ಯುದ್ಧ ಮಾಡಿ ಬರುತ್ತಿದ್ದರು. ಹಿನ್ನೆಲೆಯಲ್ಲಿ ರಣದುಲ್ಲಾ ಖಾನ್ (ಕ್ರಿ.ಶ. ೧೬೪೪) ಜೊತೆಯಾಗಿ ಮರಾಠಾ ಸೇನಾನಿಗಳು ಹಾಗೂ ಬಾಡಿಗೆ ಯೋಧರನ್ನು ಕಟ್ಟಿಕೊಂಡು ಬೆಂಗಳೂರು, ಹೊಸಕೋಟೆ, ಕೋಲಾರ, ದೊಡ್ಡಬಳ್ಳಾಪುರ, ಶಿರಾ, ಹರಿಹರ ಈ ಭಾಗದತ್ತ ಪ್ರವೇಶಿಸಿ ದಾಳಿ ನಡೆಸಿರುವುದಾಗಿ ಇತಿಹಾಸದಿಂದ ತಿಳಿಯಬಹುದು (Mark Wilks & Murry 1980 PP 102-103). ಕೊನೆಯಲ್ಲಿ ರಣದುಲ್ಲಾಖಾನ್ ಸೋಲನ್ನು ಅನುಭವಿಸುವನು. ಈತನ ಜೊತೆಯಲ್ಲಿದ್ದ ಬಾಡಿಗೆ ಯೋಧರು ಅತಂತ್ರರಾಗಿ ಪುನಃ ತಮಗೆ ತಿಳಿದ ಕಲಾಕಾರಿಕೆಯ ಮೂಲಕ ಜೀವನ ಆರಂಭಿಸಿದ್ದುದರಿಂದಲೋ ಏನೋ ಇಂದಿಗೂ ಹೆಚ್ಚಾಗಿ ಈ ಗೊಂಬೆಯಾಟಕಾರರ ಸಾಂಧ್ರತೆ ಹೆಚ್ಚಾಗಿ ಬೆಂಗಳೂರು, ಮಂಡ್ಯಗಳ ಭಾಗದಲ್ಲಿ ನಿಚ್ಚಳವಾಗಿ ಕಾಣಬಹುದಾಗಿದೆ. ಗೊಂಬೆಯಾಟದವರು ಸ್ವಾಮಿನಿಷ್ಠೆಗೆ ಹಾಗೂ ಶೌರ್ಯಕ್ಕೆ ಹೆಸರಾದವರು. ಹೀಗಾಗಿ ಇವರ ಸೇರ್ಪಡೆಯನ್ನು ಶಿವಾಜಿ ಬಳಸಿಕೊಂಡಿದ್ದು ಈ ಜನವರ್ಗದವರಿಗೆ ವಿಶೇಷವಾಗಿ ಕುಲವಾಡಿ (ಅಂಗರಕ್ಷಕ ಪದವಿ) ಎಂಬ ಬಿರುದನ್ನು ನೀಡಿ ತನ್ನ ಜೊತೆ ಇರಿಸಿಕೊಂಡಿದ್ದನು.

ಗೊಂಬೆಯಾಟದವರು ಕೇವಲ ಪುರಾಣ ಕಥೆ ಪ್ರದರ್ಶಿಸುತ್ತಿರಲಿಲ್ಲ, ಜೊತೆಯಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಲಾವಣಿಯನ್ನೂ ಹಾಸ್ಯ ಪಾತ್ರಗಳಾದ ಕಿಳ್ಳೆಕ್ಯಾತ ಹಾಗೂ ಬಂಗಾರಕ್ಕ ಮೂಲಕ ಪ್ರದರ್ಶಿಸುತ್ತಿದ್ದರು. ಸ್ವಾತಂತ್ರ್ಯ ಸಂಗ್ರಾಮದ ಲಾವಣಿ, ಕಥೆಗಳನ್ನು ಸೃಷ್ಟಿಸಿ ಜನಗಳಿಗೆ ಪ್ರೇರಣೆ ನೀಡುವಲ್ಲಿ ಕವಿ ರಾಣಪ್ಪನ (ಗೊಂಬೆಯಾಟದ ಕಲಾವಿದ, ಮಂಡ್ಯ) ಬಂಡಾಯದ ಲಾವಣಿಗಳು ಇಂದಿಗೂ ನಾಗಮಂಗಲದ ಗೊಂಬೆಯಾಟದವರಲ್ಲಿನ ಪ್ರದರ್ಶನಗಳಲ್ಲಿ ಕಾಣಬಹುದಾಗಿದೆ.

ಕೆಲವು ಶಿಷ್ಟ ವರ್ಗದ ಪ್ರೇಕ್ಷಕರು ಕಿಳ್ಳೆಕ್ಯಾತ ಗೊಂಬೆಯನ್ನು (ಬೆತ್ತಲೆಯಾಗಿ ಇರುವ ಗೊಂಬೆ) ಪರದೆ ಮೇಲೆ ಕಾಣಿಸಕೂಡದೆಂದು ನಿರ್ದೇಶಿಸುತ್ತಾರೆ. ಆದರೆ ಗ್ರಾಮದ ಬಹುತೇಕ ಪ್ರೇಕ್ಷಕರು ಈ ಗೊಂಬೆಗಳ ಪ್ರವೇಶಕ್ಕಾಗಿ ಹಾತೊರೆಯುತ್ತಿರುತ್ತಾರೆ. ಕಿಳ್ಳೆಕ್ಯಾತ ಮತ್ತು ಬಂಗಾರಕ್ಕ ಬಂದರೆಂದರೆ ಸಾಕು ಅಕ್ಕ-ಪಕ್ಕದ ಹಳ್ಳಿಗಳಲ್ಲಿ ನಡೆದಿರುವ ಸುದ್ದಿ ಪ್ರಸಾರ ಆರಂಭವಾಗುವುದು. ಇದರ ಜೊತೆಗೆ ಒಗಟು, ಉಪಕಥೆ, ಹಾಸ್ಯದ ಹಾಡುಗಳು, ಅಶ್ಲೀಲ ಸಂಭಾಷಣೆ, ತತ್ವ, ಲಾವಣಿಗಳನ್ನು ಹೊತ್ತು ತರುವ ಈ ಪಾತ್ರಗಳು ನಮ್ಮ ಸಮಾಜದಲ್ಲಿ ನಡೆಯುವ ಎಲ್ಲ ಘಟನೆಗಳ ಮೇಲೂ ಬೆಳಕು ಚೆಲ್ಲುತ್ತವೆ ಮತ್ತು ಆಗ್ಗಾಗ್ಗೆ ಈ ಜೋಡಿ ಪಾತ್ರಗಳು ಕೂಡಿ ಒಗಟುಗಳ ಪಂಥ ಹೂಡುತ್ತಾ ಜನರ ಬುದ್ಧಿಗೆ ಸಾಣೆ ಹಿಡಿದು ರಂಜನೆ ಒದಗಿಸುತ್ತವೆ. ಕೆಲವು ಉದಾಹರಣೆಗಳು ಹೀಗಿವೆ.

**ಚಿತ್ರಕಾವ್ಯರೂಪದ ಒಗಟು** : ಕಲ್ಲಿಗೆ ಮಗಳು ಯಾರು? ಮಗಳಿಗೆ ಗಂಡ ಯಾರು? –

ಹೀಗೆ ಬಂಗಾರಕ್ಕ ಪಾತ ಕೇಳಿದಾಗ ಕಿಳ್ಳೆಕ್ಯಾತ ತನ್ನ ತಿಳಿ ಕನ್ನಡದಲ್ಲಿ ಕಲ್ಲು ಎಂದರೆ ಗಿರಿ, ಪರ್ವತ,, ಪರ್ವತರಾಜನ ಮಗಳು ಪಾರ್ವತಿ, ಪಾರ್ವತಿ ಗಂಡ ಪರಮೇಶ್ವರ – ಈ ಬಗೆಯಾಗಿ ಸಾಹಿತ್ಯದ ಚಿತ್ರಕಾವ್ಯವನ್ನು ಮತ್ತು ಅದರ ಅಲಂಕಾರವನ್ನು ಜನರಿಗೆ ತಿಳಿಯಾಗಿ ಹೇಳುವ ಮೋಡಿ ಎಲ್ಲರಿಗೂ ಆಶ್ಚರ್ಯ ಉಂಟು ಮಾಡುವುದು. ಇದೇ ರೀತಿಯ ಪುರಾಣ ಪ್ರಜ್ಞೆಯ ಮುದ್ರೆ ಹೊತ್ತ ಎರಡೇ ಸಾಲಿನ ಒಗಟುಗಳಲ್ಲಿ ದೀರ್ಘ ಕಥೆಯ ಸಾರವನ್ನು ಗೊಂಬೆಯಾಟದವರು ಹಾಸ್ಯ ಪಾತ್ರಗಳ ಮೂಲಕ ಕೊಡುವ ಜಾಣ್ಮೆ ಎಲ್ಲರೂ ಮೆಚ್ಚುವಂತಹದು. ಇಂಥಹ ಅನೇಕ ಒಗಟುಗಳು ಪಟಪಟನೆ ಅವರ ಬಾಯಿಂದ ಬರುತ್ತವೆ. ಕಲ್ಲಿಗೆ ಗಂಡ ಯಾರು? (ಉತ್ತರ : ಉಳಿ – ಸುತ್ತಿಗೆ) ಊರಿಗೆ ಯಜಮಾನ ಯಾರು (ಉತ್ತರ : ಕೂಗೋ ಹುಂಜ) ಹೆಂಗಸರಿಗೆ ತೂತಿಲ್ಲದ ಒಡವೆ ಯಾವುದು (ಉತ್ತರ : ಮುತ್ತೈದೆ ಸಂಕೇತವಾದ ಕುಂಕುಮದ ಬೊಟ್ಟು) ಕೆಲವು ಒಗಟುಗಳು ಮೇಲ್ನೋಟಕ್ಕೆ ಅಶ್ಲೀಲ ಎನಿಸಿದರೂ ಒಳಾರ್ಥ ಭಿನ್ನವಾಗಿ ಪ್ರೇಕ್ಷಕರಿಗೆ ಶ್ಲೇಷಾರ್ಥದಲ್ಲಿ ಸಾಹಿತ್ಯದ ವೈವಿಧ್ಯತೆ ತೋರಿಸಿ ಅದರ ವಾಸ್ತವಿಕತೆಯನ್ನು ಬಯಲು ಮಾಡಿ ನಗು ತರಿಸುವಂತಹ ಅನೇಕ ಸಾಹಿತ್ಯದ ತುಣುಕುಗಳು ಈ ಕಲಾವಿದರ ಭಂಡಾರದಲ್ಲಿದೆ.

ಗೊಂಬೆಯಾಟದವರು ಹಿನ್ನೆಲೆಯಲ್ಲಿ ಪ್ರಯೋಗಿಸುವ ರಾಗಗಳು ವಿಶಿಷ್ಟವಾದವು. ನಾಟಿ ರಾಗದಿಂದ ಆರಂಭಿಸಿ ಸಾವೇರಿ ರಾಗದಲ್ಲಿ ಕಥೆಯನ್ನು ಮುಕ್ತಾಯಗೊಳಿಸುತ್ತಾರೆ. ೧೯೧೦ರಿಂದ ಹಾರ್ಮೋನಿಯಂ ಬಳಕೆಯನ್ನು ಗೊಂಬೆಯಾಟದವರು ಬಳಸಲು ತೊಡಗಿದ್ದು ನಾಟಕದ ಕಲಾವಿದೆಯಾಗಿದ್ದ ಹಂದಗೆರೆ ಹುಚ್ಚಮ್ಮ (ನಾಗಮಂಗಲ ತಾಲ್ಲೂಕು) ಇವರಿಂದ. ಪರಂಪರೆಯಲ್ಲಿ ಶೃತಿಗಾಗಿ ಕಂಚಿನ ತಣಿಗೆ ಶೃತಿ ಬಳಸುತ್ತಿದ್ದರು. ಆ ನಂತರ ಉಪ್ಪಂಗ (ಚರ್ಮದ ತಿತ್ತಿಯ ವಾದ್ಯ) ಬಳಸಲು ಆರಂಭಿಸಿದರು. ಪ್ರಸ್ತುತ ಅನೇಕ ಕಲಾವಿದರು ಹಾರ್ಮೋನಿಯಂ ಬಳಸುವು ದರಲ್ಲಿ ನಿಷ್ಣಾತರಾಗಿರುವರು. ಗೊಂಬೆಯಾಟಕ್ಕೆ ಹೆಚ್ಚು ಪ್ರೋತ್ಸಾಹ ದೊರಕದಿದ್ದಾಗ ಅನೇಕ ಕಲಾವಿದರು ತಬ್ಲಾ ಮಾಸ್ತರ್, ನಾಟಕ ಮಾಸ್ತರ್, ಹರಿಕಥೆ ದಾಸರು ಹೀಗೆ ಉಪವೃತ್ತಿಗಳಲ್ಲಿ ತೊಡಗಿದರು.

**ಗೊಂಬೆಯಾಟದವರು ನಡೆಸಿಕೊಡುವ ಕಥಾ ಪ್ರಸಂಗಗಳು**

ದಕ್ಷಿಣ ಕರ್ನಾಟಕ ಭಾಗದಲ್ಲಿ ಊರಿನ ಹಿರಿಯರು ಮರಣ ಹೊಂದಿದರೆ ಅವರ ಹೆಸರಿನಲ್ಲಿ ಮಹಾಭಾರತದ ಅಥವಾ ರಾಮಾಯಣದ ಕೊನೆಯ ಭಾಗವಾದ ಸ್ವರ್ಗಾರೋಹಣ ಕಥೆಯನ್ನು ನಡೆಸುವರು. ಮಳೆ ಬಾರದಿದ್ದಾಗ ವಿರಾಟ ಪರ್ವ ಕಥೆಯನ್ನು ಮತ್ತು ಊರಿಗೆ ಉತ್ತಮ ಫಲವತ್ತಿಕೆ (ಹುಲಿಸು) ಆಗಲೆಂದು ಶ್ರೀದೇವಿ ಮಹಾತ್ಮೆ ಕಥಾ ಪ್ರಸಂಗವನ್ನು ಮಾಡುವರು. ಕಥಾ ಪ್ರಸಂಗ ಆದ ಬಳಿಕ ಸುಗ್ಗಿ ಸಂದರ್ಭವಾದರೆ ನೇರವಾಗಿ ಹೊಲದಲ್ಲಿ ಇವರಿಗೆಂದೇ ಮೀಸಲಿಟ್ಟ ಭತ್ತ, ರಾಗಿ ಪಡೆದುಕೊಳ್ಳುವ ಹಕ್ಕು ಇವರದಾಗಿದೆ. ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕ ಭಾಗದಲ್ಲಿ ಗೊಂಬೆಯಾಟದ ಕಲಾವಿದರು ನಡೆಸಿಕೊಡುವ ಕಥಾ ಪ್ರಕಾರಗಳು ಮುಖ್ಯವಾಗಿ ರಾಮಾಯಣದ ರಾವಣ ದಿಗ್ವಿಜಯ, ಕೌಸಲ್ಯಾ ಕಲ್ಯಾಣ, ಪಂಚವಟಿ, ಶತಕಂಠ ರಾವಣ, ಅಹಿರಾವಣ–ಮಹಿರಾವಣ (ಐ–ರಾವಣ–ಮೈ ರಾವಣ) ವೈಕುಂಠ ರಾಮಾಯಣ, ಮಹಾಭಾರತದಲ್ಲಿ ಭೀಮಸೇನ ಪ್ರತಿಜ್ಞೆ, ಪಾಂಡವ ವಿಲಾಸ,

ವಿರಾಟ ಪರ್ವ, ಕೃಷ್ಣಾರ್ಜುನ ಕಾಳಗ, ಭಾಗವತ ಕಥೆಗಳಲ್ಲಿ ದೇವೀ ಮಹಾತ್ಮೆ, ಸಮುದ್ರ ಮಥನ, ಶಿವ ಜಲಂಧರ ತ್ರಿಪುರ ಸಂಹಾರ, ಶ್ರೀಕೃಷ್ಣಪಾರಿಜಾತ, ಇತರೆ ಪುರಾಣ ಕಥೆಗಳಾಗಿ ರೇಣುಕ ಮಹಾತ್ಮೆ, ಸತ್ಯ ಹರಿಶ್ಚಂದ್ರ, ಭಕ್ತ ಮಾರ್ಕಂಡೇಯ ಹಾಗೂ ಜನಪದ ಕಥೆಗಳಾಗಿ ಚಿತ್ರಕೇತು ಮಹಾರಾಜ, ಸಾರಂಗಧರ, ಸುವರ್ಣವತಿ ಪರಿಣಯ, ಪ್ರಭಾವತಿ, ಮಂಜುಘೋಷ, ಕರಿಭಂಟನ ಕಾಳಗ, ನಗಿಸಿದವರ ಕಥೆ, ವಿಧಿ ವಿಲಾಸ ಮುಂತಾದವುಗಳು.

**ತೊಗಲುಗೊಂಬೆಯಾಟದಲ್ಲಿ ಚಿತ್ರ ರಚನೆ ಮತ್ತು ಬಣ್ಣಗಾರಿಕೆ**

ತೊಗಲು ಗೊಂಬೆಗಳು ಪಾರದರ್ಶಕವಾದಂತಹ ಚಪ್ಪಟೆಯ ಚಿತ್ರಗಳು. ಚಿತ್ರ ರಚನಾ ಶೈಲಿಯ ಹಿನ್ನೆಲೆಯಲ್ಲಿ ಪ್ರತಿಮಾ ಶಿಲ್ಪ ಕೌಶಲ್ಯವನ್ನು ಚಿತ್ರ ರೂಪದಲ್ಲಿ ಆಕೃತಿಯ ವಿನ್ಯಾಸಗೊಳಿಸುವುದು, ಬಣ್ಣ ಹಾಕುವುದು ಜನಪದ ಕಲಾವಿದನಿಗೆ ಸಂಪೂರ್ಣವಾಗಿ ತಿಳಿದಿದೆ ಎಂಬುದು ವಿದ್ವಾಂಸರುಗಳ ಊಹೆ ಮಾತ್ರ. ಪ್ರಸ್ತುತ ಅಧ್ಯಯನದ ಹಿನ್ನೆಲೆಯಲ್ಲಿ ಇಂದಿನ ಅನೇಕ ತೊಗಲುಗೊಂಬೆಯಾಟ ಕಲಾಕಾರರಿಗೆ ಚರ್ಮವನ್ನು ಹೇಗೆ ಸಂಸ್ಕರಿಸಿಕೊಳ್ಳಬೇಕೆಂಬ ಪೂರ್ವಗ್ರಹಿತ ಮಾಹಿತಿಗಳಿಲ್ಲ. ಚಿತ್ರ ಸಂರಚನೆಯ ಬಗ್ಗೆ ಮತ್ತು ಬಣ್ಣಗಳ ಸಂಯೋಜನೆಯ ಕುರಿತಾಗಿಯೂ ಪರಂಪರೆ ಜ್ಞಾನ ಇಲ್ಲವಾಗಿದೆ. ತೊಗಲುಗೊಂಬೆಯಾಟಕ್ಕೆ ಮತ್ತು ಚಿತ್ರ ಸಂರಚನೆಗೆ ಕಾಯಕಲ್ಪ ದೊರಕಿದ್ದು ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ ಇವರ ಪ್ರೋತ್ಸಾಹದಿಂದ. ಅಧ್ಯಯನದ ಪ್ರಕಾರ ಗೊಂಬೆಯಾಟ ಕಲಾವಿದರಲ್ಲಿ ಅಭಿರುಚಿ ಮೂಡಿದ್ದರೆ ಅದು ೧೯೭೦ರ ನಂತರದ ಕಾಲಘಟ್ಟದಲ್ಲಿ ಆದ ಬದಲಾವಣೆ ಎಂದು ತಿಳಿಯಲಾಗಿದೆ. ೧೯೭೦ಕ್ಕೂ ಮುನ್ನ ಕಲಾವಿದರುಗಳು ಎಲೆಮರೆಯ ಕಾಯಂತೆ ಅಲ್ಲಲ್ಲಿ ತಮ್ಮ ಕಲಾಕಾಯಕವನ್ನು ನಡೆಸಿಕೊಂಡು ಬಂದಿರುವರು ಹೊರತು ಚಿತ್ರ ಸಂಯೋಜನೆಯಲ್ಲಿ ಗಂಭೀರವಾಗಿ ತೊಡಗಿಸಿಕೊಂಡಿದ್ದರು ಎನ್ನುವುದು ವಾಸ್ತವಕ್ಕೆ ದೂರವಾದ ವಿಚಾರ. ಗೊಂಬೆಯಾಟಕಾರರಲ್ಲಿ ಹಳೆಯ ಗೊಂಬೆಗಳ ಚಿತ್ರ ಕೌಶಲ್ಯ ಪಡಿಮೂಡುತಿದ್ದವು. ಅವು ಹೇಗೆಂದರೆ ಪರಂಪರೆಯ ಗೊಂಬೆಯನ್ನು ತಳಭಾಗದಲ್ಲಿರಿಸಿ ಹೊಸ ಗೊಂಬೆಗೆ ತಯಾರಿಸಿಕೊಂಡ ಚರ್ಮದ ಹಾಳೆಯನ್ನು ಅದರ ಮೇಲೆ ಇರಿಸಿ ಪಡಿ ಅಚ್ಚು ತೆಗೆದುಕೊಂಡು ಚಿತ್ರ ಸಂರಚನೆ ಮಾಡುತಿದ್ದರು. ಆಂಧ್ರ ಪ್ರದೇಶದಲ್ಲಿ ಕರಕುಶಲ ಕಲೆಗಳಿಗೆ ಪ್ರೋತ್ಸಾಹ ದೊರೆತಿದ್ದರಿಂದ ಚಿತ್ರ ರಚನೆಯಲ್ಲಿ ತೊಡಗಿಸಿಕೊಂಡ ತೊಗಲುಗೊಂಬೆಯಾಟದ ಕಲಾವಿದರುಗಳಿಗೆ ಆಶ್ರಯ ಯೋಜನೆ ದೊರೆತು ಮಾಡಿದ ಚಿತ್ರಗಳನ್ನು ಕರಕುಶಲ ನಿಗಮದಲ್ಲಿ ವಿಕ್ರಯ ಮಾಡಿಸುವಂತಹ ವ್ಯವಸ್ಥೆ ಅನುಷ್ಠಾನಗೊಂಡಿತು. ಈ ಹಿನ್ನೆಲೆಯಲ್ಲಿ ಆಂಧ್ರಪ್ರದೇಶದ ತೊಗಲುಗೊಂಬೆಯಾಟದ ಕಲಾವಿದರು ಚಿತ್ರ ನಿರ್ಮಾಣ ಮಾಡುವುದರಲ್ಲಿ ಮತ್ತು ಚರ್ಮ ಸಂಸ್ಕರಣ ಮಾಡುವುದರಲ್ಲಿ ಪರಿಣತರಾದರು. ಕರ್ನಾಟಕದಲ್ಲಿ ಇಂತಹ ಅವಕಾಶಗಳು ದೊರಕಲಿಲ್ಲ.

ತೊಗಲು ಗೊಂಬೆಯಾಟದವರು ತಾವು ರಚಿಸಿಕೊಳ್ಳುವ ಗೊಂಬೆಗಳನ್ನು ಜಿಂಕೆ ಚರ್ಮದಿಂದ ತಯಾರಿಸಿಕೊಳ್ಳುತ್ತಿದ್ದರು, ಇಂದಿನ ಕಾನೂನುಸಂವಿಧಾನದ ಪ್ರಕಾರ ಜಿಂಕೆ ಚರ್ಮ ಉಪಯೋಗ ನಿಷೇಧವಿರುವುದರಿಂದ ಕುರಿಯ ಚರ್ಮವನ್ನು ಪಾರದರ್ಶಕ ಸ್ಥಿತಿಗೆ ಸಂಸ್ಕಾರಗೊಳಿಸಿ, ಚಿತ್ರ ರಚನೆ ಮಾಡುವರು. ಆಂಧ್ರ ಪ್ರದೇಶದಲ್ಲಿ ಹೆಚ್ಚಾಗಿ ಕುರಿಯ ಚರ್ಮವನ್ನೇ ಬಳಸುತ್ತಾರೆ. ಕೇರಳ ಹಾಗೂ ಒರಿಸ್ಸಾದ ಗೊಂಬೆಯಾಟಕಾರರು ಜಿಂಕೆ ಚರ್ಮವನ್ನು

ಸಂಸ್ಕರಿಸುವಲ್ಲಿ ವ್ಯತ್ಯಯಪಿದ್ದುದರಿಂದ ಈ ರಾಜ್ಯಗಳಲ್ಲಿನ ಗೊಂಬೆಗಳು ದಪ್ಪ ಚರ್ಮವಾಗಿದ್ದು ಇವು ಮಂದವಾದ ಪಾರದರ್ಶಕತೆಯನ್ನು ಹೊಂದಿವೆ. ಉಳಿದಂತೆ ತಮಿಳುನಾಡು, ಆಂಧ್ರ ಈ ಭಾಗಗಳಲ್ಲಿನ ಗೊಂಬೆಗಳ ಚರ್ಮ ಸಂಸ್ಕರಣಕ್ಕೆ ಬಿಸಿ ನೀರನ್ನು ಉಪಯೋಗಿಸಿ ಚರ್ಮದ ರೋಮವನ್ನು ತೆಗೆದು ನೆರಳಲ್ಲಿ ಒಣಗಿಸಿ ಗೊಂಬೆಗಳಾಗಿ ರೂಪಿಸಿಕೊಳ್ಳುತ್ತಾರೆ. ಪರಂಪರೆಯ ಗೊಂಬೆಗಳೆಂದರೆ ಎರಡು ಮೂರು ಪಾತ್ರಗಳು ಒಟ್ಟಿಗೆ ಇರುವಂತಹ ಪ್ರತಿಮಾ ಲಕ್ಷಣವನ್ನು ಹಳೆಯ ಗೊಂಬೆಗಳಲ್ಲಿ ಕಾಣಬಹುದು. ಕಣ್ಣುಗಳು ಏಕ ಪಾರ್ಶ್ವದಲ್ಲಿ ದೊಡ್ಡ ಗೋಲಿಯಾಕಾರ ದಲ್ಲಿರುತ್ತವೆ. ಇಂತಹ ಗೊಂಬೆಯ ಚಿತ್ರಣದಿಂದ ಪ್ರೇರಿತನಾದ ಪ್ರಪಂಚದ ಖ್ಯಾತ ಚಿತ್ರಗಾರ ಪಿಕಾಸೋ ತೊಗಲುಗೊಂಬೆಯಾಟದ ಚಿತ್ರಶೈಲಿಯಿಂದ ಪ್ರಯೋಜನವನ್ನು ಪಡೆದು ತನ್ನ ಕೃತಿಯಲ್ಲಿ ಅಳವಡಿಸಿಕೊಂಡಿರುವನು. ಈ ಪ್ರಕಾರದ ಗೊಂಬೆಗಳಿಗೆ ಜಮಕಟ್ ಬಾವಲಿ (ಕೂಡುಗೊಂಬೆ) ಎಂದು ಹೆಸರು. ಹೆಚ್ಚಾಗಿ ಪೈತಾನಿ ಪೈಂಟಿಂಗ ಪ್ರಭಾವ ಈ ಪ್ರಯೋಗದಲ್ಲಿ ಕಾಣಬಹುದಾಗಿದೆ. ಇದಲ್ಲದೆ ಹೊಯ್ಸಳ, ಲೇಪಾಕ್ಷಿ ಶಿಲ್ಪಗಳ ಪ್ರಭಾವವನ್ನು ಪರಂಪರೆಯ ಗೊಂಬೆಯಾಟದ ಚಿತ್ರಣಗಳಲ್ಲಿ ಕಾಣಬಹುದಾಗಿದೆ. ಕ್ರಮೇಣ ಜನರು ಗೊಂಬೆಗಳ ಕೈ-ಕಾಲು ಚಾಲನೆ ಇರುವ ಗೊಂಬೆಗಳಿಂದ ಅತಿ ರಂಜನೆ ಪಡೆಯುತ್ತಿದ್ದುದರಿಂದ ರವಿವರ್ಮನ ಕ್ಯಾಲೆಂಡರ್ ಕಲಾ ನೈಪುಣ್ಯತೆ ಗೊಂಬೆಯಾಟದ ಮೇಲೆ ಪ್ರಭಾವ ಬಿದ್ದು ಹಾತ್ ಫಿರೂತಲಿ ಬಾವಲಿ (ಕೈ-ಕಾಲು ಚಾಲನೆಗೆ ಒಳಗಾಗುವ ಗೊಂಬೆಗಳು) ಅತಿ ಹೆಚ್ಚು ಪ್ರಯೋಗದಲ್ಲಿ ಕಾಣಿಸಿಕೊಂಡವು.

ಪ್ರಸ್ತುತ ಅನೇಕ ಪರಂಪರೆಯ ಕಲಾಕಾರರಲ್ಲಿ ಹಳೆಯ ತೊಗಲುಗೊಂಬೆಗಳು ಕಾಣ ಸಿಗುವುದು ದುರ್ಲಭವಾಗಿದ್ದು, ಹಳೆಯ ತೊಗಲುಗೊಂಬೆಗಳ ಸ್ವರೂಪ ಕಾಣಬೇಕಾದರೆ ಪ್ರಸಿದ್ಧ ವಸ್ತು ಸಂಗ್ರಹಾಲಯಗಳಲ್ಲಿ ಇವುಗಳ ಅಸ್ತಿತ್ವವನ್ನು ಕಾಣಬಹುದಾಗಿದೆ. ಬಹುತೇಕ ಮಹಾರಾಷ್ಟ್ರದ ಪೈತಾನಿ ಪೈಂಟಿಂಗ್ಸ ರಚನೆಗೆ ಜೈನ ಪರಂಪರೆಯ ಚಿಕಣೀ ಚಿತ್ರದ ಪ್ರಭಾವ ಇದ್ದಂತೆ ತೋರುವುದು. ಗೊಂಬೆಗಳು ಚಪ್ಪಟೆಯಾದ ಸಂಯೋಜನೆಗೊಂಡರೂ ಚಿತ್ರದ ಪ್ರತಿಮಾ ಶಿಲ್ಪವನ್ನು ಸಮಾನಾಂತರವಾಗಿ ಸಂಯೋಜಿಸಲ್ಪಟ್ಟ ನೈಪುಣ್ಯತೆ ಜಮ್ ಕಟ್ ಬಾವಲಿ (ಕೂಡು ಗೊಂಬೆ) ಅಥವಾ ಗೊಂಬೆಯಲ್ಲಿ ಕಾಣಬಹುದು. ಗೊಂಬೆಗಳ ಪಾತ್ರ ಚಲನೆಗೆ ಸರಿಹೊಂದುವಂತೆ ಮಾಡಲು ಪ್ರತ್ಯೇಕವಾದ ಗೊಂಬೆಗಳನ್ನು ಪ್ರದರ್ಶಿಸುತಿದ್ದರು. ಮುಖ್ಯವಾಗಿ ರಾಜನ ದರ್ಬಾರಿನಲ್ಲಿ ನರ್ತಕಿಯ ಪ್ರವೇಶ, ಅಥವಾ ಡೊಂಬರಾಟ ವಿದ್ಯೆ ತೋರಿಸುವ ಹೆಣ್ಣಿನ ನರ್ತನ ಇತ್ಯಾದಿ ಭಾಗವನ್ನು ತೋರಿಸಲಾಗುತಿತ್ತು. ಕೈ-ಕಾಲು ಚಾಲನೆಗೆ ಸರಿ ಹೊಂದುವಂತೆ ಗೊಂಬೆಗಳ ಮುಂಗೈ ಭಾಗ, ಸೊಂಟದ ಭಾಗ ಮತ್ತು ಕುತ್ತಿಗೆಯ ಭಾಗವನ್ನು ಬೇಕಾದ ಹಾಗೆ ತಿರುಗಿಸಲು ಬರುವಂತೆ ಕಡ್ಡಿಗಳನ್ನು (ಈಚಲು ಗಿಡದ ಎಲೆಯ ಮಧ್ಯಭಾಗದ ಕಡ್ಡಿ) ಸೂತ್ರದ ಸಹಾಯದಿಂದ ಪೋಣಿಸಿ ಇಟ್ಟುಕೊಳ್ಳುತ್ತಿದ್ದರು. ಇಂತಹ ಗೊಂಬೆಗಳನ್ನು 'ಹಾತ್ ಫಿರೂತಲಿ ಬಾವಲಿ' ಎಂದು ಕರೆಯಲಾಗಿದೆ. ಇತ್ತೀಚಿನ ದಿನಗಳಲ್ಲಿ ಬಿದಿರಿನ ಕಡ್ಡಿಯನ್ನು ಪೋಣಿಸುವುದು ಸಾಮಾನ್ಯವಾಗಿದೆ. ಯುದ್ಧದ ಸಂದರ್ಭದಲ್ಲಿ ರುಂಡ-ಮುಂಡ ಛೇದಿಸುವ ಸಲುವಾಗಿ ಕತ್ತರಿಸಲ್ಪಟ್ಟ ಗೊಂಬೆಗಳನ್ನು ತೋರಿಕೆಗೆ ಮಾತ್ರ ಪರದೆಯ ಮೇಲೆ ಇರಿಸಿ ಆ ನಂತರ ಬಾಣದಿಂದ ಛೇದಿಸಿ ಮೋಡಿ ಮಾಡುವ ಕೈ-ಚಳಕದ ಪ್ರದರ್ಶನವನ್ನು

ಹೆಚ್ಚಾಗಿ ನಾಗಮಂಗಲದ ಗೊಂಬೆಯಾಟಕಾರರಲ್ಲಿ ಅಧಿಕವಾಗಿ ಕಾಣಬಹುದು. ಉತ್ತರ ಕರ್ನಾಟಕದ ಗೊಂಬೆಯಾಟಕಾರರಲ್ಲಿ ಗೊಂಬೆಗಳ ಛೇದಿಸುವಿಕೆ ಆಶಯ ಅತ್ಯಂತ ವಿರಳ.

ಸುಮಾರು ೧೬ನೇ (ಕ್ರಿ.ಶ. ೧೬೪೪) ಶತಮಾನದ ನಂತರ ಕರ್ನಾಟಕಕ್ಕೆ ಮಹಾರಾಷ್ಟ್ರದ ಭಾಗದಿಂದ ಬಂದಂತಹ ಕಲಾವಿದರುಗಳಲ್ಲಿನ ಗೊಂಬೆಗಳಲ್ಲಿ ನಾಸಿಕ್‌ನ ಪೈಠಾನಿ ಪೈಂಟಿಂಗ್ಸ್ ಪ್ರಭಾವದ ಆಶಯಗಳನ್ನು ಕಾಣಬಹುದು. ಪೈಠಾನಿ ಪೈಂಟಿಂಗ್ಸ್‌ನ ವಿಶೇಷವೆಂದರೆ ಸಾಲು ಕುದುರೆಗಳು, ಛತ್ರಿ–ಚಾಮರ ಹಿಡಿದ ಪರಿಚಾರಕರು ಮತ್ತು ಎದ್ದು ತೋರುವ ಗೋಲದಾಕಾರದ ಕಣ್ಣುಗಳು ಮತ್ತು ಆಕೃತಿಯ ಕೈಯಲ್ಲಿ ಪುಷ್ಪವಿರುವಂತೆ ವಿನ್ಯಾಸವಿರುತ್ತದೆ. ಸಾಮಾನ್ಯವಾಗಿ ಜನಪ್ರಿಯ ಪಾತ್ರಗಳಾದ ರಾಜ, ರಾಣಿಯಂತಹ ಪಾತ್ರಗಳು ಕುದುರೆ ಏರಿ ಬರುವಂತೆ ಹೆಣ್ಣು ಪಾತ್ರಗಳು ಪಲ್ಲಕ್ಕಿಯಲ್ಲಿ ಬರುವಂತೆ ಚಿತ್ರಿಸಲಾಗುತ್ತದೆ. ಕೆಲವೊಮ್ಮೆ ಮುಂಗೈಯಲ್ಲಿ ಗಿಣಿಯನ್ನು ಕೂರಿಸಿಕೊಂಡ ಆಶಯಗಳಿರುತ್ತವೆ. ಪರಿಚಾರಕ ಪಾತ್ರಗಳು ಮುಖ್ಯ ಪಾತ್ರಗಳ ಸಂಯೋಜನೆ ಯಲ್ಲಿ ಕುಬ್ಜವಾಗಿರುವಂತೆ ಚಿತ್ರಿಸಲಾಗಿರುತ್ತದೆ. ಪೈಠಾನಿ ಪೈಂಟಿಂಗ್ಸ್–ನ ವಿನ್ಯಾಸ ತಳೆದ ಚಿತ್ರಗಳ ಅಥವಾ ತೊಗಲುಗೊಂಬೆಗಳಲ್ಲಿ ಎದ್ದು ಕಾಣುವಂತಹುದು ಗೋಲಾಕಾರದ ಕಣ್ಣುಗಳು, ರಾಕ್ಷಸ ಪಾತ್ರದಲ್ಲಿ ಕೆಲವೊಮ್ಮೆ ಹಣೆಯ ಮೇಲ್ಭಾಗದಲ್ಲಿಯೂ ಕಣ್ಣುಗಳು ಬರುವಂತೆ ಚಿತ್ರಿಸಲಾಗುತ್ತದೆ. ಇಂತಹ ಗೊಂಬೆಗಳನ್ನು ಕುಣಿಸುವಾಗ ಗೊಂಬೆಯಾಟಕಾರನ ಕೈ ಚಳಕದಿಂದ ಪಾರ್ಶ್ವ–ಮುಖದ ಭಂಗಿಯನ್ನು ತೋರಿಸುತ್ತ ಗೊಂಬೆಕುಣಿಸುವುದು ಪರಂಪರೆಯ ಶೈಲಿ ಯಾಗಿದ್ದವು. ಸುಮಾರು ೧೯ನೇ ಶತಮಾನದ ಚಿತ್ರಗಳಲ್ಲಿ ಕೆಲವೊಮ್ಮೆ ಬ್ರಿಟಿಷ್ ಸೈನಿಕನ ಉಡುಪುಗಳು, ಬಂದೂಕು ಹಿಡಿದ ಚಿತ್ರಗಳ ವಿನ್ಯಾಸವನ್ನು ಕೆಲವೊಮ್ಮೆ ಕಾಣಬಹುದಾಗಿದೆ.

ಸಂಪ್ರದಾಯದ ನಿಯಮದಂತೆ ಹುಲ್ಲೆ ಚರ್ಮವನ್ನು ಮಾತ್ರ ದೇವತಾ ಪಾತ್ರಗಳಿಗೆ ಮತ್ತು ರಾಕ್ಷಸ ಪಾತ್ರಗಳಿಗೆ ಕುರಿ ಚರ್ಮವನ್ನು ಬಳಸುತ್ತಿದ್ದರು. ಇಂದು ಸಂವಿಧಾನಾತ್ಮಕವಾಗಿ ಬೇಟೆಯಾಡುವುದು ನಿಷೇಧವಿರುವುದರಿಂದ ಪೇಟೆಯಲ್ಲಿ ದೊರಕುವ ಆಡು–ಕುರಿ ಚರ್ಮವನ್ನು ಕ್ರಯಕ್ಕೆ ಪಡೆದು, ಬಿಸಿ ನೀರಿನಲ್ಲಿ ಸಂಸ್ಕರಿಸಿ, ಪಾರದರ್ಶಕತೆಗೆ ತಂದುಕೊಂಡು ಗೊಂಬೆಗಳ ಚಿತ್ರ ರಚನೆ ಮಾಡುವರು. ಒಣಗಿಸಿದ ಅರೆ ಪಾರದರ್ಶಕವಿರುವ ಚರ್ಮವನ್ನು ನೆಲದ ಮೇಲಿರಿಸಿ ಮೊನಚಾದ ದಬ್ಬಣ ಅಥವಾ ಸೂಜಿಯಿಂದ ಮೊದಲು ಚಿತ್ರದ ರೇಖೆ ರಚಿಸುವರು. ಆ ಬಳಿಕ ರೇಖೆಗಳಿಗೆ ಕಪ್ಪು ಬಣ್ಣ ತುಂಬುವರು. ಚಿತ್ರಗಾರಿಕೆಯ ಅನುಭವ ಇಲ್ಲದ ಕಲಾವಿದರು ಹಳೆಯ ಗೊಂಬೆಗಳನ್ನು ನೆಲದಲ್ಲಿರಿಸಿ, ಅದರ ಮೇಲೆ ಅರೆಪಾರದರ್ಶಕದಂತಹ ಚರ್ಮದ ಹಾಳೆಯನ್ನು ಇಟ್ಟು ನಕಲು ಮಾಡಿ ಆನಂತರ ಗೊಂಬೆಗಳಿಗೆ ಬಣ್ಣ ತುಂಬುವರು. ಕರ್ನಾಟಕದಲ್ಲಿ ತೊಗಲುಗೊಂಬೆ ಚಿತ್ರ ರಚನೆ ಮಾಡುವ ಕಲಾವಿದರು ಬಹಳ ವಿರಳ. ಪ್ರಸ್ತುತ ಕೈಬೆರಳೆಣಿಕೆಗೆ ಸಿಗುವಷ್ಟು ಕಲಾವಿದರನ್ನು ಕೆಲವೇ ಪ್ರಾಂತ್ಯಗಳಲ್ಲಿ ಗುರುತಿಸಬಹುದು. ಮುಖ್ಯವಾಗಿ ಬಳ್ಳಾರಿಯ ಬೆಳಗಲ್ ವೀರಣ್ಣ ಇವರ ಮಕ್ಕಳು, ನಾಗಮಂಗಲದ ಸೂರ್ನಳ್ಳಿ ಶಿವರಾಮು, ಬೇಲೂರು ಸಮೀಪದ ಕೋಟೆರಾಮನ ಕೊಪ್ಪಲು ಹೊಂಬಯ್ಯನ ಮಗ ರಾಮಯ್ಯ ಮುಂತಾದವರು. ಗೊಂಬೆಗಳಿಗೆ ರಂಧ್ರ ಮತ್ತು ವಿವಿಧ ಆಕಾರಗಳನ್ನು ಕೊರೆಯಲು ಮೊನಚಾದ ಚೀರು ಮತ್ತು ಮನಾಳಿ ಎಂಬ ಪರಿಕರಗಳನ್ನು ಬಳಸುತ್ತಾರೆ. ಗೊಂಬೆಗಳ ಎರಡೂ ಭಾಗದಲ್ಲಿ ಬಣ್ಣಗಳನ್ನು ತುಂಬುವರು, ಮತ್ತು ಗೊಂಬೆಗಳ ಚಾಲನೆಗೆ ಹೊಂದಿಕೊಳ್ಳುವಂತೆ ಈಚಲು

ಗರಿಯ ಕಡ್ಡಿ ಅಥವ ಗರಿಯ ನಡುಭಾಗವನ್ನು ಮುಖ್ಯವಾಗಿ ಗೊಂಬೆಯ ಕೈ-ಕಾಲುಗಳಿಗೆ ಅಥವಾ ಮಧ್ಯ ಭಾಗಕ್ಕೆ ಹೊಲಿದು ಸಿದ್ಧಗೊಳಿಸುವರು.

ಕರ್ನಾಟಕದ ತೊಗಲು ಗೊಂಬೆಯಾಟದ ಚಿತ್ರಗಾರಿಕೆಯಲ್ಲಿ ಲೇಪಾಕ್ಷಿ ಶೈಲಿ ಹಾಗೂ ವಿಜಯನಗರ ಶೈಲಿಗಳ ದಟ್ಟ ಪ್ರಭಾವ ಇರುವುದನ್ನು ಗಮನಿಸಬಹುದು. ಹಾಸನ ಭಾಗದ ಗೊಂಬೆಗಳಲ್ಲಿ ಮುಖ್ಯವಾಗಿ ಹೊಯ್ಸಳ ಶೈಲಿಯ ಪ್ರತಿಮಾಶಿಲ್ಪ ಪ್ರಭಾವವನ್ನು ಗುರುತಿಸ ಬಹುದಾಗಿದೆ. ಉತ್ತರ ಕರ್ನಾಟಕ ಭಾಗದಲ್ಲಿನ ಗೊಂಬೆಯಾಟಕಾರರು ದಕ್ಷಿಣ ಕರ್ನಾಟಕಕ್ಕೆ ವಲಸೆ ಬಂದಾಗ ಇವರಲ್ಲಿದ್ದ ಗೊಂಬೆಗಳು ಬಹುತೇಕ ಪೈತಾನಿ ಚಿತ್ರಗಾರಿಕೆಯನ್ನು ಹೋಲು ವಂತಿದ್ದವು. ಇಂದು ಪೈತಾನಿ ಬಣ್ಣಗಾರಿಕೆ ಮತ್ತು ಶಿಲ್ಪಗಾರಿಕೆಯ ಚಿತ್ರಗಳ ಗೊಂಬೆಗಳನ್ನು ವಸ್ತು ಸಂಗ್ರಹಾಲಯಗಳಲ್ಲಿ ಕಾಣಬಹುದಾಗಿದೆ. ಮುಖ್ಯವಾಗಿ ಗೊಂಬೆಯಾಟಕಾರರು ರಚಿಸುವ ಗೊಂಬೆಗಳ ಕಣ್ಣುಗಳ ವೈಶಿಷ್ಟ್ಯತೆ ಪ್ರಮುಖವಾದುದಾಗಿದೆ. ಈ ವಿಶೇಷ ಶೈಲಿಯ ಪ್ರತಿಮಾಶಿಲ್ಪದ ಚಿತ್ತಾರವನ್ನು ವಿಶ್ವದ ಖ್ಯಾತಿವೆತ್ತ ಪಿಕಾಸೋನಂತಹ ಚಿತ್ರಕಾರ ತನ್ನ ಚಿತ್ರ ಬರವಣಿಗೆಯಲ್ಲಿ ಅಳವಡಿಸಿಕೊಂಡು ಪಿಕಾಸ್ಸೋ ಶೈಲಿಯೆಂದು ಜಾಗತಿಕ ಮಟ್ಟದಲ್ಲಿ ಖ್ಯಾತಿಗಳಿಸಿರುವುದನ್ನು ಅಧ್ಯಯನಕಾರರು ಗಮನಿಸಿರುವರು.

ತೊಗಲುಗೊಂಬೆಯಾಟದ ಕಲಾವಿದರು ಚಿತ್ರ ರಚನೆ ಮಾಡುವಾಗ ಸಂಯೋಜನೆ ಪ್ರಮಾಣ ಬದ್ದತೆಯಿಂದ ಕೂಡಿರುತ್ತದೆ ಎಂಬುದು ಊಹೆ ಮಾತ್ರ, ಚಿತ್ರ ರಚನೆ ಮಾಡುವ ಕಲಾವಿದನಿಗೆ ತನ್ನದೇ ಆದ ಕಣ್ಣಳತೆಗಳಿರುತ್ತವೆ. ಪರಂಪರಾಗತ ಶೈಲಿಯ ಚಿತ್ರಗಳಲ್ಲಿ ಪಾತ್ರಗಳ ಪರಿಚಯವಾಗುವುದು ಗೊಂಬೆಗೆ ತೊಡಿಸಿದ ವೇಷ-ಭೂಷಣದ ವಿನ್ಯಾಸದ ಮೇಲೆ ಪಾತ್ರಗಳನ್ನು ಗುರುತಿಸಲಾಗುತ್ತದೆ. ಕೆಲವೊಮ್ಮೆ ಪಾತ್ರಗಳ ಕಿವಿಯಾಭರಣದಿಂದ ಅವುಗಳ ಸ್ವರೂಪ ಎಂತಹದು ಎಂದು ತಿಳಿದುಕೊಳ್ಳಬಹುದಾಗಿದೆ. ಪರಂಪರೆಯ ಗೊಂಬೆಗಳಲ್ಲಿ ಮುಖ್ಯವಾಗಿ ರಾಮ, ಲಕ್ಷ್ಮಣ, ಅಥವಾ ರಾಜನ ಪಾತ್ರದ ಗೊಂಬೆಗಳಲ್ಲಿ ವಿಶೇಷವಾದ ಆಭರಣವೊಂದನ್ನು ಕಾಣಬಹುದು. ಅದು ಕಿವಿಯಿಂದ ಮುಂದಕ್ಕೆ ಚಾಚಿಕೊಂಡಿರುವಂತೆ ಅಥವಾ ಗಲ್ಲದ ಭಾಗಕ್ಕೆ ಒತ್ತಿಕೊಂಡ ರೀತಿಯಲ್ಲಿ ವಿನ್ಯಾಸವಿರುತ್ತದೆ. ಈ ಆಭರಣವು ಏನನ್ನು ಪ್ರತಿನಿಧಿಸುತ್ತದೆ ಎಂಬುದು ಕಲಾವಿದರುಗಳಿಗೆ ಮಾಹಿತಿಯಿಲ್ಲ. ಸೂಕ್ಷ್ಮ ದೃಷ್ಟಿಯಿಂದ ಈ ಆಭರಣದ ವಿನ್ಯಾಸ ಗಮನಿಸಿದರೆ ಉಡುವನ್ನು (ಹಲ್ಲಿ ಜಾತಿಯ ಪ್ರಾಣಿ) ಹೋಲುತ್ತದೆ. ಏಕೆಂದರೆ ಗೊಂಬೆಯಾಟದ ಕಲಾವಿದರುಗಳ ಕುಲನಾಮದ ಪ್ರಕಾರ 'ಗೋಡ್ ಪಡ್' ಜನವರ್ಗದವರು ರಾಜ ಮರ್ಯಾದೆಗೆ ಹತ್ತಿರವಾದವರು, ಪ್ರಾಮಾಣಿಕರು, ಸ್ವಾಮಿನಿಷ್ಠೆಯುಳ್ಳವರು ಎಂದು ಅಧ್ಯಯನದಿಂದ ತಿಳಿಯಲಾಗಿದೆ. 'ಗೋಡ್‌ಪಡ್' ಜನವರ್ಗಕ್ಕೆ ಸೇರಿದವರು ಉಡುವಿನ ಸಹಾಯದಿಂದ ಕೋಟೆಯನ್ನು ಏರಲು ರಾಜನಿಗೆ ಸಹಾಯ ಮಾಡುತಿದ್ದುದರಿಂದ ಇವರುಗಳನ್ನು 'ಗೋಡಪಡ್ ದಾಯತೀಕರ್' ಎಂದು ಕರೆಯಲಾಗಿದೆ.

ತೊಗಲುಗೊಂಬೆಯಾಟದ ವೇಷ-ಭೂಷಣದ ಸಂಯೋಜನೆಯಲ್ಲಿ ಲೇಪಾಕ್ಷಿ ಹಾಗೂ ಹಂಪಿ ಬಿತ್ತಿ ಚಿತ್ರದ ಆಶಯಗಳನ್ನು ಕಾಣಬಹುದು. ಹಾಸ್ಯ ಪಾತ್ರಧಾರಿಯಾಗಿ ಬರುವ ಕಿಳ್ಳೆಕ್ಯಾತ ಮತ್ತು ಬಂಗಾರಕ್ಕ ಈ ಪಾತ್ರಗಳನ್ನು ಸದಾ ನಗ್ನವಾಗಿ ತೋರಿಸುವಂತಹುದು ಸೋಜಿಗವಾದರೂ ಪರಂಪರೆಯ ಕ್ರಮದಂತೆ ಹಾಸ್ಯಪಾತ್ರಧಾರಿಯನ್ನು ನಗ್ನವಾಗಿ

ಅಭಿವ್ಯಕ್ತಿಸುವುದು ಪರಂಪರೆಯ ಸೂಕ್ಷ್ಮತೆಯಾಗಿದೆ. ಈ ಪಾತ್ರಗಳು ಶ್ರೀಸಾಮಾನ್ಯನಿಗೆ ಹಾಸ್ಯ-ಭೇಡನೆ ಮಾಡುವಂತೆ ಕಂಡುಬಂದರೂ ಗೊಂಬೆಯಾಟ ನಡೆಸುವವರಿಗೆ ಕಿಳ್ಳೆಕ್ಯಾತ ಕುಲದೇವತೆ (totem) ಇದ್ದಂತೆ. ಏಕೆಂದರೆ ಗೊಂಬೆಯನ್ನು ಸಂರಚನೆ ಮಾಡುವಾತ ತನ್ನ ಸಾಂಸ್ಕೃತಿಕ ಗುರುತು ಅಥವಾ ಚೇತನ ಇರಲೆಂದು ತನ್ನ ಶಿಖೆಯ ಕೂದಲನ್ನು ಜೋಡಿಸಿಟ್ಟಿರುತ್ತಾನೆ ಎಂಬುದು ಗೌಪ್ಯವಾದ ವಿಚಾರ. ಕಲ್ಲಿನಲ್ಲಿ ಮೂರ್ತಿ ಶಿಲ್ಪಿ ಮಾಡುವ ಸ್ಥಪತಿಗಳೂ ಕೂಡ ಪ್ರಾಣಸ್ಥಾಪನೆ ಸಂದರ್ಭಕ್ಕೆ ಮುಂಚಿತವಾಗಿ ತಮ್ಮ ಗಡ್ಡದ ಅಥವಾ ಶಿಖೆಯ ಒಂದು ಕೂದಲನ್ನು ಗೌಪ್ಯವಾಗಿ ಇಡುವುದು ಸಂಪ್ರದಾಯವಾಗಿದೆ. (ಸಂದರ್ಶನ : ಹನುಮಂತಾಚಾರ್ಯ - ೧೯೮೦-ದೇವನಹಳ್ಳಿ-ಶಿಲ್ಪಿಗಳು) ಹೀಗಾಗಿ ಕಿಳ್ಳೆಕ್ಯಾತನ ಜುಟ್ಟು ಪರಂಪರೆಯ ಕುರುಹಾಗಿರುವುದನ್ನು ಚಿತ್ರದಲ್ಲಿ ಕಾಣಬಹುದಾಗಿದೆ.

### ತೊಗಲುಗೊಂಬೆ ಬಣ್ಣಗಾರಿಕೆ

ಇಂದಿನ ಕಂಪ್ಯೂಟರ್ ಯುಗದಲ್ಲಿ ಯಾವ ಗೊಂಬೆಯಾಟಕಾರನೂ ದೇಶೀ ಬಣ್ಣ ಬಳಸುವಷ್ಟು ಆಸಕ್ತಿ ತೆಗೆದುಕೊಂಡಂತಿಲ್ಲ. ಕಪ್ಪು ಬಣ್ಣವನ್ನು ಕೆಲವರು ತಯಾರಿಸಿಕೊಳ್ಳುತ್ತಾರೆ. ಆರಂಭದಲ್ಲಿ ಮುಖ್ಯವಾಗಿ ಇದ್ದ ಬಣ್ಣಗಳು ಕೆಂಪು ಸಿಂಧೂರ, ಕಪ್ಪು ಮತ್ತು ಹಳದಿ ಬಣ್ಣಗಳು. ಶೃಂಗಾರ ರಾವಣನ ಪಾತ್ರಕ್ಕೆ ಹಸಿರು, ರಾಮ-ಕೃಷ್ಣ ಪಾತ್ರಗಳಿಗೆ ನೀಲಿ ಬಳಸುತ್ತಿದ್ದರು. ಇನ್ನು ಉಳಿದಂತೆ ಮೈಬಣ್ಣದ ಕಾಂತಿ ಕೊಡುವಂತಹ ಬಣ್ಣವು ಚರ್ಮದಲ್ಲೇ ಇದ್ದುದರಿಂದ ಮುಖವರ್ಣಿಕೆ ಬಣ್ಣವನ್ನು ಸಾಂಪ್ರದಾಯಕ ಗೊಂಬೆಗಳಿಗೆ ಕೊಡುತ್ತಿರಲಿಲ್ಲ. ಆದರೆ ಇಂದು ಆಧುನಿಕ ನಾಟಕ, ಬಯಲಾಟ, ಸಿನಿಮಾ, ಕ್ಯಾಲೆಂಡರ್ ಆರ್ಟ್‌ಗಳ ಪ್ರಭಾವದಿಂದ ಕೆಲವು ಗೊಂಬೆಗಳಿಗೆ ಮುಖವರ್ಣಿಕೆಯ ಬಣ್ಣಗಾರಿಕೆ ನೀಡಿದ ಚಿತ್ರ ರಚನೆಯನ್ನು ನಾಗಮಂಗಲ, ಹಾಸನ, ಬಳ್ಳಾರಿ ಈ ಭಾಗಗಳಲ್ಲಿನ ಕಲಾವಿದರಲ್ಲಿ ಕಾಣಬಹುದು. ಇಂದಿನ ಕಿಳ್ಳೆಕ್ಯಾತ ಜನವರ್ಗದ ಕಲಾವಿದರುಗಳ ಬಣ್ಣಗಾರಿಕೆಯೂ ಒಂದು ಕಲೆ ಎಂಬ ವಿಷಯವಾಗಿ ಎಂದೂ ಗಂಭೀರ ಆಲೋಚನೆ ಮಾಡದಿರುವುದೂ ಒಂದು ಕೊರತೆಯಾಗಿದೆ. ಈ ಹಿನ್ನೆಲೆಯಲ್ಲಿ ಗೊಂಬೆಯಾಟಕಾರರಿಗೇ ವಿಶೇಷ ಶಿಬಿರಗಳನ್ನು ಮಾಡುವುದರ ಮೂಲಕ ಈ ಕಲಾವರ್ಗದ ಸದಸ್ಯರುಗಳನ್ನು ಪ್ರೋತ್ಸಾಹಿಸುವುದು ಅಗತ್ಯವಾಗಿದೆ. ತೊಗಲುಗೊಂಬೆಗಳಿಗೆ ವರ್ಣ ಸಂಯೋಜನೆ ಮಾಡುವಾಗ ಅಥವ ಬಣ್ಣ ತುಂಬುವಾಗ ಎಡರೂ ಕಡೆ ಬಣ್ಣ ತುಂಬುವಿಕೆ ಅಗತ್ಯ. ಈ ಹಿನ್ನೆಲೆಯಲ್ಲಿ ಬಣ್ಣಗಳನ್ನು ಸಮಾನಾಂತರವಾಗಿ ಹಂಚಬೇಕೆಂಬ ನಿಯಮವಿಲ್ಲ. ಪ್ರತೀ ಚಿತ್ರಗಳ ಕೆಳಗೆ ಅಡ್ಡ ಪಟ್ಟಿಕೆ ಇರುತ್ತವೆ. ಈ ಅಡ್ಡ ಪಟ್ಟಿಕೆಗಳಲ್ಲಿ ಕೆಲವೊಮ್ಮೆ ಗೊಂಬೆರಾಮರಿಗೆ ಪರಕೆಯೋಪಾದಿಯಲ್ಲಿ ಚರ್ಮವನ್ನು ದಾನ ಮಾಡಿದವರು ತಮ್ಮ ಹಳೆಯ ಶಾಶ್ವತವಾಗಿರಿಸಲು ಅವರ ಹೆಸರುಗಳನ್ನು ಬರೆಸುವುದು ಮತ್ತು ಭೇಟೆಯಾಡಿದ ಚರ್ಮವನ್ನು ಗೊಂಬೆರಾಮನಿಗೆ ಕೊಡುವುದು ಪುಣ್ಯವೆಂದು ಭಾವಿಸಲಾಗಿತ್ತು. ಪ್ರತೀ ತೊಗಲು ಗೊಂಬೆಗಳಲ್ಲಿರುವ ಅಡ್ಡ ಪಟ್ಟಿಕೆಯು ಕುಣಿಸುವವರಿಗೆ ಭದ್ರತೆಯನ್ನು ಒದಗಿಸುತ್ತದೆ. ಈ ಹಿನ್ನೆಲೆಯಲ್ಲಿ ಅಡ್ಡ ಪಟ್ಟಿಕೆಯನ್ನು ಅಂಗೈ ಅಗಲಕ್ಕಿಂತ ಅಧಿಕವಾಗಿರುವಂತೆ ಇರಿಸಿರುತ್ತಾರೆ.

**ಕೆಂಪು ಬಣ್ಣ :** ಕೆಂಪು ಬಣ್ಣವನ್ನು ನಾಗಪರ್ಣ ಕಳ್ಳಿ (Cocinellifera cochineal cactus) ಹಣ್ಣುಗಳ ರಸದಿಂದ ತಯಾರಿಸುತ್ತಿದ್ದರು. ಗೊಬ್ಬಿ ಮೇಣದೊಂದಿಗೆ (Acacia

Arabica-a thorny babool tree) ಈ ರಸವನ್ನು ಒಂದುವಾರ ಕಾಲ ಕೊಳೆ ಹಾಕಿ ಬಣ್ಣ ತಯಾರಿಸಿಕೊಳ್ಳುತ್ತಿದ್ದರು.

**ಕಪ್ಪು ಬಣ್ಣ** : ಕಪ್ಪು ಬಣ್ಣವನ್ನು ತೆಂಗಿನ ಚಿಪ್ಪು ಸುಟ್ಟು ದೊರಕುವ ಇದ್ದಿಲ ಪುಡಿಗೆ ಗೊಜ್ಜೆ ಮೇಣ ಸೇರಿಸಿ, ಸಂಸ್ಕರಣ ಮಾದರಿಯಲ್ಲಿ ಕೊಳೆಸಿ ಒಂದು ವಾರಕಾಲ ಇಬ್ಬನಿಯಲ್ಲಿರಿಸಿ ಬಣ್ಣ ತಯಾರಿಸಿಕೊಳ್ಳುತ್ತಿದ್ದರು.

**ನೀಲಿ ಬಣ್ಣ** : ನೀಲವರ್ಣವನ್ನು ತುಂಬೆ (Leucas Indica or Phlomia Indica) ಸೊಪ್ಪಿನ ರಸದಿಂದ ತಯಾರಿಸುತ್ತಿದ್ದರು. ಕೇರಳದ ತೊಗಲು ಗೊಂಬೆಯಾಟಕಾರರು ಆಯುರ್ವೇದದಲ್ಲಿ ಬಳಸುವ ಅಮರನೀಲ ಗಿಡದ ಸೊಪ್ಪನ್ನು ಬಳಸುವರು. ತುಂಬೆ ಸೊಪ್ಪಿನ ರಸವನ್ನು ಗೊಬ್ಬಿ ಮೇಣದೊಂದಿಗೆ ಒಂದುವಾರ ಕಾಲ ಕೊಳೆ ಹಾಕಿ ಬಣ್ಣ ಸಿದ್ಧಮಾಡಿ ಕೊಳ್ಳುತ್ತಿದ್ದರು.

**ಹಳದಿ ಬಣ್ಣ** : ಉರ್ಚಿಕಾಯಿ (Porita Tree: Botanical Name : Malvaceae) ಅಥವಾ ಹೂವರಸಿಕಾಯಿ (ಬೆಂಗಾಲಿ ಕಾಯಿ) ಈ ಹಣ್ಣುಗಳ ರಸವನ್ನು ಬೇವಿನ ಮರದ ಅಂಟಿನೊಂದಿಗೆ ಸೇರಿಸಿ ಸಂಸ್ಕರಿಸಿದ ತರುವಾಯ ಹಳದಿ ಬಣ್ಣವಾಗಿ ಬಳಸುವರು.

**ಕುಂಚ \ ಬ್ರೆಷ್** : ಚರ್ಮದ ಮೇಲೆ ಬಣ್ಣ ಹಚ್ಚಲು ಅಳಿಲಿನ ಬಾಲದ ಕೂದಲು ಅಥವಾ ಆಕಳಿನ ಕಿವಿ ಕೂದಲಿನಿಂದ ತಯಾರಿಸಿಕೊಂಡ ಕುಂಚಗಳನ್ನು ಸಂಪ್ರದಾಯದಲ್ಲಿ ಬಳಸುತ್ತಿದ್ದರು. (ಎಂ.ಎಸ್. ನಂಜುಂಡ ರಾವ್ ೨೦೦೦, ಪು-೭೪). ಕಪ್ಪು ರೇಖೆಗಳನ್ನು ಎಳೆಯಲು ಜೋಳದ ಕಡ್ಡಿ, ಅಥವಾ ತೆಂಗಿನಗರಿ ಕಡ್ಡಿಯನ್ನು ಬಳಸುತ್ತಿದ್ದರು. ಇಂದು ಅಂಗಡಿಯಲ್ಲಿ ದೊರಕುವ ಲೇಖನಿ ಕಡ್ಡಿಯನ್ನು ಕೆಲವು ಕಲಾವಿದರು ರೇಖಾ ಚಿತ್ರ ಬಳಸಲು ಆರಂಭಿಸಿರುವರು. ಇದೊಂದು ಉತ್ತಮ ಬದಲಾವಣೆಯೂ ಆಗಿದೆ. ಭಾರತೀಯ ಕಲೆಯ ಲಕ್ಷಣ ಶಾಸ್ತ್ರಗಳಲ್ಲಿ ವಿವರಿಸುವಂತೆ ರೇಖೆಯೇ ಚಿತ್ರದಲ್ಲಿ ಬಹುಮುಖ್ಯ ಅಂಶ ಎನ್ನಲಾಗಿದೆ (ಎಂ.ಎಸ್. ನಂಜುಂಡ ರಾವ್ ೨೦೦೦, ಪು-೭೪). ಆದರೆ ತೊಗಲುಗೊಂಬೆಯಾಟ ಚಿತ್ರರಚನಾ ಕಲಾಕಾರರು ಮೊದಲು ಮೊನಚಾದ ಕಡ್ಡಿಯಿಂದ ರೇಖೆ ಬಿಡಿಸಿ ತರುವಾಯ ಕಪ್ಪು ಬಣ್ಣವನ್ನು ರೇಖೆಗೆ ತುಂಬುವರು. ಆನಂತರ ಆಕಾರಕ್ಕೆ ತಕ್ಕನಾಗಿ ಬೇಕಾದ ಬಣ್ಣ ತುಂಬುವುದು ಸಂಪ್ರದಾಯವಾಗಿದೆ.

ತೊಗಲುಗೊಂಬೆಯಾಟದವರು ಕೊಲ್ಲಾಪುರ, ರತ್ನಗಿರಿ (ಮಹಾರಾಷ್ಟ್ರ) ಈ ಭಾಗದಿಂದ ಬಂದವರೆಂದು ಬಲವಾದ ಅಭಿಪ್ರಾಯ ಕೆಲವು ವಿದ್ವಾಂಸರುಗಳಲ್ಲಿದೆ. ಇನ್ನು ಕೆಲವರು ಇವರು ಮಧ್ಯ ಪ್ರದೇಶ, ಬಂಗಾಳ ಮೂಲದಿಂದ ಬಂದವರೆಂದೂ ಅಭಿಪ್ರಾಯಿಸಿರುವರು. ಇವರ ಕುಲಗಳನ್ನು ಸೂಕ್ಷ್ಮವಾಗಿ ಅಧ್ಯಯನ ನಡೆಸಿದ ಎಸ್.ಎ. ಕೃಷ್ಣಯ್ಯ ಇವರ ಪ್ರಕಾರ ಮಧ್ಯ ಭಾರತದಲ್ಲಿ ವಾಸವಾಗಿರುವ ಚಿತ್ರಕದಿದಾಸ್ ಈ ಜನವರ್ಗದಲ್ಲಿ ಕುಲಗಳೊಡನೆ (ಮುಖ್ಯವಾಗಿ ಅಟಕ್ ಮತ್ತು ಮಾನಕಾರಿ) ಸಮಾನ ಅಂಶ ಕಂಡುಬಂದಿರುವುದರಿಂದ ತೊಗಲು ಗೊಂಬೆಯಾಟದವರು ಮಧ್ಯಭಾರತದ ಭಾಗದಿಂದ ಮಹಾರಾಷ್ಟ್ರಕ್ಕೆ ಬಂದು ಆ ನಂತರ ಇತರೆ ರಾಜ್ಯಗಳಿಗೆ ಪ್ರಸರಣ ಹೊಂದಿರಬೇಕೆಂದು ಅಭಿಪ್ರಾಯಿಸಲಾಗಿದೆ. ಈ ಕುಲಗಳನ್ನು

ಕರ್ನಾಟಕದ ಅನೇಕ ಗೊಂಬೆಯಾಟದ ವಂಶಾವಳಿಯ ಮೂಲಕ ತಿಳಿದುಕೊಳ್ಳಬಹುದಾಗಿದೆ. ಈ ಸಂಬಂಧವಾಗಿ ಸುಮಾರು ೬೦ ಕುಲನಾಮಗಳ ಪಟ್ಟಿಯನ್ನು ಸಂಶೋಧಕ ಎಸ್.ಎ. ಕೃಷ್ಣಯ್ಯ ಇವರು ಸಂಗ್ರಹಿಸಿರುವರು. ಗೊಂಬೆಯಾಟಕ್ಕೆ ಸಂಬಂಧಿಸಿದ ಒಂದು ಶಿಲಾಲಿಪಿಯನ್ನೂ (ಹದ್ದಸ್ತಿನ ಕಲ್ಲು) ಬೆಂಗಳೂರು-ಮೈಸೂರು ಹೆದ್ದಾರಿಯಲ್ಲಿ ಸಿಗುವ ಚನ್ನಪಟ್ಟಣದ ಕೆಲಿಗೆರೆ ಎಂಬ ಗ್ರಾಮದಲ್ಲಿ ಪತ್ತೆ ಹಚ್ಚಲಾಗಿದೆ. ಕ್ರಿಶ. ೧೮೫೦-ರಿಂದ ೧೯೧೦ರ ಒಳಗೆ ಈ ಹದ್ದಸ್ತಿನ ಕಲ್ಲು ಅಥವಾ ಶಿಲಾಲಿಪಿ ಮಾಡಿಸಲಾಗಿದೆ ಎಂದು ತಿಳಿಯಲಾಗಿದೆ. (ಎಸ್.ಎ. ಕೃಷ್ಣಯ್ಯ ೧೯೮೮). ಮೂಲತಃ ಕಿಳ್ಳೆಕ್ಯಾತರು ಪ್ರಾಣಿಗಳನ್ನು ಭೇಟೆಯಾಡುವುದರಲ್ಲಿ ಉತ್ತಮ ಪರಿಣತಿ ಹೊಂದಿದವರಾಗಿದ್ದಾರೆ. ಬೇಸಿಗೆಯಲ್ಲಿ ಕೆಲವೊಮ್ಮೆ ಹಿನ್ನೀರಿನಲ್ಲಿ ಮೀನು ಹಿಡಿಯುವ ವೃತ್ತಿಯನ್ನೂ ಮಾಡುವುದರಿಂದ ಇವರನ್ನು ಬುಂಡೇಕ್ಯಾತ ಎಂದೂ ಕರೆದಿರುವರು. ಕೆಲವೊಮ್ಮೆ ಹೆಂಗಸರುಗಳು ಹಗಲು ವೇಳೆ ಹಚ್ಚೆ ಹುಯ್ಯುವ ಕಾಯಕ ಅಥವಾ ಕೌದಿ ಹೊಲಿದು ಸಿದ್ಧಪಡಿಸಿಕೊಡವರು. ಇದೊಂದು ಉಪವೃತ್ತಿಯಾಗಿದೆ. ರಾತ್ರಿ ವೇಳೆ ಹೆಂಗಸರು ಪ್ರದರ್ಶನದಲ್ಲಿ ಭಾಗಿಗಳಾಗಿ ಸ್ತ್ರೀಧ್ವನಿಯ ಪಾತ್ರಗಳನ್ನು ನಿರ್ವಹಿಸುತ್ತಾರೆ.

ಪ್ರಸ್ತುತ ಪರಂಪರೆ ಶೈಲಿಯ ಕಥೆಗಳನ್ನು ಹೊರತುಪಡಿಸಿ ಹೊಸ ಮಾದರಿಯ ಕಥೆಗಳನ್ನು ಪ್ರಯೋಗಕ್ಕೆ ತಂದು ಜನಮೆಚ್ಚುಗೆ ಗಳಿಸಿದವರಲ್ಲಿ ಬಳ್ಳಾರಿಯ ಬೆಳಗಲ್ಲು ವೀರಣ್ಣ ಮತ್ತು ಇವರ ಕುಟುಂಬದ ಕಲಾವಿದರು ಮೊದಲಿಗರಾಗಿದ್ದಾರೆ. ಎಸ್.ಎ.ಕೃಷ್ಣಯ್ಯ ಇವರ ಮಾರ್ಗದರ್ಶನದಲ್ಲಿ ೧೯೮೧ರಲ್ಲಿ ಮಹಾತ್ಮ ಗಾಂಧಿ ಕಥೆಯನ್ನು ನವದೆಹಲಿಯ ಇಂದಿರಾ ಗಾಂಧಿ ಪ್ರತಿಷ್ಠಾನದ ಸಂಸ್ಥೆಯಲ್ಲಿ ಮೊದಲಿಗೆ ಪ್ರಯೋಗವಾಗಿದ್ದು ಇದೇ ಕಥೆ ಇಂದು ಹೆಚ್ಚು ಪ್ರಯೋಗಗಳನ್ನು ಕರ್ನಾಟಕ ರಾಜ್ಯದಲ್ಲಿಯೂ ನೀಡಲಾಗಿದೆ. ಇದಲ್ಲದೆ ಜಗಜ್ಯೋತಿ ಬಸವೇಶ್ವರ, ಸ್ವಾತಂತ್ರ್ಯ ಸಂಗ್ರಾಮ ಮುಂತಾದ ಕಥಾನಕಗಳನ್ನೂ ಬೆಳಗಲ್ಲು ವೀರಣ್ಣ ಇವರು ಪ್ರದರ್ಶಿಸಿದ್ದಾರೆ. ಹೊಸದಾಗಿ ನಿರ್ಮಿತಿಗೊಂಡ ಬಹುತೇಕ ಚಿತ್ರಗಳನ್ನು ಸಂಡೂರಿನ ಖ್ಯಾತ ಕಲಾವಿದರಾದ ವಿ.ಟಿ. ಕಾಳಯ್ಯ ಮಾಸ್ತರ್ ಇವರಿಂದ ಮಾಡಿಸಿರುವರು.

### ಒರಿಸ್ಸಾದ ರಾವಣ ಛಾಯಾ (ತೊಗಲು ಗೊಂಬೆಯಾಟ)

ಒರಿಸ್ಸಾದ ಛಾಯಾ ಚಿತ್ರ ಅಥವಾ ತೊಗಲುಗೊಂಬೆಯಾಟವು ಅತ್ಯಂತ ಪುರಾತನ ಶೈಲಿಯಲ್ಲಿ ರೂಪಿತವಾಗಿರುವ ಪ್ರತಿಮಾ ಶಿಲ್ಪವನ್ನು ಛಾಯಾಚಿತ್ರಗಳಲ್ಲಿ ಕಾಣಬಹುದು. ಸರಿಯಾದ ಪ್ರೋತ್ಸಾಹವಿಲ್ಲದೆ ಅತ್ಯಂತ ಹೀನಸ್ಥಿತಿಯಲ್ಲಿರುವ ಇವರು ಮುಖ್ಯವಾಗಿ ಭಾಟ್ ಜನಾಂಗದ ಕಲಾಕಾರರು. ಛಾಯಾಚಿತ್ರವನ್ನು ಹೆಚ್ಚಾಗಿ ರಾಮನವಮಿ ಸಂದರ್ಭದಲ್ಲಿ ಪ್ರದರ್ಶನ ನೀಡುವರು. ಕಲಾವಿದರು ತಿಳಿಸುವಂತೆ ಈ ಕಲೆಯು ಮುಖ್ಯವಾಗಿ ಜನರಂಜನೆಗಾಗಿ ಆರಂಭವಾಯಿತು. ದಕ್ಷಿಣ ಭಾರತ ಹಾಗೂ ಒರಿಯಾದ ಎಲ್ಲ ಕಲಾಕಾರರು ಮುಖ್ಯವಾಗಿ ರಾಮನ ಭಕ್ತರಾಗಿದ್ದು ಛಾಯಾಚಿತ್ರ ಪ್ರದರ್ಶನ ಮುನ್ನ ರಾಮನನ್ನು ಪೂಜಿಸಿ, ದೀಪ ಬೆಳಗಿಸಿ ಪ್ರದರ್ಶನ ನೀಡುವರು. ಸುಮಾರು ೧೮ನೇ ಶತಮಾನಕ್ಕೂ ಪೂರ್ವದಲ್ಲಿ ರಚಿತವಾದ ವಿಚಿತ್ರ ರಾಮಾಯಣ ಪಠ್ಯವನ್ನು ಕತೆಗೆ ಇವರು ಬಳಸಿಕೊಳ್ಳುವರು. ಪ್ರಾಚೀನ ವಾದ್ಯವಾದ ಕಂಜಾಸಿ (ದೇಶಿ ವೀಣೆ) ದಾಸರ ಚಿಟಿಕೆ ಕುಬುಜಿ (ತಾಳ) ಉಪಯೋಗಿಸುವರು. ಸುಮಾರು ೨೫೦ ವರ್ಷಕ್ಕೂ ಹೆಚ್ಚು ಇತಿಹಾಸ ಹೊಂದಿರುವ ಈ ಗೊಂಬೆಗಳು ಕೆಲವರಲ್ಲಿ ಇದ್ದು

ಎಷ್ಟೋ ಕಲಾಕಾರರು ಪ್ರೋತ್ಸಾಹವಿಲ್ಲದೆ ಈ ಕಲೆಯನ್ನು ತ್ಯಜಿಸಿರುವರು. ಹಾಸ್ಯ ಪಾತ್ರವಾಗಿ ಮೊದಲಿಗೆ ಪರದೆಯ ಹಿಂಬದಿಯಿಂದ ಪರಿಚಯಿಸಿದ ತರುವಾಯ ಇತರ ಪುರಾಣ ಪಾತ್ರಗಳನ್ನು ಸನ್ನಿವೇಷಕ್ಕೆ ತಕ್ಕಂತೆ ಹಾಡು ಸಂಭಾಷಣೆಯೊಂದಿಗೆ ಗೊಂಬೆಯನ್ನು ಕುಣಿಸುವರು. ಉಪಯೋಗಕ್ಕೆ ಬಾರದ ಗೊಂಬೆಗಳನ್ನು ಉಳಿಸಿಕೊಳ್ಳಬಾರದೆಂಬ ನಂಬಿಕೆಯಿಂದ ಅನೇಕ ಗೊಂಬೆಗಳನ್ನು ಕಲಾಕಾರರು ನೀರಿನಲ್ಲಿ ವಿಸರ್ಜಿಸುವ ಸಂಪ್ರದಾಯದಿಂದಾಗಿ ಅತ್ಯಂತ ಪುರಾತನ ಗೊಂಬೆಗಳು ಉಳಿದಿಲ್ಲ ಎಂಬ ಕೊರಗು ಇವರದು. ಜಿಂಕೆ ಚರ್ಮದಿಂದ ಮಾಡಲ್ಪಟ್ಟ ಗೊಂಬೆಗಳು ಅತ್ಯಂತ ಶ್ರೇಷ್ಠವೆಂಬ ಭಾವನೆ ಈ ಕಲಾಕಾರರಲ್ಲಿದ್ದು ಹೊಸ ಗೊಂಬೆ ತಯಾರಿ ಮಾಡಿಕೊಳ್ಳಲು ಬನುವಾ ಎಂಬ ಬೇಡ ಜಾತಿಯ ಜನಾಂಗದವರಿಂದ ಚರ್ಮವನ್ನು ಹಣಕೊಟ್ಟು ಪಡೆಯುವ ಪದ್ಧತಿ ಪರಂಪರೆಯಲ್ಲಿ ರೂಢಿಯಲ್ಲಿತ್ತು. ಇತ್ತೀಚಿನ ದಿನಗಳಲ್ಲಿ ಬೇಟೆ ನಿಷಿದ್ಧವಾದುದರಿಂದ ಮತ್ತು ಗೊಂಬೆಯಾಟಕ್ಕೆ ಸರಿಯಾದ ಪ್ರೋತ್ಸಾಹವಿಲ್ಲದಿರುವುದರಿಂದ ಗಣನೀಯವಾಗಿ ಈ ಕಲೆ ಕ್ಷೀಣಿಸಿದೆ.

ಜಿಂಕೆ ಚರ್ಮ ಬಳಸುವಲ್ಲಿ ಮತ್ತು ಸಂಸ್ಕರಿಸುವಲ್ಲಿ ಮುಖ್ಯವಾಗಿ ಚರ್ಮದ ರೋಮವನ್ನು ತೆಗೆದು ಅರೆ ಪಾರದರ್ಶಕ ಸ್ಥಿತಿಗೆ ಬರುವಂತೆ ಸಂಸ್ಕರಿಸುವ ಇವರ ಗೊಂಬೆಗಳು ಪೂರ್ಣ ರಂಗನ್ನು ಹೊರಚೆಲ್ಲದೆ ಮಂದವಾದ ನೆರಳಿನ ಚಿತ್ರಗಳಾಗಿ ತೋರುತ್ತವೆ. ಕಲಾಕಾರರು ತಮ್ಮ ಕೈ ಚಳಕದ ಮೂಲಕ ಗೊಂಬೆಯಾಟ ನಡೆಸಿಕೊಡುವರು. ಒರಿಯಾದ ಗೊಂಬೆಗಳು ಕರ್ನಾಟಕದ ಗೊಂಬೆಗಳಂತೆ ಬಣ್ಣದ ಚಿತ್ತಾರವಿಲ್ಲದೆ ಸರಳವಾದ ಕಲಾ ಕುಸುರೀ ಕೌಶಲ್ಯವನ್ನು ಹೊಂದಿದೆ. ಸಂಪ್ರದಾಯ ಗೊಂಬೆಗಳು ಹೆಚ್ಚಾಗಿ Composition Puppet ಶೈಲಿಯಲ್ಲಿರುವುದನ್ನು (ಕೈ-ಕಾಲು ಚಾಲನೆಗೆ ಬರದಂತಹ ಗೊಂಬೆಗಳು) ಕಾಣಬಹುದು. ಚಿಕ್ಕ ಪ್ರಮಾಣದ ಗೊಂಬೆಗಳನ್ನು ಹೊಂದಿರುವ ಈ ಕಲಾಕಾರರು ಪರದೆಯ ಹಿಂಬದಿಯಲ್ಲಿ ಕುಳಿತು ಗೊಂಬೆಯಾಟ ನಡೆಸುವರು.

ರಾವಣ-ಛಾಯ ಎಂದರೆ ರಕ್ಕಸರ ರಾಜನ ಕತೆ, ರಕ್ಕಸ ರಾಜನ ಪ್ರತಾಪ ಬಲದಿಂದ ಹಾಗೂ ಮಾಯೆಯಿಂದ ಜಗತ್ತಿನ ಜನರನ್ನು ನಿಯಂತ್ರಿಸುತ್ತಿದ್ದನು. ಈತನ ಪ್ರತಾಪ ಎಲ್ಲಾ ಕಡೆ ಇದ್ದಿತ್ತು. ದಶರಥನಲ್ಲಿ ಭಕ್ತಾದಿಗಳು ಬಂದು ರಾವಣನ (ರಕ್ಕಸ ರಾಜ) ಉಪಟಳದಿಂದ ಉದ್ಧರಿಸಬೇಕೆಂದು ಯಾಚಿಸಿದಾಗ ಈತನ ಛಾಯೆ ಸೃಷ್ಟಿಯು ಜಗತ್ತಿನ ಸೃಷ್ಟಿಯನ್ನು ಹಿಡಿತದಲ್ಲಿದ್ದಾಗ ಋಷ್ಯ ಶೃಂಗನ ಮೂಲಕ ಪುತ್ರಕಾಮೇಷ್ಠಿಯಾಗ ನಡೆಸಿ ರಾಮ-ಲಕ್ಷ್ಮಣ-ರ ಜನನಕ್ಕೆ ಕಾರಣನಾಗುತ್ತಾರೆ. ರಾವಣನ ಛಾಯೆಯನ್ನು ತೆಗೆದುಹಾಕಿದ ಶ್ರೀರಾಮನಿಂದಾಗಿ ಗೊಂಬೆಯಾಟದ ಪ್ರದರ್ಶನವನ್ನು ರಾವಣ ಛಾಯ ಎಂದು ಕರೆಯಲಾಗಿದೆ. ರಾವಣಛಾಯಾ ಪ್ರದರ್ಶನವನ್ನು ನಡೆಸುವ ಕಲಾವಿದರು ೧೬ನೇ ಶತಮಾನದ ವಿಚಿತ್ರ ರಾಮಾಯಣದ ಕಥಾನಕವನ್ನು ಬಳಸುವರು. ಜಿಂಕೆಯ ಚರ್ಮದಿಂದ ಮೂಡಿಸಿದ ಚಿತ್ರಗಳನ್ನು ನಿರೂಪಣೆ ಮಾಡುವುದರ ಮೂಲಕ ಪ್ರದರ್ಶನ ಕೊಡುವ ಜನವರ್ಗದವರನ್ನು ರಾವಣಛಾಯಾ-ವಾಲ ಎಂದು ಕರೆಯಲಾಯಿತು. ಆರಂಭದಲ್ಲಿ ಶಬರ ಜನಾಂಗದವರು ಕುಂಬ ಮರದ ತೊಗಟೆಯಿಂದ ಮಾಡಿದ ಚಿತ್ರಗಳನ್ನು ನೆರಳು ಗೊಂಬೆಯಾಟಕ್ಕೆ ಬಳಸುತ್ತಿದ್ದರು. ಹೀಗಾಗಿ ಇಂತಹ ಗೊಂಬೆಯಾಟವನ್ನು 'ಕುಂಬಿ ಚಾಲಿಕ ಪುತ್ಥಲಿ' ಎಂದು ಪರಂಪರೆಯಲ್ಲಿ

ಕರೆಯಲಾಗುತಿತ್ತು. ಕರ್ನಾಟಕದಲ್ಲಿ ಒಂದು ಕಾಲದಲ್ಲಿದ್ದ ತೊಗಲುಗೊಂಬೆಯಾಟದವರು ನಡೆಸುತ್ತಿದ್ದ 'ಕಿಶ್ಲೀ ಬಾವಲೀ ಕೇಲ್' ಪರಂಪರೆಯ ಅಂಶಗಳನ್ನು 'ಕುಂಬೀ ಚಾಲೀಕ ಪುತ್ಥಲಿ'-ಯಲ್ಲಿ ಕಾಣಬಹುದಾಗಿದೆ.

ಒರಿಸ್ಸಾ ರಾಜ್ಯದ ಕಾಡಿನಲ್ಲಿ ವಾಸಿಸುತ್ತಿದ್ದ ಜಾಂಗ್ ಲೋಗ್, ಬೇಡರು ಈ ಸಮುದಾಯ ದವರು ಮುಖ್ಯವಾಗಿ ಜಿಂಕೆ ಚರ್ಮಗಳನ್ನು ಗೊಂಬೆಯಾಟ ನಡೆಸುವ ಜನವರ್ಗದವರಿಗೆ ಒದಗಿಸುತ್ತಿದ್ದರು. ಸುಮಾರು ೧೭ನೇ ಶತಮಾನದ ಆರಂಭದಲ್ಲಿ ರಾವಣನ ಚಿತ್ರವನ್ನು ಶಂಬರ್ ಚಮಣ್ (ಕಾಡು ಕುರಿ ಚರ್ಮ) ಬಳಸಿ ರಾವಣ ಪಾತ್ರವನ್ನು ಮತ್ತು ದೈವತಾ ಪಾತ್ರಗಳಿಗೆ ಹರಿಣ್ ಚಮಣ್ (ಜಿಂಕೆ ಚರ್ಮ) ಬಳಸಿ ಚಿತ್ರಗಳನ್ನು ರಚಿಸುತ್ತಿದ್ದರು.

ಚರ್ಮ ಸಂಸ್ಕರಣದ ಬಳಿಕ ಕಲಾವಿದನು ಉಪವಾಸ ವ್ರತದಲ್ಲಿದ್ದು ಹೊಸ ವಸ್ತ್ರ ಧರಿಸಿ ಚರ್ಮವನ್ನು ಪೂಜೆ ಮಾಡುತ್ತಿದ್ದರು (ಭಾನುವಾರ ಮತ್ತು ಸೋಮವಾರ ಪ್ರಶಸ್ತವಾದ ದಿನ). ಕಲ್ಲಿನ ಮೇಲೆ ಚರ್ಮ ಇರಿಸಿ ಅದರ ರೋಮವನ್ನು ತೆಗೆದು ಹಳದಿ ಬಣ್ಣದ ಕಲ್ಲಿನ ಮೂಲಕ ರೇಖಾಚಿತ್ರ ಮೂಡಿಸಿ ಆಯಾಆಕಾರಕ್ಕೆ ತಕ್ಕಂತೆ ಕತ್ತರಿಸಿ ಗೊಂಬೆ ತಯಾರಿಸಿಕೊಳ್ಳುತ್ತಿದ್ದರು. ಗೊಂಬೆ ಹರಿದರೆ ಅಥವಾ ತುಂಡಾದರೆ ಕುಟುಂಬದ ಮುಖ್ಯಸ್ಥನು ಸ್ನಾನ ಮಾಡಿ ಉಪಯೋಗಕ್ಕೆ ಬಾರದ ಗೊಂಬೆಯನ್ನು ನದಿಯಲ್ಲಿ ವಿಸರ್ಜಿಸುವನು. ರಾವಣಛಾಯಾ ಪ್ರದರ್ಶನದಲ್ಲಿ ಹಾಸ್ಯ ಪಾತ್ರವಾಗಿ ಭಂಡಾರಿಯನ್ನು ಉಪಯೋಗಿಸುವುದಿದೆ. ಏಕೆಂದರೆ ಇವರೆಲ್ಲ ಶುಭಕಾರ್ಯಗಳಿಗೆ ಭಂಡಾರಿಯನ್ನು ಆಮಂತ್ರಿಸಿ ಪುಣ್ಯಕಾರ್ಯ ನಡೆಸುವರು. ಈ ಹಿನ್ನೆಲೆಯಲ್ಲಿ ಭಂಡಾರಿಯ ಪ್ರವೇಶ ಶುಭ ತರುವುದೆಂಬ ನಂಬಿಕೆಯಿಂದಾಗಿ ಈ ಪಾತ್ರವನ್ನು ಆಯ್ಕೆ ಮಾಡಿಕೊಂಡಿರುವರು. ಕಲಾಕಾರರು ತಮ್ಮ ಪ್ರದರ್ಶನದ ಬಳಿಕ ರೈತಾಪಿ ಜನ ಇರುವ ಹೊಲಗದ್ದೆಗಳಿಗೆ ಹೋಗಿ ಕಂಜಣಿ (ಕಂಜಿರ ಅಥವಾ ದಮಡಿ ವಾದ್ಯ) ನುಡಿಸಿ ಧಾನ್ಯ ಸಂಗ್ರಹಿಸುವರು.

### ಆಂಧ್ರ ಪ್ರದೇಶದ 'ತೋಲು ಬೊಮ್ಮಲಾಟ'

ಆಂಧ್ರ ಪ್ರದೇಶದ ತೊಗಲು ಗೊಂಬೆಯಾಟವು ಮುಖ್ಯವಾಗಿ ಅರೆ ಮರಾಠಿ ಜನಾಂಗದಲ್ಲಿ ವಾಂಶಿಕವಾಗಿ ಸಾಗಿ ಬಂದ ಕಲೆ. ಈ ವರ್ಗದ ಕಲಾಕಾರರು ಆಂಶಿಕವಾಗಿ ಅಲೆಮಾರೀ ಜೀವನವನ್ನು ನಡೆಸುವವರಾಗಿದ್ದು ಈ ಜನಾಂಗದ ಬಹುತೇಕ ಕಲಾಕಾರರು ವಿವಿಧ ವೃತ್ತಿಗಳಲ್ಲಿ ಇಂದು ತೊಡಗಿಸಿಕೊಂಡಿರುವರು. ಮುಖ್ಯವಾಗಿ ಆಂಧ್ರ ಪ್ರದೇಶದ 'ಸುರಭಿ' ನಾಟಕ ತಂಡವು ಈ ಗೊಂಬೆಯಾಟದ ಜನಾಂಗದವರಿಂದಲೇ ಆರಂಭವಾಗಿರುವುದನ್ನು ಇಲ್ಲಿ ಸ್ಮರಿಸಬಹು ದಾಗಿದೆ. ನಾಟಕಗಳನ್ನು ಹಳ್ಳಿಗಳಲ್ಲಿ ಕಲಿಸುವುದು, ಹಾಗೂ ಕೆಲವರು ಮೀನು ಹಿಡಿಯುವುದು ಅಲ್ಲದೆ ಕೌದಿ ಹೊಲಿಯುವಂತಹ ಉಪ ವೃತ್ತಿಗಳಲ್ಲಿಯೂ ತೊಡಗಿರುವುದನ್ನು ಕಾಣಬಹುದು. ಆಂಧ್ರ ಪ್ರದೇಶದ ತೊಗಲು ಗೊಂಬೆಯಾಟಕಾರರನ್ನು 'ಬೊಮ್ಮಲಾಟವಾಳ್ಳು' ಎಂದೂ ಗೊಂಬೆ ಯಾಟವನ್ನು 'ತೋಲು ಬೊಮ್ಮಲಾಟ' ಎಂದು ಕರೆದಿರುವರು. ಮುಖ್ಯವಾಗಿ ರಾಮಾಯಣ, ಮಹಾಭಾರತ, ಭಾಗವತ ಕಥೆಗಳನ್ನು ವೀಧಿನಾಟಕಂ ಅಥವಾ ಬಯಲಾಟ ಶೈಲಿಯಲ್ಲಿ ಕತೆಯನ್ನು ಹಾಗೂ ಹಾಡನ್ನು ಹೇಳುವ ಇವರ ಹಾಡುಗಾರಿಕೆ ಎಲ್ಲರನ್ನೂ ಮೆಚ್ಚಿಸಬಲ್ಲದು.

ಇವರ ಹಾಡಿನ ತಾರಕಕ್ಕೆ ಸರಿಯಾಗಿ 'ಮುಖವೀಣೆ' ಎಂಬ ವಾದ್ಯವಿದ್ದು ಪ್ರತಿ ಸೊಲ್ಲಿನ ಜೊತೆಯಲ್ಲಿ ಸೇರುವ ಪಲ್ಲವಿ, ಅನು ಪಲ್ಲವಿಗೆ ಹೊಸ ರಾಗದ ಸಂಚನ್ನು ಈ ವಾದ್ಯ ಕೊಡುವುದು. ಆಂಧ್ರಕವಿ ಪಾಲ್ಕುರಿಕೆ ಸೋಮನಾಥನು ತನ್ನ ಬಸವ ಪುರಾಣ ಮತ್ತು ಪಂಡಿತಾರಾಧ್ಯ ಚರಿತ ಗ್ರಂಥಗಳಲ್ಲಿ (ಕ್ರಿ.ಶ. ೧೨ನೇ ಶತಮಾನ) ತೊಗಲುಗೊಂಬೆಯಾಟದ ಬಗ್ಗೆ ಉಲ್ಲೇಖಿಸಿರುವುದನ್ನು ಗಮನಿಸಬಹುದು.

ಆಂಧ್ರದ ತೊಗಲು ಗೊಂಬೆಯಾಟವು ಪೂರ್ವ ಗೋಧಾವರಿ ಹಾಗೂ ಅನಂತಪುರ, ಧರ್ಮಾವರಂ, ಪಾವಗಡ ಇತ್ಯಾದಿ ಭಾಗಗಳಲ್ಲಿ ಹೆಚ್ಚಾಗಿ ಕಂಡು ಬರುವುದು. ಕಥಾ ಪ್ರಸಂಗಗಳನ್ನು ತೆಲುಗು ಭಾಷೆಯಲ್ಲಿ ನಡೆಸಿಕೊಡುವುದರ ಜೊತೆಗೇ ಅನೇಕ ಹಾಸ್ಯ ಪಾತ್ರಗಳನ್ನು ಪರದೆಯ ಹಿಂದೆ ತಂದು ಹಾಸ್ಯದ ಹೊನಲಿನಲ್ಲಿ ಪ್ರೇಕ್ಷಕರನ್ನು ತಲ್ಲೀನರಾಗಿಸಬಲ್ಲ ಕಲಾ ಪ್ರೌಢಿಮೆ ಇವರಲ್ಲಿರುವುದು. ಆಳೆತ್ತರದ ಅಳತೆಯಲ್ಲಿರುವ ಆಂಧ್ರದ ತೊಗಲು ಗೊಂಬೆಗಳನ್ನು ಕುಣಿಸುವ ಕಲಾಕಾರರು ಪರದೆಯ ಹಿಂಬದಿಯಲ್ಲಿ ನಿಂತು ಕುಣಿಸುವ ಮೋಡಿಯನ್ನೂ ಗೊಂಬೆಗಳ ಜೊತೆಯಲ್ಲಿ ಕಾಣಬಹುದು. ಆಳೆತ್ತರದ ಗೊಂಬೆಗಳನ್ನು ಹೆಚ್ಚಾಗಿ ಕುರಿ, ಆಡು ಇವುಗಳ ಚರ್ಮದಿಂದ ಮಾಡಿ, ಬಣ್ಣ ತುಂಬಿ ಕಡ್ಡಿಗಳ ಮೂಲಕ ಕುಣಿಸಲು ಬರುವಂತೆ ಜೋಡಿಸಿ ಹಾಡು-ಸಂಭಾಷಣೆ ಹಾಗೂ ಲಯಬದ್ಧವಾಗಿ ಕುಣಿಸುವುದರ ಮೂಲಕ ಹೊಸ ಜೀವ ಕಳೆಯನ್ನು ಗೊಂಬೆಗಳಿಗೆ ನೀಡುವ ಕಲೆ ಅಪರೂಪವೆನಿಸಿದೆ. ಕಥಾ ಪ್ರಸಂಗಗಳನ್ನು ರಾತ್ರಿಯಿಡೀ ಪ್ರದರ್ಶನ ನೀಡಬಲ್ಲ ಈ ಕಲಾಕಾರರು ಹೆಚ್ಚಾಗಿ 'ಭಾಸ್ಕರ ರಾಮಾಯಣಮು' ಹಾಗೂ 'ಮೊಲ್ಲ ರಾಮಾಯಣಮು' ಭಾಗವನ್ನು ಪ್ರದರ್ಶನದ ಪಠ್ಯವಾಗಿ ಬಳಸುವವರು. ಮೌಖಿಕವಾಗಿ ರಾಮಾಯಣದ ಅನೇಕ ಪದ್ಯಗಳನ್ನು ಬಲ್ಲ ತೊಗಲು ಗೊಂಬೆಯಾಟದವರಲ್ಲಿ ಕುಟುಂಬದ ಗಂಡಸರು ವಾದ್ಯಗಳನ್ನು ಹೆಚ್ಚಾಗಿ ನುಡಿಸಿದರೆ, ಹೆಂಗಸರು ಹಾಡು, ಸಂಭಾಷಣೆ ಗಳಲ್ಲಿ ಸಹಕರಿಸುವರು. ಇವರ ಮನೆ ಮಾತು ಅರೆ-ಮರಾಠಿ, ಪ್ರದರ್ಶನವನ್ನು ತೆಲುಗಿನಲ್ಲಿ ನೀಡುವ ಕಲಾವಂತಿಕೆಯಿಂದ ಮತ್ತು ವಿಜಯನಗರ ಕಾಲದಲ್ಲಿ ಈ ಕಲೆಗೆ ಬಹಳಷ್ಟು ಪ್ರೋತ್ಸಾಹ ದೊರತಿದ್ದರಿಂದಲೋ ಏನೋ ತೊಗಲು ಗೊಂಬೆಯಾಟ ಕಲಾಕಾರರು ಹೆಚ್ಚಾಗಿ ಆಂಧ್ರದಲ್ಲಿ ಇಂದಿಗೂ ಕಾಣಬಹುದು.

'ತೋಲು ಬೊಮ್ಮಲಾಟ' ಎಂದು ಕರೆಯಲ್ಪಡುವ ಆಂಧ್ರ ಪ್ರದೇಶ ಈ ಕಲಾಪ್ರಕಾರದಲ್ಲಿ ಮುಖ್ಯವಾಗಿ ಎರಡು ಶೈಲಿಗಳನ್ನು ಗುರುತಿಸಬಹುದಾಗಿದೆ. ೧. ದಕ್ಷಿಣದ ಶೈಲಿ ೨. ಉತ್ತರದ ಶೈಲಿ. ಇವುಗಳಲ್ಲಿ ದಕ್ಷಿಣದ ಶೈಲಿಯಲ್ಲಿ ಹಳೆಯ ಸಾಂಪ್ರದಾಯಿಕ ಶೈಲಿಯನ್ನು ಉಳಿಸಿಕೊಂಡಿದ್ದರೆ ಉತ್ತರದ ಕಡೆಯ ಗೊಂಬೆಯಾಟದ ಪ್ರದರ್ಶನಗಳು ಹೆಚ್ಚಾಗಿ ನಾಟಕೀಯ ಶೈಲಿಯನ್ನು ಅಳವಡಿಸಿಕೊಂಡಿವೆ.... 'ತೋಲು ಬೊಮ್ಮಲಾಟ' ದಲ್ಲಿ ಬಳಸುವ ಸಾಂಪ್ರದಾಯಿಕ ಹಾಡುಗಳನ್ನು 'ದರು'ಗಳು ಹಾಗು 'ದ್ವಿಪದ'ಗಗಳೆಂದು ಕರೆಯಲ್ಪಡುವ ೨ ಸಾಲುಗಳ ಹಾಡುಗಳ ಮಟ್ಟುಗಳನ್ನು ಗುರುತಿಸಬಹುದಾಗಿದೆ. 'ದರು'ಗಳಲ್ಲಿ ಪ್ರವೇಶದ ಹಾಡುಗಳಿಗೆ ಸಂಬಂಧಿಸಿ ಪ್ರವೇಶದರುಗಳು, ಯುದ್ಧ ಸಂಬಂಧಿಸಿದ 'ಯುದ್ಧದರು'-ಗಳು ಹಾಗೂ ಸಂವಾದವನ್ನು ಅನುಸರಿಸಿ ಸಂವಾದ-ದರು-ಗಳು ಬಹುಮುಖ್ಯವಾಗಿರುತ್ತದೆ.

ಆಂಧ್ರ ಪ್ರದೇಶದ ತೊಗಲು ಗೊಂಬೆಯಾಟದ ಪಠ್ಯವನ್ನು ಗಮನಿಸಿದಾಗ 'ದ್ವಿಪದ' ಹಾಗೂ 'ದರು'ಗಳನ್ನೊಳಗೊಂಡ ಪಠ್ಯದ ನಿರ್ಮಿತಿ ಇರುವುದು ಕಂಡುಬರುತ್ತದೆ. ಪ್ರಾದೇಶಿಕತೆ ಯನ್ನು ಹೊಂದಿಕೊಂಡು ಈ ಪಠ್ಯಗಳು ಕೂಡಾ ಮಾರ್ಪಾಡನ್ನು ಪಡೆದಿವೆ. ಹಳ್ಳಿಗಳಲ್ಲಿ ಪ್ರದರ್ಶನ ನೀಡುವಾಗ ಪಠ್ಯದ ಜೊತೆಗೆ ಸ್ಥಳೀಯವಾದ ಐತಿಹ್ಯ, ಪುರಾಣ, ಜನಪದಕತೆಗಳನ್ನು ಸೇರಿಸಿಕೊಂಡು ಪ್ರದರ್ಶನ ನೀಡುವ ಕಲೆಯಲ್ಲಿಯೂ ಈ ಕಲಾಕಾರರು ಖ್ಯಾತಿ ಪಡೆದಿರುವರು.

ತೋಲುಬೊಮ್ಮಲಾಟವನ್ನು ನಡೆಸಿಕೊಡುವವರನ್ನು ಮುಖ್ಯವಾಗಿ 'ಕಾಪು', 'ಕಾಪುಬಲ್ಜೀಗ' ಹಾಗೂ 'ಬಲ್ಜೀ-ಜನವರ್ಗದವರುಗಳೆಂದು ಗುರುತಿಸಬಹುದಾಗಿದೆ. ಇವರು ಮುಖ್ಯವಾಗಿ 'ಆರ್ಯನಾಯಕ' ಪಂಗಡಕ್ಕೆ ಸೇರಿದವರು. ಪೂರ್ವದಲ್ಲಿ 'ಜಂಗ' ಪಂಗಡಕ್ಕೆ ಸೇರಿದವರೂ ಇದನ್ನು ನಡೆಸುತ್ತಿದ್ದರಂತೆ. 'ತೋಲ್‌ಬೊಮ್ಮಲಾಟ'ವನ್ನು ವೃತ್ತಿಯನ್ನಾಗಿಸಿಕೊಂಡವರು ಹೆಚ್ಚಿನವರು ಮಧ್ಯಮ ಕೆಳವರ್ಗದವರಾಗಿದ್ದಾರೆ. ಮಹಾರಾಷ್ಟ್ರದಿಂದ ವಲಸೆಯ ಮೂಲಕ ಈ ಕಲಾಕಾರರು ಬಂದವರೆಂದು ನಂಬಲಾಗಿದೆ. ಪ್ರದರ್ಶನಕ್ಕೆ ಹೆಚ್ಚಾಗಿ ಪುರಾಣ ಪ್ರಸಂಗಗಳನ್ನು ಆಯ್ದುಕೊಳ್ಳುತ್ತಾರೆ. ೧೮ರಿಂದ ೨೦ರಾತ್ರಿಗಷ್ಟು ದೀರ್ಘವಾಗಿ ನಡೆಯುವ ಪ್ರದರ್ಶನಗಳೂ ಇವೆ. ಸಾಂಪ್ರದಾಯಿಕ ಹಿರಿಯ ಕಲಾವಿದರಾದ ಶ್ರೀರಾಜಾರಾಮ್ ಹಾಗು ಶ್ರೀಮತಿ ಅಂಜನಮ್ಮ ನಂಥವರು ಕಲಾವಿದರು ಇನ್ನೂ ಈ ಧೀರ್ಘಾವಧಿಯ ಪ್ರದರ್ಶನವನ್ನು ಉಳಿಸಿಕೊಂಡು ಬಂದಿದ್ದಾರೆ. ಮೂಲತಃ ಶ್ರೀರಾಮನ ಭಕ್ತರಾದ ಇವರು ಶ್ರೀರಾಮನವಮಿಯನ್ನು 'ವಾರ್ಷಿಕ' ವನ್ನಾಗಿ ಆಚರಿಸುವರು.

**ಗೊಂಬೆಗಳ ತಯಾರಿ :** ದೇವತಾ ಪಾತ್ರಗಳನ್ನು ಜಿಂಕೆಯ ಚರ್ಮಗಳಿಂದ ತಯಾರಿಸಿದರೆ ರಾಕ್ಷಸ ಹಾಗೂ ಇನ್ನಿತರ ಪಾತ್ರಗಳನ್ನು ಕುರಿಯ ಚರ್ಮದಿಂದ ತಯಾರಿಸಲಾಗುತ್ತದೆ. ಒಂದೇ ಚರ್ಮದಿಂದ ತಯಾರಿಸುವ ಗೊಂಬೆಗಳನ್ನು 'ಏಕಾಂಡಿ' ಎಂಬುದಾಗಿ ಕರೆಯ ಲಾಗುತ್ತದೆ. ಲೇಪಾಕ್ಷಿ ಮಾದರಿಯ ಕಲಾ ಕೃತಿಗಳಿರುವ ಇಲ್ಲಿಯ ಗೊಂಬೆಗಳು ಹೆಚ್ಚಾಗಿ ಮನುಷ್ಯಾಕೃತಿಯ Life-size ಗೊಂಬೆಗಳಾಗಿರುತ್ತವೆ. ಆಂಧ್ರ ಪ್ರದೇಶದ ಗೊಂಬೆಯಾಟಗಳಲ್ಲಿನ ಒಂದು ವಿಶೇಷವೆಂದರೆ ಇಲ್ಲಿ ಪುರುಷ ಗೊಂಬೆಗಳನ್ನು ಪುರುಷರೇ ಆಡಿಸಿದರೆ ಸ್ತ್ರೀ ಪಾತ್ರದ ಗೊಂಬೆ (ಪಾತ್ರ)-ಗಳನ್ನು ಸ್ತ್ರೀಯರು ಆಡಿಸುತ್ತಾರೆ. ಇದರಿಂದಾಗಿ ಪರದೆಯ ಮೇಲೆ ಗೊಂಬೆಗಳ ಚಲನವಲನಗಳಲ್ಲಿ ಸಮತೋಲನವನ್ನು ಕಾಯ್ದುಕೊಳ್ಳಲು ಅನುಕೂಲವಾಗುವುದು. ಗೊಂಬೆಗಳನ್ನು ಚರ್ಮದಿಂದ ಮೊದಲು ನಿರ್ಮಿಸಿ ಬಣ್ಣವನ್ನು ತುಂಬಿದ ಆನಂತರ ಅದರ ಚಲನವಲನಗಳಿಗನುಕೂಲವಾಗುವಂತೆ ಕತ್ತರಿಸಿ ಹೊಲಿಯಲಾಗುವುದು. ಪ್ರತೀ ಗೊಂಬೆಗಳಿಗೆ ಹೆಚ್ಚೆಂದರೆ ೧೦-ರಿಂದ ೧೬ ಹೊಲಿಗೆಗಳನ್ನು ಹಾಕಲಾಗುತ್ತದೆ.

### ಗೊಂಬೆಗಳ ಬಣ್ಣಗಾರಿಕೆ

ಆಂಧ್ರದ ಗೊಂಬೆಗಳಿಗೆ ಪ್ರಧಾನವಾಗಿ ಕಪ್ಪು, ಕೆಂಪು, ನೀಲಿ, ಹಸಿರು ಹಾಗೂ ಹಳದಿ ಬಣ್ಣಗಳನ್ನು ಉಪಯೋಗಿಸುವರು. ಲಾಟಾನ್-ದೀಪದ ಮಸಿಯನ್ನು ಸಂಗ್ರಹಿಸಿ ತೆಂಗಿನೆಣ್ಣೆಯ ಮಿಶ್ರಣದೊಂದಿಗೆ ಕಪ್ಪು ಬಣ್ಣವನ್ನು ತಯಾರಿಸಿದರೆ, 'ಬಲ್ಲಪ ಆತ್' ಮರದ ಎಲೆಗಳ ರಸದಿಂದ ಬಣ್ಣವನ್ನು ತಯಾರಿಸಲಾಗುತ್ತದೆ. ಕೆಂಪು ಬಣ್ಣವನ್ನು 'ಮೋತುಕ' ಹೂವಿನಿಂದ

ತಯಾರಿಸಲಾಗುವುದು. ಹೆಚ್ಚು ಬಾಳಿಕೆ ಬರುವ ಈ ಬಣ್ಣವನ್ನು ಸ್ಥಳೀಯವಾಗಿಯೂ ಇಂದಿಗೂ ತಯಾರಿಸಿದರೆ ಕೆಲವೊಂದು ಸಂದರ್ಭಗಳಲ್ಲಿ ಅಂಗಡಿಗಳಲ್ಲಿ ದೊರೆಯುವ ಬಣ್ಣಗಳನ್ನು ಉಪಯೋಗಿಸಲಾಗುತ್ತದೆ.

**ವಾದ್ಯ ಪರಿಕರಗಳು :** ಹಾರ್ಮೋನಿಯಂ, ಶ್ರುತಿ, ೨-ಜೊತೆ ತಾಳಗಳು, ಶಂಖ, ನಫೀರಾ, ಮೃದಂಗ, ಮೆಟ್ಟು ಹಲಗೆಗಳು ಹಾಗೂ ಗೆಜ್ಜೆಗಳನ್ನು ಉಪಯೋಗಿಸುವರು. ಯುದ್ಧ ಸಂದರ್ಭದಲ್ಲಿ ಡೋಲು ವಾದ್ಯ ಬಳಸುತ್ತಿದ್ದರೆ ಇತ್ತೀಚಿನ ದಿನಗಳಲ್ಲಿ ಟಿನ್-ನ ಡಬ್ಬವನ್ನು ಉಪಯೋಗಿಸುವರು.

## ಪ್ರದರ್ಶನ

ಹಳ್ಳಿಗಳಲ್ಲಿ ಪ್ರದರ್ಶನವನ್ನು ಏರ್ಪಡಿಸಿದಾಗ ಆ ಪ್ರದರ್ಶನಕ್ಕೆ ಸಂಬಂಧಿಸಿದ ಗೊಂಬೆಗಳನ್ನು ಉದಾಹರಣೆಗೆ ಮಹಾಭಾರತ ಪ್ರಸಂಗವನ್ನು ಆಡುವುದಾದರೆ, ಶ್ರೀಕೃಷ್ಣ, ಪಂಚಪಾಂಡವರು ಹಾಗೂ ದ್ರೌಪದಿ ಪಾತ್ರದ ಗೊಂಬೆಗಳನ್ನು ಇಡಲಾಗುತ್ತದೆ. ಆ ಮೂಲಕ ಪ್ರೇಕ್ಷಕರಿಗೆ ಮುಂಚಿತವಾಗಿಯೇ ಪ್ರಸಂಗವನ್ನು ಕುರಿತ ತಿಳುವಳಿಕೆಯನ್ನು ನೀಡಲು ಸಹಾಯಕವಾಗುತ್ತದೆ. 'ಪ್ರಾರ್ಥನಾ ದರು'-ವಿನಿಂದ ಆರಂಭಗೊಂಡು ಸರಸ್ವತಿದರು-ವಿನ ಅನಂತರ ಪ್ರಸಂಗ ಪ್ರಾರಂಭವಾಗುತ್ತದೆ. 'ಬಂಗಾರಕ್ಕ'-ನಂತ ಹಾಸ್ಯ ಪಾತ್ರಗಳು ಪುರಾಣ ಕಥೆಗಳಿಂದ ಜನರ ಮನಸ್ಸನ್ನು ಬೇರೆಡೆ ಸೆಳೆಯುವಲ್ಲಿ ಸಹಾಯಕವಾಗುತ್ತದೆ. ಒಟ್ಟು ಪ್ರದರ್ಶನದಲ್ಲಿ 'ಸಂವಾದದರು' ಹಾಗೂ ಯುದ್ಧದರು'-ಗಳು ಬಹಳ ಮುಖ್ಯವಾಗಿರುತ್ತವೆ.

ಗೊಂಬೆಗಳ ರಕ್ಷಣೆಗೆ ಒಂದು ಬಾರಿ ಗೊಂಬೆಗಳನ್ನು ತೆಂಗಿನ ಎಣ್ಣೆಯ ಲೇಪನದೊಂದಿಗೆ ಶುಚಿಗೊಳಿಸಿ, ಈಚಲುಮರದ ಕಡ್ಡಿಗಳಿಂದ ತಯಾರಿಸಿದ ಗಟ್ಟಿ ಪೆಟ್ಟಿಗೆಗಳಲ್ಲಿ ರಕ್ಷಿಸುವರು.

## ಕೇರಳದ ತೋಲ್ ಪಾವೈ ಕೂತ್ತು

ದೇವಾಲಯಗಳ ನಾಡೆಂದೇ ಖ್ಯಾತಿವೆತ್ತ ಕೇರಳದಲ್ಲಿ ಅನೇಕ ಆಚರಣೆಗಳು, ಕಥಾ ನಿರೂಪಣೆಯ ನಾಟಕಗಳು ಆಗಿಂದ್ದಾಗ್ಗೆ ಜರಗುತ್ತಿರುತ್ತವೆ. ಮುಖ್ಯವಾಗಿ ಭಗವತಿ ಮತ್ತು ಮಹಾಕಾಳೀ ದೇವಾಲಯಗಳಲ್ಲಿ ತೊಗಲು ಗೊಂಬೆಯಾಟ ಪ್ರದರ್ಶನ ಕೊಡುವುದು ಸಾಮಾನ್ಯ ವಾಗಿದ್ದವು. ಧಾರ್ಮಿಕವಾಗಿ ಕಡ್ಡಾಯವಾಗಿತ್ತು. ಇಂತಹ ಒಂದು ಸಂಪ್ರದಾಯವು ಕಾಲಕ್ರಮೇಣ ನಶಿಸುತ್ತಾ ಇಂದು ಕೆಲವೇ ಸೀಮಿತ ದೇವಾಲಯಗಳಲ್ಲಿ ತೊಗಲುಗೊಂಬೆಯಾಟ ಪ್ರದರ್ಶನ ಸಾಗುತ್ತಾ ಬಂದಿರುವುದನ್ನು ಅಧ್ಯಯನದಿಂದ ತಿಳಿಯಲಾಗಿದೆ. ತೊಗಲು ಗೊಂಬೆಯಾಟ ನಡೆಸಿಕೊಡುವ ಈ ಜನವರ್ಗದವರನ್ನು ಹೆಚ್ಚಾಗಿ ಕೇರಳದ ಪಾಲ್ಘಾಟ್-(ಪಾಲಕ್ಕಾಡು) ಪ್ರಾಂತ್ಯದಲ್ಲಿ ಕಾಣಬಹುದು. ಇರವರುಗಳು ಮೂಲತಃ ತಮಿಳುನಾಡಿನವರಾಗಿದ್ದು ಕಾಲಕ್ರಮೇಣ ಪಾಲ್ಗಾಟ್ ಕೇರಳಕ್ಕೆ ಸೇರ್ಪಡೆಯಾದ ಬಳಿಕ ಕೇರಳದ ಕಲಾಕಾರರಾದರು. ದ್ರಾವಿಡ ರಾಜ್ಯಗಳಲ್ಲಿ ನೆಲೆಯೂರಿದ ಎಲ್ಲಾ ತೊಗಲುಗೊಂಬೆಯಾಟ ಕಲಾವಿದರ ಮನೆ ಮಾತು ಅರೆ-ಮರಾಠಿ, ಆದರೆ ಕೇರಳದ ಜನವರ್ಗದವರು ಮರಾಠಿ ಭಾಷೆಯನ್ನು ಮಾತೃಭಾಷೆಯಾಗಿ ಬಳಸದೇ ಇರುವಂತಹದು ಒಂದು ವಿಶೇಷತೆಯಾಗಿದೆ. ಕೇರಳದಲ್ಲಿ ತೊಗಲುಗೊಂಬೆಯಾಟವನ್ನು ಪ್ರದರ್ಶನ ನಡೆಸಲು ಕಂಬನ್ ರಾಮಾಯಣದ ಪಠ್ಯವನ್ನು ಹೆಚ್ಚಾಗಿ ಬಳಸುವರು. ಇಲ್ಲಿನ

ವಿಶೇಷವೆಂದರೆ ದೇವಾಲಯಗಳಲ್ಲಿ ಗೊಂಬೆಯಾಟಕ್ಕೆಂದೇ ಸಿದ್ಧಪಡಿಸಿದ ರಂಗಮಂದಿರಗಳು ಭಗವತಿಯ (ಮಾತೃ ದೇವತೆ) ಸಮಕ್ಷಮ ರಚಿಸಲ್ಪಟ್ಟಿರುತ್ತದೆ. ದೇವತೆ ಸಮಕ್ಷಮ ರಚಿಸಲ್ಪಟ್ಟ ರಂಗಮಂದಿರದಲ್ಲಿ (ಕೂತ್ತುಮಂಡಪಂ) ತೊಗಲುಗೊಂಬೆಯಾಟವನ್ನು ಪುಳ್ಳವರ್ ಅಥವಾ ವೇಲನ್ ಜನವರ್ಗದವರು ನಡೆಸಿಕೊಡುತ್ತಾರೆ. ಕೇರಳ ರಾಜ್ಯದಲ್ಲಿ ತೊಗಲುಗೊಂಬೆಯಾಟಕ್ಕೆ ೬೩ ಕೂತ್ತುಮಂಡಪಂ-ಗಳಿವೆ. ಇವುಗಳನ್ನು ಪಾಲಕ್ಕಾಡು ಹಾಗೂ ಸುತ್ತಮುತ್ತ ಇರುವ ಗ್ರಾಮೀಣ ಪ್ರದೇಶಗಳಲ್ಲಿ ಕಾಣಬಹುದಾಗಿದೆ. ವಿಶೇಷವೆಂದರೆ ಕೇರಳದಲ್ಲಿ ನಡೆಸುವ ತೊಗಲು ಗೊಂಬೆಯಾಟವು ಪ್ರೇಕ್ಷಕರಿಗಾಗಿ ನಡೆಯುವುದಿಲ್ಲ. ಮಾತೃ ದೇವತೆಯಾದ ಭಗವತಿ ಒಮ್ಮೆ ಧಾರಕಾಸುರನನ್ನು ವಧಿಸಲು ಹೋದ ಸಂದರ್ಭದಲ್ಲಿ ರಾಮ-ರಾವಣ ಯುದ್ಧ ನಡೆಯಿತಂತೆ. ಇಂತಹ ಅಪರೂಪದ ಯುದ್ಧವನ್ನು ತನ್ನಿಂದ ನೋಡಲಾಗಲಿಲ್ಲ ಎಂದು ಮನನೊಂದು ಪುನರಪಿ ಅಂತಹ ಸನ್ನಿವೇಶವನ್ನು ನೋಡಬೇಕೆಂದು ಅಪೇಕ್ಷಿಸದಳಂತೆ. ಈ ಹಿನ್ನೆಲೆಯಲ್ಲಿ ನೆರಳು ಗೊಂಬೆಯಾಟದ ಮೂಲಕ ರಾಮಾಯಣ ಯುದ್ಧದ ಪಟಚಿತ್ರಗಳ ದೇವಿಯ ಸಮ್ಮುಖದಲ್ಲಿ ಪ್ರದರ್ಶಿಸುವಂತಹ ಆಚರಣೆ ಒಂದು ಸಂಪ್ರದಾಯವಾಗಿ ಬೆಳೆಯಿತು. ಹೀಗಾಗಿ, ಪ್ರತಿವರ್ಷ ಭಗವತಿಯ ವಾರ್ಷಿಕ ಆಚರಣೆಯ ಸಂದರ್ಭದಲ್ಲಿ ತೊಗಲುಗೊಂಬೆಯಾಟ ನಡೆಸುವುದು ಒಂದು ಸಂಪ್ರದಾಯವಾಗಿ ಉಳಿದುಕೊಂಡಿತು. ಪ್ರಸ್ತುತ ಕೇರಳದ ಎಲ್ಲಾ ಭಗವತಿ ದೇವಾಲಯಗಳಲ್ಲಿ ಈ ಪದ್ಧತಿ ಜಾರಿಯಲ್ಲಿ ಇಲ್ಲವಾದರೂ ಪಾಲ್ಘಾಟ್-ನ ಭಗವತಿ ದೇವಾಲಯಗಳಲ್ಲಿ ಇಂದಿಗೂ ದೇವತೆ ಸಮಕ್ಷಮ ತೊಗಲುಗೊಂಬೆಯಾಟ ನಡೆಸುವುದನ್ನು ಇಂದಿಗೂ ಕಾಣಬಹುದು. ಸಾಮಾನ್ಯವಾಗಿ ಸಂಪೂರ್ಣ ರಾಮಾಯಣವು ೨೧ ದಿನಗಳು ನಡೆಯುತ್ತದೆ.

ಕೇರಳದ ತೊಗಲುಗೊಂಬೆಗಳು ಹಾಗೂ ಒರಿಸ್ಸಾದ ಗೊಂಬೆಗಳ ಸಂರಚನೆಯಲ್ಲಿ ಏಕತೆ ಇದ್ದರೂ ಕೇರಳದ ತೊಗಲುಗೊಂಬೆಗಳು ಅರೆಪಾರದರ್ಶಕವಾಗಿವೆ ಮತ್ತು ಕೆಲವು ಗೊಂಬೆಗಳಲ್ಲಿ ಬಣ್ಣದ ಮಿಶ್ರಣವನ್ನು ನೇರವಾಗಿ ಕಾಣಬಹುದು. ಚಿತ್ರಗಳ ರಚನೆಯಲ್ಲಿ ಬಹುತೇಕ ಎಲ್ಲಾ ದೈವಿಕ ಪಾತ್ರಗಳನ್ನು ಮಾಡಲು ಜಿಂಕೆಯ ಚರ್ಮವನ್ನು ಬಳಸುವರು. ಒರಿಸ್ಸಾ ಮಾದರಿಯಲ್ಲಿ ಗೊಂಬೆಗಳ ಚರ್ಮ ಸಂಸ್ಕರಣ ಮಾಡುವುದರಿಂದ ಇಂದಿಗೂ ಕೇರಳದ ಗೊಂಬೆಗಳು ಗಡುಸಾಗಿರುವುದನ್ನು ಕಾಣಬಹುದಾಗಿದೆ. ರಕ್ಕಸ ಪಾತ್ರಗಳ ಮೂಗು ಬಹುತೇಕ ಮೇಲ್ಮುಖ ವಾಗಿರುವಂತೆ ಚಿತ್ರಿಸಿರುತ್ತಾರೆ. ಇಂತಹ ಪ್ರತಿಮಾಶಿಲ್ಪಗಳಿಗೆ ಮುಖ್ಯ ಕಾರಣ ತೈಯಂ (ದೈವಾರಾಧನೆ) ಕಥಕಳಿ, ಕೂಡಿಯಾಟ್ಟಂ ಮತ್ತು ರಾಮನಾಟ್ಟಂ-ನಂತಹ ಬಯಲಾಟಗಳು ಕಾರಣವಾಗಿವೆ. ಇಲ್ಲಿಯೂ ಹಾಸ್ಯ ಪಾತ್ರಧಾರಿಯಾಗಿ ಬರುವಾತ ಓರ್ವ ಭಂಡಾರಿ ಜನವರ್ಗದವನಾಗಿರುತ್ತಾನೆ. ಈತನನ್ನು ಕೊಡ್ಯೈಕಾರನ್ ಎಂದು ಕರೆಯಲಾಗಿದೆ. ಕೇರಳದ ಸಂಪ್ರದಾಯದ ಗೊಂಬೆಗಳ ಪ್ರದರ್ಶನದಲ್ಲಿ ನೆರಳು-ಬೆಳಕಿನ ವೈವಿಧ್ಯತೆಯನ್ನು ಮತ್ತು ಇತರ ಶಿಲ್ಪದ ಆಕೃತಿಯಲ್ಲಿ ಮೂಡಿಬರುವ ಪಾತ್ರ ಕಲ್ಪನೆ ಮನೋಜ್ಞವಾಗಿವೆ. ಕೇರಳದ ಕಲಾವಿದರು ಮೂಡಿಸಿದ ಪ್ರತಿಮಾ ಶಿಲ್ಪ ಕೃತಿಗಳಲ್ಲಿ ವಿವಿಧ ಅಳತೆಯ ರಂಧ್ರಗಳನ್ನು ಕೊರೆದು ಆಕೃತಿಗೆ ವಿಶೇಷ ಮೆರುಗನ್ನು ಮೂಡಿಸಲು ಸಹಾಯಕವಾಗಿರುತ್ತವೆ.

ಕೇರಳದ ತೊಗಲುಗೊಂಬೆಯಾಟದಲ್ಲಿ ಬಳಸುವ ವಾದ್ಯಗಳು : ಚೆಂಡೆ, ಶಂಖ, ಮದ್ದಳೆ, ತಾಳ ಇತ್ಯಾದಿ.

ದ್ರಾವಿಡ ರಾಜ್ಯಗಳಾದ ತಮಿಳುನಾಡು, ಕೇರಳ, ಕರ್ನಾಟಕ, ಆಂಧ್ರ ಪ್ರದೇಶ ಮತ್ತು ಉತ್ತರ ಭಾರತದ ಭಾಗವಾದ ಒರಿಸ್ಸ ಈ ಪ್ರದೇಶಗಳಲ್ಲಿ ತೊಗಲು ಗೊಂಬೆಯಾಟ ಪ್ರಚಲಿತವಲ್ಲಿದ್ದರೂ ಕರ್ನಾಟಕದಲ್ಲಿ ತೊಗಲು ಗೊಂಬೆಯಾಟದ ವೈಶಿಷ್ಟ್ಯ ಎಲ್ಲರನ್ನೂ ಆಕರ್ಷಿಸುವಂತಹುದು. ಇಂದಿನ ಈ ಇಪ್ಪತ್ತೊಂದನೆಯ ಶತಮಾನದ ಮೊದಲಭಾಗದಲ್ಲಿ electronic media ಗಳು ಅಧಿಕವಾಗಿವೆ. ಉದಾ : ಸಿನಿಮಾ, ವೀಡಿಯೋ, ಟಿ.ವಿ ಜಾಲ, ಕಂಪ್ಯೂಟರ್ ಮಾಧ್ಯಮದ ಕಾರ್ಟೂನ್ ಈ ಜಾಲಗಳ ಮನರಂಜನೆಯು ಯಥೇಚ್ಚವಾಗಿ ಶ್ರೀಸಾಮಾನ್ಯನಿಗೆ ದೊರೆಯುತ್ತಿರುವುದರಿಂದ ಸಾಂಪ್ರದಾಯಿಕ ಗೊಂಬೆಯಾಟ ಸಹಜವಾಗಿ ಮೂಲೆಗುಂಪಾಗಿದ್ದು ಜನಪದ ಕಲಾಕಾರರು ಹಾಗೂ ಪ್ರದರ್ಶಕರುಗಳು ಕಲಾವೃತ್ತಿಯನ್ನು ತ್ಯಜಿಸುವಂತಾಯಿತು. ರಂಗಭೂಮಿಯ ಕಲೆಗಳು ಹಿಂದೆ ಸರಿದವು. ಗೊಂಬೆಯಾಟವು ಸೇರಿದಂತೆ ೧೯೭೫ರ ತರುವಾಯ ರಾಜ್ಯದಲ್ಲಿ ಮಹತ್ತರ ಬದಲಾವಣೆಯನ್ನು ಅನೇಕ ಕಲಾಪ್ರಕಾರಗಳಲ್ಲಿ ಕಾಣುವಂತಾಗಿದೆ. ದಕ್ಷಿಣ ಭಾರತದ ಕರ್ನಾಟಕದ ರಾಜ್ಯದಲ್ಲಿ ಸಿಗುವಷ್ಟು ಗೊಂಬೆಯಾಟ ಕಲಾಕಾರರು ಬೇರೆ ರಾಜ್ಯದಲ್ಲಿ ಇಂದು ಸಿಗುವುದು ದುರ್ಲಭವೆಂದರೆ ಅತಿಶಯೋಕ್ತಿ ಎಂದು ಭಾವಿಸಬಾರದು. ಪ್ರಸ್ತುತ ಕರ್ನಾಟಕದಲ್ಲಿ ೧೯೮೮ರ ಸಮೀಕ್ಷೆಯಂತೆ ಕರ್ನಾಟಕದಲ್ಲಿ ಸೂತ್ರದಗೊಂಬೆಯಾಟದವರು ಸುಮಾರು ೩೧ ತಂಡಗಳು ಹಾಗೂ ತೊಗಲು ಗೊಂಬೆಯಾಟದವರು ೧೫೦ ತಂಡಗಳು ಇದ್ದು ಇಂದು ಈ ತಂಡಗಳು ಕ್ರಮೇಣ ಅವನತಿಯ ಹಾದಿ ಹಿಡಿದಿವೆ. (ಎಸ್.ಎ.ಕೃಷ್ಣಯ್ಯ, ೧೯೮೮-ಪು.೩)

### ತಮಿಳು ನಾಡು-ತೊಗಲುಗೊಂಬೆಯಾಟ

ತಮಿಳುನಾಡಿನ ಸೇಲಂ-ತಂಜಾವೂರುಗಳಲ್ಲಿ ಹೆಚ್ಚಿಗ ಕಂಡುಬರುವ ತೊಗಲುಗೊಂಬೆಯಾಟವನ್ನು 'ತೋಲ್ ಪಾವೈ ಕೂತ್ತು' ಎಂದು ಕರೆಯಲಾಗಿದೆ. ತಮಿಳು ನಾಡಿನ ತೊಗಲು ಗೊಂಬೆಯಾಟದ ಇತಿಹಾಸವನ್ನು ಕ್ರಿ.ಶ. ೫ನೇ ಶತಮಾನದ 'ಶಿಲಪ್ಪಾದಿಕಾರಂ' ಗ್ರಂಥದಲ್ಲಿ ಕಾಣಬಹುದಾಗಿದೆ. ಈ ಕೃತಿಯಲ್ಲಿ ಸೂತ್ರದ ಗೊಂಬೆಗಳಿಗೆ 'ಮರ ಪಾವೈ' ಎಂತಲೂ ತೊಗಲುಗೊಂಬೆ ಪ್ರಕಾರವನ್ನು 'ತೋಲ್ ಪಾವೈ' ಎಂತಲೂ ಕರೆದಿರುವರು. ತಮಿಳುನಾಡಿನ ತೊಗಲುಗೊಂಬೆಯಾಟ ಕಲಾಪ್ರಕಾರಕ್ಕೆ ಸಂಬಂಧಿಸಿದಂತೆ ೧೨ನೇ ಶತಮಾನದ ವಿವಿಧ ಐತಿಹಾಸಿಕ ದಾಖಲೆಗಳು ಲಭ್ಯವಿದ್ದು ವಿದ್ವಾಂಸರ ಪ್ರಕಾರ ತಮಿಳು ನಾಡಿನ ತೋಲ್ ಪಾವೈ ಕೂತ್ತು-ವಿನ ಒಂದು ಶಾಖೆ ಪಾಲ್ಘಾಟ್-ನಲ್ಲಿ ನೆಲೆಸಿ ಹೆಚ್ಚು ಬ್ರಾಹ್ಮಣ ಸಂಪ್ರದಾಯದ ಪ್ರಭಾವಕ್ಕೆ ಒಳಗಾಯಿತು. ಆ ಬಳಿಕ ಕೇರಳ ರಾಜ್ಯದ ಭಗವತಿ ದೇವಾಲಯಗಳಲ್ಲಿ ಧಾರ್ಮಿಕ ಆಶ್ರಯ ದೊರೆತು ಪ್ರವರ್ಧಮಾನಕ್ಕೆ ಕಲೆಯೊಂದು ಮುಂದಡಿಯಿಡಲು ಕಾರಣವಾಯಿತು. ಮದ್ರಾಸ್ ಭಾಗದಲ್ಲಿನ ಕಲಾವಿದರು ನಡೆಸಿಕೊಡುವ ಕಥೆಗಳಲ್ಲಿ ಜನಪದ ಕಥೆಯಾದ 'ನಲ್ಲತಂಗ' ಕಥೆ ಅತ್ಯಂತ ರೋಚಕವಾದ ಕಥೆ ಮತ್ತು ಹಾಸ್ಯದ ಹೊನಲಿನಲ್ಲಿ ಪ್ರೇಕ್ಷಕರನ್ನು ಹಿಡಿದಿಡಬಲ್ಲದು. ರಾಮಾಯಣ ಕಥೆಯನ್ನು ಹೆಚ್ಚಾಗಿ ಪ್ರದರ್ಶಿಸುವ ಈ ಕಲಾವಿದರುಗಳು

ತಮ್ಮ ಮನೆ-ಮಾತಾಗಿ ಅರೆ-ಮರಾಠಿ ಭಾಷೆಯನ್ನು ಉಳಿಸಿಕೊಂಡಿರುವರು. ಮೂಲತಃ ಮರಾಠ ಭಾಗದಿಂದ ವಲಸೆ ಬಂದ ಈ ಜನವರ್ಗದ ಕಲಾವಿದರು ಕೇವಲ ಬೆರಳೆಣಿಕೆಯಲ್ಲಿ ಸಿಗಬಹುದಾದಷ್ಟು ಜನ ಈ ಕಾಯಕದಲ್ಲಿ ಖ್ಯಾತಿಯನ್ನು ಗಳಿಸಿರುವರು. ಚೆನ್ನೈ-ನ ಮದರಾಸ್ ಕ್ರಾಫ್ಟ್ ಫೌಂಡೇಶನ್-ಈ ಸಂಘವು ಪ್ರತಿ ಗುರುವಾರ ತೊಗಲುಗೊಂಬೆಯಾಟಕಾರರನ್ನು ಆಹ್ವಾನಿಸಿ ನೋಡುವ ಪ್ರೇಕ್ಷಕ ವರ್ಗದವರಿಗೆ ಅವಕಾಶ ಮಾಡಿಕೊಡುವುದರ ಮೂಲಕ ತನ್ನ ಪ್ರೋತ್ಸಾಹ ನೀಡುತ್ತಿದೆ. ಈ ಹಿನ್ನೆಲೆಯಲ್ಲಿ ಮದ್ರಾಸ ಪಟ್ಟಣದಲ್ಲಿ ಕೆಲವು ಕಲಾವಿದರು ವಾಸವಾಗಿರುವರು. ತಮಿಳುನಾಡಿನ ವಿಶೇಷತೆ ಎಂದರೆ ಗೊಂಬೆಯಾಟಕಾರ ನೆಲದ ಮೇಲೆ ಕುಳಿತು ಕೆಲವೊಮ್ಮೆ ಪ್ರದರ್ಶನ ನೀಡಿದರೆ ಕೆಲವೊಮ್ಮೆ ಅಂಗಾತ ಮಲಗಿಕೊಂಡು ಹಿಂಬದಿಯ ಪರದೆಯ ಮೂಲಕ ಪ್ರದರ್ಶನ ನೀಡುವುದು ಕರಗತ ತಂತ್ರವಾಗಿದೆ. ಈ ಸಂದರ್ಭದಲ್ಲಿ ಕಾಲಿನಲ್ಲಿ ಮೆಟ್ಟು ಹಲಿಗೆಯನ್ನು ಒಂದು ವಾದ್ಯವಾಗಿ ಬಳಸಿಕೊಂಡು ಪ್ರದರ್ಶನ ನೀಡುವರು. ಜೊತೆಯಲ್ಲಿ ಪಾವರಿ ಎನ್ನುವ ಸುಶಿರ ವಾದ್ಯವನ್ನು ನುಡಿಸುತ್ತಾ ಗೊಂಬೆಯಾಟ ಪ್ರದರ್ಶನ ನೀಡಬಲ್ಲರು. ತಮಿಳುನಾಡಿನ ಗೊಂಬೆಯಾಟದ ಚಿತ್ರಕಲೆಯಲ್ಲಿ ಪೈತಾನಿ ಪೈಂಟಿಗ್-ನ ಪ್ರಭಾವ ಅಧಿಕವಾಗಿರುವುದನ್ನು ಗಮನಿಸಬಹುದು, ಉಳಿದಂತೆ ಸಂಪ್ರದಾಯಬದ್ಧವಾದ ದೇವತಾ ಪಾತ್ರಗಳ ಗೊಂಬೆಗಳನ್ನು ಜಿಂಕೆ ಚರ್ಮದಿಂದಲೂ ರಾಕ್ಷಸ ಪಾತ್ರದ ಗೊಂಬೆಗಳನ್ನು ಕುರಿಯ ಚರ್ಮದಿಂದ ಮಾಡುವರು. ಕ್ಯಾಲೆಂಡರ್ ಕಲೆಯ ಚಿತ್ರಗಾರಿಕೆ ಇವರ ಗೊಂಬೆಯಾಟದ ಶಿಲ್ಪದಲ್ಲಿ ಎದ್ದುತೋರುವುದನ್ನು ಇಂದಿನ ಆಧುನಿಕ ಗೊಂಬೆಗಳಲ್ಲಿ ಕಾಣಬಹುದು. ಸಂಪ್ರದಾಯದ ಗೊಂಬೆಗಳು ಇವರಲ್ಲಿ ಅಪರೂಪವಾಗಿದ್ದು ಈ ಕಲೆಯನ್ನು ಮುಂದಿನ ತಲೆಮಾರಿಗೆ ಕೊಂಡೊಯ್ಯಲು ಯುವ ಪೀಳಿಗೆ ಮುಂದಾಗುತಿಲ್ಲ ಎಂಬುದು ಹಿರಿಯ ಕಲಾವಿದರ ಕೊರಗು.

**ಉಪಸಂಹಾರ** : ಗೊಂಬೆಯಾಟದ ಪುನರಜ್ಜೀವನಕ್ಕಾಗಿ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ ಇವರ ಮೊದಲ ಹಂತದ ತರಬೇತಿ ಶಿಬಿರ, ಕಮ್ಮಟಗಳು ೧೯೭೭ರಲ್ಲಿ ಬೆಂಗಳೂರಿನಲ್ಲಿ ನಡೆಯಿತು. ಇದಾದ ಬಳಿಕ ನವ ದೆಹಲಿಯ ಸಂಗೀತ ನಾಟಕ ಅಕಾಡೆಮಿಯು ಗೊಂಬೆಯಾಟದ ಕಾಯಕಲ್ಪಕ್ಕೆ ಹೆಚ್ಚಿನ ಪ್ರೋತ್ಸಾಹ ಕೊಡಲು ಬೆಂಗಳೂರಿನ ಚಿತ್ರಕಲಾ ಪರಿಷತ್ ಆಶ್ರಯದಲ್ಲಿ ೧೫ ತಿಂಗಳು ಕಾಲ ಸಾಂಪ್ರದಾಯಿಕ ತರಬೇತಿ ಕೊಡುವುದನ್ನು ಆರಂಭಿಸಿತು. ಈ ಬಗೆಯ ಶಿಕ್ಷಣ ಕೇವಲ ಒಂದೇ ವರ್ಷಕ್ಕೆ ನಡೆದು ಸ್ಥಗಿತವಾಯಿತು. ಕಮಲಾದೇವಿ ಚಟ್ಟೋಪಾಧ್ಯಾಯ ಇವರ ಮಾರ್ಗದರ್ಶನದಂತೆ ಬಳ್ಳಾರಿಯ ಬೆಳಗಲ್ಲು ವೀರಣ್ಣ ಇವರು ಕಂಪೆನಿ ನಾಟಕ ವೃತ್ತಿ ತೊರೆದು ಗೊಂಬೆಯಾಟ ಕೈಗೆತ್ತಿಕೊಂಡರು. ಇಂದಿಗೂ ಇವರು ನಡೆಸುವ ಮಹಾತ್ಮಾ ಗಾಂಧಿ ಕಥೆ ನೋಡಲು ಕನಿಷ್ಠ ಐದುನೂರಕ್ಕೂ ಮಿಗಿಲಾಗಿ ಪ್ರೇಕ್ಷಕರಿದ್ದಾರೆ. ಇವರ ಹೊಸ ಆಲೋಚನೆಯ ಯೋಜನೆಗಳಲ್ಲಿ ಮುಖ್ಯವಾಗಿ ಗೊಂಬೆಯಾಟದ ಮೂಲಕ ಶಿಕ್ಷಣ ಕೊಡುವಂತಹ ಶೈಕ್ಷಣಿಕ ಪ್ರಯೋಗಗಳನ್ನು ಮಾಡಬೇಕೆಂಬುದು ಇವರ ಅಂತರಾಳದ ಆಸೆಯಾಗಿದೆ. ಈ ರೀತಿಯ ಯೋಜನೆಗಳಿಗೆ ಸರಕಾರ, ಸಂಘ-ಸಂಸ್ಥೆಗಳು, ಸಾರ್ವಜನಿಕರು ಪ್ರೋತ್ಸಾಹ ಕೊಟ್ಟಲ್ಲಿ ಗೊಂಬೆಯಾಟದ ಮಾಧ್ಯಮದ ಮೂಲಕ ಜನ ಹಿತ ಕಾರ್ಯವನ್ನು ನಡೆಸಲು ಸಾಧ್ಯ. ಪ್ರಸ್ತುತ ಅಂತರಾಷ್ಟ್ರೀಯ ಮಟ್ಟದ ಗೊಂಬೆಯಾಟದ

ಸಂಘವೆಂದೇ ಖ್ಯಾತಿಗೊಂಡಿರುವ ಯೂನಿಮ ಹಾಗೂ ಕೇಂದ್ರ ಸಂಗೀತ ನಾಟಕ ಅಕಾಡೆಮಿ ಇವುಗಳು ಕಾರ್ಯಪ್ರವೃತ್ತರಾಗಿದ್ದರೂ ಪ್ರೋತ್ಸಾಹ ಏನೇನೂ ಸಾಲದು. ಈ ಹಿನ್ನೆಲೆಯಲ್ಲಿ ಇತ್ತೀಚಿಗೆ ಕೇಂದ್ರ ಸಂಗೀತ ನಾಟಕ ಅಕಾಡೆಮಿ ತನ್ನ ವಸ್ತು ಸಂಗ್ರಹಾಲಯದಲ್ಲಿನ ಗೊಂಬೆಗಳ ಪ್ರದರ್ಶನವನ್ನು ಏರ್ಪಡಿಸಿತ್ತು. ಈ ವಸ್ತು ಪ್ರದರ್ಶನದಂಥ ಏರ್ಪಡುಗಳು ಕೇವಲ ನವ ದೆಹಲಿಗೆ ಸೀಮಿತವಾಗದೆ ಸಂಚಾರಿ ವಸ್ತು ಪ್ರದರ್ಶನ ಹಾಗೂ ಗೊಂಬೆಯಾಟದಂತ ತಿರುಗಾಟದ ಕಾರ್ಯಕ್ರಮಗಳು ನಡೆಯುವಂತಹ ಸಂಚಾರಿ ಗೊಂಬೆಯಾಟ ಪ್ರದರ್ಶನ ಏರ್ಪಡಿಸತಕ್ಕದ್ದು. ಈ ಬಗೆಯ ಸಂಚಾರಿ ಗೊಂಬೆಯಾಟ ಪ್ರದರ್ಶನ ಸಾದರ ಪಡಿಸಲು ಕೇಂದ್ರವು ವಿನೂತನ ಯೋಜನೆಯನ್ನು ರೂಪಿಸಿದ್ದೇ ಆದರೆ ಗೊಂಬೆಯಾಟವನ್ನು ಇನ್ನಷ್ಟೂ ಉತ್ತಮ ರೀತಿಯಲ್ಲಿ ಪ್ರೋತ್ಸಾಹಿಸಿದಂತಾಗುವುದು.

ಗೊಂಬೆಯಾಟದಂತಹ ಪ್ರದರ್ಶನಾತ್ಮಕ ಕಲೆಯ ತವರೂರು ಭಾರತ. ಆದರೆ ಇದೂವರೆಪಿಗೆ ಗೊಂಬೆಯಾಟ ಸಂಬಂಧವಾಗಿ ಎಲ್ಲಿಯೂ ರಂಗಭೂಮಿ ಸಿದ್ಧಗೊಳ್ಳಲಿಲ್ಲ. ಈ ಹಿನ್ನೆಲೆಯಲ್ಲಿ ರಾಜ್ಯವಾರು ಗೊಂಬೆಯಾಟ ಪ್ರದರ್ಶನಗಳಿಗೆ ವೇದಿಕೆ ಸಿಗಲು ಸಿದ್ಧವಾದ ರಂಗಭೂಮಿ ನಿರ್ಮಾಣ ಅಗತ್ಯವಿದೆ.

**ಗೊಂಬೆಯಾಟ ಸಂರಕ್ಷಣೆಗೆ ಕೆಲವು ಯೋಜನೆಗಳು**

೧. ಗೊಂಬೆಯಾಟಕ್ಕೆಂದೇ ಒಂದು ರಂಗಭೂಮಿ ನಿರ್ಮಾಣಗೊಳ್ಳಬೇಕು.

೨. ರಾಜ್ಯ ಸರಕಾರಗಳು ಜಿಲ್ಲೆಗೊಂದು ರಂಗ ಭೂಮಿ ನಡೆಸುವುದರ ಬಗ್ಗೆ ಯೋಜನೆಯನ್ನು ರೂಪಿಸುವಾಗ ಪ್ರತ್ಯೇಕವಾಗಿ ಗೊಂಬೆಯಾಟಕ್ಕೆಂದೇ ರಂಗ ವೇದಿಕೆಯ ಅವಕಾಶ ಕಲ್ಪಿಸಿಕೊಡತಕ್ಕದ್ದು. ಈ ದೃಷ್ಟಿಕೋನದಲ್ಲಿ ಸರಕಾರ ಯೋಚಿಸಿದ್ದೇ ಆದರೆ ಗೊಂಬೆಯಾಟದಂತ ಮಾಧ್ಯಮವನ್ನು ಪ್ರೋತ್ಸಾಹಿಸಿದಂತಾಗುವುದು.

೩. ಗೊಂಬೆಯಾಟದ ಮಾಧ್ಯಮಗಳಿಗೆ ಸಂಬಂಧಿಸಿದಂತೆ ಪ್ರವಾಸಿಗರನ್ನು ಆಕರ್ಷಿಸಲು ರಂಗಮಂದಿರಗಳನ್ನು ಉತ್ತಮ ರೀತಿಯಲ್ಲಿ ಬಳಸಿಕೊಳ್ಳಲು ಪ್ರವಾಸೋದ್ಯಮ ಇಲಾಖೆ ವಿಶೇಷ ಯೋಜನೆಗಳನ್ನು ರೂಪಿಸಲು ಸಾಧ್ಯವಿದೆ.

೪. ವಾರದಲ್ಲಿ ಅಥವಾ ತಿಂಗಳಿಗೊಮ್ಮೆಯಾದರೂ ಆಯಾಯ ಜಿಲ್ಲೆಯಲ್ಲಿರುವ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಹಯೋಗದಲ್ಲಿ ಗೊಂಬೆಯಾಟದ ತಂಡದವರನ್ನು ಪ್ರದರ್ಶನ ಕೊಡಲು ಆಹ್ವಾನ ನೀಡಿದ್ದೇ ಆದರೆ ಕಲಾವಿದರ ಅನೇಕ ಸಮಸ್ಯೆಗಳು ಸ್ವಲ್ಪ ಮಟ್ಟಿಗಾದರೂ ಪರಿಹಾರವಾಗಬಹುದು.

೫. ಗೊಂಬೆಯಾಟಕ್ಕೆಂದು ಸಿದ್ಧಗೊಳ್ಳುವ Little Theatre of Puppets ಕೇಂದ್ರವು ಕ್ರಮೇಣ ರಾಷ್ಟ್ರಮಟ್ಟದ ಗೊಂಬೆಯಾಟಕ್ಕೆಂದೇ ರೂಪುಗೊಳ್ಳುವ ಒಂದು ಅಕಾಡೆಮಿಯಾಗುವಂತಹ ಸ್ಥಾನಕ್ಕೆ ಕೊಂಡೊಯ್ಯುವಂತಹ ರೀತಿಯಲ್ಲಿ ರಚನಾತ್ಮಕ ಪ್ರಯೋಗಗಳು ಮತ್ತು ಸಂಶೋಧನೆ ಸಾಗಲು ವಿಶ್ವವಿದ್ಯಾನಿಲಯ, ಅಕಾಡೆಮಿ, ಮಾನವ ಸಂಪನ್ಮೂಲ ಅಭಿವೃದ್ಧಿ ಕೇಂದ್ರಗಳು ಪ್ರೋತ್ಸಾಹ ನೀಡುವುದು ಅತ್ಯಗತ್ಯವಾಗಿದೆ.

೬. ಗೊಂಬೆಯಾಟ ಸಂಬಂಧಿಯಾಗಿ ಬೇಸಿಗೆ ಶಿಬಿರ, ಸಂವಾದ, ನಾಟಕ ರಚನೆ, ಗೊಂಬೆ ಪ್ರದರ್ಶನ ಹೀಗೆ ಹತ್ತು ಹಲವು ಕಾರ್ಯಕ್ರಮಗಳು ವರ್ಷಂಪ್ರತಿ ನಡೆಸಲು ಉತ್ಸಾಹಿ

ಗೊಂಬೆಯಾಟ ಕಲಾವಿದ ಸದಸ್ಯರುಗಳು ಮುಂದಾಗಬೇಕು, ಇಂತಹ ಅವಕಾಶಗಳನ್ನು ಕಲ್ಪಿಸಲು ಸರಕಾರ ಉತ್ತೇಜನ ಕೊಡತಕ್ಕದ್ದು.

೭. ಸರಕಾರ ಪ್ರಾಥಮಿಕ ಶಿಕ್ಷಣದ ಪಠ್ಯಕ್ರಮದ ಪಠ್ಯಾವಳಿಯಲ್ಲಿ ಪ್ರಾಯೋಗಿಕ ಗೊಂಬೆಯಾಟದ ಬಗ್ಗೆ ತಿಂಗಳಿಗೆ ಎರಡು ಪೀರಿಯಡ್-ನ ಸಮಯ ಒದಗಿಸಲು ಅವಕಾಶ ಒದಗಿಸಲು ಶಿಕ್ಷಣಾಧಿಕಾರಿಗಳಿಗೆ ಸುತ್ತೋಲೆ ಹೊರಡಿಸುವಂತಹ ಕಾಯಿದೆ ಅನುಷ್ಠಾನವಾದಲ್ಲಿ ಗೊಂಬೆಯಾಟಕ್ಕೂ ಒಂದು ಶೈಕ್ಷಣಿಕ ಮಾನ್ಯತೆ ದೊರಕಿದಂತಾಗುತ್ತದೆ. ಈ ಸಂದರ್ಭದಲ್ಲಿ ಸ್ಥಳೀಯ ಗೊಂಬೆಯಾಟಕಾರರು ಲಭ್ಯವಾದರೆ ಅವರುಗಳನ್ನು ಆಹ್ವಾನಿಸಿ ಪ್ರಾತ್ಯಕ್ಷಿಕೆ ಕೊಡಿಸುವುದರ ಮೂಲಕ ಹೆಚ್ಚಿನ ತಂತ್ರಗಾರಿಕೆಯನ್ನು ವಿದ್ಯಾರ್ಥಿಗಳು ಕಲಿಯಲು ಪ್ರೋತ್ಸಾಹಿಸಬಹುದು.

### ಟಿಪ್ಪಣಿ – ೧

### ಸಲಾಕಿ ಹಾಗೂ ಸೂತ್ರ-ಸಮ್ಮಿಶ್ರ ತಂತ್ರದ ಗೊಂಬೆಯಾಟ

ಭಾರತದಲ್ಲಿ ಸೂತ್ರದ ಜೊತೆಯಾಗಿ ಸಲಾಕಿಗಳು ಸೇರಿರುವುದನ್ನು ಕರ್ನಾಟಕದ ಗೊಂಬೆಯಾಟದ ಪ್ರಕಾರಗಳಲ್ಲಿ ಕಾಣಬಹುದಾಗಿದೆ. ಮುಖ್ಯವಾಗಿ ಕರ್ನಾಟಕ, ಆಂಧ್ರ ಪ್ರದೇಶ, ತಮಿಳುನಾಡು, ಒರಿಸ್ಸಾ, ರಾಜಸ್ಥಾನ ಈ ಭಾಗಗಳಲ್ಲಿ ಹೆಚ್ಚಾಗಿ ಗೊಂಬೆಯಾಟ ಬಳಕೆಯಲ್ಲಿದೆ. ಕರ್ನಾಟಕ, ತಮಿಳುನಾಡು ಈ ಭಾಗದ ಮರದ ಗೊಂಬೆಗಳು ಬಹುತೇಕ ಒಂದೇ ಮಾದರಿ ಯಲ್ಲಿದ್ದರೂ ಪ್ರಾಂತೀಯ ದೃಷ್ಟಿಯಿಂದ ಕುಣಿಸುವ ತಂತ್ರಗಾರಿಕೆ, ಬಳಸಿದ ಪರಿಕರಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿದೆ. ನಾಗಮಂಗಲ ತಾಲ್ಲೂಕು ಹಾಗೂ ತಮಿಳುನಾಡಿನ ಕುಂಭಕೋಣಂ ಪರಂಪರೆಯ ಗೊಂಬೆಗಳ ಪ್ರದರ್ಶನಕಾರರು ಗೊಂಬೆಗಳನ್ನು ಕುಣಿಸಲು ಸಲಾಕಿಗಳನ್ನು ಬಳಸುತ್ತಾರೆ. ಇವುಗಳನ್ನು ನಾರಾಚ ಗೊಂಬೆಗಳೆಂದು ಕರೆಯಲಾಗಿದೆ. ತಮಿಳುನಾಡಿನ ಗೊಂಬೆಗಳಿಗೆ ಮರದ ಕಾಲುಗಳು ಜೋಡಣೆಯಾಗಿದ್ದರೆ, ಕರ್ನಾಟಕದ ಬೆಳ್ಳೂರಿನ (ನಾಗಮಂಗಲ ತಾಲ್ಲೂಕು) ಗೊಂಬೆಗಳಿಗೆ ಕಾಲುಗಳೇ ಇಲ್ಲವಾಗಿರುವುದು ಇಲ್ಲಿನ ವೈಶಿಷ್ಟ್ಯತೆಯನ್ನು ಎತ್ತಿಹಿಡಿಯುವುದು. ನಾಗಮಂಗಲದ ಕಲಾವಿದರು ಹಾಗೂ ತಮಿಳು ನಾಡು ಕಲಾವಿದರು ಉಪಯೋಗಿಸುವ ವಾದ್ಯಗಳಲ್ಲಿ ಹೆಚ್ಚು ಸಾಮ್ಯತೆ ಕಂಡು ಬಂದಿದೆ. ಮುಖ್ಯವಾಗಿ ಮದ್ದಳೆ, ತಾಳ, ಮುಖವೀಣೆ ಈ ಎರಡೂ ರಾಜ್ಯಗಳ ಕಲಾಕಾರರು ಬಳಸುತ್ತಾರೆ. ಉತ್ತರ ಭಾರತದ ರಾಜಸ್ಥಾನದ ಕಟ್ ಪುತ್ಲಿ ಗೊಂಬೆಯಾಟದ ಬಾಟ್ ಜನವರ್ಗದವರ ಗೊಂಬೆಗಳಿಗೆ ಕಾಲುಗಳ ಜೋಡಣೆ ಇಲ್ಲವಾಗಿದ್ದು ಸೂತ್ರಗಳನ್ನು ಬೆರಳುಗಳಲ್ಲಿ ಹೊಂದಿಸಿಕೊಂಡು ಕುಣಿಸುವುದು ಪ್ರಚಲಿತದಲ್ಲಿದೆ. ಉತ್ತರ ಕರ್ನಾಟಕದ ಗೊಂಬೆಯಾಟಕ್ಕೆ ಖ್ಯಾತಿ ಪಡೆದ ಮನೆತನವೆಂದರೆ ರಾಣೀಬೆನ್ನೂರು ಭಾಗದ ಗೊಂಬೀಗೌಡರ್ ಮನೆತನ. ಈ ಭಾಗದ ಗೊಂಬೆಗಳು ಹೆಚ್ಚಾಗಿ ದೊಡ್ಡಾಟ ಮಾದರಿಯ ಕುಣಿತಗಳ ಪ್ರಾಭಾವ ಹೆಚ್ಚಿದ್ದು, ಶಹನಾಯಿ ವಾದ್ಯದೊಂದಿಗೆ ಗೊಂಬೆಗಳನ್ನು ಕುಣಿಸುತ್ತಾರೆ. ಹರಪ್ಪನಹಳ್ಳಿ ಭಾಗದ ಶ್ರೀ ದೇವೀಂದ್ರಪ್ಪ ಈ ತಂಡದವರು ಬಳಸುವ ಗೊಂಬೆಗಳಲ್ಲಿ ಕೆಲವು ತಾಂತ್ರಿಕ ಹೊಸ ಪ್ರಯೋಗ ಗಳನ್ನು ನಡೆಸಿದ ಕೀರ್ತಿ ಈ ತಂಡಕ್ಕೆ ಸಲ್ಲುವುದು. ಇವರಲ್ಲಿವ ಗೊಂಬೆಗಳಲ್ಲಿ ಮುಖ್ಯವಾಗಿ

ಶಾರದ ಗೊಂಬೆಗೆ ಸಲಾಕಿಗಳನ್ನು ಜೋಡಿಸಿ ಕುಣಿಸುವ ತಂತ್ರಗಾರಿಕೆಯನ್ನು ಅಳವಡಿಸಿಕೊಂಡಿರುವರು. ಮಿಕ್ಕಲ್ಲಾ ಗೊಂಬೆಗಳಿಗೆ ಸಲಾಕೆಯ ಬಳಕೆ ಇಲ್ಲವಾಗಿದೆ.

ಕರ್ನಾಟಕದಲ್ಲಿನ ಕರಾವಳಿ ಭಾಗ ಹೊರತುಪಡಿಸಿ ಉಳಿದ ಪ್ರಾಂತ್ಯಗಳಲ್ಲಿರುವ ಮರದ ಗೊಂಬೆಗಳಿಗೆ ಒಂದಲ್ಲ ಒಂದು ವಿಧದಲ್ಲಿ ಸಲಾಕಿಯನ್ನು ಗೊಂಬೆಗಳಿಗೆ ಅಳವಡಿಸಿದುತ್ತಾರೆ. ಬಹುತೇಕ ಗೊಂಬೆಗಳನ್ನು ಹೆಚ್ಚಾಗಿ ಮರದಿಂದ ಮಾಡಲ್ಪಟ್ಟರೆ, ಬೆಂಗಳೂರು, ಮಾಗಡಿ ಈ ಭಾಗದ ಕಲಾಕಾರರಾದ ಶ್ರೀ ರಂಗನಾಥ (ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ವಿಜೇತ) ಹಾಗೂ ಇವರ ಶಿಷ್ಯ ಶ್ರೀ ದತ್ತಾತ್ರೇಯ ಅರಳೀಕಟ್ಟೆ ಇವರು (ಜಾನಪದ ಅಕಾಡೆಮಿ ಪ್ರಶಸ್ತಿ ವಿಜೇತ) ಮರದ ಹೊಟ್ಟನ್ನು ಹಾಗೂ ಹುಣಸೆ ಜೀಜ ಹುಡಿಯನ್ನು ಅಂಟಾಗಿ ಬಳಸಿ ಗೊಂಬೆ ರಚಿಸುವ ತಂತ್ರಗಾರಿಕೆಯನ್ನು ಬಲ್ಲವರಾಗಿರುವರು.

### ಟಿಪ್ಪಣಿ - ೨

## ವಿದೇಶದಲ್ಲಿ ತೊಗಲು ಗೊಂಬೆಯಾಟ

**ವಯಾಂಗ್ ಕುಲಿತ್** : ಜಾವ-ಇಂಡೋನೇಷಿಯಾ ಖಂಡಗಳಲ್ಲಿನ ರಂಗಭೂಮಿಯ ನೆರಳುಗೊಂಬೆಯಾಟ ಪ್ರಕಾರವನ್ನು ವಯಾಂಗ್ ಕುಲಿತ್- ಎಂದು ಕರೆದಿರುವರು. ಸುಮಾರು ಹತ್ತನೇ ಶತಮಾನದ ಭಾಗದಲ್ಲಿ ಈ ಪ್ರಕಾರವನ್ನು ವಯಾಂಗ್ ಪುರ್ವ - ಎಂದು ಗುರುತಿಸಲಾಗಿದೆ. ಭಾರತದಿಂದ ರವಾನೆಗೊಂಡ ನೆರಳುಗೊಂಬೆಯಾಟ (ತೊಗಲು ಗೊಂಬೆಯಾಟ) ಇಲ್ಲಿ ಗೊಂಬೆಗಳ ಮೂಲಕ ರಾಮಾಯಣ, ಮಹಾಭಾರತದ ಕಥೆಗಳನ್ನು ಪರದೆಯ ಹಿಂದೆ ಹಾಯಿಸಿದ ಬೆಳಕಿನಲ್ಲಿ ಕುಣಿಸುವರು. ಈ ಗೊಂಬೆಗಳನ್ನು ಕುಣಿಸುವವರನ್ನು ದಲಾಂಗ್ ಎಂದು ಕರೆಯುತ್ತಾರೆ. ಭಾರತದಲ್ಲಿ ತೊಗಲುಗೊಂಬೆಯಾಟದಲ್ಲಿ ಮೊದಲಿಗೆ ವಿಘ್ನ ನಿವಾರಕನಾಗಿ ಬರುವ ಗಣಪತಿಯಂತೆ ಜಾವ-ಇಂಡೋನೇಷಿಯ ಭಾಗದಲ್ಲಿ ವಿಘ್ನ ನಿವಾರಣೆಯ ಸಂಕೇತವಾಗಿ ಗುಣಗನ್ ಎಂಬ ವಿಶಿಷ್ಟ ಆಶಯದ ಚಿತ್ರಪಟವನ್ನು ತೆರೆಯ ಮೇಲೆ ಪ್ರದರ್ಶಿಸುವರು. ಗುಣಗನ್ ಪಂಚಭೂತಗಳ ಹಾಗೂ ಸೃಷ್ಟಿಯ ಚಿತ್ರಗಳನ್ನು ಪ್ರತಿನಿಧಿಸುವ ಚಿತ್ತಾರಗಳು, ಹುಲಿ ಮತ್ತು ದನ ಒಂದುಗೂಡುವಿಕೆಯ ಆಶಯದ ಚಿತ್ರಗಳನ್ನು ಇದರಲ್ಲಿ ಸಾಂಕೇತಿಕವಾಗಿ ಚಿತ್ರಣಗಳನ್ನು ರಚಿಸಿರುತ್ತಾರೆ. ಈ ಗುಣಗನ್ ಚಿತ್ರಪಟಕ್ಕೆ ಮಾಂತ್ರಿಕ ಶಕ್ತಿ ಇರುತ್ತದೆ ಎಂದು ದಲಾಂಗ್-ರು ಅಭಿಪ್ರಾಯಿಸುವರು. ಕರ್ನಾಟಕದಲ್ಲಿ ಬರುವ ಕಿಳ್ಳೆಕ್ಯಾತ ಚಿತ್ರವೂ ಒಂದು ಮಾಂತ್ರಿಕ ಗೊಂಬೆಯಾಗಿದ್ದು ಶ್ರೀಸಾಮಾನ್ಯ ಪ್ರೇಕ್ಷಕನಿಗೆ ಈ ಚಿತ್ರವು ಕಾಣಿಸಿಕೊಳ್ಳುವುದು ಓರ್ವ ಹಾಸ್ಯಪಾತ್ರದಂತೆ. ಈ ಗೊಂಬೆಯ ಮೂಲಕ ಭೂತೋಚ್ಚಾಟನೆ ಮಾಡುವ ಕಲಾಕಾರರು ಗೊಂಬೆಯಾಟ ಜನಸಮುದಾಯದಲ್ಲಿರುವುದನ್ನು ಅಧ್ಯಯನದಿಂದ ತಿಳಿಯಲಾಗಿದೆ. ಜಾವಾ ಇಂಡೋನೇಷಿಯಾಗಳಲ್ಲಿ ಸುಮಾರು ೧೫-೧೬ನೇ ಶತಮಾನದಲ್ಲಿ ಮುಸಲ್ಮಾನ ಧಾರ್ಮಿಕ ಪ್ರಚಾರ ಅಧಿಕವಾದಂತೆ ಹಿಂದೂಗಳಲ್ಲಿ ಉಳಿದಿದ್ದ ನೆರಳುಗೊಂಬೆಯಾಟ ಪ್ರಕಾರವು ಕ್ರಮೇಣ ಕ್ಷೀಣಿಸತೊಡಗಿತು. ಇಂದಿಗೂ ಜಾವ ಭಾಗದಲ್ಲಿ ವಯಾಂಗ್ ಕುಲಿತ್ ಗೊಂಬೆಯಾಟ ತನ್ನ ಅಸ್ತಿತ್ವದಲ್ಲಿದೆ.

**ವಿಶೇಷ ಟಿಪ್ಪಣಿ : ಮೊದಲ ದಾಖಲೀಕರಣ**

ಕರ್ನಾಟಕದ ಸಲಾಕಿ ಮತ್ತು ಸೂತ್ರ ಸಮ್ಮಿಶ್ರ ತಂತ್ರಗಾರಿಕೆಯ ಗೊಂಬೆಯಾಟದ ಪ್ರಕಾರವನ್ನು ಮೊದಲ ಮೂಕಿ-ಟಾಕಿ (ಮಾತಿಲ್ಲದ ಸಿನೀಮ) ಫಿಲ್ಮ್ ಮಾಧ್ಯಮದಲ್ಲಿ ದಾಖಲಾದದ್ದು ಮೈಸೂರು ಅರಮನೆಯ ಆವರಣದಲ್ಲಿ (೧೪-ಸೆಪ್ಟಂಬರ್-೧೯೩೮). ಮೈಸೂರು ಸಮೀಪದ ನಂಜನಗೂಡು ತಾಲ್ಲೂಕು, ಹಲ್ಲರೆ ಗ್ರಾಮದ ಶ್ರೀ ತಮ್ಮಣ್ಣ ಆಚಾರ್ ಇವರ ಮುತ್ತಾತ (ಹೆಸರು ತಿಳಿದಿಲ್ಲ) ಇವರು ತಮ್ಮ ತಂಡವನ್ನು ಅಂದಿನ ಮೈಸೂರಿನ ಒಡೆಯರ್ ಕುಟುಂಬದವರ ಸಮಕ್ಷಮ ಗೊಂಬೆಯಾಟವನ್ನು ಪ್ರದರ್ಶಿಸಿದ್ದರು. ಈ ಸಂದರ್ಭದಲ್ಲಿ ಡಚ್ ವಿದ್ವಾಂಸ ಆರ್ನಾಲ್ಡ್ ಬಾಕೆ (ಸಂಗೀತ ಸಂಶೋಧಕ) ದಂಪತಿಗಳು ದಾಖಲೀಕರಣ ಮಾಡಿರುವರು. ಇದೇ ಪ್ರಕಾರವನ್ನು ಕ್ಯಾಲಿಫೋರ್ನಿಯಾ ಲಾಸ್ ಏಂಜಲೀಸ್ ವಿಶ್ವವಿದ್ಯಾಲಯ ವಿಭಾಗದ ಸಂಶೋಧನ ಬಳಗದ ಸದಸ್ಯರುಗಳಾದ ಪ್ರೊ. ಜೈರಾಜ್ ಬಾಯ್ ಹಾಗೂ ಸಂಶೋಧಕಿ ಪ್ರೊ. ಏಮಿ ಕ್ಯಾಟಲೀನ್ ಇವರುಗಳು ೧೯೭೪ರಲ್ಲಿ ಎಸ್.ಎ. ಕೃಷ್ಣಯ್ಯ ಇವರ ಜೊತೆಗೂಡಿ ಮರು ಅಧ್ಯಯನ ನಡೆಸಿರುವರು. (ಎಸ್.ಎ. ಕೃಷ್ಣಯ್ಯ ಅಪ್ರಕಟಿತ ಲೇಖನ.) ತರುವಾಯ ಗೊಂಬೆಯಾಟ ಕ್ಷೇತ್ರದಲ್ಲಿ ಹೆಚ್ಚಿನ ಅಧ್ಯಯನ ನಡೆದದ್ದು ಹಾಗೂ ದಾಖಲೀಕರಣ, ಸಂರಕ್ಷಣೆ ನಡೆಸಲು ಮುಂದಾದದ್ದು ದಿ. ಕಮಲಾದೇವಿ ಚಟ್ಟೋಪಾಧ್ಯಾಯ ಇವರ ಮೂಲಕ (೧೯೬೭). ವಿಶ್ವವಿದಾದ್ಯಂತ ಗೊಂಬೆಯಾಟ ಪ್ರಕಾರಗಳನ್ನು ಅಧ್ಯಯನ ನಡೆಸಲು ಮುಂದಾದವರಲ್ಲಿ ಪ್ರೊ. ಮೆಲ್ ಹೆಲಿಸ್ಟನ್ ಹೆಸರು ಅಗ್ರಸ್ಥಾನದಲ್ಲಿದೆ. ಮೆಲ್ ಹೆಲಿಸ್ಟನ್ ಇವರು ಕ್ಯಾಲಿಫೋರ್ನಿಯಾ ಲಾಸ್ ಏಂಜಲೀಸ್ ವಿಶ್ವವಿದ್ಯಾಲಯುದ ಮುಖ್ಯಸ್ಥರಾಗಿದ್ದು ಏಷ್ಯಾ ವಿಭಾಗದ ಗೊಂಬೆಯಾಟಗಳನ್ನು ಅಧ್ಯಯನ ನಡೆಸಿದರು. ಆಂಧ್ರ ಪ್ರದೇಶದ ಪ್ರೊ. ನಾಗಭೂಷಣ ಶರ್ಮ, ಮೈಸೂರು ವಿಶ್ವ ವಿದ್ಯಾನಿಲಯ ಜಾನಪದ ವಿಭಾಗದ ಪ್ರೊ. ಜೀ.ಶಂ. ಪರಮಶಿವಯ್ಯ, ಡಾ. ಡಿ.ಕೆ. ರಾಜೇಂದ್ರ, ಡಾ. ನಂ, ತಪಸ್ವೀಕುಮಾರ್, ಡಾ. ಅಂಬಳಿಕೆ ಹಿರಿಯಣ್ಣ, ಬೆಂಗಳೂರು ವಿಶ್ವವಿದ್ಯಾನಿಲಯದ ನಾಟಕ ವಿಭಾಗದ ಮುಖ್ಯಸ್ಥರಾಗಿದ್ದ ಡಾ. ಎಚ್. ಕೆ. ರಂಗನಾಥ, ಬೆಂಗಳೂರು ಕರ್ನಾಟಕ ಚಿತ್ರಕಲಾ ಪರಿಷತ್ ಕಾರ್ಯದರ್ಶಿಗಳಾಗಿದ್ದ ಎಂ.ಎಸ್. ನಂಜುಂಡರಾವ್, ನವ ದೆಹಲಿಯ ಸುರೇಶ್ ಅವಸ್ಥಿ, ಶ್ರೀ ಜೀವನ ಪಾಣಿ, ಶ್ರೀಮತಿ ಉಷಾ ಮಲ್ಲಿಕ್, ಡಾ. ವರದ ಪಾಂಡೆ, ಎಂ.ಎಲ್. ರಾಜಸ್ಥಾನದ ಕೋಮಲ್ ಕೊಠಾರಿ, ಕೇರಳದ ಜಿ.ವೇಣು, ಉದಯಪುರ-ದ ದೇವಿಲಾಲ್ ಸಮರ್ (೧೯೭೦), ಮಂಗಳೂರಿನ ಕೆ.ಎಸ್. ಉಪಾಧ್ಯಾಯ, ಕುಂದಾಪುರದ ಸಂಜೀವ ಪ್ರಭು, ಉಡುಪಿಯ ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರದ ನಿರ್ದೇಶಕ ಪ್ರೊ.ಕು.ಶಿ ಹರಿದಾಸ ಭಟ್ಟ, ಇಂದಿರಾಗಾಂಧಿ ಪ್ರತಿಷ್ಠಾನದ ಮೊದಲ ನಿರ್ದೇಶಕಿ ಶ್ರೀಮತಿ ಕಪಿಲಾ ವಾತ್ಸಾಯನ, ಅಹಮದಾಬಾದ್-ನ ಶ್ರೀಮತಿ ಮೆಹರ್ ಕಾಂಟ್ರಾಕ್ಟರ್, ಮುಂತಾದವರು ಗೊಂಬೆಯಾಟದ ಪುನರುಜ್ಜೀವನಕ್ಕೆ ಬಹಳಷ್ಟು ಶ್ರಮವಹಿಸಿದ ಮೊದಲಿಗರು.



# ಬರೆದದ್ದನ್ನೆಲ್ಲ ಬಂಗಾರ ಅಂದ್ಕೊಳ್ಳೋರೆ ಜಾಸ್ತಿ....

● *ಬಿ.ಎಸ್. ವೆಂಕಟಲಕ್ಷ್ಮಿ*

**ಚಿ**ಕ್ಕಬಳ್ಳಾಪುರದ ಚಿಕ್ಕರಾಜು ಅವರ ಮಗನಾದ, 'ಚಿರಂಜೀವಿ' ಎಂಬ ಹೆಸರಿನ ಮನೆಯಲ್ಲಿರುವ ಚಿ. ಶ್ರೀನಿವಾಸರಾಜುರವರು ನಿರ್ಲಿಪ್ತ ಮುಖಭಾವ. ಇತ್ತೀಚಿನ ಸಭೆಯೊಂದರಲ್ಲಿ ಬಣ್ಣಿಸಲ್ಪಟ್ಟಂತೆ 'ತಣ್ಣನೆ ಶೈಲಿಯ' ನಡವಳಿಕೆ. ಕನ್ನಡದ ಶ್ರೇಯಸ್ಸನ್ನೇ ವ್ರತವೆಂಬಂತೆ ಹಿಡಿದಿರುವ ವ್ಯಕ್ತಿ. ಆದರೂ ಸದಾ ವೇದಿಕೆಯ ಮೇಲೆ ಓಡಾಟವಿಲ್ಲ. ಅಬ್ಬರ ಮಾತಿನ ಗದ್ದಲವಿಲ್ಲ. ಮೆಲುದನಿಯಲ್ಲೇ ಉತ್ತಮ ಬರವಣಿಗೆಗೆ ಪ್ರೋತ್ಸಾಹ ನೀಡುವ ಹಂಬಲ; ಒಳ್ಳೆಯ ಕೃತಿಗಳನ್ನು ಪ್ರಕಟಿಸುವಲ್ಲೇ ಜೀವನ ಸಾರ್ಥಕವಾಗಿಸಿಕೊಳ್ಳುವ ಮಹದಾಸೆ. ಶ್ರೀನಿವಾಸರಾಜು ಕೆಲಸ ಮಾಡುವುದೋ ಬೆಂಗಳೂರಿನ ಕ್ರೈಸ್ಟ್ ಕಾಲೇಜಿನಲ್ಲಿ – ಇಂಗ್ಲಿಷ್ ಭಾಷೆಯನ್ನು ಮಾತ್ರ ಪ್ರೋತ್ಸಾಹಿಸುವಂಥ ಸಂಸ್ಥೆ ಇದಿರಬಹುದೇನೋ ಎಂಬ ಅನುಮಾನ ಹುಟ್ಟಿಸುವಂಥ ಕಾರ್ಯ ಕ್ಷೇತ್ರದಲ್ಲಿ. ಆದರೆ ಇವರೆನ್ನುತ್ತಾರೆ:

"ಇಂಥ ಗ್ರಹಿಕೆಯೇ ತಪ್ಪು ಮೇಡಂ. ೧೯೭೦ರಷ್ಟು ಹಿಂದೆಯೇ ನಾನು ಕಾಲೇಜಿನಲ್ಲಿ ಕನ್ನಡ ಸಂಘವೊಂದನ್ನು ಪ್ರಾರಂಭಿಸಿ ಇಂದಿನ ವರೆಗೂ ಅದನ್ನು ಯಶಸ್ವಿಯಾಗಿ ನಡೆಸಿಕೊಂಡು ಬಂದಿದೀನಿ. ಪ್ರಾಯಶಃ ಸೆಂಟ್ರಲ್ ಕಾಲೇಜಿನಲ್ಲಿ ಹಿಂದೊಮ್ಮೆ ನಡೆದಿದ್ದ ಕನ್ನಡ ಸಂಘ ಬಿಟ್ಟರೆ ಇಂಥದೊಂದು ಸಂಸ್ಥೆ ಇರೋದು ನಮ್ಮಲ್ಲಿ ಮಾತ್ರ....."



ಶ್ರೀನಿವಾಸರಾಜು, ಕ್ರೈಸ್ಟ್ ಕಾಲೇಜು ಕನ್ನಡ ಸಂಘ – ಇವೆರಡೂ ಈಗಾಗಲೇ ಪರ್ಯಾಯ ಹೆಸರುಗಳೇನೋ ಎಂಬಂತೆ ಒಂದರೊಡನೊಂದು ಬೆಸೆದುಕೊಂಡಿರುವುದರಿಂದ ರಾಜು ಅವರು ತಮ್ಮ ವ್ಯಕ್ತಿತ್ವವನ್ನು ಕುರಿತಂತೆ ಸಂಘದ ಬೆಳವಣಿಗೆಯ ಹಿನ್ನೆಲೆಯಲ್ಲೇ ಮಾತನಾಡತೊಡಗುತ್ತಾರೆ:

"ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡ ಎಂ.ಎ. ಪರೀಕ್ಷೆಗೆ ಕಟ್ಟಿದ್ದೆ.

ಫಲಿತಾಂಶ ಇನ್ನೂ ಬಂದಿರಲೇ ಇಲ್ಲ. ರಂ.ಶ್ರೀ, ಮುಗಳಿ, ಜಿ.ಎಸ್.ಎಸ್., ಚಿದಾನಂದಮೂರ್ತಿ ಇವರ ಶಿಷ್ಯನಾಗಿ ಕನ್ನಡವೆಂದರೆ ಕುಣಿದಾಡುವಷ್ಟು ಉತ್ಸುಕತೆಯನ್ನು ಬೆಳೆಸಿಕೊಂಡೇ ಕ್ರೈಸ್ಟ್ ಕಾಲೇಜಿನಲ್ಲಿ ಅಧ್ಯಾಪಕನ ಕೆಲಸಕ್ಕೆ ಅರ್ಜಿ ಹಾಕಿಕೊಂಡಿದ್ದೆ. ಸಂದರ್ಶಕರೊಬ್ಬರು ಕಾಲೇಜಿನ ಆಡಳಿತ ಮಂಡಲಿಗೆ ರಿಸಲ್ಟ್ ಪ್ರಕಟಗೊಂಡಿರದಿದ್ದರೂ ನಾನು ಎಂ.ಎ.ನಲ್ಲಿ ಉತ್ತೀರ್ಣವಾಗಿರೋ ವಿಷಯ ತಮಗೆ ತಿಳಿದಿರುವುದರಿಂದ ನನ್ನನ್ನು ನೇಮಕ ಮಾಡಬಹುದೆಂದು ಶಿಫಾರಸ್ಸು ಮಾಡಿದರು. ಕನ್ನಡಕ್ಕೆ ಆಗ ನಮ್ಮ ಕಾಲೇಜಿನಲ್ಲಿ ಬಿ.ಎ., ಬಿ.ಎಸ್ಸಿ, ಬಿ.ಕಾಂ. ಈ ಎಲ್ಲ ತರಗತಿಗಳ ವಿದ್ಯಾರ್ಥಿಗಳನ್ನು ಒಟ್ಟಾಗಿ ಸೇರಿಸಿದರೂ ಅವರೆಲ್ಲರ ಒಟ್ಟು ಸಂಖ್ಯೆ ಕೇವಲ ೧೫. ಅವರಲ್ಲೊಬ್ಬರು "ಸಿಸ್ಟರ್." ನಾನೊಬ್ಬನೇ ಕನ್ನಡ ಮೇಷ್ಟ್ರು, ೧೮ವರ್ಷಗಳ ಕಾಲ. ಜಿ.ಎಸ್.ಎಸ್. ಕೆಲಸಕ್ಕೆ ಸೇರೋಕ್ಕೆ ಮುಂಚೆ ಹೇಳಿದ್ದರು, "ಶ್ರೀನಿವಾಸರಾಜು, ಇಲ್ಲಿ ಕನ್ನಡವನ್ನು ನೆಲೆಗೊಳಿಸೋ ಜವಾಬ್ದಾರಿ ನಿನ್ನದು" ಅಂತ. ಜಿ.ಪಿ. ರಾಜರತ್ನಂ ಉಪದೇಶಿಸಿದ್ದರು: "ಒಂದು ಗಂಟೆ ಪಾಠ ಹೇಳಬೇಕಾದರೆ, ಎರಡು ಗಂಟೆಗಳ ತಯಾರಿ ಅಗತ್ಯ. ಎಂದೂ ಹಂಡೆ ಖಾಲಿಯಾಗಬಾರದು." ಕ್ರಮೇಣ ಕನ್ನಡ ವಿಭಾಗವೂ ವಿದ್ಯಾರ್ಥಿಗಳನ್ನು ಆಕರ್ಷಿಸಲು ಶುರು ಮಾಡಿತು. ಸಂಖ್ಯೆ ಹೆಚ್ಚುತ್ತ ೧೫೦೦ ನ್ನು ಮುಟ್ಟಿತ್ತು.

- **ಕನ್ನಡ ವಿಭಾಗ ಸಾಮಾನ್ಯ ಎಲ್ಲ ಕಾಲೇಜುಗಳಲ್ಲೂ ಇವೆ. ಆದರೆ ನಿಮ್ಮ ಕಾಲೇಜಿನಲ್ಲಿ ಕನ್ನಡ ಸಂಘವನ್ನು ಅದರೊಳಗೆ ಸಕ್ರಿಯವಾಗಿ ಒಳಪಡಿಸಿದ್ದು ಹೇಗೆ?**

ವಿದ್ಯಾರ್ಥಿಗಳ ಸಂಖ್ಯೆ ಬೆಳೆದಂತೆ ನಾನು ಕನ್ನಡ ಬೆಳವಣಿಗೆಯನ್ನು ಹೊಸ ಆಯಾಮಗಳ ಮೂಲಕ ವಿಸ್ತರಿಸುವ ಆಸೆಯನ್ನು ಬೆಳೆಸಿಕೊಂಡೆ. ನನ್ನ ಮನಸ್ಸಿನಲ್ಲಿ ಇದ್ದದ್ದು ಕಾಲೇಜೊಂದರ ಕನ್ನಡ ಸಂಘದ ಸ್ವರೂಪ ಫ್ಯಾಕ್ಟರಿ ಅಥವಾ ಬ್ಯಾಂಕುಗಳ ಕನ್ನಡ ಸಂಘಗಳಿಗಿಂತಲೂ ಬೇರೆಯದಾಗಿರಬೇಕು ಎಂಬುದು. ಈ ನಿಟ್ಟಿನಲ್ಲಿ ಯೋಚಿಸತೊಡಗಿದಾಗ ನಮ್ಮದೇ ಆದ ಕೆಲವೊಂದು ಕಾರ್ಯಕ್ರಮಗಳು ರೂಪುಗೊಂಡವು. ಉದಾಹರಣೆಗೆ, ಪಠ್ಯ ಪುಸ್ತಕದ ಲೇಖಕರೊಂದಿಗೆ ವಿದ್ಯಾರ್ಥಿಗಳು ಸಂವಾದ ನಡೆಸಲು ಅನುವಾಗುವುದು; ತರಗತಿಗಳಲ್ಲಿ ಪಾಠ ಹೇಳುವ ಹಳಗನ್ನಡವನ್ನು ವಿದ್ಯಾರ್ಥಿಗಳಿಗೆ ಹೆಚ್ಚು ಸುಲಭವಾಗಿ ಅರ್ಥೈಸುವ ಸಲುವಾಗಿ ಗಮಕ ವಿದ್ವಾಂಸರನ್ನು ಕರೆಸಿ ಅವನ್ನು ಅವರಿಂದ ಹಾಡಿಸೋದು, ಕನ್ನಡ ನಾಟಕಗಳನ್ನು ವಿದ್ಯಾರ್ಥಿಗಳಿಂದ ಆಡಿಸೋದು ಇತ್ಯಾದಿ. ಇವಕ್ಕಂದೇ ನಾದಲೀಲೆ, ಅನಿಕೇತನ, ಅಭಿರುಚಿ ಕೇಂದ್ರ ಇಂಥ ವೇದಿಕೆಗಳು ಪ್ರಾರಂಭವಾಗಿವೆ. ಕನ್ನಡದಲ್ಲಿ ಹೆಚ್ಚು ಅಂಕಗಳನ್ನು ಪಡೆದವರಿಗೆ ಪುಸ್ತಕ ಬಹುಮಾನಗಳನ್ನು ನೀಡ್ತೀವಿ. ಕುವೆಂಪು, ಕಾರಂತ, ರಾಜರತ್ನಂ ಇವರ ಹೆಸರುಗಳಲ್ಲಿ ಬಹುಮಾನ ಇಟ್ಟಿದೀವಿ. ನಾನು ಇಂಡಾಲಜಿ ವಿದ್ಯಾರ್ಥಿಯೂ ಆದ್ದರಿಂದ ಕಲೆಗಳಲ್ಲಿ ಆಸಕ್ತಿ. ನಾಟಕಗಳನ್ನು ನಿರ್ದೇಶಿಸಿರುವುದೂ ಉಂಟು.

- **ಪುಸ್ತಕಗಳ ಪ್ರಕಟನೆಯತ್ತ ನಿಮ್ಮ ಮನಸ್ಸು ಹೋಗಲು ಕಾರಣ?**

ಈ ಆಲೋಚನೆ ಶುರುವಾದ್ದು ಸುಮಾರು ೧೯೭೩ರಲ್ಲಿ. ನಮ್ಮ ಕಾಲೇಜಿನ ವಿದ್ಯಾರ್ಥಿ ಲಕ್ಷ್ಮಣಗೌಡ ಅಪಘಾತದಲ್ಲಿ ತೀರಿಕೊಂಡ. ಆತನ ಅಕ್ಕ, ನನ್ನ ಸಹಪಾಠಿಯಾಗಿದ್ದೋಳು, ತಮ್ಮನ ಹೆಸರಿನಲ್ಲಿ ಕಾಲೇಜಿಗೆ ೨೫೦೦ ರೂಪಾಯನ್ನು ದಾನ ಮಾಡಲಿಚ್ಛಿಸಿದಾಗ ನಾನು ಆಕೆಗೆ ಅದರಲ್ಲಿ ೫೦೦ ರೂಪಾಯನ್ನು ಕನ್ನಡ ಸಂಘಕ್ಕೆ ನೀಡುವಂತೆ ಸಲಹೆ ಮಾಡಿದೆ.

ಹೀಗೆ ಸಿಕ್ಕಿದ ೫೦೦ ರೂಪಾಯಿಯನ್ನು ಬಂಡವಾಳವಾಗಿಟ್ಟುಕೊಂಡು ಪುಸ್ತಕ ಪ್ರಕಾಶನವನ್ನು ಪ್ರಾರಂಭಿಸುವ ಆಸೆಯಿಂದ ಲೇಖಕರನ್ನು ಕಂಡಾಗ ಮೊದಮೊದಲಿಗೆ ಯಾರೂ ಮುಂದೆ ಬರಲಿಲ್ಲ. ಕ.ವೆಂ. ರಾಜಗೋಪಾಲ ಮಾತ್ರ ತಮ್ಮ "ನದಿಯ ಮೇಲಿನ ಗಾಳಿ" ಕವನ ಸಂಕಲನದ ಹಸ್ತಪ್ರತಿ ನೀಡಿದರು. ಪ್ರಕಟಣೆ ಪೂರ್ವದಲ್ಲಿ ೩ ರೂ. ಕೂಪನ್ ಮಾರಿ ೭೦೦ ಪ್ರತಿಗಳನ್ನು ಬುಕ್ ಮಾಡಿಕೊಂಡು ಅನಂತರ ಮಿಕ್ಕ ಪ್ರತಿಗಳನ್ನು ೬ ರೂ.ಗೆ ಮಾರಿದೆವು. "ಜ್ಞಾನ ಸಾಹಿತ್ಯ ಮಾಲೆ" ಶುರುವಾಯಿತು. ಹಳೆಯ ವಿದ್ಯಾರ್ಥಿಗಳು ಹಣವನ್ನು ದಾನವಾಗಿತ್ತರು. ಈಗ ನಮ್ಮ ೧೦೦ನೇ ಪುಸ್ತಕ ಬೇಂದ್ರೆಯವರ ೧೦೦ನೇ ಹುಟ್ಟುಹಬ್ಬದ ಸಂದರ್ಭದಲ್ಲಿ ಪ್ರಕಟವಾಗಿದೆ. ೧೦೧ನೇ ಪುಸ್ತಕವಾಗಿ ಜಿ.ಪಿ. ರಾಜರತ್ನಂ ಅವರ ಅಪ್ರಕಟಿತ "ನೆನಪಿನ ಭೀಮ" ಪ್ರಕಟಗೊಳ್ಳಲಿದೆ. ನಮ್ಮ ಪ್ರಕಟನೆಗಳಲ್ಲಿ ೧೫ಕ್ಕೂ ಹೆಚ್ಚಿನ ಕೃತಿಗಳಿಗೆ ಪ್ರಶಸ್ತಿ ಪುರಸ್ಕಾರಗಳು ಬಂದಿವೆ. ನನ್ನ ಸರ್ವಿಸ್‌ನಲ್ಲಿ ಮೂವರು ಪ್ರಿನ್ಸಿಪಾಲರಾಗಿದ್ದು ಅವರೆಲ್ಲರೂ ಏಕ ರೀತಿಯಲ್ಲಿ ಪ್ರೋತ್ಸಾಹ ನೀಡಿದ್ದಾರೆ.

- **ನಿಮ್ಮನ್ನು ನೋಡಿದರೆ ನೀವು ಕನ್ನಡಾನ ರಕ್ತಗತವಾಗಿಸಿಕೊಂಡಿದೀರಿ ಅನ್ನಿಸುತ್ತೆ, ಹೌದಾ?**

ನಾನು ಚಿಕ್ಕವನಿದ್ದಾಗ ನನ್ನಮ್ಮ ಸಾವಿತ್ರಮ್ಮ ಅಧ್ಯಾತ್ಮ ಪುಸ್ತಕಗಳನ್ನ, ಜತೆಗೆ ತ್ರಿವೇಣಿ, ಅನುಪಮಾ ಇವರ ಕಾದಂಬರಿಗಳನ್ನು ಓದುತ್ತಿದ್ದರು. ಅಪ್ಪ ಪೋಲಿಸ್ ಇಲಾಖೆಯಲ್ಲಿದ್ದು ಅಮ್ಮನ್ನೂ ಕರೆದುಕೊಂಡು ಊರೂರು ಸುತ್ತುತ್ತಾ ಇದ್ದುದರಿಂದ ನಾನು ದೊಡ್ಡಮ್ಮಂದಿರ ಬಳಿ ಬೆಳೆದೆ. ದೊಡ್ಡಮ್ಮ ಬಟ್ಟೆ ಹೊಲಿಸಿಕೊಳ್ಳೋಕೆ ದುಡ್ಡು ಕೊಟ್ಟಾಗ ಅಥವಾ ಸ್ಕಾಲರ್‌ಷಿಪ್ ಹಣ ಬಂದಾಗ ಪುಸ್ತಕ ಕೊಳ್ಳುತ್ತಿದ್ದೆ. ಕಾಲೇಜಿನ ಓದಿಗಾಗಿ ಬೆಂಗಳೂರಿಗೆ ಬರೋಕ್ಕೆ ಮುಂಚೆ ಹೈಸ್ಕೂಲು ಓದ್ತಿದ್ದಾಗ ಬ.ನ. ಗುಂಡೂರಾವ್ ಅನ್ನೋ ಹಿಂದಿ ಮೇಷ್ಟ್ರು ರನ್ನ, ಪಂಪ, ಬಿ.ಎಂ.ಶ್ರೀ. ಇವರ ಕೃತಿಗಳನ್ನು ರಸವತ್ತಾಗಿ ಓದಿದ್ದರು. ರೋಷನ್‌ಬೇಗ್ ಅನ್ನೋ ಇಂಗ್ಲಿಷ್ ಮೇಷ್ಟ್ರು ಶೇಕ್ಸ್‌ಪಿಯರ್‌ನ ಸೊಗಸಾಗಿ ಬಣ್ಣಿಸ್ತಿದ್ರು. ಶಿವಸ್ವಾಮಿ ಅನ್ನೋವರು ತಮ್ಮ ಹಣದಲ್ಲೇ ಒಳ್ಳೇ ಪುಸ್ತಕಗಳನ್ನು ಕೊಂಡು ನಮಗೆ ಹಂಚೋರು. ಶನಿವಾರ ಬಂತಂದ್ರೆ ನಾವು ೮-೧೦ ಜನ ನಂದಿಬೆಟ್ಟ ಹತ್ತಿ ಕೂತು ಓದಿದ್ದನ್ನು ಕಂಡಿದ್ದನ್ನು ಚರ್ಚಿಸೋದು. ಬೆಂಗಳೂರಿಗೆ ಬಂದು ಬಿ.ಎಸ್ಸಿ. ಪಾಸುಮಾಡಿ ಮೈಸೂರು ಮಿನರಲ್ಸ್ ಸಂಸ್ಥೆ ಸೇರಿ ಕಂಟೋನ್ಮೆಂಟ್ ರೈಲ್ವೆ ಯಾರ್ಡ್‌ನಲ್ಲಿ ಕೆಲಸಕ್ಕೆ ಸೇರಿದ ಮೇಲೆ, ಕನ್ನಡದ ಬಗೆಗಿನ ಒಲವು ನನ್ನನ್ನು ಒಳಗೇ ತಿವಿಯಲು ತೊಡಗಿದಾಗ ಉದ್ಯೋಗ ಬಿಟ್ಟು ಮತ್ತೆ ಬಿ.ಎ. ಸೇರಿ, ಕನ್ನಡ ಓದಿ, ಎಂ.ಎ. ಪೂರೈಸಿದವನು ನಾನು. ಬದುಕೇ ನಿರಾಳವಾದ ಹಾಗಾದಾಗ "ವಿಮೋಚನಾ" ಅನ್ನೋ ಪತ್ರಿಕೇನ ೧೫ ದಿನಗಳಿಗೊಮ್ಮೆ ಕಾಲೇಜಿನ ದಿನಗಳಲ್ಲೇ ತಂದಿದ್ದೆವು. "ಜ್ಞಾನಾಗಂಗಾ" ಅನ್ನೋ ಸಾಹಿತ್ಯ ಸಂಘ ಕಟ್ಟಿದ್ದೆವು. ಎಂ.ವಿ.ಸೀ, ಜಿ.ಪಿ, ಕವೆಂ ಇವರಿಂದ ಮಾರ್ಗದರ್ಶನ ಸಿಕ್ಕಿತು. ಸೆಕೆಂಡ್‌ಹ್ಯಾಂಡ್ ಪುಸ್ತಕದ ಅಂಗಡಿಗೆ ಎಡೆಬಿಡದೆ ಓಡಾಟ, ನಾನ್‌ಫಿಕ್ಷನ್, ಸೈನ್ಸ್‌ಫಿಕ್ಷನ್ ವ್ಯಾಸಂಗ, ಲೂಯಿಸ್ ಮೆಕಾನೀಸ್, ದಾಸ್ತವಾಸ್ಕಿ, ಶೇಕ್ಸ್‌ಪಿಯರ್, ಯೂಜೀನ್ ಜನೀಲ್ ಇವರನ್ನು, ನಾಟಕ ಕವನಗಳನ್ನು, ಇಂಗ್ಲಿಷ್, ಕನ್ನಡ, ತೆಲುಗು ಕೃತಿಗಳನ್ನು ಓದಿಕೊಂಡದ್ದಾಯಿತು.

- **ನೀವು ಹಿಂದೊಮ್ಮೆ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿದ್ದೂ ಉಂಟಲ್ಲವಾ?**

ಹೌದು. ಕನ್ನಡಕ್ಕೆ ಸಂಬಂಧಪಟ್ಟ ಹಾಗೆ ಏನಾದರೂ ಮಹತ್ತರ ಸಾಧನೆ

ಮಾಡಬಹುದೇನೋ ಅನ್ನಿಸಿತ್ತು. ಅಲ್ಲಿ ಕೆಲವು ತಿಂಗಳುಗಳಿದ್ದೆ. ಹುಬ್ಬಳ್ಳಿಯ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಆರ್.ಸಿ. ಹಿರೇಮಠರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿದ ಸಂದರ್ಭದಲ್ಲಿ ಅನುಸರಿಸಿದ ರೀತಿಯಿಂದ ನನಗೆ ಅಸಮಾಧಾನವಾಯಿತು. ಅಧ್ಯಕ್ಷರು ಯಾರಾಗಬೇಕು ಎಂಬುದನ್ನು ಮೊದಲೇ ನಿರ್ಧರಿಸಿ ಕೇವಲ ಶಾಸ್ತ್ರಕ್ಕಾಗಿ ಎಂಬಂತೆ ವಿಷಯವನ್ನು ಸಭೆಯ ಮುಂದಿಟ್ಟರು. ಇದಕ್ಕೆ ಪ್ರತಿಭಟನೆಯಾಗಿ ನಾನು ಕಾರ್ಯದರ್ಶಿ ಸ್ಥಾನಕ್ಕೆ ರಾಜೀನಾಮೆ ಕೊಟ್ಟೆ. ಇಂಥ ವಿಧಾನದ ಬಗ್ಗೆ ನಮಗಿರುವ ವಿರೋಧದ ಸಂಕೇತವಾಗಿ ನಾನು, ಶೂದ್ರ, ಜಿ.ಕೆ. ಗೋವಿಂದರಾವ್ ಕಾರ್ಯದರ್ಶಿಗಳಾಗಿ ಸಾಹಿತ್ಯ ಪರಿಷತ್ತಿನ ಸಮ್ಮೇಳನದ ದಿನದಂದೇ ಬೆಂಗಳೂರಿನಲ್ಲಿ ಜಾಗೃತ ಸಾಹಿತ್ಯ ಸಮ್ಮೇಳನ ಎಂಬ ಪರ್ಯಾಯ ಸಮ್ಮೇಳನವನ್ನು ಅಡಿಗರಿಂದ ಉದ್ಘಾಟಿಸಿದೆವು. ಲಂಕೇಶ್, ಶರ್ಮ, ಸಿದ್ಧಲಿಂಗಯ್ಯ, ಅನಂತಮೂರ್ತಿ ಇವರನ್ನು ಸಮ್ಮೇಳನಕ್ಕೆ ಒಳಗೊಳಿಸಿದೆವು.

- **ಹಂಪೆಯ ಕನ್ನಡ ವಿಶ್ವವಿದ್ಯಾನಿಲಯದಲ್ಲಿ ಪ್ರಸಾರಾಂಗದ ನಿರ್ದೇಶಕರಾಗಿ ನೇಮಕಗೊಂಡು ನಂತರ ಅದನ್ನು ಬಿಟ್ಟದ್ದೇಕೆ?**

ನಾನು ಅದರ ಮೊದಲ ನಿರ್ದೇಶಕ, ಸರಿ. ಆದರೆ ಕಾಲೇಜಿನಲ್ಲಿ ಹುಡುಗರ ಜತೆ ಇದ್ದೊಂಡು ಪಾಠ ಹೇಳಿ ಎಷ್ಟು ಅಭ್ಯಾಸವಾಗಿತ್ತು ಅಂದ್ರೆ ಕಾಲೇಜಿನ ಸೆಳೆತ ಹೆಚ್ಚಾಯಿತು. ಅದೂ ಅಲ್ಲದೆ ಕಾಲೇಜಿನಲ್ಲಿ ನಾನು ಸ್ವತಂತ್ರ, ಇದರ ವಾತಾವರಣದಲ್ಲಿ ನನಗೆ ನೆಮ್ಮದಿಯಿದೆ. ಪ್ರಸಾರಾಂಗದ ಕಾನ್‌ಸೆಪ್ಟ್ ಬದಲಾಗಬೇಕು ಅನ್ನೋ ದೃಷ್ಟಿಯಿಂದ ಹಂಪೆಯಲ್ಲಿದ್ದ ಅಲ್ಪಾವಧಿಯಲ್ಲಿ ಯೋಜನೆಗಳನ್ನು ಹಾಕಿಕೊಟ್ಟೆ. ಕರ್ನಾಟಕದ ಸಂಸ್ಕೃತಿಗೆ ಸಂಬಂಧಿಸಿದಂತೆ ವೀಡಿಯೋ ಕ್ಯಾಸೆಟ್‌ಗಳನ್ನು ತಯಾರಿಸುವುದು, ಜನಪದ ಹಾಡುಗಳನ್ನು, ದನಿಗಳನ್ನು ಧ್ವನಿಮುದ್ರಿಸುವುದು, ಸಾಹಿತ್ಯ ಅಂದ ಕೂಡಲೇ ದೊಡ್ಡವರ ಹತ್ತಿರ ಮಾತ್ರ ಹೋಗೋದನ್ನು ಬಿಟ್ಟು ಯುವ ಪೀಳಿಗೆಯ ಪ್ರತಿಭೆಯನ್ನು ಬೆಳಕಿಗೆ ತರುವುದು, ಹೈಸ್ಕೂಲು ಮಟ್ಟದಲ್ಲೇ ದೃಶ್ಯಶ್ರವಣ ಕಾರ್ಯಕ್ರಮ, ಉಪನ್ಯಾಸ ಏರ್ಪಡಿಸೋದು, ಪುಸ್ತಕ, ಮ್ಯಾಗಜಿನ್‌ಗಳನ್ನು ಪ್ರಕಟಿಸುವುದು ಹೀಗೆ. ಡ್ರಾಫ್ಟ್ ಹಾಕೊಟ್ಟು ಬಂದಿದೀನಿ.

- **ಪ್ರಕಟನೆ ಕಾರ್ಯದಲ್ಲಿ ತೀವ್ರವಾಗಿ ತೊಡಗಿಸಿಕೊಂಡಿರುವ ನಿಮಗೆ ಈಗ ಹೊರಬರುತ್ತಿರುವ ಬರವಣಿಗೆಯ ಬಗ್ಗೆ ಏನು ಅಭಿಪ್ರಾಯ?**

ಹಿಂದೊಮ್ಮೆ ತಾರುಣ್ಯದಲ್ಲಿ ಚಿನ್ಮಯಾನಂದರ ಆಪ್ತವಲಯದಲ್ಲಿ ಒಬ್ಬನಾಗಿ ಅವರೊಂದಿಗೆ ಶ್ರೀರಂಗಪಟ್ಟಣಕ್ಕೆ ಹೋಗಿ ನೀರಿನಲ್ಲಿ ನಿಂತು ಜಪ ಮಾಡಿದ್ದ ನನ್ನನ್ನು ಅಧ್ಯಾತ್ಮದಿಂದ ಹೊರಗೆಳೆದದ್ದು ಕುವೆಂಪು, ಕಾರಂತ, ಪ್ರೇಮಚಂದ್, ಶರಚ್ಚಂದ್ರರ ಕೃತಿಗಳು. ಲೆನಿನ್. ಗಾಂಧಿ ಅವರ ವಿಚಾರಧಾರೆ. ತ.ರಾ.ಸು. ಅವರ ಆಪ್ತ ಗೆಳೆಯ ಮಾಲೂರು ಮುನಿರಾಜು ನನ್ನ ಕಣ್ಣನ್ನೇ ತೆರೆಸಿದರು ಅನ್ನಬಹುದು. ಅ.ನ.ಕೃ, ಮ. ರಾಮಮೂರ್ತಿ, ಸನತ್‌ಕುಮಾರ್ ಶಾಸ್ತ್ರಿ, ಮಣಿಗೈಲ್ಸ್ ಇಂಥವರಿಂದ ಪ್ರಭಾವಿತನಾದವನು ನಾನು. ಬೇಂದ್ರೆ, ಅಡಿಗ, ಅನಂತ ಮೂರ್ತಿ, ತೇಜಸ್ವಿ ಇವರ ಕೃತಿಗಳನ್ನು ಬೆರಗಿನಿಂದ ನೋಡುತ್ತಾ, ಅನಾರೋಗ್ಯದಲ್ಲೂ ಗದ್ಯದಲ್ಲಿ ಅದ್ಭುತ ಪ್ರಯೋಗ ಮಾಡ್ತಿರೋ ಲಂಕೇಶರ "ದೈತ್ಯಪ್ರತಿಭೆ"ಯನ್ನು ಕಂಡು ದಂಗಾಗಿದ್ದರೂ ಇತ್ತೀಚೆಗೆ ಅನೇಕ ಲೇಖಕರು ತಮ್ಮ ಮುಂದೆ ದೊಡ್ಡ ಚಾಲೆಂಜ್ ಇದೆ ಅನ್ನೋದನ್ನೇ ಮರೆತು

ಹೋಗಿರುವುದನ್ನು ಕಂಡು ಬೇಸರವಾಗಿವೆ. ಬರೆದದ್ದನ್ನೆಲ್ಲ ಬಂಗಾರ ಅಂದ್ಕೋತ್ತಾರೆ. ಅಬ್ದುಲ್ ರಶೀದ್, ಮೊಗಳ್ಳಿ ಗಣೇಶ್, ಜಯಂತ್ ಕಾಯ್ಕಿಣಿ ಇಂಥವರ ಬಗ್ಗೆ ಭರವಸೆಯಿದೆ. ನೇಮಿಚಂದ್ರ, ವೈದೇಹಿ ಇಂಥವರಿಗೆ ಬದ್ಧತೆ ಇದೆ. ಜತೆಗೇ ಅವರಿಗೆ ತಮ್ಮ ಮಿತಿಗಳೂ ಗೊತ್ತಿವೆ. ಆದರೆ ಸಾಹಿತ್ಯಕ್ಕೆ ಸಂಬಂಧಿಸಿದವೆಲ್ಲವೂ ಅದ್ಭುತವಾಗಿವೆ ಎನ್ನಲಾಗದು.

- **ಇದಕ್ಕೆ ಕಾರಣವೇನಿರಬಹುದು?**

ವಿದ್ಯಾರ್ಥಿಗಳ ಮಟ್ಟದಲ್ಲಿ ನೋಡಿದರೆ ಈಗಿನ ಹುಡುಗರು ಎಲ್ಲವನ್ನೂ ಪರೀಕ್ಷೆಯ ದೃಷ್ಟಿಯಿಂದ, ಅಂಕಗಳನ್ನು ಸಂಪಾದಿಸೋ ದೃಷ್ಟಿಯಿಂದ ನೋಡುವುದು. ವಿದ್ಯಾರ್ಥಿಗಳು ಅನ್ಯಜ್ಞಾನ ಶಿಸ್ತನ್ನೂ ಬೆಳೆಸಿಕೊಳ್ಳಬೇಕು. ಮೇಷ್ಟ್ರುಗಳಿಗೂ ಲಿಮಿಟೇಷನ್‌ಗಳಿರುತ್ತವೆ. ಇನ್ನು ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದಂತೆ ನಡೆದಿರುವ ಕಾರ್ಯಕ್ರಮಗಳತ್ತ ಕಣ್ಣು ಹಾಯಿಸಿದಾಗ ಈಗ್ಗೆ ೧೦ ವರ್ಷಗಳ ಹಿಂದಿದ್ದ ತೀವ್ರತೆಯಾಗಲಿ, ಇಂಪ್ಯಾಕ್ಟ್ ಆಗಲಿ ನಮ್ಮ ಈಗಿನ ಸಾಹಿತ್ಯ ಸೆಮಿನಾರುಗಳಿಗಿಲ್ಲ ಎನ್ನಿಸಿದೆ. ಬೆಂಗಳೂರು ವಿಶ್ವವಿದ್ಯಾನಿಲಯವನ್ನೇ ಉದಾಹರಣೆಯಾಗಿ ತೆಗೆದುಕೊಂಡರೆ ಜಿ.ಎಸ್.ಎಸ್.ಎಲ್ಲಿಯವರೆಗಗೆ ಸೆಮಿನಾರ್‌ಗಳನ್ನು ನಡೆಸಿದರೋ ಅಲ್ಲಿಯ ವರೆಗೂ ಅವು ಸಾಹಿತ್ಯಾಭ್ಯಾಸಿಗಳಿಗೆ ರಸದೌತಣವಾಗುತ್ತಿದ್ದವು. ವಿಮರ್ಶೆಯ ಗಟ್ಟಿಬೇರುಗಳು ಬಿಡಲು ಅವು ಅನುವಾಗುತ್ತಿದ್ದವು. ಈಗ ವಿದ್ಯಾರ್ಥಿಗಳಿಗೂ ಅಧ್ಯಯನ ಹಾಗೂ ಧ್ಯಾನದ ಕೊರತೆ. ಸೆಮಿನಾರ್‌ಗಳಿಗೂ ಉದಾತ್ತ ಉದ್ದೇಶವಿಲ್ಲ. ಲಲಿತ ಪ್ರಬಂಧಗಳು, ಮಕ್ಕಳ ಸಾಹಿತ್ಯ ಇವುಗಳತ್ತ ಯಾರ ಗಮನವೂ ಇಲ್ಲ. ಬಂಗಾಳದಲ್ಲಿ ದೊಡ್ಡ ಬರಹಗಾರರು ಈ ಕೆಲಸ ಮಾಡಿದರು. ಸತ್ಯಜಿತ್ ರೇ ಅಂಥವರು. ನವೋದಯ ಕಾಲದಲ್ಲಿ ಬೇಂದ್ರೆ, ಕುವೆಂಪು ಬರೆದರು. ರಾಜರತ್ನಂ ಬರೆದರು.

- **ಕನ್ನಡ ಸಾಹಿತ್ಯವನ್ನು ಕುರಿತಂತೆ ನಿಮ್ಮ ಮುಂದಿನ ಯೋಜನೆಗಳೇನು?**

ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಚಟುವಟಿಕೆಗಳನ್ನು ಈಗಾಗಲೇ ಹೇಳಿದೀನಿ. ನಾನು, ಕೆ.ವಿ.ಎನ್., ಡಿ.ವಿ. ರಾಜಶೇಖರ್ ಸೇರಿ ೧೯೭೭ರಲ್ಲಿ "ಅಂಕಣ" ಅನ್ನೋ ಪುಟ್ಟ ಸಾಹಿತ್ಯ ಪತ್ರಿಕೆಯನ್ನು ಹೊರತರುತ್ತಿದ್ದೆವು. ಒಬ್ಬೊಬ್ಬರು ಒಂದೊಂದು ಕಡೆ ಚದುರಿ ಹೋಗಿ ಅದು ನಿಂತುಹೋಯಿತು. ಮತ್ತೆ ಅವನ್ನು ಸದ್ಯದಲ್ಲೆ ಪ್ರಾರಂಭಿಸುವ ಉದ್ದೇಶವಿದೆ.....

ನಾನೇ ಬರೆದವೆಂದರೆ 'ಐದು ಮೂಕ ನಾಟಕಗಳು' ಹಾಗೂ 'ಮೂರು ಏಕಾಂಕಗಳು', 'ಭಸನಾಲಬಂಧು' ಎಂಬ ಕವನ ಸಂಕಲನವನ್ನು ಹೊರತಂದಿದ್ದೇನೆ. ವಿಶ್ವಕಥಾಕೋಶಕ್ಕೆ ಅನುವಾದಿಸಿ ಕೊಟ್ಟಿದ್ದೇನೆ. ಇಂಡಿಯಾದಲ್ಲೇ ಮೂಕ ನಾಟಕಗಳನ್ನು ಬರೆದವನು ನಾನು. ಇವು ಕೆಲವು ಭಾಷೆಗಳಿಗೂ ಅನುವಾದವಾಗಿವೆ. ಏಕಾಂಕಗಳಿಗೆ ರಾಜ್ಯ ಅಕಾಡೆಮಿ ಪ್ರಶಸ್ತಿ ಸಿಕ್ಕಿದೆ.

*(ಸಂದರ್ಶನ : ಲಂಕೇಶ್ ಪತ್ರಿಕೆ)*



# ರಾಜು ಮೇಷ್ಟ್ರೊಂದಿಗೆ ಒಂದಷ್ಟು ಮಾತು

● *ಕೆ.ಜಿ. ಮಾನಸಿ*

ನಮ್ಮ 'ರಾಜು ಮೇಷ್ಟ್ರು' ಕವಿಯೂ ಹೌದು. ನಾಟಕಕಾರರೂ ಹೌದು. ಎಲ್ಲಕ್ಕಿಂತ ಮುಖ್ಯವಾಗಿ ಒಳ್ಳೆಯ ಕನ್ನಡ ಅಧ್ಯಾಪಕರು. ಕ್ರೈಸ್ಟ್ ಕಾಲೇಜಿನಲ್ಲಿ ಮೂವತ್ತು ವರ್ಷ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸಿ ೩೧, ಮಾರ್ಚ್ ೨೦೦೦ರಂದು ನಿವೃತ್ತರಾಗುತ್ತಿದ್ದಾರೆ. ಒಂದು ವರ್ಷ ಹಂಪಿಯ ಕನ್ನಡ ವಿಶ್ವ ವಿದ್ಯಾಲಯ ಸ್ಥಾಪಕ ಪ್ರಸಾರಾಂಗ ನಿರ್ದೇಶಕರಾಗಿಯೂ ಕಾರ್ಯ ನಿರ್ವಹಿಸಿದ್ದಾರೆ. ಜೊತೆಗೆ ನಮ್ಮ ಕಾಲೇಜಿನ ಕನ್ನಡ ಸಂಘದ ಸ್ಥಾಪಕ, ಸಂಚಾಲಕರಾಗಿ ನೂರ ಅರವತ್ತಕ್ಕೂ ಹೆಚ್ಚು ಪುಸ್ತಕಗಳನ್ನು ಪ್ರಕಟಿಸಿ, ಕನ್ನಡ ನಾಡು ಕಂಡ ವಿಶಿಷ್ಟ ಸಾಹಿತ್ಯ ಪರಿಚಾರಕರಾಗಿದ್ದಾರೆ. ಕೀರ್ತಿಶೇಷರಾದ ಡಾ.ಜಿ.ಪಿ. ರಾಜರತ್ನಂ ಅವರು ಇವರ ಮಾರ್ಗದರ್ಶಿ, ಅವರಿಂದ ಪ್ರೊ. ಚಿ. ಶ್ರೀನಿವಾಸರಾಜು ಅವರು ಬಹಳ ಪ್ರಭಾವಿತರಾಗಿದ್ದಾರೆ. ರಾಜು ಮೇಷ್ಟ್ರು ಜೀವನದೃಷ್ಟಿ ಎಂದರೆ 'ನಮ್ಮ ಮಿತಿಗಳಲ್ಲಿ ನಾಲ್ಕು ಜನರಿಗೆ ಒಳ್ಳೆಯದಾಗುವಂತೆ ಬದುಕುವುದು'. ಇವರು ಬಹಳ ಸರಳ, ಸಂಕೋಚದ ವ್ಯಕ್ತಿ. 'ನಮಗೆ ನಿಮ್ಮ ಒಂದು ಸಂದರ್ಶನ ಬೇಕಿತ್ತಲ್ಲಾ?' ಎಂದು ಕೇಳಿದಾಗ 'ಬಿಡು ವಿದ್ದಾಗ ಬನ್ನಿ. ನಾನೂ ಬಿಡುವು ಮಾಡಿಕೊಳ್ಳುತ್ತೇನೆ' ಎಂದರು. ನಾವು ಅವರನ್ನು ಭೇಟಿ ಮಾಡಲು ಹೋಗಿದ್ದು ಮಧ್ಯಾಹ್ನ ಒಂದು ಗಂಟೆಗೆ. ಅದು ಊಟದ ಸಮಯ. ನಾವು ಏನೋ ಊಟ ಮುಗಿಸಿದ್ದೆವು. ಆದರೆ ಅವರು ಊಟ ಪ್ರಾರಂಭಿಸಿರಲಿಲ್ಲ. ನಾವು ಅವರ ಕೊಠಡಿ (೧೦೩)ಗೆ ಹೋದ ತಕ್ಷಣ, ನಮ್ಮನ್ನು ನೋಡಿ, ನಕ್ಕು, "ಬನ್ನಿ, ಬನ್ನಿ, ಒಂದು ಕ್ಲಾಸ್‌ರೂಮಿಗೆ ಹೋಗಿ ಕುಳಿತು ಕೊಳ್ಳೋಣ. ನಮ್ಮ ಹರಟೆ ಬೇರೆಯವರಿಗೆ ತೊಂದರೆಯಾಗ ಬಾರದು" ಎಂದರು. ನಾವು ಒಂದು ಕ್ಲಾಸ್‌ರೂಮಿಗೆ (೩೦೭). ಹೋಗಿ ಕುಳಿತ ಕೂಡಲೇ 'ನಿಮ್ಮ ಬಂಬಾರ್ಡ್‌ಮೆಂಟ್ (Bombard-ment) ಪ್ರಾರಂಭವಾಗಲಿ' ಎಂದರು. ನಾವು ನಮ್ಮ ಪ್ರಶ್ನೆಗಳ ಸುರಿಮಳೆಯನ್ನು ಪ್ರಾರಂಭಿಸಿದೆವು.

**ಮಾನಸಿ :** 'ನೀವು ಮೊದಲು ವಿಜ್ಞಾನದ ವಿದ್ಯಾರ್ಥಿ. ಅನಂತರ ಕನ್ನಡ ಸಾಹಿತ್ಯ ಅಧ್ಯಯನದ ಕಡೆ ಹೊರಳಿದಿರಿ. ಈ ಪರಿವರ್ತನೆ ಏಕೆ ಉಂಟಾಯಿತು?

**ರಾಜು ಮೇಷ್ಟ್ರು :** ನಿಜ. ನಾನು ವಿಜ್ಞಾನದ ವಿದ್ಯಾರ್ಥಿ. ನಾನು ಎರಡು-ಮೂರು ವರ್ಷ ಕಬ್ಬಿಣದ ಅದಿರಿನ ಗಣಿಯಲ್ಲಿ ಕೆಲಸ ಮಾಡಿದೆ. ಸಮಾಧಾನ ಸಿಕ್ಕಲಿಲ್ಲ. ಏಕೋ ಒಂಟಿತನದ ಅನುಭವವಾಯಿತು. ಆತ್ಮೀಯರ ಒತ್ತಾಸೆಯಿಂದ ಗಣಿ ಕೆಲಸ ಬಿಟ್ಟು ಸಾಹಿತ್ಯದ ಕಡೆ ಬಂದೆ. ಕನ್ನಡ ಸಾಹಿತ್ಯ ವಿದ್ಯಾರ್ಥಿಯಾಗಿ ನಿಮ್ಮ ಮುಂದೆ ಇದ್ದೇನೆ.

**ಮಾನಸಿ :** ಇದಕ್ಕೆ ನಿಮ್ಮ ಮನೆಯವರು ಏನೆಂದರು?

**ರಾಜು ಮೇಷ್ಟ್ರು :** ನಮ್ಮ ತಂದೆಯವರು ಈ ನಿರ್ಧಾರದ ಬಗ್ಗೆ ಏನೂ ಹೇಳಲಿಲ್ಲ. ನಮ್ಮ ತಾಯಿಗೆ ಸ್ವಲ್ಪ ಮುಜುಗರವಾಯಿತು. ಕೊನೆಗೆ 'ಏನು ಬೇಕಾದರೂ ಮಾಡು' ಎನ್ನುವ ಸ್ವಾತಂತ್ರ್ಯವನ್ನು ಕೊಟ್ಟರು. ಬಂಧುಗಳ ದೃಷ್ಟಿಯಲ್ಲಿ ಪ್ರಯೋಜನವಿಲ್ಲದವನು ಎನ್ನಿಸಿಕೊಂಡೆ.

ಈ ಉತ್ತರವನ್ನು ಕೇಳಿ ನಮಗೆ ಆಶ್ಚರ್ಯವಾಯಿತು. ತಂದೆ ಪೋಲಿಸ್ ಹುದ್ದೆಯಲ್ಲಿದ್ದವರು. 'ಮಗ ವಿಜ್ಞಾನದಲ್ಲಿ ಮುಂದೆ ಬರಲಿ' ಎಂಬ ಆಸೆಯಿತ್ತು. ಆದರೆ ಅವರು ಒತ್ತಾಯದಿಂದ ಏನನ್ನೂ ಹೇಳಲಿಲ್ಲ. ಪ್ರತಿಯೊಬ್ಬ ತಂದೆ-ತಾಯಿಗಳಿಗೂ ತಮ್ಮ ಮಗ ಇಂಜಿನಿಯರ್ ಆಗಲಿ, ಡಾಕ್ಟರ್ ಆಗಲಿ, ಇಲ್ಲವೆ ದೊಡ್ಡ ಅಧಿಕಾರಿಯಾಗಲಿ ಎಂಬ ಆಸೆ ಇದ್ದೇ ಇರುತ್ತದೆ. ಎಲ್ಲವನ್ನು ಬಿಟ್ಟು 'ನಾನು ಮೇಷ್ಟ್ರಾಗುತ್ತೇನೆ' ಎಂದರೆ ಯಾರಿಗೆ ತಾನೆ ಬೇಸರವಾಗುವುದಿಲ್ಲ'.

**ಮಾನಸಿ :** ಕನ್ನಡ ಸಂಘದ ಮೂಲಕ ಇಷ್ಟೊಂದು ಕೆಲಸ ಮಾಡಲು ನಿಮಗೆ ಹೇಗೆ ಸಾಧ್ಯವಾಯಿತು?

**ರಾಜು ಮೇಷ್ಟ್ರು :** ನನಗೆ ಸಾಧ್ಯವಾದದ್ದನ್ನು ಅತ್ಯಂತ ಸಹಜವಾಗಿ ಮಾಡಿದೆ. ಯಾರು ಬೇಕಾದರೂ ಮಾಡಬಹುದು.

**ಮಾನಸಿ :** ಈ ರೀತಿಯ ಅಭಿರುಚಿ ನಿಮ್ಮಲ್ಲಿ ಹೇಗೆ ಪ್ರಾರಂಭವಾಯಿತು.

**ರಾಜು ಮೇಷ್ಟ್ರು :** ನಾನು ಬಿ.ಎ.ದಲ್ಲಿ ಓದುವಾಗಲೇ 'ವಿಮೋಚನೆ' ಎಂಬ ಪತ್ರಿಕೆಯನ್ನು ಸಂಪಾದಿಸುತ್ತಿದ್ದೆ. ಜಿ.ಪಿ. ರಾಜರತ್ನಂ, ಎಂ.ವಿ. ಸೀತಾರಾಮಯ್ಯ ಅವರು ಕನ್ನಡಕ್ಕಾಗಿ ಮಾಡಿದ ಕೆಲಸ ಕಣ್ಣು ಮುಂದಿತ್ತು. ಎಂ.ಎ. ನಂತರ ಕ್ರೈಸ್ಟ್ ಕಾಲೇಜಿನಲ್ಲಿ ಅಧ್ಯಾಪಕನಾದೆ. ಇಪ್ಪತ್ತೇಳು ವರ್ಷಗಳ ಹಿಂದೆ ಕನ್ನಡ ಸಂಘವನ್ನು ಪ್ರಾರಂಭಿಸಿದೆ. ಸ್ಥಾಪಕ ಪ್ರಾಂಶುಪಾಲರಾದ ರೆ॥ ಫಾ॥ ಮಾಣಿಗೈಲ್ಸ್ ಹೆಚ್ಚಿನ ಪ್ರೋತ್ಸಾಹ ನೀಡಿದರು. ಕನ್ನಡದ ವಿದ್ಯಾರ್ಥಿಯಾಗಿದ್ದ ಲಕ್ಷ್ಮಣಗೌಡ ಅಕಾಲ ಮರಣಕ್ಕೆ ತುತ್ತಾದ. ಅವನ ಮನೆಯವರು ಕಾಲೇಜಿಗೆ ರೂ. ೨,೫೦೦/- ನೀಡಿ, ಅವನ ಹೆಸರಿನಲ್ಲಿ ಏನನ್ನಾದರೂ ಮಾಡಬೇಕೆಂದು ಸೂಚಿಸಿದ್ದರು. ಅದರಲ್ಲಿ ರೂ. ೫೦೦/- ಕನ್ನಡ ಸಂಘಕ್ಕೆ ಬಂತು. ಕನ್ನಡ ಸಂಘ ತನ್ನ ಪ್ರಕಟಣೆಗಳನ್ನು ಪ್ರಾರಂಭಿಸಲು ಅದೇ ಬಂಡವಾಳ. ಅಲ್ಲಿಂದ 'ಶ್ರೀ ಸಿ.ಕೆ. ಲಕ್ಷ್ಮಣಗೌಡ ಗ್ರಂಥಮಾಲೆ' ಪ್ರಾರಂಭವಾಯಿತು. ಮೊದಲನೆಯ ಪುಸ್ತಕ ಪ್ರೊ. ಕ. ವೆಂ. ರಾಜಗೋಪಾಲ್ ಅವರ 'ನದಿಯ ಮೇಲಿನ ಗಾಳಿ' ಕವನ ಸಂಕಲನ. ಈಗ ನಾವು ಕನ್ನಡ ಸಂಘವನ್ನು No Loss, No profit ಆಧಾರದ ಮೇಲೆ ನಡೆಸುತ್ತಿದ್ದೇವೆ.

ರಾಜು ಅವರು ಕನ್ನಡದಲ್ಲಿ 'ಐದು ಮೂಕ ನಾಟಕಗಳು' ಕೃತಿಯನ್ನು ಪ್ರಕಟಿಸಿ, ಕನ್ನಡ ನಾಟಕಕ್ಕೆ ಹೊಸ ಆಯಾಮವನ್ನು ಸೇರಿಸಿದರು. ಅವರೇ ಕನ್ನಡದಲ್ಲಿ ಮೊದಲು ಮೂಕ ನಾಟಕ ರಚಿಸಿ, ಪ್ರಕಟಿಸಿದ್ದು. ಅವರು 'ಮೂರು ಏಕಾಂಕಗಳು' ಪುಸ್ತಕಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ದೊರಕಿದೆ. 'ಭಸನಾಲ ಬಂಧು' ಅವರ ಕವನ ಸಂಕಲನ. 'ಹಳಿಯ ಮೇಲಿನ ಸದ್ದು' ಅವರ ಪೂರ್ಣ ಪ್ರಮಾಣದ ನಾಟಕ. ರಾಜರತ್ನಂ ಅವರನ್ನು ಕುರಿತು ಒಂದು ಪುಸ್ತಕ ಬರೆದಿದ್ದಾರೆ. ಅನುವಾದಿತ ಕಥೆಗಳ ಪುಸ್ತಕವೊಂದನ್ನು ಪ್ರಕಟಿಸಿದ್ದಾರೆ.

**ಮಾನಸಿ :** ಕನ್ನಡ ಸಂಘದ ಕೆಲಸಗಳು ನಿಮ್ಮ ಸಾಹಿತ್ಯ ರಚನೆಗೆ ತೊಡರಾಗಲಿಲ್ಲವೆ?

**ರಾಜು ಮೇಷ್ಟ್ರು :** ನನ್ನ ಸಾಹಿತ್ಯ ರಚನೆ ಹಿಂದಕ್ಕೆ ಸರಿದದ್ದು ನಿಜ. ಆದರೆ ಸಾಹಿತ್ಯ ಪರಿಚಾರಿಕೆ ಮುಂದಾಯಿತು. ಪಾಠ ಪ್ರವಚನಕ್ಕೆ ತೊಂದರೆಯಾಗಲಿಲ್ಲ. ಮನಸ್ಸಿದ್ದರೆ ಮಾರ್ಗ. ಯಾರು ಬೇಕಾದರೂ ಮಾಡಬಹುದು. ಇದರಲ್ಲಿ ವಿಶೇಷತೆ ಏನಿಲ್ಲ. ನಮ್ಮ ಕನ್ನಡ ಸಂಘ ಕೇವಲ ಪುಸ್ತಕ ಪ್ರಕಟಣೆಯಲ್ಲಿ ಮಾತ್ರ ನಿರತವಾಗಿಲ್ಲ. ನಮ್ಮ ಕಾಲೇಜಿನ ವಿದ್ಯಾರ್ಥಿಗಳಿಗೆ ಅನೇಕ ಸಾಹಿತ್ಯ ಚಟುವಟಿಕೆಗಳನ್ನು ಏರ್ಪಡಿಸುತ್ತದೆ. ನಾಟಕ ಅಭಿರುಚಿ ಕೇಂದ್ರ, ವಿಶೇಷ ಉಪನ್ಯಾಸಗಳು, ಮುಖಾಮುಖಿ ಕಾರ್ಯಕ್ರಮಗಳು ಹೀಗೆ ಹತ್ತು ಹಲವು ಕಾರ್ಯಕ್ರಮಗಳು ಇರುತ್ತವೆ. ಜೊತೆಗೆ ಸುಸಜ್ಜಿತವಾದ ಕನ್ನಡ ಗ್ರಂಥ ಭಂಡಾರವಿದೆ.

**ಮಾನಸಿ :** ನಿಮಗೆ ಅನೇಕ ಪ್ರಶಸ್ತಿಗಳು ಬಂದಿವೆ. ಈ ಪ್ರಶಸ್ತಿಗಳು ಬಂದಾಗ ಉಂಟಾದ ಭಾವನೆಗಳು?

**ರಾಜು ಮೇಷ್ಟ್ರು :** ನಾನು ಪ್ರಶಸ್ತಿಗಳಿಗಾಗಿ ಕೆಲಸ ಮಾಡಿದವನಲ್ಲ. ಅದಕ್ಕಾಗಿ ತಲೆ ಕೆಡಿಸಿಕೊಂಡವನೂ ಅಲ್ಲ. ಪ್ರಶಸ್ತಿಗಳು ಬಂದಾಗ ಸಹಜವಾಗಿ ಸಂತೋಷಪಟ್ಟಿದ್ದೇನೆ.

**ಮಾನಸಿ :** ಪ್ರಶಸ್ತಿಗಳ ರಾಜಕೀಯ........?

**ರಾಜು ಮೇಷ್ಟ್ರು :** ನಿಜ. ಈಗೀಗ ಪ್ರಶಸ್ತಿಗಳಿಗಾಗಿ ದೊಡ್ಡ ರಾಜಕೀಯವೇ ನಡೆಯುತ್ತದೆ, ಸರ್ಕಾರವೇ ಕೆಲವು ಸಂದರ್ಭಗಳಲ್ಲಿ ಎಡವುತ್ತಿದೆ. ಶ್ರೇಷ್ಠ ಅಧ್ಯಾಪಕರ ಪ್ರಶಸ್ತಿಗೆ, ಅಧ್ಯಾಪಕರೇ ಅರ್ಜಿ ಹಾಕಿಕೊಳ್ಳುವುದು ಎಷ್ಟರ ಮಟ್ಟಿಗೆ ಸರಿ? ನಮಗೆ ನಾವೇ ಡಂಗೂರ ಹೊಡೆದು ಕೊಳ್ಳುವುದು ಸರಿಯಲ್ಲ. ಆತ್ಮಗೌರವದ ಪ್ರಶ್ನೆ. ಒಳ್ಳೆಯ ಅಧ್ಯಾಪಕನ ಯೋಗ್ಯತೆಯನ್ನು ನಿಜ ವಾಗಿಯೂ ನಿರ್ಧಾರ ಮಾಡುವವರು ವಿದ್ಯಾರ್ಥಿಗಳು, ಅದೇ ನಿಜವಾದ ಪ್ರಶಸ್ತಿ.

**ಮಾನಸಿ :** ಮೊನ್ನೆ ಬಂದ 'ಮಾನು ಪ್ರಶಸ್ತಿ'ಯ ಬಗ್ಗೆ ನಿಮ್ಮ ಅಭಿಪ್ರಾಯವೇನು?

**ರಾಜು ಮೇಷ್ಟ್ರು :** ಎರಡು ಕಾರಣಕ್ಕೆ ಸಂತೋಷವಾಯಿತು. ಒಂದು, ಮಾನು ಮತ್ತು ನಾನು ಒಳ್ಳೆಯ ಸ್ನೇಹಿತರಾಗಿದ್ದೆವು. ಮತ್ತೊಂದು ಈ ಪ್ರಶಸ್ತಿ, ಹಿಂದೆ ಒಳ್ಳೆಯವರಿಗೆ ಬಂದಿದೆ. ಆ ಸಾಲಿನಲ್ಲಿ ನನ್ನ ಹೆಸರೂ ಸೇರ್ಪಡೆಯಾಯಿತಲ್ಲ ಎಂಬುದು.

**ಮಾನಸಿ :** ನೀವು ಹಲವಾರು ವರ್ಷಗಳ ಹಿಂದೆ ಎಚ್.ಆರ್. ಕೃಷ್ಣಮೂರ್ತಿಯವರ 'ಪೈ' ಎಂಬ ವಿಜ್ಞಾನ ಪುಸ್ತಕವನ್ನು ಪ್ರಕಟಿಸಿದ್ದಿರಿ, ಅದಾದ ಮೇಲೆ ವಿಜ್ಞಾನಕ್ಕೆ ಸಂಬಂಧಪಟ್ಟ ಪುಸ್ತಕಗಳನ್ನು ಏಕೆ ಪ್ರಕಟಿಸಲಿಲ್ಲ?

**ರಾಜು ಮೇಷ್ಟ್ರು :** ಅದನ್ನು ಬಿಟ್ಟರೆ ಶ್ರೀಮತಿ ನೇಮಿಚಂದ್ರ ಅವರ 'ಮೇಡಂ ಕ್ಯೂರಿ'

ಪುಸ್ತಕವನ್ನು ಪ್ರಕಟಿಸಿದ್ದೇವೆ, ನಿಜ. ಹೆಚ್ಚಾಗಿ ವಿಜ್ಞಾನದ ಪುಸ್ತಕಗಳನ್ನು ಪ್ರಕಟಿಸಿಲ್ಲ. ಅದೇ ರೀತಿ ಮಕ್ಕಳ ಪುಸ್ತಕಗಳನ್ನೂ ಪ್ರಕಟಿಸಿಲ್ಲ. ಈಗೀಗ, ಅಂದರೆ Black Board ಪುಸ್ತಕ ಯೋಜನೆ ಬಂದ ಮೇಲೆ ವಿಜ್ಞಾನದ ಪುಸ್ತಕಗಳು ನಾಯಿಕೊಡೆಗಳಂತೆ ಪ್ರಕಟವಾಗುತ್ತಿವೆ. ಗುಣಮಟ್ಟ ಕಡಿಮೆಯಾಗಿದೆ. ಕನ್ನಡ ಸಂಘಕ್ಕೆ ಈ ಚಕ್ರವ್ಯೂಹದಲ್ಲಿ Involve ಆಗಲು ಇಷ್ಟವಾಗಲಿಲ್ಲ.

**ಮಾನಸಿ :** ಕೊನೆಯದಾಗಿ ಈಗಿನ ವಿದ್ಯಾರ್ಥಿಗಳಿಗೆ ನಿಮ್ಮ ಕಿವಿ ಮಾತೇನು?

**ರಾಜು ಮೇಷ್ಟ್ರು** (ಜೋರಾಗಿ ನಕ್ಕು) : ನಿಮಗೆ ಕಿವಿಮಾತು ಹೇಳುವುದಕ್ಕೆ ನಾನೇನು ಅವತಾರ ಪುರುಷನಲ್ಲ..... ಚೆನ್ನಾಗಿ ಓದಿ ಮುಂದೆ ಬನ್ನಿ. ನಾಲ್ಕು ಜನರಿಗೆ ಒಳ್ಳೆಯದಾಗುವ ಕೆಲಸವನ್ನು ಮಾಡಿ.... ಒಟ್ಟಿನಲ್ಲಿ ಒಳ್ಳೆಯ ನಾಗರೀಕರಾಗಿ....... ನಮಸ್ಕಾರ.

ರಾಜು ಮೇಷ್ಟ್ರು ಸರಳಜೀವಿ. ತಾವು ಮಾಡಿದ ಕೆಲಸಕ್ಕೆ ಪ್ರಚಾರವನ್ನು ಬಯಸುವುದಿಲ್ಲ. ಕಾಲೇಜಿನಲ್ಲಿ ಹೆಚ್ಚಾಗಿ ಜುಬ್ಬ ಹಾಕುವ ಮೇಷ್ಟ್ರು ರಾಜು ಅವರೆ. ಎಂದೂ ಕುಳಿತು ಪಾಠ ಮಾಡುವುದಿಲ್ಲ. ಬೋರ್ಡ್ ಅನ್ನು ಧಾರಾಳವಾಗಿ ಬಳಸುತ್ತಾರೆ. ತರಗತಿಗಳಲ್ಲಿ ತಮಾಷೆ ಮಾಡುವುದು ಅಪರೂಪ. ತಪ್ಪು ಮಾಡಿದವರನ್ನು ತರಾಟೆಗೆ ತೆಗೆದುಕೊಳ್ಳುವುದರಲ್ಲಿ ಹಿಂದೆ ಮುಂದೆ ನೋಡುವುದಿಲ್ಲ.... ಇವರ ಜೀವನ ಸಂಗಾತಿ ಶ್ರೀಮತಿ ಸರಸ್ವತಿಯವರು ಇವರ ಎಲ್ಲಾ ಚಟುವಟಿಕೆಗಳ ಹಿಂದೆ ಇದ್ದಾರೆ. ಮನೆಗೆ ಬರುವ ವಿದ್ಯಾರ್ಥಿಗಳನ್ನು, ಅತಿಥಿಗಳನ್ನು ಸದಾ ಪ್ರೀತಿಯಿಂದ ಸ್ವಾಗತಿಸುತ್ತಾರೆ. ಇವರಿಗೆ ಇಬ್ಬರು ಮಕ್ಕಳು. ಸುಗತ ಮತ್ತು ಋತ. ಸುಗತ ಈಗ 'ಡೆಕ್ಕನ್ ಹೆರಾಲ್ಡ್'ನಲ್ಲಿ ಉಪಸಂಪಾದಕರಾಗಿ ಕೆಲಸ ಮಾಡುತ್ತಿದ್ದಾರೆ. ಋತ ಚಿತ್ರಕಲೆಯಲ್ಲಿ ಪದವಿ ಪಡೆದು, ಬಹುರಾಷ್ಟ್ರೀಯ ಕಂಪನಿಯೊಂದರಲ್ಲಿ ಕಂಪ್ಯೂಟರ್ ಕಲಾವಿದರಾಗಿ ಕೆಲಸ ಮಾಡುತ್ತಿದ್ದಾರೆ.

ರಾಜು ಮೇಷ್ಟ್ರು ಮುಂದಿನ ಶೈಕ್ಷಣಿಕ ವರ್ಷದಿಂದ ತಮ್ಮ ವೃತ್ತಿಯಿಂದ ನಿವೃತ್ತರಾಗುತ್ತಿದ್ದಾರೆ. ಹಾಗೆಂದ ಕೂಡಲೇ ಎಲ್ಲರ ಮುಂದೆ ಬರುವ ಪ್ರಶ್ನೆ ಕನ್ನಡ ಸಂಘದ ಭವಿಷ್ಯ? ರಾಜು ಅವರು ಅದರ ಬಗ್ಗೆ ತಲೆ ಕೆಡಿಸಿಕೊಂಡಿಲ್ಲ. 'ನಾನು ಇರುವವರೆಗೂ ನನ್ನ ಕೈಲಾದದ್ದನ್ನು ಮಾಡಿದೆ. ಮುಂದೆ ಬರುವವರು ಮುಂದುವರಿಸಲಿ, ಅವರು ಇನ್ನೂ ಚೆನ್ನಾಗಿಯೇ ಮುಂದುವರಿಸಬಹುದು. ಎಲ್ಲ ಕಾಲಕ್ಕೂ ನಾನೇ ಇರಲು ಸಾಧ್ಯವೇ? ಕಾಲ ಧರ್ಮವನ್ನು ಮೀರಲು ಯಾರಿಂದಲೂ ಸಾಧ್ಯವಿಲ್ಲ' ಎನ್ನುತ್ತಾರೆ. ಅವರು ಏನೇ ಅಂದರೂ ನಷ್ಟ ಕಾಲೇಜಿಗೆ, ವಿದ್ಯಾರ್ಥಿಗಳಿಗೆ ಮತ್ತು ಕನ್ನಡ ಸಂಘಕ್ಕೆ.

*(ಕೃಪೆ : ಕ್ರೈಸ್ಟ್ ಕಾಲೇಜು ಪ್ರತಿಕೋದ್ಯಮ ವಿಭಾಗ)*



# ನೈತಿಕ ಮೌಲ್ಯಗಳ ಅವನತಿಯೇ ಇಂದಿನ ದುರಂತ

● ಡಿ.ವಿ. ರಾಜಶೇಖರ

ಶ್ರೀನಿವಾಸರಾಜು ಅವರು ನಮ್ಮ ಕಾಲದ ಅಪರೂಪದ ವ್ಯಕ್ತಿ. ಇಡೀ ಸಮಾಜ ನೈತಿಕ ಅದಃಪತನದತ್ತ ಹೊರಳುತ್ತಿದ್ದ ಕಾಲಘಟ್ಟದಲ್ಲಿ ಬದುಕಿನಲ್ಲಿ ನೈತಿಕ ಮೌಲ್ಯಗಳ ಅಗತ್ಯವನ್ನು ಎತ್ತಿ ಹೇಳುವಂತೆ ಬದುಕಿದವರು ಅವರು. ಪುಸ್ತಕ ಪ್ರೀತಿ ಅವರ ಬಹುಮುಖ್ಯ ಅಭಿರುಚಿ. ಹೊಸ ಸಾಹಿತ್ಯ, ವಿಚಾರಗಳಿಗೆ ವೇದಿಕೆ ಕಲ್ಪಿಸಲು ಅವರು ಕೆಲಸ ಮಾಡುತ್ತಿದ್ದ ಕ್ರೈಸ್ಟ್ ಕಾಲೇಜಿನಲ್ಲಿ ಕನ್ನಡ ಸಂಘವನ್ನು ಕಟ್ಟಿದರು. ಹೊಸ ಸೃಜನಾತ್ಮಕ ಪ್ರತಿಭೆಗಳನ್ನು ಗುರುತಿಸಿ ಅವರ ಕೃತಿಗಳನ್ನು ಪ್ರಕಟಿಸಿದರು. ಇಂಥ ಸಾಹಿತ್ಯ ಪರಿಚಾರಿಕೆಯ ಕೆಲಸ ಮಾಡಿದವರು ಕನ್ನಡ ನಾಡಿನಲ್ಲಿ ವಿರಳ. ಸುಮಾರು ನಾಲ್ಕು ದಶಕಗಳಿಂದಲೂ ನಾನು ಅವರನ್ನು ಬಲ್ಲೆ. ಅವರ ಅಂತರಂಗದ ಒಳನೋಟ ಈ ಸಂದರ್ಶನ.

**ಪ್ರಶ್ನೆ : ನಿಮಗೆ ಸಾಹಿತ್ಯದಲ್ಲಿ ಆಸಕ್ತಿ ಹುಟ್ಟಿದ್ದು ಹೇಗೆ?**

**ಉತ್ತರ :** ನಮ್ಮ ಊರು ಬೆಂಗಳೂರು ಬಳಿಯ ರಾಮೋಹಳ್ಳಿ. ದೊಡ್ಡ ಆಲದ ಮರ ಇರುವ ಹಳ್ಳಿ. ತಂದೆ ಆಗಿನ ಕಾಲದ ಎಸ್‌ಎಸ್.ಎಲ್.ಸಿ. ತಾಯಿ ಕೂಡ ಆಗಿನ ಕಾಲದ ಎಸ್.ಎಸ್.ಎಲ್.ಸಿ. ನನ್ನ ಹಿರಿಯರು ಮೂಲಭೂತವಾಗಿ ರೈತರು. ನನ್ನ ತಂದೆ ಹೆಡ್‌ಕಾನ್‌ಸ್ಟೇಬಲ್ ಆಗಿ ಪೊಲೀಸು ಇಲಾಖೆಯಲ್ಲಿ ಕೆಲಸದಲ್ಲಿದ್ದರು. ನಾನು ಚೆನ್ನಾಗಿ ಓದಬೇಕು ಎಂದು ಬಯಸಿದ್ದರು. ಚಿಕ್ಕ ಬಳ್ಳಾಪುರದಲ್ಲಿದ್ದ ನನ್ನ ದೊಡ್ಡಮ್ಮನಿಗೆ ಮಕ್ಕಳಿರಲಿಲ್ಲ. ನನ್ನನ್ನೇ ಮಗನೆಂದು ತಿಳಿದಿದ್ದರು. ಹಿಗಾಗಿ ಎಸ್.ಎಸ್.ಎಲ್.ಸಿ. ವರೆಗೆ ಚಿಕ್ಕಬಳ್ಳಾಪುರದ ದೊಡ್ಡಮ್ಮನ ಮನೆಯಲ್ಲೇ ಓದಿದೆ. ನಂತರ ಮಾತ್ರ ಬೆಂಗಳೂರಿಗೆ ಬಂದೆ. ನಮ್ಮ ತಂದೆ ಪೊಲೀಸು ಇಲಾಖೆಯಲ್ಲಿದ್ದರೂ ಅದರ ಪ್ರಭಾವ ಮನೆಯ ಮೇಲೆ ಆಗಲಿಲ್ಲ. ಪಿಯುಸಿ ಅಂದಿನ



ಬಸವ ಇಂಟರ್ ಮೀಡಿಯೇಟ್ ಕಾಲೇಜು (ಈಗಿನ ರೇಣುಕಾಚಾರ್ಯ ಕಾಲೇಜು) ಪಿಯುಸಿಯಲ್ಲಿ ಒಳ್ಳೆಯ ಅಂಕಗಳು ಬಂದದ್ದರಿಂದ ದಾವಣಗೆರೆ ಎಂಜಿನಿಯರಿಂಗ್ ಕಾಲೇಜಿನಲ್ಲಿ ಸೀಟು ಸಿಕ್ಕಿತ್ತು. ಆದರೆ ನಾನು ಹೋಗಲಿಲ್ಲ. ಸೇಂಟ್ ಜೋಸೆಫ್ ಕಾಲೇಜಿನಲ್ಲಿ ಬಿಎಸ್‌ಸಿಗೆ ಸೇರಿದೆ. ಬಿಎಸ್‌ಸಿಯಲ್ಲಿ ವಿಜ್ಞಾನ ಅಷ್ಟಾಗಿ ಇಷ್ಟವಾಗಲಿಲ್ಲ. ಆ ಕಾಲದಲ್ಲಿ ಬಿಎಸ್‌ಸಿ ಆದವರಿಗೆ ಎಂಎಯಲ್ಲಿ ಸೀಟು ಕೊಡುತ್ತಿರಲಿಲ್ಲ. ಹೀಗಾಗಿ ಮತ್ತೆ ಬಿಎಗೆ ಸೇರಿದೆ. ಬಿಎ ಮುಗಿಸಿ ನಂತರ ಕನ್ನಡ ಎಂಎ ಸೇರಿದೆ. ಸರ್ಕಾರಿ ಆರ್ಟ್ಸ್ ಕಾಲೇಜಿನಲ್ಲಿ ಬಿಎ ಮಾಡುವಾಗ ಎಂ.ಎ. ಸೀತಾರಾಮಯ್ಯ ಎಂ.ಎಚ್. ಕೃಷ್ಣಯ್ಯ ಅವರು ಸಾಹಿತ್ಯದ ಅಧ್ಯಾಪಕರಾಗಿದ್ದರು. ಸಾಹಿತ್ಯದ ಆಸಕ್ತಿ ಹೆಚ್ಚಿತು. ಆ ದಿನಗಳಲ್ಲಿ 'ಪ್ರಜಾವಾಣಿ' ಉಲ್ಲಾಳ್ ಷೀಲ್ಡ್ ನಾಟಕೋತ್ಸವದ ವಿಮರ್ಶಾಸ್ಪರ್ಧೆ ನಡೆಸುತ್ತಿತ್ತು. ಒಂದು ವರ್ಷ ನಾಟಕ ವಿಮರ್ಶೆ ಬಹುಮಾನ ಬಂತು. ಇದು ನನ್ನ ಸಾಹಿತ್ಯಾಸಕ್ತಿಯನ್ನು ಹೆಚ್ಚು ಮಾಡಿತು. ಕನ್ನಡ ಎಂಎಗೆ ಸೇರಿದ ಮೇಲೆ ಹಳ್ಳಿಯ ಸ್ನೇಹಿತರು ಸಿಕ್ಕರು. ರಾಜರತ್ನಂ, ರಂ.ಶ್ರೀ. ಮುಗಳಿ ಅವರ ಪಾಠಪ್ರವಚನಗಳು ಬಹಳ ಹಿಡಿಸಿದವು. ಸಾಹಿತ್ಯದ ಒಲವು ಹೆಚ್ಚುತ್ತಾ ಹೋಯಿತು. ಒಂದು ಒಳ್ಳೆಯ ಸಾಹಿತ್ಯಕೃತಿ ಓದುವುದು, ಚರ್ಚಿಸುವುದೇ ಅಂದು ವಿದ್ಯಾರ್ಥಿಗಳ ಆಸಕ್ತಿಯ ವಿಷಯವಾಗಿತ್ತು.

**ಪ್ರ : ಪುಸ್ತಕಗಳನ್ನು ಪ್ರಕಟಿಸಿರುವ ಯೋಚನೆ ಬಂದದ್ದು ಯಾವಾಗ? ಮತ್ತು ಏಕೆ?**

ಉ : ರಾಜರತ್ನಂ ಅವರ ಸಾಹಿತ್ಯ ಪರಿಚಾರಿಕೆ ಬಹಳ ಇಷ್ಟವಾಗಿತ್ತು. ಪುಸ್ತಕ ಪ್ರಕಟಣೆ ಆರಂಭಿಸಲು ಅವರೇ ಸ್ಫೂರ್ತಿ. ಕ್ರೈಸ್ಟ್ ಕಾಲೇಜಿನಲ್ಲಿ ಅಧ್ಯಾಪಕನಾಗಿ ಸೇರಿದ ಮೇಲೆ ಒಂದು ಪುಸ್ತಕ ಪ್ರಕಟಣೆಯ ಪ್ರಭಾವವನ್ನು ಅಂದಿನ ಪ್ರಿನ್ಸಿಪಾಲ್ ಮಾಣಿಗೈಲ್ಸ್ ಮುಂದೆ ಇಟ್ಟೆ. ಅವರು ಹಣ ಇಲ್ಲವೆಂದರು. ಆದರೆ ಕಾಲೇಜಿಗೆ ಯಾವುದೇ ಕೆಟ್ಟ ಹೆಸರು ಬರದಂತೆ ಪ್ರಕಾಶನ ಆರಂಭಿಸಲು ಅಡ್ಡಿ ಇಲ್ಲವೆಂದರು. ನನ್ನ ಸಹಪಾಠಿ ಕುಮುದಿನಿ ಅಂತ ಒಬ್ಬರಿದ್ದರು. (ಈಗ ಕೃಷಿ ಕಾಲೇಜಿನಲ್ಲಿ ಪ್ರಾಧ್ಯಾಪಕರು) ಅವರ ತಮ್ಮ ಲಕ್ಷ್ಮಣಗೌಡ ನಮ್ಮ ಕಾಲೇಜಿನಲ್ಲಿಯೇ ಓದುತ್ತಿದ್ದ. ಒಂದು ದಿನ ಆಕಸ್ಮಿಕವಾಗಿ ಅಪಘಾತವೊಂದರಲ್ಲಿ ತೀರಿಹೋದ. ಅವನ ಹೆಸರಿನಲ್ಲಿ ಕುಮುದಿನಿ ಕಾಲೇಜಿಗೆ ಮೂರು ಸಾವಿರ ರೂಪಾಯಿ ದತ್ತಿ ಹಣ ನೀಡಿದರು. ಪುಸ್ತಕ ಪ್ರಕಟಣೆ ಆರಂಭಿಸಲು ಸ್ವಲ್ಪ ಹಣ ಕೊಡುವಂತೆ ನಾನೂ ಕುಮುದಿನಿ ಅವರನ್ನು ಕೇಳಿದೆ. ಅವರು ಐನೂರು ರೂಪಾಯಿ ಕೊಟ್ಟರು. ಈ ಹಣದಲ್ಲಿ ಲಕ್ಷ್ಮಣ ಗೌಡ ಸ್ಮಾರಕ ಗ್ರಂಥಮಾಲೆ ಆರಂಭಿಸಿದೆ. ಕೂಪನ್‌ಗಳನ್ನು ಮಾರಿ ಹಣಸಂಗ್ರಹಿಸಲು ತೀರ್ಮಾನಿಸಿದೆವು. ಆರು ರೂಪಾಯಿಗಳ ಒಂದು ಕೂಪನ್ ಕೊಂಡವರಿಗೆ ಪುಸ್ತಕ ಉಚಿತ ಎಂದು ಪ್ರಕಟಿಸಲಾಯಿತು. ಮೊದಲೇ ೨೦೦ ಕೂಪನ್‌ಗಳು ಮಾರಾಟವಾದವು. ಹಣವೇನೋ ಸಂಗ್ರಹವಾಯಿತು. ಆದರೆ ಪುಸ್ತಕ ಪ್ರಕಟಣೆ ಆರಂಭಿಸಲು ಯಾವ ಲೇಖಕರೂ ಹಸ್ತಪ್ರತಿ ನೀಡಲು ಮುಂದೆ ಬರಲಿಲ್ಲ. ಮೊದಲ ಹಸ್ತಪ್ರತಿ ಕೊಟ್ಟವರು ಕ.ವೆಂ. ರಾಜಗೋಪಾಲ್ ಅವರು. ಹೀಗಾಗಿ ಕ್ರೈಸ್ಟ್ ಕಾಲೇಜಿನ ಮೊದಲ ಪ್ರಕಟಣೆ ಕ.ವೆಂ. ರಾಜಗೋಪಾಲ್ ಅವರ ಕವಿತೆಗಳ ಸಂಗ್ರಹ 'ನದಿಯ ಮೇಲಿನ ಗಾಳಿ' ಪ್ರಕಟವಾಯಿತು. ದ.ರಾ ಬೇಂದ್ರೆ ಅವರು ೧೯೮೧ರಲ್ಲಿ ತೀರಿ ಕೊಂಡರು. ಅವರ ಸ್ಮರಣಾರ್ಥ 'ಬೇಂದ್ರೆ ನಮನ' ಕಾರ್ಯಕ್ರಮ ಆರಂಭವಾಯಿತು. ಬೇಂದ್ರೆ ಅವರ ಭಾವ ಚಿತ್ರವಿರುವ ಕಾರ್ಡುಗಳನ್ನು ಮುದ್ರಿಸಿ ಮಾರಾಟ ಮಾಡಲಾಯಿತು. ಅದರಿಂದ

ಬಂದ ಹಣದಿಂದ ಬೆಂಗಳೂರಿನ ಬೇರೆ ಬೇರೆ ಕಡೆ ಉಪನ್ಯಾಸಗಳನ್ನು ನಡೆಸಲಾಯಿತು. ಇದೇ ರೀತಿ ಕುವೆಂಪು ನಮನ, ಕಾರಂತ ನಮನ, ಅನಕೃ ಸ್ಮಾರಕ ವಿದ್ಯಾರ್ಥಿ ವಿಕಾಸ ಮಾಲೆ ಎಂಬ ಹೆಸರಿನಲ್ಲಿ ಪ್ರಬಂಧಸ್ಪರ್ಧೆ, ಅಂತರ ಕಾಲೇಜು ದ.ರಾ. ಬೇಂದ್ರೆ ಕವಿತಾ ಸ್ಪರ್ಧೆ ಆರಂಭಿಸಲಾಯಿತು. ಹೊಸ ಪ್ರತಿಭೆಗಳಿಗೆ ಈ ಕಾರ್ಯಕ್ರಮಗಳು ನೆರವಾದವು.

**ಪ್ರ : ಪುಸ್ತಕ ಪ್ರಕಟಣೆಯಿಂದ ನಿಮ್ಮ ಸೃಜನಾತ್ಮಕ ಬರವಣಿಗೆಗೆ ಅಡ್ಡಿಯಾಯಿತಲ್ಲವೆ?**

**ಉ :** ಪುಸ್ತಕ ಪ್ರಕಟಣೆಯಲ್ಲಿ ತೊಡಗಿದ್ದರಿಂದ ಬರವಣಿಗೆಗೆ ಅಷ್ಟು ಸಮಯ ಸಿಗಲಿಲ್ಲ ಎನ್ನುವುದು ನಿಜ. ಆದರೆ ಅದಕ್ಕಾಗಿ ನನಗೆ ವಿಷಾದವೆನಿಸುವುದಿಲ್ಲ. ಹಾಗೆ ನೋಡಿದರೆ ಪುಸ್ತಕ ಪ್ರಕಟಣೆಯಿಂದಲೂ ನನಗೆ ಸಮಾಧಾನ ಸಿಕ್ಕಿದೆ.

**ಪ್ರ : ಪುಸ್ತಕ ಪ್ರಕಟಣೆ ಕಷ್ಟದಾಯಕವಾದುದು. ಅದನ್ನು ನೀವು ಹೇಗೆ ನಿಬಾಯಿಸಿದಿರಿ?**

**ಉ :** ಪುಸ್ತಕ ಪ್ರಕಟಣೆ ಆದಾಯ ತರುವಂಥದ್ದಲ್ಲ. ಹಲವು ಬಾರಿ ನನ್ನ ಪತ್ನಿಯ ಒಡವೆಗಳನ್ನು ಬ್ಯಾಂಕಿನಲ್ಲಿ ಒತ್ತೆಯಿಟ್ಟು ಹಣಪಡೆದು ಮುದ್ರಕರಿಗೆ ನೀಡಿ ಪುಸ್ತಕ ಬಿಡುಗಡೆ ಮಾಡಿದ್ದಿದೆ. ಒಮ್ಮೆ ಸ್ಕೂಟರ್ ಲೈಸನ್ಸ್ ಒತ್ತೆ ಇಟ್ಟು ಹಣ ತಂದದ್ದೂ ಇದೆ. ನನ್ನ ಪತ್ನಿ ಸರಸ್ವತಿಗೆ ನನ್ನ ಈ ವ್ಯವಹಾರಗಳು ಆಘಾತ ಮಾಡಿರಬಹುದು. ಇದು ಮೊದಮೊದಲು ಅಷ್ಟೆ. ಕ್ರಮೇಣ ಅವರು ನನ್ನ ಪುಸ್ತಕ ಪ್ರೀತಿಯನ್ನು ಅರ್ಥಮಾಡಿಕೊಂಡರು. ಅವರಿಗೂ ಸಾಹಿತ್ಯಾಸಕ್ತಿ ಬೆಳೆದಂತೆಲ್ಲಾ ಅಸಮಾಧಾನ ಕರಗಿಹೋಯಿತು. ಸಂಸಾರದ ಎಲ್ಲ ಹೊರೆಯನ್ನು ಅವರೇ ಹೊತ್ತುಕೊಂಡದ್ದರಿಂದ ಪುಸ್ತಕ ಪ್ರಕಟಣೆ ಕಾಯಕದಲ್ಲಿ ನಾನು ಹೆಚ್ಚು ತೊಡಗಿಕೊಳ್ಳಲು ಸಾಧ್ಯವಾಯಿತು. ಪುಸ್ತಕ ಪ್ರಕಟಣೆಯ ಯಶಸ್ಸಿನಲ್ಲಿ ಅವರ ಪಾಲು ಸಾಕಷ್ಟಿದೆ.

**ಪ್ರ : ಎಪ್ಪತ್ತರ ದಶಕದಲ್ಲಿ ಸಾಹಿತ್ಯಕ್ಷೇತ್ರದಲ್ಲಿ ಗುಂಪುಗಾರಿಕೆ ವಿಪರೀತ ಇತ್ತು. ನೀವು ಸಾಹಿತಿಗಳನ್ನು ಹತ್ತಿರದಿಂದ ನೋಡಿದ್ದೀರಿ. ನಿಮ್ಮ ಅನಿಸಿಕೆ ಏನು?**

**ಉ :** ಗುಂಪುಗಾರಿಕೆ ಎಲ್ಲ ಕಾಲದಲ್ಲಿಯೂ ಇದ್ದದ್ದೆ. ಈ ಗುಂಪುಗಾರಿಕೆಗೆ ಮೂಲ ಕಾರಣ ಸ್ವಾರ್ಥ. ತಮ್ಮ ಸಾಹಿತ್ಯಕ್ಕೆ ಹೆಚ್ಚು ಪ್ರಚಾರ ಸಿಗಬೇಕು ಮತ್ತು ಆ ಮೂಲಕ ವರ್ಚಸ್ಸು ಹೆಚ್ಚಿಸಿಕೊಳ್ಳಬೇಕೆಂಬ ಆಸೆ ಎಪ್ಪತ್ತರ ದಶಕದಲ್ಲಿನ ಸಾಹಿತಿಗಳಲ್ಲಿ ಹೆಚ್ಚು ಇತ್ತು. ನಿಜ. ಈ ಪೈಪೋಟಿಯಲ್ಲಿ ಕೆಲವು ಸಾಹಿತಿಗಳಿಗೆ ತಮ್ಮನ್ನು ನಿರ್ಲಕ್ಷಿಸಲಾಗುತ್ತಿದೆ ಎಂಬ ಭಾವನೆಯೂ ಇತ್ತು. ಜಾತಿಯ ಭಾವನೆಯಿಂದ ಗುಂಪುಗಾರಿಕೆ ಗಟ್ಟಿಗೊಂಡಿತು.

**ಪ್ರ : ಸಾಹಿತ್ಯ ಕ್ಷೇತ್ರದಲ್ಲಿ ಹಿಂದೆ ಮಹಿಳೆಯ ಸಂಖ್ಯೆ ಕಡಿಮೆ ಇರಲು ಕಾರಣವೇನಿರಬಹುದು?**

**ಉ :** ಸಾಹಿತ್ಯ ಕ್ಷೇತ್ರ ಬಹಳ ಕಾಲ ಪುರುಷ ಪ್ರಧಾನವಾಗಿಯೇ ಇತ್ತು. ಅಕ್ಕಮಹಾದೇವಿ ಬಿಟ್ಟರೆ ಹಿಂದಿನ ಸಾಹಿತ್ಯದಲ್ಲಿ ಮಹತ್ವದ್ದನ್ನು ಸಾಧಿಸಿದವರು ಯಾರೂ ಸಿಗುವುದಿಲ್ಲ. ಬಹುಶಃ ಸಾಮಾಜಿಕ ವ್ಯವಸ್ಥೆಯೇ ಇದಕ್ಕೆ ಕಾರಣವಿರಬೇಕು. ಹೊಸಗನ್ನಡ, ನವ್ಯ ಸಾಹಿತ್ಯದ ಕಾಲದಲ್ಲಿ ಮಹಿಳೆಯರು ಹೆಚ್ಚುಹೆಚ್ಚು ಸಂಖ್ಯೆಯಲ್ಲಿ ಸಾಹಿತ್ಯ ಚಟುವಟಿಕೆಗಳಲ್ಲಿ ಸೃಜನಶೀಲರಾಗಿ ಕೆಲಸ ಮಾಡಿದ್ದಾರೆ. ನವ್ಯಕಾವ್ಯ ಚಳುವಳಿಯ ನಂತರವಂತೂ ಹೆಚ್ಚು ಮಹಿಳೆಯರು ಬರವಣಿಗೆಯಲ್ಲಿ ತೊಡಗಿದ್ದಾರೆ.

**ಪ್ರ : ಕವಿತೆಯಂತೆಯೇ ನಾಟಕ ಕೃತಿ ರಚನೆಯಲ್ಲಿಯೂ ಹೆಚ್ಚು ಆಸಕ್ತಿ ನಿಮ್ಮಲ್ಲಿ ಕಂಡುಬಂದಿದೆ. ನಾಟಕ ಬರೆಯುವುದಕ್ಕೆ ಸ್ಫೂರ್ತಿ ಯಾವುದು?**

ಉ : ನಾಟಕದ ಬಗ್ಗೆ ನನಗೆ ಮೊದಲಿನಿಂದಲೂ ಹುಚ್ಚು ಇತ್ತು. ಹೈಸ್ಕೂಲ್‌ನಲ್ಲಿದ್ದಾಗಲೇ ನಾಟಕಗಳಲ್ಲಿ ಅಭಿನಯಿಸುತ್ತಿದ್ದೆ. 'ಕೇಳಿಕೆ', 'ಹರಿಕತೆ'ಗಳು ನನ್ನನ್ನು ಆಕರ್ಷಿಸಿವೆ.

**ಪ್ರ : ಮೂಕ ನಾಟಕಗಳನ್ನು ಬರೆದಿದ್ದು ಏಕೆ?**

ಉ : ನನ್ನ ಕಾಲೇಜು ದಿನಗಳಲ್ಲಿ ನನ್ನನ್ನು ಇಂಗ್ಲಿಷ್ ಭಾಷೆ ಸಾಕಷ್ಟು ಕಾಡಿದೆ. ಇಂಗ್ಲಿಷ್ ಭಾಷೆ ಸರಿಯಾಗಿ ಬರುತ್ತಿರಲಿಲ್ಲ. ಈ ಸಮಸ್ಯೆಯನ್ನು ನಿವಾರಿಸಿಕೊಳ್ಳಲು ಭಾಷೆಯನ್ನೇ ಬಿಟ್ಟರೆ ಹೇಗೆ ಎಂಬ ಆಲೋಚನೆ ಬಂತು. ಈ ಸಂದರ್ಭದಲ್ಲಿಯೇ ತುರ್ತುಪರಿಸ್ಥಿತಿ ಬಂತು. ತುರ್ತುಪರಿಸ್ಥಿತಿಯಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಕಡಿವಾಣ ಹಾಕಲಾಗಿತ್ತು. ಮಾತನಾಡದೆ ತುರ್ತುಪರಿಸ್ಥಿತಿಯನ್ನು ಸೃಜನಶೀಲವಾಗಿ ಪ್ರತಿಭಟಿಸುವುದು ಹೇಗೆ ಎಂಬ ಪ್ರಶ್ನೆ ನನ್ನಲ್ಲಿ ಉದ್ಭವವಾಯಿತು. ಮೂಕನಾಟಕದ ಕಲ್ಪನೆ ಉದ್ಭವವಾದದ್ದು ಇಲ್ಲಿಯೆ. ತುರ್ತುಪರಿಸ್ಥಿತಿಯನ್ನು ವಿರೋಧಿಸುವ ಒಂದು ಮಾರ್ಗವಾಗಿ ಮೂಕ ನಾಟಕ ಬರೆದೆ. ಜೊತೆಗೆ ಇದು ವಿದೇಶೀ ಇಂಗ್ಲಿಷ್ ಭಾಷೆಯನ್ನು ತಿರಸ್ಕರಿಸುವ ಮಾರ್ಗವೂ ಆಗಿತ್ತು.

**ಪ್ರ : ಇಂದು ನಾಟಕ ಮಾಧ್ಯಮ ಜೀವಂತವಾಗಿದೆಯೆ?**

ಉ : ಎಪ್ಪತ್ತರ ದಶಕದಲ್ಲಿ ಕಂಡಷ್ಟು ವ್ಯಾಪಕವಾಗಿ ರಂಗಭೂಮಿ ಚಟುವಟಿಕೆ ಇಂದು ಇಲ್ಲ ನಿಜ. ಆದರೆ ಇದು ರಂಗಭೂಮಿ ನಗರಗಳ ಆಚೆ ಹಳ್ಳಿಗಳಿಗೆ ತಲುಪಿದೆ. ಇಂದು ನಗರಗಳಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಪ್ರಯಾಣ ಮಾಡುವುದೇ ಕಷ್ಟ. ಜೊತೆಗೆ ನಾಟಕ ಆಡಲು ತಗಲುವ ವೆಚ್ಚ ದುಬಾರಿಯಾಗಿದೆ. ಹೀಗೆ ನಾನಾ ಕಾರಣಗಳಿಂದ ನಗರಗಳಲ್ಲಿ ರಂಗಭೂಮಿ ಚಟುವಟಿಕೆ ಕಡಿಮೆಯಾಗಿದೆ. ದೆಹಲಿ ರಾಷ್ಟ್ರೀಯ ನಾಟಕ ಶಾಲೆಯಿಂದ ತರಬೇತಿ ಪಡೆದು ಬಂದವರು ಈಗ ರಾಜ್ಯದಲ್ಲಿ ಸಾಕಷ್ಟು ಮಂದಿ ಇದ್ದಾರೆ. ಇವರೆಲ್ಲಾ ರಾಜ್ಯದ ಬೇರೆಬೇರೆ ಭಾಗಗಳಲ್ಲಿ ರಂಗಭೂಮಿಯನ್ನು ಕಟ್ಟಿ ಬೆಳೆಸುತ್ತಿದ್ದಾರೆ. ಇದು ಒಳ್ಳೆಯ ಬೆಳವಣಿಗೆ.

**ಪ್ರ : ಆಧುನಿಕ ಜಗತ್ತಿನಲ್ಲಿ ಕಲೆಗೆ ಹಿಂದಿನಷ್ಟು ಮಹತ್ವ ಸಿಗುತ್ತಿಲ್ಲ. ಕಲಾವಿದರು ಹಿಂದೆ ಸಾಕ್ಷಿ ಪ್ರಜ್ಞೆಯ ಸಂಕೇತವಾಗಿದ್ದರು. ಆದರೆ ಈಗ ಹಾಗೆ ಇಲ್ಲ. ಈ ಬದಲಾವಣೆಯ ಮಹತ್ವ ಏನು?**

ಉ : ಕಲಾವಿದರು ಹಿಂದೆ ಇಡೀ ಸಮಾಜದ ಸಾಕ್ಷಿ ಪ್ರಜ್ಞೆಯಾಗಿದ್ದುದು ನಿಜ. ಆದರೆ ಈಗ ಪ್ರಪಂಚ ಬದಲಾಗಿದೆ. ಸಾಕ್ಷಿ ಪ್ರಜ್ಞೆ ಇರುವವರು ಇಲ್ಲವೇ ಇಲ್ಲ ಎಂದಲ್ಲ, ಇದ್ದಾರೆ. ಆದರೆ ಅವರಿಗೆ ಸಮಕಾಲೀನ ಸಮಾಜದಲ್ಲಿ ಮಹತ್ವ ಇಲ್ಲ. ಸಮಾಜದಲ್ಲಿ ನೈತಿಕ ಪ್ರಜ್ಞೆಯೇ ನಾಶವಾಗುತ್ತಿದೆ. ಹಣಕ್ಕೆ ಹೆಚ್ಚು ಮಹತ್ವ ಬಂದಿದೆ. ಹಣವುಳ್ಳವನೇ ಈಗ ವಚನ ಸ್ತ್ರೀ ವ್ಯಕ್ತಿಯಾಗಿದ್ದಾನೆ. ಅವನಿಗೆ ಹಣ ಹೇಗೆ ಬಂತು ಎಂದು ಯಾರೂ ನೋಡುವುದಿಲ್ಲ. ಹಣ ಇಂದಿನ ಮಕ್ಕಳಿಗೆ ತಂದೆ ತಾಯಿಯರೂ ಆದರ್ಶರಾಗಿ ಉಳಿದಿಲ್ಲ. ಇದರಲ್ಲಿ ಯುವ ಜನರದೇನೂ ತಪ್ಪಿಲ್ಲ. ನಾವು ಅಂಥ ಅಮಾನವೀಯ ಆದರ್ಶಗಳಿಲ್ಲದ ಸಮಾಜವನ್ನು

ಕಟ್ಟಿದ್ದೇವೆ. ಜಾಗತೀಕರಣ ನಮ್ಮ ಸಮಾಜದ ಮೇಲೆ ಕೆಟ್ಟ ಪರಿಣಾಮ ಬೀರಿದೆ. ಇದರಿಂದ ದುಃಖ, ನೋವು ಜಾಸ್ತಿಯಾಗಿದೆ. ಜಾಗತೀಕರಣದ ಪ್ರಕ್ರಿಯೆಗೆ ಭಾರತ ಒಳಗಾಗುವುದನ್ನು ತಪ್ಪಿಸಲು ಸಾಧ್ಯವಿಲ್ಲ. ಆದರೆ ಅದನ್ನು ಅರಗಿಸಿಕೊಂಡು ನಮ್ಮತನವನ್ನು ಉಳಿಸಿಕೊಳ್ಳುವುದು ಹೇಗೆ ಎಂಬುದನ್ನು ಯೋಚಿಸಬೇಕು.

**ಪ್ರ : ಒಂದನೆಯ ತರಗತಿಯಿಂದ ಇಂಗ್ಲಿಷ್ ಕಲಿಸುವ ಸರ್ಕಾರದ ನಿರ್ಧಾರದಿಂದ ಏನಾದರು ಪ್ರಯೋಜನವಾದೀತೆ?**

ಉ : ಒಂದನೆ ತರಗತಿಯಿಂದ ಇಂಗ್ಲಿಷ್ ಕಲಿಸುವ ಬಗ್ಗೆ ರಾಜಕಾರಣಿಗಳಾಗಲಿ ಸಾಹಿತಿಗಳಾಗಲಿ ನಿರ್ಧಾರ ತೆಗೆದುಕೊಳ್ಳಲು ಸಾಧ್ಯವಿಲ್ಲ. ಅದನ್ನು ಯಾವುದೇ ಒಂದು ಸಮುದಾಯದ ಒತ್ತಡದಿಂದ ತೆಗೆದುಕೊಳ್ಳುವಂಥ ನಿರ್ಧಾರ ಅಲ್ಲ. ಅದನ್ನು ಶಿಕ್ಷಣತಜ್ಞರು ನಿರ್ಧರಿಸಬೇಕು. ಅಷ್ಟಕ್ಕೂ ಇಂಗ್ಲಿಷ್ ಕಲಿತ ತತ್‌ಕ್ಷಣ ಎಲ್ಲರಿಗೂ ಕೆಲಸ ಸಿಕ್ಕುವುದಿಲ್ಲ. ಕನ್ನಡದಲ್ಲಿ ಶಿಕ್ಷಣ ಪಡೆದರೆ ಉದ್ಯೋಗ ಸಿಗುತ್ತದೆ ಎಂಬುದು ಖಾತ್ರಿಯಾದರೆ ಆಗ ಎಲ್ಲರೂ ಕನ್ನಡ ಕಲಿಯುತ್ತಾರೆ. ಅಂಥ ಕನ್ನಡ ವಾತಾವರಣವನ್ನು ಸರ್ಕಾರ, ಜನರು ಸೃಷ್ಟಿಸಬೇಕು. ಕನ್ನಡಿಗರೇ ಕನ್ನಡದಲ್ಲಿ ಮಾತಾಡದಿದ್ದರೆ ಮತ್ತಾರು ಕನ್ನಡದಲ್ಲಿ ಮಾತನಾಡಿಯಾರು?



# ಎಲೆಮರೆಯ 'ಮರ' ಚಿ.ಶ್ರೀನಿವಾಸರಾಜು

● ಡಿ.ವಿ. ಪ್ರಹ್ಲಾದ್

"ನಾನು ಹುಟ್ಟಿದ್ದು ಚಿಕ್ಕಬಳ್ಳಾಪುರದಲ್ಲಿ. ಇವತ್ತಿಗೂ ಅಲ್ಲಿನ ಪರಿಸರ ನನಗಿಷ್ಟ. ನಮ್ಮ ತಾಯಿ ಸಾವಿತ್ರಮ್ಮ, ತಂದೆ ಚಿಕ್ಕರಾಜು, ಆದರೂ ಅಮ್ಮನ ಅಕ್ಕಂದಿರು ಇಬ್ಬರೂ ನನಗೆ ಅಮ್ಮಂದಿರಾಗಿದ್ದರು. ನಾನು ಬೆಳೆದದ್ದೆಲ್ಲಾ ನನ್ನ ದೊಡ್ಡಮ್ಮ ದೊಡ್ಡಪ್ಪನ ಜೊತೆಯಲ್ಲಿ, ನನ್ನ ವ್ಯಕ್ತಿತ್ವದ ಒಂದು ಭಾಗವಾಗಿಬಿಟ್ಟಿದ್ದಾರೆ ಅವರು. ನನಗೆ ತುಂಬ ಸಹನೆ ತಾಳ್ಮೆಗಳಿದೆ ಅಂತಾರಲ್ಲ ಅದು ಬಂದಿದ್ದು ನಮ್ಮ ದೊಡ್ಡಮ್ಮನವರ ಪ್ರಭಾವದಿಂದ. ಅವರು ತುಂಬಾ ದೈವಭಕ್ತರು. ಅವರಿಗೆ ಕೋಪ ಅನ್ನೋದು ಬರುತ್ತಲೇ ಇರಲಿಲ್ಲ. ಅತ್ಯಂತ ತಾಳ್ಮೆಯ ವ್ಯಕ್ತಿ. ನಮ್ಮ ದೊಡ್ಡಪ್ಪ ತೀರಾ ಪ್ರಾಕ್ಟಿಕಲ್ ಮನುಷ್ಯ. ಆಡುತ್ತಿರಲಿಲ್ಲ, ಸುಮ್ಮನೆ ಮಾಡಿ ಮುಗಿಸುತ್ತಿದ್ದವರು. ನಾನು ಮಿಡ್ಲ್ ಸ್ಕೂಲು. ಹೈಸ್ಕೂಲು, ಚಿಕ್ಕಬಳ್ಳಾಪುರದಲ್ಲೇ ಓದಿದ್ದು. ಅಲ್ಲಿ ರೋಷನ್ ಬೇಗ್ ಅಂತ ಇಂಗ್ಲಿಷ್ ಅಧ್ಯಾಪಕರು, ಬ.ನಾ. ಗುಂಡೂರಾವ್ ಅಂತ, ವೆಂಕಟಸ್ವಾಮಿ ಅಂತ ಅನೇಕ ಮೇಷ್ಟ್ರುಗಳು ನಮ್ಮ ಆಸಕ್ತಿಗಳಿಗೆ ಪ್ರಭಾವ ಬೀರಿದರು. ನಮ್ಮೂರಿಗೆ ಹತ್ತಿರವಿರೋ ನಂದಿ ಬೆಟ್ಟಕ್ಕೆ ನಾವುಗಳು ಪ್ರತಿ ಭಾನುವಾರ ಅಲೆದಾಡಲು ಹೋಗುತ್ತಿದ್ದೆವು. ಗುಂಡೂರಾಯರು ರನ್ನ, ಪಂಪ, ಕುಮಾರವ್ಯಾಸ, ಬೇಂದ್ರೆ, ಕುವೆಂಪು ಪದ್ಯಗಳನ್ನು ಕ್ಲಾಸಿನಲ್ಲಿ ಓದೋರು. ಆ ಕಾಲಕ್ಕೇ ನಾನು ಒಂದು ನಾಟಕ ಗೀಚಿದ್ದೆ. ಅದರ ಹೆಸರು ಈಗಲೂ ನೆನಪಿದೆ, 'ಜೋಡಿಶಾಲು' ಅಂತ. ನನಗೆ ಫುಟ್‌ಬಾಲ್ ತುಂಬಾ ಇಷ್ಟ ನಮ್ಮ ಸ್ಕೂಲ್ ಟೀಮಿಗೆ ನಾನು ಗೋಲ್‌ಕೀಪರ್ ಆಗಿದ್ದೆ. ಈಗಲೂ ನನಗೆ ಫುಟ್‌ಬಾಲ್ ಬಗ್ಗೆ ಆಸಕ್ತಿ.

ಪಿಯುಸಿಗೆ ಬಂದಾಗ ಗೀತೆಗಳನ್ನು ಬರೆಯೋ ಹುಚ್ಚಿತ್ತು. ನನಗೆ, ವೆಂಕಟನಾರಾಯಣ ಅಂತ ಒಬ್ಬ ಕ್ಲಾಸ್‌ಮೇಟ್ ಇದ್ದ. ಅವನಿಗೆ ಹೇಮಂತ ಕುಮಾರ್ ಥರ ವಾಯ್ಸ್. ಅದಕ್ಕೆ ತಕ್ಕ ಹಾಡುಗಳನ್ನು ಬರೀತಿದ್ದೆ. ಕಥೇ ಬರೀತಿದ್ದೆ, ಪ್ರಬಂಧ ಬರೀತಿದ್ದೆ....

ಊರಿನಲ್ಲಿ 'ಜ್ಞಾನಗಂಗಾ' ಅಂತ ಒಂದು ಅಸೋಸಿಯೇಷನ್ ಮಾಡಿಕೊಂಡು ಬೆಂಗಳೂರಿನಿಂದ 'ಮಂಕುತಿಮ್ಮನ ಕಗ್ಗ', 'ಮೈಸೂರು ಮಲ್ಲಿಗೆ' ಪ್ರತಿಗಳನ್ನು ಕೊಂಡು ತಂದು ಮಾರ್ತಿದ್ವಿ. ಚಿಕ್ಕಬಳ್ಳಾಪುರದಲ್ಲಿ ತಿಂಗಳುಗಟ್ಟಲೆ ನಡೀತಿದ್ದ ಹರಿಕಥೆಗಳು ನನ್ನನ್ನ ತುಂಬಾ ಪ್ರಭಾವಗೊಳಿಸಿವೆ. ಒಂದು ರೀತಿಯಲ್ಲಿ ಕಥನಸಾಹಿತ್ಯಕ್ಕೆ ತಿರುಗುವಂತೆ ಮಾಡಿವೆ. ಆಮೇಲೆ ಅನಕೃ ಮುಂತಾದವರ ತೀವ್ರ ಪ್ರಭಾವಕ್ಕೆ ಒಳಗಾದೆ.

ಪಿಯುಸಿಯಾದ ಕೂಡ್ಲೆ ನನಗೆ ದಾವಣಗೆರೆಯಲ್ಲಿ ಇಂಜಿನಿಯರಿಂಗ್ ಸೀಟು ಸಿಕ್ತು. ನಮ್ಮ ತಾಯಂದಿರಿಗೆ ನಾನು ಒಬ್ಬನೇ ಮಗ. ಅವರೆಲ್ಲಾ ಸೇರಿ ನೀನು ನಮ್ಮ ಕಣ್ಮುಂದೆ ಇರಬೇಕೆಂದು ಇಲ್ಲೇ ಉಳಿಸಿಕೊಂಡರು. ಆಗ ನಾನು ಬಿ.ಇ. ಬಿಟ್ಟೆ. ಆಗಿನ ನನ್ನ ಆಕರ್ಷಣೆ, ಆಸಕ್ತಿಗಳು ಹೆಚ್ಚು ಆಧುನಿಕನಾಗುವುದರ ಕಡೆಗಿತ್ತು. 'ಕಂಟೋನ್ಮೆಂಟಿ'ನ ಜಗತ್ತು, ಇಂಗ್ಲಿಷ್ ಬಗ್ಗೆ ಕುತೂಹಲ, ಆಸಕ್ತಿಗಳು ಜಾಸ್ತಿಯಾಯ್ತು. ಆ ರೀತಿಯ ಇಂಗ್ಲಿಷ್ ವಾತಾವರಣದ ಕಾಲೇಜಿಗೇ ಸೇರಬೇಕು ಅಂತ ಸೆಂಟ್ ಜೋಸೆಫ್ ಕಾಲೇಜಿನಲ್ಲಿ ಬಿ.ಎಸ್ಸಿ.ಗೆ ಸೇರಿಕೊಂಡೆ. ಅಲ್ಲಿನ ವಾತಾವರಣ ಎಷ್ಟು ದಟ್ಟವಾಗಿ ಜೋರಾಗಿತ್ತು ಅಂದ್ರೆ ನನ್ನಲ್ಲಿ ಒಂದು ಕೀಳರಿಮೆಯನ್ನು ಅದು ಹುಟ್ಟಿಸಿತು. ಇಂಗ್ಲಿಷ್ ಮಾತನಾಡಲು ಬರದ ನನ್ನನ್ನು, ಅವರ ಡ್ಯಾನ್ಸು, ಓದು, ಮಾತುಗಾರಿಕೆಗಳು ಒಂದು ಮೂಲೆಗೆ ತಳ್ಳಿಬಿಡ್ತು. ಆಗ ಭಾಷೆಯ ಬಗ್ಗೇ ನನಗೆ ದ್ವೇಷ ಹುಟ್ಟಿತು. ಭಾಷೆ ನನ್ನ ವ್ಯಕ್ತಿತ್ವ ಹಾಳು ಮಾಡುತ್ತೆ ಅನ್ನೊ ಸಿಟ್ಟು, ಭಾಷೆಯನ್ನು ಧಿಕ್ಕರಿಸಿ ಬರೆದ ಮೂಕನಾಟಕಗಳಿಗೆ (೧೯೭೦ರಲ್ಲಿ) ಮೂಲ ಬೀಜವಾಗಿರಬಹುದು.

ಬಿ.ಎಸ್ಸಿ. ಮುಗಿಸಿ ತುಮಕೂರಿನ ಕಾರೆಕುರ್ಚಿ ಐರನ್ ಓರ್ ಮೈನ್ಸ್‌ನಲ್ಲಿ ಟ್ರಾಫಿಕ್ ಸೂಪರ್ ವೈಸರ್ ಆಗಿ ಕೆಲಸ ಮಾಡಿದೆ. ಒಬ್ಬಂಟಿಯಾಗಿ, ದಟ್ಟಕಾಡು, ಗಣಿಗಳ ಮಧ್ಯೆ ಬೇಸರ ಬಂತು. ಬೆಂಗಳೂರಿಗೆ ಎನ್.ಸಿ.ಸಿ. ಆಫೀಸರ್ ಆಗಿ ಹಾಕಿದ್ರು, ನಂತರ ಕುಂದಾಪುರಕ್ಕೆ ಹಾಕಿದರು. ಸರಿಬರದೆ ಆ ಕೆಲಸದಿಂದ ಹೊರಬಂದೆ. ಅಲ್ಲಿ ಮು. ಷಣ್ಮುಗಂ ಎನ್ನುವ ಸಾಹಿತ್ಯ ಮಿತ್ರ ಸಿಕ್ಕಿದರು.

**ಕಂಪಿನ ಕರೆ**

ಕನ್ನಡದ ಹುಚ್ಚಿನಿಂದ ಮತ್ತೆ ಬಿ.ಎ. ಮಾಡಲು ಆರಂಭಿಸಿದೆ. ಆಗ ಬಿ.ಆರ್. ಲಕ್ಷ್ಮಣರಾವ್, ಬಾಬಯ್ಯ ಇವರೆಲ್ಲಾ ನನ್ನ ಕ್ಲಾಸ್‌ಮೇಟುಗಳಾಗಿದ್ದರು. ಆಧುನಿಕತೆಯ ಹುಚ್ಚು ಇದ್ದೇ ಇತ್ತು. ಬಿ.ಎ.ಗೆ ಬಂದಾಗ ಅದು ಕನ್ನಡದ ಬಗ್ಗೆ ಆಸಕ್ತಿಯಾಗಿ ರೂಪುಗೊಂಡಿತು. ಎಂ.ಎ.ಗೆ ಬಂದಾಗ ಅದು ಹೆಚ್ಚು ಪರಿಷ್ಕೃತಗೊಂಡಿತು. ಅನೇಕ ಗೆಳೆಯರ ಸಂಪರ್ಕ, ವಾತಾವರಣ, ರಾಘವೇಂದ್ರರಾವ್, ಕೆ.ವಿ. ನಾರಾಯಣ ಮುಂತಾದವರ ಜೊತೆಗಾರಿಕೆ ಕನ್ನಡ ಸಾಹಿತ್ಯದ ಬಗ್ಗೆ ಇದ್ದ ನನ್ನ ಆಸಕ್ತಿಗೆ ಸಾಣೆ ಹಿಡಿಯಿತು. ಜೊತೆಗೆ, ಸೆಂಟ್ರಲ್ ಕಾಲೇಜಿನ ಪಿ.ಪಿ. ಕಟ್ಟೆಯ ದಯೆ!

**ಪಿ.ಪಿ. ಕಟ್ಟೆ**

ಅದು ಸೆಂಟ್ರಲ್ ಕಾಲೇಜಿನ ಹೊಸ ಲೈಬ್ರರಿ ಮುಂದಿದ್ದ ಕಲ್ಲುಬೆಂಚು. ನಮ್ಮಲ್ಲಿ ಅನೇಕರ ಬದುಕಿನ ಮುಖ್ಯವಾದ ಘಟನೆಗಳಿಗೆ ಸಾಕ್ಷಿಯಾಗಿತ್ತು. ಪಿ.ಪಿ. ಕಟ್ಟೆ ಅಂದರೆ 'ಪೋಲಿ ಪಟಾಲಂ'

ಕಟ್ಟೆ ಅಂತ. ಬೇರೆಯೋರಿಗೆ ನಾವು ಪ್ರೋಗ್ರೆಸಿವ್ ಪೇಪರ್ ಅಂತ ಅಥವಾ ಪೆನ್ ಅಂಡ್ ಪೇಪರ್ ಅಂತ ಹೇಳಿದರೂ ಅದರ ಮೂಲಾರ್ಥ ಪೋಲಿ ಪಟಾಲಂ. ಅದೇ ಸ್ಥಳದಲ್ಲೇ 'ಅಂಕಣ' ಪತ್ರಿಕೆ ರೂಪುಗೊಂಡಿದ್ದು, 'ಶೂದ್ರ' ಪತ್ರಿಕೆ ಹುಟ್ಟಿದ್ದು, 'ಕಾವ್ಯ' ಬೆಳೆದದ್ದು..... ಆ ಕಟ್ಟೆಯ ಬಳಿ ವೆಂಕಟರಾಜು, ಮಾಧು, ರಾಘು, ನಾರಾಯಣ, ಕಿ.ರಂ., ಕ.ವೆಂ., ಬಾಲು, ಶ್ಯಾಮಸುಂದರ, ಶೂದ್ರ, ಪ್ರಸನ್ನ, ಶಿವಪ್ರಕಾಶ್, ಡಿ.ವಿ ರಾಜಶೇಖರ ಹೀಗೆ ಎಲ್ಲ ಸೇರುತಿದ್ವಿ, ರಾತ್ರಿಯ ಬಹಳ ಹೊತ್ತಿನತನಕ ಚರ್ಚೆ, ಮಾತುಕತೆ, ಕವಿತೆ ಓದೋದು ನಡೀತಿತ್ತು. ಕೆಲದಿನಗಳ ನಂತರ ವೆಂಕಟಗಿರಿಗೌಡರಿಗೆ ಹಿಡಿಸದೆ ಆ ಕಟ್ಟೆಯನ್ನು ಕಿತ್ತು ಹಾಕಿಸಿದರು.

**ಕ್ರೈಸ್ಟ್ ಕಾಲೇಜು ಸೇರಿದ್ದು**

೧೯೭೯ರಲ್ಲಿ ನಾನು ಕ್ರೈಸ್ಟ್ ಕಾಲೇಜು ಸೇರಿದ್ದು. ಆಗ ಅದು ಹೊಸ ಕಾಲೇಜಾಗಿತ್ತಾದ್ದರಿಂದ ಕೆಲಸ ಮಾಡುವ ಅವಕಾಶವಿತ್ತು. ಸಂದರ್ಶಕರಾಗಿ ಬಂದ ಜಿ.ಎಸ್.ಎಸ್. ಮತ್ತು ಪ್ರೊ.ಜಿ. ವೆಂಕಟಸುಬ್ಬಯ್ಯ ಅವರು ಎರಡು ಕರಾರಿನ ಮೇಲೆ ನನ್ನ ಈ ಕಾಲೇಜಿಗೆ ಆಯ್ಕೆ ಮಾಡಿದರು. ಒಂದು, ಇಲ್ಲೊಂದು ಎನ್.ಸಿ.ಸಿ. ಯೂನಿಟ್ ಆರಂಭಿಸೋದು. ಮತ್ತೊಂದು, ಹೊಸ ಕಾಲೇಜಾದ ಇಲ್ಲಿ ಕನ್ನಡವನ್ನು ಕಟ್ಟುವ ಕೆಲಸ ಮಾಡೋದು.

**ಸಂಬಳ ಗೊತ್ತಿದ್ರೆ ಮದುವೆ ಆಗ್ತಿರಲಿಲ್ಲ.**

ನನ್ನ ಮದುವೆಯಾದದ್ದು ೧೯೭೦ರಲ್ಲಿ. ಆಗ ನನ್ನ ಸಂಬಳವೂ ಅವರಿಗೆ ಗೊತ್ತಿರಲಿಲ್ಲ...

(ಸರಸ್ವತಿ ಮೇಡಂ : ಗೊತ್ತಿದ್ರೆ ಮದುವೇನೇ ಆಗ್ತಿರಲಿಲ್ಲ. ೧೫೦ ರುಪಾಯಿ ಅಂದ್ರೆ ಏನು ಮದುವೆಯಾಗೋದು) (ನಗು)

ಅವರದ್ದು ತುಂಬಾ ಅನುಕೂಲಸ್ಥರ ಮನೆ, ಆ ಕಾಲಕ್ಕೇ ಕಾರ್ ಇತ್ತು.

(ಸರಸ್ವತಿ : ಇವರು ಒಂದಿನ ಒಂದು ಸೆಂಟ್ರಲ್ ಕಾಲೇಜಿಗೆ ಕರೆದುಕೊಂಡು ಹೋದ್ರು, ಅಲ್ಲಿ ಕೂರಿಸಿಕೊಂಡು 'ನಮ್ಮನೆ ಹೆಂಚಿನ ಮನೆ, ನಿಮ್ಮ ಮನೆಯಲ್ಲಿರೋ ಅಷ್ಟು ಸೌಲಭ್ಯ, ಅನುಕೂಲಗಳು ಇರದೇ ಹೋಗಬಹುದು, ನಾಲ್ಕುಜನ ತಂಗಿಯರಿಗೆ ಮದುವೆ ಆಗಬೇಕು. ಇವರೆಲ್ಲರ ಜೊತೆ ಹೊಂದಿಕೊಂಡು ಇರ್ತೀಯಾ?' ಅಂತ ಕೇಳಿದರು. ಮತ್ತೊಂದು ಕಂಡೀಷನ್ ಅಂದ್ರೆ ಆಗ ನಾನು ಬರೇ ಎಸ್.ಎಸ್.ಎಲ್.ಸಿ. ಮಾಡಿದ್ದೆ. ಬಿ.ಎ. ಪೂರ್ತಿ ಮಾಡಬೇಕು ಅಂತ ಹೇಳಿ ಒತ್ತಾಯ ಮಾಡಿದ್ರು, ಆಗಲಿ ಅಂತ ಒಪ್ಪಿಕೊಂಡೆ.....)

ನಾನೂ ಮತ್ತು ಶಿವಸ್ವಾಮಿ ಆ ಕಾಲಕ್ಕೆ ಶಾಂತಿನಿಕೇತನದಲ್ಲಿ ಇದ್ದು ಬರಬೇಕು ಅಂತ ಆಸೆ ಪಟ್ಟಿದ್ವು, ಅಪ್ಲಿಕೇಷನ್ನೂ ಹಾಕಿದ್ವಿ, ಶಾಂತಿನಿಕೇತನಕ್ಕೆ ಹೋಗೋ ಬದಲು ಮದುವೆ ಆಯ್ತು.

೧೯೭೭ರಲ್ಲಿ ಕನ್ನಡ ಸಂಘ ಪ್ರಾರಂಭಿಸೋದಕ್ಕೆ ಮೊದಲು ಒಂದೆರಡು ವರ್ಷ ಇಂಥಾದ್ದೊಂದು ಚಟುವಟಿಕೆ ಮಾಡಲು ತಕ್ಕ ಪ್ರೋತ್ಸಾಹ ದೊರೆಯುತ್ತದೆಯೆ ಅಂತ ಸಾಕಷ್ಟು ಗಮನಿಸಿ, ಕಾದು, ಆಲೋಚಿಸಿದ್ದೆ. ಆ ವರ್ಷ ಅ.ನ.ಕೃ. ತೀರಿಕೊಂಡ ವರ್ಷ. ಅವರ ಪ್ರಭಾವ ನನ್ನ ಮೇಲಿದ್ದ ಕಾರಣ ಅ.ನ.ಕೃ. ಸ್ಮಾರಕ ಲೇಖನ ಸ್ಪರ್ಧೆಯ ಮಾಲೆ ಪ್ರಾರಂಭವಾಯ್ತು.

**ರಾಜರತ್ನಂ ಪ್ರಭಾವ**

ಇವತ್ತು ನಾವು ಒಳ್ಳೆಯ ಮೇಷ್ಟ್ರುಗಳು ಅಂತ ಅನ್ನಿಸಿಕೊಂಡಿದ್ರೆ ಅದಕ್ಕೆ ರಾಜರತ್ನಂ ಕಾರಣ. ಎಂ.ಎ.ನಲ್ಲಿ ನನಗೆ ಎರಡು ವರ್ಷ ಅವರ ಪಾಠ ಕೇಳುವ ಅವಕಾಶ ಇತ್ತು. ಹಾಗೆಯೇ ನಮಗೆ ಪಾಠ ಮಾಡುತ್ತಿದ್ದ ಎಂ.ವಿ. ಸೀತಾರಾಮಯ್ಯ, ಜಿ.ಎಸ್.ಎಸ್., ರಂ.ಶ್ರೀ ಮುಗಳಿ, ಇವರೆಲ್ಲರೂ ಶಿಸ್ತು, ಪ್ರಾಮಾಣಿಕತೆ, ವಿದ್ಯಾರ್ಥಿಗಳ ಮೇಲಿನ ಪ್ರೀತಿ ನಮ್ಮೆಲ್ಲರನ್ನು ರೂಪಿಸಿದೆ. ನನಗೆ ಸಿಕ್ಕ ಕೆಲ ಶಿಷ್ಯರಂತೂ ಅವಿಸ್ಮರಣೀಯರು. ನನ್ನ ಇಂಗಿತವನ್ನರಿತು ಕೆಲಸಕ್ಕೆ ಮುಂದಾಗುವಂಥವರು. ಅವನೊಬ್ಬನಿದ್ದ, ದೈತ್ಯ ಪ್ರತಿಭೆ. ಅಕಾಲ ಮರಣಕ್ಕೀಡಾದ ವೆಂಕಟೇಶ. ಒಂದು ದಿನ ರಾತ್ರಿ ಹನ್ನೊಂದು ಗಂಟೆಗೆ ಅವನಿಗೆ ಬೆಂಗಳೂರಿನ ವೆಸ್ಟ್ ಆಫ್ ಕಾರ್ಡ್ ರಸ್ತೆಯಲ್ಲಿರುವ ತನ್ನ ಮನೆಯಂಗಳದ ಬಾಳೆಗಿಡದಲ್ಲಿ ಬಿಟ್ಟಿದ್ದ ಮೊದಲ ಗೊನೆ ಕಣ್ಣುಚುಚ್ಚಿತು, ಸೀದಾ ಬೈಕು ಹತ್ತಿದವನೇ ವಿಲ್ಸನ್‌ಗಾರ್ಡನ್‌ನಲ್ಲಿದ್ದ ನಮ್ಮ ಮನೆಗೆ ಬಂದ. ಮಲಗಿದ್ದ ನನ್ನ ಮಗ ಸುಗತನನ್ನು ಎಬ್ಬಿಸಿಕೊಂಡು, ನಿದ್ದೆಗಣ್ಣಿನ ಅವನನ್ನು ಬೈಕಿಗೇರಿಸಿಕೊಂಡು ಸೀದಾ ಹೊರಟ, ತನ್ನ ಮನೆಗೆ. ಬಾಳೆಗೊನೆಯನ್ನು ಕಿತ್ತು ಇಬ್ಬರೂ ಮತ್ತೆ ಮನೆಗೆ ಧಾವಿಸಿ, ಮಲಗಿದ್ದ ನನ್ನನ್ನು ಧಡಬಡ ಎಬ್ಬಿಸಿ 'ಸಾರ್, ಒಪ್ಪಿಸಿಕೊಳ್ಳಿ..... ನಮ್ಮ ತೋಟದ ಮೊದಲ ಹಣ್ಣು.... ನೀವು ತಿನ್ನಬೇಕು' ಅಂದ! ಈಗ ಅಧ್ಯಾಪಕ-ವಿದ್ಯಾರ್ಥಿಗಳ ನಡುವೆ ಅಂಥಾ ಬಾಂಧವ್ಯ ಇಲ್ಲ.

**ಬಗ್ಗದೆಯೆ ಕುಗ್ಗದೆಯೆ**

ನೀವು ಕ್ರೈಸ್ಟ್ ಕಾಲೇಜಿನ ಪುಸ್ತಕಗಳಲ್ಲಿ ವಿಜ್ಞಾನದ ಪುಸ್ತಕಗಳನ್ನು ನಾವು ಹೆಚ್ಚು ಪ್ರಕಟಿಸದೇ ಇರುವುದನ್ನು ಗಮನಿಸಬಹುದು. ಸರ್ಕಾರದ 'ಕಪ್ಪು ಹಲಗೆ' ಅಂತ ಸ್ಕೀಮಿದೆ. ಅದೇ ಒಂದು ದೊಡ್ಡ ರ್‍ಯಾಕೆಟ್ ಆಗಿದೆ. ನಾವು ಅದರ ಭಾಗವಾಗದೆ ದೂರ ಉಳಿದೆವು. ಅಧಿಕಾರ ಅನ್ನೋದು ಅಲ್ಲಿನ ಕಲುಷಿತ ವಾತಾವರಣವನ್ನು ಗೆಲ್ಲಬಲ್ಲ ಸ್ವಾತಂತ್ರ್ಯ ನನಗೆ ಕೊಡಬೇಕು. ಅದಕ್ಕೆ ಒಪ್ಪಿ, ರಾಜಿಮಾಡಿ ಕೊಂಡು ನಾನು ಕೆಲಸ ಮಾಡಲಾರೆ. ಹಾಗೇ, ಕಥೆ ಕಾದಂಬರಿಗಳನ್ನೂ ನಾವು ಹೆಚ್ಚು ಪ್ರಕಟಿಸಿಲ್ಲ. ಯಾವುದನ್ನು ಇತರೆ ಪ್ರಕಾಶಕರು ಕಡೆಗಣಿಸಿದರೋ ಅಂಥಾ ಕಾವ್ಯ, ವಿಮರ್ಶೆ ಮುಂತಾದವನ್ನು ಪ್ರಕಟಿಸಿದೆವು.

ಒಂದು ಸಲ frustrate ಆಗಿದ್ದಾಗ ರಾಜರತ್ನಂ ಅವರ ಹತ್ತಿರ ಹೇಳಿಕೊಂಡಿದ್ದೆ. ಅವರು ಒಂದು ಉದಾಹರಣೆ ಕೊಟ್ಟರು: ಒಂದು ಸಂಜೆ ಯಾರೋ ಕ್ರಿಶ್ಚಿಯನ್ ಮಿಷನರಿಯವರು ಒಂದು ಕಾರ್ಡು ಹಾಕಿ ಹೋಗಿದ್ದರಂತೆ. ಅದರಲ್ಲಿ Do not stop, turn towards god ಅಂತ ಒಂದು ಪದ್ಯ ಇತ್ತಂತೆ.... ನೀನು ನಿನ್ನ ಕೆಲಸ ಮಾಡು ಅಂದರು. ನಾನು ಆಲೋಚಿಸಿದೆ, ಯಾಕೆ ಕೆಲಸ ನಿಲ್ಲಿಸಬೇಕು, ಸ್ವಲ್ಪ ಕಷ್ಟ ಆಗಬಹುದು ಅಷ್ಟೆ....

ನಾನು ಯಾವಾಗಲೂ ಹೇಳೋ ಹಾಗೆ ಮೂರು ಸಂಗತಿಗಳು ನನಗೆ ಸಹಕಾರಿಯಾದ್ವು, ಒಂದು, ನನ್ನ ಕಾಲೇಜು, ನನ್ನ ಸಹೋದ್ಯೋಗಿಗಳು ಮತ್ತು ವಿದ್ಯಾರ್ಥಿಗಳು. ಎರಡನೆಯದು, ನನ್ನ ಅಪಾರವಾದ ಗೆಳೆಯರ ಬಳಗ. ಮೂರನೆಯದು ಮತ್ತು ಮುಖ್ಯವಾದದ್ದು ನನ್ನ ಮನೆ, ತಂದೆ-ತಾಯಿ, ಹೆಂಡತಿ-ಮಕ್ಕಳು ಇವರ ಸಹಕಾರ.

**ಮನೆವಾರ್ತೆ**

ಸುಗತ(ಮಗ) ಈಗಲೂ ಹೇಳ್ತಾನೆ, ಬೆಳಿಗ್ಗೆ ಅವನು ಏಳುವುದಕ್ಕೆ ಮುಂಚೆ ಹೊರಡುತ್ತಿದ್ದ ನಾನು, ಅವನು ರಾತ್ರೆ ಮಲಗಿದ ಮೇಲೇ ಮನೆಸೇರುತ್ತಿದ್ದೆ. ಎಷ್ಟೋ ದಿನಗಳು ಅವನು ನನ್ನ ಮುಖವನ್ನೇ ನೋಡಿಲ್ಲ.... ನನ್ನ ಯಶಸ್ಸಿನ ಹಿಂದೆ ಮನೆಮಂದಿಯ ನೋವು, ಸಿಟ್ಟು, ಕೋಪ ಮತ್ತು ಸಹನೆ ಎಲ್ಲಾ ಸೇರಿಕೊಂಡಿದೆ. 'ಕ್ರಿಸ್ತಾಂಜಲಿ' ಪ್ರಕಟಣೆ ಸಂದರ್ಭದಲ್ಲಿ ನನ್ನಾಕೆಯ ಒಡವೆ ಬ್ಯಾಂಕಿನಲ್ಲಿಟ್ಟು ಹಣ ಹೊಂದಿಸಿದ್ದೆವು. ಆಗಿನ್ನೂ ನಮ್ಮಮದುವೆ ಆದ ಹೊಸದು. ಹೊರಗೆ ಇಂಥಾ ಘಟನೆಗಳು ಗೊತ್ತಾಗೋದಿಲ್ಲ. ನನ್ನ ಒಬ್ಬನ ಹೆಸರು ಕೇಳಿಬರುತ್ತೆ... 'ಕ್ರೈಸ್ಟ್ ಕಾಲೇಜು ಕನ್ನಡ ಸಂಘ' ಕಟ್ಟಿದ್ದು ನಾನೊಬ್ಬನಲ್ಲ. ನನ್ನ ಅನೇಕ ಗೆಳೆಯರು, ಮಕ್ಕಳು, ತಂದೆ, ತಾಯಂದಿರು ಇದಕ್ಕೆ ಕಾರಣರಾಗಿದ್ದಾರೆ. 'ಕನ್ನಡ ಸಂಘ' ನಾನು ಕಟ್ಟಿದೆ ಎನ್ನೋ ಅಹಂಕಾರಕ್ಕಿಂತ ಅದು ನನ್ನ ವ್ಯಕ್ತಿತ್ವ ರೂಪಿಸಿದೆ. ಬೇಂದ್ರೆಯವರ 'ಮರುಳುಸಿದ್ಧ' ಕವನದಂತೆ ನಾನು ಏನೋ ಮಾಡೋಕೆ ಹೊರಟು ಕನ್ನಡ ಸಂಘದ ಕಿನ್ನರಿಯಾಗಿ ಬಿಟ್ಟೆ!

**ಮೌನ**

ನನಗೆ ಕೋಪ ಬಂದ್ರೆ ನಾನು ಮೌನವಾಗಿಬಿಡ್ತೀನಿ. ನನ್ನ ಕೋಪ, ನೋವು ಇವುಗಳನ್ನು ಮೌನವಾಗಿ ಅನುಭವಿಸುತ್ತೇನೆ. ನನ್ನೊಂದಿಗೆ ಕೆಲಸದಲ್ಲಿ ಬೇರೆಯವರನ್ನೂ Involve ಮಾಡಿಕೊಳ್ತೀನಿ. ಹತ್ತು ಸಲ ಅವರು ನನ್ನೊಟ್ಟಿಗಿದ್ದಾರೆ ಅಂತ ಹೇಳೋದ್ರಿಂದ ಅವರಿಗೂ ಹುಮ್ಮಸ್ಸು ಬರುತ್ತದೆ; ಅವರೂ ನಮ್ಮೊಟ್ಟಿಗೆ ಕೈ ಜೋಡಿಸುತ್ತಾರೆ.

ನನ್ನ ಕಾರ್ಯಾವಧಿಯಲ್ಲಿ ಸುಮಾರು ೧೫ ಜನ ಅರೆಕಾಲಿಕ ಉಪನ್ಯಾಸಕ ಜೊತೆಗಾರರು ಬಂದು ಹೋದರು. ದೀರ್ಘಕಾಲ ಯಾರೂ ಅಲ್ಲಿ ಉಳಿದುಕೊಳ್ಳಲಿಲ್ಲ. ಬೇರೆ ಬೇರೆ ಕೆಲಸ ಸಿಕ್ಕಿ ಹೊರಟುಬಿಡೋರು. ಅವರೆಲ್ಲರ ಸಹಕಾರ ನನಗೆ ಸಿಕ್ಕಿದೆ. ಕಾಲೇಜಿನಲ್ಲಿ ಉಳಿದಿರುವ ಕೆಲ ತರುಣ ಅಧ್ಯಾಪಕರು ಮುಂದೆ ಕನ್ನಡ ಸಂಘವನ್ನು ಇನ್ನೂ ಚೆನ್ನಾಗಿ ಕಟ್ಟಿ ಬೆಳೆಸಬಹುದು.

ಒಬ್ಬರ ಕಮಿಟ್‌ಮೆಂಟು, ವಿಷನ್, ಮತ್ತು ಕೆಲಸದ ಬಗೆಗಿನ ಪ್ರೀತಿ ಇನ್ನೊಬ್ಬರಿಗೆ ಬರೋಕೆ ಸಾಧ್ಯವಿರಲಿಲ್ಲ. ರಾಜರತ್ನಂ ಅಥವಾ ಕೃಷ್ಣಶಾಸ್ತ್ರಿಗಳಂಥವರು ಬರೋಕೆ ಇನ್ನೂ ಹತ್ತಾರು ವರ್ಷಗಳ ಕಾಲ ಕಾಯಬೇಕು. ಒಂದು ಸಂಸ್ಥೆಯ ಜೀವಿತದಲ್ಲಿ ಈ ರೀತಿಯ ಏರಿಳಿತಗಳು ಇರುತ್ತವೆ. ಸಾಹಿತ್ಯ ಪರಿಷತ್ತು ಹಿಂದೆ ಬಹಳ ಅದ್ಭುತ ಕೆಲಸ ಮಾಡಿತ್ತು. ಎಂಥೆಂಥಾ ಧೀಮಂತ ವ್ಯಕ್ತಿಗಳಿದ್ದರು ಅಲ್ಲಿ.....

ಎಷ್ಟೇ ಆದರೂ ಸಾಹಿತಿಗಳನ್ನು ಸೃಷ್ಟಿಸೋಕೆ ಸಂಸ್ಥೆಗಳಿಂದ ಸಾಧ್ಯವಿಲ್ಲ. ಅದಕ್ಕೆ ಒಂದು ದಿಕ್ಕು ಕೊಡಬಹುದಷ್ಟೆ. ಒಂದು ವಾತಾವರಣ ನಿರ್ಮಿಸಿ, ಆಸಕ್ತಿ, ಅಭಿರುಚಿ ಬೆಳೆಯುವುದಕ್ಕೆ ಪ್ರಯತ್ನಿಸಬಹುದು. ಎಲ್ಲಿ ಕೀರ್ತಿ ಮತ್ತು ಹಣ ಕೇಂದ್ರವಾಗಿರುತ್ತೋ ಅಲ್ಲಿ ಯಾವ ಕೆಲಸವೂ ಸಾಧ್ಯವಾಗುವುದಿಲ್ಲ.

'ಸಾಹಿತ್ಯ ಪರಿಚಾರಿಕೆ'ಯ ಭರದಲ್ಲಿ ನನ್ನ 'ಸಾಹಿತ್ಯ ಸೃಷ್ಟಿ' ಬಡವಾಯ್ತು ಅನ್ನೋ ಆರೋಪ ಇದೆ; ಸರಿ, ಆದರೆ ಇದನ್ನು ಮಾಡೋಕೂ ಒಬ್ಬರು ಬೇಕಲ್ಲ? ನಾನೂ ಬರೆದಿದ್ರೆ ಒಂದೆರಡು ಕಾದಂಬರಿ, ಹತ್ತು ನಾಟಕ, ಒಂದಿಪ್ಪತ್ತು ಸಣ್ಣ ಕಥೆ ಬರೀಬಹುದಾಗಿತ್ತು. ಒಂದು

ನಾಲ್ಕೋ ಐದೂ ಪುಸ್ತಕ ಬರ್ತಿತ್ತು, ಆಗ ಒಬ್ಬ ವ್ಯಕ್ತಿ ಹೊರಗೆ ಬರುತ್ತಿದ್ದ. ಈಗಾದರೆ, ಒಂದು ಹತ್ತು ಜನ ಒಳ್ಳೆಯ ಕವಿಗಳು, ಲೇಖಕರು, ವಿಮರ್ಶಕರು, ಪ್ರತಿಭಾವಂತರು ಬೆಳಕು ಕಂಡಿದ್ದಾರೆ. ಅದರಿಂದ NO Regrets...... ಹಾಗೆ ನನ್ನ ಬರವಣಿಗೆಗೆ ನಿಜವಾದ ಶಕ್ತಿ, ಯೋಗ್ಯತೆಗಳಿದ್ದರೆ ಈಗಲು ಬರೆಯಬಹುದಲ್ಲ!

ಸಾಹಿತ್ಯ ಪರಿಚಾರಿಕೆ ಹೆಚ್ಚಾಗಬೇಕು. ಈಗ ನಾನು ಮಾಡಿದ್ದಕ್ಕಿಂತಲೂ ಚೆನ್ನಾಗಿ ಆಗಬೇಕು. ಇದು ನನ್ನ ಕನಸು. ನನಗಿಂತಲೂ ಕನ್ನಡಕ್ಕಾಗಿ ಕೆಲಸ ಮಾಡಿದ ನನ್ನ ಗುರುಗಳು, ಹಿರಿಯರು ನಿವೃತ್ತರಾದಾಗ ಅದು ಅಷ್ಟು ಸುದ್ದಿ ಮಾಡಲಿಲ್ಲ. ನಾನು ಮಾಡಿರೋ ಒಂದು ಸಣ್ಣ ಕೆಲಸಕ್ಕೆ ಇಷ್ಟೊಂದು ಪ್ರಾಮುಖ್ಯತೆ.... ಈ ಬಗ್ಗೆ ನನಗೆ ಒಂದು ರೀತಿಯ ಮುಜುಗರ, ಆತಂಕ, ವಿಸ್ಮಯ, ಒಳಗೆಲ್ಲೋ ಸಂತೋಷ, ಎಲ್ಲ ಆಗುತ್ತಿವೆ. ಪ್ರತಿಯೊಬ್ಬ ಕನ್ನಡದ ಮೇಷ್ಟ್ರು ಈ ಕೆಲಸ ಮಾಡಬಲ್ಲ; ಒಂದಷ್ಟು ಶ್ರದ್ಧೆ, ಪ್ರೀತಿ ಮತ್ತು ಪ್ರಾಮಾಣಿಕತೆ ಅಗತ್ಯ, ಅಷ್ಟೆ.

**ಮುಂದೆ**

ಇನ್ನಾರು ತಿಂಗಳು ಝೆನ್ ಸಿದ್ಧಾಂತದಂತೆ ನನ್ನ ಮನಸ್ಸನ್ನು, ತಲೆಯನ್ನು ಖಾಲಿ ಮಾಡಿಕೊಳ್ಳುತ್ತೇನೆ. ನಂತರ ಏನು ಮಾಡಬೇಕು ಅಂತ ನಿರ್ಧರಿಸ್ತೇನೆ. ನಾನು ಹೀಗೆ ಮಾಡಿದೆ, ಹಾಗೆ ಮಾಡಿದೆ ಅಂತ ನಾಸ್ಟಾಲ್ಜಿಯಾದಲ್ಲಿ ಇದ್ದುಬಿಡಬಹುದು. ಹಾಗಾಗಬಾರದು, ಮನಸ್ಸು ಖಾಲಿಯಾಗಬೇಕು. ಕೆಲವು ಅಪೂರ್ಣ ನಾಟಕಗಳಿವೆ. ಅವುಗಳನ್ನು ಪೂರ್ತಾ ಮಾಡ್ತೇನೆ."

*(ಭಾವನಾ, ಜೂನ್ ೨೦೦೦)*



## ಪ್ರೊ. ಚಿ. ಶ್ರೀನಿವಾಸರಾಜು-ಜೀವನ ಚಿತ್ರಣ

| | | |
|---|---|---|
| ಹೆಸರು | : | ಚಿ. ಶ್ರೀನಿವಾಸರಾಜು |
| ಜನ್ಮ ದಿನಾಂಕ | : | ೨೮.೧೧.೧೯೪೨ |
| ಜನ್ಮಸ್ಥಳ | : | ಚಿಕ್ಕಬಳ್ಳಾಪುರ |
| ತಾಯಿ | : | ಜೆ. ಸಾವಿತ್ರಮ್ಮ |
| ತಂದೆ | : | ವಿ.ಚಿಕ್ಕರಾಜು |
| ವಿದ್ಯೆ | : | ಎಂ.ಎ(ಕನ್ನಡ)<br>ಡಿಪ್ಲೋಮಾ ಇನ್ ಇಂಡಾಲಜಿ |
| ವಿವಾಹ | : | ೧೫ ಫೆಬ್ರವರಿ ೧೯೭೦ |
| ಪತ್ನಿ | : | ಎನ್.ಸರಸ್ವತಿ |
| ಮಕ್ಕಳು | : | ಎಸ್. ಸುಗತ ಮತ್ತು ಎಸ್. ಋತ |

**ವ್ಯಕ್ತಿ ವಿಶೇಷ :**

- ಕನ್ನಡದಲ್ಲಿ ಮೂಕ ನಾಟಕಗಳ ಪರಂಪರೆ ಬೆಳೆಸಿದವರು.
- ಕ್ರೈಸ್ಟ್ ಕಾಲೇಜ್ ಕನ್ನಡ ಸಂಘದ ಮೂಲಕ ಪುಸ್ತಕ ಪ್ರಕಟಣೆಯ ಸಂಸ್ಕೃತಿ ಬೆಳೆಸಿದವರು. ೧೬೫ ಪುಸ್ತಕಗಳಲ್ಲಿ ನಾಡಿನ ಹಿರಿ-ಕಿರಿಯರೆಲ್ಲರ, ಎಲ್ಲಾ ಪ್ರಕಾರಗಳ ಸತ್ವಶಾಲಿ ಕೃತಿಗಳಿವೆ.
- ದ.ರಾ.ಬೇಂದ್ರೆ ಕಾವ್ಯ ಸ್ಪರ್ಧೆ ಮತ್ತು ಅ.ನ.ಕೃ. ಲೇಖನ ಸ್ಪರ್ಧೆ ಮೂಲಕ ನೂರಾರು ಎಳೆ ಬರಹಗಾರರು ಬೆಳಕಿಗೆ ಬರಲು ಕಾರಣರಾದರು.
- ಹಲವು ಸಂಘ ಸಂಸ್ಥೆಗಳ ಮೂಲಕ ಕನ್ನಡವನ್ನು ಬೆಳೆಸುವ ಉಳಿಸುವ ಮಹತ್ವದ ಕೆಲಸವನ್ನು ನಿರಂತರ ವಾಗಿ ಮಾಡುತ್ತಾ ಬಂದು ಪರಿಚಾರಿಕೆಗೆ ಹೊಸ ಅರ್ಥ ಕೊಟ್ಟವರು.

**ಪ್ರಕಟಿತ ಕೃತಿಗಳು :**

೧. ಐದು ಮೂಕನಾಟಕಗಳು (೧೯೯೭, ೨೦೦೨)
೨. ಮೂರು ಏಕಾಂಕಗಳು (೧೯೮೪, ೧೯೯೬)
೩. ಹಳಿಯ ಮೇಲಿನ ಸದ್ದು (ನಾಟಕ) (೧೯೯೨, ೧೯೯೬)
೪. ಭಸನಾಲ ಬಂಧು (ಕವನ ಸಂಕಲನ) (೧೯೮೬, ೨೦೦೨)

೫. ರಾಜರತ್ನಂ ಮತ್ತು ಕರ್ನಾಟಕ ಸಂಘ (೧೯೮೦)
೬. ಎರಡು ಏಕಾಂಕಗಳು (೨೦೦೨)
೭. ಬಾವಿ ಕಟ್ಟೆಯ ಬಳಿ (ಅನುವಾದಿತ ಕಥೆಗಳು) (೧೯೮೦)
೮. ಕರ್ನಾಟಕ ಸಂಗಾತಿ-ಲೇಖನಗಳು (ಸಹ ಸಂಪಾದನೆ)
೯. ಕನ್ನಡ ಕನ್ನಡ ಹಾ! ಸವಿಗನ್ನಡ (ಕವನ ಸಂಕಲನ)
೧೦. ನನ್ನದು ಈ ಕನ್ನಡ ನಾಡು (ಕವನ ಸಂಕಲನ-ಸಹ ಸಂಪಾದನೆ)
೧೧. ಶತಮಾನಗಳ ಬಾಯಾರಿಕೆ ಪ್ರಾತಿನಿಧಿಕ ಕವನಸಂಕಲನ (ಸಹ ಸಂಪಾದನೆ)
೧೨. ಪರಿಮಳದ ಸುಗ್ಗಿ ಪ್ರಾತಿನಿಧಿಕ ಕವಿತೆಗಳು (ಸಂಪಾದನೆ)
೧೩. ಲಲಿತ ಪ್ರಬಂಧಗಳು
೧೪. ಆಗಾಗ (ವಿಮರ್ಶೆ)
೧೫. ನಿಷ್ಕ್ರಮಣ (ನಾಟಕ)

**ಅನುವಾದ** : ಇವರ 'ಐದು ಮೂಕನಾಟಕಗಳು' ಇಂಗ್ಲಿಷ್, ಜರ್ಮನ್, ಹಿಂದಿ, ತೆಲುಗು, ಮಲಯಾಳಂ, ತಮಿಳು ಭಾಷೆಗಳಿಗೆ ಅನುವಾದವಾಗಿದೆ.

**ಪ್ರಶಸ್ತಿ-ಗೌರವಗಳು** :
- ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ (ನಾಟಕ)- ೧೯೮೪
- ಸಮತೆಂತೋ ಬೆಳ್ಳಿ ಹಬ್ಬದ ಬಹುಮಾನ (ನಾಟಕ)- ೧೯೯೪
- ಆರ್ಯಭಟ ಪ್ರಶಸ್ತಿ (ನಾಟಕ) - ೧೯೯೪
- ಸರ್.ಎಂ.ವಿಶ್ವೇಶ್ವರಯ್ಯ ಪ್ರಶಸ್ತಿ (ಸಾಹಿತ್ಯ) - ೧೯೯೭
- ಸಂಸ ಪ್ರಶಸ್ತಿ (ರಂಗಭೂಮಿ) - ೧೯೯೯
- ಸಂದೇಶ ಪ್ರಶಸ್ತಿ, ಮಂಗಳೂರು - ೨೦೦೦ (ಸಾಹಿತ್ಯ ಪರಿಚಾರಿಕೆ)
- ಅತ್ಯುತ್ತಮ ಪ್ರಕಾಶನ ಪ್ರಶಸ್ತಿ - ೨೦೦೦ (ಕನ್ನಡ ಪುಸ್ತಕ ಪ್ರಾಧಿಕಾರದಿಂದ)
- ಕೋಲಾರ ಜಿಲ್ಲಾ ಅತ್ಯುತ್ತಮ ಲೇಖಕ ಪ್ರಶಸ್ತಿ-೨೦೦೧
- ಪ್ರೊ.ಎಸ್.ವಿ.ಪರಮೇಶ್ವರ ಭಟ್ ಪ್ರಶಸ್ತಿ - ೨೦೦೧ (ಮಂಗಳೂರು ಸಾಹಿತ್ಯ ಪರಿಚಾರಿಕೆ)
- ಕೋಲಾರ ಜಿಲ್ಲಾ ೭ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ- ೨೦೦೧ (ಹೆಸರಿನಲ್ಲಿ)

➤ ಶಿವಮೊಗ್ಗ ಕನ್ನಡ ಸಂಘದಿಂದ ಕೆ.ವಿ.ಸುಬ್ಬಣ್ಣ ಪ್ರಶಸ್ತಿ– ೨೦೦೩
➤ ರೆ.ಫಾ.ಕಿಟಲ್ ಪ್ರಶಸ್ತಿ (ಸಾಹಿತ್ಯ) – ೨೦೦೪

**ವಹಿಸಿದ ಜವಾಬ್ದಾರಿಗಳು** :
೧. ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷ
೨. ದ್ರಾವಿಡಿಯನ್ ವಿಶ್ವವಿದ್ಯಾಲಯ, ಕುಪ್ಪಂ ಪ್ರಸಾರಾಂಗದ ಸಲಹಾ ಸಮಿತಿ ಸದಸ್ಯ
೩. ಕರ್ನಾಟಕ ಲೇಖಕಿಯರ ಸಂಘ (ರಿ)ದ ಸಲಹಾ ಸಮಿತಿ ಸದಸ್ಯ
೪. 'ಹೊಸತು' ಮಾಸಪತ್ರಿಕೆ ಸಂಪಾದಕ ಮಂಡಳಿ ಸದಸ್ಯ
೫. 'ಅಂಕಣ' ಕನ್ನಡ ದ್ವೈಮಾಸಿಕದ ಸಂಪಾದಕ, ಪ್ರಕಾಶಕ
೬. ಹಂಪಿ ಕನ್ನಡ ವಿಶ್ವವಿದ್ಯಾಲಯದ 'ಶತಮಾನದ ಚಿಂತನೆ' ಗ್ರಂಥಮಾಲೆ ಸಂಪಾದಕ
೭. ಗೌರವ ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತು (೧೯೮೭–೮೯)
೮. ಸಲಹಾ ಸಮಿತಿ ಸದಸ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೯. ಸದಸ್ಯರು, ಕರ್ನಾಟಕ ಸಾಹಿತ್ಯ ಅಕಾಡೆಮಿ (೧೯೮೮–೯೨)
೧೦. ಸದಸ್ಯರು, ಕರ್ನಾಟಕ ನಾಟಕ ಅಕಾಡೆಮಿ (೧೯೯೨–೯೬)
೧೧. ಗೌರವಾಧ್ಯಕ್ಷ, ಶಂಬಾ ವಿಚಾರ ವೇದಿಕೆ
೧೨. ಕನ್ನಡ ಸಲಹಾ ಮಂಡಳಿ ಸದಸ್ಯ ಕೇಂದ್ರ ಸಾಹಿತ್ಯ ಅಕಾಡೆಮಿ, ನವದೆಹಲಿ
೧೩. ಸದಸ್ಯರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ
೧೪. ಸಲಹಾ ಸಮಿತಿ ಸದಸ್ಯ, ಪ್ರಸಾರಾಂಗ, ಬೆಂಗಳೂರು, ವಿಶ್ವವಿದ್ಯಾಲಯ

**ವೃತ್ತಿ ಕೈಂಕರ್ಯ** :
೧. ಕನ್ನಡ ಪ್ರಾಧ್ಯಾಪಕ ಕ್ರೈಸ್ಟ್ ಕಾಲೇಜು, ಬೆಂಗಳೂರು (ಮೂವತ್ತು ವರ್ಷಗಳು)
೨. ಕನ್ನಡ ಸಂಘದ ಸಂಚಾಲಕ, ಕ್ರೈಸ್ಟ್ ಕಾಲೇಜು (ಇಪ್ಪತ್ತೆಂಟು ವರ್ಷಗಳು)
೩. ಸಂದರ್ಶಕ ಪ್ರಾಧ್ಯಾಪಕ, ಕನ್ನಡ ಸ್ನಾತಕೋತ್ತರ ಕೇಂದ್ರ ಶೇಷಾದ್ರಿಪುರಂ ಕಾಲೇಜು, ಬೆಂಗಳೂರು.

❑

ನಿಧನ: 28/11/2007

# ಲೇಖಕರ ವಿಳಾಸಗಳು

೧. ಜಿ. ವೆಂಕಟಸುಬ್ಬಯ್ಯ
೫೮, ೩೧ನೇ ಕ್ರಾಸ್
೭ನೇ ಬ್ಲಾಕ್, ಜಯನಗರ
ಬೆಂಗಳೂರು – ೫೬೦ ೦೮೨
ದೂ.: ೦೮೦-೨೬೬೯೨೩೨

೨. ಪ್ರೊ. ಎಲ್.ಎಸ್. ಶೇಷಗಿರಿರಾವ್
'ಜ್ಯೋತಿ', ೬೭, ೯ನೇ 'ಎ' ಮುಖ್ಯರಸ್ತೆ
ಎರಡನೇ ಬ್ಲಾಕ್, ಜಯನಗರ
ಬೆಂಗಳೂರು – ೫೬೦ ೦೧೧
ದೂ.: ೨೬೬೨೩೭೩

೩. ಚೆನ್ನವೀರ ಕಣವಿ
'ಚೆಂಬೆಳಕು', ೯ನೇ ಕ್ರಾಸ್
ಕಲ್ಯಾಣನಗರ
ಧಾರವಾಡ – ೫೮೦ ೦೦೭

೪. ಶಾಂತರಸ
೧೦, 'ಲಕ್ಷ್ಮೀ'
ಗಣೇಶ ನರ್ಸಿಂಗ್ ಹೋಮ್ ಹಿಂದೆ
ಗಣೇಶನಗರ, ಹಳೇ ಜೇವರ್ಗಿ ರಸ್ತೆ
ಗುಲಬರ್ಗಾ – ೫೮೫೧೦೨

೫. ಎನ್. ಸರಸ್ವತಿ ರಾಜು
'ಚಿರಂಜೀವಿ', ಹಳೇ ಈಜುಕೊಳದ ರಸ್ತೆ
ಕೋದಂಡರಾಮಪುರ, ಮಲ್ಲೇಶ್ವರ
ಬೆಂಗಳೂರು – ೫೬೦ ೦೦೩

೬. ಡಾ. ಹೆಚ್.ಆರ್. ರಾಮಕೃಷ್ಣರಾವ್
೮೦೧, ೭ನೇ ಕ್ರಾಸ್, ೭ನೇ ಬ್ಲಾಕ್
ಜಯನಗರ
ಬೆಂಗಳೂರು – ೫೬೦ ೦೮೨
ದೂ.: ೯೪೪೮೭೬೭೯೦

೭. ಹೆಚ್. ಶಿವಸ್ವಾಮಿ
೭೮೯, (ಮಹಡಿ)
೩ನೇ ಕ್ರಾಸ್, ೫ನೇ ಮುಖ್ಯರಸ್ತೆ
ವಿಜಯನಗರ
ಬೆಂಗಳೂರು – ೫೬೦ ೦೪೦

೮. ಸಿ. ಬೃಂದಾರಾಜು
೨೧, 'ಕೌಸ್ತುಭ'
೭ನೇ 'ಬಿ' ಕ್ರಾಸ್, ೭ನೇ ಮೇನ್
ರಜೀವನಗರ, ಬಿಎಸ್‌ಕೆ ೩ನೇ ಹಂತ
ಬೆಂಗಳೂರು – ೫೬೦ ೦೮೫

೯. ಗಿರಿಜಾ ಕೃಷ್ಣರಾಜು
೨೬೯, 'ಸುದರ್ಶನ'
೩ನೇ 'ಎ' ಕ್ರಾಸ್, ೮ನೇ ಮೇನ್
ಹಂಪಿ ನಗರ
ಬೆಂಗಳೂರು – ೫೬೦ ೦೪೦

೧೦. ಸಿ. ವಾಸಂತಿಕುಮಾರ್ ರಾಜ್ ಅರಸ್
೧೭೩, 'ಗಿರಿದರ್ಶಿನಿ', ೩ನೇ ಮೇನ್
೩ನೇ ಕ್ರಾಸ್, 'ಎಚ್' ಬ್ಲಾಕ್
ರಾಮಕೃಷ್ಣನಗರ
ಮೈಸೂರು – ೫೭೦ ೦೨೩

೧೧. ಸಿ. ಸುಶೀಲಾ ರಾಮರಾಜು
'ಪಾಂಚಜನ್ಯ', ೧೬೭
೪ನೇ ಮುಖ್ಯರಸ್ತೆ, ವೈಯಾಲಿಕಾವಲ್
ಬೆಂಗಳೂರು – ೫೬೦ ೦೦೩

೧೨. ಬಿ.ಕೆ. ಜನಾರ್ಧನ
೮೪/ಸಿ, ೫ನೇ ಕ್ರಾಸ್, ಚಂದ್ರ ಲೇಔಟ್
ಬಸವೇಶ್ವರ ಲೇಔಟ್ ೩ನೇ ಹಂತ
ಬೆಂಗಳೂರು – ೫೬೦ ೦೪೦

೧೩. ಎ. ರಾಜಾರಾವ್
'ಪವನಕೃಪ', ೩, ೫ನೇ ಬೀದಿ
ಸುಧೀಂದ್ರ ನಗರ, ಮಲ್ಲೇಶ್ವರಂ
ಬೆಂಗಳೂರು – ೫೬೦ ೦೦೩
ದೂ.: ೨೩೩೬೮೪೪೩

೧೪. ಪ್ರೊ. ಎಸ್.ಎ. ಕೃಷ್ಣಯ್ಯ
ಮುಖ್ಯ ಸಂಶೋಧಕರು
ಪ್ರಾದೇಶಿಕ ಜಾನಪದ ರಂಗಕಲೆಗಳ
ಅಧ್ಯಯನ ಕೇಂದ್ರ
ಎಂ.ಜಿ.ಎಂ. ಕಾಲೇಜು ಆವರಣ
ಉಡುಪಿ – ೫೭೬೧೦೨

೧೫. ಎಚ್.ಎಸ್. ಶ್ರೀಮತಿ
ಕನ್ನಡ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

೧೬. ಓ.ಎಲ್. ನಾಗಭೂಷಣಸ್ವಾಮಿ
೨೮೮೩, ಹರಿಯಾಲ ರೆಸಿಡೆನ್ಸಿ
ಎರಡನೇ ಕ್ರಾಸ್
ಪಂಪಾಪತಿ ರಸ್ತೆ
ಮೈಸೂರು – ೫೭೦ ೦೦೯
ದೂ.: ೯೪೮೦೩೭೯೮೩೭

೧೭. ಮನು ಪಾಟೀಲ
೨೯, ೩ನೆ ಮೇನ್
ಬಿ.ಇ.ಎಂ.ಎಲ್. ಲೇಔಟ್
ಬಸವೇಶ್ವರ ನಗರ
ಬೆಂಗಳೂರು – ೫೬೦ ೦೭೯

೧೮. ಬಸವರಾಜ ಕಲ್ಗುಡಿ
೧೮೧೧, ೩ನೇ ಘಟ್ಟ
ಪ್ರಕಾಶನಗರ, ರಾಜಾಜಿನಗರ
ಬೆಂಗಳೂರು – ೫೬೦ ೦೨೧
ದೂ.: ೯೪೪೮೦೧೩೪೫೫

೧೯. ಯಶವಂತ ಚಿತ್ತಾಲ
೨೧೨/ಎ
ಬ್ಯಾಂಡ್ ಸ್ಟ್ಯಾಂಡ್ ಅಪಾರ್ಟ್‌ಮೆಂಟ್ಸ್
ಬ್ಯಾಂಡ್‌ಸ್ಟ್ಯಾಂಡ್, ಭಾಂದ್ರ ವೆಸ್ಟ್
ಮುಂಬಯಿ – ೪೦೦೦೫೦
ದೂ.: ೦೨೨–೨೬೪೩೮೯೭೯

೨೦. ಡಾ. ಹೆಚ್.ಎಸ್. ವೆಂಕಟೇಶಮೂರ್ತಿ
೩೦, ಸಂಕಲ್ಪ, ಪುಷ್ಪಗಿರಿನಗರ
ಹೊಸಕೆರೆಹಳ್ಳಿ, ಬನಶಂಕರಿ ೩ನೇ ಹಂತ
ಬೆಂಗಳೂರು – ೫೬೦ ೦೮೫

೨೧. ವ್ಯಾಸರಾಯ ಬಲ್ಲಾಳ
೧೦೬೪, ‘ಉತ್ತರಾಯಣ’
ವ್ಯಾಸರಾಯ ಬಲ್ಲಾಳ ರಸ್ತೆ
ಕುಮಾರಸ್ವಾಮಿ ಬಡಾವಣೆ
ಬೆಂಗಳೂರು – ೫೬೦ ೦೭೮
ದೂ.: ೦೮೦–೨೬೬೬೨೧೩೧

೨೨. ಶೇಷನಾರಾಯಣ
೯, ಲಕ್ಕಪ್ಪ ಬಡಾವಣೆ
ಸಿಂಗಾಪುರ, ವಿದ್ಯಾರಣ್ಯಪುರ ಅಂಚೆ
ಬೆಂಗಳೂರು – ೫೬೦ ೦೯೭
ದೂ.: ೬೫೩೩೦೦೫೯

೨೪. ಬಿ.ಆರ್. ಲಕ್ಷ್ಮಣರಾವ್
ಮಾರುತಿ ಸ್ಟುಡಿಯೊ
ಕೆ.ಆರ್. ಬಡಾವಣೆ
ಚಿಂತಾಮಣಿ – ೫೬೩೧೨೫
ದೂ. : ೯೮೪೫೬೯೩೬೧೪

೨೫. ಎಸ್. ಮಂಜುನಾಥ್
೧೯, ಎಂ.ಐ.ಜಿ. II
ವಿಜಯನಗರ ಬಡಾವಣೆ
ಕೆ.ಆರ್. ನಗರ – ೫೭೧೬೦೨
ಮೈಸೂರು ಜಿಲ್ಲೆ
ದೂ. : ೦೮೨೨೩–೨೬೩೨೫೫

೨೬. ನೀಲತ್ತಹಳ್ಳಿ ಕಸ್ತೂರಿ
೨೯, ‘ಮಿಥಿಲಾ’
೪ನೇ ದೇವಸ್ಥಾನದ ರಸ್ತೆ, ಮಲ್ಲೇಶ್ವರಂ
ಬೆಂಗಳೂರು – ೫೬೦ ೦೦೩

೨೭. ಗೊ.ರು. ಚನ್ನಬಸಪ್ಪ
೪೦೬, ಪ್ರಣಾಮ, ‘ಎಫ್’ ರಸ್ತೆ
೩ನೇ ಕ್ರಾಸ್
ಐಡಿಯಲ್ ಹೋಮ್ ಟೌನ್‌ಶಿಪ್
ರಾಜರಾಜೇಶ್ವರಿನಗರ
ಬೆಂಗಳೂರು – ೫೬೦ ೦೯೮
ದೂ. : ೫೫೩೧೭೯೦೫

೨೮. ಪ್ರಸನ್ನ
ಕವಿ–ಕಾವ್ಯ–ಟ್ರಸ್ಟ್
ಹೆಗ್ಗೋಡು (ಸಾಗರ)
ಶಿವಮೊಗ್ಗ ಜಿಲ್ಲೆ–೫೭೭ ೪೧೭
ದೂ.: ೦೮೧೮೩–೨೬೫೭೧೩

೨೯. ಅಂದನೂರು ಶೋಭ
೨೩೧೪, ೩ನೇ ‘ಎ’ ಮುಖ್ಯರಸ್ತೆ
ವಿಜಯನಗರ ೩ನೇ ಹಂತ
ಬೆಂಗಳೂರು – ೫೬೦ ೦೪೦

೩೦. ಚಿಂತಾಮಣಿ ಕೂಡ್ಲೆಕೆರೆ
ಸಿ–೨–೨
ಡಬ್ಲ್ಯು.ಎಂ.ಎಸ್. ಕಾಂಪೌಂಡ್
೪೭ನೇ ಕ್ರಾಸ್, ೫ನೇ ಬ್ಲಾಕ್, ಜಯನಗರ
ಬೆಂಗಳೂರು – ೫೬೦ ೦೪೧

೩೧. ಡಾ. ಕೆ.ಎಲ್. ಗೋಪಾಲಕೃಷ್ಣಯ್ಯ
೨೨೭೩, ೨೨ನೇ ತಿರುವು
ಕೆ.ಆರ್. ರಸ್ತೆ, ಬನಶಂಕರಿ ಎರಡನೇ ಹಂತ
ಬೆಂಗಳೂರು – ೫೬೦ ೦೭೦
ದೂ: : ೨೬೭೬೩೫೪೦

೩೨. **ಜಯಂತ ಕಾಯ್ಕಿಣಿ**
ಇ-೨೦೪, ಆದರ್ಶ ಹಿಲ್
ಕುಮಾರಸ್ವಾಮಿ ಬಡಾವಣೆ
ಬೆಂಗಳೂರು - ೫೬೦ ೦೭೮
ದೂ.: ೯೪೪೫೦೨೮೪೪೧೮

೩೩. **ರಹಮತ್ ತರೀಕೆರೆ**
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಹಂಪಿ ವಿಶ್ವವಿದ್ಯಾನಿಲಯ
ವಿದ್ಯಾರಣ್ಯ - ೫೮೩೨೭೬

೩೪. **ಎಂ.ಆರ್. ಕಮಲ**
೪೦೫, ಉಮಾಶಂಕರ್
೧ನೇ 'ಎನ್' ಬ್ಲಾಕ್
೧೯ನೇ 'ಜಿ' ಮೇನ್
ರಾಜಾಜಿನಗರ
ಬೆಂಗಳೂರು - ೫೬೦ ೦೧೦
ದೂ.: ೯೮೮೦೮೯೨೨೪೩

೩೫. **ಡಾ. ಚಂದ್ರಶೇಖರ ನಂಗಲಿ**
೧೬, ಶ್ರೀಗೌರಿ, ಕನಕನಗರ
ಸರ್. ಎಂ.ವಿ. ಬಡಾವಣೆ
ಹೊಸಕೋಟೆ - ೫೬೨೧೧೪
ದೂ.: ೯೮೮೬೧೫೨೭೨೬

೩೬. **ಕೆ. ಸತ್ಯನಾರಾಯಣ**
ಫ್ಲ್ಯಾಟ್ ನಂ. ಟಿ೧, ೩ನೇ ಫ್ಲೋರ್
ಜೀವನಛಾಯಾ ರೆಸಿಡೆನ್ಸಿ
ಮಹಾದೀಕ್ ವಸಾಹತ್
ನೇತ್ ದತ್ತ ಮಂದಿರ್
ಕೊಲ್ಹಾಪುರ್ - ೪೧೬ ೦೦೫
ದೂ.: ೯೯೬೦೦೨೨೦೨೦

೩೭. **ಅಮರೇಶ ನುಗಡೋಣಿ**
ಮುಖ್ಯಸ್ಥರು
ಕನ್ನಡ ಭಾಷೆ ಮತ್ತು ಸಾಹಿತ್ಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
ದೂ. : ೦೮೩೯-೪೨೨೦೮೭೨

೩೮. **ಅಲಕ ತೀರ್ಥಹಳ್ಳಿ**
೮೨, ತ್ಯಾಗರಾಜ ರಸ್ತೆ
ಬೆಟ್ಟಮಕ್ಕಿ ಬಡಾವಣೆ
[illegible]
ತೀರ್ಥಹಳ್ಳಿ - ೫೭೭೪೩೨
ದೂ.: ೯೪೪೮೭೯೯೬೮

೩೦. **ಡಾ. ಬಿ.ಜಿ. ಹರೀಶ್**
ಸಿಸ್ಕೋ ಸಿಸ್ಟಮ್ಸ್
ಸುಬ್ರಹ್ಮಣ್ಯ ಆರ್ಕೇಡ್
ಬನ್ನೇರುಘಟ್ಟ ರಸ್ತೆ
ಬೆಂಗಳೂರು - ೫೬೦ ೦೨೯

೪೦. **ಡಿ.ಕೆ. ಶಾಮಸುಂದರರಾವ್**
ಕಾಮಧೇನು ಪ್ರಕಾಶನ
ಎಲ್.ಹೆಚ್. ಅನೆಕ್ಸ್
ಶಾಸಕರ ಭವನ, ವಿಧಾನಸೌಧ
ಬೆಂಗಳೂರು - ೫೬೦ ೦೦೧

೪೧. **ಡಾ. ಕೆ.ಆರ್. ಸಿದ್ದಗಂಗಮ್ಮ**
'ಪ್ರಕೃತಿ', ನಂ. ೫೦೪, ಸೆಕ್ಟರ್-೨
ಶಿವಬಸವನಗರ
ಬೆಳಗಾವಿ - ೫೯೦೦೧೦
ದೂ.: ೯೮೪೪೦೫೫೧೪೭

೪೨. **ಡಾ|| ಹೆಚ್.ಎಸ್. ಶಿವಪ್ರಕಾಶ್**
ಅಸೋಸಿಯೆಟ್ ಪ್ರೊಫೆಸರ್
ಸ್ಕೂಲ್ ಆಫ್ ಆರ್ಟ್ಸ್
ಅಂಡ್ ಅಸ್ಥೆಟಿಕ್ಸ್
ಜವಾಹರ್‌ಲಾಲ್ ನೆಹರು
ವಿಶ್ವವಿದ್ಯಾಲಯ
ನವದೆಹಲಿ - ೧೧೦ ೦೬೭
ದೂ. : ೯೮೬೮೨೧೮೪೭೪

೪೩. **ಜಿ.ಕೆ. ರವೀಂದ್ರಕುಮಾರ್**
ಕಾರ್ಯಕ್ರಮ ನಿರ್ವಾಹಕರು
ಆಕಾಶವಾಣಿ, ಯಾದವಗಿರಿ
ಮೈಸೂರು - ೫೭೦ ೦೨೦
ದೂ.: ೯೪೪೮೪೬೪೨೦೧

೪೪. **ಎಸ್.ಜಿ. ಸಿದ್ಧರಾಮಯ್ಯ**
ಅಧ್ಯಕ್ಷರು
ಕನ್ನಡ ಪುಸ್ತಕ ಪ್ರಾಧಿಕಾರ
ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳುರು

೪೫. **ಕುಂ. ವೀರಭದ್ರಪ್ಪ**
ಅನ್ನಪೂರ್ಣ ನಿಲಯ
ಪೊಲೀಸ್ ಠಾಣೆ ಹತ್ತಿರ
ಕೊಟ್ಟೂರು - ೫೮೩೧೩೪
ಬಳ್ಳಾರಿ ಜಿಲ್ಲೆ

೪೬. **ಯು.ಎಸ್. ಶ್ರೀನಿವಾಸ್ (ಪುವ್ಯಾಶ್ರೀ)**
೨೫, ಎಚ್.ವಿ. ನಂಜುಂಡಯ್ಯ ರಸ್ತೆ
ಆರನೆಯ ಮೇನ್, ಮಲ್ಲೇಶ್ವರ
ಬೆಂಗಳೂರು - ೫೬೦ ೦೦೩

೪೭. ಕೆ.ವಿ. ತಿರುಮಲೇಶ
೫೦೧, ೫ನೇ ಮಹಡಿ
ಸಿದ್ಧಾರ್ಥ, ಆಶಿಯಾನ ಅಪಾರ್ಟ್‌ಮೆಂಟ್ಸ್
೧೨-೧೨-೯, ರವೀಂದ್ರನಗರ
ಸಿಕಂದರಾಬಾದ್ – ೬೧

೪೮. ಎಂ.ಡಿ. ಒಕ್ಕುಂದ
೧೨೪, ಸಿ.ಯು.ಸಿ.ಬಿ. ಕಾಲನಿ
ಶ್ರೀನಗರ, ಧಾರವಾಡ – ೦೩

೪೯. ಪ್ರತಿಭಾ ನಂದಕುಮಾರ್
೧೧೯, ಫ್ಲಾಟ್–೪೦೪, ಶ್ರವಂತಿಪ್ರೈಡ್–I
ಜೆ.ಸಿ. ನಗರ ಮೂರನೇ ಹಂತ
ಬೆಂಗಳೂರು – ೫೬೦ ೦೭೮
ದೂ. : ೯೮೪೫೨ ೮೫೨೫೪

೫೦. ಡಾ. ಎಸ್. ಶಿವಣ್ಣ
ಕನ್ನಡ ಉಪನ್ಯಾಸಕರು
ಸುರಾನ ಕಾಲೇಜು
೧೬, ಸೌತ್ ಎಂಡ್ ರಸ್ತೆ
ಬೆಂಗಳೂರು – ೫೬೦ ೦೦೪

೫೧. ಬಿ.ಎಸ್. ಗಾಯತ್ರಿ

೫೨. ಎಚ್.ಎ. ಅನಿಲ್‌ಕುಮಾರ್
೬೭, ನ್ಯೂ ಬಿ.ಇ.ಎಲ್. ರಸ್ತೆ
ಹನುಮಾನ್ ದೇವಸ್ಥಾನದ ಎದುರು
ದೇವಸಂದ್ರ, ಬೆಂಗಳೂರು – ೫೬೦ ೦೯೪
ದೂ. : ೯೮೪೫೩೫೪೯೩೫

೫೩. ವಿಕ್ರಮ ವಿಸಾಜಿ
ಕನ್ನಡ ವಿಭಾಗ
ಗುಲಬರ್ಗಾ ವಿಶ್ವವಿದ್ಯಾಲಯ
ನಂದಿಹಳ್ಳಿ, ಸೊಂಡೂರು
ಬಳ್ಳಾರಿ ಜಿಲ್ಲೆ – ೫೮೩ ೧೧೯
ದೂ. : ೯೯೪೫೦೨೧೧೨೬

೫೪. ರಶ್ಮಿ ಮ. ಹೆಗಡೆ
ಸಂಶೋಧನಾ ವಿದ್ಯಾರ್ಥಿನಿ
ಮಾನವಶಾಸ್ತ್ರ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ – ೫೮೦೦೦೩

೫೫. ಸುಧಾಶರ್ಮ
೪೩, ೫ನೇ ಕ್ರಾಸ್
ಕಾನ್‌ಕಾರ್ಡ್ ಗಾರ್ಡನ್ ಸಿಟಿ
ರಾಜರಾಜೇಶ್ವರಿ ನಗರ
ಬೆಂಗಳೂರು – ೫೬೦ ೦೫೯

೫೬. ಸುನಂದ ಪ್ರಕಾಶ ಕಡಮೆ
೯೦, ಕಾಳಿದಾಸ ನಗರ
ವಿದ್ಯಾನಗರ ಕಾಂಪ್ಲೆಕ್ಸ್, ಹುಬ್ಬಳ್ಳಿ – ೩೧
ದೂ.: ೯೮೪೫೭೭೯೩೮೭

೫೭. ಆನಂದ ಋಗ್ವೇದಿ
೬೮೬/ಬಿ, ಮೊದಲನೆಯ ಮಹಡಿ
೧ನೇ ಮುಖ್ಯರಸ್ತೆ, ೪ನೇ ಕ್ರಾಸ್
ಭಗತ್‌ಸಿಂಗ್ ನಗರ
ದಾವಣಗೆರೆ – ೫೭೭ ೦೦೨
ದೂ. : ೯೪೪೮೮೬ ೬೮೦೪೬

೫೮. ಆರ್. ವಸಂತಕುಮಾರ್
'ಮಾರುತಿ ನಿಲಯ', ೧೨೫೦
೯ನೇ ಮೇನ್, ಪ್ರಕಾಶನಗರ
ಬೆಂಗಳೂರು – ೫೬೦ ೦೨೧
ದೂ.: ೯೯೮೦೨೬೦೦೦

೫೯. ಎಲ್ವಿ. ನಾಗರಾಜು
ಸ್ವರಾಜ್ – ಆಕ್ಸಫಾಮ್ ಇಂಡಿಯಾ
೯೫/೨, ೧೫ನೇ ಕ್ರಾಸ್
೬ನೇ ಮುಖ್ಯರಸ್ತೆ, ಮಲ್ಲೇಶ್ವರಂ
ಬೆಂಗಳುರು – ೫೬೦ ೦೦೩
ದೂ.: ೯೮೮೦೧೧೬೧೯೮

೬೦. ಸಂದೀಪ ನಾಯಕ
ಪ್ರಜಾವಾಣಿ ದಿನಪತ್ರಿಕೆ
೭೫, ಮಹಾತ್ಮಗಾಂಧಿ ರಸ್ತೆ
ಬೆಂಗಳೂರು – ೫೬೦ ೦೦೧
ದೂ.: ೯೮೮೬೮೮೬೪೪೯

೬೧. ಡಾ. ಕವಿತಾ ರೈ
'ಜಯಶ್ರೀ ನಿಲಯ'
ಶಾರದಾ ನಗರ, ಮಾಡೂರು
ಕೋಟೆಕಾರ್ ಬೀದಿ, ಮಂಗಳೂರು
ದೂ. : ೯೪೮೦೦೯೨೪೪

೬೨. ಛಾಯಾ ಭಗವತಿ ಟಿ.ಎಸ್.ಆರ್.
W/o ಶ್ರೀ ಗುರುಬಸವರಾಜ್
# ೭, ೩ನೇ ಕ್ರಾಸ್, ಪೈಪ್‌ಲೈನ್
ವಿಜಯನಗರ, ಬೆಂಗಳೂರು – ೨೩
ದೂ.: ೯೪೪೮೮೦೨೯೦

೬೩. ಎ.ಜಿ. ವಿಜಯರಾಘವನ್

೬೪. ಜಿ.ಎನ್. ಮೋಹನ್
ಗ್ರೌಂಡ್ ಫ್ಲೋರ್, ಎಸ್.ಪಿ.–೩ ಬಿಲ್ಡಿಂಗ್
ರಾಮೋಜಿ ಫಿಲಂ ಸಿಟಿ
ಹೈದರಾಬಾದ್ – ೫೦೧೫೧೨

೬೫. ನಟರಾಜ ಹುಳಿಯಾರ್
ಕನ್ನಡ ಟೈಮ್ಸ್, ೫೭
೩ನೇ ಮಹಡಿ, ವಿನಾಯಕ ಕಾಂಪ್ಲೆಕ್ಸ್
೯ನೇ ಮೇನ್, ೮೦ ಅಡಿ ರಸ್ತೆ
ಬ್ಯಾಂಕ್ ಕಾಲನಿ, ಶ್ರೀನಿವಾಸನಗರ
ಬೆಂಗಳೂರು – ೫೬೦ ೦೫೦

೬೬. ಬಿ.ಎಸ್. ರಘುನಾಥ

೬೭. ಎಸ್. ಸುರೇಶ್ ನಾಗಲಮಡಿಕೆ
C/o ನರಸಪ್ಪ
೬೫/೨, ೮ನೇ ಮುಖ್ಯರಸ್ತೆ
೪ನೇ ಬಡಾವಣೆ
ಬೆಂಗಳೂರು – ೫೬೦ ೦೯೬
ದೂ.: ೯೯೦೦೫೭೨೫೫೨

೬೮. ರಘುನಾಥ ಚ.ಹ.
ಉಪ ಸಂಪಾದಕರು
ಪ್ರಜಾವಾಣಿ
೭೫, ಮಹಾತ್ಮಗಾಂಧಿ ರಸ್ತೆ
ಬೆಂಗಳೂರು – ೫೬೦ ೦೦೧
ದೂ. : ೯೮೪೪೯೭೮೮೪೮

೬೯. ಎಸ್. ಬಾಗೇಶ್ರೀ
೩೦೬೩, ೯ನೇ ಮೇನ್
ಬಿ.ಎಸ್.ಕೆ. ಎರಡನೇ ಸ್ಟೇಜ್
ಬೆಂಗಳೂರು – ೫೬೦ ೦೭೦

೭೦. ಬಸವರಾಜ ವಕ್ಕುಂದ

೭೧. ಎಂ. ರವಿಕುಮಾರ್

೭೨. ಗೀತಾ ಡಿ.ಸಿ.
ಕನ್ನಡ ಉಪನ್ಯಾಸಕಿ
ಶೇಷಾದ್ರಿಪುರಂ ಪ್ರಥಮ ದರ್ಜೆ
ಕಾಲೇಜು, ಯಲಹಂಕ ನ್ಯೂಟೌನ್
ಬೆಂಗಳೂರು – ೫೬೦ ೦೬೪
ದೂ.: ೯೪೪೮೮೬೫೮೮೪

೭೩. ಆರ್. ಚಲಪತಿ
ಮುಖ್ಯಸ್ಥರು, ಕನ್ನಡ ವಿಭಾಗ
ಶೇಷಾದ್ರಿಪುರಂ ಪ್ರಥಮ ದರ್ಜೆ
ಕಾಲೇಜು, ಯಲಹಂಕ ನ್ಯೂಟೌನ್
ಬೆಂಗಳೂರು – ೫೬೦ ೦೬೪
ದೂ.: ೯೮೪೫೬೭೭೧೯೬

೭೪. ಕಾ.ಸು. ರಾಮಚಂದ್ರ

೭೫. ಡಾ. ಕೆ.ವೈ. ನಾರಾಯಣಸ್ವಾಮಿ
ಕನ್ನಡ ಅಧ್ಯಾಪಕ
ಸರ್ಕಾರಿ ವಿಜ್ಞಾನ ಕಾಲೇಜು
ನೃಪತುಂಗ ರಸ್ತೆ, ಬೆಂಗಳೂರು
ದೂ.: ೯೪೪೮೫೫೮೩೭೮

೭೬. ವಾಸುದೇವ ನಾಡಿಗ್
ಜವಹರಲಾಲ್ ನವೋದಯ ವಿದ್ಯಾಲಯ
ಏನಿಗದೆಲೆ – ೫೬೩ ೧೨೫
ಚಿಂತಾಮಣಿ ತಾಲ್ಲೂಕು
ಕೋಲಾರ ಜಿಲ್ಲೆ
ದೂ.: ೯೪೪೮೭೩೬೫೫೮

೭೭. ಅಬ್ದುಲ್ ರಶೀದ್
ಕಾರ್ಯಕ್ರಮ ನಿರ್ವಾಹಕರು
ಆಕಾಶವಾಣಿ, ಯಾದವಗಿರಿ
ಮೈಸೂರು – ೫೭೦ ೦೨೦
ದೂ.: ೯೪೪೮೯೧೧೫೨೩

೭೮. ಅಂಕುರ್ ಬೆಟಗೇರಿ
ಫ್ಲಾಟ್ ಸಂಖ್ಯೆ ೨೦೨
ಹರ್ಷ ಅಪಾರ್ಟ್‌ಮೆಂಟ್ಸ್
ಸ್ನೇಹ ಕಾಲೋನಿ, ಚಿಕ್ಕಲ್ಲಸಂದ್ರ
ಬೆಂಗಳೂರು – ೫೬೦ ೦೬೧
ದೂ.: ೯೮೮೬೨೪೯೨೨೨

೭೯. ಟಿ. ಎಲ್ಲಪ್ಪ
೩೮, ಮೊದಲನೇ ಕ್ರಾಸ್
ಗಂಗಮ್ಮ ಗುಡಿಬೀದಿ
ಎ. ನಾರಾಯಣಪುರ ಬಡಾವಣೆ
ದೂರವಾಣಿ ನಗರ ಅಂಚೆ
ಬೆಂಗಳೂರು – ೫೬೦ ೦೧೬
ದೂ.: ೯೮೮೦೪೦೦೯೫೦

೮೦. ಡಾ. ದೊಡ್ಡರಂಗೇಗೌಡ
'ಶ್ರೀ ಸನ್ನಿಧಿ', ೧೪೦
೩ನೇ ಮುಖ್ಯರಸ್ತೆ, ಕತ್ತರಿಗುಪ್ಪೆ (ಪೂರ್ವ),
೪ನೇ ಫೇಸ್
ಬನಶಂಕರಿ ೩ನೇ ಹಂತ
ಬೆಂಗಳೂರು – ೫೬೦೦೮೫
ದೂ.: ೨೬೬೯೫೪೫೪

೮೧. ಶ್ರೀ ಕೃಷ್ಣ ಆಲನಹಳ್ಳಿ

೮೨. ಡಾ. ಮೋಹನ ಕುಂಟಾರ್
'ಪಯಸ್ವಿನಿ', ಶಾಂತಿನಗರ
ಕಾಲೇಜು ರಸ್ತೆ, ಹೊಸಪೇಟೆ – ೫೮೩೨೦೧
ಬಳ್ಳಾರಿ ಜಿಲ್ಲೆ

೮೩. ಕೆ. ಕರಿಸ್ವಾಮಿ
ಸ್ಥಾನಿಕ ಸಂಪಾದಕ
ವಿಜಯ ಕರ್ನಾಟಕ
ಗಂಗಾವತಿ
ದೂ.: ೯೮೪೫೨೫೩೩೧೧

೮೪. ಸತೀಶ ಡಿ.ಪಿ.

೮೫. ಚಿರಂಜೀವಿ
ಹಂಪಿ ನಗರ
ಬೆಂಗಳೂರು – ೪೦

೮೬. ಎನ್. ಉದಯಕುಮಾರ್
ಜಿಲ್ಲಾ ವರದಿಗಾರ
ಪ್ರಜಾವಾಣಿ
ಬೆಳಗಾವಿ – ೫೯೦ ೦೦೧

೮೭. ಎ.ಆರ್. ಮಣಿಕಾಂತ್
ಸಹ ಸಂಪಾದಕರು
ವಿಜಯ ಕರ್ನಾಟಕ
ಪಂಪಮಹಾಕವಿ ರಸ್ತೆ
ಬೆಂಗಳೂರು – ೫೬೦ ೦೧೮

೮೮. ಎನ್.ಎಸ್. ಶ್ರೀಧರಮೂರ್ತಿ
ಸಹ ಸಂಪಾದಕರು
ಮಲ್ಲಿಗೆ ಮಾಸಪತ್ರಿಕೆ
೨೮, ಶಿರಸಿ ರಸ್ತೆ ಎದುರು
ಬೆಂಗಳೂರು – ೫೬೦ ೦೧೮

೮೯. ಕಿ.ರಂ. ನಾಗರಾಜ
೧೩/೮೫
ರಾಷ್ಟ್ರೀಯ ವಿದ್ಯಾಲಯ ರಸ್ತೆ
ಬಸವನಗುಡಿ
ಬೆಂಗಳೂರು – ೫೬೦ ೦೦೪
ದೂ.: ೯೪೪೮೫೦೮೪೭೪

೯೦. ಡಾ. ಹೆಚ್.ಎಸ್. ರಾಘವೇಂದ್ರರಾವ್
# ೭, ಶ್ರೀಮಾತಾ, ೧೫ನೇ ಕ್ರಾಸ್
ರಿಂಗ್ ರಸ್ತೆ, ೫ನೇ ಹಂತ
ಜೆ.ಪಿ. ನಗರ
ಬೆಂಗಳೂರು – ೫೬೦ ೦೭೮
ದೂ. : ೯೮೪೫೯೦೬೫೨೭

೯೧. ಡಾ. ಕ.ವೆಂ. ರಾಜಗೋಪಾಲ
# ೧೭೦, ೧೬ನೇ ಕ್ರಾಸ್
ಎಸ್.ಜಿ. ಬ್ಲಾಕ್, ಮಲ್ಲೇಶ್ವರ
ಬೆಂಗಳುರು – ೫೬೦ ೦೦೩

೯೨. ಡಾ. ಎಚ್.ಎಲ್. ಪುಷ್ಪ
೩೭/೨'ಎ', ನಿಸರ್ಗ, ನಾಗರಭಾವಿ ರಸ್ತೆ
ವಿಜಯನಗರ, ಬೆಂಗಳೂರು – ೪೦
ದೂ.: ೯೪೮೦೦೫೧೨೨೨

೯೩. ಡಾ. ಕೆ.ವಿ. ನಾರಾಯಣ
ಪ್ರಾಧ್ಯಾಪಕರು
ಹಂಪಿ ಕನ್ನಡ ವಿಶ್ವವಿದ್ಯಾಲಯ
ವಿದ್ಯಾರಣ್ಯ, ಹಂಪಿ – ೫೮೩ ೨೭೬

೯೪. ಡಾ. ಕೆ. ಮರುಳಸಿದ್ದಪ್ಪ
೧೩೭, ೧೨ನೆಯ ತಿರುವು
ಜೆ.ಪಿ. ನಗರ ಎರಡನೆಯ ಹಂತ
ಬೆಂಗಳೂರು – ೫೬೦ ೦೭೮

೯೫. ಸುಗತ ಶ್ರೀನಿವಾಸರಾಜು
'ಚಿರಂಜೀವಿ', ಹಳೇ ಈಜು ಕೊಳದ ರಸ್ತೆ
ಕೋದಂಡರಾಮಪುರ, ಮಲ್ಲೇಶ್ವರಂ
ಬೆಂಗಳೂರು – ೫೬೦ ೦೦೩

೯೬. ಡಾ. ಮೊಗಳ್ಳಿ ಗಣೇಶ್
ಕನ್ನಡ ಅಧ್ಯಯನ ವಿಭಾಗ
ಹಂಪಿ ಕನ್ನಡ ವಿಶ್ವವಿದ್ಯಾಲಯ
ವಿದ್ಯಾರಣ್ಯ – ೫೮೩೨೭೬

೯೭. ಜಯದೇವಪ್ಪ ಜೈನಕೇರಿ
೮೭, ಶಾಂತಲಾ, ಕುವೆಂಪು ರಸ್ತೆ
ಶಿವಮೊಗ್ಗ – ೫೭೭ ೨೦೧
ದೂ. : ೦೮೧೮೨–೨೭೯೬೫

೯೮. ಎಂ.ಕೆ. ಅನಿಲ್

೯೯. ಡಾ. ಜಿ. ರಾಮಕೃಷ್ಣ
೨ಎಫ್, ಪವನ್ ಪರಂಜ್ಯೋತಿ
೨೨/೧, ೪ನೇ ಕ್ರಾಸ್, ಕಾವೇರಿನಗರ
ಬೆಂಗಳೂರು – ೫೬೦ ೦೮೫
ದೂ. : ೨೬೭೯೩೯೫೧

೧೦೦. ರಾಮಲಿಂಗಪ್ಪ ಟಿ. ಬೇಗೂರು
ಕನ್ನಡ ಅಧ್ಯಾಪಕ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಚಿಂತಾಮಣಿ
ದೂ.: ೯೪೪೯೨೭೧೧೫೬

೧೦೧. ಆರ್.ಜಿ. ಹಳ್ಳಿ ನಾಗರಾಜು
೩೭/೨'ಎ', ನಿಸರ್ಗ
ನಾಗರಭಾವಿ ರಸ್ತೆ, ವಿಜಯನಗರ
ಬೆಂಗಳೂರು – ೫೬೦ ೦೪೦
ದೂ.: ೯೯೦೦೫೬೬೦೨೦

೧೦೨. ಡಾ. ವಿನಯಾ ವಕ್ಕುಂದ
೧೨೪, ಸಿ.ಐ.ಸಿ.ಬಿ. ಕಾಲನಿ
ಶ್ರೀನಗರ, ಧಾರವಾಡ – ೦೩
ದೂ.: ೯೪೪೮೫೫೬೧೨೭

೧೦೩. ಕಾ.ನಾ. ಶ್ರೀನಿವಾಸ್ (ಕಾನಾಶ್ರೀ)
೫೦, ಸಂತೃಪ್ತಿ, ಎರಡನೆ ಮುಖ್ಯರಸ್ತೆ
ಬಾಲಾಜಿ ಬಡಾವಣೆ, ವಿದ್ಯಾರಣ್ಯಪುರ
ಬೆಂಗಳೂರು – ೫೬೦ ೦೯೭
ದೂ.: ೨೩೬೪೬೩೯೭

೧೦೪. ಬಿ.ಎಸ್. ವೆಂಕಟಲಕ್ಷ್ಮಿ
ಸಿ–೩೦೨, ಪ್ರೈಡ್ ಅಪಾರ್ಟ್‌ಮೆಂಟ್ಸ್
ಬಿಳೇಕನಹಳ್ಳಿ, ಬನ್ನೇರುಘಟ್ಟ ಮುಖ್ಯರಸ್ತೆ
ಬೆಂಗಳೂರು – ೫೬೦ ೦೭೬
ದೂ.: ೨೬೫೮೫೮೫೪

೧೦೫. ಕೆ.ಜಿ. ಮಾನಸಿ

೧೦೬. ಡಿ.ವಿ. ರಾಜಶೇಖರ
ಸಹ ಸಂಪಾದಕರು, 'ಪ್ರಜಾವಾಣಿ'
೭೫, ಮಹಾತ್ಮಗಾಂಧಿ ರಸ್ತೆ
ಬೆಂಗಳೂರು – ೫೬೦ ೦೦೧
ದೂ. : ೦೮೦–೨೫೮೮೦೬೧೧

೧೦೭. ಡಿ.ವಿ. ಪ್ರಹ್ಲಾದ್
೧೦೦, ೨ನೆ ಮುಖ್ಯರಸ್ತೆ
೬ನೇ ಬ್ಲಾಕ್, ೩ನೇ ಹಂತ
೩ನೇ ಘಟ್ಟ, ಬನಶಂಕರಿ
ಬೆಂಗಳೂರು – ೫೬೦ ೦೮೫
ದೂ.: ೯೮೪೪೦೬೩೫೧೪

## ಕಲಾವಿದರು

೧೦೮. ಶ್ರೀ ಪಿ. ಮಹಮದ್
ಕಲಾವಿದರು
ಪ್ರಜಾವಾಣಿ ದಿನಪತ್ರಿಕೆ
೭೫, ಮಹಾತ್ಮಾಗಾಂಧಿ ರಸ್ತೆ
ಬೆಂಗಳೂರು – ೫೬೦ ೦೦೧

೧೦೯. ಎಸ್. ಋತ
೮, ಚಿರಂಜೀವಿ
ಹಳೇ ಈಜುಕೊಳದ ರಸ್ತೆ
ಕೋದಂಡರಾಮಪುರ
ಮಲ್ಲೇಶ್ವರಂ
ಬೆಂಗಳೂರು – ೫೬೦ ೦೦೩





ಸಾಕಷ್ಟು ಚಲನಶೀಲವೂ ಶಬ್ದಮಯವೂ ಆಗಿದ್ದಂಥ ವಾತಾವರಣದಲ್ಲಿ, ಬರೆಯುವ ಬಗ್ಗೆ ಬಹುಮಟ್ಟಿಗೆ ಅನಾಸಕ್ತರಾಗಿ, ಆದರೆ ಬರವಣಿಗೆಯ ಬಗ್ಗೆ, ಬರವಣಿಗೆಗೆ ತೊಡಗಿಕೊಳ್ಳುವವರ ಬಗ್ಗೆ ಅತ್ಯಂತ ಆಸಕ್ತರಾಗಿ, ನಿರಂತರವಾಗಿ ಮೂರು ದಶಕಗಳ ಕಾಲ, ಬರೆಯುವ ಸಾಮರ್ಥ್ಯವಿದ್ದೂ ತಕ್ಕ ಅವಕಾಶಗಳಿಲ್ಲದ ಬಹುಸಂಖ್ಯೆಯ ಯುವಪ್ರತಿಭೆಗಳಿಗೆ ಒಂದು ವೇದಿಕೆಯನ್ನು ಕಲ್ಪಿಸಿ, ಸಮೃದ್ಧವಾದ ಬೆಳೆಗೆ 'ಅಂತರ್ಜಲ'ದಂತೆ ವರ್ತಿಸಿದವರು ಚಿ. ಶ್ರೀನಿವಾಸರಾಜು ಅವರು.

■ ಜಿ.ಎಸ್. ಶಿವರುದ್ರಪ್ಪ

ಸಂಕೋಚ ಸ್ವಭಾವದ, ಧ್ವನಿಯೆತ್ತಿ ಮಾತನಾಡಲೂ ಹಿಂಜರಿಯುವ, ಮಾಡಿದ ಕೆಲಸವನ್ನು ಅಚ್ಚುಕಟ್ಟಾಗಿ ಮಾಡುವ, ಕನ್ನಡಾಭಿಮಾನದ ಸೊಕ್ಕು ಕಿಂಚಿತ್ತೂ ಇಲ್ಲದ ಸಜ್ಜನ ಈ ಶ್ರೀನಿವಾಸರಾಜು. ಎಂದೂ ಕ್ರಾಂತಿಯ ಕಹಳೆ ಊದದ ಶ್ರೀನಿವಾಸರಾಜು ಕ್ರೈಸ್ಟ್ ಕಾಲೇಜಿನಲ್ಲಿ ನಡೆಸಿರುವುದು ನಿಜವಾದ ಕ್ರಾಂತಿ.

■ ಪಿ. ಲಂಕೇಶ್